

ಸಂಪಾದಕರು
* ಎಚ್ಕೆಸ್ಕೆ

# ದಾಸ ಸಾಹಿತ್ಯ ದರ್ಶನ

## ಸಮಗ್ರ ದಾಸ ಸಾಹಿತ್ಯದ ಪ್ರಥಮ ಗ್ರಂಥ



ಮಂಗಳ ಭಾರತಿ ಪ್ರಕಾಶನ. ಮೈಸೂರು.



ಸಮಗ್ರ ದಾಸ ಸಾಹಿತ್ಯದ
ಪ್ರಥಮ ಗ್ರಂಥ

# ದಾಸ ಸಾಹಿತ್ಯ ದರ್ಶನ

## ನಮ್ಮ ಪ್ರಕಟಣೆಗಳು

1. ರೈಲಿನಲ್ಲಿ ರೈಲು–1974
   ಲೆ ಎಂ ಎಸ್ ನರಸಿಂಹಮೂರ್ತಿ
2. ಹೆಣ್ಣು ಸಮಾಜದ ಕಣ್ಣು
   ವಿವಿಧ ಲೇಖಕರು–1975
   (ಅಂತರರಾಷ್ಟ್ರೀಯ ಮಹಿಳಾ ವರ್ಷದ ಕೊಡುಗೆ)
3. ಹೃದಯ ವೀಣೆ–1976
   ಲೆ ಬಿ ಜಿ ಸತ್ಯಮೂರ್ತಿ
4. ಬಾತ್ ರೂಮಿನಲ್ಲಿ ಸರಸ–1979
   ಲೆ ಎಂ ಎಸ್ ನರಸಿಂಹಮೂರ್ತಿ

# ಸಂಪಾದಕರ ನುಡಿ

ಕರ್ನಾಟಕದ ಧಾರ್ಮಿಕ ಸಾಂಸ್ಕೃತಿಕ ಇತಿಹಾಸದಲ್ಲಿ ಹರಿದಾಸರ ಸ್ಥಾನ ವಿಶಿಷ್ಟವಾದದ್ದು ಸಾವಿರಾರು ವರ್ಷಗಳಿಂದ ಭಾರತದಲ್ಲಿ ಅನುಸ್ಯೂತವಾಗಿ ಹರಿದುಕೊಂಡು ಬಂದ ಜೀವನ ಮೌಲ್ಯಗಳನ್ನು ಜನಸಾಮಾನ್ಯರಿಗೆ ಅವರದೇ ಆದ ಭಾಷೆಯಲ್ಲಿ ಮುಟ್ಟಿಸಿ ಮನೋರಂಜನೆಯ ಮೂಲಕ ಅವರ ಮನೋವಿಕಾಸವನ್ನು ಯಶಸ್ವಿಯಾಗಿ ಸಾಧಿಸಿದವರು ಹರಿದಾಸರು

ಹರಿದಾಸರು ಮುಖ್ಯವಾಗಿ ವಿಷ್ಣುಭಕ್ತರು ವಿಷ್ಣುಪಾರಮ್ಯವನ್ನು ತಮ್ಮ ಕೃತಿಗಳಲ್ಲಿ ಸಾರಿದವರು ಕರ್ನಾಟಕದಲ್ಲ ಅವತರಿಸಿ ದ್ವೈತಮತ ಪ್ರತಿಪಾದನೆ ಮಾಡಿದ ಮಧ್ವಾಚಾರ್ಯರ ಅನುಯಾಯಿಗಳು ಇವರು ಮಧ್ವಸಿದ್ಧಾಂತವನು ವಿಶೇಷವಾಗಿ ಅಧ್ಯಯನ ಮಾಡಿದವರು ಅದನ್ನು ನಂಬಿದವರು ಭಾರತದಲ್ಲಿ ಪರಂಪರೆಯಾಗಿ ನಡೆದುಕೊಂಡು ಬಂದಂತೆ ತಾವು ನಂಬಿದ ಧರ್ಮದ ಪ್ರಸಾರಕ್ಕಾಗಿಯೇ ಭಾಷೆಯನ್ನು ಬಳಸಿಕೊಂಡವರು ಹೀಗಾಗಿ ಇವರ ಕೃತಿಗಳಲ್ಲೆಲ್ಲ ಇವರ ಧಾರ್ಮಿಕ ಒಲವುಗಳು ಹಾಸುಹೊಕ್ಕಾಗಿರುವುದನ್ನು ಕಾಣಬಹುದು ಧರ್ಮವೇ ಇವರ ಸ್ಫೂರ್ತಿಮೂಲ

ಆದರೆ ಮಾನವ ಜೀವನಕ್ಕೆ ಆಧಾರವಾದದ್ದು ಅದನ್ನು ಸ್ಥಿರವಾಗಿ ದೃಢವಾಗಿ ನಿಲ್ಲಿಸಬಲ್ಲಂಥದ್ದು ಧರ್ಮವೇ ಎಂದು ಇವರು ನಂಬಿದ್ದರಿಂದ ಇವರ ಧಾರ್ಮಿಕ ಬೋಧನೆಗಳಲ್ಲಿ ಗಾಢವಾದ ಜೀವನನಿಷ್ಠೆಯನ್ನೂ ಕಾಣಬಹುದು ಮಾನವ ಜನ್ಮ ದೊಡ್ಡದು ಇದ ಹಾನಿ ಮಾಡಲು ಬೇಡಿ ಹುಚ್ಚಪ್ಪಗಳಿರಾ ! ಎಂಬಂಥ ನಿಲುವು ಹರಿದಾಸರದು ಹರಿದಾಸರು ರಚಿಸಿರುವ ಸಾಹಿತ್ಯದಲ್ಲೆಲ್ಲಾ ಮಾನವಾನುಕಂಪ ಸಮಾಜ ಸುಧಾರಣೆಯ ಆವೇಗ ಕೊಂಕು ಡೊಂಕುಗಳನ್ನು ಖಂಡಿಸುವ ಸಾತ್ವಿಕ ಕ್ರೋಧ ನಗೆ ವಿಡಂಬನೆಗಳ ಮೂಲಕ ದೋಷಗಳನ್ನು ಉಪಾಯವಾಗಿ ನಿವಾರಿಸುವ ಜಾಣ್ಮೆ ಉದಾತ್ತವಾದದ್ದನ್ನು ಭವ್ಯವಾಗಿ ಅಭಿವ್ಯಕ್ತಿಸುವ ಸಾಮರ್ಥ್ಯ—ಇವನ್ನೆಲ್ಲಾ ಕಾಣಬಹುದು

ಹರಿದಾಸರಲ್ಲಿ ಒಬ್ಬೊಬ್ಬರೂ ಸಾಮಾನ್ಯವಾಗಿ ಪ್ರಗಲ್ಭ ಪಂಡಿತರು ಮನಸ್ಸು ಮಾಡಿದ್ದರೆ ತಮ್ಮ ವಿದ್ವತ್ತಿಗೆ ಮೂಲವಾದ ಸಂಸ್ಕೃತದಲ್ಲಿ ಉದ್ಗ್ರಂಥಗಳನ್ನು ರಚಿಸಬಲ್ಲವರಾಗಿದ್ದವರು ಇವರಲ್ಲನೇಕರು ಸಂಸ್ಕೃತದಲ್ಲಿ ಗ್ರಂಥರಚನೆ ಮಾಡಿಯೂ ಇದ್ದಾರೆ ಆದರೆ ಮುಖ್ಯವಾಗಿ ಇವರ ಮನಸ್ಸು ತಿರುಗಿದ್ದದು ಜನತೆಯ ಕಡೆಗೆ ಆದ್ದರಿಂದ ಇವರು ತಮ್ಮ ಪ್ರಗಲ್ಭ ಪಾಂಡಿತ್ಯ, ಲೋಕಾನುಭವಗಳನ್ನೆಲ್ಲ ಜನರಿಗಾಗಿ ಜನರ ಭಾಷೆಯಲ್ಲಿ ಧಾರೆಯೆರೆದರು ಪಾಂಡಿತ್ಯ ಅನುಭವಗಳ ಹಿನ್ನೆಲೆಯಿಂದಾಗಿ ಆಡುಭಾಷೆಯ ಜೀವಂತಿಕೆಯಿಂದಾಗಿ ಇವರು ಹಾಡಿದ್ದೆಲ್ಲಾ ಸಾಹಿತ್ಯವಾಯಿತು

ಕಾವ್ಯವಾಯಿತು ಕೆಳಗಿನವರನ್ನು ಮೇಲಕ್ಕೆ ಹಿಡಿಯಿತು. ಕ್ರಾಂತಿಯನ್ನೇ ರೂಪಿಸಿತು. ಅದೊಂದು ವೈಚಾರಿಕ ಕ್ರಾಂತಿ.

ಹರಿದಾಸರು ವಿಶಿಷ್ಟವಾದ ರೀತಿಯಲ್ಲಿ ಈ ಕೆಲಸ ಮಾಡಿದರಾದರೂ ಒಂದು ದೃಷ್ಟಿಯಲ್ಲಿ ಇವರು ಮಾಡಿದ್ದರಲ್ಲಿ ಹೊಸದೇನೂ ಇಲ್ಲ. ಆರಂಭದಲ್ಲೇ ಹೇಳಿದ ಹಾಗೆ ಭಾರತದ ದೀರ್ಘ ಇತಿಹಾಸದ ಒಂದು ಸಂಕ್ರಮಣ ಘಟ್ಟದಲ್ಲಿ ಬಂದವರು ಹರಿದಾಸರು. ಇದು ಇತಿಹಾಸದ ದೀರ್ಘ ಪ್ರಕ್ರಿಯೆಯ ಒಂದು ಭಾಗ. ಹರಿದಾಸರಿಗೂ ಹಿಂದೆ ಕರ್ನಾಟಕದಲ್ಲೇ ಶಿವಶರಣರು ಇದೇ ರೀತಿಯಲ್ಲಿ ಸಾಹಿತ್ಯವನ್ನೂ ನಮ್ಮ ದೀರ್ಘ ಧಾರ್ಮಿಕ ಪರಂಪರೆಯ ಉದಾತ್ತ ತತ್ತ್ವಗಳನ್ನೂ ಜನತೆಯ ಹತ್ತಿರಕ್ಕೆ ಕೊಂಡೊಯ್ದಿದ್ದರು. ತಮಿಳುನಾಡಿನ ನಾಯನಾರರೂ ಆಳ್ವಾರರುಗಳೂ ಜನತೆಯ ಭಾಷೆಯಲ್ಲಿ ತಮ್ಮ ಹೃದಯಗಳನ್ನು ತೋಡಿಕೊಂಡಿದ್ದರು. ಕನ್ನಡನಾಡಿನ ಶರಣರೂ ತಮಿಳುನಾಡಿನ ನಾಯನಾರರೂ ಶಿವಭಕ್ತರು. ಆಳ್ವಾರರು ವಿಷ್ಣುಭಕ್ತರು. ಶಿವ ವಿಷ್ಣು ಎಂಬ ಹೆಸರಿನ ಭೇದವನ್ನು ಬಿಟ್ಟರೆ ಉಳಿದಂತೆ ಈ ಎಲ್ಲರ ಕೃತಿಗಳಲ್ಲೂ ಅನೇಕ ಸಮಾನ ಲಕ್ಷಣಗಳುಂಟು. ಮುಖ್ಯವಾದ ಲಕ್ಷಣವೆಂದರೆ ಭಕ್ತಿ. ಭಕ್ತಿಪಂಥದ ಮುಖ್ಯ ಲಕ್ಷಣಗಳೆಂದರೆ ಪ್ರೀತಿ, ಆರಾಧನೆ. ಅಮೃತಸ್ವರೂಪನಾದ ಭಗವಂತನಲ್ಲಿ ಉತ್ಕಟವಾದ ಪ್ರೇಮವೇ ಭಕ್ತಿ ಎಂಬುದು ನಾರದ ಭಕ್ತಿ ಸೂತ್ರದ ಹೇಳಿಕೆ. ಈಶ್ವರನಲ್ಲಿ ಅತ್ಯಂತ ಹೆಚ್ಚಿನ ಅನುರಕ್ತಿಯೇ ಭಕ್ತಿ ಎನ್ನುತ್ತಾರೆ ಶಾಂಡಿಲ್ಯ. ತನ್ನನ್ನು ತಾನು ಮರೆಯುವಂಥ ಸ್ವಾರ್ಥವನ್ನು ಎಣಿಸದಂಥ ಪ್ರೇಮವೇ ಭಕ್ತಿ ಎಂಬುದು ಭಾಗವತದ ವಿವರಣೆ. ಉತ್ಕೃಷ್ಟವಾದ ಪ್ರೀತಿಯೇ ಭಕ್ತಿಯೆಂಬುದು ರಾಮಾಯಣದ ಮಾತು. ಅನುಗಾಲವೂ ಸ್ನೇಹಪೂರ್ವಕವಾಗಿ ಧ್ಯಾನ ಮಾಡುವುದೇ ಭಕ್ತಿಯೆಂದು ರಾಮಾನುಜರು ಹೇಳಿದ್ದಾರೆ. ದೇವರ ಮಹಿಮೆಯನ್ನರಿತು ಎಲ್ಲಕ್ಕಿಂತಲೂ ಹೆಚ್ಚಾಗಿ ಅವನನ್ನು ಪ್ರೀತಿಸುವುದೂ ಮುಕ್ತಿಯನ್ನು ದೊರಕಿಸಿಕೊಡತಕ್ಕದ್ದು ಇದೊಂದೇ ಎಂಬುದಾಗಿ ನಂಬುವುದೂ ಭಕ್ತಿ ಎಂಬುದು ಮಧ್ವರ ಮತ. ಪರಮಾತ್ಮ ನಿರಾಕಾರ ನಿರ್ಗುಣ ಎಂಬ ಭಾವನೆಗಿಂತ ಪರಮಪುರುಷನಲ್ಲಿ ನಂಬಿಕೆ ಪ್ರೀತಿಗಳನ್ನು ವ್ಯಕ್ತಪಡಿಸುವುದೇ, ಅವನನ್ನು ಆರಾಧಿಸುವುದೇ ಭಕ್ತಿಯ ಮುಖ್ಯ ಲಕ್ಷಣ. ದೇವರು ಕರುಣಾಕರ. ಅವನನ್ನು ಪ್ರೀತಿಸುವುದರಲ್ಲೇ ನಮಗೆ ಶ್ರೇಯಸ್ಸು—ಎಂಬ ಭಾವದ ತಳಹದಿಯ ಮೇಲೆ ರಚಿತವಾದ ದಾಸಸಾಹಿತ್ಯ ಕಾವ್ಯವೂ ಆಯಿತು. ಭಕ್ತಿಯ ಆವೇಶದಿಂದಾಗಿ, ಮಾನವಾನುಕಂಪದಿಂದಾಗಿ, ಸಮಾಜ ಸುಧಾರಣೆಯ ಹಂಬಲದಿಂದಾಗಿ ಈ ಕಾವ್ಯಕ್ಕೆ ಕಳೆ ಪ್ರಾಪ್ತವಾಯಿತು. ಗೇಯಗುಣವುಳ್ಳದ್ದೂ ನೃತ್ಯಕ್ಕೆ ಹಲವೇಳೆ ಅಳವಡುವಂಥದೂ ವಿವಿಧ ಛಂದೋಬದ್ಧವಾದ್ದೂ ಜನತೆಯ ನಡುವೆ ಸಲ್ಲೇ ಆಯಾ ಸಂದರ್ಭಕ್ಕೆ ಅನುಗುಣವಾಗಿ ಹುಟ್ಟಿದ್ದೂ ಆದ್ದರಿಂದ ಈ ಸಾಹಿತ್ಯ ವೈಶಿಷ್ಟ್ಯಪೂರ್ಣವಾದ್ದಾಯಿತು.

ಹರಿದಾಸ ಸಾಹಿತ್ಯಕ್ಕೆ ಮೂಲಪ್ರೇರಣೆಯಾದ್ದು ಭಕ್ತಿಯೆಂಬುದಂತೂ ನಿರ್ವಿವಾದ. ಇದು ವಿಷ್ಣುಭಕ್ತಿಯೋ ದ್ವೈತ ದೃಷ್ಟಿಯದೋ ? ಎಂಬ ಪ್ರಶ್ನೆಯನ್ನು ಸದ್ಯಕ್ಕೆ ಪಕ್ಕಕ್ಕೆ ಸರಿಸೋಣ. ಭಕ್ತಿಯೆಂಬುದು ಮುಖ್ಯ. ಆರ್ಯರ ಆಗಮನದೊಂದಿಗೆ ಬಂದ ವೇದ ಉಪನಿಷತ್ತುಗಳಿಗೂ ಹಿಂದೆಯೇ ಭಕ್ತಿಪಂಥ ಭಾರತದಲ್ಲಿತ್ತೆಂದು ಕಾಣುತ್ತದೆ. ಭಕ್ತಿ ದ್ರಾವಿಡ ನಾಡಿನಲ್ಲಿ ಜನಿಸಿ ಬೆಳೆಯಿತು ಎಂಬುದಾಗಿ ಪದ್ಮಪುರಾಣ ಸಾರುತ್ತದೆ. ವೇದ ಉಪನಿಷತ್ತುಗಳನ್ನು ಅಭ್ಯಾಸ ಮಾಡುತ್ತಿದ್ದವರಲ್ಲಿ ಕೆಲವರಿಗ ಭಕ್ತಿಪಂಥದ ಬಗ್ಗೆ ತಾತ್ಸಾರವೂ ಇತ್ತು. ವೇದೋಕ್ತವಾದ ಯಜ್ಞಯಾಗಾದಿಗಳ ವಿಚಾರದಲ್ಲ ಭಕ್ತಿಪಂಥಕ್ಕೆ ಅಷ್ಟೇನೂ ಗೌರವ ಇಲ್ಲದಿದ್ದುದು ಕಾರಣ. ವರ್ಣವ್ಯವಸ್ಥೆಗೂ ಇದು ಅಷ್ಟಾಗಿ ಪ್ರಾಮುಖ್ಯ ನೀಡುತ್ತಿರಲಿಲ್ಲ. ತಮಿಳು ಆಳ್ವಾರುಗಳಲ್ಲೂ ಶಿವಶರಣರಲ್ಲೂ ನಾನಾ ಜಾತಿಗಳ ಜನರಿದ್ದಾರೆ. ಹೆಣ್ಣುಗಳೂ ಇದ್ದಾರೆ. ಹರಿದಾಸರಲ್ಲಿ ಕೆಲವರಾದರೂ ಬ್ರಾಹ್ಮಣರಲ್ಲವೆಂಬುದಾಗಿ ಭಾವಿಸಬಹುದಾಗಿದೆ. ಕ್ರಮೇಣ ಭಕ್ತಿಪಂಥ ಜನಪ್ರಿಯವಾದಾಗ ವೇದಾಭ್ಯಾಸ ನಿರತರೂ ಇದನ್ನು ಪುರಸ್ಕರಿಸಿ ತಮ್ಮದಾಗಿ ಮಾಡಿಕೊಂಡಾಗ ಭಕ್ತಿಪಂಥಕ್ಕೆ ಒಂದು ಗೌರವದ ಸ್ಥಾನ ಲಭಿಸಿತು ಎನ್ನಬಹುದಾಗಿದೆ. ದಾಸರ ಆಗಮನಕ್ಕೂ ಬಹಳ ಹಿಂದೆಯೇ ಈ ಪರಿವರ್ತನೆ ಆಗಿತ್ತು.

ಆದರೆ ಭಕ್ತಿ ಒಂದಿಲ್ಲೊಂದು ರೂಪದಲಿ ಮೂರು ಸಾವಿರ ವರ್ಷಗಳಿಗೂ ಹಿಂದಿನಿಂದಲೂ ಬೆಳೆದುಕೊಂಡು ಬಂದಿರುವುದಂತೂ ನಿಜ. ಡಾ|| ಕೆ. ಸಿ. ವರದಾಚಾರಿಯವರು ಇವ್ಯೂ ಆಸ್ಪೆಕ್ಟ್ಸ್ ಆಫ್ ಭಕ್ತಿ ಎಂಬ ಪುಸ್ತಕದಲ್ಲಿ ಭಕ್ತಿಯ ಇತಿಹಾಸವನ್ನು ಮೂರು ಅವಧಿಗಳಾಗಿ ವಿಂಗಡಿಸುತ್ತಾರೆ. ಪ್ರತಿಯೊಂದು ಅವಧಿಯೂ ಸುಮಾರು ಒಂದು ಸಾವಿರ ವರ್ಷಗಳಷ್ಟು ವಿಸ್ತಾರವಾದದ್ದು. ಇತಿಹಾಸ ಪೂರ್ವ ಕಾಲದಲ್ಲಿ ಜಡವಸ್ತುಗಳಿಗೂ ಪ್ರಕೃತಿ ವ್ಯಾಪಾರಗಳಿಗೂ ಚೇತನವನ್ನಾರೋಪಿಸುವ ವಾಡಿಕೆ ಬೆಳೆದಿತ್ತು. ಈ ಪ್ರವೃತ್ತಿಯನ್ನು ಋಗ್ವೇದ ಎದುರಿಸಿತು. ಎಲ್ಲ ಪ್ರಕೃತಿ ವ್ಯಾಪಾರಗಳ ಹಿಂದಿನ ಏಕ ಚೇತನವನ್ನು ಗುರುತಿಸುವ ಪ್ರಯತ್ನ ಋಗ್ವೇದದಲ್ಲಿ ನಡೆಯಿತು. ಪ್ರಾರ್ಥನೆಯ ಮೂಲಕ ಆ ಮಹಾಚೇತನದೊಂದಿಗೆ ಕೂಡುವ ಹಂಬಲ ಅಲ್ಲಿ ಪ್ರಕಟವಾಯಿತು. ಆದರೆ ವಿವಿಧ ಮುಖಗಳಾದ ದೇವತೆಗಳನ್ನು ಸಂಪ್ರೀತರನ್ನಾಗಿ ಮಾಡುವುದಕ್ಕಾಗಿ ಯಜ್ಞಯಾಗಾದಿಗಳು ಅಗತ್ಯವೆನಿಸಿದುವು. ಈ ಕರ್ಮವಿಧಿಗಳು ಕ್ರಮೇಣ ಬಳೆದು ಜನಸಾಮಾನ್ಯರಿಗೆ ಅರ್ಥವಾಗದ ಸ್ಥಿತಿಯನ್ನು ಮುಟ್ಟಿದವು. ತತ್ಫಲವಾಗಿ ಅತೃಪ್ತಿ ಹುಟ್ಟಿತು. ಮಹಾಭಾರತದಲ್ಲಿ ಇದು ವಿಶಿಷ್ಟವಾದ ರೀತಿಯಲ್ಲಿ ವ್ಯಕ್ತವಾಗಿದೆ. ಸರಿಯಾದ ವೈದಿಕ ದೃಷ್ಟಿಯನ್ನು ಗುರುತಿಸುವ ಪ್ರಯತ್ನ ನಡೆದಿದೆ. ಭಗವದ್ಗೀತೆಯಲ್ಲಿ ಯಜ್ಞಕ್ಕೆ ವಿಶಿಷ್ಟವಾದ ವ್ಯಾಖ್ಯೆ ಪ್ರಾಪ್ತವಾಯಿತು. ಜ್ಞಾನಯೋಗ, ಜ್ಞಾನಯಜ್ಞ ಎಂಬ ಮಾತುಗಳು ಪ್ರಧಾನವಾದುವು. ಜ್ಞಾನದ

ಆಸ್ತಿಭಾರದ ಮೇಲೆ ಪರಮಾತ್ಮನನ್ನು ಪ್ರೀತಿಸುವ ಭಕ್ತಿಗೆ ಪ್ರಾಧಾನ್ಯ ಬಂತು
ಅನಂತರ ಆಚಾರ್ಯರುಗಳು ಜ್ಞಾನಕ್ಕೇ ಸೊಡರೆತ್ತಿದ್ದಾರೆ ರಾಮಾನುಜರೂ ಮಧ್ವರೂ
ಜ್ಞಾನದ ಪೀಠದ ಮೇಲೆಯೇ ಭಕ್ತಿಯನ್ನು ಕೂರಿಸಿ ಅದಕ್ಕೆ ಪೂಜೆ ಸಲ್ಲಿಸಿದ್ದಾರೆ

ಯಜ್ಞಯಾಗಾದಿಗಳ ಅಂಧಾಚರಣೆಯ ವಿರುದ್ಧ ನಡೆಸಿದ ಪ್ರತಿಭಟನೆಯ
ಪ್ರತೀಕವಾಗಿ ಬೌದ್ಧ ಜೈನ ಧರ್ಮಗಳು ಹುಟ್ಟಿಕೊಂಡುವಾದರೂ ಕ್ರಮೇಣ ಆ
ಮತಗಳ ಅನುಯಾಯಿಗಳೂ ಮೂಲ ಸೆಲೆಯನ್ನು ಮರೆತು ದೂರ ಸರಿದಿದ್ದರಿಂದ
ಜ್ಞಾನಾಧಾರಿತ ಭಕ್ತಿಯ ಪಾರಮ್ಯವನ್ನು ಎತ್ತಿ ಹಿಡಿಯುವ ವೈದಿಕ ಧರ್ಮದ ಪುನ
ರುಜ್ಜೀವನವಾಯಿತು ಆ ಕಾಲದಲ್ಲೇ ಶಂಕರ ರಾಮಾನುಜ ಮಧ್ವರು ಬಂದದ್ದು
ಶಂಕರರು ಅದ್ವೈತಿಗಳಾದರೂ ಭಕ್ತಿಪರವಶರಾಗಿ ಗೀತಗಳನ್ನು ಹಾಡಿದ್ದಾರೆ ರಾಮಾ
ನುಜ ಮಧ್ವರ ಆಗಮನಕ್ಕೆ ಮುಂಚೆ ಹಿಂದೆ ಹೇಳಿದ ಶೈವ ವೈಷ್ಣವ ಭಕ್ತರನೇಕರು
ವೈದಿಕ ಧರ್ಮದ ಮೂಲ ತತ್ತ್ವಗಳನ್ನು ಜನರ ಮಾತಿನಲ್ಲಿ ಹಾಡುಗಳ ರೂಪದಲ್ಲಿ
ಜನರ ಬಳಿಗೆ ಕೊಂಡೊಯ್ದರು ಅವರಿಗೆ ದೇವರು ನಿರಾಕಾರನಲ್ಲ ಬಲು ದೂರ
ದವನೂ ಅಲ್ಲ ಇವರು ದೇವರನ್ನು ಜನರ ನಡುವೆ ಮೆರೆಯಿಸಿದರು ತಮ್ಮ
ಮಾತುಗಳನ್ನೇ ದೇವರ ಬಾಯಿಂದ ಆಡಿಸಿದರು ಈ ಸಂ[illegible]ರ ಸಂಪರ್ಕದಲ್ಲಿ
ದೇವರು ನೆರೆಮನೆಯವನಂತೆ ಪರಿಚಿತನಾದ ಅವನು ಮಗುವಾದ ತಂದೆಯಾದ
ಗುರುವಾದ ಸುಂದರ ತರುಣಿಯನ್ನು ಪ್ರೀತಿಸಿ ಮದುವೆಯಾದ ಅಳಿಯನಾದ
ಹೀಗೆ ಭಕ್ತಿಯ ನವುರಾದ ರೇಷ್ಮೆಯ ದಾರದಿಂದ ದೇವರು ಭಕ್ತರಿಂದ ಬಂಧಿತನಾದ
ಅವರ ಹಾಡಿನ ತಾಳಕ್ಕೆ ತಕ್ಕ ಹಾಗೆ ಕುಣಿದ ಹೀಗೆ ಭಕ್ತಿ ಒಂದು ಮಹಾಪೂರ
ವಾಗಿ ಭಾರತದ ಎಲ್ಲ ಭಾಗಗಳಲ್ಲೂ ಹರಿಯಿತು ಕರ್ನಾಟಕದ ಹರಿದಾಸರು ಈ
ಮಹಾಪೂರವನ್ನು ಕರ್ನಾಟಕದಲ್ಲಿ ಹರಿಯಿಸಿದರು ಅಷ್ಟೇ ಅಲ್ಲ ಕರ್ನಾಟಕ
ಸಂಗೀತಕ್ಕೆ ರಾಜಮಾರ್ಗವನ್ನೂ ನಿರ್ಮಿಸಿದರು ಸಾಹಿತ್ಯವನ್ನೂ ಸಮೃದ್ಧಿಗೊಳಿಸಿ
ದರು ಇವರ ಅನಂತರದ ಮೂರನೆಯ ಅವಧಿಯೇ ಆಧುನಿಕ ಕಾಲ ರಾಮಕೃಷ್ಣ
ಅರವಿಂದ ರವೀಂದ್ರ, ಗಾಂಧಿ—ಇವರು ಭಕ್ತಿಗೆ ಹೊಸ ಆಯಾಮವನ್ನೇ ನೀಡಿದ
ರೆನ ಬಹುದು

ದಾಸಸಾಹಿತ್ಯ ದರ್ಶನ ಎಂಬ ಈ ಪುಸ್ತಕದಲ್ಲಿ ಹರಿದಾಸ ಸಾಹಿತ್ಯದ
ಹಲವು ಮುಖಗಳ ದರ್ಶನ ಮಾಡಿಸಲು ಯತ್ನಿಸಲಾಗಿದೆ ಕರ್ನಾಟಕದಲ್ಲಿ ಹರಿದಾಸ
ಪಂಥದ ಹುಟ್ಟು ಬೆಳವಣಿಗೆ ಹರಿದಾಸ ಸಾಹಿತ್ಯದ ಇತಿಹಾಸ ಇತರ ಸಾಹಿತ್ಯ
ಗಳೊಂದಿಗೆ ಇದರ ತೌಲನಿಕ ಅಧ್ಯಯನ ದಾಸಸಾಹಿತ್ಯದಲ್ಲಿ ಪ್ರತಿಪಾದಿತವಾಗಿರುವ
ಮೌಲ್ಯಗಳು ಹಾಗೂ ತಾತ್ತ್ವಿಕ ನಿಲುವುಗಳು ಭಾಷೆ ಸಾಹಿತ್ಯಗಳಿಗೂ ಸಂಗೀತ ನೃತ್ಯ
ಗಳಿಗೂ ಹರಿದಾಸರು ನೀಡಿರುವ ಕೊಡುಗೆ ಮುಂತಾದ ವಿಚಾರಗಳೇ ಅಲ್ಲದೆ ಪ್ರಮುಖ
ಹರಿದಾಸರ ಜೀವನ ಕೃತಿಗಳ ಪರಿಚಯಗಳನ್ನು ಕುರಿತ ಲೇಖನಗಳು ಇಲ್ಲಿವೆ ಹರಿದಾಸ

ಸಾಹಿತ್ಯದ ಎಲ್ಲ ಮುಖಗಳ ಪರಿಚಯ ಮಾಡಿಕೊಡುವ ಮಹಾ ಸಾಹಸ ಈ ಕೃತಿ
ಇದು ದಾಸರ ಸಾಹಿತ್ಯ ದರ್ಶನ ಮಾತ್ರವಲ್ಲ ದಾಸ ಸಾಹಿತ್ಯದ ದರ್ಶನ ಕೂಡ
ಇಲ್ಲಿ ಒಂದಾಗಿರುವ ಲೇಖನಗಳನು ಬರೆದಿರುವವರೆಲ್ಲ ಈ ಕ್ಷೆ ತ್ರದಲ್ಲಿ ಬಹಳಷ್ಟು
ಕೆಲಸ ಮಾಡಿರುವವರು ಅಥವಾ ಆಳವಾಗಿ ಚಿಂತನೆ ನಡಸಿರುವವರು ಎಲ್ಲರೂ
ವಿದ್ವಾಂಸರು ನನ ಪ್ರಾರ್ಥನೆಯನ್ನು ಮನ್ನಿಸಿ ಈ ಕೃತಿಗಾಗಿಯೇ ಲೇಖನಗಳನ್ನು
ಬರೆದುಕೊಟ್ಟ ಇವರಿಗೆಲ್ಲ ನನ ಹೃತ್ಪೂರ್ವಕ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ

ದಾಸಸಾಹಿತ್ಯ ದರ್ಶನ ದ ಸಂಪಾದಕನಾಗಬೇಕೆಂದು ಪ್ರಕಾಶಕರು ನನ್ನನ್ನು
ಕೇಳಿದಾಗ ನಾನು ಈ ಹೊಣೆಯನ್ನು ನಿರ್ವಹಿಸಲು ಮೊದಲು ಒಪ್ಪಲಿಲ್ಲ ಈ ಕೆಲಸ
ವನು ನನಗಿಂತ ಚೆನ್ನಾಗಿ ಮಾಡಬಲ್ಲವರಿದ್ದಾರೆಂಬುದೇ ನನ ಅಳುಕಿಗೆ ಕಾರಣ
ಆದರೆ ಪ್ರಕಾಶಕರು ಅಷ್ಟು ಸುಲಭವಾಗಿ ನನ ನ್ನು ಬಿಟ್ಟುಕೊಡಲು ಸಿದ್ಧರಿರಲಿಲ್ಲ
ಜೊತೆಗೆ ಪ್ರಕಾಶಕರ ಪರವಾಗಿ ಮಿತ್ರರಾದ ಶ್ರೀ ಬಿ ಜಿ ಸತ್ಯಮೂರ್ತಿಯವರ
ಒತ್ತಾಯ ಬೇರೆ ಹೀಗಾಗಿ ನಾನು ಈ ಜವಾಬ್ದಾರಿಯನು ಹೊತ್ತುಕೊಳ್ಳಲೆ
ಬೇಕಾಯಿತು ಆದರೆ ಒಂದು ಕಿರಿದಾದ ಕಾಲಮಿತಿಯ ಲ್ಲಿ ಲೇಖನಗಳನ್ನು ಬರೆಯಿಸು
ವುದು ಸುಲಭವಾಗಲಿಲ್ಲ ಅನೇಕ ವಿದ್ವಾಂಸರು ನಮ್ಮ ಪತ್ರಗಳಿಗೆ ಉತ್ತರವನ್ನೇ
ನೀಡಲಿಲ್ಲ ಅವರ ಮೌನವನ್ನ ಸಮ್ಮತಿಯೆಂದಾಗಲಿ ನಿರಾಕರಣೆಯೆಂದಾಗಲಿ
ಭಾವಿಸಲಾಗದ ಸಂದಿಗ್ಧಸ್ಥಿತಿ ಒದಗಿ ಬಂತು ಅವರನ್ನು ಬಿಟ್ಟು ಬೇರೆಯವರಿಂದ
ಲೇಖನ ಬರೆಯಿಸಲು ಸ್ವಲ್ಪಕಾಲವೇ ಬೇಕಾಯಿತು ಇನ್ನು ಕೆಲವರು ಒಪ್ಪಿಯೂ
ಬರೆಯಲಿಲ್ಲವಷ್ಟೇ ಅಲ್ಲ ಆಗದೆಂದು ಕೂಡ ಕೊನೆಗೂ ಹೇಳಲಿಲ್ಲ

ಆದರೆ ಹಿಡಿದ ಕೆಲಸ ಬಿಡಬಾರದೆಂಬ ಹಟದಿಂದ ಮುನ್ನಡೆಯಲೇಬೇಕಾಯಿತು
ಅನೇಕ ವಿದ್ವಾಂಸರು ನಿಜವಾದ ಸ್ನೇಹದಿಂದ ಹರಿದಾಸ ಸಾಹಿತ್ಯದ ವಿಚಾರದಲ್ಲಿರುವ
ಅಭಿಮಾನದಿಂದ ಲೇಖನಗಳನ್ನು ಬರೆದುಕೊಟ್ಟರು ತರುಣರನೇಕರು ಉತ್ಸಾಹ
ದೊಂದಿಗೆ ವಿದ್ವತ್ತನ್ನೂ ಮೆರೆದಿದ್ದಾರೆ ಹೀಗಾಗಿ ಸಂಪಾದಕನಾದ ನನಗೆ ವಿಸ್ಮಯ
ದೊಂದಿಗೆ ನಂತೊಮ್ಮೆ ವಿಶ್ವಾಸವೂ ಹುಟ್ಟಿದೆ ನನಗೆ ಈ ಕಾರ್ಯದಲ್ಲಿ ವಿಶೇಷ
ವಾಗಿ ಸಹಾಯ ನೀಡಿದ ಗೆಳೆಯರ ದ ಶ್ರೀ ಜಿ ಎಸ್ ಭಟ್ಟರ ಉಪಕಾರವನ್ನು
ನಾನು ಇಲ್ಲಿ ನೆನೆಯಬೇಕು ಈ ಕೃತಿಯ ಸಂಪಾದನ ಕಾರ್ಯವನ್ನು ಹಮ್ಮಿಕೊಳ್ಳುವ
ವೇಳೆಗೆ ನನಗೆ ಅನಿರೀಕ್ಷಿತವಾಗಿ ಅನಾರೊ ಗ್ಯ ಬಡಿಯಿತು ಒಂದು ಕಣ್ಣು ತಾತ್ಕಾಲಿಕ
ವಾಗಿ ಅಸಹಕಾ ರ ಚಳವಳಿ ಹೂಡಿತು ಅರೆಗುರ ಡನಾಗಿ ಜೊತೆಗೆ ತೀವ್ರವಾದ
ವೇದನೆಯಿ ಂದಾಗಿ ನಾನು ಈ ಕಾರ್ಯ ಮಾಡಲಾರೆನೆನಿಸಿತು ಆಗ ನನಗೆ ಒತ್ತಾಸೆ
ಯಾಗಿ ನಿಂತವರು ಶ್ರೀ ಭಟ್ಟರು ನನ ಲ್ಲಿ ಆತ್ಮವಿಶ್ವಾಸ ಮೂಡಿಸಿದವರು ಶ್ರೀ ಬಿ ಜಿ
ಸತ್ಯಮೂರ್ತಿ ನನ್ನ ಬೇನೆ ಪರಿಹ ರವಾಗದಂಥದಲ್ಲ ಎಂದು ಧೈರ್ಯ ಹೇಳಿ
ಚಿಕಿತ್ಸೆ ನಿ ಡಿದವರು ವೈದ್ಯರಾದ ಶ್ರೀ ವಿ ಆರ್ ಕೃಷ್ಣಸ್ವಾಮಿರಾಯರು ನಾನು

ಲೇಖನಗಳ ಹಸ್ತಪ್ರತಿಗಳನ್ನು ಓದಲಾರದ ಸ್ಥಿತಿಯಲ್ಲಿದ್ದಾಗ ಅವನ್ನು ಓದಿ ನನ್ನ ಸೂಚನೆಗಳನ್ನು ಗುರುತು ಮಾಡಿದವರು ನನ್ನ ಪತ್ನಿ ಮಗಳು, ಮಗ ಮತ್ತು ಸೊಸೆ ಹೀಗೆ ಈ ಕೆಲಸಕ್ಕಾಗಿ ಎಲ್ಲರ ನೆರವನ್ನೂ ಪಡೆದುಕೊಂಡಿದ್ದೇನೆ ಇವರೆಲ್ಲರಿಗೂ ನನ್ನ ಕೃತಜ್ಞತೆಗಳು ಸಲ್ಲಬೇಕು

ಈ ಗ್ರಂಥಯೋಜನೆಯನ್ನು ಕಲ್ಪಿಸಿಕೊಂಡು ನನ್ನಿಂದ ಈ ಕೆಲಸ ಮಾಡಿಸಿದ ಪ್ರಕಾಶಕರಿಗೂ ಬಹು ಅಲ್ಪ ಕಾಲದಲ್ಲಿ ಇದನ್ನು ಮುದ್ರಿಸುವ ಪವಾಡವನ್ನು ಮೆರೆದ ಲೋಟಸ್ ಪ್ರಿಂಟರ್ಸ್ ಅವರಿಗೂ ಹೃತ್ಪೂರ್ವಕ ವಂದನೆಗಳು

— ಎಚ್ಚೆಸ್ಕೆ

---

# ಪ್ರಕಾಶಕರ ಮಾತು

ಮಂಗಳಭಾರತಿ ಪ್ರಕಾಶನ ಪ್ರಾರಂಭವಾಗಿ ಸುಮಾರು ಒಂದು ದಶಕ ಆಗುತ್ತ ಬಂತು ಈ ಸುದೀರ್ಘ ಅವಧಿಯಲ್ಲಿ ನಾವು ಪ್ರಕಟಿಸಿದ ಪುಸ್ತಕಗಳ ಸಂಖ್ಯೆ ಮಾತ್ರ ತೀರ ಕಡಿಮೆ

1975 ರಲ್ಲಿ ಮಹಿಳಾವರ್ಷದ ಅಂಗವಾಗಿ ವಿವಿಧ ಪತ್ರಿಕೆಗಳ ಮುಖಾಂತರ ಕರೆಕೊಟ್ಟು ಲೇಖನಗಳನ್ನು ತರಿಸಿಕೊಂಡು ಹೆಣ್ಣು ಸಮಾಜದ ಕಣ್ಣು ಪ್ರಬಂಧ ಸಂಕಲನವನ್ನು ಪ್ರಕಟಿಸಿದೆವು

ಈ ಗ್ರಂಥದಲ್ಲಿ ಶ್ರೀಮತಿ ತಿರುಮಲೆ ರಾಜಮ್ಮ ಶ್ರೀಮತಿ ಬಿ ನಾ ಮಂಗಳ ಶ್ರೀಮತಿ ಸುಮಿತ್ರಾ ರಾಮಣ್ಣ ಶ್ರೀಮತಿ ಭಾರತಿರಾಂ ಮತ್ತು ಶ್ರೀಮತಿ ಎಂ ಜಯಂತಿ ಬಾಯಿ ಇತ್ಯಾದಿ ಹಲವಾರು ಪ್ರಸಿದ್ಧ ಲೇಖಕಿಯರು ಹಾಗೂ ವಿದುಷಿಯರ ಲೇಖನಗಳಿವೆ ಈ ಗ್ರಂಥದ ಒಂದು ಸಾವಿರ ಪ್ರತಿ ಖರ್ಚಾಗಲು ಐದಾರುವರ್ಷಗಳೇ ಬೇಕಾದಾಗ ಈ ಬಗೆಯ ಗ್ರಂಥಗಳನ್ನೇ ಪ್ರಕಟಿಸಬೇಕೆಂದು ಕೊಂಡಿದ್ದ ನಮ್ಮ ಧ್ಯೇಯಕ್ಕೆ ತಣ್ಣೀರೆರೆಚಿದಂತಾಯಿತು

ಕನ್ನಡ ಪ್ರಕಾಶನ ಕ್ಷೇತ್ರದಲ್ಲಿ ವೈಚಾರಿಕ ಮತ್ತು ಸಂಶೋಧನಾತ್ಮಕ ಗ್ರಂಥಗಳು ಸ್ವತಂತ್ರವಾಗಿ ಮಾರಾಟವಾಗುವ ಕಾಲ ಬರಲು ಇನ್ನೂ ಎಷ್ಟು ಶತಮಾನಗಳು ಬೇಕೋ ?

ಈಚೆಗೆ ಮೂರು ನಾಲ್ಕು ವರ್ಷಗಳಿಂದ ಗ್ರಂಥಾಲಯ ಖರೀದಿ ಚಟುವಟಿಕೆಗಳೂ ಸ್ಥಗಿತಗೊಂಡಿರುವುದರಿಂದ ಇತರ ಇಲಾಖೆ ಹಾಗೂ ಯಾವುದೇ ಸಗಟು ಖರೀದಿಗೆ ಪ್ರಭಾವ ಅಥವ ಇನ್ನಿತರ ಆಮಿಷಗಳನ್ನೊಡ್ಡದೆ ಗ್ರಂಥಗಳ ಮಾರಾಟ ಸಾಧ್ಯವಿಲ್ಲ ಎಂದು ಸಿದ್ಧಾಂತವಾಗಿರುವಾಗ ಯಾವ ಪ್ರಯೋಗಕ್ಕೂ ಅವಕಾಶಗಳಿಲ್ಲದಂಥ ನಮ್ಮಂಥ ವೃತ್ತಿನಿರತ ಪ್ರಕಾಶರ ಪಾಡಂತೂ ಹೇಳತೀರದು

ಮಾರುಕಟ್ಟೆಯಲ್ಲಿ ಇತಿ-ಮಿತಿ ತಪ್ಪಿದ ಕಾಗದದ ಬೆಲೆ ಅಚ್ಚುಜೋಡಣೆ ಮುದ್ರಣ ಮತ್ತು ರಟ್ಟುಹಾಕುವಿಕೆಯ ಬೆಲೆಗಳಂತೂ ತೀರ ದುಬಾರಿಯಾಗಿ ಸಾಲ-ಸೋಲ ಮಾಡಿ ಗ್ರಂಥಪ್ರಕಟಿಸಿದರಂತೂ ಅಂತಹವರ ಸ್ಥಿತಿ ಬಡ್ಡಿಗೇ ಮೀಸಲು

ಈ ನಾಲ್ಕೈದು ವರ್ಷಗಳಿಂದ ಈ ಮೇಲಿನ ಕಾರಣಗಳಿಂದ ಗ್ರಂಥಪ್ರಕಾಶನಕ್ಕೂ ಕೈ ಹ ಕದೆ ಗ್ರಂಥಾಲಯಗಳಲ್ಲಿ ವ್ಯಾಪಾರಗಳೂ ಇಲ್ಲದೆ ಇದನ್ನೇ ನೆಚ್ಚಿಕೊಂಡ

ನಮ್ಮಂಥವರ ಜೀವನ ನಿರ್ವಹಣೆಯೂ ದುರ್ಭರವಾದ ಪ್ರಸಂಗವನ್ನು ಯಾರಮುಂದೆ ಹೇಳಿಕೊಳ್ಳಬೆ ಕೋ ತಿಳಿಯದಾಗಿದೆ

ದಾಸಸಾಹಿತ್ಯ ದರ್ಶನ ಗ್ರಂಥ ಪ್ರಕಟಣಾ ಯೋಜನೆಯನ್ನು ಧೈರ್ಯವಹಿಸಿ ಕಾರ್ಯಗತಗೊಳಿಸಲು ಸನ್ಮಾನ್ಯ ಶ್ರೀ ಎಚ್ಚೆಸ್ಕೆ ಅವರನ್ನು ಕೇಳಿಕೊಂಡಾಗ ನಮ್ಮ ಮೇಲೆ ದಯೆಯಿಟ್ಟು ಅವರೇನೋ ಒಪ್ಪಿಕೊಂಡರು ಲೇಖಕರುಗಳಿಗೆ ಪತ್ರಗಳನ್ನೂ ಬರೆಸಲಾಯಿತು ಆದರೆ ಕಾಲಾವಕಾಶ ತೀರಕಮ್ಮಿ ಕೊಟ್ಟಿದ್ದರಿಂದ ಲೇಖಕರು ಯಾರೂ ಪ್ರಬಂಧಗಳನು ಕಳುಹಿಸಲು ಒಪ್ಪಲಿಲ್ಲ

ಇದೇ ಸಂದರ್ಭದಲ್ಲಿ ರಾಜ್ಯ ಸರ್ಕಾರ ಕನ್ನಡ ಮಂತ್ರಿ ಸಂಸ್ಕೃತಿ ಇಲಾಖೆಯ ಮುಖಾಂತರ ಹಲವು ಪ್ರತಿಗಳನ್ನು ಕೊಳ್ಳಲು ಎ ಎಂದ ಬಂದದ್ದರಿಂದ ನಮ್ಮ ಉತ್ಸಾಹವೂ ಹೆಚ್ಚಿ ಮತ್ತೆ ಶ್ರೀ ಎಚ್ಚೆಸ್ಕೆ ಅವರಿಗೇ ದುಂಬಾಲು ಬಿದ್ದು ವಿನಾದರೂವಮಾಡಿ ಗ್ರಂಥ ಸಂಪಾದನ ಕೆಲಸವನು ಮುಂದುವರಿಸಬೇಕೆಂದು ಕೇಳಿಕೊಂಡೆವು

ಆದಷ್ಟು ಬೇಗ ಗ್ರಂಥ ಪ್ರಕಟಿಸುವುದು ನಮ್ಮ ಉದ್ದೇಶ ಈ ಎಲ್ಲ ನಮ್ಮ ಕಾರ್ಯಗಳ ಹಿಂದಿನ ನಿಜವಾದ ಸ್ಫೂರ್ತಿ ಶ್ರೀ ಬಿ ಜಿ ಸತ್ಯಮೂರ್ತಿ ಸ್ವತಃ ಕತೆಗಾರರು ನಾಟಕ ಕರ್ತೃಗಳೂ ಕವಿಗಳೂ ಕಾದಂಬರಿಗಾರರೂ ಹಾಗೂ ಸಂಶೋಧಕರೂ ಆದ ಇವರ ಸಲಹೆ ಸೂಚನೆಗಳೇ ನಮ್ಮ ಚೇತನ

ನಮ್ಮ ಮೇಲಿನ ಕರುಣೆಯಿಂದಲೋ ಶ್ರೀ ಸತ್ಯಮೂರ್ತಿ ಅವರ ಮೇಲಿನ ವಿಶ್ವಾಸದಿಂದಲೋ ಅಂತೂ ಶ್ರೀ ಎಚ್ಚೆಸ್ಕೆ ಅವರು ಎರಡನೆಬಾರಿಯೂ ದಾಸ ಸಾಹಿತ್ಯ ದರ್ಶನ ಗ್ರಂಥದ ಸಂಪಾದಕರಾಗಲು ಒಪ್ಪಿ ಈ ಮಹತ್ತರ ಕಾರ್ಯವನ್ನು ಒಪ್ಪಿಕೊಂಡು ಪ್ರಬಂಧಗಳನ್ನು ಸಂಪಾದಿಸಿಕೊಡಲು ಒಪ್ಪಿದರು

ದಾಸ ಸಾಹಿತ್ಯ ದರ್ಶನ ಗ್ರಂಥಕ್ಕೇ ಪ್ರಬಂಧಗಳನ್ನು ಬರೆದ ಹೆಚ್ಚಿನ ಲೇಖಕರೆಲ್ಲ ಸಾ ತಕೋತ್ತರ ಪದವೀಧರರು ದಾಸಕ್ಷೇತ್ರದಲ್ಲೇ ಕೆಲಸಮಾಡುತ್ತಿರುವವರು ಮತ್ತೆ ಕೆಲವರು ಈ ಕ್ಷೇತ್ರಕ್ಕೆ ಸಂಬಂಧಿಸಿದ ಸಾಹಿತ್ಯದಲ್ಲಿ ಅನುಭವವುಳ್ಳವರಾಗಿರುವವರೂ ಆಗಿದ್ದಾರೆ ಪ್ರಥಮಬಾರಿಗೆ ದಾಸ ಸಾಹಿತ್ಯದ ಬಗ್ಗೆ ಇಂತದ್ದೊಂದು ಆಚಾರ್ಯಕೃತಿ ಪ್ರಕಟಿಸುತ್ತಿರುವ ನಮ್ಮ ಪ್ರಯತ್ನ ಹೆಚ್ಚಿನ ಮಟ್ಟಿಗೆ ಉಪಕಾರಿಯಾಗಿದೆ ಅನ್ನುವ ಆತ್ಮವಿಶ್ವಾಸವೂ ನಮಗಿದೆ

ದಾಸ ಸಾಹಿತ್ಯದ ಬಗ್ಗೆ ಸಮಗ್ರ ಸಾಹಿತ್ಯವನ್ನೊಳಗೊಂಡ ಇಂಥ ವಿಶಿಷ್ಟ ಕೃತಿ ಹೊರಬರಲು ಕಾರಣರಾದ ಸಂಪಾದಕರು ಲೇಖಕರುಗಳು ಮತ್ತು ಸರ್ಕಾರ ಇಲಾಖೆಯ ನಿರ್ದೇಶಕರಾದ ಶ್ರೀ ನ ನಾ ಕರಾವಿ ಇತರ ಅಧಿಕಾರಿಗಳು ಮತ್ತು ಸಿಬ್ಬಂದಿವರ್ಗ ಎಲ್ಲರಿಗೂ ಈ ಗ್ರಂಥದ ಯಶಸ್ಸು ಸೇರಬೇಕು

ನೂರಾರು ಅಡೆ-ತಡೆಗಳ ಮಧ್ಯೆ ನಮ್ಮ ದುರಾದೃಷ್ಟದಿಂದಲೋ ಏನೋ ಸಂಪಾದಕರಿಗೆ ಕಣ್ಣುಬೇನೆ ಒಂದು ಒಂದು ತಿಂಗಳಕಾಲ ಕಣ್ಣೇ ಬಿಡಲಾಗುತ್ತಿರಲಿಲ್ಲ

ಇನ್ನು ಮುದ್ರಣದ ವಿಚಾರ ಇಂದಿನ ಪರಿಸ್ಥಿತಿ ಹೇಗಿದೆಯೆಂದರೆ ಯಾವ ಉದ್ಯಮಕ್ಕಾದರೂ ಹಿಂದೆ ಮುಂದೆ ನೋಡದೆ ಧುಮ್ಮಿಕ್ಕಬಹುದು ಆದರೆ ಗ್ರಂಥ ಮುದ್ರಣದ ಕೆಲಸ ಮಾತ್ರ ಬೇಡವೇ ಬೇಡ ಎನ್ನುವಷ್ಟು ಜುಗುಪ್ಸೆ ತರುತ್ತದೆ

ಇಂಥ ದಿಕ್ಕೆಟ್ಟ ಸ್ಥಿತಿಯಲ್ಲಿ ನಮ್ಮ ಸಹಾಯಕ್ಕೆ ನಿಂತವರು ಲೋಟಸ ಪ್ರೆಸ್ಸಿನ ಮಾಲಿಕರಾದ ಶ್ರೀ ಪಾಟೀಲರು ಅವರೇನೋ ಮುದ್ರಿಸಿಕೊಡುವುದಾಗಿ ಒಪ್ಪಿ ಕೊಂಡರು ಆದರೆ ಸಕಾಲಕ್ಕೆ ವಿದ್ಯುಚ್ಛಕ್ತಿ ಒದಗುತ್ತಿಲ್ಲ ಮಾರುಕಟ್ಟೆಯೆಲ್ಲ ಹುಡುಕಿ ದರೂ ಮೈಸೂರು ಮಿಲ್ಲಿನ ಡೆಮಿ ಬಿಳೀ ಕಾಗದ ಸಿಗುತ್ತಿಲ್ಲ ಸಮಯಕ್ಕೆ ಸರಿಯಾಗಿ ಅಚ್ಚು ಜೋಡಿಸುವರು ಸಿಗುತ್ತಿಲ್ಲ ಹೀಗೆ ಹತ್ತಾರು ತಾಪತ್ರಯ ತಲೆನೋವುಗಳ ಮಧ್ಯೆ ಕೆಲಸ ಮಾಡಬೇಕಾಯಿತು ಕರಡು ತಿದ್ದಿನ ದೋಷದಿಂದಾಗಿ ಮೂರು-ನಾಲ್ಕು ಫಾರಂಗಳಲ್ಲಿ ಶೀರ್ಷಿಕೆಯೋ ಲೇಖಕರ ಹೆಸರೋ ಬಿಟ್ಟು ಹೋಗಿ ಮತ್ತೆ ಮುದ್ರಿಸಬೇಕಾದ ಪ್ರಸಂಗವೂ ಬಂತು ಬೇಸರವಿಲ್ಲದೆ ಶ್ರೀ ಪಾಟೀಲರು ಇದನ್ನೆಲ್ಲ ಮಾಡಿದ್ದಾರೆ ಇದ್ದ ಕಡಿಮೆ ಅವಧಿಯಲ್ಲಿ ಕೈ ಹಾಕಲೇ ಹೆದರುವಂಥ ಪರಿಸ್ಥಿತಿ ಯಲ್ಲಿ ಶ್ರೀ ಪಾಟೀಲರು ಮುಂದೆ ಬಂದು ಗ್ರಂಥವನ್ನು ಸುಂದರವಾಗಿಯೂ ಮುದ್ರಿಸಿ ಕೊಟ್ಟಿದ್ದಾರೆ

ಶ್ರೀ ಪಾಟೀಲರಿಗೂ ಅವರ ಪುತ್ರ ಚಿ॥ ಸೋಮಶೇಖರರಿಗೂ ಮುದ್ರಣಾಲಯದ ಎಲ್ಲ ಸಿಬ್ಬಂದಿವರ್ಗದವರಿಗೂ ನಮ್ಮ ಕೃತಜ್ಞತೆಗಳು

ಹಣವಿಲ್ಲದೆ ತೃಣವೂ ಚಲಿಸದ ಈವತ್ತಿನ ಜಗತ್ತಿನಲ್ಲಿ ಇಷ್ಟು ದೊಡ್ಡ ಮೊತ್ತದ ಹಣವನ್ನು ನಮ್ಮಂಥ ಪ್ರಕಾಶಕರು ತರುವುದೆಲ್ಲಿಂದ ? ಪ್ರಕಾಶನ ಕಾರ್ಯಕ್ಕಂತೂ ನಮ್ಮ ಸದ್ಯದ ಸ್ಥಿತಿಯಲ್ಲಿ ಎಲ್ಲಿಂದಲೂ ಒಂದು ಪೈಸೆ ಹುಟ್ಟದಿರುವ ಸ್ಥಿತಿಯಲ್ಲಿ ಮುಂದಿನ ದಾರಿಕಾಣದೆ ತಲೆಮೇಲೆ ಕೈಹೊತ್ತು ಕೂತಾಗ ಮತ್ತೆ ನಮ್ಮ ನೆರವಿಗೆ ನಿಂತವರು ಬೆಂಗಳೂರಿನ ಶ್ರೀಮತಿ ಮತ್ತು ಶ್ರೀ ಎನ್ ಆರ್ ಗೋವಿಂದರಾವ್ ದಂಪತಿಗಳು ನಮ್ಮ ಈ ಎಲ್ಲ ಕೆಲಸಗಳಲ್ಲಿಯೂ ಸಹಕರಿಸಿದವರು ಆತ್ಮೀಯ ಬಂಧು ಗಳಾದ ಶ್ರೀಮತಿ ಮತ್ತು ಶ್ರೀ ಬಿ ಜಿ ಸತ್ಯಮೂರ್ತಿ ಅವರು

ಒಟ್ಟಿನಲ್ಲಿ ದಾಸ ಸಾಹಿತ್ಯ ದರ್ಶನ ಗ್ರಂಥದ ಬೃಹತ್ ಯೋಜನೆಯ ಕಾರ್ಯ ದಲ್ಲಿ ನಮ್ಮೊಂದಿಗೆ ಸಹಕರಿಸಿದ ಪ್ರತ್ಯಕ್ಷ ಪರೋಕ್ಷ ಎಲ್ಲ ಮಿತ್ರರಿಗೂ ಸಂಪಾದಕ ರಿಗೂ ಲೇಖಕಬಂಧುಗಳಿಗೂ ಮುದ್ರಕರಿಗೂ ಮುಖಚಿತ್ರ ಕಲಾವಿದರಿಗೂ ಮತ್ತು ಕನ್ನಡ ಮತ್ತು ಸಂಸ್ಕೃತಿ ಇಲಾಖೆಯವರಿಗೂ ನಮ್ಮ ಕೃತಜ್ಞತೆಗಳು

ತಮ್ಮ ವಿಶ್ವಾಸಿ

ಮೈಸೂರು-೪ ಎಂ ಎಸ್ ಲೀಲಾವತಿ

# ಪರಿವಿಡಿ

# ಕರ್ನಾಟಕದಲ್ಲಿ ಹರಿದಾಸಪಂಥ

**ಸೀತಾರಾಮ ಜಾಗೀರ್‌ದಾರ್**

ಹರಿನಾರಾಯಣ ಹರಿನಾರಾಯಣ
ಹರಿನಾರಾಯಣ ಎನು ಮನವೆ
ನಾರಾಯಣನೆಂಬ ನಾಮದ ಬೀಜವ
ನಾರದ ಬಿತ್ತಿದ ಧರೆಯೊಳಗೆ ॥

—ಪುರಂದರದಾಸರು

ಭಾರತದ ತದಂತರ್ಗತ ಕರ್ನಾಟಕದ ದೇಶೋವಿಶಾಲ ಪ್ರದೇಶದಲ್ಲಿ ಕಾಲಾನುಕಾಲದಿಂದ ನೆಲಸಿ ನಿಂತಿರುವ ಜನತೆಯ ಹೃದಯ ಮಂದಿರದಲ್ಲಿ ಭದ್ರವಾಗಿ ನೆಲಸಿ ನಿಂತಿರುವ ಮುಖ್ಯ ದೇವತೆಗಳಲ್ಲಿ ವಿಷ್ಣು ಒಬ್ಬ ವಿಷ್ಣುವಿನ ಸಹಸ್ರನಾಮಗಳಲ್ಲಿ ಹರಿ ಎಂಬುದೂ ಒಂದು

ಅತುಲಃ ಶರಭೋ ಭೀಮಃ ಸಮಯಜ್ಞೋ ಹವಿರ್ಹರಿಃ ।
ಸರ್ವಲಕ್ಷಣಲಕ್ಷಣ್ಯೋ ಲಕ್ಷ್ಮೀವಾನ್ ಸಮಿತಿಂಜಯಃ ॥

ವಿಷ್ಣು ದೇವತೆಯನ್ನೇ ಅತ್ಯಂತ ಶ್ರೇಷ್ಠ ದೇವತೆಯೆಂದು ಪೂಜಿಸುವವರೇ ವೈಷ್ಣವರು[1] ವಿಷ್ಣುವಿನ ಪೂಜೆ ವೇದೋಪನಿಷತ್ತುಗಳಷ್ಟು ಪುರಾತನ

1 ಮಹಸ್ತೇ ವಿಷ್ಣೋ ಸುಮತಿಂ ಭಜಾಮಹೇ (ಋ 1–156 3)

2 ವಿಜ್ಞಾನಸಾರಥಿರ್ಯಸ್ತು ಮನಃ ಪ್ರಗ್ರಹವಾನ್ನರಃ ।
ಸೋಽಧ್ವನಃ ಪಾರಮಾಪ್ನೋತಿ ತದ್ವಿಷ್ಣೋಃ ಪರಮಂ ಪದಮ್ ॥

(ಕಠೋಪನಿಷತ್ತು)

ಯಾವ ವ್ಯಕ್ತಿ ಈ ವಿಷ್ಣುವನ್ನು ಅಥವಾ ಹರಿಯನ್ನು ದಾಸ್ಯ ಭಾವದಿಂದ ಪೂಜಿಸುವನೋ ಯಾವನು ಭಜಿಸುವನೋ ಆತ ಹರಿದಾಸ ಪ್ರತಿಯೊಂದು ಭಾಷೆಯ ಚರಿತ್ರೆಯಲ್ಲೂ ಕೋಲ್‌ರಿಜ್ ಕವಿಯ (Coleridge s The Ancient Mariner)

---

1 ವೈಷ್ಣವರಲ್ಲಿ ಹಲವು ಭಿನ್ನಸಂಪ್ರದಾಯಗಳಿದ್ದು ತಾತ್ತ್ವಿಕ ಭೇದಗಳಿದ್ದರೂ ಅವೆಲ್ಲಕ್ಕೂ ಆ ಹರಿಯೆ ಹಿರಿಯದೇವತೆ ,

(a) ತಸ್ಮಾದ್ ಆಹುಃ ವಿಷ್ಣುಃ ದೇವಾನಾಮ್ ಶ್ರೇಷ್ಠಃ (ಶತಪಥ XIV 1)

(b) ಹರಿಯೇ ಸರ್ವೋತ್ತಮ ಹರಿಯೇ ಪರದೇವತೆ ।
ಹರಿ ಸರ್ವವಿಶ್ವಮಯಂ ಜಗತ್ ॥ —ಪುರಂದರದಾಸರು

ಮಾತಿನಲ್ಲಿ ಹೇಳುವುದ ದರೆ ಜಾರ್ಗನ್ (Jargon) ಹೇಳಿಕೆಗಳು[2] ಇರುವುದುಂಟು ಹರಿದಾಸ ವಾಙ್ಮಯ ಹಾಗೂ ಹರಿದಾಸಪಂಥ ಇವುಗಳಿಗೆ ಸಂಬಂಧಿಸಿದಂತೆ ಅವು ಕನ್ನಡದಲ್ಲಿಯೂ ಇವೆ ಸದ್ಯ ಹರಿದಾಸ ವಾಙ್ಮಯದ ಇತಿಹಾಸವನ್ನು ಕೆಲವು ವಿದ್ವಾಂಸರು ಮಧ್ವಾಚಾರ್ಯರ ಸಾಕ್ಷಾತ್ ಶಿಷ್ಯರಾದ ನರಹರಿತೀರ್ಥರಿಂದ ಆರಂಭಿಸಿದರೆ[3] ಮತ್ತೆ ಕೆಲವರು ಶ್ರೀಪಾದರಾಯರಿಂದ ಆರಂಭಿಸುತ್ತಾರೆ[4] ಆಯಾ ವಿಷಯಕ್ಕೆ ಸಂಬಂಧಿಸಿದ ಸಾಮಗ್ರಿಯೆಲ್ಲವನೂ ಸರಿಯಾಗಿ ಸಂಗ್ರಹಿಸದೆ ಬರೆದಿರುವ ಚರಿತ್ರೆಯು ಸಾಧು ಸ್ವರೂಪದ ನಿರೂಪಣೆಯಾಗದು

ಕರ್ನಾಟಕದ ಎಲ್ಲ ಬಗೆಯ ಇತಿಹಾಸಗಳಿಗೆ ಸಂಬಂಧಿಸಿದಂತೆ ಸಾಮಗ್ರಿಯು (Source Material) ಇನ್ನೂ ಸರಿಯಾಗಿ ಸಂಗ್ರಹವಾಗಿಲ್ಲವಾದುದರಿಂದ ನಾನು ಮೊದಲು ಮಾಡಿ ಯಾರು ಬರೆಯುವ ಇತಿಹಾಸವೂ ಸರಿಯಾಗಿ ವಿವರಗಳು ಶುದ್ಧವಾಗಿ ಇರಲು ಸಾಧ್ಯವಿಲ್ಲ ನಾವು ಇಲ್ಲಿ ಕವಿರಾಜ ಮಾರ್ಗದ ಕಾಲದ ಕಾವೇರಿಯಿಂದ ಆ ಗೋದಾವರಿ ವರೆಗಿನ[5] ಕರ್ನಾಟಕದ ಗಡಿಗೆರೆಗಳನ್ನು ಮನಕ್ಕೆ ತಂದುಕೊಳ್ಳಬೇಕು ಆ ತುದಿಯಿಂದ ಈ ತುದಿಯವರೆಗಿನ ಸಾಮಗ್ರಿಯನ್ನು ಸಂಗ್ರಹಿಸಬೇಕು ಅನಂತರ ಇತಿಹಾಸವನು ನಿರೂಪಿಸಬೇಕು ಇದಾದಾಗ ಸ್ವಲ್ಪ ಸರಿಯಾದ ಅಧ್ಯಯನಕ್ಕೆ ದಾರಿಯಾಗುತ್ತದೆ ವಾಸ್ತವತೆಯ ಆಕಾರ ಮೂಡಲು ಸಾಧ್ಯವಾಗುತ್ತದೆ ಕಾರಣ ಮೊದಲು ವಿಸ್ತಾರವಾದ ಆ ಪ್ರಾಚೀನ ಕರ್ನಾಟಕದಲ್ಲಿಯ ಸಾಮಗ್ರಿಯನ್ನು ಒಂದೆಡೆ ಸೇರಿಸಬೇಕು ಇರಲಿ

ಕ್ರಿ ಶ 959 ರಲ್ಲಿ ಯಶೋಧರ ಚರಿತ್ರೆಯನ್ನುಳ್ಳ ಯಶಸ್ತಿಲಕ ಚಂಪೂ

---

2 Jargon Vocabularies artificial or Confused statements ಇಂತಹ ಹೇಳಿಕೆಗಳು ನುಡಿಗಟ್ಟುಗಳು ಪದಪುಂಜಗಳು ಒಮ್ಮೊಮ್ಮೆ ಯಾವುದೋ ಸಂದರ್ಭಕ್ಕೆ ಸೃಷ್ಟಿಯಾಗಿರುತವೆ ಅವುಗಳ ಮುಖ ಬೆಲೆಯ ಮೇಲೆ ಚರಿತ್ರೆಯನ್ನು ಬರೆಯುವುದು ಸಮಂಜಸವಲ್ಲ (Their face value cannot be taken as a source for writing history)

3 (a) ವಿದ್ವಾನ ಆರ್ ಎಸ್ ಪಂಚಮುಖಿ ಹರಿದಾಸ ಸಾಹಿತ್ಯ ಪು ೫೧ ೫೨
(ಕ ಸಾ ಪ ಪತ್ರಿಕೆ ನಂ ೩೩ ೩೪)
(b) ಡಾ| ರಂ ಶ್ರೀ ಮುಗಳಿ ಕನ್ನಡ ಸಾಹಿತ್ಯ ಚರಿತ್ರೆ ಪು ೨೫೭ (೧ ೫೩)

4 ಡಾ| ಜಿ ವರದರಾಜರಾವ್ ಡಾ| ಕೆ ಎಂ ಕೃಷ್ಣರಾವ್–ನೋಡಿ ಶ್ರೀಪಾದರಾಜರ ಕೃತಿಗಳು (ಸಂ ಡಾ| ಜಿ ವರದರಾಜರಾವ ) ಪೀಠಿಕೆ ಪು viii xix

5 ಕವಿರಾಜಮಾರ್ಗ
ಕಾವೇರಿಯಿಂದಮಾ ಗೋ
ದಾವರಿ ವರಮಿರ್ದ್ದ ನಾಡದಾ ಕನ್ನಡದೊಳ್ ।
ಭಾವಿಸಿದ ಜನಪದಂ ವಸು
ಧಾವಳಯ ವಿಲೀನ ವಿಶದ ವಿಷಯ ವಿಶೇಷಂ ॥ I 36 (KBP)

ಕಾವ್ಯವನ್ನು ರಚಿಸಿದ ಸೊ ಮದೆ ವಸೂರಿಯು ಆದರ ಆರನೆಯ ಅಧ್ಯಾಯದಲ್ಲಿ ಬೌದ್ಧ ಹಾಗೂ ಇತರ ಪಂಥಗಳ ಬಗೆಗೆ ಹೆ ಳುತ್ತ ಒಂದು ಪದ್ಯವನ್ನು ಹೀಗೆ ಬರೆದಿದ್ದಾನೆ

ಜೈನವೇಕಂ ಮತಂ ಮುಕ್ತ್ವಾ ದ್ವೈತಾದ್ವೈತಸಮಾಶ್ರಯೌ ।
ಮಾರ್ಗೌ ಸಮಾಶ್ರಿತಃ ಸರ್ವೇ ಸರ್ವಾಭ್ಯುಪಗಮಾಗಮಃ ॥

[ಜೈನ ದರ್ಶನವೊಂದನ್ನು ಬಿಟ್ಟರೆ ಮಿಕ್ಕ ದರ್ಶನಗಳು (ಜೈನೇತರ ಮತದ) ಆಗಮ ಗಳು ದ್ವೈತ ಇಲ್ಲವೇ ಅದ್ವೈತ ದರ್ಶನಗಳ ಮಾರ್ಗವನ್ನು ಅನುಸರಿಸುತ್ತವೆ ]

(Somedeva seems to say that excepting the Jaina doctrine all other systems favour either the path of duality (dvaita) or that of non duality (advaita) [6] ಶಂಕರಾಚಾರ್ಯರ ಮತವಾಗಲಿ ಬೌದ್ಧ ಮತವಾಗಲಿ ವಿಶಿಷ್ಟಾದ್ವೈತ ಮತವಾಗಲಿ ದ್ವೈತ ಸಂಪ್ರದಾಯಗಳಲ್ಲ ಇದು ಸರಿ ಯಾದರೆ ಆಗ ಇದ್ದ ಇತರ ಮತಗಳಲ್ಲಿ ಭಾಗವತ ಮತವನ್ನೇ ದ್ವೈತಮತವೆಂದು ಹೇಳಬೇಕಾಗುತ್ತದೆ ಇಲ್ಲವೇ ಮಧ್ವಾಚಾರ್ಯರ ದ್ವೈತ ಸಂಪ್ರದಾಯದ ಗುರು ಪರಂಪರೆಯು ಆಗಲೂ ಇದ್ದಿತು ಎಂದು ಹೇಳಬೇಕಾಗ ತ್ತದೆ ಅವರ ಗುರು ಪರಂಪರೆಯನ್ನು ಹೀಗೆ ವಿವರಿಸಲಾಗುತ್ತದೆ

ಶ್ರೀ ಹಂಸಂ ಪರಮಾತ್ಮಾ ನಂ ವಿರಿಂಚಿಂ ಸನಕಾದಿಕಾನ
ದುರ್ವಾಸಸೋ ಜ್ಞಾನನಿಧೀನಿ ಂದ್ರವಾಹನ ತೀರ್ಥಕಾನ್ ॥ ॥

ಕೈವಲ್ಯ ತೀರ್ಥಾನ್ ಜ್ಞಾನೇಶಾನ ಪರತಿ ರ್ಥಾನ್ ನಮಾಮ್ಯಹಮ
ತ್ಯಪ್ರಜ್ಞಾನ ಪ್ರಾಜ್ಞತೀರ್ಥಾನ ಅನ್ಯಾನ ತದ ಂಶಜಾನಪಿ ॥೨॥

ಪುರೈವ ಕ ಷ್ಣ ಸಿದ್ಧಾನ ಭುಕ್ತ್ವಾ ಶೋಧಿತ ಮಾನಸಂ
ಅಚ್ಯುತಪ್ರೇಕ್ಷ ತೀರ್ಥಂಚ ಮಧ್ವಾರ್ಯಾಣಾಂ ಗುರುಂ ಭಜೇ ॥೩॥

ಲ ತು ಶ್ರೀಮದಾನಂದತೀರ್ಥೇಂದುರ್ನೋ ಹೃದಂಬರೇ
ಯದ್ವಚಶ್ಚಂದ್ರಿಕಾ ಸ್ವಾಂತ ಸಂತಾಪಂ ವಿನಿಕೃಂತತಿ ॥೪॥

ದುರ್ವಾಸರವರೆಗಿನ ಪೌರಾಣಿಕ ಪರಂಪರೆಯನ್ನು ಎಲ್ಲ ಭಾಗವತ ಸಂಪ್ರದಾಯದವರೂ ಹೇಳುತ್ತಾರೆ ಆದರೆ ಮುಂದಿನವರ ಹೆಸರುಗಳು ಪ್ರಸ್ತುತ ನಮಗೆ ಇಲ್ಲಿ ಬಹಳ ಮುಖ್ಯ ಅವರೆಂದರೆ ಜ್ಞಾನನಿಧಿ ಯತಿಗಳಿಂದ ಅಚ್ಯುತಪ್ರೇಕ್ಷ ಯತಿಗಳವರೆಗೆ

6 Dr K K Handiqui Yasastilaka and Indian Culture PP 371 372

7 ಶ್ರೀ ಪುರಂದರದಾಸರ ಸಾಹಿತ್ಯ—೧ ಪೂಜಾತತ್ವ (ಸಂ ಬಿಟಗೇರಿ ಕೃಷ್ಣಶರ್ಮಾ ಮತ್ತು ಬೆಂಗೇರಿ ಹುಚ್ಚರಾಯರು) ಪು ೧೮೨

ಇರುವ ಎಂಟು ಜನ ಯತಿಗಳು ಮಧ್ವಾಚಾರ್ಯರ ಕಾಲವು ನರಹರಿತೀರ್ಥರ ಶ್ರೀಕೂರ್ಮದ ಶಾಸನಗಳಿಂದ[8] ಸ್ಪಷ್ಟವೇ ಇರುವದರಿಂದ ಸು ಕ್ರಿ ಶ 1199 1276 ಎಂದು ಡಾ॥ ಆರ್ ಜಿ ಭಂಡಾರ್‌ಕರ್ ಮೊದಲಾದ ಕೆಲ ವಿದ್ವಾಂಸರು ಸೂಚಿಸಿರುವದನ್ನು ಸ್ವೀಕರಿಸಿದರೆ ಈ ಯತಿಗಳ ಜೀವನಾವಧಿಯು ಕಾಲಗಡುಗಳು ತಾತ್ಪೂರ್ತಿಕವಾಗಿ (tentatively) ಹೀಗೆ ಇರುತ್ತವೆ (ಪ್ರತಿಯೊಬ್ಬ ಯತಿಯು ಗೃಹಸ್ಥಾಶ್ರಮಿಯಾಗಿದ್ದು ಮಕ್ಕಳನ್ನು ಪಡೆದಿದ್ದು ಅನಂತರವೇ ಉತ್ತರ ದಿ ಮಠಕ್ಕೆ ಪೀಠವನ್ನಲಂಕರಿಸಲು ಯೋಗ್ಯರಾಗುತ್ತಾರೆಂಬುದನ್ನು ಗಮನಿಸಿ ಅವರ ವಯೋಮಾನದ ಲೆಕ್ಕವನ್ನು ಸರಾಸರಿ ಸುಮಾರು ಐವತ್ತು ವರ್ಷ ಎಂದು ಹಿಡಿದಿರ ವೆ)

ಶ್ರೀಹಂಸ (ಶ್ರೀಮನ್ನಾರಾಯಣ)
|
ವಿರಿಂಚಿ (ಬ್ರಹ್ಮದೇವರು)
|
ಸನಕಾದಿಗಳು (ಬ್ರಹ್ಮನ ಮಾನಸ ಪುತ್ರರು)
|
ದುರ್ವಾಸರು
|
x x x x x
ಜ್ಞಾನನಿಧಿತೀರ್ಥರು (ಸು ಕ್ರಿ ಶ 799–849)
|
ಇಂದ್ರವಾಹನತೀರ್ಥರು (ಸು ಕ್ರಿ ಶ 849–899)
|
ಕೈವಲ್ಯತೀರ್ಥರು (ಸು ಕ್ರಿ ಶ 899–949)
|
ಜ್ಞಾನೇಶತಿ ರ್ಥರು (ಸು ಕ್ರಿ ಶ 949–999)
|
ಪರತೀರ್ಥರು (ಸು ಕ್ರಿ ಶ 999–1049)
|
ಸತ್ಯಪ್ರಜ್ಞತೀರ್ಥರು (ಸು ಕ್ರಿ ಶ 1049–1099
|
ಪ್ರಾಜ್ಞತೀರ್ಥರು (ಸು ಕ್ರಿ ಶ 1099–1149)
|
ಅಚ್ಯುತಪ್ರೇಕ್ಷತೀರ್ಥರು (ಸು ಕ್ರಿ ಶ (1149–1199)
|
ಆನಂದತೀರ್ಥರು (ಸು ಕ್ರಿ ಶ 1199–1276)

೮ Ep Ind VI P 263

ಈಗ ಮೇಲ್ಕಾಣಿಸಿದ ದ್ವೈತಪಂಥದ ಜ್ಞಾನನಿಧಿತೀರ್ಥರು ರಾಷ್ಟ್ರಕೂಟ ಚಕ್ರವರ್ತಿ 2ನೆಯ ಗೋವಿಂದ ಹಾಗೂ ಆತನ ಪುತ್ರ ನೃಪತುಂಗ ಇಲ್ಲವೇ ಆತನ ತಂದೆ ಧ್ರುವ ಧಾರಾವರ್ಷನ — ಇವರ ಸಮಕಾಲೀನರಾಗುತ್ತಾರೆ ಇದೇ ಧ್ರುವ ಹಾಗೂ ಗೋವಿಂದರ ಸಮಕಾಲೀನ ಹ ಗೂ ಅವರ ಆಶ್ರಯದಲ್ಲೇ ಇದ್ದ ಮಹಾಕವಿ° ಬಿಜಾಪೂರ್ ಜಿಲ್ಲೆಯ ಭೀಮಾತೀರದ ಸಂಬೆವಾಡದ (ಶಂಭುವಾಡ > ಸ್ವಯಂಭೂ ವಾಡ) ನಿವಾಸಿಯಾದ ಸ್ವಯಂಬೂ ತನ್ನ ಛಂದಲಕ್ಷಣ ಗ್ರಂಥ (ಸ್ವಯಂಭೂ ಛಂದಸ್) ದಲ್ಲಿ ಉದಾಹರಣೆಗೆಂದು ಶುದ್ಧಸ್ವಭಾವ ಕವಿಯ ಪದ್ಯವೊಂದನ್ನು ಉಲ್ಲೇಖಿಸಿದ್ದಾನೆ ಅದು ರಾಧಾಕೃಷ್ಣ ಭಕ್ತಿ ಅಥವಾ ಭಕ್ತಿಪಂಥದ ಪರಮ ವಿರಹಾಸಕ್ತಿ ರೂಪದ ವೇಲೆ ಇನಿತು ಹೊಸ ಬೆಳಕನ್ನು ಬೀರುತ್ತದೆ ಏಕೆಂದರೆ ಇದುವರೆಗೆ ಈ ಪಂಥದ ಇತಿಹಾಸವನ್ನು ಸರಿಯಾಗಿ ನಿರೂಪಿಸಲಾಗಿಲ್ಲ ರಾಧೆಯ ಹೆಸರು ಮೊದಲು ಕಂಡುಬರುವುದು ಬ್ರಹ್ಮವೈವರ್ತ ಪುರಾಣದಲ್ಲಿ ಬಹು ಈಚಿನ ದಾದ ರಾಧಾಕೃಷ್ಣರ ಕಲ್ಪನೆಯು ವಿಶೇಷವಾಗಿ ಬಂಗಾಳದಲ್ಲಿ ನೂತನ ವೈಷ್ಣವ ಧರ್ಮಕ್ಕೆ ಕಾರಣವಾಯಿತು ಜಯದೇವ ವಿದ್ಯಾಪತಿ ಚೈತನ್ಯದೇವ ಮುಂತಾ ದವರ ಕೃಷ್ಣ ಸಂಗೀತಕ್ಕೆ ಮೂಲವಾಯಿತು [10] ಮತ್ತೆ ರಾಧೆಯ ಹೆಸರಂತೂ ಶಾಸನಗಳಲ್ಲಾಗಲಿ ಕಾವ್ಯಗಳಲ್ಲಾಗಲಿ ಗೋಚರವಾಗುವುದಿಲ್ಲ ರಾಧಾಕೃಷ್ಣರ ಕಲ್ಪನೆಯೇ 9ನೆಯ ಶತಮಾನಕ್ಕಿಂತ ಈಚಿನದು ಎಂಬ ಪುಸಳ್ಕರ್ ಅವರ ಹೇಳಿಕೆ[11] —ಇವು ಎಷ್ಟರ ಮಟ್ಟಿಗೆ ಸರಿಯೆಂಬುದನ್ನು ಈಗ ಪುನಃ ಪರಿಶೀಲಿಸಬೇಕಾಗಿದೆ ಸ್ವಯಂಭೂ ಉಲ್ಲೇಖಿಸಿದ ಶುದ್ಧಸ್ವಭಾವ ಕವಿಯ ಪದ್ಯವು ಹೀಗಿದೆ (೬ ಲ + ೯ ಯ ಗಣಗಳು)

> ಸೀಹವಿಕ್ಕಂ ತೋ ಸ ದ್ಧಸಹಾವಸ [ಸಿಂಹವಿಕ್ರಾಂತಃ ಶುದ್ಧಸ ಭಾವಸ ]—
> ಉಅ ಸರಅಣಿಸಾವಿ ರಮಂತೊ ಸಮಂ ಬಾಲಗೋವೀಹಿಂ* ರಾಹಹಾಇಕಣ್ಣೋ
> ಕರೆ ಪುಂಜಿಅಂ ಧೂಲಿಪುಂಜಂ
> ಲಲಿಅಊಹಅ ಹತೆ ೀಣ ಪಚ್ಛಾಇಊಣಚ್ಛಿವ ಎ ಇಂ*ಣಿ ಓ ಸಅಂ
> ಜಾವಸಂಕೇ ಅ ಕೇಲೀ ಪವಿ⁻ಂ ।

6 ಸ್ವಯಂಭೂ ಕವಿಯ ಕಾಲವನು ನಿರ್ಧರಿಸುವಲ್ಲಿ ನಾು ಪಂಡಿತ ನಾಥೂರಾಮ ಪ್ರೇಮಿ (ಜೈನ ಸಾಹಿತ ಔರ್ ಇತಿಹಾಸ ಪು ೧೭) ಹಾಗೂ ಪಂಡಿತ ರಾಹುಲ ಸಾಂಕೃತ್ಯಾಯನ (ಪಉಮಚರಿಉ ಉಪೋದ್ಘಾತ ಪು ೮) ಅವರ ನಿರ್ಣಯವನು ಒಪಿ ಕೊಂಡಿದೇನೆ ಕಾರಣ ಸ ಯಂಭೂಕವಿಯಕಾಲ ಸು ಕ್ರಿ ಶ ೭೫೦ ೮ ೪

10 (a) ಬಂಕಿಮಚಂದ್ರ ಚಟ್ಟೋಪಾಧ್ಯಾಯ ಶ್ರೀಕ ಷ ಚರಿತ್ರೆ (ಕನ ಡಾನುವಾದ ಆರ್ ವ್ಯಾಸರಾವ ) ಪು ೧೫೫

(b) ಕನ ಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ ಪು ೧೬೯ ( ೯೬೬)

11 ಅದೇ ಗ್ರಂಥ (ಕ ಶಾ ಸಾಂ ಅ) ಅ ಟಿ 41 Pusalkar Studies in Epics and Puranas of India p 81

ವಿಹಲಿಅ ಕರರೂ ಹೋ ಪಲೊಏಇ ಜಾತಾ ಪುರೋ ಪುಣ್ಣ ಮಾಅಂದಬೋಂದೀ
ಣವೇಂದೀವರಚ್ಛೀ ಕಿಸಂಗೀ
ವಿಹಸಿಅ ಸವಿಲಾ^ಂ ಪುಣೋ ೀಅ ಸೋ ಗಾಢಮ್ಮಲಿಂಗಿಓ ಸ ಅರಂ ಚುಂಬಿಓ
ಣಿಬ್ಭರಂ ರಾಮಿಓ ಅ ॥ 75 1

[ಪಶ್ಚ ಶರನಿ ಶಾಯಾಂ ರವುವಾಣಃ ಸಮಂ ಬಾಲಗೋಪೀಭಿಃ ರಾಧಯಾಕೃಷ್ಣಃ
ಪುಂಜಿತಂ ಧೂಲಿಪುಂಜಂ
ಲಲಿತೋಭಯ ಹಸಾ ಭ್ಯಾಂ ಪ್ರಚ್ಛಾದ್ಯಾಕ್ಷಿಪತ್ರೇ ನೀತಃ ಸ ಯ ೦ ಯಾವತ್
ಸಂಕೇತಕೇಲೀ ಪ್ರದೇಶಮ್ ।
ವಿಘಲಿತ ಕರರೋಧಃ ಪ್ರಲೋಕಯತಿ ಯಾವತಾ ವತ್ ಪುರಃ ಪೂರ್ಣಮಾಚಂದ್ರ
ಮುಖೀ ನವೇಂದೀವರಾಕ್ಷೀ ಕೃಶಾಂಗೀ
ವಿಹಸ್ಯ ಸವಿವಾಸಂ ಪುನಸ್ತ್ಯಾ ಸ ಗಾಢಮ್ಮಾಲಿಂಗತಃ ಸಾದರಂ ಚುಂಬಿತೋ
ನಿರ್ಭರಂ ರಮಿತಶ ॥–75 1॥[12]

ನೋಡು ಶರನಿ ಶಿಯಲ್ಲಿ ಬಾಲಗೋಪಿಯರೊಂದಿಗೆ ಆಡುವ ರಾಧಾಕೃಷ್ಣ ರಲ್ಲಿ ರಾಧೆ (ಕೃಷ್ಣನ) ಎರಡೂ ಕರಗಳಲ್ಲಿ ಮಳಲಿನ ರಾಶಿಯನು ತುಂಬಿ (ಆತನ) ಕಣ್ಣನು (ತನ ) ಲಲಿತಹಸ್ತಗಳಿಂದ ಮುಚಿ ಕೇಲಿಪ್ರದೇಶದಲ್ಲಿಡಲು ಸ ಯ ೦ ನಡೆಸಿಕೊಂಡು ಹೋಗುತ್ತಿರಲು ಆ ಕ ಶಾಂಗಿ ನವೇಂದೀವರ ಕ್ಷಿ ಪೂರ್ಣಮಾಚಂದ್ರಮುಖಿ ಆ ಕಡೆ ಈಕಡೆ ವಿಶೇಷನೋಡಿ (ಕ ಷ್ಣನ ಕಣ್ಣನು ) ಮು ಚಿ ಹಿಡಿದ (ತನ ) ಕೈಗಳನು ಬಿಟ್ಟು ಬಿಡಲು (ಕೃಷ್ಣನು) ಆಕೆಯನು ಹಿಡಿದು ಚುಂಬಿಸಿದನು ಗಾಢವಾಗಿ ಆಲಂಗಿಸಿದನು ಮತ್ತು ರವಿ ಸಿದನು ಅದನು ಕಂಡ (ಅಡಗಿಕ ಳಿತ) ಇತರರು ವಿಲಾಸಭರಿತ ರೀವಿ ಯಲಿ ಹಾಸ್ಯಗೈದರು ]

ನವಂಗೆ ಸದ್ಯ ಈ ಶುದ್ಧಸ್ವಭಾವ ಕವಿಯ ಬಗ್ಗೆ ಏನೂ ತಿಳಿಯದು ಒಂದು ಮಹಾತು ಸತ್ಯ ಆತ ಸ್ವಯಂಭೂ ಕವಿಗಿಂತಲೂ ಪೂರ್ವದಲ್ಲಿದ್ದನು ಮತ್ತು ಆ ಕಾಲದಲ್ಲಿ ಪ್ರಸಿದ್ಧ ಕವಿಯಾಗಿದ್ದನು ಇದರಿಂದ ವ್ಯಕ್ತವಾಗುವುದೇನೆಂದರೆ ಕ್ರಿ ಶ 8ನೆಯ ಶತಮಾನದಷ್ಟೊತ್ತಿಗೇನೆ ರಾಧಾ ತನ್ನ ಪ್ರೇಮಪೂರ್ಣ ವ್ಯಕ್ತಿತ್ವಕ್ಕೆ ಪ್ರಾಕೃತ ಸಾಹಿತ್ಯದಲ್ಲಿ ಸಾಕಷ್ಟು ಪ್ರಸಿದ್ಧ ಹಾಗೂ ಜನಪ್ರಿಯ ಕಾವ್ಯ ನಾಯ ಕಿ ಯಾಗಿದ್ದಳು ಮತ್ತೆ ಅಕೆಯು ಭಕ್ತಿಯೂ–ಕಾಂತಾಸಕ್ತಿ, ಆತ್ಮನಿವೇದನಾಸಕ್ತಿ

12 (a) ಸ್ವಯಂಭೂ ಛಂಧಸ (ಸಂ ಹರಿದಾಮೋದರ ವೇಲಣಕರ್)
೧ ಉಕ್ತಾದಿವಿಧಿಃ ಪು ೩೭.

(b) ಬಿಜಾಪುರ ಜಿಲ್ಲೆಯಲ್ಲಿ ವೈಷ್ಣವರ ಮನೆಗಳಲ್ಲಿ ಕಾರ್ತಿಕಮಾಸದಲ್ಲಿಯ ಶುಕ್ಲಪಕ್ಷದ ದ್ವಾದಶಿಯಂದು ತುಲಸೀ ವ ಂದಾವನದ ವೇ ಲಿ ಶ್ರೀ ಕಾರ್ತಿಕ ರಾಧಾ ದಾಮೋದರ ಪ್ರಸನ ಎಂದು ಬರೆಯುವ ರೂಢಿ ಇಂದಿಗೂ ಇದೆ ಇದು ರಾಧಾಕೃಷ್ಣ ಎಂಬುದನ್ನೇ ಸೂಚಿಸುತ್ತದೆ ಅಂದು ಅವರ ವಿವಾಹ ಮಹೋತ ವವನು ನಡೆಸಲಾಗುತ್ತದೆ ಕಾರಣ ಈ ಪಂಥ (cult to worship) ಕರ್ನಾಟಕದಿಂದಲೇ ಬೇರೆ ಕಡೆಗೆ ಹೋಗಿದೆ ಅಲ್ಲಿ ವಿಶೇಷ ವಿ ಳಿದಿದೆ

ತನ್ಮಯತಾಸಕ್ತಿ ಹಾಗೂ ಪರಮ ವಿರಹಾಸಕ್ತಿ ಈ ಎಲ್ಲವನ್ನೂ ಇಲ್ಲಿ ಒಳಗೊಂಡಿದೆ ಯೆಂಬ ದು ನಮಗೆ ಕಂಡುಬರುತ್ತದೆ ಕೃಷ್ಣನನ್ನು ಕೂಡುವ ಕಾತುರ ಸಂಕೇತಸ್ಥಲ ಸುಕ್ಷೇಮಕರ ಎಂದು ಚೆನ್ನಾಗಿ ಪರಿಶಿ ಲಿಸುವಷ್ಟು – ಇನಿತು ತಲುಪುವಷ್ಟು – ಕಾಯ ಗೊಡಲಿಲ್ಲ ! ಅಷ್ಟು ಆಕೆಗೆ ಪರಮಾತ್ಮನಲ್ಲಿ ಕೂಡುವ ರತಿಯ ಆವೇಶ ಆ ರಾಧಾರತಿಗೆ ಶ್ರೀಕೃಷ್ಣ ಸಾಕ್ಷಾತ್ ಮನ್ಮಥ ಆತ ಸೌಂದರ್ಯದ ಸಾಗರ ಆತನನ್ನು ಕೂಡ ಬಯಸಿದ ಗೋಪಿಕಾ ಸ್ತ್ರೀಯರು ರಾಧೆಯೆಂಬ ರಾಸಗಂಗೆಗೆ ಸೇರಿದ ಉಪನದಿ ಗಳು ಆ ರಾಸರಸವಂತೀಶ್ರವಂತಿ ಸಾಗರವನ್ನು ಸೇರಲು ಹವಣಿಸಿ ಹರಿದಂದೇ ನವವಿಧ ಭಕ್ತಿಯಲ್ಲಿ ಒಂದಾದ ಆತ್ಮನಿವೇದನ[13] ಈ ನವವಿಧ ಭಕ್ತಿ ನಾರದಭಕ್ತಿ ಸೂತ್ರದಲ್ಲಿ ಹನ್ನೊಂದು ಬಗೆಯ ರೂಪವನ್ನು ತಳೆದಿದೆಯೆಂದು ವಿವರಿಸಲ್ಪಟ್ಟಿದೆ

ಗುಣಮಹಾಸಕ್ತಿ–ರೂಪಾಸಕ್ತಿ ಪೂಜಾಸಕ್ತಿ ಸ್ಮರಣಾಸಕ್ತಿ ದಾಸ್ಯಾಸಕ್ತಿ ಸಖ್ಯಾಸಕ್ತಿ ವಾತ್ಸಲ್ಯಾಸಕ್ತಿ ಕಾಂತಾಸಕ್ತಿ ಆತ್ಮನಿವೇದನಾಸಕ್ತಿ ತನ ಯತಾಸಕ್ತಿ ಪರಮವಿರಹಾಸಕ್ತಿ ರೂಪಾ ಏಕಧಾ ಅಪಿ ಏಕಾದಶಧಾಭವತಿ[14]

ಪ್ರಾಚೀನ ಕರ್ನಾಟಕದಲ್ಲಿ ಇದ್ದು ಭಾರತದ ಇತರ ಕಡೆಗಳಿಗೆ ಹಬ್ಬಿದ ದ್ವೈತ ದರ್ಶನ ರಾಧ ಕೃಷ್ಣ ಭಕ್ತಿ – ಇವು ಹರಿದಾಸಪಂಥದ ಮೂಲ ಬೇರುಗಳು ಈ ರಾಧಾಕೃಷ್ಣ ಭಕ್ತಿಯೇ ಮುಂದೆ ಕರ್ನಾಟಕದಲ್ಲಿ ಅದೇ ಭೂ ಭಾಗದಲ್ಲಿ ಜನ್ಮವೆತ್ತಿದ ವೀರಶೈವ ಪಂಥದಲಿಯ ಅನುಭಾವ ಶರಣಸತಿ ಲಿಂಗಪತಿ ಎಂಬ ಭಕ್ತಿಗೂ ಮೂಲ[15] ಭಗವಂತನಲ್ಲಿ ಭಕ್ತಿಯಿಂದ ಸರ್ವಸ್ವವನು ಆತನಿಗೇ ಸಮರ್ಪಿಸಿ ಬದುಕುವುದೇ ಹರಿದಾಸರ ಪರಮಗುರಿ

ಕೃಷ್ಣಮಂತ್ರವ ಜಪಿಸೋ ಎ ಮನುಜ
ಕೃಷ ಮಂತ್ರವ ಜಪಿಸೊ
ವೈಷ್ಣವೋತ್ತಮನಾಗಿ
ವಿಷು ವೇ ಗತಿಯೆಂದು ॥ ( ಪುರಂದರದಾಸರು)

ವ್ಯಾಸಕೂಟ ದಾಸಕೂಟಗಳಲ್ಲಿ ಮತಾಂತರವಿದ್ದಂತೆ ಜನರಲ್ಲಿ ಪ್ರತೀತಿಯುಂಟು ಆದರೆ ಅದು ಅಜ್ಞ ಒನರ ತಿಳುವಳಿಕೆ ಎರಡೂ ಕೂಟಗಳು ಪ್ರಮಾಣ ಪ್ರಮೇಯ ರಕ್ಷಕವೆಂದೇ ಹೇಳಬೇಕು ಮೊದಲನೆಯದು ಜ್ಞಾನ ಪ್ರತಿಬಂಧಕವಾಗಿ ಬಂದ

---

13 ಶ್ರವಣಂ ಕೀರ್ತನಂ ವಿಷ್ಣೋಃ ಸ್ಮರಣಂ ಪಾದಸೇವನಂ । ಅರ್ಚನಂ ವಂದನಂ ದಾಸ್ಯಂ ಸಖ್ಯಮಾತ ನಿವೇದನಂ ॥ ಭಾಗ 7–5 23

14 ನಾರದಭಕ್ತಿಸೂತ್ರ ೮೨ (ಗ್ರ ಕ ಸೋಮನ ಘಾನಂದ) ಪು ೧೧೩

15 ರಾಧ ಭಕ್ತಿಗೂ ಶಿವಶರಣೆ ಅಕ್ಕಮಹ ದೇವಿಯ ಭಕ್ತಿಗೂ ಮತ್ತೆ ಭಕಿ ಭಂಡಾರಿ ಬಸವಣ್ಣ ನವರ ಭಕಿ ಗೂ ಉಪಾಸ್ಯದೇವತೆಯನ್ನು ಬಿಟ್ಟರೆ ಯಾವ ಭೇದವೂ ಇಲ್ಲ ಪರಮ ವಿರಹಾಸಕ್ತಿ ಭಕ್ತಿಗೆ ಅಕ್ಕಮಹಾದೇವಿಯ ಒಳ್ಳೆಯ ನಿದರ್ಶನ

ಆಕ್ಷೇಪಗಳನು ಅಡಗಿಸಲಿಕ್ಕೇ ಮಾಡಿದ ಪ್ರಯತ್ನವು ಎರಡನೆಯದು ಬಂದ ಆಕ್ಷೇಪಗಳು ಅಡಗಿದ ಮೇಲೆ ಪ್ರಮಾಣಗಳಿಂದ ಸಿದ್ಧಾಂತಿತವಾದ ಪ್ರಮೇಯಗಳನು ಅನುಷಾನದಲ್ಲಿ ತರಲು ಮಾಡಿದ ಉಪದೇಶ ಕ್ರಮವು ಆದರೆ ವ್ಯಾಸಕೂಟದಲ್ಲಿ ದಾಸಕೂಟದ ಅಂಶಗಳೂ ದಾಸಕೂಟದಲ್ಲಿ ವ್ಯಾಸಕೂಟದ ಅಂಶಗಳೂ ಇಲ್ಲವೆಂದು ಹೇಳಲಾಗದು ಇವೆರಡರಲ್ಲಿ ಉಭಯ ಅಂಗಗಳ ಸಮಾವೇಶವಾಗುತ್ತದೆ ಆದರೂ ಒಂದು ಅಂಗದ ಪ್ರಾಧಾನ್ಯದಿಂದ ಆ ಆ ಸಂಪ್ರದಾಯಗಳಿಗೆ ದಾಸಕೂಟ ವ್ಯಾಸಕೂಟ ವೆಂಬ ವಿಶಿಷ್ಟ ಹೆಸರುಗಳು ಬಳಕೆಯಲ್ಲಿ ಒಂದಿವೆ[16] ದಾಸರ ಹಾಡುಗಳಲ್ಲಿ ಅವರ ಕಾವ್ಯಗಳಲ್ಲಿ ಪ್ರಮಾಣಗಳ ವಿವೇಚನೆಯು ಬೇಕಾದಷ್ಟು ಬಂದಿದೆ ದಾಸಕೂಟ ಹಾಗೂ ವ್ಯಾಸಕೂಟಗಳಲ್ಲಿ ಸಾಮರಸ್ಯದ ಸಮಾವೇಶವಾಗದೆ ಭಕ್ತಿಯು ಏರ್ಪಡ ಲಾರದು ಶ್ರೀಹರಿಯೇ ಸರ್ವೋತ್ತಮನೆಂಬ ಜ್ಞಾನದಿಂದ ಉದಯ ಹೊಂದದ ಕೀರ್ತನ ಕೀರ್ತನವಲ್ಲ ಪೂಜೆ ಪೂಜೆಯಲ್ಲ ಶ್ರೀಮದಾನಂದತೀರ್ಥರು ಹೀಗೆ ಹೇಳಿದ್ದಾರೆ

ಮಹಾತ್ಮ್ಯ ಜ್ಞಾನಪೂರ್ವಸ್ತು ಸುದೃಢಃ ಸರ್ವತೋಧಿಕಃ
ಸ್ನೇಹೋ ಭಕ್ತಿರಿತಿ ಪ್ರೋಕ್ತ ಸ್ತಯಾ ಮುಕ್ತಿರ್ನಚಾನ್ಯಥಾ ॥[17]

[ಭಗವಂತನ ಮಹಾತ್ಮ್ಯ ಸುದೃಢವೂ ಜ್ಞಾನಪೂರ್ವಕವೂ ಆಗಿ (ಭಕ್ತನಲ್ಲಿ) ಜನ್ಮ ತಳೆಯಬೇಕು ಆದರಲ್ಲೂ ಆತ ಸರ್ವಕ್ಕೂ ಹೆಚ್ಚಿನವ ಎಂಬ ಅಂಶ ಸ್ನೇಹದಿಂದ ಕೂಡಿರಬೇಕು ಸ್ನೇಹವೇ ಭಕ್ತಿ ಎನ್ನಿಸಿಕೊಳ್ಳುತ್ತದೆ ಆದನ್ನು ಬಿಟ್ಟು ಮುಕ್ತಿಯೂ ಇಲ್ಲ] ನಾರದರ ಭಕ್ತಿ ಸೂತ್ರಗಳಲ್ಲಿಯೂ ಭಕ್ತಿಯ ಜಿಜ್ಞಾಸೆ ಸುಮಾರು ಹೀಗೆಯೇ ಇದೆ

(a) ಸಾತ್ವಸಿ ನ್ ಪರಮ ಪ್ರೇಮರೂಪಾ ॥ ಸೂ ೨

[ಅದು (ಭಕ್ತಿ) ಪರಮ ಪ್ರೇಮ ಸ್ವರೂಪವಾದದು]

(b) ಅನ್ಯೋನ್ಯಾಶ್ರಯತ್ವಮಿತ್ಯನ್ಯೇ ॥ ಸೂ ೨೯

[(ಭಕ್ತಿ ಮತ್ತು ಜ್ಞಾನ) ಒಂದು ಮತ್ತೊಂದನ್ನು ಆಶ್ರಯಿಸಿದೆಯೆಂದು ಕೆಲವರು] ಜ್ಞಾನವೇ ಆಗಲಿ ಭಕ್ತಿಯೇ ಆಗಲಿ ಒಂದೊಂದೆ ಆಗಿ ಎಲ್ಲಿಯೂ ಇರಲು ಸಾಧ್ಯವಿಲ್ಲ

(c) ತಸ್ಯಾಃ ಸಾಧನಾನಿ ಗಾಯನ್ತ್ಯಾಚಾರ್ಯಾಃ ॥ಸೂ ೩೪

[(ಭಕ್ತಿಯನು) ಪಡೆಯಲು ಸಾಧನೆಗಳನ್ನು ಆಚಾರ್ಯರು ಹಾಡುವರು] ಆದರೂ ಅದು ಅನಿರ್ವಚನೀಯ

---

16 ಆರ್ ಎಸ್ ಪಂಚಮುಖಿ ಹರಿದಾಸ ಸಾಹಿತ್ಯ ಪು ೩೭ (ಕ ಸಾ ಪ ಪ)
17 ಮಹಾಭಾರತ ತಾತ್ಪರ್ಯ ನಿರ್ಣಯ ೧ ೮೬/೧೦೭

(d) ಅನಿರ್ವಚನೀಯಂ ಪ್ರೇಮಸ ರೂಪವ ॥ ಸೂ ೫೧

ಅನಿರ್ವಚನೀಯಂ ಎಂದ ಮಾತ್ರಕ್ಕೆ ಅದನ್ನು ಪಡೆಯಲು ಅನುಭವಿಸಲು, ಅಸಾಧ್ಯ ವೆಂದಲ್ಲ ವಿಷಯ ಸಂಗ ಇತ್ಯಾದಿಗಳ ತ್ಯಾಗದಿಂದ ಭಕ್ತಿಯನ್ನು ಅರ್ಥಾತ್ ಭಗವಂತನ ಪ್ರೇಮವನ್ನು ಪಡೆಯಲು ಸಾಧ್ಯ

ಅಸ್ಯಾವೃತ ಭಜನಾತ್ ॥ ಸೂ ೩೬

[ನಿರಂತರ ಭಜನೆಯಿಂದ ಆ ಪರಭಕ್ತಿಯನ್ನು ಪಡೆಯಬಹುದು] ಪರಮಾತ್ಮನ ನಾಮ ಸಂಕೀರ್ತನೆಯನ್ನು ಏಕ ಂತವಾಗಿಯಾಗಲಿ ಲೋಕ ವ್ಯವಹಾರಗಳಲ್ಲಿ ನಿರತನಾಗಿದ್ದೂ ಗುಣಕೀರ್ತನಗಳ ಮೂಲಕವಾಗಿಯಾಗಲಿ ಗಾಯನದ ಮೂಲಕವಾಗಲಿ ಯಾವುದೇ ಒಂದು ರೀತಿಯಲ್ಲಿ ಭಜಿಸಿದರೆ ವಿಷ್ಣು ವಶವಾಗುತ್ತಾನೆ ಭಕ್ತಿಯಲ್ಲಿ ಅಂತಹ ಮಾಂತ್ರಿಕ ಶಕ್ತಿಯಿದೆ ನಾರದರ ಪಾಂಚರಾತ್ರದಲ್ಲಿ ಹೀಗೆ ಹೇಳಿದೆ

ಮನೋಗತಿರವಿಚ್ಛಿನಾ ಹರೌ ಪ್ರೇಮ ಪರಿಪ್ಲುತಾ
ಅಭಿಸಂಧಿವಿನಿರ್ಮುಕ್ತಾ ಭಕ್ತಿರ್ವಿಷ್ಣು ವಶಂಕರೀ ॥

[ಪ್ರೇಮದಿಂದ ಕೂಡಿದ ಮನಸ್ಸಿನ ಗತಿ ಸಂತತವಾಗಿ ನಿಶ್ಚಲವಾಗಿ ನಾರಾಯಣನ ಸ್ಮರಣೆಯಲ್ಲಿ ನಿಲ್ಲುವಂತೆ ಮಾಡುವ ಧ್ಯಾನವೇ ಭಕ್ತಿ ಅದು ವಿಷ್ಣುವನ್ನು ವಶಮಾಡಿ ಕೊಳ್ಳುತ್ತದೆ ] ಅರ್ಥಾತ್ ಭಕ್ತಿಯು ಹರಿಯನ್ನು ಪ್ರೇಮ ಬಂಧನದಿಂದ ಬಂಧಿಸು ತ್ತದೆ ಭಕ್ತನ ಪ್ರೇಮ ವೂ ಕೂಡ ನಿರ್ಲಿಪ್ತ ಪ್ರೇಮವಾಗಿರಬೇಕು ಇದನ್ನೇ ನಾರದರು ತ್ರಿರೂಪವಾಗಿರುವ (ಸತ್ವ ರಜಸ್ ತಮೋಗ ಣಗಳ) ಭಕ್ತಿಗೆ ಅಧೀನ ವಾಗದೆ ಅತಿಕ್ರಮಿಸಿ ಹೋಗಬೇಕು ಭಗವಂತನನ್ನು ನಿತ್ಯದಾಸನಂತೆ ನಿತ್ಯಕಾಂತೆ ಯಂತೆ ಭಜಿಸಬೇಕು ಮತ್ತು ಅದೇ ಉದ್ದೇಶವು ಏಕೈಕ ಉದ್ದೇಶವಾಗಿರಬೇಕು ಎಂದಿದ್ದಾರೆ

ತ್ರಿರೂಪಭಂಗಪೂರ್ವಕಂ ನಿತ್ಯದಾಸ್ಯ ನಿತ್ಯಕಾಂತಾ ಭಜನಾತ್ಮಕಂ
ಪ್ರೇಮಕಾರ್ಯಂ ಪ್ರೇಮೈವಕಾರ್ಯಮ್ ॥ ಸೂ ೬೬

ಆ ಭಕ್ತಿಯ ರೂಪ ಹೀಗಿದೆ



ಈ ಮೂರು ಬಗೆಯ ಪ್ರೇಮಕ್ಕೆ ಅತೀತರಾಗಿ ಭಗವಂತನನ್ನು ಪ್ರೇಮಿಸಬೇಕು ಏಕೆಂದರೆ ಭಗವಂತ ತ್ರಿಗುಣಾತೀತ ಭಕ್ತನಾದವನು

ನಾ ನಗೇನ ಬೇಡುವುದಿಲ್ಲ ಎನ
ಹೃದಯ ಕಮಲದೊಳು ನೆಲಸಿರು ಹರಿಯೇ ॥

ಎಂದು ಹಾಡಬೇಕು ಆತ್ಮಾರಾಮನಾಗಿ ನಿಲ್ಲಬೇಕು ಆ ಶಾಸ್ತ್ರವನ್ನು ರಕ್ಷಿಸಬೇಕು ಸದಾ ಎನ್ನ ಹೃದಯದಲ್ಲಿ ವಾಸ ಮಾಡೋ ಶ್ರೀಹರಿ ಎಂದು ನಮ್ಮ ಹರಿದಾಸಪಂಥದ ದಾಸರು ಹಾಡಿದರು ತಂಬೂರಿಯ ತಂತಿ ಮೀಟಿದರು ತಮ್ಮ ಕೈಯಲ್ಲಿಯ ಚಿಟಿಗೆಯನ್ನು ಅಲುಗಿಸಿದರು ಕಾಲಲ್ಲಿಯ ಗೆಜ್ಜೆಯನ್ನು ಘಿಲ್‌ಘಿಲ್ ಎಂದು ಕುಣಿಸಿದರು

ದಾಸನ ಮಾಡಿಕೊ ಎನ ಇಷ್ಟು
ಗಾಸಿಮಾಡುವುದೇಕೆ ದಯ ಸಂಪನ

ಎಂದು ಮೊರೆಯಿಟ್ಟರು

ನಾರ ಯಣ ನಿನ ನಾಮದ ಸ ರಣೆಯ
ಸಾರಾಮೃತವ ನಾಲಗೆಗೆ ಬರಲಿ

ಅಮೃತಕ್ಕಾಗಿ ನಾಲಗೆಯ ನ್ನು ಚಪ್ಪರಿಸಿದರು

ಹರಿಸ ರಣೆ ಮಾಡೋ ನಿರಂತರ
ಪರಗತಿಗೆ ಇದು ನಿರ್ಧಾರ

ಕಟ್ಟಾಸೆಯಿಂದ ಗೀತ ನರ್ತನದಿಂದ ಸೂಸಿ ಪೂಜಿಸಿದರು ಏಕೆಂದರೆ ಅವರ ಮುಂದೆ ನಿಂತಿತ್ತು

ಸಮೋಽಹಂ ಸರ್ವಭೂತೇಷು ನ ಮೇ ದ್ವೇಷ್ಯೋಽಸ್ತಿ ನ ಪ್ರಿಯಃ ।
ಯೇ ಭಜಂತಿ ತು ಮಾಂ ಭಕ್ತ್ಯಾ ಮಯಿತೇ ತೇಷುಚ ಪ್ಯಹಮ ॥
(ಗೀತಾ IX-29)

ಆಲೋಢ್ಯ ಸರ್ವಶಾಸ್ತ್ರಾಣಿ ವಿಚಾರ್ಯಚ ಪುನಃ ಪುನಃ
ಇದಮೇಕಂ ಸುನಿಷ್ಪನ ೦ ಧ್ಯೇಯೋ ನಾರಾಯಣಃ ಸದಾ ॥ (ಮ ತಾ ನಿ)

ಪೂಜೆ ಮಾಡುವ ಸಂದರ್ಭದಲ್ಲಿ ಹೇಳುವ ಋಕ್ ಯಜುಸ್ ಸಾಮ ಹಾಗೂ ಅಥರ್ವಣ ವೇದಗಳ ಸೇವೆಯಲ್ಲೇ ದಾಸಕೂಟ ಹಾಗೂ ವ್ಯಾಸಕೂಟಗಳ ಸಂಗಮ ವಿದೆ[18] ಸಾಮವೇದವನ್ನು ಹೇಳುವಲ್ಲಿ ಸಂಗೀತ ಇಲ್ಲವೆ? ಹರಿದಾಸರ ಹಾಡೂ

18 ದಾಸಕೂಟ ಹಾಗೂ ವ್ಯಾಸಕೂಟಗಳು ಎಂದು ವಿಭಜಿಸಿ ಹೇಳುವುದು ಒಂದು ಜಾರ್‌ಗನ್ ಹೇಳಿಕೆ

ಸಂಗೀತವಲ್ಲದೆ ಇನ್ನೇನು ? ಎರಡೂ ಭಗವಂತನ ಸ್ತುತಿ ರೂಪಗಳಾದ ವಾಕ್ಯಗಳಲ್ಲದೆ ಇನ್ನೇನು ? ಇನ್ನೇನು ? ಬಿಂಬ ಪ್ರತಿಬಿಂಬಗಳಲ್ಲಿ ಒಂದನ್ನು ಇನ್ನೊಂದು ಆಶ್ರಯ ಪಡೆಯದೆ ಇರಲು ಹೇಗೆ ಸಾಧ್ಯ ? ಬಿಂಬದ ಜ್ಞಾನ ಪ್ರತಿಬಿಂಬಕ್ಕೆ ಇರದೆ ಇರಲು ಸಾಧ್ಯವಿಲ್ಲ ಬಿಂಬವಿಲ್ಲದೆ ಪ್ರತಿಬಿಂಬಕ್ಕೆ ಅಸ್ತಿತ್ವವು ಎಲ್ಲಿದೆ ?

ವಿನಾಜ್ಞಾನಂ ಕುತೋಭಕ್ತಿಃ ಕುತೋಭಕ್ತಿಂ ವಿನಾಚತತ್ (ಗೀ ಭಾ IX 31) ಹರಿದಾಸರ ಹಾಡುಗಳಲ್ಲಿ ಇತರಾ ಪುತ್ರ ಮಹಿದಾಸನ ಸ್ತುತಿಗಳಲ್ಲಿ ಭಕ್ತಿಯಲ್ಲದೆ ಇನ್ನೇನಿದೆ ? ದಾಸರ ಸಂಗೀತಭರಿತ ಕೀರ್ತನಗಳಲ್ಲಿ ಇರುವುದಾದರೂ ಏನು ? ಪುರಂದರದಾಸರು ಹೇಳಿರುವ ಈ ಪದ್ಯವನ್ನು ನೋಡಿ

ಕೇಳನೊ ಹರಿ ತಾಳನೋ
ತಾಳಮೇಳಗಳಿದ್ದು ಪ್ರೇಮವಿಲ್ಲದ ಗಾನ ॥ಪ॥

ತಂಬೂರಿ ಮೊದಲಾದ ಅಖಿಲ ವಾದ್ಯಗಳಿದ್ದು
ಕೊಂಬುಕೊಳಲು ಧ್ವನಿಸ್ವರಗಳಿದ್ದು
ತುಂಬುರು ನಾರದರ ಗಾನ ಕೇಳುವ ಹರಿ
ನಂಬಲಾರ ಈ ಡಂಬಕದ ಕೂಗಾಟ ॥೧॥

ನಾನಾಬಗೆಯ ಭಾವರಾಗ ತಿಳಿದು ಸ ರ
ಜ್ಞಾನ ಮನೋಧರ್ಮ ಜಾತಿಯಿದ್ದು
ದಾನವಾರಿಯ ದಿವ್ಯನಾಮ ರಹಿತವಾದ
ಹೀನ ಸಂಗೀತ ಸಾಹಿತ್ಯಕ್ಕೆ ಮನವಿತ್ತು ॥೨॥

ಅಡಿಗಡಿಗಾನಂದ ಬಾಷ್ಪಪುಳಕದಿಂದ
ನುಡಿನುಡಿಗೂ ಶ್ರೀಹರಿಯೆನುತ
ದೃಢಭಕ್ತರನು ಕೂಡಿ ಹರಿಕೀರ್ತನೆಯಪಾಡಿ
ಕಡೆಗೆ ಪುರಂದರವಿಠಲನೆಂದರೆ ಕೇಳ್ವ ॥೩॥[19]

ಪಲ್ಲವಿಯಲ್ಲಿಯ ಪ್ರೇಮವಿಲ್ಲದ ಗಾನ ಎಂಬ ಮಾತನ್ನು ಸ್ವಲ್ಪ ಪರಿಶೀಲಿಸಬೇಕು ಇಲ್ಲಿ ಪುರಂದರದಾಸರು ಭಗವದ್ಭಕ್ತಿ ಅಥವಾ ಪರಮಾತ್ಮನ ಮೇಲಿನ ಭಕ್ತಿಯ ಅನುರಕ್ತಿಯನ್ನೇ ಪ್ರೇಮವಿಲ್ಲದ ಗಾನ ಎಂಬ ಮಾತಿನಲ್ಲಿ ಧ್ವನಿಸಿದ್ದಾರೆ ಈ ಪ್ರೇಮ ನಾರದರ ಸಾತ್ವಸ್ಮಿನ್ ಪರಮ ಪ್ರೇಮ ಸ್ವರೂಪಾ ಎಂಬುದರಿಂದ ಭಿನ್ನವಲ್ಲ ಒಂದು ದೃಷ್ಟಿಯಿಂದ ನೋಡಿದರೆ ಸದ್ಯ ಇದು ನಾರದರ ಭಕ್ತಿ ಸೂತ್ರಗಳನ್ನು ಇನ್ನಷ್ಟು ವಿವರವಾಗಿ ಸ್ಫುಟವಾಗಿ ಹೇಳಿದೆಯೆಂದರೆ ತಪ್ಪಾಗದು ಮಾಡುವುದೆಲ್ಲ ಭಗವಂತನ ಮೇಲಿನ ಭಕ್ತಿ – ಭಗವಂತನ ಸೇವೆ – ಎಂದೇ ಮಾಡಬೇಕು ಪ್ರಾಯಃ ಈ ಕಾರಣದಿಂದಲೇ ಪಂಡರಂಗೆಯ (ಪಂಢರಪುರದ) ವಿಟ ಲನ ಪರಮಭಕ್ತ

19 ಪುರಂದರದಾಸರ ಹಾಡುಗಳು (ಸಂ ಕಾವ್ಯಪ್ರೇಮಿ) ಪು ೯೨

ಪ್ರಸನ್ನ ಶ್ರೀಮದಭಂಗ ವಿಟ್ಠಲ ಪದಾಂಭೋಜ ಮಂತ್ತ ಮಧುಕರ ಕನ್ನಡ ಕವಿ ಚೌಂಡರಸ (ಸು ಕ್ರಿ ಶ ೧೩೦೦) ತನ್ನ ಕೃತಿ ಅಭಿನವ ದಶಕುಮಾರ ಚರಿತೆ ಯಲ್ಲಿ

> ಸಕಲಾಂತರ್ಯಾಮಿ ಜೀವಪ್ರಕರ ಚೈತನ್ಯರೂಪಂ ಜಗದಾ ,
> ಪಕಭಾವಂ ವಿಷ್ಣುವೇದಾಗಮತತಿ ಸತತಂ ಸಾರ್ವಸಂಬಂಧದಿಂ ಕೌ
> ತುಕದಿಂದಾನಾವುದಂ ಬಣ ಸಿದೊಡದು ಹರಿಸ್ತೋತ್ರಮೆಂದೀಗಳೀ ಚಿ
> ತ್ರಕಥಾವಿಸಾ ರವ ಂ ಒಣ ಸಲೊಡರಿಸಿದೆಂ ಸತ್ಯವಿಶ್ರೇಣಿ ಮೆಚ ಲ ॥

ಎಂದು ಸರ್ವಾರ್ಪಣ ಭಾವ ಹಾಗೂ ನಿರ್ದ್ವಂದ್ವ ಭಾವದಿಂದ ಕೃತಿಯನ್ನು ರಚಿಸಿದು ದಾಗಿ ಹೇಳಿದ್ದಾನೆ ಪರಮ ಪ್ರೇಮ ವು ಪ್ರಾಪ್ತವಾದರೆ ಭಗವಂತನನ್ನೇ ಎಲ್ಲಾ ಕಡೆಯಲ್ಲೂ ಭಕ್ತ ನೋಡುವನು ಅವನ ವಿಷಯವನ್ನೇ ಕೇಳುವನು ಅವನ ವಿಷಯ ವನ್ನೇ ಕುರಿತು ಮಾತನಾಡುವನು ಆ ಭಗವಂತನನ್ನೇ ಕುರಿತು ಚಿಂತಿಸುವನು ಮತ್ತೆ ಆತನನ್ನು

> ಶ್ರೀಗೆ ನಿರಂತರಂ ಬಯಸಿ ದುರ್ನರರಂ ಸಲೆಸೇವೆಗೆಯು ಬೆ
> ಳ್ಯಾಗಿ ದುರಾಸೆಯಿಂದಹ ಪರಕ್ಕತಿನಿಂದಿತನ ಗಿ ತೀವ್ರದೈ
> ನ್ಯಾಗಮಮಂ ಕಟ್ಟ ನಿಜವಾದ ಪಯೋರುಹಭಕ್ತಿ ಭಾಗ್ಯಸಂ
> ಯೋಗದೊಳಿರ್ಪ ಚಿತ್ತಮನಲಂಪಿನೊಳಿ ವುದಭಂಗವಿಟ ಲಾ ॥
> ನಿಜಗುಣನ ಮಮಂ ಭುವನ ಮೋಹನಮಂಗಳಮೂರ್ತಿಯ ಂದಮಂ
> ಭಜಸುವೆನೆಂಬ ಪೋಟ್ಟು ಧನಪುತ್ರಕಳತ್ರ ವಿಮಸಚಿಂತೆಯಿಂ
> ಬಜಗರಮೆಯಿ ನುಂಗಿ ನರೆ ದುರ್ಗತಿಕ್ಕುವುದಂ ಖಗೇಶ್ವರ
> ಧ ಜ ಪೆಟಗಿಕ್ಕಿ ನಿನ ಧಿಕಭಕ್ತಿಯನೀವುದಭಂಗವಿಟ ಲಾ ॥

ಎಂದು ವ ಂತಾಗಿ ಆರ್ತಭಾವದಿಂದ ಬೇಡಿಕೊಳ್ಳುತ್ತಾನೆ ಸರ್ವದಾ ಸರ್ವಭಾವೇನ ನಿಶಿ ಂತ್ಯೆ ಭಗವಾನೇವ ಭಜನೀಯಃ ॥ ಎಂಬುದೇ ಎಲ್ಲ ಹರಿದಾಸರ ಹೃದಯದ ಆಶಯ ಹರಿದಾಸಪಂಥದ ಮೂಲ ಗ ರಿಯೇ ಅದು ಕರ್ನಾಟಕದ ಹರಿದಾಸರು ಇದಕ್ಕೆ ಹೊರತಲ್ಲ ಭಗವಂತನನ್ನು ಭಜಿಸಿದಾಗ–ಕೀರ್ತಿಸಿದಾಗ–ಆ ಕೀರ್ತಿಸಲ್ಪಟ್ಟ ಭಗವಂತ ಭಕ್ತನಿಗೆ ಶೀಘ್ರದಲ್ಲಿಯೇ ಭಕ್ತಿ ಅಥವಾ ಪ್ರೇಮದ ಅನುಭವವನ್ನು ಕೊಡುತ್ತಾನೆ ವ್ಯಕ್ತಿ ಯಾವಾಗ ಪರಮಾತ್ಮ ದರ್ಶನಕ್ಕಾಗಿ ಹಂಬಲಿಸುತ್ತಾನೊ ಅವನಿಲ್ಲದೇ ಬಾಳು ವ್ಯರ್ಥ ನಿಸ್ಸಾರ ಶೂನ್ಯ–ಎಂದು ವ ಂತಾಗಿ ಭಾವಿಸುತ್ತಾನೊ ಅವನ ಸಾನಿ ಧ್ಯಕ್ಕೆ ಪರಿತಪಿಸ ತ್ತಾನೊ ಆಗ ಅವನು ಅಲ್ಲಿ ಮೈದೋರ ವನು

> ಸಕೀರ್ತ್ಯಮಾನಃ ಶೀಘ್ರಮೇವಾವಿರ್ಭವತಿ
> ಅನ ಭಾವಯತಿ ಚ ಭಕ್ತಾನ ॥ ನಾ ಭ ಸೂ ೮೦

ಭಜನ ಯಜನ (ಪೂಜನ) ಕೀರ್ತನ ಅನುಭಾವನ – ಇವು ಹರಿದಾಸಪಂಥದ

ಸಂಬಂಧ ಚತುಷ್ಟಯಗಳು[20] ಈ ಸಂಬಂಧ ಆತ್ಮ ಪರಮಾತ್ಮನ ಸಂಬಂಧ ಲಕ್ಷ್ಯ ಲಕ್ಷಣ ಸಂಬಂಧ ವಿಶೆ ಷ್ಯ ವಿಶೆ ಷಣ ಸಂಬಂಧ ಮತ್ತು ಕರ್ತೃ ಕರ್ಮ ಕ್ರಿಯಾ ಸಂಬಂಧ ಎಂದು ಚತುರ್ವಿಧವಾಗಿದೆ ಹರಿದಾಸಪಂಥದಲ್ಲಿ ಭಕ್ತಿಯ ಆಚರಣೆಯಲ್ಲಿ ಜಾತಿ ವಿದ್ಯಾ ರೂಪ ಕುಲ ಧನ ಕ್ರಿಯಾದಿ ಭೇದಗಳಿರಬಾರದು

> ನಾಸ್ತಿ ತೆ ಷು ಜಾತಿ ವಿದ್ಯಾ ರೂಪ ಕುಲ ಧನ
> ಕ್ರಿಯಾದಿ ಭೇದಃ ॥ ನಾ ಭ ಸೂ೭೨

ಪುರಂದರದಾಸರ ಈ ಕೀರ್ತನೆಯ ನು ನೋ ಡಿ

> ಹೊಲೆಯ ಹೊಲತಿ ಇವರವರಲ್ಲ
> ಹೊಲಗೇರಿಯೊಳು ಹೊಲೆಯ ಹೊಲತಿಯಿಲ್ಲ ॥ಪ॥
>
> * *
>
> ಅಜನುತ ಪುರಂದರವಿಠಲನ ದಾಸರ
> ಭಜನೆಯ ದಾರಿಯ ಬಿಟ್ಟವ ಹೊಲೆಯ ।
> ನಿಜಮರ್ಯಾದ ಸಜ್ಜ ನರ ಪದಪದ ವ
> ಭಜಿಸದಿರುವಳೆ ಸುದ್ದ ಹೊಲತಿ ॥21

ಹರಿದಾಸಪಂಥವೆಂದರೆ ಕೇವಲ ಹೊಟ್ಟೆಗಾಗಿ ಹಾದಿಯ ಮೇಲೆ ಹಾಡಿಕೊಂಡು ತಿರುಗುವ ನಾಡ ಡಿಗಳ ಗುಂಪಲ್ಲ ತಮ್ಮ ನಡೆ, ನುಡಿ ರೀತಿ ನೀತಿ ಆಚಾರ ವಿಚಾರ

---

20 ಭಕಿ ಕೀರ್ತನ ಅನುಭಾವ—ಇವು ಬಹಳ ಪುರಾತನ ಸಂಗತಿಗಳು ಭಕ್ತಿ ಶಬ್ದವು ಭಜ್ ಸೇವಾಯಾಮ —ಈ ಧಾತುವಿನಿಂದ ನಿಷ್ಪನ್ನವಾಗಿದೆ ಭಕ್ತಿ ಹಾಗೂ ಭಜನೆ— ಇವುಗಳಲ್ಲಿ ಅನ್ಯೋನ್ಯ ಸಂಬಂಧವಿದೆ ಕನ್ನಡದಲ್ಲಿ ಭಜನೆ ಎಂದರೆ ಕೀರ್ತನೆಯೂ ಆಗ ಬಹುದು ತಾರತಮ್ಯೋಕ್ತ ಭಜನಾಮ ತ ಎಂದರೆ ತಾರತಮ್ಯದಿಂದ ಕೂಡಿದ ಕೀರ್ತನೆ ಗಳು ಎಂದರ್ಥ ಕನ ಡದಲ್ಲಿ ನಾಟಕ ಮತ್ತು ರೂಪಕ ಇವು ಸಮಿ ಳತವಾದಂತೆ ಭಕ್ತಿಗೆ ಸಂಬಂಧಪಟ್ಟ ಭಜನೆ ಹಾಗೂ ಕೀರ್ತನೆಗಳು ಸಮಿ ಳಿತವಾಗಿಯೂ ವರ್ತಿಸುವುದುಂಟು

21 ಪುರಂದರ ಸಾಹಿತ್ಯ ೫ ಲೋಕನೀತಿ ಪದ್ಯ ೮೨ ಪು ೫೮ ೫೯

ಈ ಬಗೆಯ ಪದ್ಯಗಳನು ಇನೂ ಕೆಲವು ದಾಸರು ಬರೆದಿದ್ದಾರೆ ನನ್ನ ಬಾಲ್ಯದಲ್ಲಿ ನಾನು ದಾಸರ ಹಾಡುಗಳನ್ನು ಹೇಳಿಕೊಂಡು ಊರೂರು ತಿರುಗುತ್ತಿದ್ದ ಅಸ್ಪೃಶ್ಯ ದಾಸರನೂ ನೋಡಿದೆ ೀನೆ ಅವರು ಸದ್ಭಕ್ತಿ ಸದಾಚಾರ ಭಗವಂತನಲೀಲೆ ಇತ್ಯಾದಿಗಳನ್ನು ಕುರಿತು ಹಾಡುಗಳನು ಮನೆಮನೆಗೂ ಹೇಳುತ್ತ ಹೇಳುತ್ತ ಹೋಗಿ ಯೋಗಿಗಳ ಜೀವನದತ್ತ ಶ್ರೀಸಾಮಾನ್ಯರ ಲಕ್ಷಹರಿಸಿ ಸಮಾಜವನು ಸತ್ಪಥಕ್ಕೆ ಒಯ್ಯಲು ಪ್ರಯತಿ ಸುತಿ ದ ರು ಆ ಹೊಲೆದಾಸರು ಹೊಸಹೊಸದಾಗಿ ಕಿ ರ್ತನೆಗಳನು ಹಾಡುಗಳನು ರಚಿಸಿರಬಹುದು ಅದರ ಸಂಗ್ರಹಕಾರ್ಯ ಇನೂ ಆಗಿಲ್ಲ ಸಿದಾ ನ್ನವನು ಬಳಿಸುವುದು ಸಹಜವೇ ಜನರ ನಾಲಿಗೆಯ ಮೇಲೆ ನಾರಾಯಣನ ನಾಮವನ್ನು ತರುವುದು ಅವರ ಕೈಂಕರ್ಯವೇ ಆಗಿತು ಅಂತಹವರ ನಾವ ನಿರ್ದೇಶನ ನಮ್ಮ ಸಾಹಿತ್ಯ ಚರಿತ್ರೆಗಳಲ್ಲಿ ಇನ್ನೂ ಆಗಬೇಕಾಗದೆ ಇಂತಹ ರಲ್ಲಿ ಆಲಾಳ ವೆಂಕಪ್ಪ ಒಬ್ಬ

ಕೇಳಲೊಲ್ಲನೆ ಎನ ಮಾತನು ರಂಗ ।
ಕಾಳಿಮರ್ದನನಿಗೆ ಪೇಳೆ ಗೋಪಮ ಬುದ್ಧಿ ॥ಪ॥

ಜಟ ಕಂಗಳ ಮುಚ್ಚಲೊಲ್ಲನೆ ಬೇಗ ।
ಬೆಟ್ಟಕೆ ಬೆನ್ನೊಡ್ಡಿ ನಿಂತನೆ ॥
ಸಿಟ್ಟಿಂದೆ ಕೋರೆಯ ತೋರ್ವನೆ ಬೇಗ ।
ಗಟ್ಟಿ ಉಕ್ಕಿನ ಕಂಬ ಒಡೆದು ಬಂದನೆ ರಂಗ ॥೧॥

ಮೂರಡಿಭೂಮಿಯ ಬೇಡಿದನೆ—ನೃಪರ
ಬೇರ ಕಡಿಯಲು ಕೊಡಲಿ ತಂದನೆ ॥
ನಾರಸೀರೆಯನುಟ್ಟು ಕೊಂಡನೆ ಬೇಗ
ಚೋರತನದಿ ಹರವಿಹಾಲ ಕುಡಿದನಮ್ಮ ॥೨॥

ಬತ್ತಲೆ ನಾರಿಯರನಪ್ಪಿದ ಬೇಗ ।
ಉತ್ತಮದ ಅಶ್ವವ ಹತ್ತಿದ ॥
ಹತ್ತಾವತಾರವನೆತ್ತಿದ ನಮ್ಮ
ಸತ್ಯಮೂರುತಿ ಪುರಂದರವಿಠಲರಾಯ ॥೩॥[23]

ಮತ್ಸ್ಯ ಕೂರ್ಮ ವರಾಹ ನೃಸಿಂಹ ವಾಮನ ಪರಶರಾಮ ಕೃಷ್ಣ ಬೌದ್ಧ ಮತ್ತು ಕಲ್ಕಿ – ಇವು ದಶಾವತಾರಗಳಾದರೆ ರಂಗ ಇದು ಇವುಗಳ ಮತ್ತು ವಿಷ್ಣು ಸಹಸ್ರನಾಮಗಳ ಆಚೆಗಿನದು ! ಮತ್ಸ್ಯಕ್ಕೆ ಕಣ್ಣು ರೆಪ್ಪೆಯಿರದು ಕೃಷ್ಣನನ್ನು ಮಲಗಿಸಿದರೆ ರೆಪ್ಪೆ ಮುಚ್ಚುತ್ತಾನೆ ಎತ್ತಣಿಂದ ಎತ್ತಣ ಸಂಬಂಧ ? ಇಲ್ಲಿ ಎರಡು ಅವತಾರಗಳ ಮಧ್ಯ ಇರುವ ವಿರೋಧ ಗುಣಗಳ ಹೊಂದಾಣಿಕೆ ಅಚ್ಚರಿಯಾಗಿದೆ ಯೆಂಬ್ಪೇ ಅಲ್ಲ ಅದು ಸಮಯ ಸ್ಥಳ ಮತ್ತು ಕಾರ್ಯ — ಎಲ್ಲದರ ಪೂರ್ಣ ನಿರಸ್ತಿತ್ವದಿಂದ (annihilation of place time and action) ಅದ್ಭುತ ವಾಗಿದೆ[24] ಅದು ಭಕ್ತಿಯ ಚಮತ್ಕಾರ ! ಭಕ್ತಿಪಂದದ ಶ್ರೇಷ್ಠತೆಯನ್ನು ಕುಮಾರ (ಸನತ್ಕುಮಾರ), ವ್ಯಾಸ ಶುಕ ಶಾಂಡಿಲ್ಯ[25] ನಾರದ ಗರ್ಗ ವಿಷ್ಣುಕೌಂಡಿನ್ಯ ಶೇಷ ಉದ್ಧವ ಆರುಣಿ ಅಕ್ರೂರ ವಿದುರ ಬಲಿ ಹನುಮಾನ್ ವಿಭೀಷಣ ಅಂಬರೀಷ ಭೀಷ್ಮ ಸನಕಸನಂದ ಸಾಂಖ್ಯಾಯನ ಪರಾಶರ ಮೈತ್ರೇಯ ಮಹಿದಾಸ ಮುಂತಾದವರು ನಿರೂಪಿಸಿದ್ದಾರೆ ಅದುವೆ ಮುಂದಿನವರು ಅನುಸರಿಸಿದ ದಾರಿ ದ್ವೈತ ತತ್ವಕ್ಕೆ ಸರ್ವತೋ ಭದ್ರ ಸುಸ್ಥಿತಿಯನ್ನು ಒದಗಿಸಿ ದವರು ವಿಶೇಷ ಪ್ರಸಾರವನ್ನು ನೀಡಿದವರು ಮಾತ್ರ ಶ್ರೀಮದಾನಂದತೀರ್ಥರು

23 ಪುರಂದರದಾಸರ ಸಾಹಿತ್ಯ ೪ ಕೃಷ್ಣಲೀಲಾ ಪದ್ಯ ೫ ಪು ೨೫ ೨೬

24 ತರ್ಕಕರ್ಕಶಾಂಕುಶಕೆ ಇಲ್ಲಿನ ಭಾವ ಅತೀತ

25 ಶಾಂಡಿಲ್ಯರು ವಿಷ್ಣುಜನ ಎಂಬ ಸಮಸ್ಯೆ ಇನ್ನೂ ಹಾಗೆಯೆ ಇದೆ ನೋಡಿ
Sandilya Bhakti sutras (Ed Swami Harashananda)
Introduction pp xvi xix

ಅರ್ಥಾತ್ ಮಧ್ವಾಚಾರ್ಯರು ಕಾರಣ ದ್ವೈತ ತತ್ವ ಹರಿದಾಸಪಂಥ ಮಧ್ವಾಚಾರ್ಯರ ಪೂರ್ವದಲ್ಲೂ ಇದ್ದವು ದ್ವೈತ ಸಿದ್ಧಾಂತವು ಎಲ್ಲ ಶಾಸ್ತ್ರಗಳ ಸಮನ್ವಯವು ಇದರಲ್ಲಿ ಚತುರ್ವೇದಗಳು ಭಾರತ ಪಾಂಚರಾತ್ರಾಗಮ ಮೂಲರಾಮಾಯಣ ಮತ್ತು ಇವುಗಳಿಗೆ ಅನುಕೂಲವಾಗಿರುವ ಶಾಸ್ತ್ರಗಳೆಲ್ಲ ಪ್ರಮಾಣಭೂತವಾದುವು ಭಾಗವತ ವಿಷ್ಣುಪುರಾಣ ಹರಿವಂಶ ೧ ತಾ — ಹೀಗೆ ಇವೆಲ್ಲವುಗಳ ಸಂಗಮ ಇಲ್ಲಿದೆ ತಾರತಮ್ಯದ ಜ್ಞಾನ ದ್ವೈತದ ಹುಟ್ಟುಗುಣ ಮಧ್ವಾಚಾರ್ಯರ ಮಹಾನ್ ಮೇಧಾಶಕ್ತಿ ಭಾರತದ ಸಾದ್ಯಂತ ಪ್ರವಾಸ ಮಾಡಿ ದ್ವೈತದ ಮುದ್ರೆಯನೊತ್ತಿತು ಆ ತತ್ವಕ್ಕೆ ಒಂದು ವಿಶಿಷ್ಟ ಸ್ಥಾನವನ್ನು ಗಳಿಸಿಕೊಟ್ಟಿತು ದ್ವೈತ ತತ್ವ ಎಂದರೆ ಮಧ್ವಾಚಾರ್ಯರ ಮತ ಎನ್ನುವಷ್ಟು ಅನ್ಯೋನ್ಯ ಸಂಬಂಧ ಬೆಳೆಯಿತು ಕಾಲಕ್ರಮದಲ್ಲಿ ತತ್ಪೂರ್ವದಲ್ಲಿ ದ್ವೈತ ತತ್ವವೇ ಇಲ್ಲವೆನ್ನುವಂತಹ ವಾತಾವರಣ ಸೃಷ್ಟಿಯಾಯಿತು ದ್ವೈತ ಇಲವೇ ಮಧ್ವ ಮತದಲ್ಲಿಯ ಸಾಮಾನ್ಯ ಪ್ರಮೇಯಗಳಿವು 1) ಹರಿಃಪರತರಃ (—ವಿಷ್ಣುವೇ ಸರ್ವೋತ್ತಮ) 2) ಸತ್ಯಂಜಗತ್ 3) ತತ್ವತೋಭೇದಃ 4) ಜೀವಗಣ ಹರೇರನುಚರಾಃ 5) ನೀಚೋಚ್ಚಭಾವಂಗತಾಃ 6) ಮುಕ್ತಿರ್ನೈಜಸುಖಾನುಭೂತಿಃ 7) ಅಮಲಾಭಕ್ತಿಃ 8) ಅಕ್ಷಾದಿಪ್ರಮಾಣ ತ್ರಿತಯಂ (ಪ್ರತ್ಯಕ್ಷ ಪ್ರಮಾಣ ಮತ್ತು ಅನುಮಾನ) ಮತ್ತು 9) ಆಮ್ನಾಯೈಕ ವೇದ್ಯೋಹರಿಃ (ವೇದಗಳೆಲ್ಲದರ ತಾತ್ಪರ್ಯ ವಿಷ್ಣು) — ಇವನ್ನು ನವರತ್ನ ಮಾಲಿಕೆಯೆಂದೂ ಹೇಳಲಾಗುತ್ತದೆ ಈ ಸಂಬಂಧದ ವ್ಯಾಸರಾಯರ ಪದ್ಯವಿಂತಿದೆ

ಶ್ರೀ ಮನ ಧ್ವಮತೇ ಹರಿಃ ಪರತರಃ ಸತ್ಯಂಜಗತ ತತ್ವತೋ
ಭೇದೋ ಜೀವಗಣಾ ಹರೇರನುಚರಾಃ ನೀಚೋಚ್ಚಭಾವಂಗತಾಃ
ಮುಕ್ತಿರ್ನೈಜಸುಖಾನುಭೂತಿರಮಲಾ ಭಕ್ತಿಶ್ಚ ತತ್ಸಾಧನಂ
ಹ್ಯಕ್ಷಾದಿತ್ರಿತಯಂ ಪ್ರಮಾಣಮಖಿಲಾಮ್ನಾಯೈಕವೇದ್ಯೋ ಹರಿಃ ॥

ಪುರಂದರದಾಸರು ಈ ಪದ್ಯವನು ಅನುಸರಿಸಿಯೇ ಕೆಲವು ಪದ್ಯಗಳನ್ನು ರಚಿಸಿದ್ದಾರೆ ಉದಾಹರಣೆಗೆ ಈ ಪದ್ಯವನ್ನು ನೋಡಿ :

ಸತ್ಯ ಜಗತಿದ ಪಂಚಭೇದವು ನಿತ್ಯ ಶ್ರೀಗೋವಿಂದನ ।
ಕೃತ್ಯ ತಿಳಿದು ತಾರತಮ್ಯದಿ ಕೃಷ್ಣನಧಿಕೆಂದು ಸಾರಿರೆ ॥
ಜೀವ ಈಶಗೆ ಭೇದ ಸರ್ವತ್ರ ಜೀವಜೀವಕೆ ಭೇದವು ।
ಜೀವ ಜಡರೊಳು ಭೇದ ಜಡರೊಳು ಭೇದ ಜಡ ಪರಮಾತ ಗೆ ॥೧॥

ಇತ್ಯಾದಿಯಾಗಿ ಶ್ರೀಮದಾಚಾರ್ಯರು ಶ್ರೀಮದ್ವಿಷ್ಣುತತ್ವ ನಿರ್ಣಯ ದಲ್ಲಿ ಹೇಳಿರುವ ವಿಧಾನವನ್ನೇ ಅನುಸರಿಸಿದ್ದಾರೆ ಶ್ರೀಹರಿಯಿಂದ ಮನುಷ್ಯರ ತನಕ ಕಕ್ಷೆಗಳನ್ನು ನಿರ್ಮಿಸಿದ್ದಾರೆ ದ್ವೈತ ತತ್ವದ ಪೂರ್ಣ ವಿಕಸನ ಮಧ್ವಾಚಾರ್ಯರ

ಕೃತಿಗಳಲ್ಲಿ ಎಂದರೆ ಸರಿಹೋಗಬಹುದು ಆದರೆ ಅವರಿಂದಲೇ ಹೊಸಪಂಥ ಎನ್ನು ವುದು ಅಷ್ಟು ಸಮಂಜಸವಲ್ಲ

ಹರಿದಾಸಪಂಥದ ವಾಙ್ಮಯ ಸ್ವರೂಪವನ್ನು ಮೇಲೆ ನಿರ್ದೇಶಿಸಿದೆ ಆ ದಾರಿಯಲ್ಲಿ ಇನಿತು ಅನ್ವೇಷಣೆ ನಡೆಸಿದರೆ ನವ ಗೆ ಇತಿಹಾಸದಲ್ಲಿ ರಾಜರಿಂದ ರಂಕರ ವರೆಗೆ ಅನೇಕರು ಭಾಗವತ ಧರ್ಮವನ್ನು ಅನುಸರಿಸಿದುದು ಕಂಡುಬರುತ್ತದೆ ಗೀತ (—songs) ವ ತ್ತು ಪಂಥ (—cult) ಗಳನ್ನೇ ನಾವು ಸ್ವೀಕರಿಸಿದರೆ ಗೀತೆಗಳು ವೃತ್ತಗಳು ಶ್ಲೋಕಗಳು ದೇಶೀಯ ಕವಿತೆಗಳು ಕೀರ್ತನಗಳಾಗುತ್ತವೆಯೆಂಬುದನ್ನು ಮರೆಯಬಂತಿಲ್ಲ ವಿಷ್ಣು ಆ ವಿಷ್ಣುವಿನ ಪರ್ಯಾಯ ಪದಗಳ ಉಲ್ಲೇಖ ದೇವತಾಸ್ತುತಿ ಭಕ್ತರ ವರ್ಣನೆ ಇತ್ಯಾದಿಗಳೆಲ್ಲವೂ ಚರಿತ್ರೆಯ ಅಧ್ಯಯನದಲ್ಲಿ ಆದ್ಯತೆಯನ್ನು ಪಡೆಯುತ್ತವೆ

ಐತರೇಯ ತೈತ್ತಿರೀಯ ಮುಂತಾಗಿ ಆರಣ್ಯಕಗಳಲ್ಲಿ ವಿಷ್ಣುಸ್ತುತಿ ಬಂದಿದೆ

> ನಾರಾಯಣಾಯ ವಿದ ಹೇ ವಾಸುದೇವಾಯಧೀಮಹಿ ತನೊ
> ವಿಷ್ಣುಃ ಪ್ರಚೋದಯಾತ (ತೈತ್ತಿರೀಯಾರಣ್ಯಕ x ಪ್ರಪಾ)

ವಸುದೇವ ದೇವಕೀಯ ರ ಪುತ್ರನೇ ಕೃಷ್ಣ ಆತ ಘೋರ ಆಂಗೀರಸನ ಶಿಷ್ಯ ಎಂದು ಛಾಂದೋಗ್ಯೋಪನಿಷತ್ತಿನಿಂದ ತಿಳಿಯುತ್ತದೆ ತದ್ದೈತದ್ ಘೋರ ಆಂಗಿರಸಃ ಕೃಷ್ಣಾಯ ದೇವಕಿ ಪುತ್ರಾಯ ಉಕ್ತ್ವಾ ಇತ್ಯಾದಿ (ಛಾ viii) ಕೃಷ್ಣನು ಪ್ರಸಿದ್ಧ ದೇವತೆಯೆಂದು ಸು ಕ್ರಿ ಪೂ ಆರಂಭದಿಂದಲೇ ಕಂಡುಬರುತ್ತದೆ ವಾಸು ದೇವ ಭಕ್ತಿಯನ್ನು ಪಾಣಿನಿಯೇ ಸೂತ್ರಗಳಲ್ಲಿ ವಿವರಿಸಿದ್ದಾನೆ ಕರ್ನಾಟಕದಲ್ಲಿ ಪ್ರಸಿದ್ಧ ವ್ಯಾಕರಣಗಳಲ್ಲಿ ಅಷ್ಟಾಧ್ಯಾಯಿ ಯೂ ಒಂದು ಅದು ಇಲ್ಲಿ ಪ್ರಚಲಿತ ವಿದ್ದ ಕಾರಣದ ಆ ಕಾಲದಿಂದಲೇ ವಾಸುದೇವ ಭಕ್ತಿ ಕರ್ನಾಟಕದಲ್ಲಿ ಪ್ರಚಲಿತವಾಗಿರ ಬಹುದು ಪ್ರಾಚೀನದ ವಿಸ್ತಾರವಾದ ಕರ್ನಾಟಕದ ಗಡಿಗೆರೆಗಳಲ್ಲಿ ನಾವು ಕಣ್ಣನ್ನು ನೆಟ್ಟರೆ ಗೋದಾವರಿಯಿಂದ ಕಾವೇರಿಯವರೆಗೆ ಅನೇಕ ರಾಜಮನೆತನಗಳು ಆಳಿದುದು ಕಂಡುಬರುತ್ತದೆ ಸಾತವಾಹನರು ವಾಕಾಟಕರು ಕದಂಬರು ವಿಷ್ಣುಕುಂಡಿನರು ಬಾದಾಮಿಯ ಚಾಲುಕ್ಯರು ರಾಷ್ಟ್ರಕೂಟರು ಕಲ್ಯಾಣದ ಚಾಳುಕ್ಯರು ಕಳಚುರ್ಯರು ಸೇಉಣರು ಗಂಗರು ಬಾಣರು ನೊಳಂಬರು ಹೊಯ್ಸಳರು ವಿಜಯನಗರದ ಅರಸರು ಮತ್ತು ಮೈಸೂರಿನ ಒಡೆಯರು ಮುಂತಾಗಿ ಅನೇಕ ದೊಡ್ಡ ಪುಟ್ಟ ರಾಜ ಮನೆತನಗಳ ಆಳ್ವಿಕೆಯಲ್ಲಿ ಹರಿದಾಸಪಂಥದ ಕುರುಹುಗಳನ್ನು ಹೆಜ್ಜೆಗಳನ್ನು ನಾವು ಗುರುತಿಸಬಹುದಾಗಿದೆ Cult—To worship ಎಂಬ ಅರ್ಥದಲ್ಲಿ ಪಂಥ ಎಂಬ ಶಬ್ದವನ್ನು ನಾನು ಸ್ವೀಕರಿಸಿದ್ದೇನೆ ಸಾತವಾಹನರು ವೈದಿಕಧರ್ಮದ ಕಟ್ಟಾ ಅನುಯಾಯಿಗಳಾಗಿದ್ದರು ಇಮ್ಮಡಿ ಸಾತಕರ್ಣಿಯ ನಾನಾಘಾಟ (ನಾಣೇಘಾಟ) ಶಾಸನದಲ್ಲಿ ಸಂಕರ್ಷಣ ವಾಸದೇವ ಲಕ್ಷ್ಮೀ ಮತ್ತು ನಾರಾಯಣರ ಸ್ತುತಿಗಳಿವೆ

ಕೃಷ್ಣನ ಕಥೆಗಳಿಗೆ ಸಂಬಂಧಿಸಿದ ಸಂದರ್ಭ ಸೂಚನೆಗಳಿವೆ [26] ವಾಕಾಟಕರ ಎರಡನೆಯ ರ ದ್ರುಸೇನ ತನ ಹೆಂಡತಿ ಪ್ರಭಾವತೀ ಗುಪ್ತ ಇವಳ ಪ್ರಭಾವದಲ್ಲಿ ವೈಷ್ಣವನಾದನು ನಳವಂಶದ ಭವತ್ತವರ್ಮನ ಪುತ್ರ ಸ್ಕಂಧವರ್ಮನು ವಿಷ್ಣು ದೇವಾಲಯವನ್ನು ಕಟ್ಟಿಸಿದ್ದನು ಅಜಂತೆಯ ಒಂದು ಶಾಸನದಿಂದ ಅಲ್ಲಿನ ಸ್ಥವಿರಾಚಲ ಎಂಬ ಬೌದ್ಧಭಿಕ್ಷು ಕೃಷ್ಣ ಮೊದಲು ಮಾಡಿಕೊಂಡು ಹಿಂದೂಧರ್ಮದ ಅನೇಕ ದೇವತೆಗಳು ತಮ್ಮ ಸತ್ವವನ್ನು ಕಳೆದುಕೊಳ್ಳುತ್ತಿದ್ದಾರೆ ಸಾಯುತ್ತಿದ್ದಾರೆಯೆಂದು ಹೇಳಿದುದಾಗಿ ತಿಳಿದುಬರುತ್ತದೆ[27] ಅರ್ಥಾತ್ ಆಗ್ಗೆ ಅಲ್ಲಿ ಕೃಷ್ಣನ ಪೂಜೆ ಇದ್ದಿತೆಂಬುದು ಗಮನಾರ್ಹವಾದ ಅಂಶ ಬಾದಾಮಿಯ ಚಾಲುಕ್ಯರು ವರಾಹ ಲಾಂಛನವನ್ನು ತಳೆದದ್ದಲ್ಲದೆ ತಮ್ಮನ್ನು ಪರಮ ಭಾಗವತರೆಂದೇ ಹೇಳಿಕೊಂಡಿದ್ದಾರೆ ಇಲ್ಲಿ ಪುರಂದರದಾಸರು ಹೇಳಿರುವ ಪೋಗದಿರೆಲೋರಂಗ ಬಾಗಿಲಿಂದಾಚೆಗೆ। ಭಾಗವತರು ಕಂಡರೆತ್ತಿಕೊಂಡೊಯ್ವರೊ ॥ ಎಂಬುದನ್ನು ಇನಿತು ಪರಿಭಾವಿಸಬೇಕು ಅವರು ಹೇಳಿರುವ ಭಾಗವತರು ಭಗವಾನ್ ವಿಷ್ಣುವಿನ ಭಕ್ತರ ! ಆದುದರಿಂದ ಎಲ್ಲ ಹರಿದಾಸರೂ ಭಾಗವತರೇ ಮತ್ತೆ ಭಾಗವತರೆಂದು ಹೇಳಿಕೊಳ್ಳುವರೆಲ್ಲರೂ ಹರಿದಾಸರೆ ಈ ಚಾಲುಕ್ಯರು ತಮ್ಮನ್ನು ಭಗವನ್ನಾರಾಯಣ ಪ್ರಸಾದ ಸಮಾಸಾದಿತರು ಎಂದೂ ಹೇಳಿಕೊಂಡಿದ್ದಾರೆ ಭಗವನ್ನಾರಾಯಣನ ಪೂಜೆ ಮಾಡದೆ ಪ್ರಸಾದ ಸ್ವೀಕರಿಸುವ ಬಗೆ ಹೇಗೆ ? ಯಾವುದೇ ರೀತಿಯಿಂದ, ಭಾವದಿಂದ ಪೂಜಿಸಿದರೂ ಅದು ಭಕ್ತಿಯೇ ಆಗುತ್ತದೆ ಮಂಗಲೇಶನು ತನ್ನನ್ನು ಮಹಾಕೂಟ ಶಾಸನದಲ್ಲಿ ವಾಸುದೇವ ಪ್ರತಿಮ ಪ್ರಭಾವ ರಾಮ ಇವಾಪರಾಜಿತಃ ವಾಸ ದೇವ ಇವ ಶ್ರೀಮಂತಃ ಎಂದು ಮ ಣತಾಗಿ ಹೇಳಿಕೊಂಡಿರುವನಲ್ಲದೆ[28] ಬಾದಾಮಿಯಲ್ಲಿ ವಿಷ್ಣುವಿಗೆ ಗ ಹಾಂತ ದೇವಾಲಯವನ್ನು ಮಾಡಿಸಿದ್ದಾನೆ ಕದಂಬ ರವಿವರ್ಮನ ಆಳ್ವಿಕೆಯ ಕಾಲದ ಕೊರಮಂಗ ಶಾಸನದಲ್ಲಿ ಅವನನ್ನು ಕೌಸ್ತುಭವನ್ನು ಧರಿಸಿದ ಮತ್ತು ವಕ್ಷದಲ್ಲಿ ಲಕ್ಷ್ಮಿಯನ್ನು ಹೊಂದಿದ ಹರಿಗೆ ಹೋಲಿಸಲಾಗಿದೆ[29] ಅರ್ಥಾತ್ ಆ ರಾಜನಿಗೂ ಹರಿಯು ಮೇಲೆ ಪೂಜನೀಯ ಗೌರವಯುತ ಭಾವನೆಯೆ ಇದ್ದಿತೆಂದ ವ್ಯಕ್ತವಾಗು ತ್ತದೆ ಕದಂಬ ದೊರೆ ಕಾಕುಸ್ಥವರ್ಮನ ಕಾಲದ ಸು ಕ್ರಿ ಶ 450 ರ ಉಪಲಬ್ಧ ಮೊದಲ ಕನ್ನಡ ಶಾಸನವಾದ ಹಲ್ಮಿಡಿಯ ಶಾಸನದ ಆರಂಭದಲ್ಲಿ ವಿಷ್ಣುಸ್ತುತಿಯಿದೆ

26 Early History of the Deccan (Yazdani) Vol I p 141
27 ibid p 198
28 Sources of Karnataka History (Dr S Srikantha Sastri) p 36
29 MAR 1933 1

ಜಯತಿ ಶ್ರೀ ಪರಿಷ್ವಂಗ ಶ್ಯಾಮಾರ್ಣ [ರಚ್ಯುತಃ]
ದಾನವ ಸ್ತ್ರೀಯರ್ಗಾಂತಾಗ್ನಿಃ [ಶಿಷ್ಟಾನಾಂತು] ಸುದರ್ಶನಃ ॥೩೦

[ದಾನವರ ಕಣ್ಣುಗಳಿಗೆ ಪ್ರಳಯ ಕಾಲದ ಅಗ್ನಿಯಂತೆಯೂ ಸತ್ಪುರುಷರಿಗೆ ಸುದರ್ಶನನಂತೆಯೂ (ಸುದರ್ಶನ ಚಕ್ರದಂತೆಯೂ) ಲಕ್ಷ್ಮಿಯನ್ನು ಧರಿಸಿಯೂ (ಇರುವ) ಅಚ್ಯುತನು ಜಯಿಸುತ್ತಾನೆ] ಒಂದು ಮಾತನ್ನು ಮರೆಯುವಂತಿಲ್ಲ ಅದೇನೆಂದರೆ ರಾಜರು ಸಾಮಾನ್ಯವಾಗಿ ಸರ್ವಧರ್ಮ ಸಹಿಷ್ಣುಗಳಾಗಿರುತ್ತಿದ್ದರು ಎಲ್ಲ ಪಂಥಗಳು ಅವರಿಗೆ ಪೂಜ್ಯವೇ ಆಗಿರುತ್ತಿದ್ದವು ಭಕ್ತಿರಸ ದೇವತೆ ಯಾವುದೇ ಇರಲಿ ಅವರ ಹೃದಯದಲ್ಲಿ ಒಂದು ವಿಶಿಷ್ಟ ಸ್ಥಾನವನ್ನು ಪಡೆದಿತ್ತು ಅಚ್ಯುತನ ಸ್ತುತಿಯೂ ವಿಷ್ಣುವಿನ ಸ್ತುತಿಯೇ ಅಂತೆಯೇ ಹರಿಯ ಪೂಜನ ಆಗ್ಗೆ ಜನತೆಯಲ್ಲಿ ಪ್ರಚಲಿತವಾಗಿದ್ದಿತು

ಕನ್ನಡದಲ್ಲಿ ಉಪಲಬ್ಧವಿರುವ ಕೀರ್ತನ ಸಾಹಿತ್ಯವನ್ನು ಅವಲೋಕಿಸುವಾಗ ಡಾ॥ ಎಲ್ ಬಸವರಾಜು ಅವರು ಮಾಡಿರುವ ಅಮೋಘವಾದ ಸಂಶೋಧನೆಯಿಂದ ಶಿವದಾಸ ಗೀತಾಂಜಲಿ ಎಂಬ ಗ್ರಂಥವನ್ನು ಮರೆಯುವಂತಿಲ್ಲ ಪೂಜ್ಯ ಪ್ರೊ ಡಿ ಎಲ್ ನರಸಿಂಹಾಚಾರ್ಯರು ಆ ಗ್ರಂಥದ ಮುನ್ನುಡಿಯಲ್ಲಿ ಹೀಗೆ ಹೇಳಿದ್ದಾರೆ

The present work comprising as it does the musical compositions of writers who were anterior to Purandara by about three centuries sets the scholars to think afresh and review the position [31]

ಶಿವದಾಸ ಗೀತಾಂಜಲಿಯಲ್ಲಿ ಪ್ರಕಟಗೊಂಡಿರುವ ಸಕಲೇಶಮಾದರಸನ ಒಂದು ಕೀರ್ತನವೇ ಈಗ ಅತ್ಯಂತ ಪ್ರಾಚೀನ ಅದು ಹೀಗಿದೆ

ತಂಗಾಳಿಗಲಿರು ಮರನೆ ಎ
ನ ಅಂಗದೊಳಿರ್ಪ ಶಿವಲಿಂಗದಮರನೆ ! ॥ಪಲ್ಲವಿ॥

ಸಂಪಗೆಯ ಮರನನೇಱಿ ಪರಿಮಳದ (ವಿ+ವಿ+ವಿ+ವಿ)
ಕಂಪಕೊಯ್ವನಾರೆಲೊ ? ಇಂಪುಳ್ಳ (ಬ್ರ+ಬ್ರ+ವಿ+ವಿ)
ಜಾಣನಲ್ಲಮ ಕಾಣೆ ಕೆಳದಿ ! (ವಿ+ಬ್ರ+ವಿ)

ಎಲೆಯಿಲ್ಲದುಲಿವ ಮರನೆ ನಿಲಲುಂಟೆ (ವಿ+ಬ್ರ+ಬ್ರ+ವಿ)
ನೆಳಲಿಲ್ಲದಿಪ್ಪ ಮರನೆ ? ನಿನ್ನ ಹೊಲಬ (ವಿ+ಬ್ರ+ವಿ+ವಿ)
ತಲೆ ಹೊಲದಲ್ಲಿಕಂಡೆ ನಾ ಮರನೆ ! (ವಿ+ಬ್ರ+ಬ್ರ+ವಿ ?)

30 MAR 1936 16
31 ಶಿವದಾಸಗೀತಾಂಜಲಿ Fore word p vii

ಹುಟ್ಟಿದೆಡೆಯು ಬಿಟ ಮರನೆ ಕೈವಲ್ಯಕೆ (ವಿ+ವಿ+ವಿ+ವಿ)
ದ ಷ್ಯವಾದ ಹೆಮ ರನೆ । ಮೆಟ್ಟಿತ್ರಿ (ಬ್ರ+ಬ್ರ+ರು+ವಿ)
ಪುಟಿಯ ಕೀಲ ಬಿಟ ದ ಮರನೆ । (ಬ್ರ+ವಿ+ರು)
ವಿಜ ಇಳಿಯಲಜ ಯದ ಅಲ್ಲಮಗೆ ಹೋ (ವಿ+ವಿ+ವಿ+ಬ್ರ)
ಮಾಜು ಹೋದ ಮರನೆ । ಆಜು (ಬ+ಬ್ರ+ಬ್ರ+ಬ್ರ)
ದರ್ಶನಾಕಾರೂಢದ ಮರನೆ । (ವಿ+ಬ್ರ+ರು)
ಸುತ್ತಿಮುತ್ತಿದ ಮಾಯೆಗೆ ಇವಕೆಲ್ಲ
ಕರ್ತೃ ಶಿವನೊಬ್ಬ ಕಾಣೆ । ಎನ
ಚಿತ್ತಶುದ್ಧವ ಮಾಡು ಸಕಳೇಶ ಕೇದಿ ।32

ಇಲ್ಲಿ ಒಂದು ಪಲ್ಲವ ಪದ್ಯ ಮತ್ತು ಐದು (ಸ್ಥೂಲರೂಪದ) ತ್ರಿಪದಿಗಳಿವೆ ಈ ಪದ್ಯದ ಬೆಳಕಿನಲ್ಲಿ ನಾವು ಈಗ ಬಹು ಪ್ರಸಿದ್ಧವಾದ ಬಾದಾಮಿಯಲ್ಲಿರುವ ಸು ಕ್ರಿ ಶ ಏಳನೆಯ ಶತಮಾನದ್ದೆಂದು ಎಲ್ಲ ವಿದ್ವಾಂಸರಿಂದ ಮನ್ನಿಸಲ್ಪಟ್ಟಿರುವ ಕಪ್ಪೇ ಅರಭಟ್ಟನ ಗುಣಕೀರ್ತನೆಯಂನ್ನುಳ್ಳ ಶಾಸನವನ್ನು ಪುನಃ ಪರಿಶೀಲಿಸಬೇಕು ಹೀಗೆ ಪರಿಶೀಲಿಸಬೇಕಾದರೆ ಶಾಸನದ ಸಂಪೂರ್ಣ ಪಾಠವನ್ನು ಕೊಡುವುದು ಉಚಿತ ಪಂಕ್ತಿಗಳ ಲೆಕ್ಕಾಚಾರವನ್ನು ಬಿಟ್ಟು ಶಾಸನದ ಪಾಠವನು ಕವಿತೆಯ ರೂಪದಲ್ಲಿ ಲಿಖಿಸುವೆ

ಕಪ್ಪೇ ಅರಭಟ್ಟನ್ ಶಿಷ್ಟಜನಪ್ರಿಯನ್
ಕಷ ಜನ ವರ್ಜಿತನ್ ಕಲಿಯುಗ ವಿಪರೀತನ [॥ಪ॥]*
ವರನೆ ತೇಜಸ್ವಿನೋ ಮೃತ್ಯುರ್ನತು ಮಾನಾಪಹಿಣ ನವಮ್
ಮೃತ್ಯುಸ್ಸತ ಕ್ಷಣಿಕೋದುಃಖಮ್ಮಾನಭಂಗನ್ದಿನೇ ದಿನೇ [॥*]
ಸಾಧುಗೆ ಸಾಧು ಮಾಧುರ್ಯ್ಯಂಗೆ ಮಾಧುರ್ಯ್ಯಂ
ಬಾಧಿಪ್ಪ ಕಲಿಗೆ ಕಲಿಯುಗ ವಿಪರೀತ
ನ್ಮಾಧವನೀತನ ಪೆಱನಲ್ಲ [॥*]
ಒಳ್ಳಿತ್ತು ಕೆಯ್ಯೊ ರಾವೊ [ೞ] ಲ್ಲಿದುಮುದರನೆ
ಬಲ್ಲಿತ್ತು ಕಲಿಗೆ ವಿಪರೀತಾ ಪುರಾಕೃತ
ಮಿಲ್ಲಿ ಸನ್ದಿಕ್ಕುಮುದು ಬಂದು [॥*]
ಕಟ್ಟಿದ ಸಿಂಘವ ಕೃಟು ಜೇನೆಮಗೆನು
ಬಿಟ್ಟವೊಲ್ಕಲಿಗೆ ವಿಪರೀತಂಗಹಿತರ್ಕ್ಕೆ
ಲ್ಕಿಟ ಮೆ ೯ಣ ಕ್ರರವಿಚಾರವು [॥*]33

32 ಈ ಪದ್ಯಗಳನು ಅಂಶಗಣದ ತ್ರಿಪದಿಗೆ ಹೊಂದುವಂತೆ (ಸ್ಥೂಲರೂಪದಲ್ಲಿ) ಪರಿಷ್ಕರಿಸ ಬಹುದು ಗಣಪರಿವೃತ್ತಿ ಲ್ಲಿ ಗಮನಾರ್ಹವ ಗದೆ ಹಾಡಿನಲ್ಲಿ ಲೆಕ್ಕದ ಗಣಕ್ಕಿಂತ ಲಯದಗಣವೆ ಮುಖ್ಯ ಆದಿದೆ

33 Ind Ant Vol X p 61(ಶಾಸನದ ಪಡಿಯಚ್ಚನು ನೋಡಿ)

ಇಲ್ಲಿ ಒಂದು ಪಲ್ಲವಿಯ ಜೊತೆಗೆ ಒಂದು ಸಂಸ್ಕೃತ ಪದ್ಯ ಹಾಗೂ ಮೂರು ತ್ರಿಪದಿಗಳು ಬಂದಿವೆ ಸಂಸ್ಕೃತ ಪದ್ಯಗಳನು ನುಡಿಯಾಗಿಯೊ ಬಿಡಿಯಾಗಿಯೊ ದೇಶೀಯು ಪದ್ಯಗಳೊಂದಿಗೆ ಬೆರಸಿ ಹೇಳುವುವು ರೂಢಿಯಲ್ಲಿತ್ತು, ನಿದರ್ಶನವೊ ದೃಷ್ಟಾಂತವೊ ಆಗಿ ಅವು ಬರುತ್ತಿದ್ದವು ಶಿವದಾಸ ಗೀತಾಂಜಲಿ ಗ್ರಂಥದಲ್ಲಿ ಇಂತಹ ಸಮ್ಮಿಶ್ರಣಕ್ಕೆ ಹಲವು ಉದಾಹರಣೆಗಳಿವೆ ಬಸವಣ್ಣನವರ ಈ ಸುಂದರ ವಚನವನ್ನು ನೋಡಿ

> ಆದುರಿತು ಐ ದಾಘಾ ತದಿಂದ ಧರೆ
> ಬಿದಿರಿದುವು ಮುಕುಟ ತಾಗಿ ತಾರಕೆಗಳು
> ಉದುರಿದುವು ಕೈತಾಗಿ ಲೋಕಂಗಳೆಲ್ಲಾ ।
> ಮಹೀಪಾದಾಘಾತಾದ್ ವ್ರಜತಿ ಸಹಸಾಸಂಶಯು ಪದಂ
> ಪದಂ ವಿಷ್ಣೋರ್ ಬ್ರಾಮ್ಯದ್ ಭುಜಪರಿಘರುಗ ಗ್ರಹಗಣಂ
> ಮ ಹ ರ್ ದೌ ರ್ದೌಸ ್ಯಂ ಯಾತ್ಯನಿಭೃತ ಜಟಾ ತಾಡಿತ ತಟಾ
> ಜಗದ ರಕ್ಷಾಯೈ ತ್ವಂ ನಟಿಸಿ ನನು ವಾಮ್ಯೆವ ವಿಭುತಾ ॥
> ನಮ್ಮ ಕೂಡಲ ಸಂಗಮದೇವನೆಂದು ನಾಟ್ಯವನಾಡೆ ॥೫೪೦॥34

ಈ ವಚನದಲ್ಲಿ ಸೇರ್ಪಡೆಯಾಗಿರುವ ಸಂಸ್ಕೃತ ಪದ್ಯದ ಆಕರ ಗೊತ್ತಾಗಿದ್ದಿಲ್ಲವೆಂದರೆ ಇದನ್ನು ಬಸವಣ್ಣನವರೇ ರಚಿಸಿದ್ದಾರೆಯೆಂದು ಹೇಳಬಹುದಾಗಿತ್ತು ಆದರೆ ಈ ಪದ್ಯವು ಈಗ ಪುಷ್ಪದಂತನ ಶಿವಮಹಿಮ್ನ ಸ್ತೋತ್ರ ಕೃತಿಯಲ್ಲಿನದು ಎಂದು ಖಚಿತವಾಗಿ ಗುರುತಾಗಿದೆ[35] ಈ ಹಿನೆ ಲೆಯಲ್ಲಿ ಕಪ್ಪೇ ಅರಭಟ್ಟನ ಗುಣಕೀರ್ತನ ವೃಳ್ಳ ಹಾಡೇ ಉಪಲಬ್ಧ ಮೊದಲ ಕೀರ್ತನ ಯಾವುದು ಕೀರ್ತಿಸುವ ಕೆಲಸವನ್ನು ಮಾಡುತ್ತದೊ ಅದು ಕೀರ್ತನ ಕೀರ್ತನವೆಂಬುದೇ ಒಂದು ವಿಶಿಷ್ಟ ಛಂದವಲ್ಲ ಕೀರ್ತನಗಳಲ್ಲಿ ಬಂಧ ಸ್ವರೂಪ ತಾಳ ರಾಗ ಬೇರೆ ಬೇರೆಯಾಗಿರಬಹುದು ಕ್ರಿ ಶ 1007ರಲ್ಲಿ ಬರೆಯಲ್ಪಟ್ಟಿರುವ ದಾನಚಿಂತಾಮಣಿ ಅತ್ತಿಮಬ್ಬೆಯ ಲಕ್ಕುಂಡಿ ಶಾಸನದಲ್ಲಿ ಆ ಊರಿನಲ್ಲಿ ವೈಷ್ಣವ ಗೀತಿ ಮನೋಹರರು ಇದ್ದುದಾಗಿ ಬರೆದಿದೆ[36] ವಿಶಿಷ್ಟ ರೀತಿಯಲ್ಲಿ ವಿಷ್ಣುದೇವತೆಯನ್ನು ಕುರಿತು ಅವರು ಗೀತೆಗಳನ್ನು ಹೇಳುತ್ತಿದ್ದ ಕಾರಣದಿಂದಲೇ ಅವರಿಗೆ ಆ ಹೆಸರು ಬಂದಿದ್ದು ಹೀಗೆಯೇ ಕ್ರಿ ಶ 1244 ರಲ್ಲಿ

---

34 ಬಸವಣ ನವರ ವಚನಗಳು (ಸಂ ಪ್ರೊ ಶಿ ಶಿ ಬಸವನಾಳ) ಪು ೧೪೧ ಶಿವನ ನಾಟ್ಯದ ಪದಗತಿ ವಿಷು ಪದದ ಭ್ರಮೆಯನು ಒಟುಮಾಡಿತು ಎನು ವುದು ಕೃಷ್ಣನ ಕಾಳಿಂಗಮರ್ದನ ಇಲ್ಲವೇ ಭೂಮಿಯನು ಅಳೆದ ವಾಮನನ ಪದಗತಿಗೆ ಸಂಬಂಧಿಸಿರಬಹ ದು ನೋಡಿ ಶಂ ನೋ ವಿಷ್ಣುರುರುಕ್ರಮಃ ಇತ್ಯಾದಿ

35 ಸಂಸ್ಕೃತ ಪ್ರಮಾಣಗಳಿರುವ ಬಸವಣ ನವರ ವಚನಗಳು (ಸಂ ಚಿ ಸುಂದರೇಶನ್)

36 BK Insp Vol I pt 1 No 52

ಗದಗ ತಾಲ್ಲೂಕಿನ ನಾಗಾವಿ ಗ್ರಾಮದಲ್ಲಿಯೂ ವೈಷ್ಣವ ನೀತಿ ಮನೋಹರರು ಇದ್ದ ಉಲ್ಲೇಖವಿದೆ [37] ಸುಮಾರು ಇದೇ ಕಾಲದಲ್ಲಿ ಬರೆಯಲಾಗಿರುವ ಹುಬ್ಬಳ್ಳಿಯಲ್ಲಿರುವ ಜಂಬುಕೇಶ್ವರ ದೇವಾಲಯದ ಶಾಸನದಲ್ಲಿ ಪಾಂಡುರಂಗನ ಭಕ್ತರಾದ ವಾರಕಾರಿಗಳ (ಪಂಡರಂಗೆಯ ವಾರಿಯರ) ಪ್ರಸ್ತಾಪವಿದೆ[38] ಅಲ್ಲದೇ ಶ್ರೀವಿಠಲ ದೇವರ ಶ್ರೀಹರಿ ದಿನಂಗಳ ಧರ್ಮಕ್ಕೆ ಕೊಟ್ಟ ವೃತ್ತಿಯ ಉಲ್ಲೇಖವಿದೆ ಈ ವಿಟ್ಠಲದೇವರೇ ಕರ್ನಾಟಕದ ಹರಿದಾಸಪಂಥದ ದಾಸಸಾಹಿತ್ಯದ ಮೂಲ ಸೆಲೆ ಉತ್ತರ ಕರ್ನಾಟಕದಲ್ಲಿ ಈಗ ವೈಷ್ಣವರೆಂದರೆ ಮಾಧ್ವರೆ ಅವರ ಸಂಖ್ಯೆ ಸೇಕಡ 99 ಉಳಿದವರು ಎಲ್ಲಿಂದಾದರೂ ಹೊರಗಿನಿಂದ ಬಂದವರಿರಬಹುದು ಎಲ್ಲ ದಾಸರೂ ವಿಟ ಲ > ವಿಠಲ ಇಲ್ಲವೆ ವಿಷ್ಣುವಿನ ಮತ್ತೆ ಯಾವುದ ದರೂ ಹೆಸರನ್ನೇ ಅಂಕಿತವಾಗಿ ಉದಾಹರಣೆಗೆ ಕಾಗಿನೆಲೆಯಾದಿಕೇಶವ (ಕನಕದಾಸರು) ಶ್ರೀನಿವಾಸ ಅಥವಾ ಪ್ರಸನ್ನ ವೆಂಕಟ (ಪ್ರಸನ್ನ ವೆಂಕಟದಾಸರು) ಮ ಎಂತಾಗಿ ಅಂಕಿತವನ್ನು ತಳೆದಿರುವುದು ಕಂಡುಬರುತ್ತದೆ ಇವರಲ್ಲಿ ವಿಟ ಲ ಸಂಪ್ರದಾಯವೇ ವಿಶೇಷ ಈ ವಿಟ ಲ ಅಥವಾ ಪಂಡರಾದ್ರೀಶ ವಸುಂಧಾಧಿಪತಿ ರಂಗ ಮಾನಪುರದ ರಾಷ್ಟ್ರಕೂಟರ ಆರಾಧ್ಯ ದೇವತೆ ಅವಿಧೆ ಯ ನ ಪಂಡರಂಗಪಲ್ಲಿಯ ಶಾಸನದಿಂದ ಇದು ಸ್ಪಷ್ಟವಿದೆ [39] ಮಳಖೇಡ (ಮಾನ್ಯಖೆ ಟ) ದ ರಾಷ್ಟ್ರಕೂಟರು ಯದುವಂಶೀಯರು ಅವರ ಹೆಸರುಗಳು ಬಿರುದುಗಳು ಗರುಡಧ್ವಜ ಎಲ್ಲವೂ ವಿಷ್ಣುವಿನ ಸಂಕೇತವುಳ್ಳವುಗಳೆ ಕೀರ್ತಿನಾರಾಯಣ ವೀರನಾರಾಯಣ ಇಂದ್ರನಾರಾಯಣ ಮುಂತಾದ ಬಿರುದುಗಳನ್ನು ಕೃಷ್ಣ ಗೋವಿಂದ ಧ್ರುವ ಮೊದಲಾದ ಹೆಸರುಗಳನ್ನು ಇಲ್ಲಿ ಗಮನಕ್ಕೆ ತಂದುಕೊಳ್ಳಬಹುದು ಧ್ರುವನ ಪತ್ನಿ ಶೀಲ ಮಹಾದೇವಿ ಪೂರ್ವ ಚಳುಕ್ಯ ವಂಶನದ ರ ಜ ವಿಟ್ಟರಸನ (ವಿಷ್ಣುವರ್ಧನನ) ಮಗಳು ವಿಟ ಲ ಎಂಬ ಹೆಸರು ವಿಟ್ಟ ಎಂದು ಆಗಲೇ ಪ್ರಸಿದ್ಧವಾದುದು ಬಹಳ ಗಮನಾರ್ಹ ವಿಷ್ಣು—ವಿಷ್ಟ— ವಿಟ —ಲ+ವಿಠ ಲ—ವಿಠು—ವಿಟು—ಇಟ್ಟೊ, ಹೀಗೆ ಹಲವು ರೂಪವನು ತಳೆದಿದೆ ಈ ಶಬ್ದ ಧ್ರುವಧಾರಾವರ್ಷನ ಪುತ್ರ ಕಂಬಯ್ಯನ ಸಾಮಂತನೊಬ್ಬನ ಹೆಸರು ವಿಟ್ಟರಸ ಈತ ಕೋಲಾರ ಒಲ್ಲಿಯಲ್ಲಿ ಆಡಳಿತವನು ನಡೆಸುತ್ತಿದ್ದ ಹೊಯ್ಸಳ ವಿಷ್ಣುವರ್ಧನ, ಬಿಟ್ಟಿದೇವ ಎಂದೂ ಸಾಕಷ್ಟು ಪ್ರಸಿದ್ಧ

ಪಂಢರಪುರದ ವಿಠಲ ಎಷ್ಟು ಪುರಾತನ ? ಈಗಿನ ಮೂರ್ತಿಯು ಗುಪ್ತರ ಕಾಲದ್ದೆಂದು ವಿದ್ವಾಂಸರು ನಿರ್ಣಯಿಸಿದ್ದಾರೆ ಪಂಢರಪುರ ಕರ್ನಾಟಕದಲ್ಲಿ ಇದ್ದಿತೆ

---

37 S I I Vol XV No 178 p 221

38 ibid No 187 p 230

39 MAR 1929 ಪಂಡರಂಗಪಲ್ಲಿಯ ಶಾಸನ ಈ ಪಂಡರಂಗಪಲ್ಲಿಯೆಂದರೆ ಪಂಢರಪುರವೇ ಪಾಂಡುರಂಗನೇ ದೇವತೆ

ಎಂದೂ ಈಗಿನ ಪರಿಸ್ಥಿತಿ ಪ್ರಶ್ನಿಸುತ್ತದೆ ಈಗ ಅದು ಮಹಾರಾಷ್ಟ್ರದಲ್ಲಿದ್ದರೂ ಹಿಂದೆ ಹಾಗಿದ್ದಿಲ್ಲ ಸಂಪ್ರದಾಯದಂತೆ ಸೋಲಾಪುರ್ ಕೊಲ್ಹಾಪುರ್ (ಕರವೀರ ಪುರ) ಈಗಲೂ ಕರ್ನಾಟಕದ ಸ್ಥಳಗಳೇ ! ನೋಡಿ ಸೋಲಾಪುರ ಪಂಚಾಂಗದಲ್ಲಿಯ ಈ ಸಂವತ್ಸರ ಫಲದಲ್ಲಿಯ ಸಂಗತಿಯನ್ನು —

॥ಪಂಚಮೋ ಗೌಡದೇಶೇ ಧಾರಾತೀರ್ಥೇ ನಾಗಾರ್ಜುನಸ್ಯಸ್ಯ ಶಕಃ ಚತ ಲಕ್ಷ್ಮವರ್ಷಾಣಿ।
ಷಷ್ಠ ಕರವೀರಪತ್ತನೇ ಕರ್ನಾಟಕೇ ಕಲ್ಕ್ಯವತಾರಃ ತಸ್ಯ ಶಕ ಏಕವಿಂಶಧಿಕಾಷ್ಟಶತಮಿತಾಬ್ದಾ ॥

x x x x x

ಸಹಾವಾ ಕೊಲ್ಹಾಪೂರ ಪ್ರಾಂತಾಂತ (ಕರ್ನಾಟಕಾಂತ) ಕಲಿ ೧ ಹೋಯಿಲ್ ತ್ಯಾಚಾ ಶಕ ೮೨೧ ವರ್ಷೇ [40]

ಸೋಲಾಪುರ್ ಮತ್ತು ಕೊಲ್ಹಾಪುರ್ ನಗರಗಳ ಮಧ್ಯದಲ್ಲಿ ಇರುವ ಪಂಢರಪುರ ಪ್ರದೇಶ ಹಾಗೂ ಅಲ್ಲಿನ ಆ ಪ್ರಸಿದ್ಧ ದೇವಾಲಯ ಎಲ್ಲವೂ ಹಿಂದೊಮ್ಮೆ ಕರ್ನಾಟಕ ದೇಶ ಹಾಗೂ ಕರ್ನಾಟಕದ ದೇವತೆಯೆ ಆಗಿದ್ದವು ಪಂಢರಪುರದ ಅಭಂಗವಿಟ್ಠಲ ಅನೇಕರ ಮನೆಯ ಮನದ ಆರಾಧ್ಯ ದೇವತೆಯೆ ಆಗಿದ್ದಿತು ಮಹಾರಾಷ್ಟ್ರದ ಪ್ರಸಿದ್ಧ ಸಂತರಾದ ಜ್ಞಾನೇಶ್ವರರು ವಿಟ್ಠಲನನ್ನು ಹೀಗೆ ಸ್ತುತಿಸಿದ್ದಾರೆ

ಕಾನಡಾ ಹೋ ವಿಟ್ಠಲು ಕರ್ನಾಟಕು
ಯೇಣೇ ಮಜಲಾವಿಯಲಾ ವೇಧು
ಖೋಲಬುಂಥೀ ಘೇಉನಿ ಖುಣಾಚಿ ಪಾಲವೀ
ಆಳವಿಲ್ಯಾ ನೇದೀ ಸಾಧು ॥ 41 (a)

[ನೀ ಕನ್ನಡ ವಿಟ್ಠಲ ಕರ್ನಾಟಕದವ । ನನ್ನ ಮನವ ವೇಧಿಸಿರುವಿ
ಗಂಟನು ಬಿಚ್ಚೊ ಖೂನವ ರಕ್ಷಿಸಲು । ಓ ಸಾಧನಕೆ ಅಸಾಧ್ಯ ॥]

ಜ್ಞಾನದೇವನ ಕಾಲದಲ್ಲಿ ವಿಟ್ಠಲನ ಕುರಿತು ಕನ್ನಡ ಹಾಡುಗಳು ವಿಟ್ಠಲನ ಸುತ್ತಮುತ್ತ ಕನ್ನಡದ ವಾತಾವರಣ ವಿಶೇಷ ದಟ್ಟವಾಗಿದ್ದಿಲ್ಲವೆಂದರೆ ಆ ಯೋಗೀಶ್ವರ ಹೀಗೆ ವಿಟ್ಠಲನನ್ನು ಸಂಬೋಧಿಸುತ್ತಿದ್ದಿಲ್ಲ ಕಾಲಗತಿಯಲ್ಲಿ ಕನ್ನಡ ಕ್ಷೀಣಗೊಳ್ಳುತ್ತ ಪಾಂಡುರಂಗನ ಸುತ್ತಮುತ್ತಣ ಪ್ರದೇಶದಲ್ಲಿ ಇಲ್ಲದಂತಾಯಿತು ಸಗುಣ ನಿರ್ಗುಣವಾಯಿತು ! ಸಾಕಾರ ಭಕ್ತಿಯ ವಸ್ತು ನಿರಾಕಾರ ವಸ್ತುವಾಯಿತು !! ನನಗೆ ಇಲ್ಲಿ ಇನ್ನೊಂದು ಸಂಗತಿಯೂ ಗೋಚರಿಸುತ್ತದೆ ಅದೆಂದರೆ ದ್ವೈತಮಂತದ ಪೂರ್ವೋಕ್ತ

---

40 ನನ್ನ ಹೇಳಿಕೆಗೆ ಪುಷ್ಟಿಯನ್ನೀಯಲು ತಮ್ಮಲ್ಲಿದ್ದ ಪಂಚಾಂಗದ ಪುಟಗಳನು ತೆಗೆದುಕೊಟ್ಟ ಶ್ರೀ ಎಂ ಪಿ ಜೋಶಿ ಅವರಿಗೆ ನಾನು ಋಣಿ ಸೋಲಾಪೂರ್ ಪಂಚಾಂಗ 1980 81 ರೌದ್ರಿನಾಮ ಸಂವತ್ಸರ ಸಂವತ್ಸರಫಲ ಪು ೫

41 (a) ಸಾರ್ಥ ಶ್ರೀ ಜ್ಞಾನದೇವ ಅಭಂಗ ಗಾಥಾ (ಸಂ ಡಾ। ಪ್ರಹ್ಲಾದ ನರಹರ ಜೋಶಿ) ಅಭಂಗಸಂಖ್ಯೆ 20 ಪು 15

ಯತಿಗಳ ಪರಂಪರೆಯಲ್ಲಿರುವ ಜ್ಞಾನೇಶ ತೀರ್ಥರ ಹೆಸರನ್ನೇ ಜ್ಞಾನದೇವನಿಗೆ ಇಟ್ಟಿದ್ದಾರೆ. ಮಹಾರಾಷ್ಟ್ರದಲ್ಲಿ ಈಗಲೂ ಅನೇಕ ಕುಟುಂಬಗಳು ಉತ್ತರಾದಿಮಠದ ಅನುಯಾಯಿಗಳಾಗಿದ್ದಾರೆ. ಜ್ಞಾನೇಶರು ಆ ಮಠದ ಪೂರ್ವ ಪೀಠಿಗೆಯಲ್ಲಿ ಒಬ್ಬರಾದುದರಿಂದ ಅವರ ಪ್ರಭಾವ ಮಹಾರಾಷ್ಟ್ರದಲ್ಲಿ ಆಗ ಇದ್ದಿರಬಹುದು. ಮಹಾನುಭಾವರ ಸ್ಮರಣೆಗಾಗಿ ಅವರ ಹೆಸರನ್ನು ಮಕ್ಕಳಿಗೆ ಇಡುವುದು ಲೋಕದಲ್ಲಿರುವ ರೂಢಿಯೆ. ಕೆಲವು ಉದಾಹರಣೆಗಳನ್ನು ಕೊಡಬಹುದು:

ಮಳಖೇಡದಲ್ಲಿ ವೃಂದಾವನಸ್ಥರಾದ ಜಯತೀರ್ಥರ (ಟೀಕಾರಾಯರು)
ತಿರುಕೊಯಿಲೂರಲ್ಲಿ ವೃಂದಾವನಸ್ಥರಾದ ರಘೋತ್ತಮತೀರ್ಥರ
ಮಂತ್ರಾಲಯದಲ್ಲಿ ವೃಂದಾವನಸ್ಥರಾದ ರಾಘವೇಂದ್ರರಾಯರ
ಸವಣೂರಲ್ಲಿ ವೃಂದಾವನಸ್ಥರಾದ ಸತ್ಯಬೋಧರ —

ಹೆಸರುಗಳನ್ನು ಅನೇಕರಿಗೆ ಇಟ್ಟುದನು ಗಮನಿಸಬಹುದು. ಅಂತೆಯೆ ಜ್ಞಾನೇಶ ಎಂಬ ಹೆಸರನ್ನೇ ಸಂತ ಜ್ಞಾನೇಶ್ವರರ ತಂದೆ ತಾಯಿ — ವಿಟ್ಠಲ ಮ ರುಕ್ಮಿಣಿಬಾಯಿ — ಆತನಿಗೆ ಇಟ್ಟಿರಲು ಸಾಧ್ಯ. ಜ್ಞಾನದೇವನ ಅಭಂಗಗಳಲ್ಲಿ ಸಗುಣ ನಿರ್ಗುಣಗಳಲ್ಲಿ ಆತನು ಯಾವುದನ್ನು ಸ್ವೀಕರಿಸಿದ ಎಂಬುದು ಇನ್ನೂ ಸಮಸ್ಯೆಯೆ. ಗೋಕುಲದ ಬಾಲಕೃಷ್ಣನನ್ನು ಗೋಪಿಯರ ವಿರಹ ಭಕ್ತಿಯನ್ನು ಆತ ಬಹು ಸುಂದರವಾಗಿ ವಿವರಿಸಿದ್ದಾನೆ. ಈ ಪ್ರೇಮ ಸ್ವರೂಪ ಅನಿರ್ವಚನೀಯ. ಮರಾಠಿ ವಿದ್ವಾಂಸರೂ ಇಲ್ಲಿ ಇದಮಿತ್ಥಂ ಎಂದು ಹೇಳಿಲ್ಲ.[41(b)]

ಪಂಡರಗಿಯ (ಪಂಢರಪುರದ) ವಿಟ್ಠಲನ ಸಂಪ್ರದಾಯ ಬಹು ಪ್ರಾಚೀನ. ಆತನನ್ನು ಕುರಿತು ಅನೇಕ ಭಕ್ತರು – ಯತಿಗಳು – ಸಂತರು – ದಾಸರು – ಆರಾಧ್ಯರು ಕೀರ್ತನಗಳನ್ನು ಹಾಡಿದ್ದಾರೆ. ಆತನ ಮೂರ್ತಿಯನ್ನು ಪರಮಗಂತವ್ಯವೆಂದು ಪೂಜಿಸಿದ್ದಾರೆ. ತೆಲುಗಿನ ಪದಕವಿ ಪಿತಾಮಹ ಅನ್ನಮಾಚಾರ್ಯರ ಕೃತಿಯಿಂದಲೂ ಕೀರ್ತನ ಸಂಪ್ರದಾಯಕ್ಕೆ ವಿಟ್ಠಲನೇ ಮೂಲವೆಂದು ತೋರುತ್ತದೆ. ಅವರು ಪಂಡರಂಗನನ್ನು ಎಪ್ಪತ್ತೆರಡು ಜನ ಆದ್ಯರಿಂದ ಸ್ತುತಿಸಲ್ಪಟ್ಟ ರಸಿಕ ಎಂದು ಹೇಳಿದ್ದಾರೆ. ಕನ್ನಡ ದಾಸ ಸಾಹಿತ್ಯದ ಚರಿತ್ರೆಯನ್ನು ಕುರಿತು ಬರೆಯುವಲ್ಲಿ ಆವಾಙ್ಮಯದಲ್ಲ ಪರಿಣತರಾಗಿದ್ದ ದಿವಂಗತ ಗೊರಬಾಳ ಹಣಮಂತರಾಯರು ಅರವತ್ತು ಜನ ಆದ್ಯರು ಆರಾಧ್ಯರು ಆಗಿಹೋಗಿರುವರೆಂದು ಬರೆದುದಲ್ಲದೆ ಅವರ ೫೧ ಪದಗಳು ೨೦ ಸುಳಾದಿಗಳು ಕೆಲವು ಉಗಾಭೋಗಗಳು ಉಪಲಬ್ಧವಾಗಿವೆಯೆಂದು ತಿಳಿಸಿದ್ದಾರೆ. ಇವರ ಬಗ್ಗೆ ಸರಿಯಾದ ಸಂಶೋಧನೆ ಇನ್ನೂ ಆಗಿಲ್ಲ. ಕೆಲವರನ್ನು ಗುರುತಿಸಲು ಕಪಟರಾಳ ಕೃಷ್ಣರಾಯರು ಪ್ರಯತ್ನಿಸಿದ್ದಾರೆ.[42] ಈ

41 (b) ಅದೇ ಗ್ರಂಥ ಮುನ್ನುಡಿ ಪುಟ ೪

42 ಕಪಟರಾಳ್ ಕೃಷ್ಣರಾಯರು: ಕರ್ನಾಟಕ ಸಂಸ್ಕೃತಿ ಸಂಶೋಧನೆ: ಕರ್ನಾಟಕದ ಹರಿದಾಸರ ಪರಂಪರೆ ಪು ೨೭೦

ಸಾಹಿತ್ಯ ಜನಪದ ಸಾಹಿತ್ಯದ ಹಾಗೆ ತೋಂಡೀ ಸಾಹಿತ್ಯವಾದುದರಿಂದ ಇವುಗಳಲ್ಲಿಯ ಭಾಷೆಯನ್ನು ನಾವು ಅವುಗಳ ಯ ಥಾ ಸ್ವರೂಪದಲ್ಲಿ ಪಡೆಯಲು ಸಾಧ್ಯವಿಲ್ಲ ಕಾಲ ಕಾಲಕ್ಕೆ ಜನರಿಂದ ಜನರಿಗೆ (ಬಾಯಿಂದ ಬಾಯಿ ಗೆ) ಹರಿದು ಬರುವಾಗ ಆ ವಾಙ್ಮಯ ತನ್ನ ಸುಷು ರೂಪವನು ಉಳಿಸಿಕೊಂಡು ಬರಲು ಸಾಧ್ಯವಿಲ್ಲ ಕಾರಣ ಯಾವ್ರದೇ ಕೀರ್ತನದ ಭಾಷೆಯೊಂದನ್ನೇ ಗಣನೆಗೆ ತೆಗೆದುಕೊಂಡು ಇದು ಪ್ರಾಚೀನ ಇದು ಅರ್ವಾಚೀನ ಎಂದು ಹೇಳಲು ಬರುವ್ರದಿಲ್ಲ

ದಾಸ ಸಾಹಿತ್ಯದ ಉಗಮ ಅಚಲಾನಂದ ದಾಸರು ಎಂಬ ವ್ಯಕ್ತಿಗಳಿಂದ ಆಗಿದೆಯೆಂದು ಬೇಲೂರು ಕೇಶವದಾಸರು ಕರ್ನಾಟಕ ಭಕ್ತಿ ವಿಜಯ ಗ್ರಂಥದಲ್ಲಿ ಬರೆದಿದ್ದಾರೆ ಅವರು ಅಚಲಾನಂದದಾಸರು ಕ್ರಿ ಶ 9ನೆಯ ಶತಮಾನದಲ್ಲಿ ಇದ್ದರೆಂದು ತಮಗೆ ಉಪಲಬ್ಧವಾದ ಸಂಸ್ಕೃತ ಪದ್ಯವೊಂದರ ಆಧಾರದಿಂದ ಬರೆದಿದ್ದಾರೆ ಆ ಪದ್ಯವಿಂತಿದೆ

> ಕಾಶೀತಿ ಸಂಖ್ಯಾ ಶಕಕಾಲಾಬ್ದೇ
> ವಿಳಂಬಿ ವರ್ಷೇ ಕಲಿ ಚೈತ್ರಶುಕ್ಲೇ
> ಪಕ್ಷೇ ದಶಮ್ಯಾಂ ದಿನಮಧ್ಯ ಕಾಲೇ
> ಪ್ರತ್ಯಕ್ಷಕೋ ಭೂದ್ಗುರು ವಿಠಲಾಖ್ಯ ॥

ಇದು ಶಾ ಶ ೮೦೧ ರಲ್ಲಿ ಬಂದ ವಿಳಂಬಿ ಸಂವತ್ಸರದ ಚೈತ್ರ ಶ ಕ್ಲಪಕ್ಷದ ದಶಮಿಯಂದು ಅಚಲಾನಂದರಿಗೆ ವಿಠಲನ ದರ್ಶನವಾದುದನ್ನು ತಿಳಿಸುತ್ತದೆ[43] ಕರ್ನಾಟಕ ಸಂಗೀತ ಹಾಗೂ ದಾಸಕೂಟಗಳನ್ನು ಕ ರಿತು ಬರೆಯುತ್ತ ಹುಲಗೂರ ಕೃಷ್ಣಾಚಾರ್ಯರು ತಮಗೆ ಉಪಲಬ್ಧವಾದ ಅಚಲಾನಂದ ವಿಠಲ ಎಂಬ ಅಂಕಿತವುಳ್ಳ ಕೀರ್ತನೆಯೊಂದರಲ್ಲಿ ಮಧ್ವಾಚಾಯ ್ರರ ಉಲ್ಲೇಖವಿರುವುದರಿಂದ ಅಚಲಾನಂದ ದಾಸರು ಶಾ ಶ ೮೦೧ ರಲಿ ಅಲ್ಲ ಶಾ ಶ ೧೨೮೧ ರಲ್ಲಿ (ಕ್ರಿ ಶ ೮೭೯ ಹಾಗೂ ಕ್ರಿ ಶ ೧೩೫೯) ಇದ್ದರು ಎಂದು ಬರೆದಿದ್ದಾರೆ[44] ಈ ಇಬ್ಬರ ವಿಚಾರಗಳನ್ನು ಪರಿಶೀಲಿಸಿದ ಡ ॥ ವರದರಾಜರಾಯರು ಬೇರೆ ಬೆ ರೆ ಕಾಲಕ್ಕೆ ಸೇರಿದ ಇಬ್ಬರು ಅಚಲಾನಂದರು ಇದ್ದಿರಬೆ ಕು ಎನ್ನುವುದು ಸೂಕ್ತವಾದ ದು ಎಂದಿದ್ದಾರೆ[45] ಈ ಊಹೆಯು ಅತ್ಯಂತ ಸಮರ್ಪಕ ಹಾಗೂ ಸರಿಯಾಗಿದೆಯೆಂದು ಆಲೂರು ತಾಲ್ಲೂಕು (ಹಾಸನ ಜಿಲ್ಲೆ) ನಲ್ಲೂರ ಗ್ರಾಮದಲ್ಲಿ ದೊರೆತ ಕ್ರಿ ಶ 15 16 ನೆಯ ಶತಮಾನದ ಲಿಪಿಯಲ್ಲಿ ಬರೆಯಲಾಗಿರುವ ಅಚಳಾನಂದ ವಿಠಲ ಎಂಬ ಚಿಕ್ಕ ಶಾಸನವು

---

43 ಬೇಲೂರು ಕೇಶವದಾಸರು ಕರ್ನಾಟಕ ಭಕ ವಿಜಯ ಪು ೫ ೬ (1974)
44 ಕರ್ನಾಟಕ ಸಂಗೀತವೂ ದಾಸಕೂಟವೂ ಪು ೫೯ ೯೧ (೧೯೫೧)
45 ಡಾ। ಜಿ ವರದರಾಜರಾವ ಶ್ರೀಪಾದರಾಜರ ಕೃತಿಗಳು ಪೀಠಿಕೆ ಪು vii

ತೀರ್ವಾನಿಸುತ್ತದೆ[46] ಆದುದರಿಂದ ಒಬ್ಬ ಅಚಲಾನಂದರು ಮಧ್ವಾಚಾರ್ಯರ ಪೂರ್ವದಲ್ಲಿ ಇದ್ದರು ಇನ್ನೊಬ್ಬ ಅಚಲಾನಂದರು ಮಧ್ವಾಚಾರ್ಯರ ಅನಂತರದಲ್ಲಿ ಇದ್ದರು ಮಧ್ವಾಚಾರ್ಯರನು ಉಲ್ಲೇಖಿಸಿರುವ ಅಚಲಾನಂದ ವಿಠಲದಾಸರು ಆಲೂರಿನಲ್ಲಿ ವೃಂದಾವನಸ್ಥರಾದ ಕ್ರಿ ಶ 15 16 ನೆಯ ಶತಮಾನದಲ್ಲಿ ಇದ್ದ ಅಚಲಾನಂದರೇ ಆಗಿರಬಹುದು ಅವರೇ ಹುಲುಗೂರು ಕೃಷ್ಣಾಚಾರ್ಯರು ಪ್ರಕಟಿಸಿದ ಕೀರ್ತನಗಳ ಕರ್ತೃಗಳಾಗಿರಬಹುದೆಂದು ನನಗೆ ತೋರುತ್ತದೆ ಈ ದಿಶೆಯಲ್ಲಿ ಇನ್ನೂ ಸಂಶೋಧನೆ ಆಗಬೇಕು

ಶಾ ಶ ೮೦೧ ರಲ್ಲಿದ್ದ ಅಚಲಾನಂದದಾಸರು ಪಾಂಡುರಂಗನ ಭಕ್ತರಾಗಿದ್ದ ಸಂಗತಿಯು ಆ ಮನೆತನದವರಲ್ಲಿ ದೊರೆತ ಕಾಗದ ಪತ್ರಗಳಿಂದಲೂ ನಂಬುವಂತಿದೆ ಈ ಅಚಲಾನಂದರ ವಂಶಜರು ಇನ್ನೂ ತುರುವೆಕೆರೆ ತಿಪಟೂರು ಮತ್ತು ಮೈಸೂರು ಮೊದಲಾಗಿ ಹಲವು ಸ್ಥಳಗಳಲ್ಲಿ ಇದ್ದಾರೆ ಇವರು ಮಾಧ್ವರಲ್ಲ ಆದರೆ ತಾವೂ ಮಾಧ್ವರಂತೆ ಮುದ್ರೆ ಹಾಗೂ ನಾಮ ಇತ್ಯಾದಿಗಳನು ಹಾಕಿಕೊಂಡು ದ್ವೈತ ಸಂಪ್ರದಾಯವನ್ನು ಆಚರಿಸುತ್ತಾರೆ ಇದು ಗಮನಾರ್ಹವಾದ ಸಂಗತಿ ಇವರ ಕುಲದೇವತೆ ಪಾಂಡುರಂಗ ವಿಟ ಲಯೆಂಬ ದೂ ವಿಚಾರಣೀಯ ಅಂಶ ಈ ಅಚಲನಾದರಿಗೆ ವಿಟ ಲನು ದರ್ಶನವಿತ್ತ ಒಂದು ಪ್ರಸಂಗವನೇ – ಎಂದರೆ ಅಚಲಾನಂದರು ಪಂಢರಪುರದಲ್ಲಿ ಭೀಮರಥಿಯಲ್ಲಿ ಮಧ್ಯಾಹ್ನಿಕಾರ್ಘ್ಯ ಪ್ರದಾನಕ್ಕೆಂದು ಹೋದಾಗ ಪ್ರಾಯಃ ಕಾಲು ಜ ರಿಯೊ ಇಲ್ಲವೇ ಸೆಳವಿಗೆ ಸಿಕ್ಕೊ ಮುಳುಗಿ ಹೋಗುತ್ತಿರುವಾಗ ಸ್ವಯಂ ವಿಟ್ಠಲನು ಪ್ರತ್ಯಕ್ಷವಾಗಿ ಮುಳುಗಿ ಹೋಗುವ ವ್ಯಕ್ತಿಯ ನ್ನು ಹಿಡಿದೆತ್ತಿ ಕಾಯ್ದ ಸಂಗತಿಯನ್ನು ಕುರಿತೇ ಪುರಂದರದಾಸರ ಕೆಳಗಿನ ಪದ್ಯವನ್ನು ಬರೆದಂತಿದೆ

> ಕರೆದರೆ ಓ ಎನ ಬಾರದೆ ॥ಪ॥
> ಲಕ್ಷ್ಮಿ ರಮಣ ಕರೆದರೆ ಓ ಎನ ಬಾರದೆ ॥ಅ ಪ॥
> ಹಿರಣ್ಯಕನ ಉದರದಲ್ಲ ಬಂದ ಪ್ರಹ್ಲಾದನ
> ಪರಿಪರಿದುರಿತಗಳನೆಲ್ಲ ಪರಿಹರಿಸಿ ಕಾಯ್ದಂಥ ಸಾ ಮಿ ॥ ೧ ॥
> ಭೀಮರಥಿಯೊಳಗೊಬ್ಬದಾಸ ಮುಣುಗಿ ಪೋಗಿರಲು
> ಹೂಮಾಲೆ ಪೀತಾಂಬರವನು ತೋರಿ ದೆ ಕಾಯ್ದಂಥ ಸಾ ಮಿ ॥೨॥

---

46 Ep car Vol VIII (1984) ಆಲೂರು 38 ಈ ಶಾಸನದಲ್ಲಿ ಶಂಖಚಕ್ರಗಳ ಚಿತ್ರವಿದು ಇದು ವೈಷ್ಣವ ಪಂಥಕ್ಕೆ ಸೇರಿದೆಯೆಂಬುದರಲ್ಲಿ ಸಂಶಯವಿಲ್ಲ ಶಾಸನವು ಕೇವಲ ನ ಮ ನಿರ್ದೇಶವನ್ನು ಮಾತ್ರ ಹೊಂದಿರ ವುದರಿಂದ ಹೆಚ ಗೆ ಏನನ್ನೂ ಹೇಳುವಂತಿಲ್ಲ

ಇತ್ಯಾದಿ[47] ಪುರಂದರದಾಸರ ಕಾಲಕ್ಕೆ ಈ ಸಂಗತಿಯು ಬಹಳ ಪ್ರಸಿದ್ಧವಾದ ಸಂಗತಿಯೇ ಆಗಿರಬೇಕು ಭೀಮರಥಿ ನದಿಯಲ್ಲಿ ಮುಳುಗಿದ ದಾಸನ ಹೆಸರನ್ನು ಅವರು ಹೇಳದೆ ಇರುವುದರಿಂದ ಇದುವರೆಗೆ ವಿದ್ವಾಂಸರಿಗೆ ಚಾರಿತ್ರಿಕ ಸಂಗತಿಗಳನು ಶೃಂಖಲಾಬದ್ಧವಾಗಿ ರೂಪಿಸಲು ಸಾಧ್ಯವಾಗಿಲ್ಲ ಆಲೂರ ತಾಮ್ರಶಾಸನದ ಬೆಳಕಿನಲ್ಲಿ ಇತಿಹಾಸವನ್ನು ಪುನಾ ರಚಿಸುವುದು ಸರಿಯಾದ ಮಾರ್ಗ ಆದುದರಿಂದ ಇನ್ನು ಮುಂದೆ ಹರಿದಾಸಪಂಥದ ಪರಂಪರೆಯನ್ನು ಹೇಳುವವರು ದಾಸವಾಙ್ಮಯದ ಪರಂಪರೆಯ ಮೂಲಚೂಲಗಳನ್ನು ತಿಳಿಸಬಯಸುವವರು ಶಾ ಶ ೮೦೧ (ಕ್ರಿ ಶ ೮೭೯) ರಲ್ಲಿ ಇದ್ದ ಅಚಲಾನಂದದಾಸರನ್ನೂ ಆ ಪರಂಪರೆಯ ಪ್ರವರ್ತಕರಲ್ಲಿ ಒಬ್ಬರನ್ನಾಗಿ ಸೇರಿಸಿ ಹೇಳಬೇಕು ಪೂರ್ವೋಕ್ತ ಲಕ್ಕುಂಡಿಯ ಶಾಸನದ ವೈಷ್ಣವಗೀತಿ ಮನೋಹರರು ಇಂತಹರೆಂದೇ ಹೇಳಬಹುದು ಹರಿದಾಸ ಪಂಥವು ಆಗ ಇದ್ದಿತೆನುವುದಕ್ಕೆ ಇವು ಒಳ್ಳೆಯ ನಿದರ್ಶನಗಳು ಸೋಮದೇವ ಸೂರಿಯು ಹೇಳಿದ ದ್ವೈತಮತದ ಅನುಯಾಯಿಗಳು ಇಂತಹರು ಎಂದು ನಿರೂಪಿಸಿದರೂ ತಪ್ಪಾಗದು

ಕೃಷ್ಣಕರ್ಣಾಮೃತ ಕಾವ್ಯವನ್ನು ರಚಿಸಿರುವ ಭಗವದ್ಭಕ್ತ ಲೀಲಾಶುಕ' ಅಪರನಾಮಧೇಯ ಬಿಲ್ವಮಂಗಲ ಕ್ರಿ ಶ ಹನ್ನೊಂದನೆಯ ಶತಮಾನದಲ್ಲಿದ್ದನು[48] ಈ ಕೃಷ್ಣಭಕ್ತ ಬರೆದಿರುವ ಒಂದು ಪದ್ಯ ಹೀಗಿದೆ

> ಯಂ ಶೈವಾಸ್ಸಮುಪಾಸತೇ ಶಿವ ಇತಿ ಬ್ರಹ್ಮೇತಿ ವೇದಾಂತಿನೋ
> ಬೌದ್ಧಾಬುದ್ಧ ಇತಿ ಪ್ರಮಾಣಪಟವಃ ಕರ್ತೇತಿ ನೈಯಾಯಿಕಾಃ
> ಅರ್ಹನಿತ್ಯಥ ಜೈನಶಾಸನರತಾಃ ಕರ್ಮೇತಿ ಮೀಮಾಂಸಕಾಃ
> ಸೋಽಯಂ ನೋ ವಿಧದಾತು ವಾಂಛಿತಫಲಂ ಶ್ರೀದೇವಕೀ ನಂದನಃ ॥

ಇದೇ ಪದ್ಯ ಸ್ವಲ್ಪ ಪಾಠಭೇದಗಳಿಂದ ಬೇಲೂರ ಶಾಸನದಲ್ಲಿ ಎಡೆ ಪಡೆದಿದೆ ಅದು ಇಂತಿದೆ

---

47 (a) ಪುರಂದರದಾಸರ ಹಾಡುಗಳು (ಸಂ ಕಾವ್ಯಪ್ರೇಮಿ) ಪು ೪೫ (೧೯೮೨)
(b) ಪುರಂದರದಾಸರ ಕೀರ್ತನೆ ಭಾಗ ೩ ಪದ ೩೩ ಪು ೧೩ (ಪಾವಂಜೆ ೧ ನಯ ಸಿಂಗ ರಾಯ)
(c) ಪೂರ್ವೋಕ್ತ ಶ್ರೀಪಾದರಾಜರ ಕೃತಿಗಳು ಗ್ರಂಥದ ಪೀಠಿಕೆ ಪು ||| ರಲ್ಲಿ ಬಂದಿರುವ ಕ ಗದಪತ್ರದ ಸಂಗತಿಯನೂ ಇಲ್ಲಿ ಪರಿಶೀಲಿಸಬೇಕು

48 History of Sanskrit Literature (M Winternitz and Subhadra Jha) Vol III Pt I p 140 (MD)
ಬಿಲ್ವಮಂಗಲ ಎಂದೇ ಕವಿಯು ಪ್ರಸಿದ್ಧ ಆದರೆ ಬಿಲ್ವ ಮಂಗಲ ಒಂದು ಸ್ಥಳದ ಹೆಸರು ಲೀಲಾಶುಕ ಕವಿಯ ಹೆಸರೋ ಅಥವಾ ಯತ್ಯಾಶ್ರಮದ ಹೆಸರೋ ಸದ್ಯ ಸ್ಪಷ್ಟವಿಲ್ಲ ಈತ ದಕ್ಷಿಣ ಭಾರತದವ ಕರ್ನಾಟಕದವನು ಆದರೂ ಆಗಿರಬಹುದು

> ಯಂ ಶೈವಾಸ ಮುಪಾಸತೇ ಶಿವಇತಿ ಬ್ರಹೆ ೀತಿ ವೆ ದಾಂತಿನೋ
> ಬೌದ್ದಾ ಬ ದ್ದ ಇತಿ ಪ್ರಮಾಣಪಟವಃ ಕರ್ತೇತಿ ನೈಯ್ಯಾಯಿಕಾಃ
> ಅರ್ಹಶೆ ೀತಿಹ ಜೈನಶಾಸನಮಿತಿ ಕರ್ಮೇತಿ ಮೀಮಾಂಸಕಾಃ
> ಸೋಽಯಂ ವೋ ವಿದಧಾತು ವಾಂಛಿತಫಲಂ ಶ್ರೀಕೇಶವೇಶಸ್ಸದಾ ॥49

ಕ್ರಿ ಶ ೧೧ನೆಯ ಶತಮಾನದಲ್ಲಿಯೆ ಕವಿಯು ಎಲ್ಲ ಧರ್ಮಗಳ ದೇವಗಳನ್ನು ಕೃಷ್ಣನ ಅಂತರ್ಗತವಾಗಿಸಿರುವುದು ತುಂಬ ಗಮನಾರ್ಹವಾಗಿದೆ ಆತನ ನುಡಿ ಕನ ಡ ನಾಡಿನಲ್ಲಿ ಮೊದಲು ಶಾಸನಸ್ಥವಾಗಿರುವುದು ಅವನ ಯಾವುದೊ ಸಂಬಂಧದ ಎಳೆಯನ್ನು ನಮಗೆ ಸೂಚಿಸುತ್ತದೆ ದೇವಕಿನಂದನನ ಹಿರಿಮೆ ಇಲ್ಲಿನ ಹೆಗ್ಗುರುತಾಗಿದ್ದು ಹರಿದಾಸಪಂಥದ ಹೆಜ್ಜೆಯನ್ನು ಸೂಚಿಸುತ್ತದೆ

ಕ್ರಿ ಶ ೧೨ನೆಯ ಶತಮಾನದಲ್ಲಿ ರಾಜ್ಯವಾಳುತ್ತಿದ್ದ ಕಲ್ಯಾಣದ ಚಕ್ರವರ್ತಿ ೩ನೆಯ ಸೋಮೇಶ್ವರನ (ಕ್ರಿ ಶ ೧೧೨೯ ೧೧೩೯) ಆಳ್ವಿಕೆಯ ಕಾಲದ ಕೃತಿ ಮಾನಸೋಲ್ಲಾಸ (ಅಭಿಲಷಿತಾರ್ಥ ಚಿಂತಾಮಣಿ) ಗ್ರಂಥದಲ್ಲಿ ಬಂದಿರುವ ಆಧಾರಗಳನ್ನು ಹಿಡಿದು ತತ್ಪೂರ್ವದಲ್ಲಿ ಗೀತ ಸಾಹಿತ್ಯ ಕನ ಡದಲ್ಲಿ ಇದ್ದಿತೆಂದು ಈಗಾಗಲೇ ಪ್ರೊ॥ ಡಿ ಎಲ್ ಎನ್ ಅವರು ಗುರುತಿಸಿದ್ದಾರೆ[50] ಮಾನಸೋಲ್ಲಾಸದ ಕರ್ತೃ ಒಬ್ಬ ಮಹಾನ್ ವಿಷ್ಣುಭಕ್ತನಾಗಿದ್ದನೆನ್ನುವುದು ಆತನ ಕೃತಿಯಲ್ಲಿ ರಚಿಸಲಾಗಿರುವ ಹಲವಾರು ವಿಷ್ಣು ಸ್ತುತಿಗಳಿಂದ ಸ್ಪಷ್ಟವಿದೆ ಆತ ಆ ಮೂಲಕ ವಿಷ್ಣುಸ್ತುತಿ ಇಲ್ಲವೇ ಆ ಭಗವಂತನ ಕೀರ್ತನ ಕೈಂಕರ್ಯವನ್ನೇ ಎಸಗಿದ್ದಾನೆ ಆತನು ಬರೆದ ಪದ್ಯಗಳು ತ್ರಿಪದಿ ಷಟ್ಪದಿ ಕಂದ ಪದ್ಧಡಿ ಏಲಾ ಮುಂತಾಗಿ ನಾನಾ ಬಗೆಯವಾಗಿವೆ ಏ ಲಾ ಛಂದಸ್ಸೇ ಸೂಳಾದಿಗಳ ಮೂಲ

> ಶುದ ಕ್ಕಾಯಾ ಲಗಕ್ಕೇತಿ ದಿ ವಿಧಃ ಸೂಡ ಉಚ ತೇ
> ಏಲಾದಿ ಶುದ ಇತು ಕೊ ೀ ಧ್ರುವಾದಿ ಸಾಲಗೋ ಮತಃ ॥

ಮಾನಸೋಲ್ಲಾಸಕಾರನು ಕನ್ನಡಿಗನು ವಿಷ್ಣುಭಕ್ತನು ಎನ್ನುವುದಕ್ಕೆ ಕೆಳಗಿನ ಪದ್ಯಗಳೇ ಸಾಕ್ಷಿ

> (ಅ) ಮೇದಿನಿ ವರ್ಣಿಸಲ್ಕಾದಿಯೊಳ್ ಮೀನಾಗಿ
> ವೇದವೊತ್ತಗೆಯನೆತ್ತಿ ತಂದಿತ್ತವನ
> ಪಾದಂಗಳೀಗೆ ವ ಹಿಮೆಯಂ ॥
>
> (ಆ) ಗಡಣದಿಂದುರಗನ
> ಹೆಡೆವಣಿಗಳ ದೀಪ್ತಿ
> ಗೆಡೆಗೊಂದು ತಮಗೆತ್ತುವಾರತಿಯಾ ।

49 Ep car Vol V (BLR) Belur-3 1397 A D
50 ಪೂರ್ವೋಕ್ತ, ಶಿವದಾಸಗೀತಾಂಜಲಿ ಮುನ್ನುಡಿ ಪು ೧ ೨

ಸೊಡರ್ಗಳವೋಲೆ ಪಾ
ಲ ಡೆಲೊಳಿರ್ದಾ ವಿಷ್ಣು
ಕುಡಾತಿಕೆ ನಮಗಿಷ್ಟ ಸಿದಿ ಯಂ॥

(೯) ಜನಿತಕಮಲಾನಂದ ಪ್ರಣತ ಸುರಗೋವಿಂದ
ದನುಜಕುಲ ಸಂಹಾರ ಅಘಕಮಲ ನೀಹಾರ
ಭಕ ಜನ ಭಯಹರಣ ಸುರಸಂಘನತ ಚರಣ
ಪ್ರಣ ಂಚಯ ಸದನ ಸರಸಿರುಹನಿಭ ವದನ
ನೀಲಜಲಧರವರ್ಣ ಮಕರಕ ಂಡಲ ಕರ್ಣ
ತರುಣರವಿನಿಭಚಕ್ರ ಸ್ವಭುಜಪಾಲಿತ ಚಕ್ರ
ಹತದೈತ್ಯಗಣದರ್ಪ ದಮಿತ ಕಾಲಿಯ ಸರ್ಪ
ಕಂಸಭುಜಬಲನಾಶದಕ್ಷ ॥ (ಪದ್ಧಡಿ–ಕನ ಡ)

ಮಾನಸೋಲ್ಲಾಸಕಾರ ಹಲವು ವಿಲಾಗಳನ್ನೂ ಹೇಳಿದ್ದಾನೆ ಎಲ್ಲ ಉದಾಹರಣೆಗಳೂ ನಾರಾಯಣ ಪರವಾಗಿವೆ ಅವುಗಳಲ್ಲಿ ರುದ್ರನನ್ನು ವಿಷ್ಣುವಿಗೆ ಸೇರಿಸಿಯಾಗಲಿ ಎರಡೂ ದೇವತೆಗಳೂ ಒಂದೇ ಎಂದಾಗಲಿ ಹೇಳಿಲ್ಲ ಇದೂ ಗಮನಾರ್ಹವಾದ ಅಂಶ ಒಂದೂ ವಿಲಾ ಪದ್ಯವನ್ನು ನೋಡಿ

ಯೌವನ । ಭೂಷಿತ । ಗೋಪವ । ಧೂಮುಖ । ಪದ ಮ ।ಧುಕರ
ಶ್ಯಾಮಲ ವಿಗ್ರಹ ಕಾಂತಿ ವಿನಿರ್ಜಿತ ನವ್ಯಜಲಧರ
ದೇವಕಿನಂದನ ~ ೀರಸರೋರುಹ ಸಂಚಯ ಪಿಂಜರ
ಶೋ ಭನ ವಸನ ಕಲಿತ ಸತ್ಯಮಲಾನಯನಾಂಬುಜ ವಿಭ್ರಮ ಭವನ
ಮ್ರದುಗದ್ಗದ್ಧಿವ ತಶಯ ನದಲಿತ ಪುಂಡರೀಕನಯನ
ಕೌಶು ಭರತ ಮರೀಚಿಕದಂಬಕ ಭಾಸುವರನ ಪಾಹಿಪುರಂದರಗೀತಕ
ಬಿರುದಪ್ರೇಮ ಕುಸುಮ ಶರಜನ ವಿಮೋಹಿತ ನಿಖಿಲಭುವನ
ಉತ ತ್ತಿ ಸ್ಥಿತಿಕಾರಣ ಪ್ರಭೋನ ರಾಯಣ ॥51

ಹರಿದಾಸಪಂಥದ ಆಕರಗಳಲ್ಲಿ ವಿಷ್ಣುಪುರಾಣ ಭಾಗವತಪುರಾಣ ಮಹಾಭಾರತ ಐತರೇಯ ಉಪನಿಷತ್ತು ಕಠೋಪನಿಷತ್ತು ಇತ್ಯಾದಿಗಳೂ ಬಹು ಮುಖ್ಯ ಅವುಗಳನ್ನು ಆಧರಿಸಿ ನಮ್ಮ ಕವಿಗಳು ತಮ್ಮ ಕೃತಿಗಳನ್ನು ರಚಿಸಿದರು ಜಗನ್ನಾಥ ವಿಜಯ ಕಾವ್ಯದ ರುದ್ರಭಟ್ಟ ಚೌಂಡರಸ ಮೊದಲಾದವರು ಮಧ್ವಾಚಾರ್ಯರ

51 ಪ್ರೊ। ಡಿ ಎಲ ಎನ್ ಮಾನಸೋಲ್ಲಾಸದಲ್ಲಿ ಛಂದಸ್ಸು
ಪ್ರಬುದ್ಧ ಕರ್ಣಾಟಕ ಸಂಪುಟ ೪೫ ಸಂಚಿಕೆ ೨ ಪು ೯೩ ೭೩ ಅಲ್ಲಲ್ಲಿ ಪಾಠಾಂತರಗಳು ಇವೆಯೆಂಬುದರ ಅರಿವು ನನಗಿದೆ ಏನೆ ಇದರೂ ಕವಿಯ ಮೂಲ ಉದ್ದೇಶ ವಿಷ್ಣುಸ್ತುತಿ ಎನು ವುದರಲ್ಲಿ ಸಂದೇಹವಿಲ್ಲ ಕೃಷ್ಣಭಕ್ತಿ ಕರ್ನಾಟಕದಲ್ಲಿ ಕ್ರಿ ಶ ೧ ೫೦ ಕ್ಕೂ ಮ ಂಚೆಯೆ ಸಾಕಷ್ಟು ಪ್ರಸಿದ್ಧವಸು ವಾಗಿತ್ತೆನ್ನುವುದೂ ನಮಗೆ ಇಲ್ಲಿ ಬಹಳ ಮುಖ್ಯ ಸಂಗತಿ

ಪೂರ್ವದಲ್ಲಿ ಕೃತಿಗಳನು ರಚಿಸಿದರೆ ಮಧ್ವಾಚಾರ್ಯರ ಸಾಕ್ಷಾತ್ ಶಿಷ್ಯನಾಗಿ ಕುಮಾರ ವಾಲ್ಮೀಕಿಯು ಕಾವ್ಯವನ್ನು ರಚಿಸಿದ್ದಾನೆ

ಸುರನರೋರಗವಂದ ನಿಗಮೋ
ತ್ಕರ ಕಲಾಪಾನಿಂದ್ಯ ವಿಶ್ವಂ
ಭರಪದಾಂಬುಜಭ್ರಂಗ ಭೂನುತ ಮುನಿಜನೋತ್ತುಂಗ
ಶರಣಜನ ಸುರಪಾಲನಾಯತ
ಪರಿಧಿ ನಿರುಪಮ ತತ್ವವಿದ್ಯಾ
ಶರಧಿ ಸಲಹುಗೆ ನಮ್ಮ ಮಧ್ವಾಚಾರ್ಯ ಗುರುರಾಯ ॥[52]

ಸುಮಾರು ಇದೇ ಸಮಯದಲ್ಲಿ ನರಹರಿತೀರ್ಥರು ಪೀಠಕ್ಕೆ ಬರುತ್ತಾರೆ ಜ್ಞಾನದೇವನ ಜ್ಞಾನೇಶ್ವರಿಯೂ ಇದೇ ಸುಮಾರಿಗೆ (ಕ್ರಿ ಶ ೧೨೯೨) ಹುಟ್ಟಿತು ಆತನ ಅಭಂಗಗಳೂ ಅದೇ ಕಾಲದವೆಂದ ಬೇರೆ ಹೇಳಬೇಕಾಗಿಲ್ಲ ಆತನ ಮಾತನ್ನು ನಂಬುವುದಾದರೆ ಆ ಕಾಲಕ್ಕಾಗಲೇ ವಿಠಲನ ಸ್ತುತಿ ಸಾಹಿತ್ಯ – ಕೀರ್ತನ ಸಾಹಿತ್ಯ – ಕನ್ನಡದಲ್ಲೇ ಸಾಕಷ್ಟು ಇದ್ದಿತು ದುರ್ದೈವ ಅದು ಕವಿರಾಜಮಾರ್ಗ ಪೂರ್ವದ ಕನ್ನಡ ಸಾಹಿತ್ಯದ ಹಾಗೆ ದೊರೆತಿಲ್ಲ ಶ್ರೀ ನರಹರಿತೀರ್ಥರು (ಕ್ರಿ ಶ 1281) ಶ್ರೀಪಾದರಾಯರು (ಕ್ರಿ ಶ 1422–1480) ವ್ಯಾಸರಾಯರು (ಕ್ರಿ ಶ 1447–1539) ವಾದಿರಾಜರು (ಕ್ರಿ ಶ 1480–1600) ಪುರಂದರದಾಸರು (ಸು 1480 1564) ಕನಕದಾಸರು ಮಹಿಪತಿದಾಸರು ವಿಜಯದಾಸರು ರಾಘವೇಂದ್ರರಾಯರು ಪ್ರಸನ್ನ ವೆಂಕಟದಾಸರು ಗೋಪಾಲದಾಸರು ಜಗನ್ನಾಥದಾಸರು ಮೋಹನದಾಸರು ಹೆಳವನಕಟ್ಟೆ ಗಿರಿಯಮ್ಮ ಮುಂತಾಗಿ ಅನೇಕರು ಕೀರ್ತನೆ ಸುಳಾದಿ ಹಾಡುಗಳು ಉಗಾಭೋಗಗಳು ಚಿಕ್ಕ ದೊಡ್ಡ ಕಾವ್ಯಗಳು ಕೋಲಾಟದ ಪದಗಳು ಕೊರವಂಜಿ ಪದಗಳು ಜೋಗುಳ ಪದಗಳು ಮುಂತಾಗಿ ಹಲವು ಬಗೆಯಲ್ಲಿ ಹರಿದಾಸಪಂಥದ ಸಾಹಿತ್ಯವನ್ನು ರಚಿಸಿ ಹರಿದಾಸ ವಾಙ್ಮಯವನ್ನು ಸಮೃದ್ಧಗೊಳಿಸಿದರು ಕರ್ನಾಟಕದಲ್ಲಿ ಪ್ರಚಲಿತವಿದ್ದ ಕೃಷ್ಣಭಕ್ತಿಯನ್ನು ಕರ್ನಾಟಕದ ಹೊರಗೂ ಹಬ್ಬಿಸಲು ಗೆಯ್ಮೆಗೆಯ್ದರು ಹಲ್ಮಿಡಿ ಬಾದಾಮಿ ಶಾಸನಗಳಲ್ಲಿ ಬಂದಿರುವ ವಿಷ್ಣು (ಅಚ್ಯುತ) ಮಾಧವರೇ ಹತ್ತಾರು ರೂಪಗಳಲ್ಲಿ ನಮ್ಮ ಹರಿದಾಸರ ಆರಾಧ್ಯ ದೇವರು ಆ ದೇವರ ಕಥೆಯೇ ಹರಿದಾಸರ ಜೀವದೊಳಗಿನ ಜೀವ ಅವನ ಪ್ರೇಮವೇ ಸರ್ವಸ್ವ

ಎಲ್ಲಿ ಹರಿಕಥಾ ಪ್ರಸಂಗವೋ ।
ಅಲ್ಲಿ ಗಂಗಾ ಯಮುನೆ ಗೋದಾ ಸರಸ್ವತಿ ಸಿಂಧು ।
ಎಲ್ಲ ತೀರ್ಥಗಳು ಬಂದು ಎಣೆಯಾಗಿ ನಿಲ್ಲುವುವು ।
ವಲ್ಲಭ ಶ್ರೀಪುರಂದರವಿಠಲ ಮೆಚ್ಚುವನು ॥

ಆ ವಿಟ್ಠಲನ ಪಾದದುಂಗುಟದಲ್ಲಿ ಹರಿದಾಸಪಂಥದ ಭಕ್ತಿರಸ ಗಂಗೆ ಹುಟ್ಟಿ ಹರಿದಿದ್ದಾಳೆ ಕನ್ನಡ ನಾಡಿನ ಆದ್ಯಂತ ಅಮೃತದ ಸೇಚನೆ ಗೈದಿದ್ದಾಳೆ

52 ತೊರವೆರಾಮಾಯಣ (ಸಂ ಎನ್ ಬಸವಾರಾಧ್ಯ) ಭಾಗ–೧ ಪು ೨ (1956)

# ಹರಿದಾಸ ಸಾಹಿತ್ಯದ ಇತಿಹಾಸ

—ಶಾಲಿನಿ ರಘುನಾಥ

ಮಧ್ಯಕಾಲಿನ ಕರ್ನಾಟಕದ ಸಾಂಸ್ಕೃತಿಕ ಇತಿಹಾಸ ಅನೇಕ ದೃಷ್ಟಿಗಳಿಂದ ಮಹತ್ವ ಪೂರ್ಣವೂ ಕುತೂಹಲಕಾರಿಯೂ ಆದುದು ರಾಜಕೀಯ ಧಾರ್ಮಿಕ ಜೀವನದ ಏರಿಳಿತಗಳ ಪರಿಣಾಮ ಸಾಮಾಜಿಕ ಜೀವನದ ಮೇಲೂ ಪ್ರಭಾವಬೀರಿ ಸಾಹಿತ್ಯದಲ್ಲೂ ಅದರ ಪ್ರತಿಬಿಂಬ ಗೋಚರಿಸಿದೆ ಇಂದಿಗೂ ವಿಶಿಷ್ಟವೆನಿಸುವ ವಚನಸಾಹಿತ್ಯ ದಾಸಸಾಹಿತ್ಯಗಳು ಆ ಕಾಲದ ಫಲಗಳೆ ಆಗಿವೆ ವಚನಸಾಹಿತ್ಯದ ಮಹಾಪೂರದ ನಂತರದ ಕಾಲದಲ್ಲಿ ಬಂದ ದಾಸಸಾಹಿತ್ಯದ ಮೇಲೆ ಮೊದಲಿನ ಸಾಹಿತ್ಯದ ಪ್ರಭಾವ ಉಂಟಾಗಿರಬಹುದಾದರೂ ದಾಸಸಾಹಿತ್ಯಕ್ಕೆ ತನ್ನದೇ ಆದ ಕೆಲವು ವೈಶಿಷ್ಟ್ಯಗಳಿವೆ ಎಂಬುದನ್ನು ಮರೆಯುವಂತಿಲ್ಲ

ಹರಿದಾಸ ಸಾಹಿತ್ಯ ಹೆಸರೇ ಸೂಚಿಸುವಂತೆ ಹರಿಯ ಭಕ್ತರಿಂದ ರಚಿತವಾದ ಸಾಹಿತ್ಯ ಪ್ರಾಚೀನ ಭಾಗವತ ಪರಂಪರೆಯೊಂದಿಗೆ ಮಧ್ವಮ ತ ತತ್ತ್ವಗಳ ಭದ್ರ ತಳಹದಿ ಇದಕ್ಕಿದೆ ಅಂತೆಯೇ ಈ ಸಾಹಿತ್ಯದಲ್ಲಿ ಭಗವಂತನ ನಾನಾರೂಪಗಳ ವರ್ಣನೆ ಭಕ್ತನ ಅಂತರ ಗಶೋಧನೆ ಕಳವಳ ಸರ್ವಾರ್ಪಣ ಭಾವಗಳ ಜೊತೆಗೆ ಮಧ್ವಮತ ತತ್ತ್ವನಿರೂಪಣೆಯೂ ಕಂಡು ಬರ ತ ದೆ ಅನೇಕ ದಾಸರ ಕೃತಿಗಳಲ್ಲಿ ಸುತ್ತಲಿನ ಸಮಾಜವನ್ನು ಕುರಿತು ಕಳಕಳಿ ವಿಡಂಬನೆ ಇತ್ಯಾದಿ ಕಂಡು ಬರುತಿದ್ದು, ದಾಸಸಾಹಿತ್ಯ ಸಾಮಾಜಿಕವಾಗಿಯೂ ಮಹತ್ವಪೂರ್ಣವಾಗಿರುವುದನ್ನು ಗುರುತಿಸಬಹುದಾಗಿದೆ ಹೀಗೆ ಭಕ್ತಿಯ ಮೂಲಕ ಮುಕ್ತಿಯನ್ನು ಸೂರೆಗೊಳ್ಳಬೇಕೆಂದು ಮುಖ್ಯವಾಗಿ ಬಯಸಿದ ಹರಿದಾಸರು ತಮ್ಮನ್ನು ಮತ್ತು ತಮ್ಮ ಸುತ್ತಮುತ್ತಲಿನ ಸಮಾಜವನ್ನು ಅರಿತುಕೊಳ್ಳಲು ಮತ್ತು ಸುಧಾರಿಸಲು ಮಾಡಿದ ಪ್ರಾಮಾಣಿಕ ಪ್ರಯತ್ನಗಳೇ ಹರಿದಾಸಸಾಹಿತ್ಯದಲ್ಲಿ ಕಂಡುಬರುತ್ತವೆಯೆನ್ನಬಹುದು ಇವು ವ್ಯಕ್ತವಾದದ್ದು ಸಹಜವಾದ ಆಡುನುಡಿಗಳಲ್ಲಿ ಹರಿದಾಸರು ತಮ್ಮ ಅಂತರಂಗದ ಅಭಿವ್ಯಕ್ತಿ ಹಾಗೂ ಮತತತ್ತ್ವ ಪ್ರಚಾರಗಳಿಗೆ ತಾಯ್ನುಡಿಯನ್ನು ಅತ್ಯಂತ ಸಮರ್ಥವಾಗಿ ಬೆಳೆಸಿಕೊಂಡಿದ್ದಾರೆ ಆಡುಭಾಷೆ ಗೆ ದೇವಭಾಷೆ ಯ ಸ್ಥಾನಮಾನಗಳನ್ನು ಕಲ್ಪಿಸಿಕೊಟ್ಟಿದ್ದಾರೆ ದಾಸಸಾಹಿತ್ಯ ಕೀರ್ತನೆ ಸುಳಾದಿ ಉಗಾಭೋಗ, ವೃತ್ತನಾಮ ದಂಡಕ ಮುಂತಾದ ಪ್ರಕಾರಗಳಲ್ಲಿ ರಚಿತವಾಗಿದ್ದು ಮುಖ್ಯವಾಗಿ ಅದರ ಗೇಯಗುಣ ಜನಸಾಮಾನ್ಯರನ್ನು ವಿಶೇಷವಾಗಿ ಆಕರ್ಷಿಸಿದೆ ಪಂಡಿತರನ್ನು ಪಾಮರರನ್ನು ಏಕಕಾಲಕ್ಕೆ ಆಕರ್ಷಿಸಬಲ್ಲ ವಿಶಿಷ್ಟ ಸಾಮರ್ಥ್ಯ ಈ ದಾಸಸಾಹಿತ್ಯದ್ದು

ಯಾವುದೇ ವಿಷಯವನ್ನು ಪೌರಾಣಿಕಗೊಳಿಸುವುದರಿಂದ ಅದು ಪ್ರಾಚೀನವೆನ್ನಿಸಿಕೊಳ್ಳುತ್ತದೆ ಅದು ಹೆಚ್ಚು ಪವಿತ್ರವಾದದ್ದಾಗುತ್ತದೆ ಎಂಬ ಭಾವನೆ ಜನಸಾಮಾನ್ಯರದ್ದು ದಾಸಸಾಹಿತ್ಯವೂ ಈ ನಂಬಿಕೆಯಿಂದ ಹೊರತಾಗಿಲ್ಲ ಪೌರಾಣಿಕ ವ್ಯಕ್ತಿಯಾದ ಮಹಿದಾಸನಿಂದ ಕನ್ನಡ ಹರಿದಾಸ ಪೀಳಿಗೆಯನ್ನು ಗುರುತಿಸಲಾಗುತ್ತದೆ ಮುಂದೆ ಈ ಸಂಪ್ರದಾಯಕ್ಕೆ ಅರುವತ್ತು ಮಂದಿ ಆದ್ಯರು ಒಂಬತ್ತು ಜನ ಆರಾಧ್ಯರು ಪ್ರಮುಖರೆಂದು ಪ್ರತಿಪಾದಿಸುತ್ತಾರೆ[1] ಆದರೆ ಈ ಆರಾಧ್ಯರು ೧೫ನೇ ಶತಮಾನದವರೆಂದು ಗುರುತಿಸಲಾಗಿದೆ [2]

ದಾಸಸಾಹಿತ್ಯದಲ್ಲಿ ಸಾಂದರ್ಭಿಕವಾಗಿ ರಚಿಸಿದ ಕೀರ್ತನೆಗಳ ಸಂಖ್ಯೆಯೇ ಹೆಚ್ಚು ಸುಮಾರು ಇನ್ನೂರಕ್ಕೂ ಹೆಚ್ಚು ಹರಿದಾಸರು ಕೀರ್ತನೆಗಳನ್ನು ರಚಿಸಿದುದಾಗಿ ತಿಳಿದುಬರುತ್ತದೆ[3] ಅವರಲ್ಲಿ ಪುರಂದರದಾಸರೊಬ್ಬರೇ ನಾಲ್ಕುಲಕ್ಷದ ಮೇಲೆ ಎಪ್ಪತ್ತೈದು ಸಾವಿರ ಕೃತಿಗಳನು ರಚಿಸಿದ್ದೇನೆಂದು ಹೇಳಿಕೊಂಡಿದ್ದಾರೆ ಉಳಿದವರ ಕೃತಿ ಸಂಖ್ಯೆ ಎಷ್ಟೋ ಸರಿಯಾಗಿ ತಿಳಿಯದು ಆದರೆ ಇದುವರೆಗೆ ದೊರಕಿದ ಪುರಂದರದಾಸರ ಹಾಡುಗಳ ಸಂಖ್ಯೆ ಸಾವಿರಕ್ಕೆ ಮೇಲ್ಪಟ್ಟೇ ಇದೆ ಹರಿದಾಸರು ರಚಿಸಿರುವುದೆಲ್ಲ ಈಗ ಉಪಲಬ್ಧವಿಲ್ಲ ಲಭ್ಯವಿರುವ ಸಾಹಿತ್ಯದಲ್ಲಿಯೂ ಪ್ರಕ್ಷಿಪ್ತವಾದವು ಸಾಕಷ್ಟಿರುವುದರಿಂದ ಯಾವ ದಾಸರು ಎಷ್ಟು ಹಾಡುಗಳನ್ನು ರಚಿಸಿದ್ದಾರೆಂದು ತೀರ್ಮಾನಿಸುವುದು ಕಷ್ಟ ಜೊತೆಗೆ ಹದಿನೈದನೆಯ ಶತಮಾನದಲ್ಲಿ ಕೀರ್ತನ ಸಾಹಿತ್ಯ ಅಷ್ಟೊಂದು ಜನಪ್ರಿಯವಾಗಬೇಕಾದರೆ ಆ ಹೊತ್ತಿಗಾಗಲೇ ಅದಕ್ಕೊಂದು ಪರಂಪರೆ ಬೆಳೆದು ಬಂದಿರಬೇಕು ಆದರೆ ಪ್ರಸ್ತುತ (ಅಧ್ಯಯನ ಆ ದಿಶೆಯಲ್ಲಿ ಹೆಚ್ಚಿನ ಸಂಶೋಧನಾ ಪ್ರಯತ್ನಗಳನ್ನು ಮಾಡದೆ ಮಧ್ವಾಚಾರ್ಯರ ನಂತರದಲ್ಲಿ ಹುಟ್ಟಿ ಬೆಳೆದಿರುವ ಹರಿದಾಸಸಾಹಿತ್ಯವನ್ನು ಮಾತ್ರ ಅವಲೋಕಿಸುತ್ತದೆ ಹರಿದಾಸರಲ್ಲಿ ಕೆಲವರು ಸಂಸ್ಕೃತ ಮತ್ತಿತರ ಭಾಷೆಗಳಲ್ಲಿಯೂ ಪಂಡಿತರಾಗಿದ್ದು ಆ ಭಾಷೆಗಳಲ್ಲಿಯೂ ಕೃತಿಗಳನ್ನು ರಚಿಸಿರುತ್ತಾರೆ ಹರಿದಾಸಸಾಹಿತ್ಯದ ಇತಿಹಾಸ ಮುಖ್ಯವಾಗಿ ಅವರ ಕನ್ನಡ ರಚನೆಗಳಷ್ಟೇ ಸೀಮಿತವಾಗಿದೆ

ಕನ್ನಡ ಹರಿದಾಸಸಾಹಿತ್ಯದ ಇತಿಹಾಸವನ್ನು ತಿಳಿಯಬೇಕೆನ್ನುವವರಿಗೆ ಪ್ರಾರಂಭದಲ್ಲಿಯೇ ಕೆಲವು ತೊಡಕುಗಳಿವೆ ಅದರ ಉಗಮವನ್ನು ಕುರಿತಂತೆ ವಿದ್ವಾಂಸರಲ್ಲಿ ಒಮ್ಮತವಿಲ್ಲ ಕ್ರಿ ಶ ೯ ನೆಯ ಶತಮಾನದಲ್ಲಿದ್ದ ಅಚಲಾನಂದರು ಮೊದಲ ಕನ್ನಡ ಹರಿದಾಸರೆಂಬ ಅಭಿಪ್ರಾಯ ಕೆಲವರದ್ದು [4] ಆದರೆ ಅಚಲಾನಂದ ವಿರಚಿತ ಒಂದು ರಚನೆಯಲ್ಲಿ ಕೇಳೋ ಜೀವನವೆ ನೀ ಮಧ್ವಮತವನನುಸರಿಸಿ ಶ್ರೀ ಲೋಲನಂಘ್ರಿಗಳ ನೆನೆದು ಸುಖಿಸೋ ಎಂದು ಮಧ್ವಮತವನ್ನು ಕುರಿತು ಹೇಳಿರುವುದರಿಂದ ಮಧ್ವಾಚಾರ್ಯರ ನಂತರದ ಕಾಲದಲ್ಲಿ ಅಚಲಾನಂದ ಎಂಬ ಹೆಸರಿನ ಇನ್ನೊಬ್ಬ ಹರಿದಾಸರು ಇದ್ದಿರಬೇಕು ಎಂದು ಅನ್ನಿಸುತ್ತದೆ ಈಗ ಅಚಲಾನಂದವಿಠಲ ಎಂಬ ಅಂಕಿತದಲ್ಲಿ ಕೆಲವು ಉಗಾಭೋಗಗಳು ಕೀರ್ತನೆಗಳು

ಮತ್ತು ಸುಳಾದಿಗಳು ದೊರೆಯುತ್ತಿದ್ದು ಅವು ಈ ಎರಡನೆಯ ಅಚಲಾನಂದದಾಸರದ್ದೇ ಇರಬೇಕೆಂದು ಊಹಿಸಲಾಗಿದೆ

ಶ್ರೀ ಮಧ್ವಾಚಾರ್ಯರ ಶಿಷ್ಯರಾದ ನರಹರಿತೀರ್ಥರು ಕನ್ನಡದಲ್ಲಿ ಕೃತಿ ರಚಿಸಿದ ಮೊದಲ ಹರಿದಾಸರೆಂದು ಕೆಲವರು ನಂಬುತ್ತಾರೆ [೬] ಇಂತು ಮರುಳಾದೆ ನಾ ಇಂತು ಮರುಳಾದೆ ತಿಳಕೊ ನಿನ್ನೊಳಗೆ – ಎದುರ್ಯಾರೊ ಗುರುವೆ ಸಮರ್ಯಾರೋ ಮತ್ತು ಹರಿಯೆ ಇದು ಸರಿಯೇ ಈ ನಾಲ್ಕು ರಚನೆಗಳು ಅವರದ್ದೆಂದು ಊಹಿಸಲಾಗಿವೆ ಇದಕ್ಕೆ ಹಲವಾರು ಪಾಠಗಳು ಲಭ್ಯವಿದ್ದು ಮೂಲಪಾಠದ ಬಗ್ಗೆ ಇನ್ನೂ ಸಮಸ್ಯೆಯೇ ಇದೆ ನರಹರಿತೀರ್ಥರ ರಚನೆಗಳೆಂದು ಸಂಪೂರ್ಣವಾಗಿ ಒಪ್ಪಿಕೊಳ್ಳದ ವಿದ್ವಾಂಸರು ಪಾಠಗಳ ಹಾಗೂ ಅಂಕಿತಗಳ ಸಮಸ್ಯೆಗಳೊಂದಿಗೆ ಇನ್ನೂ ಕೆಲವು ತೊಡಕುಗಳನ್ನು ಒಡ್ಡುತ್ತಾರೆ ಹಾಡುಗಳಲ್ಲಿ ನಿಯತವಾಗಿ ಕಂಡು ಬರುವ ಅನುಪಲ್ಲವಿ ೧೩ನೆಯ ಶತಮಾನದಷ್ಟು ಹಿಂದಿನದಲ್ಲ ಎಂಬ ಸಂದೇಹದೊಂದಿಗೆ ನರಹರಿತಿ ರ್ಥರನ್ನು ಸ್ತುತಿಸುವ ಪುರಂದರದಾಸರು ಇತರ ವಿಷಯಗಳನ್ನು ಪ್ರಸ್ತಾಪ ಮಾಡಿದರೂ ನರಹರಿತೀರ್ಥರ ಕನ್ನಡ ರಚನೆಯ ಬಗ್ಗೆ ದಿವ್ಯ ಮೌನತಳೆದಿರುವುದು ಬಿಡಿಸಲಾರದ ಒಗಟಾಗಿದೆ ಕೆಲವರಿಗೆ ಮುಪ್ಪಿನ ಕಾಲದಲ್ಲಿ ಕಳಿಂಗ ರಾಜ್ಯದಿಂದ ಉಡುಪಿಗೆ ಬಂದು ಪದ್ಮನಾಭತೀರ್ಥರು ವೃಂದಾವನಸ್ಥರಾದ ಮೇಲೆ ಸಂಸ್ಥಾನದ ಆದಿಪತ್ಯವಹಿಸಿಕೊಂಡ ನರಹರಿತೀರ್ಥರು ಕನ್ನಡ ಕಲಿತು ಕೃತಿ ರಚಿಸಿದರೆಂಬುದೇ ನಂಬಲಾಗದ ಸಂಗತಿ ಒಪ್ಪಿ ಅದು ಸಾಧ್ಯವೆಂದುಕೊಂಡರೂ ಕೆಲವೇ ಕೃತಿಗಳಿಗೆ ತೃಪ್ತರಾದುದು ಆಶ್ಚರ್ಯಕರವೆನ್ನಿಸುತ್ತದೆ ಜೊತೆಗೆ ಹರಿದಾಸ ಸಾಹಿತ್ಯ ಪ್ರವರ್ತಕರನು ಸ್ತುತಿಸುವ ಶ್ಲೋಕವೊಂದರಲ್ಲಿ ನರಹರಿತೀರ್ಥರ ಹೆಸರಿಲ್ಲದಿರುವುದು ಅವರಿಗೆ ಒಂದು ದೊಡ್ಡ ಕೊರತೆಯಾಗಿ ಕಂಡಿದೆ' ಅವರ ನಂತರ ಮುಂದೆ ಒಂದು ಶತಮಾನಕಾಲ ಅಂದರೆ ಶ್ರೀಪಾದರಾಜರವರೆಗೆ ಯಾವ ಕನ್ನಡ ಹರಿದಾಸರ ಹೆಸರೂ ಇದುವರೆಗೆ ಕಂಡುಬಾರದಿರುವುದು ಅವರ ಸಂಶಯವನ್ನು ಮತ್ತಷ್ಟು ಬಲಗೊಳಿಸಿದೆ ನರಹರಿತೀರ್ಥರು ಸಂಸ್ಕೃತದಲ್ಲಿ ಉದ್ದಾಮ ಪಂಡಿತರಾಗಿದ್ದು ಹದಿನೈದು ಗ್ರಂಥಗಳನ್ನು ರಚಿಸಿದ್ದಾರೆ ಶ್ರೀ ಗೋರಬಾಳ ಹಣಮಂತರಾಯರು ತಾವು ದಕ್ಷಿಣದೇಶದ ಬ್ರಾಹ್ಮಣನೊಬ್ಬನಲ್ಲಿ ನರಹರಿತೀರ್ಥರ ಹದಿನೇಳು ರಚನೆಗಳನ್ನು ನೋಡಿರುವುದಾಗಿ ಹೇಳಿದ್ದರು ಶ್ರೀ ನರಹರಿತೀರ್ಥರ ಹೆಚ್ಚಿನ ರಚನೆಗಳು ದೊರೆಯಂದೆ, ಅಂಕಿತಗಳ ಸಮಸ್ಯೆ ನಿವಾರಣೆಯಾಗದೆ ಯಾವುದೇ ತೀರ್ಮಾನಕ್ಕೆ ಬರಲು ಸಧ್ಯಕ್ಕೆ ಸಾಧ್ಯವಿಲ್ಲ ಕನ್ನಡ ಜನಪದ ತ್ರಿಪದಿಗಳಲ್ಲಿ ಶಾಸನ ಪದ್ಯಗಳಲ್ಲಿ ಪಲ್ಲವಿ, ಅನುಪಲ್ಲವಿಗಳ ಮೂಲದ ಸುಳಿವು ದೊರೆಯುವ ಸಾಧ್ಯತೆ ಇದ್ದೆ, ಈ ಕುರಿತು ಹೆಚ್ಚಿನ ಸಂಶೋಧನೆಗಳಾದ ಹೊರತು ೧೩ನೇ ಶತಮಾನದಲ್ಲಿ ಅವುಗಳ ಅಸ್ತಿತ್ವವನ್ನು ನಿರಾಕರಿಸಲು ಸಾಧ್ಯವಿಲ್ಲ ನಮಸ್ತೇ ಶ್ರೀಪಾದರಾಜಾಯ ಎಂದು ಪ್ರಾರಂಭವಾಗುವ ಶ್ಲೋಕ ಶ್ರೀಪಾದರಾಜ ಅಥವಾ ಶ್ರೀವ್ಯಾಸರಾಜಗುರು

ಪರಂಪರೆ ಯ ನಾಲ್ಕು ಪ್ರಮುಖರಿಯೋಗಿ ಮತ್ತು ದಾಸರಿಗೆ ಸಂಬಂಧಿಸಿದ್ದು ಅದರ ರಚನಾಕಾಲವೂ ನಿರ್ದಿಷ್ಟವಾಗಿ ತಿಳಿಯದು ಹೀಗಿರುವಾಗ ಆದರಲ್ಲಿ ಹರಿದಾಸ ಸಾಹಿತ್ಯದ ಆದ್ಯಪ್ರವರ್ತಕರನ್ನು ಹೆಸರಿಸಿದ್ದಾರೆ ಅಥವಾ ಹೆಸರಿಸಿಲ್ಲ ಎಂದು ವಾದ ಮಾಡುವುದು ತಪ್ಪೇ ಆಗಬಹುದು ಆದ್ದರಿಂದ ಶ್ರೀ ನರಹರಿತೀರ್ಥರನ್ನು ಕನ್ನಡ ಹರಿದಾಸ ಸಾಹಿತ್ಯದ ಆದ್ಯಪ್ರವರ್ತಕರೆಂದು ಒಪ್ಪಿಕೊಳ್ಳುವಲ್ಲಿ ಎಷ್ಟು ಸಮಸೆಗಳು ಉದ್ಭವಿಸುವುವೋ ಅಲ್ಲಗಳೆಯುವಲ್ಲಿಯೂ ಅಷ್ಟೇ ಸಮಸ್ಯೆಗಳು ಬಂದಪ್ಪಿಕೊಳ್ಳುವವು ಎಂಬುದೇ ಈ ವೇಳೆಯ ವಾದಗಳ ತಿರುಳು

ಕೆಲ ಆರಾಧ್ಯ ಶೈವ ಬ್ರಾಹ್ಮಣರು ಹರಿದಾಸರಾಗಿ ಕೃತಿರಚಿಸಿ ಆದ್ಯರೆಂದು ಪ್ರಸಿದ್ಧರಾದರೆಂಬ ಆಖ್ಯಾಯಿಕೆ ಇದೆ ವಿದ್ವಾಂಸರಲ್ಲಿ ಕೆಲವರು ಶ್ರೀ ನರಹರಿ ತೀರ್ಥರಿಗಿಂತ ಮೊದಲು ಈ ಆದ್ಯರು ಇದ್ದಿರಬಹುದೆಂದು ಊಹಿಸುತ್ತಾರೆ ವಿಜಯದಾಸರ ಸುಳಾದಿಯಲ್ಲಿ ಉಕ್ತವಾದ ಆದ್ಯರ ಅಂಕಿತಗಳನ್ನು ಗುರುತಿಸಿದ ಶ್ರೀಗೋರಬಾಳ ಹಣಮಂತರಾಯರು ಅವರೆಲ್ಲ ಶ್ರೀ ನರಸಿಂಹತೀರ್ಥರ ಹಾಗೂ ಶ್ರೀಪಾದರಾಜರ ಮಧ್ಯೆ ಇದ್ದವರೆಂದು ಅಭಿಪ್ರಾಯ ಪಟ್ಟಿದ್ದುಂಟು ಕಪಟರಾಳ ಕೃಷ್ಣರಾಯರು ಕೆಲವು ಶಾಸನಗಳನ್ನು ಅಭ್ಯಸಿಸಿ ಆ ಆರಾಧ್ಯರೂ ಆದ್ಯರೂ ೧೫ನೇ ಶತಮಾನದ ಆರಂಭದಲ್ಲಿದ್ದರೆಂದು ಸ್ಥೂಲವಾಗಿ ನಿರ್ಧರಿಸಿದ್ದಾರೆ ಇದನ್ನು ಇಡಿಯಾಗಿ ಒಪ್ಪಿಕೊಳ್ಳಲು ಬರುವಂತಿಲ್ಲ ಆದ್ಯರ ಕೆಲವು ಉಗಾಭೋಗಗಳು ದೊರಕಿದ್ದರೂ ಅವರ ಜೀವನ ಮತ್ತಿತರ ವಿಷಯಗಳ ಬಗ್ಗೆ ಹೆಚ್ಚಿನದೇನೂ ತಿಳಿದು ಬಂದಿಲ್ಲವಾದ್ದರಿಂದ ಸದ್ಯಕ್ಕೆ ಆದ್ಯರನ್ನೂ ಕನ್ನಡ ಹರಿದಾಸಸಾಹಿತ್ಯದಲ್ಲಿ ಆದ್ಯಸ್ಥಾನಕ್ಕೆ ಭಾದ್ಯಗೊಳಿಸುವಂತಿಲ್ಲ

ಹರಿದಾಸ ಸಾಹಿತ್ಯದ ಇತಿಹಾಸವನ್ನು ಗುರತಿಸುವ ಪ್ರಯತ್ನ ಅನೇಕ ಗ್ರಂಥಗಳಲ್ಲಿ ಈಗಾಗಲೇ ಕಂಡು ಬಂದಿದೆ ಕೆಲವು ಘಟ್ಟಗಳಲ್ಲಿ ವಿಭಾಗಿಸಿಕೊಂಡು ಅಧ್ಯಯನಿಸ ವುದನ್ನು ಅಲ್ಲಿ ನಾವು ಕಾಣುತ್ತೇವೆ **ಕರ್ನಾಟಕ ಹರಿದಾಸಸಾಹಿತ್ಯ**ದಲ್ಲಿ ಆರ್ ಎಸ್ ಪಂಚಮುಖಿಯವರು ೧೨ ೧೩ ನೇ ಶತಮಾನದಿಂದ ೧೯ ನೇ ಶತಮಾನಗಳ ವರೆಗಿನ ಸಾಹಿತ್ಯವನ್ನು ನಾಲ್ಕು ಮೆಟ್ಟು ಗಳಲ್ಲಿ ಗುರುತಿಸುತ್ತಾರೆ

೧) ಶ್ರೀಮಧ್ವಾಚಾರ್ಯರೂ ಅವರ ಶಿಷ್ಯರಾದ ನರಹರಿತೀರ್ಥರೂ ಜಯತೀರ್ಥರೂ ೧೨ ೧೩ ನೆಯ ಶತಮಾನದಲ್ಲಿ ಹರಿಭಕ್ತಿ ಉಪಾಸನೆ, ಹರಿದಾಸ್ಯ ಇವೇ ಮೊದಲಾದುವುಗಳನ್ನು ಲೌಕಿಕ ವಚನಗಳಿಂದ ಜನತೆಗೋಸ್ಕರ ಉಪದೇಶಿಸಿದ್ದು

೨) ೧೩ ರಿಂದ ೧೬ನೇ ಶತಮಾನಗಳ ನಡುವೆ ಪುರದಂರದಾಸರ ಗುಂಪು ಉದಯಿಸಿ ಶ್ರೀಹರಿಯ ಮಹಿಮೆಯನ್ನು ಜಗತ್ತಿಗೆ ಸಾರಿದ್ದು

೩) ವಿಜಯದಾಸರು ಮೋಹನದಾಸರು ಜಗನ್ನಾಥದಾಸರು ಮೊದಲಾದ ದಾಸವೃಂದವು ರಚಿಸಿದ್ದು

೪) ಪ್ರಾಣೇಶರಾಯರು ಗುರುಪ್ರಾಣೇಶರಾಯರು ಮೊದಲಾದವರು ಸೃಷ್ಟಿಸಿದ್ದು

ಅವರಾದ ಮೇಲೆ ಜನರಲ್ಲಿ ಅನೇಕ ಪ್ರತಿರೋಧ ಶಕ್ತಿಗಳಿಂದ ಭಕ್ತಿ ಹರಿದಾಸ್ಯಗಳ ಬೇರುಗಳು ನೀರಿಲ್ಲದೆ ಒಣಗಿ ಬಾಡುತ್ತಿವೆ[9] ಎನ್ನುವ ಪಂಚಮುಖಿಯವರು ನಾಲ್ಕು ಮೆಟ್ಟುಗಳ ನಂತರ ದಾಸಸಾಹಿತ್ಯ ಸತ್ವಹೀನವಾದುದನ್ನು ಗುರುತಿಸುತ್ತಾರೆ ಇದನ್ನೇ ಡಾ ಎಚ್ ಕೆ ವೇದವ್ಯಾಸಾಚಾರ್ಯರು **ಕರ್ನಾಟಕದ ಹರಿದಾಸರು** ಎಂಬ ತಮ್ಮ ಸಂಶೋಧನಾ ಗ್ರಂಥದಲ್ಲಿ ಆರಂಭದ ಕಾಲ ಉನ್ನತಿಯ ಕಾಲ ವಿಸ್ತಾರಕಾಲ ಮತ್ತು ಅವನತಿಯಕಾಲ ಎಂದು ಕರೆದಿದ್ದಾರೆ ಈ ವಿಭಾಗಕ್ರಮಗಳನು ಸಮೀಕ್ಷಿಸುತ್ತಾ ಎಚ್ ತಿಪ್ಪೇರುದ್ರಸ್ವಾಮಿಯವರು ವಿಭಾಗದ ದೃಷ್ಟಿಯಿಂದ ಹೀಗೆ ನಾಲ್ಕು ಮೆಟ್ಟಿಲುಗಳನ್ನು ಮಾಡಬಹುದಾದರೂ ವಿಶಿಷ್ಟಶಕ್ತಿ ಮತ್ತು ಸಾಂಸ್ಕೃತಿಕ ಪ್ರಭಾವದ ದೃಷ್ಟಿಯಿಂದ ನೋಡಬಹುದಾದುದು ಒಂದೇ ಘಟ್ಟ ಅದೆಂದರೆ ಪುರಂದರದಾಸಯುಗ ಎಂದು ಅಭಿಪ್ರಾಯ ಪಟ್ಟಿದ್ದಾರೆ[10] ಡಾ ಕೆ ಜಿ ಶಾಸ್ತ್ರಿಯವರ ದೃಷ್ಟಿಯಲ್ಲಿ ದಾಸ್ಯಸಾಹಿತ್ಯದ ಇತಿಹಾಸದಲ್ಲಿ ಮುಖ್ಯವಾಗಿ ಎರಡೇ ಘಟ್ಟಗಳು ನರಹರಿತೀರ್ಥರಿಂದ ಪುರಂದರ ಕನಕದಾಸರವರೆಗೆ ಒಂದು ಘಟ್ಟ ವಿಜಯದಾಸರಿಂದ ನಂತರ ರಚಿತವಾದ ಸಾಹಿತ್ಯವೆಲ್ಲ ಇನ್ನೊಂದು ಘಟ್ಟ ನರಹರಿತೀರ್ಥರ ನಂತರ ಶ್ರೀಪಾದರಾಜರವರೆಗಿನ, ಪುರಂದರದಾಸರ ನಂತರ ಶ್ರೀ ರಾಘವೇಂದ್ರಸ್ವಾಮಿಗಳ ವರೆಗಿನ ಮಧ್ಯದ ಅವಧಿಗಳಲ್ಲಿ ಸಾಹಿತ್ಯ ರಚನೆಯಾದ ಬಗ್ಗೆ ಯಾವುದೇ ವಿವರಗಳು ತಿಳಿದುಬರುತ್ತಿಲ್ಲವಾದ್ದರಿಂದ ಆ ಎರಡೂ ಅವಧಿಗಳನ್ನು ಅವರು ಅಜ್ಞಾತಕಾಲಗಳೆಂದು ಕರೆಯಬಹುದೆನ್ನುತಾರೆ[11] ಕೊನೆಯ ರೀತಿಯ ವಿಭಾಗಕ್ರಮ ಹರಿದಾಸಸಾಹಿತ್ಯದ ಕೆಲವು ಗುಣ ಲಕ್ಷಣಗಳ ಮೇಲೂ ಬೆಳಕು ಬೀರಬಲ್ಲುದೆಂದು ತೋರುತ್ತದೆ ಶ್ರೀ ನರಹರಿತೀರ್ಥರು ಕನ್ನಡದಲ್ಲಿ ಕೀರ್ತನೆಗಳನ್ನು ರಚಿಸಿದ ಮೊದಲ ಹರಿದಾಸರೆಂದು ಒಮ್ಮೆ ಒಪ್ಪಿಕೊಂಡರೂ, ಅದಕ್ಕೊಂದು ಪರಂಪರೆಯನ್ನು ಹಾಕಿಕೊಟ್ಟ ಶ್ರೇಯಸ್ಸು ಶ್ರೀಪಾದರಾಜರಿಗೆ ಸಲ್ಲುತ್ತದೆ ಶ್ರೀಪಾದರಾಜರಿಂದ ಪ್ರಾರಂಭವಾದ ಪರಂಪರೆ ಮುಂದೆ ಪುರಂದರ ದಾಸರವರೆಗೂ ಅವ್ಯಾಹತವಾಗಿ ಸಾಗುತ್ತದೆ ಅವರ ನಂತರ ಕುಂಟುತ್ತದೆ ಎರಡನೆಯ ಘಟ್ಟದಲ್ಲಿ ಶ್ರೀ ರಾಘವೇಂದ್ರಸ್ವಾಮಿಗಳ ಶಿಷ್ಯರಾದ ವಿಜಯದಾಸರು ದಾಸಸಾಹಿತ್ಯವನ್ನು ಮತ್ತೆ ಪುನರುಜ್ಜೀವಿತಗೊಳಿಸುತ್ತಾರೆ ಮೊದಲನೆಯ ಘಟ್ಟದ ದಾಸರಿಗೆಲ್ಲ ಮುಖ್ಯವಾಗಿ ಹಂಪೆ ಅಥವಾ ವಿಜಯನಗರ ಪ್ರಮುಖ ಕಾರ್ಯಕ್ಷೇತ್ರವಾಗಿದ್ದರೆ ಎರಡನೆಯ ಘಟ್ಟದ ಹರಿದಾಸರಿಗೆ ರಾಯಚೂರು ಮಂತ್ರಾಲಯಗಳು ಪ್ರಮುಖ ಕೇಂದ್ರಗಳಾಗುತ್ತವೆ ಮೊದಲ ಘಟ್ಟದ ದಾಸರಿಗೆ ಪಂಢರಿಗೆಯ ವಿಠಲ ಆರಾಧ್ಯದೈವವಾಗಿದ್ದರೆ ಎರಡನೆಯ ಘಟ್ಟದ ದಾಸರಿಗೆ ತಿರುಪತಿಯ ವೆಂಕಟರಮಣ ಕೀರ್ತಿಸುವ ಮುಖ್ಯ ಮೂರ್ತಿಯಾಗುತ್ತಾನೆ ಜೊತೆಗೆ ಮೊದಲ ಹಂತದ ಮುಖ

ಹರಿದಾಸರ ಕೃತಿಗಳಲ್ಲಿ ಮಧ್ವಮತ ತತ್ತ್ವಪ್ರಚಾರಕ್ಕಿಂತ ಭಕ್ತನ ಅಂತರಂಗದ ಅಭಿವ್ಯಕ್ತಿಗೆ ಸಾಮಾಜಿಕ ಓರೆ-ಕೋರೆಗಳ ವಿಡಂಬನೆಗೆ ಹೆಚ್ಚಿನ ಆದ್ಯತೆ ದೊರಕಿದ್ದರೆ, ಎರಡನೆಯ ಹಂತದ ಹರಿದಾಸರು ಇತರ ವಿಷಯಗಳೊಂದಿಗೆ ಮತತತ್ತ್ವಗಳ ಪ್ರಚಾರಕ್ಕೆ ಹೆಚ್ಚಿನ ಲಕ್ಷ್ಯ ನೀಡಬೇಕಾಯಿತು. ವಿಜಯನಗರ ಪತನಾನಂತರದ ಹಲವು ವಿಪರ್ಯಾಸಗಳಿಂದಾಗಿ ಮತ್ತು ವಿಷಯ ಲೋಲುಪತೆಯಿಂದಾಗಿ ಶ್ರೀಹರಿಯ ಉಪಾಸನೆಯನ್ನು ಮರೆತಿದ್ದ ಜನರಿಗೆ ಮಧ್ವಮತ ತತ್ತ್ವಗಳನು ಅವರಿಗೆ ತಿಳಿಯುವಂತಹ ಭಾಷೆಯಲ್ಲಿ ವಿವರಿಸುವುದೂ ಅವಶ್ಯಕವಾಯಿತು. ಈ ಕಾರಣಕ್ಕಾಗಿಯೇ ಎರಡನೆಯ ಘಟ್ಟದ ಸಾಹಿತ್ಯದಲ್ಲಿ ಒಟ್ಟಾರೆ ಶಾಸ್ತ್ರಾಂಶ ಹೆಚ್ಚಾಗಿ ಕಾವ್ಯಾಂಶ ಕಡಿಮೆಯಾಯಿತು. ಅಧ್ಯಯನದ ಅನುಕೂಲಕ್ಕಾಗಿ ಈ ಮೇಲಿನ ರೀತಿಯ ವಿಭಜನೆಗಳೇ ಹೊರತಾಗಿ ದಾಸಸಾಹಿತ್ಯ ಇಡಿಯಾಗಿ ಒಂದೇ. ಅದು ಬೆಳೆದು ಬಂದದ್ದು ಹೆಚ್ಚು ಕಡಿಮೆ **ಗುರು ಶಿಷ್ಯ** ಸಂಬಂಧದ ದಾಸಪರಂಪರೆಯಲ್ಲಿ. ಜನವಾಣಿಯನ್ನೇ ಸಾಹಿತ್ಯವಾಣಿಯಾಗಿಸಿದ್ದರಿಂದ ಸಮಾಜದ ಮೇಲೆ ಸಾಹಿತ್ಯದ ಮೇಲೆ ಅದು ಬೀರಿದ ಪರಿಣಾಮ ಗಮನಾರ್ಹವಾದುದು. ಇಂಥ ಸಂದರ್ಭಗಳಲ್ಲೆಲ್ಲ ದಾಸಸಾಹಿತ್ಯದ ಒಟ್ಟು ಪರಿಣಾಮ ಪ್ರಭಾವಗಳು ಸಂದೇಶಗಳು ಮುಖ್ಯವಾಗುತ್ತವೆ.

ಶರಣರ ವಚನಗಳಿಗೆ ಷಟ್‌ಸ್ಥಳವಿದ್ದಂತೆ ದಾಸಕೀರ್ತನೆಗಳಿಗೆ ಮಧ್ವಸಿದ್ಧಾಂತ ಹಿನ್ನೆಲೆಯಾಗಿದೆ. ಶ್ರೀಹರಿಯೇ ಸರ್ವೋತ್ತಮ. ಜಗತ್ತು ಪಾರಮಾರ್ಥಿಕ ಸತ್ಯ ಮತ್ತು ನಿತ್ಯ. ಜೀವಗಣಗಳು ಶ್ರೀಹರಿಯ ಅನುಚರರು. ನಿತ್ಯ ತಾರತಮ್ಯವುಳ್ಳವರು. ಸ್ವರೂಪಸಂಖಾನ ಭವವೇ ಮುಕ್ತಿ. ನಿರ್ಮಲವಾದ ಭಕ್ತಿಯೇ ಮುಕ್ತಿಗೆ ಸಾಧನೆ. ಪ್ರತ್ಯಕ್ಷ ಅನುಮಾನ ಆಗಮಗಳು ಸಾಧಕ ಪ್ರಮಾಣಗಳು. ಶ್ರೀಹರಿಯು ಆಗಮ ಮಾತ್ರ ವೇದ ಸು---ಎಂಬುದು ಮಧ್ವಾಚಾರ್ಯರ ಸಿದ್ಧಾಂತ. ಹರಿದಾಸ ದೀಕ್ಷೆಯನ್ನು ಪಡೆದು ಇದೇ ಮಾರ್ಗದಲ್ಲಿ ಮುಂದುವರೆದ ದಾಸರು ತಮ್ಮ ಅನುಭವಗಳನ್ನು ಹಾಡುಗಳ ರೂಪದಲ್ಲಿ ಹಾಡಿ ಕುಣಿದಿದ್ದಾರೆ.

ಹರಿದಾಸರಾಗಬೇಕೆನ್ನುವವರು ಮತತತ್ತ್ವಗಳನ್ನು ಇತರ ಶಾಸ್ತ್ರಗಳನ್ನು ಮೊದಲು ಅಧ್ಯಯನಮಾಡಿ ಕರಗತಗೊಳಿಸಿಕೊಳ್ಳಬೇಕು. ಜೀವನದ ನಶ್ವರತೆ ಭೋಗದ ಅನುಪಯುಕ್ತತೆಗಳನ್ನು ಮನವರಿಕೆ ಮಾಡಿಕೊಳ್ಳಬೇಕು. ಹೀಗೆ ಅವರು ಯೋಗ್ಯರ ದಲ್ಲಿ ಗುರುವಿನ ಅನುಗ್ರಹಕ್ಕೆ ಪಾತ್ರರಾಗುತ್ತಾರೆ. ಗುರುವು ಶಿಷ್ಯರಿಗೆ ದೀಕ್ಷೆನೀಡಿ ಅಂಕಿತ ಸೂಚಿಸಿ ಹರಿದಾಸರ ನಾಗಿ ಮಾಡುತ್ತಾರೆ. ಹೀಗೆ ದೀಕ್ಷೆ ಪಡೆದ ಹರಿದಾಸರು ತೀರ್ಥಯಾತ್ರೆ ಗೈದು ಹಲವು ಕ್ಷೇತ್ರಗಳನ್ನು ದರ್ಶಿಸಿ ಲೋಕಾನುಭವವನ್ನು ಪಡೆದುಕೊಳ್ಳುತ್ತಾರೆ. ಅಂತರಂಗದ ಶೋಧನೆಯೊಂದಿಗೆ ಆಧ್ಯಾತ್ಮಿಕ ಸಾಧನೆಯೂ ಅವ್ಯಾಹತವಾಗಿ ಮುಂದುವರಿಯುತ್ತಲೇ ಇರುತ್ತದೆ. ಅನುಭವ ಅನುಭಾವಗಳು ಬೇರೆ ಬೇರೆ ಹಂತಗಳಲ್ಲಿದ್ದಾಗ ಭಾವತೀವ್ರತೆಯಿಂದ ಅವರು ಹಾಡಿ ಕುಣಿಯತೊಡಗುತ್ತಾರೆ. ತಮ್ಮನ್ನು ತಾವು ಅಭಿವ್ಯಕ್ತಿಗೊಳಿಸಿಕೊಳ್ಳು

ತ್ತಾರೆ ಪರಿಣಾಮವಾಗಿ ದಾಸಸಾಹಿತ್ಯ ಪರಂಪರೆಯ ನಿರ್ಮಾಣ ಆಯಿತು ದಾಸರ ರಚನೆಗಳಿಗೆ ಅವರ ಇಷ್ಟದೇವತೆಯ ಅಥವಾ ಗುರು ಕರುಣಿಸಿದ ಅಂಕಿತದ ಮುದ್ರೆ ಪ್ರಾಯಶಃ ಇರುತ್ತದೆ ಸಾಮಾನ್ಯವಾಗಿ ಸಂಸಾರಿಯಾದವ ಹರಿದಾಸನಾದರೆ ಅವನಿಗೆ ಗುರುವಿನಿಂದಲೇ ಅಂಕಿತದೊರೆಯಬೇಕು ಯತಿಯೊಬ್ಬ ಹರಿದಾಸನಾದರೆ ತನಗಿಷ್ಟವಾದ ಅಂಕಿತವನ್ನು ಇಟ್ಟುಕೊಳ್ಳಬಹುದೆಂಬುದು ಅವರ ಕೃತಿಗಳಲ್ಲಿರುವ ಅಂಕಿತದಿಂದ ತಿಳಿದು ಬರುತ್ತದೆ ಕೆಲವು ಹರಿದಾಸರಿಗೆ ಯಾವುದೋ ಹಂತದಲ್ಲಿ ಪರಮಾತ್ಮನ ಇರುವು ಸ್ಪಷ್ಟವಾಗಿ ಗೋಚರವಾಗುತ್ತದೆ ನಾನಾರೂಪಗಳಲ್ಲಿ ಭಗವಂತನ ದರ್ಶನವೂ ಆಗಬಹುದು ಆಗ ದಾಸರು ಅಪರೋಕ್ಷ ಜ್ಞಾನಿಗಳು ಎಂದೆನ್ನಿಸಿಕೊಳ್ಳುತ್ತಾರೆ ದಾಸಸಾಹಿತ್ಯದಲ್ಲಿ ಇಂಥ ಹಲವಾರು ಅಪರೋಕ್ಷ ಜ್ಞಾನಿಗಳನ್ನು ನಾವು ಕಾಣುತ್ತೇವೆ ಈ ಹಿನ್ನೆಲೆಗಳೊಂದಿಗೆ ದಾಸಸಾಹಿತ್ಯವನ್ನೀಗ ಅವಲೋಕಿಸಬಹುದು

ನರಹರಿತೀರ್ಥರನ್ನು ಬಿಟ್ಟರೆ ಮೊದಲನೆಯ ಘಟ್ಟದ ದಾಸಸಾಹಿತಿಗಳಲ್ಲಿ ಶ್ರೀಪಾದರಾಜರು ವ್ಯಾಸರಾಜರು ವಾದಿರಾಜರು ಪುರಂದರದಾಸರು ವೈಕುಂಠ ದಾಸರು ಕನಕದಾಸರು ಮುಖ್ಯ ಹರಿದಾಸರೆನ್ನಿಸಿಕೊಳ್ಳುತ್ತಾರೆ ಶ್ರೀಪಾದರಾಜರಿಂದಲೇ ಹರಿದಾಸಸಾಹಿತ್ಯ ಒಂದು ಪರಂಪರೆಯಾಗಿ ಕಾಣಿಸಿಕೊಳ್ಳತೊಡಗಿದುದನ್ನು ಈ ಹಿಂದೆಯೇ ಗಮನಿಸಲಾಗಿದೆ ಶ್ರೀಪಾದರಾಜರ ಕಾಲ ಸು ೧೪೫೦ ಶ್ರೀ ಪದ್ಮನಾಭತೀರ್ಥರ ಪೀಳಿಗೆಯ ಮಠಕ್ಕೆ ಒಂಭತ್ತನೆಯ ತಲೆಯ ಸ್ವಾಮಿಗಳು ಅವರು ತಮ್ಮ ಗುರುಗಳಾದ ಶ್ರೀಸ್ವರ್ಣವರ್ಣತೀರ್ಥರು ವೃಂದಾವನಸ್ಥರಾದ ಬಳಿಕ ಶ್ರೀರಂಗದಿಂದ ಮುಳಬಾಗಿಲಿಗೆ ಮಠವನ್ನು ಸ್ಥಳಾಂತರಿಸಿ ಅದನ್ನೊಂದು ಉನ್ನತ ವಿದ್ಯಾಕೇಂದ್ರವನ್ನಾಗಿ ಮಾಡಿದರು ಸಾಳುವ ನರಸಿಂಹನ ಗೌರವಾದರಗಳಿಗೆ ಪಾತ್ರರಾದವರು ದೇವರ ಪೂಜೆಯ ಕಾಲದಲ್ಲಿ ಕನ್ನಡ ಕೀರ್ತನೆಗಳನ್ನು ರಚಿಸಿ ಕಾಲಿಗೆ ಗೆಜ್ಜೆ ಕಟ್ಟಿಕೊಂಡು ಕುಣಿಯುತ್ತ ಹಾಡುವುದರ ಮೂಲಕ ಅವನ್ನು ಜನಪ್ರಿಯಗೊಳಿಸಿದರು ಅಷ್ಟೇ ಅಲ್ಲ ಅನೇಕ ಉತ್ತಮ ಶಿಷ್ಯರನ್ನು ನಿರ್ಮಿಸಿ ಕನ್ನಡ ಕೀರ್ತನೆಗಳಿಗೊಂದು ಪರಂಪರೆಯನ್ನು ಹಾಕಿಕೊಟ್ಟರು ಶ್ರೀರಂಗದಲ್ಲಿದ್ದಾಗ ಶ್ರೀಪಾದರಾಜರು ತಮಿಳು ಆಳ್ವಾರರ ಪ್ರಬಂಧಗಳನ್ನು ಕೇಳಿರಬಹುದು ಮುಳಬಾಗಿಲಿಗೆ ಬಂದ ನಂತರ ಶಿವಶರಣರ ವಚನಗಳನ್ನು ಅಷ್ಟೇ ಏಕೆ ಕನ್ನಡ ಕೀರ್ತನೆಗಳನೂ ಆಲಿಸಿರಬಹುದು ಆದರೆ ಪಂಡಿತರಿಂದ ಮಾನ್ಯವಾಗಿರದ ಅವಕ್ಕೆ ಸರಿಯಾದ ಸ್ಥಾನಮಾನಗಳು ದೊರೆಯದೇ ಇದ್ದಿರಲಿಕ್ಕೆ ಸಾಕು ಏಕೆಂದರೆ ಅಂತಹ ವಾಕ್ಪರಂಪರೆಯೂ ಇಲ್ಲದೇ ಹೋಗಿದ್ದಲ್ಲಿ ಶ್ರೀಪಾದರಾಜರಿಂದ ರಂಗವಿಠಲವೆಂಬ ಅಂಕಿತದಲ್ಲಿ ಕೀರ್ತನೆ ಸುಳಾದಿ ಉಗಾಭೋಗ ವೃತ್ತನಾಮ ದಂಡಕ ಇತ್ಯಾದಿ ಅನೇಕ ಪ್ರಕಾರಗಳ ರಚನೆ ಸಾಧ್ಯವಾಗುತ್ತಿತ್ತೆಂದು ಅನ್ನಿಸುವುದಿಲ್ಲ ಇವುಗಳಲ್ಲಿ ಕೆಲವನು ಶ್ರೀಪಾದರಾಜರೇ ಹುಟ್ಟುಹಾಕಿರಲೂಬಹುದು ಅನೇಕ ಬಿಡಿ

ರಚನೆಗಳನ್ನಲ್ಲದೇ ಅವರು **ಗೋಪಿಗೀತಾ ವೇಣುಗೀತಾ ಭ್ರಮರಗೀತಾ ಶ್ರೀಲಕ್ಷ್ಮೀಪ್ರಾದುರ್ಭಾವ ದಂಡಕ ರುಕ್ಮಿಣಿಸತ್ಯಭಾಮಾವಿಲಾಸ** ಮತ್ತು ಮಧ್ವನಾಮಗಳನ್ನು ರಚಿಸಿರುತ್ತಾರೆ ಪರಮನಾಸ್ತಿಕನನ್ನು ಪ್ರೇಮರಸದಲ್ಲಿ ಮುಳುಗಿಸಿ ಅವನ ಕಲ್ಲು ಹೃದಯವನ್ನು ಮೃದುಮಾಡಬಲ್ಲ ಶಕ್ತಿ ಭಕ್ತಿ ಸಾಹಿತ್ಯದ್ದು ಅಂತೆಯೇ ಪರಿಸ್ಫೂರ್ತಿ ಭಕ್ತಿಪಾರಮ್ಯ ನೀತಿಬೋಧೆ ಮತ್ತು ತತ್ತ್ವವಿಚಾರಗಳು ಇವರ ಕೃತಿಗಳಲ್ಲಿ ಕಂಡು ಬರುವ ಮುಖ್ಯ ಅಂಶಗಳು ಪದ ಲಾಲಿತ್ಯ ಅಲಂಕಾರ ಪ್ರೌಢಿಮೆ ಶೃಂಗಾರ ಶಾಂತಿ ಭಕ್ತಿರಸಗಳ ನಿರೂಪಣೆಯಿಂದ ಇವರ ಸಾಹಿತ್ಯ ಹೃದಯಂಗಮ ವಾಗಿದೆ ಶ್ರೀ ಲಕ್ಷ್ಮೀಪ್ರಾದುರ್ಭಾವ ದಂಡಕ ಪ್ರಬಂಧದಲ್ಲಿ ಮುಖ್ಯವಾಗಿ ವೀರಭಕ್ತಿರಸಗಳು ಪ್ರತಿಪಾದಿತವಾಗಿವೆ ಗೀತೆಗಳು ಗೇಯಗುಣಗಳಿಂದ ಆಕರ್ಷಕವೆನ್ನಿಸುತ್ತವೆ ಅವರ ಕಂಗಳಿದ್ಯಾತಕೊ ಕಾವೇರಿರಂಗನ ಎಂಬ ಗೀತೆ ಭಕ್ತಿ ಮತ್ತು ಗೇಯತೆಗಳಿಗಾಗಿ ಪ್ರಸಿದ್ಧವಿದೆ

ಹೀಗೆ ಸಾಹಿತ್ಯ ಸಂಗೀತ ನರ್ತನಗಳ ಮೂಲಕ ಹರಿಭಕ್ತಿಯನ್ನು ಪ್ರಚೋದಿಸಬಲ್ಲ ಸಾಹಿತ್ಯ ನಿರ್ಮಿಸಿ ತಮ್ಮನು ಮೀರಿಸಬಲ್ಲ ಶಿಷ್ಯ ಪ್ರಶಿಷ್ಯರನು ತಯಾರುಮಾಡಿ ಕನ್ನಡ ದಾಸಸಾಹಿತ್ಯಕ್ಕೆ ಪರಂಪರೆಯನ್ನು ಸ್ಥಾಪಿಸಿಕೊಟ್ಟ ಶ್ರೀ ಪಾದರಾಜರಿಗೆ ದಾಸಸಾಹಿತ್ಯದಲ್ಲಿ ಮಹತ್ವದ ಹಾಗೂ ವಿಶಿಷ್ಟವಾದ ಸ್ಥಾನವಿದೆ

ಶ್ರೀಪಾದರಾಜರ ಶಿಷ್ಯರಲ್ಲಿ ಶ್ರೀವ್ಯಾಸರಾಯರು (ಕ್ರಿ ಶ ೧೪೪೭ ೧೫೩೯) ಪ್ರಸಿದ್ಧರಾದವರು ಗುರುಹಾಕಿಕೊಟ್ಟ ಮಾರ್ಗದಲ್ಲಿ ಮುಂದುವರೆದು ಹರಿದಾಸರ ದೊಡ್ಡ ಪಡೆಯನ್ನೇ ತಯಾರು ಮಾಡಿದರೆನ್ನಬಹುದು ಇವರ ಕಾಲದಲ್ಲಿಯೇ ವ್ಯಾಸಕೂಟ ದಾಸಕೂಟಗಳು ಹುಟ್ಟಿಕೊಂಡಂತೆ ಕಾಣುತ್ತವೆ ಮಧ್ವಮತ ಪ್ರತಿ ಪಾದಕ ತರ್ಕತಾಂಡವ, ನ್ಯಾಯಾಮೃತ ತಾತ್ಪರ್ಯಚಂದ್ರಿಕಾ ಎಂಬ ಮೂರು ಗ್ರಂಥಗಳನು ಸಂಸ್ಕೃತದಲ್ಲಿ ಬರೆದು ದಾಸಕೂಟದ ಒಳವಣಿಗೆಗೆ ಕಾರಣ ರಾಗಿದ್ದಾರೆ ವೃತ್ತನಾಮ ದಲ್ಲಿ ಭಗವದ್ಗೀತೆಯನ್ನು ಸುಂದರವಾಗಿ ಅನುವಾದಿಸಿ ದ್ದಾರೆ ಸಂಸ್ಕೃತವೊಂದೇ ಶಿಷ್ಟ ಅಥವಾ ದೇವಭಾಷೆ ಎಂಬ ಕಲ್ಪನೆ ಇನ್ನೂ ಜೀವಂತ ವಾಗಿದ್ದ ಕಾಲವದು ಕನ್ನಡ ಅಥವಾ ಪ್ರಾಕೃತವನ್ನು ಆ ಮಟ್ಟಕ್ಕೇರಿಸುವ ಅಂಥ ಪ್ರಯತ್ನಗಳನು ಮಾಡುವ ಜನರನ್ನು ಕುರಿತು ಹುಬ್ಬುಗಂಟಿಕ್ಕುವ ಪಂಡಿತವರ್ಗ ಆ ಕಾಲದಲ್ಲೂ ಇದ್ದಿರಲು ಸಾಕು ಶ್ರೀಪಾದರಾಜರು ಪ್ರಾರ್ಥನಾಕಾಲಕ್ಕೆ ಬಹುಶಃ ಸೀಮಿತಗೊಳಿಸಿಕೊಂಡಿದ್ದ ಕನ್ನಡ ಕೀರ್ತನೆಗಳನ್ನು ಅವರ ತರುವಾಯದವರು ಪ್ರಾರ್ಥನಾ ಮಂದಿರದ ಹೊರಗೂ ತಂದಿದ್ದು ಕೆಲಕಾಲ ಪಂಡಿತವರ ಕಣ್ಣು ಕೆಂಪಾಗಿಸಿರುವ ಸಾಧ್ಯತೆ ಇದೆ ಸಂಸ್ಕೃತ ತಿಳಿಯದ ಸಮಾಜದ ಬಹುಪಾಲು ಜನರಿಗೆ ಪುರಾಣ ಉಪನಿಷತ್ತು, ಮಧ್ವಮತಶಾಸ್ತ್ರ ಮುಂತಾದವುಗಳ ಸಾರವನ್ನು ಅವರಿಗೆ ಅರ್ಥವಾಗುವ ಸರಳ ಕನ್ನಡದಲ್ಲಿ ತಿಳಿಸಿಹೇಳುವ ಕಾರ್ಯವನ್ನು ಹರಿದಾಸರು ಕೈಗೊಂಡರು ಈ ದಿಶೆಯಲ್ಲಿ, ಮಠಾಧಿಪತಿಗಳಾಗಿದ್ದರೂ ಸಾಮಾನ್ಯ ಜನರಿಗಾಗಿ

ಕೀರ್ತನೆಗಳನ್ನು ರಚಿಸಿಹಾಡಿ ಭಕ್ತಿಯ ಸ್ವರೂಪಗಳನ್ನು ಮನವರಿಕೆ ಮಾಡಿಕೊಟ್ಟ ಶ್ರೀಪಾದರಾಜ ವ್ಯಾಸರಾಜತೀರ್ಥರು ಕ್ರಾಂತಿಕ ರಕರೂ ವಿಶಾಲ ವ್ಯಕ್ತಿತ್ವವನುಳ್ಳವರೂ ಎನಿಸಿಕೊಳ್ಳುತ್ತಾರೆ ಏಕೆಂದರೆ, ಈ ಹಿಂದೆ ಸೂಚಿಸಿದಂತೆ ಮಠಾಧಿಪತಿಗಳಾದವರು ಸಂಸ್ಕೃತ ಹೊರತಾಗಿ ಇತರ ಭಾಷೆಗಳು ಪ್ರಾಕೃತಗಳೆಂದು ತುಚ್ಛವೆಂದು ತಿಳಿಯುತ್ತಿದ್ದ ಕಾಲವದು ಈ ಪಂಡಿತ ಯತಿವರೇಣ್ಯರಿರ್ವರೂ ಇತರ ಪಂಡಿತ ವರ್ಗದವರ ಅಸಂತೋಷಕ್ಕೆ ಕೆಲಕಾಲ ಕಾರಣರಾಗಿರಬಹುದು ಇವರು ಸಂಸ್ಕೃತದಲ್ಲಿಯೂ ಅಷ್ಟೇ ಮಹತ್ವದ ಪಾಂಡಿತ್ಯ ಪೂರ್ಣಕೃತಿಗಳನ್ನು ರಚಿಸಿರುವುದರಿಂದ ವಿರೋಧಿಗಳಿಗೆ ಇವರನ್ನು ಹತ್ತಿಕ್ಕುವುದು ಅಷ್ಟೊಂದು ಸುಲಭಸಾಧ್ಯವಾಗಿರಲಿಕ್ಕಿಲ್ಲ ಊಹೆಗಳು ಏನೇ ಇರಲಿ ಕನ್ನಡದಲ್ಲಿ ಕೀರ್ತನೆಗಳನ್ನು ರಚಿಸುವ ಕಾರ್ಯದ ಆಧ್ವರ್ಯತನವನ್ನು ಇಂಥ ಮಠಾಧೀಶರು ಕೈಕೊಂಡಿದ್ದರಿಂದಲೇ ಅದರ ಪರಿಣಾಮವು ಅಗಾಧವಾದದ್ದೂ, ಶಾಶ್ವತವಾದದ್ದೂ ಆಯಿತು

ವ್ಯಾಸರಾಯರು ವಿಜಯನಗರದ ಐವರು ಅರಸರಿಗೆ ಕುಲಗುರುವಾಗಿದ್ದರು ಶ್ರೀಕೃಷ್ಣ ಮುದ್ರಿಕೆಯಲ್ಲಿ ತಮ್ಮೆಲ್ಲ ಕೃತಿರಚನೆ ಮಾಡಿದ್ದಾರೆ ಭಗವಂತನ ಲೀಲಾವಿಲಾಸ ವರ್ಣನೆ ಭಕ್ತನಮೊರೆ ಅಂತರಂಗದ ಕಳವಳ ಮತತತ್ತ್ವಗಳ ವಿವರಣೆ ಜನತಾದೃಷ್ಟಿ ಮುಂತಾದುವುಗಳ ಜೊತೆಗೆ ಗುರುಸ್ತೋತ್ರ ಶಿಷ್ಯ ಪ್ರಶಂಸೆಗಳನ್ನೂ ಅವುಗಳಲ್ಲಿ ಕಾಣಬಹುದು ಶೈಲಿ ಪದವಿನ್ಯಾಸ ಅಲಂಕಾರಾದಿ ಪ್ರಯೋಗ ಭಾವರಸಪುಷ್ಟಿ ಮು ಂತಾದವಲ್ಲಿ ಪ್ರೌಢತ್ವವಿದೆ ಶ್ರೀಕೃಷ್ಣನ ಕೊಳಲನ್ನು ಕುರಿತು ಕೊಳಲು ನುಡಿಸು ಕಿವಿಯೊಳೆನಗೆ ಚೆಲುವ ಮೋಹನಾ ಎಂದು ಹಾಡಿರುವ ಗೀತೆ ತುಂಬಾ ಕಾವ್ಯಮಯವಾಗಿದೆ ಹರಿಸರ್ವೋತ್ತಮತ್ವವನ್ನು ಪ್ರತಿಪಾದಿಸುವಾಗ ಅಂತರಂಗದಲ್ಲಿ ಹರಿಯ ಕಾಣದವ ಹುಟ್ಟುಕುರುಡನೋ ಮುಂತಾಗಿ ನಿಂದಾಸ್ತುತಿಗೈಯುತ್ತಲೇ ಖಂಡಿತವಾದಿಗಳಾಗಿ ಕಾಣಿಸಿಕೊಂಡಿದ್ದಾರೆ ವೃತ್ತನಾಮದಲ್ಲಿ ರಚಿಸಿರುವ ಭಗವದ್ಗೀತೆ ಹದಿನೆಂಟು ಶ್ಲೋಕಗಳಲ್ಲಿ ಸಂಗ್ರಹವಾಗಿದ್ದು ಸುಲಭಗ್ರಾಹ್ಯವಾಗಿದೆ

ಶ್ರೀಪಾದರಾಜರ ಹಾಗೂ ವ್ಯಾಸರಾಜರ ಗುರು–ಶಿಷ್ಯರ ಅನ್ಯೋನ್ಯ ಸಂಬಂಧ ಅಭಿಮಾನಗಳು ದಾಸಸಾಹಿತ್ಯದ ಬೆಳವಣಿಗೆಯಲ್ಲಿ ಮಹತ್ವದ ಪಾತ್ರವಹಿಸಿರುವುದನ್ನು ಈ ಸಂದರ್ಭದಲ್ಲಿ ಉಲ್ಲೇಖಿಸಬೇಕು ಇದೇ ಮುಂದೆ ಒಂದು ಪರಂಪರೆಯಾಗಿ ಗುರುಮಹಿಮೆಯನ್ನು ಗುರುಪರಂಪರೆಯನ್ನು ಕುರಿತು ಶಿಷ್ಯನಾದವನು ಸ್ತೋತ್ರ ಮಾಡುವುದು ದಾಸಸಾಹಿತ್ಯದ ಒಂದು ಭಾಗವಾಗಿಯೇ ದಾಸರಿಂದ ದಾಸರಿಗೆ ತಲೆಮಾರಿನಿಂದ ತಲೆಮಾರಿಗೆ ಬೆಳೆದುಕೊಂಡು ಬಂದಿತು ತಮ್ಮ ಶಿಷ್ಯರ ಸಾಮರ್ಥ್ಯವನ್ನು ಕೆಲವು ಗುರುಗಳು ಕೊಂಡಾಡಿರುವುದೂ ಕಂಡು ಬರುತ್ತದೆ ಅಂತಹ ಭಾಗ್ಯವಂತರಲ್ಲಿ ಶ್ರೀವ್ಯಾಸರಾಜರೂ ಒಬ್ಬರು ಸಾಸಿರ ಜಿಹ್ವೆಗಳುಳ್ಳ ಶೇಷನೇ ಕೊಂಡಾಡಬೇಕು ವ್ಯಾಸವ ನಿರಾಯರ ಸಂನ್ಯಾಸದಿರವ ಎಂದು ಶ್ರೀಪಾದರಾಜರು

ಅಭಿಮಾನದಿಂದ ಹೇಳಿದ್ದಾರೆ ವ್ಯಾಸರಾಯರೂ ಮಹಿಮೆ ಸಾಲದೆ ಇಷ್ಟೇ ಮಹಿಮೆ ಸಾಲದೆ ಆಹಿಶಯನನ ಒಲುಮೆಯಿಂದ ಮಹಿಮೆಯೊಳೊಪ್ಪ ಶ್ರೀಪಾದ ರಾಯರ ಎಂದು ಗುರುವಿನ ಮಹಿಮಾತಿಶಯಗಳನ್ನು ಕೀರ್ತಿಸಿದ್ದಾರೆ ಇದಕ್ಕೂ ದಾಸರಿಗೆ ಶಿವಶರಣರೇ ಮೇಲ್ಪಂಕ್ತಿಯಾಗಿದ್ದಿರಬಹುದು ಆದರೂ ಅನೇಕ ಶತಮಾನಗಳ ಇತಿಹಾಸವಿರುವ ದಾಸಸಾಹಿತ್ಯದಲ್ಲಿ ನಿಚ್ಚಳವಾಗಿ ಕಾಣುವ ಸುದೀರ್ಘ ಗುರು ದಾಸಪರಂಪರೆ ಆ ಹಿಂದಿನ ಶಿವಶರಣರಲ್ಲಿ ಅದೇ ಪ್ರಮಾಣದಲ್ಲಿ ಕಾಣಬರಲು ಸಾಧ್ಯವಿಲ್ಲ ವ್ಯಾಸರಾಯರು ಮುಂದೆ ತಮ್ಮ ದೊಡ್ಡ ಶಿಷ್ಯ ಪಡೆಯನ್ನೇ ಸೃಷ್ಟಿಸಿ ದರಷ್ಟೆ ಅವರಲ್ಲಿ ದಾಸಸಾಹಿತ್ಯದಲ್ಲಿ ಅಪೂರ್ವಸಿದ್ಧಿಯ ನ್ನೇ ಸಾಧಿಸಿದ ಪುರಂದರ ದಾಸರನ್ನು ಕುರಿತು ಅವರು ದಾಸರೆಂದರೆ ಪುರಂದರದಾಸರಯ್ಯ ಎಂದು ಕೀರ್ತನೆ ಯೊಂದರಲ್ಲಿ ಕೊಂಡಾಡಿದ್ದಾರೆ ದಾಸಸಾಹಿತ್ಯದ ಒಟ್ಟು ವಿಮರ್ಶೆಯಲ್ಲಿ ಇದಕ್ಕೆ ಯಾವ ಸ್ಥಾನವಾದರೂ ದೊರೆಯಲಿ ಆದರೆ ಈ ಗುರು ವ ಹಿಮೆಗಳ ಕೀರ್ತಿಸುವಿಕೆ ಸಮರ್ಥ ಶಿಷ್ಯರ ಕೊಂಡಾಡುವಿಕೆ ಇವು ದಾಸಸಾಹಿತ್ಯದ ಇತಿಹಾಸದಲ್ಲಂತೂ ಅದರ ಒಂದು ಅವಿಭಾಜ್ಯ ಅಂಗವಾಗಿಯೇ ಬೆಳೆದುಕೊಂಡು ಬಂದಿರ ವುದನ್ನು ಗಮನಿಸ ಬಹ ದಾಗಿದೆ ಪುರಂದರದಾಸರು ಮತ್ತು ವಿಜಯದಾಸರು ವ್ಯಾಸರಾಯರ ಚರಿತ್ರೆಯನು ಪದ್ಯ ಮತ್ತು ಸುಳಾದಿಗಳಲ್ಲಿ ರಚಿಸಿದ್ದಾರೆ

ಸಾಹಿತ್ಯ ಸಂಪತ್ತಿನ ದೃಷ್ಟಿಯಿಂದ ಶ್ರೀಪಾದರಾಜರ ವ್ಯಾಸರಾಜರ ರಚನೆ ಗಳು ಬೃಹತ್ ಪ್ರಮಾಣದವು ಅಲ್ಲದಿರಬಹುದು ಆದರೆ ಅವರ ಶಿಷ್ಯರ ಕಾಲದಲ್ಲಿ ದಾಸಸಾಹಿತ್ಯ ಎಂತಹ ಮಹತ್ವದ ಔನ್ನತ್ಯದ ಸ್ಥಿತಿಗೇರಿತು ಎಂಬ ದನ್ನು ಮನ ಗಂಡರೆ ಅವರ ವ್ಯಕ್ತಿತ್ವದ ಮಹತ್ವ ನಮಗೆ ತಿಳಿಯುವುದು ಕನಕದಾಸರ ಪ್ರತಿಭೆ ಯನ್ನು ಗುರುತಿಸಿ ಕುಲಹೀನರಾಗಿದ್ದರೂ ಅವರಿಗೆ ದಾಸ ದೀಕ್ಷೆ ನೀಡಿ ಪಂಡಿತ ವರ್ಗದ ಹಾಗೂ ಮಡಿವಂತರ ವಿರೋಧವನ್ನೂ ಲೆಕ್ಕಿಸದೆ, ಶಿಷ್ಯನನು ಪ್ರೋತ್ಸಾ ಹಿಸಿದ ಧೀರರು ವ್ಯಾಸರಾಜರೆನ ಬೇಕು ಇದರಿಂದಾಗಿ ದಾಸಸಾಹಿತ್ಯ ಮತ್ತೊಬ್ಬ ಕೃತಿರಚಕನನ್ನು ಪಡೆದುಕೊಂಡಿತಲ್ಲದೇ ವಸ್ತು-ವಿಷಯ ಗಳಲ್ಲಿ ಶಾಲವೂ ಹೆಚ್ಚು ವೈವಿಧ್ಯಮಯವೂ ಆಯಿತು

ಶ್ರೀ ವಿಷ್ಣುತೀರ್ಥ ಪರಂಪರೆಯ ಶ್ರೀ ವಾಗೀಶತೀರ್ಥರ ಶಿಷ್ಯರಾದ ಶ್ರೀ ವಾದಿರಾಜರು (ಕ್ರಿ ಶ ಸು ೧೫೫೦) ವ್ಯಾಸರಾಜರ ಶಿಷ್ಯರೂ ಆಗಿದ್ದರೆಂದು ನಂಬ ಲಾಗಿದೆ ಇದಕ್ಕೆ ಪುರಂದರದಾಸರು ತಮ್ಮೊಂದು ರಚನೆಯಲ್ಲಿ ಧರೆಯೊಳು ವಿಜಯೀಂದ್ರ-ವಾದಿರಾಜರೆಂಬ ಪರಮ ಶಿಷ್ಯರ ಪಡೆದು ಮೆರೆದ ಕೀರುತಿಯ ಎಂದು ವ್ಯಾಸರಾಯರನ್ನು ಸ್ತುತಿಸಿರುವುದು ಮುಖ್ಯಕಾರಣ ಆದರೆ ವಾದಿರಾಜರು ತಾವು ವ್ಯಾಸರಾಯರ ಶಿಷ್ಯರೆಂದು ಎಲ್ಲಿಯೂ ಹೇಳಿಕೊಂಡಿಲ್ಲ ಸೋದೆಯ ಮಠದ ಸ್ವಾಮಿಗಳಾಗಿ ಘುತ್ತಮುತ್ತಲು ಪ್ರಭಾವ ಬೀರಿದವರು ಹಿರಿಯ ಕವಿ ಗಳಾದಿ ಆದರ್ಶಧರ್ಮ ಸಂಸ್ಥಾನಾಧೀಶರಾಗಿ ರಾಜನೀತಿ ಚತುರರಾಗಿ ದೀರ್ಘ

ಕಾಲಬಾಳಿದವರು ಸಕಲ ಉದ್ಗ್ರಂಥಗಳನ್ನೂ ಚತುಷ್ಷಷ್ಟಿ ಕಲೆಯನ್ನೂ ಅಭ್ಯಾಸ ಮಾಡಿರುವ ವಾದಿರಾಜರು ಸಂಸ್ಕೃತದಲ್ಲಿ ಹದಿನಾರು ಕೃತಿಗಳನ್ನು ರಚಿಸಿದ್ದಾರೆ ಕನ್ನಡದಲ್ಲಿ ವೈಕುಂಠವರ್ಣನೆ ಗುಂಡಕ್ರಿಯೆ ಸ್ವಪ್ನಪದ ಕೀಚಕವಧ ಕೇಶವನಾಮ ಲಕ್ಷ್ಮೀಶೋಭಾನೆ ಇತ್ಯಾದಿ ಖಂಡಕಾವ್ಯ ಸಾಂಗತ್ಯಕೃತಿಗಳಲ್ಲದೆ ಅನೇಕ ಕೀರ್ತನೆ ಸುಳಾದಿ ಉಗಾಭೋಗಗಳನ್ನು ರಚಿಸಿದ್ದಾರೆ ಶ್ರೀ ಮಧ್ವಾಚಾರ್ಯರ ತಾತ್ಪರ್ಯ ನಿರ್ಣಯವನ್ನು ಕನ್ನಡದಲ್ಲಿ ಬಹುಸುಂದರವಾಗಿ ಹಾಡಿರುವರು ತುಳುಭಾಷೆ ಯಲ್ಲಿಯೂ ಅನೇಕ ದೇವರ ನಾಮಗಳನ್ನು ರಚಿಸಿರುವರೆಂದು ಹೇಳುತ್ತಾರೆ ಸ್ವರ್ಣಕಾರರಿಗೆ ಕೋಟೇಶ್ವರದವರಿಗೆ ಸಮಾಜದಲ್ಲಿ ಉತ್ತಮಸ್ಥಾನ ದೊರೆಯುವಂತೆ ಮಾಡಿದ ವಾದಿರಾಜರು ಸಮಾಜ ಸುಧಾರಕರೂ ಹೌದು ಜೊತೆಗೆ ಕನ್ನಡ ಕೃತಿಗಳಲ್ಲಿ ಜನಸಾಮಾನ್ಯರ ಆಡುಮಾತುಗಳನ್ನೇ ಗ್ರಾಮ್ಯ ನುಡಿಗಟ್ಟುಗಳನ್ನೇ ವಿಶೇಷವಾಗಿ ಬಳಸಿ ಪ್ರಯೋಗಶೀಲರೆನಿಸಿಕೊಂಡಿದ್ದಾರೆ ಮಧ್ವಮತ ತತ್ತ್ವಗಳು ಎಲ್ಲರಿಗೂ ಸುಲಭವಾಗಿ ಅರ್ಥವಾಗಬೇಕು ಜನರಲ್ಲಿ ಭಕ್ತಿಮೂಡಬೇಕು ಎಂಬುದು ಅವರ ಹಂಬಲ ಅಂತೆಯೇ ಭಕ್ತಿಯುಭರವೂ ಪಾಂಡಿತ್ಯದ ಆಳವೂ ಭಾವಕ್ಕೆ ತಕ್ಕ ಭಾಷೆಯೂ ಅವರ ಕೃತಿಗಳಲ್ಲಿ ಕಂಡು ಬರುತ್ತದೆ ತರ್ಕಶುದ್ಧವಾಗಿ ತತ್ತ್ವಗಳನ್ನು ಮಂಡಿಸುವುದರಿಂದ ಸಾಹಿತ್ಯಾಂಶ ಕೆಲವೆಡೆ ಕಡಿಮೆಯಾಗಿರುವುದುಂಟು ಅಂತೆಯೇ ಇವರ ಕೃತಿಗಳನ್ನು ಶಾಸ್ತ್ರಸಾಹಿತ್ಯ ವೆಂದೂ ಕರೆಯುತ್ತಾರೆ

'ಬಿಟ್ಟೆ ಬನ್ನಿರೋ ಸಂಸಾರದ್ದೆಂಬಲವ ।
ಸೃಷ್ಟಿಗೋಡೆಯನ್ನ ಸೇರಿಸುಖಿಸಬನ್ನಿರೋ ॥

ಎಂದು ಕರೆದು ಭಕ್ತಿ ಜೀವನದತ್ತ ಸಾಮಾನ್ಯರನ್ನು ಆಕರ್ಷಿಸಲು ಪ್ರಯತ್ನಿಸುವ ವಾದಿರಾಜರು ಹಾಗೆ ಮನಸೋತವರು ತಳ್ಮೆಯಿಂದ ಅಂಥ ಸುಖ ಪಡೆಯಬೇಕೆನ್ನುತ್ತಾರೆ ಈ ಕುರಿತ ಅವರ

ತಾಳುವಿಕೆಗಿಂತ ತಪವು ಇಲ್ಲ
ಕೇಳಬಲ್ಲವರಿಗೆ ಹೇಳುವೆನುಸೊಲ್ಲ

ಎಂಬ ಕೀರ್ತನೆ ಪ್ರಸಿದ್ಧವಾಗಿದೆ ಇವರ ಮುದ್ರಿಕೆ ಹಯವದನ ವಾದಿರಾಜರನ್ನು ಮುಂದೆ ಬಂದ ವಿಜಯದಾಸ ಗೋಪಾಲದಾಸ ಮೊದಲಾದವರು ಸ್ತೋತ್ರಗೈದಿದ್ದಾರೆ

ವ್ಯಾಸರಾಯರ ಪ್ರಮುಖ ಶಿಷ್ಯರಲ್ಲಿ ವಿಜಯೀಂದ್ರರೂ ಒಬ್ಬರು ಮುಂದೆ ಇವರು ಸುರೇಂದ್ರತೀರ್ಥರ ಶಿಷ್ಯರೂ ಆದರು ಅಪ್ಪಯ್ಯ ದೀಕ್ಷಿತರನ್ನು ವಾದದಲ್ಲಿ ಸೋಲಿಸಿದ ವಿಜಯೀಂದ್ರರು ೧೦೪ ಗ್ರಂಥಗಳನ್ನು ರಚಿಸಿದ್ದಾರೆಂಬ ಪ್ರತೀತಿ ಕನ್ನಡದಲ್ಲಿ ಇವರು ಕೆಲವು ಪದ ಪದ್ಯಗಳನ್ನು ರಚಿಸಿದ್ದಾರೆನ್ನಲಾಗುತ್ತಿದ್ದರೂ ಇದುವರೆಗೆ ವ್ಯಾಸರಾಯರನ್ನು ಸ್ತುತಿಸಿರುವ ಒಂದು ಪದವು ಮಾತ್ರ ದೊರಕಿದೆ

ಪುರಂದರದಾಸರ ಮಕ್ಕಳಲ್ಲೊಬ್ಬರಾದ ಗುರು ಮಧ್ವಪತಿದಾಸರು ಇವರನ್ನು ಸ್ತೋತ್ರ ಮಾಡಿರುವರು

ದಾಸಸಾಹಿತ್ಯದಲ್ಲಿ ಪುರಂದರದಾಸರಿಗೆ ಹಿರಿಯ ಸ್ಥಾನವಿದೆ ವ್ಯಾಸರಾಯರಂತಹ ಗುರುವಿನಿಂದಲೇ ಬಾಯ್ತುಂಬ ಹೊಗಳಿಸಿಕೊಂಡ ದಾಸವರೇಣ್ಯರಿವರು ಪುರಂದರೋಪನಿಷತ್ತು ಎಂದು ಕರೆಸಿಕೊಳ್ಳುವ ಇವರ ಸಾಹಿತ್ಯ ಸಂಖ್ಯೆಯಲ್ಲೂ ಸತ್ವದಲ್ಲೂ ಮಹತ್ತಾದುದು ಕರ್ನಾಟಕ ಸಂಗೀತ ಶಾಸ್ತ್ರಕ್ಕೂ ಇವರ ಕೊಡುಗೆ ಅಪಾರ ನಾಲ್ಕುಲಕ್ಷದ ಎಪ್ಪತ್ತೈದು ಸಾವಿರ ಕೃತಿಗಳನ್ನು ರಚಿಸಿರುವೆನೆಂದು ಹೇಳಿಕೊಂಡಿರುವರಾದರೂ ಸದ್ಯಕ್ಕೆ ಸಾವಿರದ ಮೇಲೆ ದೊರೆಯುತ್ತಿವೆ ಹರಿದಾಸಸಾಹಿತ್ಯ ಭಕ್ತಿಯೊಂದಿಗೆ ಜೀವನದ ಇತರ ಮಗ್ಗಲುಗಳನ್ನೂ ಸ್ಪರ್ಶಿಸುವಂತಾದುದು ಇವರ ಅಮೃತವಾಣಿಯ ಬಲದಿಂದಲೇ ವೈಯಕ್ತಿಕ ಮತ್ತು ಸಾಮಾಜಿಕ ಮಟ್ಟದಲ್ಲಿ ಜನರ ಲೋಪ ದೋಷಗಳನು ಎತ್ತಿತೋರಿಸಿ ಭಕ್ತಿಯ ಮೂಲಕವಾಗಿಯೆ ಹೇಗೆ ವ್ಯಕ್ತಿ ಮತ್ತು ಸಮಾಜ ಶುಚಿಯಾಗಿ ಇರಬಲ್ಲದು ಎಂಬುದನ್ನು ಸಾರಿದರು ಲೌಕಿಕ ಮತ್ತು ಪರಮಾರ್ಥಗಳೆರಡನ್ನೂ ಸಾಧಿಸುವ ಅವರ ಕೀರ್ತನೆಗಳಲ್ಲಿ ಕೆಲವು ಸಾಹಿತ್ಯಕವಾಗಿಯೂ ಮೇಲ್ಮಟ್ಟದಲ್ಲಿವೆ **ಈಸಬೇಕು ಇದ್ದು ಜೈಸಬೇಕು** ಆನು ಗಾಲವು ಚಿಂತೆ ಜೀವಕೆ ತನ್ನ ಮನವು ಶ್ರೀರಂಗನೊಳ ಮೆಚ್ಚುವ ತನಕ ಮಾನವ ಜನ್ಮ ದೊಡ್ಡದು ಇದಹಾನಿ ಮಾಡಿಕೊಳ್ಳಬೇಡಿರಿ ಹ ಚ್ಚಪ್ಪಗಳಿರಾ ಹೀಗೆ ಅನೇಕ ಪದ್ಯಗಳನು ಉದಹರಿಸಬಹುದು ಸಮಾಜವನ್ನು ಕ ರಿತ ವ್ಯಂಗ್ಯ ವಿಡಂಬನೆಗಳೂ ನೇರಚುಚ್ಚುವಿಕೆ ಸಾಕಷ್ಟು ಪದಗಳಲ್ಲಿವೆ ಉದರ ವೈರಾಗ್ಯವಿದು ನಮ್ಮ ಪದುಮನಾಭನಲಿ ಲೇಶಭಕುತಿ ಇಲ್ಲ ಡೊಂಕುಬಾಲದ ನಾಯಕರೆ ನೀವೇನೂಟವ ಮಾಡಿದಿರಿ ? ಇತ್ಯಾದಿ ಹರಿನಾಮಮಹಿಮೆಯ ಗೀತೆಗಳಂತೂ ಲೆಕ್ಕವಿಲ್ಲದಷ್ಟು ಹೀಗೆ ಹರಿನಾಮಸ್ಮರಣೆ ಹರಿಗ ರುಗಳಸ್ಮರಣೆ ಸ್ತುತಿ ಅಂತರಂಗ ನಿವೇದನೆ ಕೃಷ್ಣಲೀಲೆ ಸಮಾಜವಿಮರ್ಶೆ ಸಮಾಜಬೋಧನೆ ಮುಂತಾದ ಅಂಶಗಳನ್ನು ಪುರಂದರದಾಸರ ಹಾಡುಗಳಲ್ಲಿ ಕಾಣಬಹುದು ಪುರಂದರದಾಸನ ಮ ಧ್ವಮತವು ಅವನ ಪ್ರತಿನಿತ್ಯದ ಬಾಳಿನಲ್ಲಿ ಬೆರತು ಆಚರಣೆಯಲ್ಲಿಳಿದ ಜೀವನದ ದರ್ಶನವಾಗಿತ್ತು ಅಂತೇ ಅದು ಮತವಾಗಿರಲಿಲ್ಲ ಜೀವಂತ ಶ್ರದ್ಧೆಯಾಗಿತ್ತು ಎಂಬ ಮ ಗುಳಿಯುವರ ಮಾತು ಪುರಂದರದಾಸರ ಜೀವನ ಮತ್ತು ಸಾಹಿತ್ಯಗಳಿಗೆ ಬರೆದ ಭಾಷ್ಯವ ಗಿದೆ ಕೀರ್ತನ ಪದ್ಧತಿಯ ಉದ್ಧಾರ ಮತವೈರಿಗಳ ಪರಿಹಾರ ಪಂಚಮರಲ್ಲಿ ಸಹಾನುಭೂತಿ ಪ್ರದರ್ಶನ ಕರ್ನಾಟಕ ಭಾಷೋಜ್ಜೀವನ ಸಂಗೀತ ಶಾಸ್ತ್ರದ ಉದ್ಧಾರ ಇವನ್ನು ಪುರಂದರದಾಸರು ಮಾಡಿದರೆಂದು ಬೇಲೂರು ಕೇಶವದಾಸರು ವಿಶೇಷವಾಗಿ ವರ್ಣಿಸಿದ್ದಾರೆ[೨೩] ಒಟ್ಟಿನಲ್ಲಿ ದಾಸಸಾಹಿತ್ಯಕ್ಕಷ್ಟೇ ಅಲ್ಲ ಕರ್ನಾಟಕ ಸಂಸ್ಕೃತಿಗೇ ಇವರ ಕೊಡುಗೆ ಅಗಾಧವೂ ವಿಶಿಷ್ಟವೂ ಆದುದು ಶಬ್ದ– ಅರ್ಥ ಸಂಗೀತ ಇವು ಮೂರರ ಸಾಮರಸ್ಯವೇ ಅವರ ಕೃತಿಗಳ ಜೀವಾಳ ಅವು

ಅನಾಯಾಸವಾಗಿಯೇ ಸಿದ್ಧಿಸಿ ಅವರು ಹಾಡಿದ್ದೇ ರಾಗ ಹೇಳಿದ್ದೇ ಪದಗಳಾಗಿ ಪರಿಣಮಿಸಿವೆ ಪುರಂದರದಾಸರನ್ನು ಅವರ ಗುರುಗಳು ಕೊಂಡಾಡಿರ ವಂತೆ ಮುಂದೆ ಬಂದ ಹಲವು ದಾಸರೂ ಗೌರವದಿಂದ ಸ್ಮರಿಸಿದ್ದಾರೆ ಪುರಂದರ ಗಢದ ಭೂಪರಾಗಿದ್ದು ವೈರಾಗ್ಯದಿಂದ ಎಲ್ಲವನೂ ತ್ಯಜಿಸಿ ದಿಕ್ಷೆ ಪಡೆದಿರಬಹುದಾದ ಪುರಂದರದಾಸರು ನಚ್ಚಿದ್ದು ಕೊನೆಯಲ್ಲಿ ಪುರಂದರವಿಠಲನನ್ನೆ ದರ್ಶನ ಪಡೆದಿದ್ದು ಅವನ ಅನಂತ ರೂಪಗಳನ್ನೆ ಜನತೆಗೆ ಬೋಧಿಸಿದ್ದು ಭಕ್ತಿ ಪ್ರೇಮಗಳಿಂದ ಕೂಡಿದ ಜೀವನವನ್ನೆ

ಹರಿದಾಸರು ಮುಖ್ಯವಾಗಿ ಎರಡು ಮುಖಗಳಲಿ ಸಾಹಿತ್ಯ ನಿರ್ಮಾಣ ಮಾಡಿರುವುದನ್ನು ನಾವು ಗಮನಿಸುತ್ತೇವೆ ಅದರಲ್ಲಿ ಒಂದು ತಮ್ಮ ಮತ್ತು ಭಗವಂತನ ಸಂಬಂಧವನು ಕುರಿತ ನಾನಾರೀತಿಯಲ್ಲಿ ವರ್ಣಿಸಿರುವುದು ಭಕ್ತ–ಭಗವಂತರ ನಡುವಿನ ಪಂಚವಿಧ ಭಕ್ತಿಗಳೂ ಅಲ್ಲಿ ಗೋಚರಿಸಬಹುದು ಭಕ್ತನ ಅಂತರಂಗದ ಕಳವಳ ಬೇಗುದಿ ಆಸೆ–ನಿರಾಸೆ ತೃಪ್ತಿ ಇತ್ಯಾದಿಗಳಿಗೆ ಸಂಬಂಧಪಟ್ಟ ಹಲವಾರು ಸಂಚಾರೀಭಾವಗಳು ಪರಿಣಾಮಕಾರಿಯಾಗಿ ತೋಡಿಕೊಳ್ಳಲ್ಪಟ್ಟಿರುವುದನ್ನು ಕಾಣುತ್ತೇವೆ ಇನ್ನೊಂದು ತಮಗೂ ಸಮಾಜಕ್ಕೂ ಇರುವ ಸಂಬಂಧ ಇದನ್ನು ನಾವು ಕೆಲವು ಪ್ರಮುಖ ಹರಿದಾಸರ ಕೃತಿಗಳಲಿ ಕಾಣಬಹುದು ತಮ್ಮ ಸುತ್ತಮುತ್ತಲಿನ ಸಮಾಜದ ವಿಮರ್ಶೆಯನ್ನು ಮಾಡುತ್ತಾ ಭಕ್ತಿಯನು ಬೋಧಿಸಿ, ಸಮಾಜದ ಉದ್ಧಾರಕ್ಕೆ ಶ್ರಮಿಸುವುದು ಸಮಾಜವನ್ನು ಕುರಿತಾದ ಅಪಾರಕಳಕಳಿ ಮಾತಿನ ರೂಪದಲ್ಲಿ ಹೊರಬಂದಾಗ ಕೆಲವೊಮ್ಮೆ ಅದು ಉಗ್ರವಾಗಿರಬಹುದು ವ್ಯಂಗ ಮೊನಚುಗಳನ್ನು ಹೊಂದಿರಬಹುದು ಏನೇ ಇದ್ದರೂ ಸಮಾಜದ ಆರೋಗ್ಯ ವರ್ಧನೆಗೆ ಅವು ಸಹಾಯಕಾರಿ ಪುರಂದರದಾಸರಲ್ಲಿ ನಾವು ಈ ಎರಡೂ ಬಗೆಯ ಪದಗಳನ್ನು ಕಾಣುತ್ತೇವೆ ಅವರ ಮೊದಲ ಬಗೆಯ ವ್ಯಕ್ತಿನಿಷ್ಠ ಕವನಗಳಲ್ಲಿ ಭಗವಂತನ ನಾಮಸ್ಮರಣೆ ವರ್ಣನೆ ಲೀಲ ವಿನೋದಗಳು ಚಿತ್ರಿತವಾಗಿರುವುದರೊಟ್ಟಿಗೆ ತಮ್ಮ ಅಂತರಂಗದ ನೋವು ನಲಿವುಗಳನ್ನೂ ಉತ್ಕಟಭಕ್ತಿಯನ್ನು ಪ್ರಕಟಪಡಿಸಿದ್ದಾರೆ ಎರಡನೇ ಬಗೆಯ ಕವನಗಳಲ್ಲಿ ಸಾಮಾಜಿಕ ಪ್ರಜ್ಞೆ ದಟ್ಟವಾಗಿ ಮೂಡಿಬಂದಿದೆ ಸಮಕಾಲಿನ ಸಮಾಜದ ಮೂಢನಂಬಿಕೆ ಜಾತಿ ವ್ಯವಸ್ಥೆ ದುರಾಚಾರ ಮಡಿವಂತಿಕೆ ದವನ್ನು ಕಟುವಾಗಿ, ವ್ಯಂಗ್ಯವಾಗಿ ಟೀಕಿಸಲು ದಾಸರು ಹಿಂದು–ಮುಂದು ನೋಡುವುದಿಲ್ಲ ನೈತಿಕ ಮೌಲ್ಯಗಳಿಗೆ ಅವರು ಹೆಚ್ಚಿನ ಪ್ರಾಶಸ್ತ್ಯಕೊಡುತ್ತಾರೆ

ಸಾಮಾಜಿಕವಾಗಿ ಕೆಳವರ್ಗದವರಾಗಿದ್ದರೂ ದಾಸದಿಕ್ಷೆ ಪಡೆದು ಉತ್ತಮಕೃತಿಗಳನ್ನು ರಚಿಸಿ ಶ್ರೇಷ್ಠದಾಸರಲ್ಲೊಬ್ಬರಾಗಿ ಮೆರೆದ ಕನಕದಾಸರ (೧೫೦೯–೧೬೦೯) ಹೆಸರು ದಾಸಸಾಹಿತ್ಯದ ಇತಿಹಾಸದಲ್ಲಿಯೇ ವೈಶಿಷ್ಟ್ಯಪೂರ್ಣವಾದ್ದು ದಾಸರಲ್ಲಿ ಕವಿಗಳು ಎಂಬ ಪ್ರಶಸ್ತಿ ಇವರಿಗೆ ಕನಕದಾಸರ ಕೃತಿಗಳಲ್ಲಿ ರಾಮಾನುಜರ ಸ್ತುತಿಯೂ ಇರುವುದರಿಂದ ಅವರ ಮತದ ಬಗ್ಗೆ ಭಿನ್ನಾಭಿಪ್ರಾಯಗಳು ಹುಟ್ಟಿಕೊಂಡದ್ದುಂಟು

ಮುಗಳಿಯವರ ದೃಷ್ಟಿಯಲ್ಲಿ ಕನಕದಾಸರು ಯಾವೊಂದು ಮತದ ಪಡಿಯಚ್ಚಿನಲ್ಲಿ ಮಾತ್ರ ಬೆಳೆಯದೆ ಎಲ್ಲಮತದ ಸಾರಗ್ರಾಹಿಯಾದ ಪರಮಭಕ್ತರು[14] ಅಂತೆಯೇ ಯಾವುದೆ ಒಂದು ನಿರ್ದಿಷ್ಟಮತದ ಪ್ರಚಾರಕ್ಕೆ ಅವರು ತಮ್ಮನ್ನು ತೊಡಗಿಸಿಕೊಳ್ಳಲಿಲ್ಲ. ವ್ಯಾಸರಾಯರಶಿಷ್ಯರಾದ ಮೇಲೂ ಅವರು ಸಾಮಾಜಿಕವಾಗಿ ಅನೇಕ ತೊಂದರೆಗಳು ಬಂದರೂ ಎಲ್ಲವನ್ನೂ ಧೈರ್ಯವಾಗಿ ಎದುರಿಸಿದಂತೆ ತೋರುತ್ತದೆ. ಉಡುಪಿ ಕೃಷ್ಣದೇವಾಲಯದಲ್ಲಿರುವ ಕನಕನ ಕಿಂಡಿ ಇಂತಹ ಘಟನೆಯೊಂದಕ್ಕೆ ನಿದರ್ಶನವಾಗಿದ್ದಿರಬಹುದು. ಏನೇ ಇರಲಿ ವ್ಯಾಸರಾಯರ ಪ್ರೇಮ ಪುರಂದರದಾಸರ ಸ್ನೇಹ ಇವರಿಗೆ ವಿಶೇಷ ಧೈರ್ಯವನ್ನು ನೀಡಿರಬೇಕು. ಸಾಮಾಜಿಕ ಗೀತೆಗಳಲ್ಲಿ ಜನತೆಯ ಮೌಢ್ಯ, ಕಂದಾಚಾರ, ಪೊಳ್ಳುನಂಬಿಕೆ, ವರ್ಣವ್ಯವಸ್ಥೆಯ ರಕ್ಕಸನ್ನು ಖಂಡಿಸಿರುವುದು ಕಂಡು ಬರುತ್ತದೆ. ವ್ಯಾಸರಾಯರ ವಿಶಾಲ ಮನೋಭಾವ ಸಮಾಜದ ಬಗೆಗಿದ್ದ ಕಳಕಳಿ ಅವರ ಶಿಷ್ಯರಲ್ಲೂ ಹರಿದು ಬಂದು ದಾಸಸಾಹಿತ್ಯ ಸಾಮಾಜಿಕವಾಗಿ ಅರ್ಥಪೂರ್ಣವಾಗುವಂತೆ ಮಾಡಿತು ಎನ್ನಬಹುದು. ಪುರಂದರದಾಸರ ಕೀರ್ತನೆಗಳಿಗೆ ಹೋಲಿಸಿದರೆ ಕನಕದಾಸರವು ಅತ್ಯಲ್ಪ. ಆದರೆ ಸತ್ವದ ದೃಷ್ಟಿಯಲ್ಲಿ ಕಾವ್ಯಗುಣದ ಮಟ್ಟದಿಂದ ಅವು ಕಡಿಮೆಯೇನಲ್ಲ. ಕನಕದಾಸರು ಆದಿಕೇಶವ ಅಂಕಿತದಲ್ಲಿ ಅನೇಕ ಕೀರ್ತನೆಗಳನ್ನಲ್ಲದೆ **'ಹರಿಭಕ್ತಿಸಾರ,' 'ರಾಮಧಾನ್ಯ ಚರಿತ್ರೆ' 'ನಳ ಚರಿತ್ರೆ' 'ಮೋಹನ ತರಂಗಿಣಿ' 'ನೃಸಿಂಹಸ್ತವ'** ಗಳನ್ನು ರಚಿಸಿರುವರು. ಅವರ ಮುಂಡಿಗೆಗಳು ತತ್ತ್ವಗರ್ಭಿತ ಒಗಟುಗಳಾಗಿದ್ದು ಪಂಡಿತರಿಗೂ ಕೆಲವೊಮ್ಮೆ ಕ್ಲಿಷ್ಟವೆನಿಸುತ್ತವೆ. ಹರಿಭಕ್ತಿಸಾರದಲ್ಲಿ ಭಕ್ತಹೃದಯದ ನಾನಾರೀತಿಯ ಮೊರೆಯನ್ನು ಕೇಳುತ್ತೇವೆ. ರಾಮಧಾನ್ಯ ಚರಿತ್ರೆ ಕನ್ನಡ ಸಾಹಿತ್ಯದಲ್ಲಿಯೇ ವಿಶಿಷ್ಟವಾದ ಕೃತಿ. ದೇವನು ಬಡವರ ಬಂಧುವೂ ಭಕ್ತರ ಪಕ್ಷಪಾತಿಯೂ ಆಗಿರುವನೆಂಬುದನ್ನು ರಾಗಿ ಮತ್ತು ಭತ್ತ ಇವುಗಳ ಸಂವಾದದ ಮೂಲಕ ಸಾಂಕೇತಿಕವಾಗಿ ನಿರೂಪಿಸಿರುವ ರೀತಿ ಗಮನಾರ್ಹ. ನಳಚರಿತ್ರೆ ನಳದಮಯಂತಿಯರ ಕತೆಗೆ ಸಂಬಂಧಿಸಿದ್ದು. ಮೋಹನ ತರಂಗಿಣಿ ರಾಜಕೀಯಧ್ವನಿಯು ಮತ್ತು ತತ್ಕಾಲೀನ ಸಾಮಾಜಿಕ ಚಿತ್ರವುಳ್ಳ ಪೌರಾಣಿಕಕಾವ್ಯ. ವಿಜಯನಗರ ಕಾಲದ ಜನಜೀವನವನ್ನು ಪರ್ಯಾಯವಾಗಿ ಚಿತ್ರಿಸಿರುವ ಈ ಕಾವ್ಯ ಹಾಗೂ ರಾಮಧ್ಯಾನಚರಿತ್ರೆ ಸಾಂಸ್ಕೃತಿಕ ಚರಿತ್ರೆಯ ಅಭ್ಯಾಸಿಗಳಿಗೆ ಒಂದು ಬೆಲೆಯುಳ್ಳ ಆಕರಗ್ರಂಥವಾಗಬಲ್ಲದು. ಅಂತರಂಗದ ಆಳ ಭಕ್ತಿಯ ನಿರ್ಭರತೆಗಳನ್ನು ಚಿತ್ರಿಸುವ ಗೀತೆಗಳಲ್ಲಿ ತಲ್ಲಣಿಸದಿರು ಕಂಡ್ಯ, ನೀ ಮಾಯೆಯೊಳಗೋ ಮುಂತಾದುವು ಶ್ರೇಷ್ಠ ಭಾವಗೀತೆಯ ಮಟ್ಟವನ್ನು ತಲುಪುತ್ತವೆ. ಬಾಗಿಲನು ತೆರೆದು ಸೇವೆಯನು ಕೊಡು ಹರಿಯೆ, ಕುಲ ಕುಲವೆಂದು ಹೊಡೆದಾಡದಿರಿ, ಎಲ್ಲರೂ ಮಾಡುವುದು ಹೊಟ್ಟೆಗಾಗಿ ಇತ್ಯಾದಿ ಕೀರ್ತನೆಗಳಲ್ಲಿ ದೈವಭಕ್ತಿ, ಜೀವನದರ್ಶನ, ಸಮಾಜವಿಮರ್ಶೆ, ಲೋಕಾನುಭವ ಎಲ್ಲವೂ ಕಾವ್ಯಾತ್ಮಕವಾಗಿ ಹೊರ-ಹೊಮ್ಮಿವೆ. ಕನಕದಾಸರು ಜಾನಪದ ಭಾಷೆ ಹಾಗೂ ಧಾಟಿಗಳಲ್ಲಿಯೂ

ಕೆಲವು ಕೀರ್ತನೆಗಳನ್ನು ರಚಿಸಿದ್ದಾರೆ ದೇವಿ ನಮ್ಮ ದೇವರು ಬಂದರು ಬನ್ನೀರೆ ಮುಂತಾದ ಗೀತೆಗಳ ಶಬ್ದಶಕ್ತಿ ವಿಶಿಷ್ಟವಾದುದು ಕನಕದಾಸರ ಸಾಹಿತ್ಯವನ್ನು ಒಟ್ಟಾರೆ ನೋಡಿದರೆ, ವಿಶಾಲಮನೋಭಾವನೆಯು ಸ್ವತಂತ್ರ ಮನೋವೃತ್ತಿಯು ಕೆಚ್ಚೆದೆಯು ಹರಿದಾಸನೊಬ್ಬ ಆದರ ಹಿಂದಿರುವುದು ವಿದಿತವಾಗುವುದು ಕನಕದಾಸರನ್ನು ಕುರಿತು ರಂ ಶ್ರೀ ಮುಗಳಿಯವರು ಅವನ ವಾಣಿಯಲಿ ಸಹಜತೊಗಸು, ದೇಸಿಯ ಸವಿತಿರುಳು ಮೈಗೊಂಡಿವೆ ಅವನು ಮಹಾಭಕ್ತನಾದಂತೆ ಮಹಾಕವಿಯ ಸತ್ವವುಳ್ಳವನು ಅವನ ಜೀವನವೇ ಮಹಾಕೃತಿಯಾಗಿತ್ತು [15] ಎಂದು ನುಡಿದಿದ್ದಾರೆ ಪುರಂದರದಾಸರ ಜೊತೆ ಜೊತೆಗೇ ನೆನಪಿಸಿಕೊಳ್ಳಬೇಕಾದ ಹೆಸರು ಕನಕದಾಸರದ್ದು ದಾಸಸಾಹಿತ್ಯ ಸಾಹಿತ್ಯವೆನ್ನುವ ಮಟ್ಟವನ್ನು ತಲುಪಿದ್ದೇ ಈ ಇರ್ವರು ದಾಸವರ್ಯರ ಕೃತಿರಚನೆಗಳಿಂದ ಈ ದೃಷ್ಟಿಯಿಂದ ಕನಕದಾಸರ ಕೊಡುಗೆ ಅಮೂಲ್ಯವಾದದ್ದೆನ್ನಬೇಕು ಅವರ ರಚನೆಗಳಿಂದಾಗಿ ದಾಸ ಸಾಹಿತ್ಯಕ್ಕೆ ಹೊಸ ಆಯಾಮವೇ ದೊರಕಿತು ಜೊತೆಗೆ ಅವರು ಕೆಳವರ್ಗದಿಂದ ಬಂದವರೆಂಬ ದೃಷ್ಟಿಯಿಂದಲೂ ಕನಕದಾಸರ ಸಾಧನೆಗಳಿಗೆ ಹೆಚ್ಚಿನ ಮಹತ್ವ ಪ್ರಾಪ್ತವಾಗುತ್ತದೆ

ಪುರಂದರದಾಸರ ಸಮಕಾಲೀನರಲ್ಲಿ ವೈಕುಂಠ ದಾಸರೂ ಒಬ್ಬರು ಅವರು ಭಕ್ತಿರಸ ಪ್ರಧಾನವಾದ ಕೆಲವು ಪದಗಳನ್ನು ರಚಿಸಿರುವುದಾಗಿ ತಿಳಿದು ಬರುತ್ತದೆ

ಪುರಂದರದಾಸರ ನಂತರ ಸುಮಾರು ಒಂದು ಶತಮಾನದವರೆಗೆ ಹರಿದಾಸ ಸಾಹಿತ್ಯರಚನೆಯ ಬಗ್ಗೆ ಹೆಚ್ಚಿನ ವಿವರಗಳು ತಿಳಿದು ಬರುವುದಿಲ್ಲ ಪುರಂದರದಾಸರ ನಾಲ್ಕು ಜನ ಗಂಡು ಮಕ್ಕಳು ದಾಸದೀಕ್ಷೆ ಪಡೆದು ಕೀರ್ತನೆಗಳನ್ನು ರಚಿಸಿದಂತಿದೆ ಪುರಂದರದಾಸರ ಜೀವನಕ್ಕೆ ಸಂಬಂಧಪಟ್ಟ ಅನೇಕ ವಿವರಗಳನ್ನು ಮಕ್ಕಳ ರಚನೆಗಳಿಂದಲೇ ತಿಳಿದುಕೊಳ್ಳಲಾಗಿದೆ ಅವರಲ್ಲೊಬ್ಬರಾದ ಗುರು ಮಧ್ವಪತಿದಾಸರು ಹೆಚ್ಚು ಸಮರ್ಥರಿದ್ದರೆಂದು ತೋರುತ್ತದೆ ಶ್ರೀ ವಿಜಯೀಂದ್ರ ತೀರ್ಥರನ್ನು ಕುರಿತ ಅವರ ಸ್ತೋತ್ರ ಪ್ರಸಿದ್ಧವಿದೆ

ಪುರಂದರದಾಸಯುಗದ ನಂತರ ದಾಸಸಾಹಿತ್ಯ ಕೆಲಕಾಲ ಕಳೆಗುಂದಿರುವುದಕ್ಕೆ ಸಾಮಾನ್ಯವಾಗಿ ವಿಜಯನಗರ ಕಾಲದ ರಾಜಕೀಯಕಾರಣವನ್ನೂ ಅಪರೋಕ್ಷಜ್ಞಾನಿಗಳ ಅಭಾವವನ್ನೂ ಸೂಚಿಸಲಾಗುತ್ತದೆ [16] ಪುರಂದರದಾಸ ಕನಕದಾಸರಂತಹ ದಾಸಶ್ರೇಷ್ಠರು ಕೃತಿ ರಚಿಸಿ ಜನಜೀವನದ ಮೇಲೆ ಸಾಹಿತ್ಯಮೇಲೆ ಆಳವಾದ ಪರಿಣಾಮವನ್ನುಂಟು ಮಾಡಿದ ಮೇಲೆ ಸಾಮಾನ್ಯರಾದವರು ಕೃತಿರಚಿಸಿದರೆ ಅವು ಉಳಿದುಬರುವುದು ಕಷ್ಟ ಅವರ ಪ್ರಭಾವವಲಯದಿಂದ ತಪ್ಪಿಸಿಕೊಂಡು ಕೃತಿರಚಿಸುವುದೂ ಸುಲಭವಾದದ್ದಲ್ಲ ಆದ ದರಿಂದ ಆ ಕಾಲದಲ್ಲಿ ಕೃತಿರಚನೆಯಾಗಿಲ್ಲ ಎನ್ನುವುದಕ್ಕಿಂತ ಕೆಲವು ದಾಸರು ಕೃತಿರಚಿಸಿದರೂ ಅವು ಆ ಮಟ್ಟವನ್ನು ತಲುಪುವಷ್ಟು ಶ್ರೇಷ್ಠವಾದವುಗಳಲ್ಲ ಎಂದು ಭಾವಿಸುವುದು ಒಳಿತು ಜೊತೆಗೆ ಪುರಂದರದಾಸರ ಕಾಲದ ನಂತರ ರಾಜಕೀಯ ಪರಿಸ್ಥಿತಿ ಹದಗೆಟ್ಟಿದ್ದು ಮತ್ತೊಂದು ಮಹತ್ವದ ಕಾರಣವಾಗಿದೆ ಅ

ಸಾಮ್ರಾಜ್ಯ ಅಳಿದ ಮೇಲೆ ಧಾರ್ಮಿಕವಾಗಿ ಕೆಲ ಮಟ್ಟಿನ ಗೊಂದಲಗಳೂ ಕಾಣಿಸಿ ಕೊಂಡಿವೆ ಶೈವ ಶ್ರೀ ವೈಷ್ಣವ ವೀರಶೈವ ಮುಂತಾದ ಬೇರೆ ಬೇರೆ ಮತಧರ್ಮದವರು ಗ್ರಂಥಗಳನ್ನು ರಚಿಸಿ ತಮ್ಮ ಮತತತ್ತ್ವಗಳ ಪ್ರತಿಪಾದನೆಗೆ ಟೊಂಕಕಟ್ಟಿ ನಿಂತಿದ್ದು ಕಂಡುಬರುತ್ತದೆ ಆದರೆ ಪರಸ್ಪರ ಸಂಘರ್ಷದಿಂದ ತತ್ತ್ವವಿವೇಚನೆಯಲ್ಲಿ ಸ್ಥಿರತೆ ಇಲ್ಲವಾಗಿತ್ತು. ಈ ಸಂದರ್ಭದಲ್ಲಿ ದ್ವೈತ ಹಾಗೂ ವೈದಿಕ ಸಂಪ್ರದಾಯಗಳು ವಿನಾಶದ ಅಂಚನ್ನು ಸಮೀಪಿಸುತ್ತಿರುವುದನ್ನು ಗಮನಿಸಿ ಎಚ್ಚರಗೊಳ್ಳುವಂತಾಯಿತು ಮತ್ತೆ ದ್ವೈತ ಮತ ತತ್ತ್ವಗಳನ್ನು ಸಮರ್ಥಿಸುವ ಮತ್ತು ಸುಲಭ ಶೈಲಿಯಲ್ಲಿ ಪ್ರಚಾರಮಾಡುವ ಕಾರ್ಯ ಕೈಕೊಳ್ಳುವುದು ಅನಿವಾರ್ಯವೇ ಆಯಿತು ಆಪ್ರವೃತ್ತಿಗಾಗಲೀ ವಿಜಯನಗರ ಕೇಂದ್ರವಾಗಿದ್ದ ದಾಸಕೂಟ ಹೇಳ ಹೆಸರಿಲ್ಲದಂತಾಗಿತ್ತು. ಆದರೆ ಶ್ರೀ ವಿಜಯೀಂದ್ರ ತೀರ್ಥರ ಪ್ರಶಿಷ್ಯರಾದ ಶ್ರೀ ರಾಘವೇಂದ್ರ ಸ್ವಾಮಿಗಳು ಮಂತ್ರಾಲಯವನ್ನು ತಮ್ಮ ಕಾರ್ಯಕ್ಷೇತ್ರವನ್ನಾಗಿ ಮಾಡಿಕೊಂಡು ಮಧ್ವಮತತತ್ತ್ವಗಳನ್ನು ಸಮರ್ಥಿಸುವ ಹಾಗೂ ವಿವರಿಸುವ ಕಾರ್ಯ ಕೈಕೊಂಡು ಮಧ್ವಾಚಾರ್ಯರ ಗ್ರಂಥಗಳಿಗೂ ಉಪನಿಷತ್ತುಗಳು ಶ್ರೀ ವೇದವ್ಯಾಸರು ಬ್ರಹ್ಮಸೂತ್ರ ಗೀತಾದಿ ಗ್ರಂಥಗಳಿಗೂ ಸುಲಭವಾದ ಅರ್ಥಗಂಭೀರವಾದ ಟೀಕೆ ಟಿಪ್ಪಣಿ ವಿವೃತ್ತಿಗಳನೂ ಖಂಡಾರ್ಥಗಳನ್ನೂ ರಚಿಸಿದರು ಸಂಸ್ಕೃತದಲ್ಲಿ ಇನ್ನೂ ಅನೇಕ ಕೃತಿಗಳನ್ನು ರಚಿಸಿ ಮಧ್ವಸಿದ್ಧಾಂತವನ್ನು ಮತ್ತೊಮ್ಮೆ ಪ್ರತಿಪಾದಿಸಿದರೆನ್ನ ಬಹುದು ಶೈವಾದ್ವೈತ ಪಂಡಿತರಾಗಿದ್ದ ಯಜ್ಞನಾರಾಯಣದೀಕ್ಷಿತರನು ವಾದದಲ್ಲಿ ಸೋಲಿಸಿದ ಕೀರ್ತಿ ರಾಯರದ್ದು ಮಂತ್ರಾಲಯವನ್ನು ಕೇಂದ್ರವನಾ ಗಿ ಮಾಡಿಕೊಂಡು ಹರಿಭಕ್ತಿಯನ್ನು ಪ್ರಸಾರಮಾಡುವ ಮಹತ್ವದ ಕಾರ್ಯವನ್ನು ಅವರು ಕೈಕೊಂಡರು ಅವರ ಉಪದೇಶಗಳ ಪ್ರಭಾವದಿಂದಲೋ ಏನೋ ರಾಯಚೂರು ಆದವಾನಿ ಪ್ರದೇಶಗಳಲ್ಲಿ ಅನೇಕ ಹರಿದಾಸರು ಹ ಟ್ಟಿಕೊಂಡರು ಶ್ರೀ ರಾಘವೇಂದ್ರ ಸ್ವಾಮಿಗಳು ಮುಖ್ಯವಾಗಿ ಸಂಸ್ಕೃತದಲ್ಲಿ ಕೃತಿರಚನೆ ಮಾಡಿದ್ದರೂ ಕನ್ನಡದಲ್ಲಿಯೂ ಕೀರ್ತನೆಗಳನ್ನು ರಚಿಸಿದ್ದಾರೆಂದು ಹೇಳುತ್ತಾರೆ ಧೀರವೇಣುಗೋಪಾಲ ಎಂಬ ಅಂಕಿತದಲ್ಲಿ ಇಂದು ಎನಗೆ ಗೋವಿಂದ ಎಂಬ ವಿರಕ್ತಿಭಕ್ತಿ ಪೂರ್ವಕವಾದ ಹಾಡೊಂದು ದೊರೆಯುತ್ತದೆ ಕೆಲವರು ಇದು ರಾಘವೇಂದ್ರತೀರ್ಥರ ರಚನೆಯನ್ನುತ್ತಾರೆ ಧೀರವೇಣುಗೋಪಾಲ ಮುಂದ್ರಿಕೆ ವೇಣುಗೋಪಾಲ ದಾಸರದೆಂದೂ ಒಂದು ಅಭಿಪ್ರಾಯವಿದೆ[17] ಆದುದರಿಂದ ಈ ಕುರಿತು ನಿರ್ಧಾರವಾಗಿ ಏನನ್ನು ಹೇಳಲು ಸಾಧ್ಯವಿಲ್ಲದಿದ್ದರೂ ಆರ್ ಎಸ್ ಪಂಚಮುಖಿಯವರು ಅಭಿಪ್ರಾಯ ಪಟ್ಟಿರುವಂತೆ ಶ್ರೀ ರಾಘವೇಂದ್ರತೀರ್ಥರು ಪುರಂದರದಾಸರ ಗುಂಪಿಗೂ ವಿಜಯದಾಸಾದಿ ಹರಿಭಕ್ತರ ಗುಂಪಿಗೂ ಮಧ್ಯವರ್ತಿಗಳಾಗಿದ್ದು ಪರಂಪರೆಯಿಂದ ಬಂದ ದಾಸ–ವ್ಯಾಸ ಕೂಟಗಳ ತಿರುಳನ್ನು ಮುಂದಿನಭಕ್ತ ವೃಂದಕ್ಕೆ ನೀಡುವ ಜೀವನಳಿಕೆಯಂತಿದ್ದರು[18] ಎಂದು ಧಾರಾಳವಾಗಿ ಹೇಳಬಹುದು ಆದುದರಿಂದ ರಾಘವೇಂದ್ರತೀರ್ಥರ ನಂತರದಲ್ಲಿ ಬಂದ

ಹರಿದಾಸರಂಗಳೆಲ್ಲ ದಾಸ ಸಾಹಿತ್ಯದ ಎರಡನೆಯ ಘಟ್ಟಕ್ಕೆ ಸೇರಿದವರಾಗುತ್ತಾರೆ ಈ ಘಟ್ಟದಲ್ಲಿ ವಿಜಯದಾಸರು ನರಸಿಂಹದಾಸರು ಜಗನ್ನಾಥದಾಸರು ಪಂಗನಾಮದ ತಿಮ್ಮಣ್ಣದಾಸರು ವ್ಯಾಸತತ್ತ್ವ ತೀರ್ಥರು ಹೆಳವನಕಟ್ಟೆಗಿರಿಯಮ್ಮ ಮುಂತಾದ ಇವರೆಲ್ಲ ಹೆಚ್ಚು ಕಡಿಮೆ ಒಂದೇ ಕಾಲದಲ್ಲಿದ್ದವರು ಈ ಕಾಲಕ್ಕಾಗಲೇ ಪಂಡರಿಗೆ ಮಹಾರಾಷ್ಟ್ರದ ಸಂತರ ಕೈಗೆ ಸೇರಿಹೋಗಿತ್ತು ಅ ತೆಯೇ ಹರಿದಾಸರಿಗೆ ಪಾಂಡುರಂಗ ವಿಠಲದರ್ಶನ ಮೊದಲಿನಂತೆ ಸುಲಭಸಾಧ್ಯವಾಗದಾಯಿತು ಅನಿವಾರ್ಯ ವಾಗಿ ಅವರು ತಮ್ಮ ಹರಿಭಕ್ತಿ ಉಪಾಸನೆಗಳನ್ನು ವಿಠಲನಿಂದ ತಿರುಪತಿಯತಿಮ್ಮಪ್ಪನ ಕಡೆಗೆ ತಿರುಗಿಸಿದರೇನೊ ಅಂತೆಯೇ ಅವರ ಕೃತಿಗಳಲ್ಲಿ ವಿಠಲನಿಗಿಂತ ತಿಮ್ಮಪ್ಪ ಹೆಚ್ಚು ವರ್ಣಿತನಾದ ಆದರೆ ಗಮನಿಸಬೇಕಾದ ಒಂದು ಅಂಶವೆಂದರೆ ಈ ಘಟ್ಟದ ಅನೇಕ ದಾಸರಿಗೆ ಅಂಕಿತವು ಪಂಡರಿಗೆಯ ಶ್ರೀವಿಠಲನ ಅನುಗ್ರಹದಿಂದಲೇ ದೊರಕಿದೆಎಂಬ ದು ಉದಾಹರಣೆಗೆ ಜಗನ್ನಾಥ ದಾಸರಿಗೆವಿಠಲನ ಅಂಕಿತದೊರಕಿದ್ದರೂ ಅವರು ವೆಂಕಟೇಶ ನನ್ನು ಕುರಿತೇ ಹೆಚ್ಚು ಕೀರ್ತನೆಗಳನ್ನು ರಚಿಸಿರುವುದು ಕಂಡುಬರುತ್ತದೆ

ಎರಡನೆಯ ಘಟ್ಟದ ಹರಿದಾಸರಲ್ಲಿ ಶ್ರೀ ವಿಜಯದಾಸರ(ಕ್ರಿಶ೧೬೮೭ ೧೭೫೫) ಸ್ಥಾನ ಹಿರಿದಾದುದು ದಾಸಸಂಪ್ರದಾಯವನ್ನು ಪುನರುಜ್ಜೀವನಗೊಳಿಸಿದವರೆಂಬ ಕೀರ್ತಿ ಅವರದ್ದು ಸಮಕಾಲೀನ ದಾಸರಾದ ಗೋಪಾಲದಾಸರು ಮೋಹನ ದಾಸರು ಜಗನ್ನಾಥದಾಸರು ಮೊದಲಾದವರ ಗುರುಸ್ತುತಿಗಳಿಂದ ನಮಗೆ ಅವರ ಜೀವನ ವಿಷಯಗಳ ಬಗ್ಗೆ ಕೆಲವು ವಿವರಗಳು ದೊರೆಯುತ್ತವೆ ಆವುಗಳ ವಿವರಗಳು ಇಲ್ಲಿ ಅನವಶ್ಯಕವಾಗಿದ್ದರೂ ಬಡತನದ ಬೇಗೆಯಲ್ಲಿ ಬೆಂದು ಮನೆ ಬಿಟ್ಟು ಕಾಶಿಗೆ ಹೋಗಿ ಅಲ್ಲಿ ನೆಲಸಿದ್ದಾಗ ಸ್ವಪ್ನದಲಿ ಪುರಂದರ ದಾಸರಿಂದ ದೀಕ್ಷೆ ಪಡೆದ ವಿಷಯ ಮಹತ್ವದ್ದೆನಿಸುತ್ತದೆ ಮು ಂದೆ ವಿಜಯ ದಾಸರು ಪುರಂದರದಾಸರ ಮೇಲ್ಪಂಕ್ತಿಯನ್ನೇ ಅನುಸರಿಸಿ ಇಪ್ಪತ್ತೈದುಸಾವಿರ ಪದ ಸುಳಾದಿ ಉಗಾಭೋಗಗಳನ್ನು ರಚಿಸಿದರು ಪುರಂದರದಾಸರ ಕೃತಿಗಳಿಗೆ ತಮ್ಮ ಕೃತಿಗಳನ್ನೂ ಸೇರಿಸಿ ಐದುಲಕ್ಷಸಂಖ್ಯೆಯನು ಪೂರ್ತಿಮಾಡಿದರೆಂದು ಹೇಳಲಾಗುತ್ತದೆ ಪುರಂದರ ದಾಸರ ಬಗ್ಗೆ ತಮಗಿರುವ ಭಕ್ತಿಗೌರವಗಳನ್ನು ಅನೇಕ ಪದಗಳಲ್ಲಿ ವ್ಯಕ್ತಪಡಿಸಿದ್ದಾರೆ ದಾಸರಭಾಗ್ಯವಿದು ಪುರಂದರದಾಸರ ಭಾಗ್ಯವಿದು ಎಂದು ಅವರನ್ನು ಕೊಂಡಾಡಿ ದಾ ರೆ ಶ್ರೀ ಮಧ್ವಾಚಾರ್ಯರ ತತ್ತ್ವ-ಸಿದ್ಧಾಂತಗಳನ್ನು ವಿಜಯದಾಸರು ತಮ್ಮ ಕೃತಿಗಳ ಮೂಲಕ ಕನ್ನಡಕ್ಕೆ ನೀಡಿದ್ದಾರೆ ಎನ್ನಹುದು ಶ್ರೀ ಹರಿಯ ಸರ್ವೋತ್ತಮತ್ವ ಹರಿಯಧ್ಯಾನ ಅವನ ಲೀಲೆ ಹರಿನಾಮ ಮತ್ತು ಹರಿದಾಸರು ಇತ್ಯಾದಿಗ ಳನ್ನು ಕುರಿತು ಅವರು ಅನೇಕ ಕೀರ್ತನೆ ಸುಳಾದಿಗಳನ್ನು ರಚಿಸಿರುವುದು ಕಂಡು ಬರು ತ್ತದೆ ತಿರುಪತಿಯ ವೆಂಕಟೇಶನನ್ನು ಕುರಿತ ಅವರ ನಿಂದಾಸ್ತುತಿ ಪ್ರಸಿದ್ಧವಾದುದು ಅಲ್ಲದೆ ಬ್ರಹ್ಮಸ್ತುತಿ ಒಂದು ಅಪೂರ್ವರಚನೆಯಾಗಿದೆ ಕೃಷ್ಣ ಗೋವುಗಳನ್ನು ಕಾದ ಪ್ರಸಂಗ ಮನೋಹರವಾಗಿ ಚಿತ್ರಿತವಾಗಿದೆ ಪುರಂದರದಾಸರ ನಂತರ ಬಂದ

ಒಬ್ಬ ಸಮರ್ಥ ಹರಿದಾಸರಾದ ಇವರು ಮುಖ್ಯತಃ ಶಾಸ್ತ್ರವಿಷಯ ಗಳನ್ನು ಕನ್ನಡ ದಲ್ಲಿ ಉಪದೇಶಿಸಲು ಪ್ರಾರಂಭಿಸಿದರು ಸ ಆದಿಯಲ್ಲಿಯೇ ಹೆಚ್ಚು ಕೃತಿ ರಚನೆ ಮಾಡಿದ್ದರಿಂದಲೋ ಏನೊ ಸುಳಾದಿದಾಸರು ಎಂದು ಹೆಸರು ಇವರಿಗೆ ಬಂದಿದೆ

ಮಧ್ವತತ್ತ್ವಸಾರಗಳನ್ನೆಲ್ಲ ಸುಳಾದಿ ಮಾಡಿ ಹಾಡಿ ದಾಸಸಾಹಿತ್ಯದ ಶಾಸ್ತ್ರ ಭಾಗವನು ಸಮೃದ್ಧಿಗೊಳಿಸಿದ್ದು ವಿಜಯದಾಸರ ಒಂದು ಸ ಧನೆಯಾದರೆ ಅನೇಕ ಶಿಷ್ಯರನ್ನು ಹರಿದಾಸರನ್ನಾಗಿಸಿ ದಾಸಕೂಟದ ಬೆಳವಣಿಗೆಗೆ ಕ ರಣರಾದುದಂ ಮತ್ತೊಂದು ಮಹತ್ವದ ಕಾರ್ಯವಾಗಿದೆ ಅವರ ಶಿಷ್ಯರಲ್ಲಿ ಗೊಪಾಲದಾಸರೂ ಒಬ್ಬರು (1728 – 1765) ಇವರಿಗೆ ವಿಜಯದಾಸರು ಗೋಪಾಲ ವಿಠಲ ಎಂಬ ಅಂಕಿತವನ್ನು ನೀಡಿದ್ದು ತಿಳಿದು ಬರ ತ್ತದೆ ಹರಿದಾಸಸಾಹಿತ್ಯದಲ್ಲೆಲ್ಲ ಹೆಚ್ಚು ಭಕ್ತಿಭರಿತವಾದ ಕ ತಿಗಳೆಂದು ಇವರ ಕೀರ್ತನೆಗಳಿಗೆ ವಿಶಿಷ್ಟ ಸ್ಥಾನ ಲಭ್ಯ ವಾಗಿದೆ ಭಕ್ತಿಯಲಿ ಬಾಗಣ್ಣ ಎಂಬ ಬಿರ ದೇ ಅವರಿಗೆ ವಿಜಯದಾಸರಿಂದ ದೊರೆತಿದೆ ಬಾಗಣ್ಣ — ಎಂಬುದು ಗೋಪಾಲದಾಸರ ಮೊದಲಿನ ಹೆಸರು ಅವರದು ನಿಷ್ಕಾಮ ಭಕ್ತಿ ಏನ ಬೇಡಲೊ ನಿನ್ನ ಬಳಿಗೆ ಬಂದು ।ನೀನಿತ್ತ ಸೌಭಾಗ್ಯ ನಿಬಿಡವಾಗಿದೆ ನನಗೆ ಎಂಬ ಪದದಲ್ಲಿ ಭಗವಂತನಲ್ಲಿ ಬೇಡದಂದದಿ ಪಾರು ಮಾಡ ಕೆಂದು ಬೇಡಿಕೊಂಡಿರುವುದು ತಿಳಿದು ಬರುತ್ತದೆ ವಿಜಯ ದಾಸರಂತೆ ಇವರೂ ದೃಢತೆಗಾಗಿ ವ ಧ್ವಮತತತ್ತ್ವಗಳನ್ನು ಭಕ್ತಿಯಲ್ಲಿ ಬೆರೆಸಿ ಮತ್ತೆ ಮತ್ತೆ ಎತ್ತಿ ಹಾಡ ಬೇಕಾಯಿತು ಆದುದರಿಂದ ಜಗತ್ ಸತ್ಯತ್ವ ಹರಿಪ ರಮ್ಯ, ಹರಿದಾಸ ತ ರತಮ್ಯ ಪಂಚಭೇದಗಳ ವಿವರಣೆ ವೈರ ಗ್ಯ ವರ್ಣನೆ ಗ ರುಸ್ತೋತ್ರಾದಿ ಗಳು ಇವರಲ್ಲಿಯೂ ವಿಶೇಷವಾಗಿ ಕಂಡು ಬರುತ್ತದೆ ಗೋಪ ಲದಾಸರು ಚಿತ್ರಕಲೆ ಯನ್ನು ಬಲ್ಲಿದವರ ಗಿದ್ದು ಆ ಮಾಧ್ಯಮವನ್ನು ತಮ್ಮ ಹರಿಭಕ್ತಿ ಸಾಧನವಾಗಿ ಬಳಸಿಕೊಂಡಿರುವುದು ಇಲ್ಲಿ ಗಮನಾರ್ಹ ಹಳೆನಕಟ್ಟಿ ಗಿರಿಯಮ್ಮನಿಗೆ ರಂಗೋಲಿ ಚಿತ್ರರಂಗವನ್ನೇ ಪ್ರತ್ಯಕ್ಷ ಮಾಡಿಕೊಟ್ಟವರು ಅವರು ತಮ್ಮ ಮೂರು ಜನ ತಮ್ಮಂದಿರಿಗೂ ದಾಸದೀಕ್ಷೆ ಕೊಟ್ಟು ಕೃತಿರಚನೆಗೆ ಪ್ರೋತ್ಸಾಹಿಸಿದರು ಜಗನ್ನಾಥ ದಾಸರ ಅಪಮೃತ್ಯುವನ್ನು ಪರಿಹರಿಸಿ ಆಯುಷ್ಯವನ್ನು ಹೆಚ್ಚಿಸಿದ್ದರೆನ್ನಲಾಗುತ್ತಿದೆ, ಜ್ಞಾನ ಭಕ್ತಿ ವೈರಾಗ್ಯಗಳನ್ನು ಅರಿತು ಅಡಗಿಸಿಕೊಂಡ ಇವರ ವ್ಯಕ್ತಿತ್ವ ಕೃತಿಗಳಲ್ಲೂ ಒಡಮೂಡಿದೆ ನಾದ ಮಾಧುರ್ಯ ಅರ್ಥಗ ಂಭೀರ್ಯ ಭಕ್ತಿಯ ಸೆಳೆತ ಗೂಢಾರ್ಥ ಭರಿತ ಭಾವಗಳ ಔನ್ನತ್ಯಗಳಿಂದ ತುಂಬಿರ ವ ಕೃತಿಗಳು ಮಾರ್ಮಿಕ ದೃಷ್ಟಾಂತ ಗಳಿಂದ ಹೆಚ್ಚು ಸುಲಭವಾಗಿ ಅರ್ಥವಾಗುವಂತಿವೆ ಹೀಗೆ ವಿಜಯ ದಾಸರ ಪ್ರಮುಖ ಶಿಷ್ಯರಲ್ಲೊಬ್ಬರಾಗಿ ಹರಿದಾಸ ಪರಂಪರೆಯ ನ್ನು ಪುನರುಜ್ಜೀವಿಸುವಲ್ಲಿ ಮಧ್ವ ಮತ ತತ್ತ್ವಗಳನ್ನು ಜನಸಾಮಾನ್ಯರಿಗೆ ತಿಳಿಯುವ ಭಾಷೆಯಲ್ಲಿ ನೀಡುವಲ್ಲಿ ಗೋಪಾಲ ದಾಸರು ಬಹುವಾಗಿ ಶ್ರಮಿಸಿದ್ದಾರೆ ಇವರ ಶಿಷ್ಯ ಪ್ರಶಿಷ್ಯರ ಬಳಗವೂ ಸಾಕಷ್ಟು

ದೊಡ್ಡದೇ ತಲ್ಲೂರ ಸ ಬ್ಬಣಾಚಾರ್ಯ ಕೊಂಡ್ಲಿ ವ ಧ್ವಾಚಾರ್ಯ ಮುಂತಾದ ವೇದಾಂತ ಪಂಡಿತರೂ ಪಂಗನಾವ ದ ತಿಮ್ಮಣ್ಣ ಮೊದಲಕ್ಕಶೇಷಪ್ಪ ಮೊದಲಾದ ರಾಜಕಾರಣಿಗಳೂ ಭಾಗಣ್ಣದಾಸರಂತಹ ಮಂತ್ರ ಮಾಟಗಾರರೂ ಗೋಪಾಲದಾಸ ರಿಂದ ದೀಕ್ಷೆ ಪಡೆದು, ಹರಿದಾಸ ಪ್ರಪಂಚದಲ್ಲಿ ಪ್ರಸಿದ್ಧರಾಗಿದ್ದಾರೆ

ಪಾಂಡಿತ್ಯದ ಅಹಮಹಿಕೆಯಿಂದ ಬೀಗುತ್ತಿದ್ದ ಜಗನ್ನಾಥದಾಸರು (೧೭೭೮–೧೮೦೯) ಮೊದ ಮೊದಲು ದಾಸಕೂಟವನು ಕನ್ನಡ ಪದಗಳನ್ನು ಬಹುಹೀನವಾಗಿ ಕಾಣುತ್ತಿದ್ದರೆಂದೂ ಸಹಿಸಲಾರದ ಉದರಬೇನೆಯ ನೆಪವಾಗಿ ವಿಜಯದಾಸ–ಗೋಪಾಲದಾಸರ ಅನುಗ್ರಹದಿಂದ ನೋವಿನಿಂದ ಪಾರಾಗಿ ದಾಸದೀಕ್ಷೆಯನ್ನು ಪಡೆದು ಮುಂದೆ ಶ್ರೇಷ್ಠ ಹರಿದಾಸರಾಗಿ ಮೆರೆದರೆಂದೂ ಹೇಳಲಾಗುತ್ತಿದೆ ಪುರಂದರದಾಸರು ವಿಜಯದಾಸರು ಗೋಪಾಲದಾಸರು ವ ತ್ತು ಜಗನ್ನಾಥದಾಸರು ಈ ನಾಲ್ವರನ್ನು ದಾಸ ಚತುಷ್ಟಯರೆಂದೂ ಕರೆಯಲಾಗುತ್ತದೆ ಜಗನ್ನಾಥ ವಿಠಲ ಅಂಕಿತದಲ್ಲಿ ಕೀರ್ತನೆ ಸುಳಾದಿ, ಉಗಾಭೋಗಗಳನ್ನಲ್ಲದೇ ಅನೇಕ ಕಾವ್ಯಗಳನ್ನೂ ರಚಿಸಿ ದಾಸ ಸಾಹಿತ್ಯಕ್ಕೆ ಇವರು ಮಹತ್ವದ ಕಾಣಿಕೆಯನ್ನು ಸಲ್ಲಿಸಿದ್ದಾರೆ ಇವರ ಬಗ್ಗೆ ರಂ ಶ್ರೀ ಮುಗಳಿಯವರು ಬರೆಯುತ್ತಾ ಪುರಂದರದಾಸ–ಕನಕದಾಸರ ತರುವಾಯ ದಾಸ ಕೂಟದಪರಂಪರೆಯನು ಉಜ್ವಲವಾಗಿ ಬೆಳಗಿಸಿದವರಲ್ಲಿ ಜಗನಾ ಥನು ಹಿರಿಯನು ಅವನಲ್ಲಿ ಸಂಸ್ಕೃತ ಪಾಂಡಿತ್ಯದೊಡನೆ ಕನ್ನಡ ಶ್ರದ್ಧೆ ಸಂಪ್ರದಾಯ ನಿಷ್ಠೆಯೊಡನೆ ವಿಶಾಲ ಮನೋಭಾವ ಅಪರೋಕ್ಷ ಜ್ಞಾನದೊಡನೆ ಭಕ್ತಿ ಬೆರೆತುಕೊಂಡಿದ ವು ಎಂದಿದ್ದಾರೆ ಹರಿಕಥಾಮೃತಸಾರ ತತ್ವಸುವ್ವಾಲಿ ಮತ್ತು ತಂತ್ರಸಾರಗಳು ಜಗನ್ನಾಥದಾಸರ ಕಾವ ಕೃತಿಗಳು ಹರಿಕಥಾಮೃತಸಾರ ಹರಿದಾಸ ವಾಙ್ಮಯ ದಲ್ಲಿಯೇ ಒಂದು ಮಹತ್ವದ ಗ್ರಂಥ ಈ ಗ್ರಂಥಕ್ಕೆ ಅನೇಕ ಟೀಕೆ–ವ್ಯಾಖ್ಯಾನ ಗಳು ಕನ್ನಡದಲ್ಲಿಯೂ ಸಂಸ್ಕೃತದಲ್ಲಿಯೂ ರಚಿತವಾಗಿವೆ ದ್ವೈತವ ತಾನಿಂಗಣ ವಾದ ಶ್ರೀಹರಿಯ ಭಕ್ತಿಯ ಸಾಧನೆ–ತಂತ್ರಗಳನ್ನು ಒಳಗೊಂಡ ಗ್ರಂಥವದು ಈ ಕೃತಿಯನ್ನು ಕುರಿತು ಬರೆಯುತ್ತಾ ಬೆಟಗೇರಿ ಕೃಷ್ಣಶರ್ಮರು ವೇದ ಆಗಮಗಳು ಉಪನಿಷತ್ತುಗಳು ಯೋಗಶಾಸ್ತ್ರ ಸ್ಮೃತಿಗಳು ಇತಿಹಾಸ–ಪುರಾಣಗಳು ಶ್ರೀಮದಾ ಚಾರ್ಯರ ತತ್ತ್ವಗ್ರಂಥಗಳು ಇವುಗಳನ್ನೆಲ್ಲ ಕೂಲಂಕಷವಾಗಿ ಅಧ್ಯಯನವಮಾಡಿ ವಿಷಯವನ್ನು ಜೀರ್ಣಿಸಿಕೊಂಡು ಅದರಿಂದ ಹೊರಬಂದ ಭಕ್ತಿರಸಾಮೃತವೇ ಹರಿ ಕಥಾಮೃತಸಾರವಾಗಿದೆ [20] ಇದು ಭಾಮಿನಿ ಷಟ್ಪದಿಯಲ್ಲಿ ೩೨ ಸಂಧಿಗಳಲ್ಲಿ ರಚಿತವಾಗಿದೆ ಒಟ್ಟಿನಲ್ಲಿ ಈ ಗ್ರಂಥದಲ್ಲಿ ತಮ್ಮ ಶಾಸ್ತ್ರಪಾಂಡಿತ್ಯವನ್ನೂ ಭಕ್ತಿಯ ವಿಶಾಲ ಹೃದಯವನ್ನೂ ಅವರು ತೆರೆದುಕೊಂಡಿದ್ದಾರೆ ಜಗನ್ನಾಥ ದಾಸರ ಹರಿಕಥಾಮೃತಸಾರ ಕ್ಕೆ ಶಾಸ್ತ್ರಗ್ರಂಥವೆಂಬ ಮಹತ್ವ ದೊರೆತು ಅದು ದ್ವೈತ ನಿಷ ವೈಷ್ಣವರಿಗೆಲ್ಲ ನಿತ್ಯಪಾರಾಯ ಣ ಗ್ರಂಥವಾಗಿದೆ ಅವರ ತತ್ತ್ವಸುವ್ವಾಲಿ ಒನಕೆನಾಡಿನ ತ್ರಿಪದಿಗಳಲ್ಲಿ ರಚಿತವಾಗಿದ್ದು ವಿಶಿಷ್ಟ ರೀತಿಯದಾಗಿದೆ ದ್ವೈತ ತತ್ತ್ವಾನುಸಾರಿಯಾದ ಹರಿಭಕ್ತಿಯನ್ನು ಮಹಿಳೆಯರಲ್ಲಿ ಪ್ರಚಾರಗೊಳಿಸಬೇಕೆಂಬ

ಉದ್ದೇಶದಿಂದ ಅದನ್ನು ಸುಪ್ವಾಲಿ ರೂಪದಲ್ಲಿ ರಚಿಸಿರಬೇಕೆಂದು ಕೆಲವರು ಊಹಿಸಿದ್ದಾರೆ ಭಕ್ತಿಯರಸದಿಂದ ಕೂಡಿದ ತ್ರಿಪದಿಗಳ ಭಾಷೆಯೂ ಜಾನಪದೀಯವಾಗಿಯೇ ಇದೆ

ಉದಾ ಉಂಡ ಉಟ್ಟದ್ದೆಲ್ಲ ರಂಗನ ಸೇವೆಯೆನ್ನಿ ಕಂಡ
ಕಂಡದ್ದು ಹರಿಪ್ರೀತಿಯೆನ್ನಿ । ಮೂರ್ಲೋಕಕ್ಕೆ
ಪಾಂಡವ ಪ್ರಿಯನೆ ದೊರೆಯೆನ್ನಿ

ತತ್ವ ಸುಪ್ವಾಲಿ ಅಪೂರ್ಣವಾಗಿರಬೇಕೆಂದು ಊಹಿಸಲಿದೆ ಕೊನೆಯಲ್ಲಿ ಫಲಶ್ರುತಿ ಇಲ್ಲದೇ ಇದ್ದಕ್ಕಿದ್ದಂತೆ ನಿಂತಿರುವುದು ಈ ಅಭಿಪ್ರಾಯಕ್ಕೆ ಬರಲು ಕಾರಣವಾಗಿದೆ

ತಂತ್ರಸಾರವನ್ನು ಜಗನ್ನಾಥದಾಸರು ಬರೆದ ಬಗ್ಗೆ ಇನ್ನೂ ಸಂಶಯವೇ ಇದೆ ಬೆಟಗೇರಿ ಕೃಷ್ಣಶರ್ಮರ ಕವಿಚರಿತೆಕಾರರ ಸಂದೇಹವನ್ನೂ ಉಲ್ಲೇಖಿಸಿ ಅದರ ಭಾಷೆ ರೀತಿಗಳು ದಾಸರ ಇತರ ಕೃತಿಗಳಿಗಿಂತ ಭಿನ್ನವಾಗಿರುವುದನ್ನು ಗಮನಿಸಿದ್ದಾರೆ ತಂತ್ರಸಾರವು ಇಪ್ಪತ್ತೇಳು ನುಡಿಗಳಲ್ಲದೆ ವಿಷ್ಣುಸ್ತುತಿ ಮತ್ತು ಮಂತ್ರಸ್ವರೂಪವನ್ನು ಒಳಗೊಂಡ ಹಾಡು ಇದು

ಜಗನ್ನಾಥದಾಸರ ರಚನೆಗಳಲ್ಲಿ ಸುಮಾರು 150 ಕೀರ್ತನೆಗಳು ಉಪಲಬ್ಧವಿದೆ ಅವುಗಳಲ್ಲಿ ಹರಿಗುರುಸ್ತುತಿ ಆಧ್ಯಾತ್ಮಿಕ ಅನುಭವಗಳು ವಿಶೇಷವಾಗಿ ಕಂಡುಬರುತ್ತವೆ ಅಪೂರ್ವ ಪದಬಂಧ ನಿರರ್ಗಳ ಶೈಲಿಯ ಓಟ ಅರ್ಥಗಾಂಭಿರ್ಯ ಸಿದ್ಧಾಂತಗಳ ಸಮರ್ಥ ಪ್ರತಿಪಾದನೆ ಇವು ಅವರ ಕೃತಿಗಳನ್ನು ಪ್ರೌಢವನ್ನಾಗಿಸಿವೆ ಜಗನ್ನಾಥದಾಸರು ಸಾಹಿತ್ಯ—ಸಂಗೀತ ಶಾಸ್ತ್ರಗಳೆರಡರಲ್ಲೂ ಪರಿಣತರು ಶಂಭೋಸುರ ಗಂಗಾಧರನೆ । ಪಾಲಿಸಂಬಾರಮಣಲಿಂಗಾ । ಎಂಬ ಪದ ರಚನೆಯ ರೀತಿ–ಸ್ವಾರಸ್ಯಗಳು ಸಂಗೀತಜ್ಞರನ್ನೂ ಉತ್ಕರ್ಷಪಡಿಸುತ್ತವೆ ಸಂಸ್ಕೃತ ಪಾಂಡಿತ್ಯ ಪ್ರದರ್ಶನ ಶೈಲಿಯಿಂದ ಹಿಡಿದ ಅಚ್ಚ ಜಾನಪದ ಶೈಲಿಯವರೆಗೆ ವಿವಿಧ ಶೈಲಿ–ಧಾಟಿಗಳಲ್ಲಿ ಅವರು ಕೃತಿಗಳನ್ನು ರಚಿಸಿರುವುದು ಕಂಡುಬರುತ್ತದೆ ಇದಕ್ಕೆ ದಾಸೋಹಂ ತವದಾಸೋಹಂ ಪಾಲಿಸೆನ್ನ ಗೋಪಾಲಕೃಷ್ಣ ಆವ ಭಯವಿಲ್ಲವೋ ಆವ ಭಯವಿಲ್ಲ ಬಲುರಮ್ಯವಾಗಿದೆ ಹರಿಯ ಮಂಚ ಶ್ರೀ ವೆಂಕಟಾಚಲನಿವಾಸಾ ನಿನ್ನ ಸೇವ ಸುಸೇವಕರ ದಾಸ ಎನಿಸಿ ಜೀವಿಸುವ ನರಗೆ ಆಯಾಸ ಯಾಕೆ ಎನ್ನಪ್ಪ ಎನ್ನಣ್ಣ ಎನಯ್ಯ ಎನ್ನರಸ ಎನಕುಲದೈವ ಸುಖದೋರೊ ಮುಂತಾದ ಹಾಡುಗಳನ್ನು ಉದಾಹರಣೆಯಾಗಿ ಕೊಡಬಹುದು ಅದಿತವರಿಗತಿ ಸುಲಭ ಹರಿಯ ಪೂಜೆ ಎಂಬ ಕೀರ್ತನೆ ಪ್ರಸಿದ್ಧವಾಗಿದ್ದು ಅದರ ಭಾಷೆ ಲಯಗಾರಿಕೆ ಅರ್ಥ ಎಲ್ಲವೂ ಉನ್ನತಮಟ್ಟದ್ದಾಗಿದೆ ವಿಶ್ವರೂಪಿ ಭಗವಂತನಿಗೆ ವಿರಾಟರೂಪದ ಪೂಜೆಯನ್ನೇ ನಿವೇದಿಸಿಕೊಳ್ಳುವಲ್ಲಿ ಜಗನ್ನಾಥದಾಸರ ಸಿದ್ಧಿಯು ಕೊನೆಯ ಹಂತವನ್ನು ಗುರುತಿಸಬಹುದಾಗಿದೆ

ವಿಜಯದಾಸರ ಶಿಷ್ಯರಲ್ಲಿ ಮೋಹನದಾಸರೂ ಒಬ್ಬರು ಇವರು ಅವರ ಸಾಕುಮಗನೂ ಹೌದು ಗುರುಕರುಣೆಗೆ ವಿಶೇಷ ಪಾತ್ರರಾದ ಮೋಹನದಾಸರು ಮೋಹನವಿಠಲ ಅಂಕಿತದಲ್ಲಿ ಕೆಲವು ಕೀರ್ತನೆಗಳನೂ ಜಾನಪದ ಶೈಲಿಯಲ್ಲಿ ಕೋಲಂಪದ ವನ್ನೂ ರಚಿಸಿರುವರು ಪಾಂಡಿತ್ಯದ ಸೋಂಕಿಲ್ಲದೇ ಬರೆಯುವ ಸುಲಭ ಶೈಲಿ ಇವರದು ಸಾಮಾನ್ಯವಾಗಿ ಎಲ್ಲ ದಾಸರಂತೆ ನಾಮಮಹಿಮೆ ಹರಿಗುರು ಗಳ ಸ್ಮರಣೆ ಸ್ತುತಿ ಅಂತರಂಗನಿವೇದನೆ ಭಾಗವತ-ಭಾರತ ಕಥೆಗಳ ವರ್ಣನೆ ಸಮಾಜ ವಿಮರ್ಶೆ ಸಮಾಜ ಬೋಧನೆಗಳನ್ನು ಮೋಹನದಾಸರ ಕೀರ್ತನೆಗಳಲ್ಲಿಯೂ ಕಾಣಬಹುದು ವಿಜಯದಾಸರ ಕೃಪೆಯಿಂದಾಗಿಯೇ ತಾವು ಬದುಕ ಳಿಯುವಂತಾದು ದರಿಂದ ಸದ್ಗುರುವಿನ ಮಹಿಮೆಯನ್ನು ಅನೇಕ ಕೀರ್ತನೆಗಳಲ್ಲಿ ವರ್ಣಿಸಿರುವುದು ಕಂಡು ಬರುತ್ತದೆ ೨೧೭ ನುಡಿಗಳಿಂದ ಕೂಡಿರ ವ ಕೋಲುಹಾಡು ಮೋಹನದಾಸರ ಮಹತ್ವದ ರಚನೆ ದೇಶೀಯ ಬಂದಸ್ಸಿನಲ್ಲಿ ಆಡುನುಡಿಯಲ್ಲಿ ರಚಿತವಾದ ಈ ಕಾವ್ಯ ಜನಪ್ರಿಯವಾದುದು ಕೃಷ್ಣಾರ್ಜುನರ ಮತ್ತು ರುಕ್ಮಿಣಿ ಸುಭದ್ರೆಯರ ಸರಸ ಸಲ್ಲಾಪ ಸ್ವಾರಸ್ಯಕರವಾಗಿ ಮೂಡಿ ಬಂದಿದೆ ಯುಕ್ತಿಯಲಿಮೋಹನ್ನ ಎಂದು ಪ್ರಸಿದ್ಧರಾಗಿರುವ ಮೋಹನದಾಸರು ಆಡುಭಾಷೆಯ ನುಡಿಗಟ್ಟು ಗಾದೆ ಇತ್ಯಾದಿ ಗಳನ್ನು ಬಳಸಿಕೊಂಡು ತಮ್ಮ ಶೈಲಿಯನ್ನು ವಿಶಿಷ್ಟಗೊಳಿಸಿಕೊಂಡಿರುವುದು ಕಂಡು ಬರುತ ದೆ ಅರಿಯದ ಊರೊಳಗೆ ಅಗಸರ ಮಾಳಿಯೇ ಮುತ್ತೈದೆ ಈಸು ಬುರುಡೆಬಿಟ್ಟು ಬಿ ಸೋಕಲ್ಲನು ಕಟ್ಟಿ ಈಸುವ ತೆರನಂತೆ ಮುಂತಾದ ನ ಣ್ನುಡಿ ಗಳನ್ನು ಅವರು ಸಹಜವೆಂಬಂತೆ ಉಪಯೋಗಿಸಬಲ್ಲರು ಹೀಗೆ ಭಕ್ತಿಯಲ್ಲಿರ ವ ಶಕ್ತಿ ಯನ್ನು ಸಮರ್ಥ ಆಡುಭ ಷೆಯಲ್ಲಿಯೇ ತೋರಿಸಿದವರು ಮೋಹನದಾಸರು

ವಿಜಯದಾಸರ ಸವ ಕಾಲೀನರಾದ ಪ್ರಸನ್ನ ವೆಂಕಟದಾಸರು ಅನೇಕ ಕೀರ್ತನೆ ಗಳನ್ನು ರಚಿಸಿದ್ದಾರೆ ಭಾಗವತದ ೧೦ನೆಯ ಸ್ಕಂಧದ ಪೂರ್ವಾರ್ಧವನ್ನು ಉತ್ತಮ ವಾಗಿ ಕನ್ನಡದಲ್ಲಿ ತಂದಿದ್ದಾರೆ ಶ್ರೀಕೃಷ್ಣನ ಬಾಲಲೀಲೆಗಳನ್ನು ಹೃದಯಂ ಗಮ ವಾಗಿ ಚಿತ್ರಿಸುವಲ್ಲಿ ಅವರು ಬಾಲಭಾಷೆಯನ್ನೇ ಬಳಸಿಕೊಂಡಿರುವುದು ಗಮನ ರ್ಹ

ಶ್ರೀವ್ಯಾಸತತ್ತ್ವಜ್ಞರು ಗೋಪಾಲದಾಸರ ಸಮಕಾಲೀನರು ಕನ್ನಡದಲ್ಲಿ ಅನೇಕ ಕೀರ್ತನೆ, ಸುಳಾದಿಗಳನ್ನು ರಚಿಸಿದ್ದಾರೆ ವಾಸುದೇವ ವಿಠಲ ಅಂಕಿತದಲ್ಲಿ ಇರುವ ಇವರ ಕೀರ್ತನೆಗಳಲ್ಲಿ ಮಧುರಭಾವ ವ್ಯಕ್ತವಾಗಿದೆ

ವಿಜಯದಾಸರ ಶಿಷ್ಯರಾಗಿ ಗೋಪಾಲದಾಸರ ಕಾಲದಲ್ಲಿಯೇ ಇದ್ದ ಹರಿದಾಸ ತಿಮ್ಮಣ್ಣನವರನ್ನು ಪಂಗನಾಮದ ತಿಮ್ಮಣ್ಣ ರೆಂದೇ ಕರೆಯುವ ರೂಢಿ ವೇಣು ಗೋಪಾಲ ವಿಠಲ ಎಂಬ ಅಂಕಿತದಲ್ಲಿ ಅನೇಕ ಪದಗಳನ್ನು ರಚಿಸಿರುವರು 'ನಿನ್ನ ನಂಬಿದ ಮೇಲೆ ಅನ್ಯರಾಶ್ರಯ ವೇಕೋ । ತಂದೆ ಗುರುವಿಜಯರಾಯಾ ಎಂದು ಗುರುಗಳನ್ನು ಸ್ತೋತ್ರ ಮಾಡಿರುವರು

ಜಗನ್ನಾಥದಾಸರ ಶಿಷ್ಯರಲ್ಲಿ ಪ್ರಾಣೇಶದಾಸರೇ ಹಿರಿಯರು ಪ್ರಾಣೇಶ

ವಿಠಲ ನೆಂಬ ಅಂಕಿತದಲ್ಲಿ ಅನೇಕ ಪದಗಳನ್ನು ರಚಿಸಿದ್ದಾರೆ ಭ್ರಮರಗೀತಾ ಮಾಯ್ಕದಪದ ಗಾಲವಚರಿತ್ರೆ ಮುಂತಾಗಿ ಹದಿನೇಳಕ್ಕೂ ಹೆಚ್ಚು ಕೃತಿಗಳು ಇವರ ಹೆಸರಿನಲ್ಲಿವೆ ಹಳಗನ್ನಡ ಶಿಷ್ಟ ಕನ್ನಡಗಳನ್ನೇ ಹೆಚ್ಚಾಗಿ ಬಳಸಿ ಕೃತಿರಚಿಸಿರುವುದು ಕಂಡುಬರುತ್ತದೆ ಗಹನವಾದ ತತ್ತ್ವಗಳನ್ನು ವಿವರಿಸಲು ಪುರಾಣ ಕಥೆಗಳನ್ನು ಆಶ್ರಯಿಸಿದ್ದರೂ ಕೆಲವೊಮ್ಮೆ ಭಾಷೆ, ತತ್ತ್ವ ಎರಡೂ ಕ್ಲಿಷ್ಟವೆನಿಸುತ್ತವೆ ಪ್ರಾಣೇಶ ದಾಸರ ಮಗ ಗುರುಪ್ರಾಣೇಶ ವಿಠಲ ಎಂಬ ಅಂಕಿತದಲ್ಲಿಯೂ ಸೋದರಳಿಯ ರಾಮದಾಸರು ಶ್ರೀಶ ಪ್ರಾಣೇಶ ವಿಠಲ ಎಂಬ ಅಂಕಿತದಲ್ಲಿಯೂ ಪದಗಳನ್ನು ಶ್ರೀದವಿಠಲ ಎಂಬ ಅಂಕಿತದಲ್ಲಿ ಕೃತಿರಚಿಸಿದ ಕರ್ಜಗಿ ದಾಸಪ್ಪನವರು ದೊಡ್ಡ ಜ್ಞಾನಿಗಳು ರಾಯರ ಮೇಲಿನ ಅವರ ಪದಗಳು ಪ್ರಸಿದ್ಧವಿದೆ

ದಾಸಕೂಟದ ಇತಿಹಾಸದಲ್ಲಿ ಅನೇಕ ಮಹಿಳೆಯರ ಹೆಸರು ಸೂಚಿತವಾಗಿರುವುದಾದರೂ ಅವರಲ್ಲಿ ಕೀರ್ತನೆಗಳನ್ನು ರಚಿಸಿದವರೆಷ್ಟು ಎಂಬುದು ಸ್ಪಷ್ಟವಾಗಿ ತಿಳಿಯ ಬರುವುದಿಲ್ಲ ಪುರಂದರದಾಸರ ಹೆಂಡತಿ ಮತ್ತು ಮಗಳು ಕೃತಿರಚಿಸಿರುವರೆಂದು ಹೇಳಲಾಗುತ್ತದೆ ನೆರೆಪುರಂದರವಿಠಲ ತಂದೆಪುರಂದರವಿಠಲ ಎಂಬ ಅಂಕಿತಗಳನ್ನೂ ಸೂಚಿಸಲಾಗಿದೆ ಆದರೆ ಈ ಕುರಿತು ಇನ್ನೂ ಹೆಚ್ಚಿನ ವಿವರಗಳು ದೊರೆತ ಹೊರತು ಏನನ್ನೂ ಹೇಳಲು ಸಾಧ್ಯವಾಗದು ಇವರನ್ನು ಬಿಟ್ಟರೆ ದಾಸಸಾಹಿತ್ಯದಲ್ಲಿ ಮಹಿಳೆಯರ ರಚನೆಗಳು ೧೮ನೇ ಶತಮಾನದಲ್ಲಿ ಕಾಣಿಸಿಕೊಳ್ಳತೊಡಗುತ್ತವೆ

ಸರೋಜಿನಿ ಮಹಿಷಿಯವರು ತಮ್ಮ ಕರ್ನಾಟಕದ ಕವಯಿತ್ರಿಯರು ಎಂಬ ಸಂಶೋಧನಾ ಗ್ರಂಥದಲ್ಲಿ ವೈಷ್ಣವ ಭಕ್ತಿ ಪಂಥದ ಹತ್ತು ಜನ ಮಹಿಳೆಯರನ್ನು ಹೆಸರಿಸಿದ್ದಾರೆ ಅವರಲ್ಲಿ ಎಲ್ಲರೂ ಮಧ್ವಮತಾನುಸಾರಿಗಳು ಎನ್ನುವಂತಿಲ್ಲ ಬೇರೆ ಬೇರೆ ಮತಕ್ಕೆ ಸೇರಿದವರೂ ಇದ್ದಾರೆ ಆದರೆ ಅವರ ಕೃತಿಗಳಲ್ಲಿ ಕೃಷ್ಣಭಕ್ತಿ ಹೊರಸೂಸುತ್ತಿದೆ ಇದಕ್ಕೆ ಕಾರಣ ಭಾಗವತ ಧರ್ಮ ಹಾಗೂ ದಾಸ ಸಾಹಿತ್ಯಗಳ ಪ್ರಭಾವವೇ ಆಗಿದೆ ಇಂಥವರಿಗೆ ದಾಸದೀಕ್ಷೆಯಾಗಲೀ ಅಂಕಿತವಾಗಲೀ ದೊರೆತಿಲ್ಲವಾದ್ದರಿಂದ ಅವರನ್ನು ದಾಸಕೂಟಕ್ಕೆ ಸೇರಿಸುವಲ್ಲಿ ಸಮಸ್ಯೆಯಿದೆ ಆದ್ದರಿಂದ ಅವರಲ್ಲಿ ಗಲಗಲಿಯ ಅವ್ವನವರು ಬಾಗಮ್ಮ ಹೆಳವನಕಟ್ಟೆ ಗಿರಿಯಮ್ಮ ಹರಪನಹಳ್ಳಿಯ ಭೀಮವ್ವ ಓರಬಾಯಿಲಕ್ಷ್ಮೀದೇವಮ್ಮರನ್ನು ಮಾತ್ರ ನಿರ್ದಿಷ್ಟವಾಗಿ ಇಲ್ಲಿ ಹೆಸರಿಸಬಹುದು

ಗಲಗಲಿಯ ಅವ್ವನವರು ಹದಿನೆಂಟನೆಯ ಶತಮಾನದ ಆರಂಭದಲ್ಲಿಯೇ ಇದ್ದಂಥವರು ರಾಮೇಶ ಎಂಬ ಮುದ್ರಿಕೆಯಲ್ಲಿ ಕೃತಿಗಳನ್ನು ರಚಿಸಿದ್ದಾರೆ ಮಾಯ್ಕದ ಪದಗಳು ಮೋರೆಗೆ ನೀರು ತಂದ ಹಾಡುಗಳು ಶೃಂಗಾರ ತಾರತಮ್ಯ ಬೀಗರ ಹಾಡುಗಳು ಇವರ ರಚನೆಗಳೆನ್ನಲಾಗಿದೆ ಇವುಗಳಲ್ಲಿ ಶೃಂಗಾರ ತಾರತಮ್ಯ ಒಂದು ವಿಶಿಷ್ಟ ಬಗೆಯ ಕೃತಿ ಇದರಲ್ಲಿ ದೇವತೆಗಳ ತಾರತಮ್ಯವನ್ನು ಬಳಸಿಕೊಂಡು ಅವರ ಶೃಂಗಾರದ ವರ್ಣನೆಯನ್ನೂ ಅವರನ್ನು ಕುರಿತು ಭಕ್ತಿಯನ್ನೂ ವ್ಯಕ್ತಪಡಿಸ

ಲಾಗಿದೆ ಸ್ತ್ರೀಯರು ಧರಿಸುವ ಎಲ್ಲ ಆಭರಣಗಳನ್ನು ಕುರಿತು ವಿವರಣೆಗಳು ದೊರೆಯುವುದರಿಂದ ಅವುಗಳ ತಂರತಮ್ಯ ತಿಳಿಯುವುದು ಒಂದೆಡೆ ಲಭ್ಯವಾಗುವಂತಿದೆ ಎನ್ನಬಹುದು ಅವ್ವನವರ ಉಳಿದ ಕೃತಿಗಳಲ್ಲಿ ಬಹುತೇಕವಾಗಿ ವಿವಾಹ ಸಮಯದಲ್ಲಿ ಹಾಡುವಂತಹವು ಅವುಗಳಲ್ಲಿ ವಿಷ್ಣುವಿನ ದಶಾವತಾರಗಳ ವರ್ಣನೆ ರಾಮಾವತಾರ ಕೃಷ್ಣಾವತಾರಗಳಿಗೆ ಸಂಬಂಧಿಸಿದ ಘಟನೆಗಳ ಸುಂದರ ಚಿತ್ರಣಗಳು ಕಂಡುಬರುತ್ತವೆ ತೀರ್ಥಕ್ಷೇತ್ರಗಳ ವರ್ಣನೆಯು ನೆಪದಲ್ಲಿ ಇಡಿ ಭಾರತದ ವರ್ಣನೆ ದೊರೆಯುತ್ತದೆ ಸಾಹಿತ್ಯದ ದೃಷ್ಟಿಯಿಂದ ಅವ್ವನವರ ಕೃತಿಗಳು ಶ್ರೇಷ್ಠವೆಂದು ಹೇಳಲಾಗದಿದ್ದರೂ ಭಕ್ತ್ಯತಿಶಯದ ಕಥಾವಸ್ತುವಿನ ವಿಕಾಸದಿಂದ ಆಡುಮಾತಿನ ಪ್ರಯೋಗಗಳಿಂದ ಜನಪ್ರಿಯತೆಯನ್ನು ಗಳಿಸಿಕೊಂಡಿವೆ ಎನ್ನಬಹುದು

ಅವ್ವನವರ ಶಿಷ್ಯೆ ಭಾಗಮ್ಮ ಕೂಡ ಸಾಹಿತ್ಯ ರಚಿಸಿದ್ದು ಅವಳ ತೃತೀಯ ಸ್ಕಂಧ ಭಾಗವತ ಮಾತ್ರ ಉಪಲಬ್ಧವಿದೆ ಭಗವನ್ನಾಮ ಸಂಕೀರ್ತನೆ ತನ್ಮೂಲಕ ಅವನ ಲೀಲೆಯಾದ ಸೃಷ್ಟಿಯ ರಹಸ್ಯದ ನಿರೂಪಣೆ ಈ ಕೃತಿಯಲ್ಲಿ ಮುಖ್ಯವಾದುದು

ಹೆಳವನಕಟ್ಟೆ ಗಿರಿಯಮ್ಮ ಹರಿದಾಸ ಪರಂಪರೆಗೆ ಸೇರಿದ ಒಬ್ಬ ಮಹತ್ವದ ಮಹಿಳೆ ಬಾಲ್ಯದಿಂದಲೂ ದೇವರಲ್ಲಿ ಅಚಲಶ್ರದ್ಧೆ ಇದ್ದ ಅವಳು ಹೆಳವನಕಟ್ಟೆ ರಂಗನಾಥನ ಭಕ್ತಳು ಗೋಪಾಲದಾಸರ ಕೃಪೆಯಿಂದ ತನು ಬಿಡಿಸಿದ ರಂಗವಲ್ಲಿಯಲ್ಲಿಯೇ ರಂಗನಾಥನ ದರ್ಶನ ಪಡೆದಳು ಅವನನ್ನೇ ಕುರಿತು ಅನೇಕ ಪದಗಳನ್ನು ರಚಿಸಿರುವಳು ಪರಮಾತ್ಮನನ್ನು ಪುತ್ರವಾತ್ಸಲ್ಯದಿಂದ ಕಂಡ ಮಹಾತಾಯಿ ಇವಳು ಹೆಳವನಕಟ್ಟೆರಂಗ ಎಂಬ ಅಂಕಿತ ಅವಳ ಕೃತಿಗಳಲ್ಲಿದೆ ಬ್ರಹ್ಮಕೊರವಂಜಿ ಲವಕುಶರ ಕಾಳಗ ಉದ್ದಾಲಕನ ಹಾಡು ಶಂಕರ ಗಂಡನ ಕಥೆಯ ಹಾಡು ಕೃಷ್ಣಕೊರವಂಜಿ ಮುಂತಾದ ಕಥನಕವ್ಯಗಳನ್ನೂ, ಚಂದ್ರಹಾಸ ಚರಿತೆ ಸೀತಾಕಲ್ಯಾಣಗಳೆಂಬ ಸಾಂಗತ್ಯ ಕೃತಿಗಳನ್ನೂ ರಚಿಸಿದ್ದಾಳೆ ಗಜೇಂದ್ರ ಮೋಕ್ಷ ಗಿರಿಪಾರಿಜಾತಗಳನ್ನು ಗಿರಿಯಮ್ಮ ಒರೆದಿದ್ದಾಳೆನು ತ್ತಾರೆ ಎಲ್ಲ ಕೃತಿಗಳಲ್ಲೂ ಭಕ್ತಿಯೇ ಪ್ರಧಾನವಾಗಿದೆ ತಾನು ದಾಸರದಾಸರದಾಸಿ ಎಂಬ ನಮ್ರತೆಯನ್ನೇ ಎಲ್ಲೆಡೆಯೂ ಮೆರೆದಿದ್ದಾಳೆ ಗಿರಿಯವ್ವ ಹೆಚ್ಚು ಕಲಿತವಳಲ್ಲ ಶುದ್ಧ ದೇಸಿ ಶೈಲಿಯಲ್ಲಿಯೇ ಕೃತಿಗಳನು ರಚಿಸಿದ್ದಾಳೆ ಭಾವರಸಪುಷ್ಟಿ ಅಲಂಕಾರ ಸೌಂದರ್ಯಗಳು ಸಹಜವಾಗಿಯೇ ಮೂಡಿಬಂದು ಅವಳ ಕೃತಿಗಳನು ಸರಳ ಸುಂದರ ಕಾವ್ಯಗಳನ್ನಾಗಿಸಿವೆ

ಉಳಿದ ಮಹಿಳೆಯರಿಗಿಂತ ಹೆಚ್ಚು ಕೃತಿರಚಿಸಿ ದಾಸಸಾಹಿತ್ಯ ಸೇವೆಗೈದವಳು ಪ್ರಾಯಶಃ ಹರಪನಹಳ್ಳಿ ಭೀಮವ್ವ (೧೮೨೨ ೧೯೦೨) ಭೀಮೇಶಕೃಷ್ಣ ಎಂಬ ಮುದ್ರಿಕೆಯಲ್ಲಿ ಕೃಷ್ಣನ ನವನೀತ ಸುಭದ್ರಾಕಲ್ಯಾಣ ರತಿಕಲ್ಯಾಣ ಮುಯ್ಯದ ಹಾಡು ನಳಚರಿತ್ರೆ ಶಾಕುಂತಲ ಚರಿತ್ರೆ ಜಲಕ್ರೀಡೆ ಸುದಾಮಚರಿತೆ ಸ್ತುತಿಮಣಿ ಮಾಲಿಕೆ ಮಂಗಳ ಇವಲ್ಲದೆ ಶುಕ್ರವಾರ-ಶನಿವಾರದ ಹಾಡುಗಳು ಐದು ಶುಕ್ರವಾರದ

ಹಾಡು ಮುಂತಾದವನು ರಚಿಸಿದ್ದಾಳೆ ಇವುಗಳಲ್ಲಿ ಕೆಲವು ಅಚ್ಚಾಗಿ ಪ್ರಕಟವಾಗಿದ್ದು ಉಳಿದವು ಹೆಣ್ಣುಮಕ್ಕಳ ಬಾಯ ಲ್ಲಿ ಜೀವಂತವಾಗಿವೆ ಎಂಬುದಾಗಿ ಮಹಿಪತಿಯವರು ತಿಳಿಸಿದ್ದಾರೆ ವೇದೋಪನಿಷತ್ತುಗಳನ್ನು ಓದಿ ಜ್ಞಾನಪಡೆಯಲು ಅಸಮ ರ್ಥರಾದ ಸ್ತ್ರೀಯರಿಗೆ ಅವಳ ಕೃತಿಗಳಿಂದ ಹೆಚ್ಚಿನ ಲಾಭ ಕೃಷ್ಣಲೀಲಾ ವರ್ಣನೆ ಪದಗಳಲಿ ಸುಂದರವಾಗಿ ಮೂಡಿಬಂದಿದೆ ಕೃಷ್ಣ ರುಕ್ಮಿಣಿಯರ ಒಗಟು ಒಡಪ ವಿಕೆ ಜಾನ ಪದ ಶೈಲಿಯ ಲ್ಲಿದ್ದು ಆ ಒಗಟುಗಳಲ್ಲಿ ಹಾಸ್ಯ ತ ನೇ ತಾನಾಗಿ ಹರಿಯುತ್ತದೆ

ಓರಬಾಯ್ ಲಕ್ಷ್ಮೀದೇವಮ್ಮ (೧೬೯೦) ಮಂತ್ರಾಲಯದ ಗುರುರಾಘವೇಂದ್ರ ರನು ಕುರಿತು ಅನೇಕ ಕೃತಿಗಳನು ರಚಿಸಿದ್ದಾಳೆ ನರಸಿಂಹವಿಠಲ ಇವಳ ಅಂಕಿತ ಶಬ್ದಾಲಂಕಾರಗಳಿಂದ ವಿಜ ೃಂಭಿಸುವ ಶೈಲಿ ಇವಳದ್ದು

ಆನಂದದಾಸರ ವ ಗಳು ತುಂಗಮ್ಮ ಕೆಲವು ದೇವರನಾಮಗಳನ್ನು ರಚಿಸಿದ್ದಾಳೆ

ಚಿಕ್ಕರೂರಿನ ಹಾಡಿನ ಹುಚ್ಚಮ್ಮ ಜಯಂಪರಾತ್ಪರ ವಿಠಲ ಎಂಬ ಅಂಕಿತದಲ್ಲಿ ನೂರಾರು ದೇವರನಾಮಗಳನ್ನು ರಚಿಸಿದ್ದಾಳೆ ಮಂತ್ರಾಲಯದಲ್ಲಿ ಗುರುಕೃಪೆ ಯಿ ಂದ ಸಾಹಿತ್ಯರಚಿಸುವ ಶಕ್ತಿ ಪಡೆದೆನೆನ್ನುವ ಇವಳು ಕೃಷ್ಣನನ್ನು ಮಗುವೆಂದೇ ಭಾವಿಸಿ ಭಕ್ತ್ಯಾತಿಶಯದಿಂದ ವರ್ಣಿಸಿದ್ದಾಳೆ

ಬೆಣ್ಣೆಪಾ ಲು ಮೊಸರು ಚಿನ್ನನ ಕೈಯೊಳಿಟ್ಟು
ಬಣ್ಣಿಸಿ ಕೃಷ್ಣನ ಕಣ್ಣಾಲೆ ನೊ ಡುವೆ
ಬುತ್ತಿ ಉಪ್ಪಿನಕಾಯಿ ತುತ್ತು ಮಾಡುಣಿಸುವೆ
ಎತ್ತಿಕೊಂಬೆ ಹೊಸ ಮುತ್ತು ಮಾಣಿಕ್ಯಂಬೋ

ಎಂದು ಮ ಂತಾಗಿ ವರ್ಣಿಸಿರ ವುದನು ನೋಡಿದರೆ ಅವಳ ಕೊಡುಗೆ ಉತ್ತಮ ವಾಗಿಯೇ ಇರ ವುದರಲ್ಲಿ ಸಂಶಯ ವಿಲ್ಲ ನಿತ್ಯ ಕ ಷ್ಣನ ದರ್ಶನ ಪಡೆವ ಅಷ್ಟಮಠದ ಯತಿಗಳನ್ನು ಮ ಂತ್ರಾಲಯದ ಸ್ವಾಮಿಗಳನು ಅವಳು ಸ್ತುತಿಸಿರುವುದು ಕಂಡು ಬರುತ್ತದೆ ಕೆ ಎಂ ಕೃಷ್ಣರಾಯ ರ ಹರಿದಾಸರ ಯಾದಿಯಲ್ಲಿ ರಂಗಮ್ಮ ಶೆ ಷಮ್ಮ ಜೀವಮ್ಮ ಪ ಜಮ್ಮ ಮುಂತಾದವರ ಹೆಸರಿದ್ದು ಅವರ ಸ ಹಿತ್ಯದ ವಿವರಗಳಾವವೂ ತಿಳಿದುಬಂದಿಲ್ಲ

ವಿಜಾಪುರಜಿಲ್ಲೆಯಲ್ಲಿ ಪ್ರಸಿದ್ಧರಾಗಿದ್ದ ಕ ಹುಂಡಿಕಿ ಮಹಿಪತಿದಾಸರಿಗೆ ಯೋಗ್ಯ ಗ ರುವಿನಿಂದ ಅಂಕಿತ ದೊರೆತಿಲ್ಲವೆಂಬ ಕಾರಣದಿಂದ ಕೆಲವರು ಅವರನ್ನು ದಾಸಕೂಟ ಪರಂಪರೆಗೆ ಸೇರಿಸುತ್ತಿಲ್ಲ ಆದರೆ ಮಧ್ವಮತಸ್ಥರಾದ ಅವರ ದೇವರನಾಮ ಗಳ ವಿಶಿಷ್ಟರೀತಿಯವಾಗಿದ್ದು ಅವುಗಳಲ್ಲ ಭಕ್ತಿ ಜ್ಞಾನಗಳಂತೆ ಯೋಗಕ್ಕೂ ಹೆಚ್ಚಿನ ಮ ಹತ್ವ ದೊರಕಿದೆ ಬೇಲೂರುಕೇಶವದ ಸರು ಅಭಿಪ್ರಾಯ ಪಡುವಂತೆ ಇವರ ಪದಗಳಲ್ಲಿರ ವುದೆಲ್ಲಾ ಯೋಗದ ಅನ ಭವಗಳು ಹರಿದ ಸ ಸಾಹಿತ್ಯದಲ್ಲಿ ಶರಣರ ವಚನ ಶಾಸ್ತ್ರದ ಧೋರಣೆಯ ನ್ನು ಕ ಣಬೇಕೆಂದರೆ ಮಹೀಪತಿರಾಯ ರ ಪದಗಳಲ್ಲಿ! [೩೧]

ಸಾಮಾನ್ಯಜನತೆಗೆ ಪರಮಾರ್ಥವನ್ನು ಬೋಧಿಸುವದಷ್ಟನ್ನೇ ಗ ರಿಯಾಗಿಟ್ಟುಕೊಂಡ ವರು ಅಂತೆಯೇ ಲಾವಣಿ ಕೋಲುಪದ ಸುಗಿ ಯಪದ ಕೊರವಂಜಿಯಪದ ಮೊದಲಾದ ಜನಪದಮಟ್ಟುಗಳನೇ ಬಳಸಿಕೊಂಡು ತಮ್ಮ ಕೃತಿಗಳನ್ನು ರಚಿಸಿದ್ದಾರೆ ಇವರ ಮಗ ಗ ರ ಮಹಿಪತಿದಾಸರೂ ಅನೇಕ ಕೀರ್ತನೆಗಳನ್ನೂ ಗಜೇಂದ್ರಮೋಕ್ಷ ವೆಂಬ ಗಂಥವನ್ನೂ ರಚಿಸಿರುವುದಾಗಿ ತಿಳಿದುಬರುತ್ತದೆ

ಅಣ್ಣಾವಧೂತರು ನ್ಯಾಯ ವೇದಾಂತ ಶಾಸ್ತ್ರಗಳಲ್ಲಿ ಬಲ್ಲಿದರಾಗಿದ್ದು ವಿಠಲ ವ್ಯಾಸ ಮಂದ್ರಿಕೆಯಲ್ಲಿ ಅನೇಕ ದೇವರನಾಮಗಳನ್ನು ರಚಿಸಿದ್ದಾರೆ ಇವರು ಸಂಸ್ಕೃತ ಕನ್ನಡ ಉರ್ದು ಈ ಮೂರೂ ಭಾಷೆಗಳಲ್ಲಿ ಪದಗಳನ್ನು ರಚಿಸಿರುವುದು ಗಮನಾರ್ಹ

ವಿರಿಶೇಷಾಚಿ ಯ ೯ರು ಶ್ರೀನಿವಾಸಕಲ್ಯಾಣ ವನ್ನು ರಚಿಸಿ ಪ್ರಸಿದ್ಧರಾಗಿದ್ದರೆ ಸುರಪುರದ ಆನಂದದಾಸರು ಕಮಲೇಶವಿಠಲ ಅಂಕಿತದಲ್ಲಿ ಮನೋಜ್ಞವಾಗಿ ಕೀರ್ತನೆ ಗಳನ್ನು ರಚಿಸಿ ಮೆಚ್ಚುಗೆಗೆ ಪಾತ್ರರಾಗಿದ್ದಾರೆ ಇವರಲ್ಲದೆ ಕದ ರು ಮಂಡಲಗಿ ಭೀ ಮಾಚಾರ್ಯರು ಆದವಾನಿಯ ರಮಾಸುಂದರ ವಿಠಲದಾಸರು ಸ್ವಾಮಿ ರಾಯಾ ಚಾರ್ಯರು ಅಸಗಿಹಾಳ ಗೋವಿಂದದ ಸರೂ ವ ಣುರುಹನುಮ ಂ ದಾಸರೂ ಮಾನವಿ ಗ ಂಡ ಚಾಯ ೯ರು ಅನೇಕ ಉತ್ತಮ ದೇವರನ ಮಗಳನ್ನು ರಚಿಸಿರುವು ದಾಗಿ ತಿಳಿದುಬರುತ್ತದೆ

ಇವರಲ್ಲದೆ ಮೋಹನದಾಸರ ಪರಂಪರೆಯ ಲ್ಲಿಯ ವೇಣ ಗೋಪಾಲ ದಾಸರ ಪರಂಪರೆಯಲ್ಲಿಯ ಅನೇಕ ದಾಸರು ಕ ತಿರಚಿಸುವುದು ತಿಳಿದು ಬರುತ್ತದೆ ವಿಜಯ ದಾಸರ ಶಿಷ್ಯರ ದ ಗೋಪ ಲದಾಸರಿಂದ ಹರಿದಾಸದೀಕ್ಷೆ ಪಡೆದ ಜಗನಾ ಥ ದಾಸರ ಶಿಷ್ಯ ಪರಂಪರೆಯಲ್ಲಿ ಸುಮಾರು ೧೮ ೨೦ ಹ ದಾಸರು ಕಂಡುಬರುತ್ತಾರೆ ಇವರೆಲ್ಲ ಕೃತಿರಚನೆಮಾಡಿ ಹೆಸರು ಪಡೆದಿದ್ದಾರೆಂದು ಕೊರಡಿ ಶ್ರೀನಿವಾಸರಾವ್ ಹರಿದಾಸ ಸಾಹಿತ್ಯ ಪರಂಪರೆಯಲ್ಲಿ ತಿಳಿಸಿದ್ದಾರೆ ಪ್ರಾಣೇಶ ವಿಠ ರ ಶ್ರೀದವಿಠಲರ ಶೀಳಿಗೆ ಯಲ್ಲಿ ಅನೇಕ ಹರಿದಾಸರು ಕಂಡುಬರುತ್ತಾರೆ ಶ್ರೀ ವೇಣ ಗೋಪಾಲದಾಸರ ಪರಂಪರೆಯಲ್ಲಿ ಶ್ರೀ ಪರಮಪ್ರಿಯ ಸುಬ್ಬರಾಯ ದಾಸರು ಶ್ರೀ ತಂದೆ ಮುದ್ದು ಮೋಹನವಿಠಲ ಅಂಕಿತದಲ್ಲಿ ಅನೇ ಕ ಕೃತಿಗಳನ್ನು ರಚಿಸಿದ್ದಾರೆ ಇವರು ನೂರಾರು ಹರಿದಾಸರಿಗೆ ದೀಕ್ಷೆ ನೀಡಿದ್ದಾರೆಂದು ಹೇಳಲಾಗುತ್ತಿದೆ ಅವರಲ್ಲಿ ಮೈಸೂರಿನ ಗುರು ಗೋವಿಂದ ವಿಠಲದಾಸರೂ ಒಬ್ಬರು

ದೀಕ್ಷೆ ದಾಸ ಪರಂಪರೆಗಳಿನೂ ಇಂದಿಗೂ ಮುಂದುವರೆದುಕೊಂಡು ಬರು ತ್ತಿದೆ ಆದರೆ ಸಾಹಿತ್ಯದ ದೃಷ್ಟಿಯಿಂದ ನೊ ಡಿದಾಗ ಜಗನ್ನಾಥ ದಾಸರ ನಂತರ ಅಂತಹ ಮಹತ್ವದ ದಾಸರು ಒಂದಂತೆ ತೋರ ವುದಿಲ್ಲ ಅಪರೋಕ್ಷ ಜ್ಞಾನಿಗಳು ಯಾರೂ ಕಾಣಿಸ ವುದಿಲ್ಲ ಉಳಿದವರೆಲ್ಲ ಪೂರ್ವದಾಸರ ಕೃತಿಗಳನ್ನೇ ಹೆಚ್ಚು ಕಡಿಮೆ ಪುನಃ ಹಾಡಿರುವಂತೆ ತೋರುತ್ತದೆ ಆದರೆ ಹಿಂದಿನ ದಾಸರ ಕೃತಿಗಳು

ಪೂರ್ತಿಮಾಯವಾಗದೆ ಇಷ್ಟಾದರೂ ಉಳಿದುಕೊಂಡು ಬರಲು ಜನ ಸಾಮಾನ್ಯ ರೊಂದಿಗೆ ದ ಸರೂ ಮಹತ್ವದ ರೀತಿಯಲ್ಲಿ ಕಾರಣರಾಗಿದ್ದಾರೆ ಹರಿದಾಸರ ಜೀವನ ವಿವರಗಳನು ಕುರಿತು ಬೇಲೂರು ಕೇಶವದಾಸರು ಕರ್ನಾಟಕ ಭಕ್ತ ವಿಜಯ ವನ್ನು ರಚಿಸಿ ಅನೇಕ ಮಾಹಿತಿಗಳನ್ನು ಒದಗಿಸಿದ್ದಾರೆ ಪಾವಂಜೆ ಗುರುರಾಯರು ಗೋರ ಬಾಳ ಹನುಮಂತರ ಯ ರು ಸಂಬೋಧರಾಮರಾಯ ರು ಹರಿದಾಸ ಸಾಹಿತ್ಯ ಸಂಗ್ರಹ ಪ್ರಕಟಣೆ ಇತ್ಯಾದಿಗಳಿಗಾಗಿಯೇ ತಮ್ಮ ಜೀವನವನು ಮುಡಿಪಾಗಿಟ್ಟವರ ಇವ ರಲ್ಲದೆ ಇನೂ ಅನೇಕವ್ಯಕ್ತಿ ಸಂಸ್ಥೆಗಳು ಈ ದಿಶೆಯ ಲ್ಲಿ ಕೆಲಸಮಾಡುತ್ತಿವೆ ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆ ಹಮ್ಮಿಕೊಂಡಿರುವ ಹರಿ ದಾಸಯೋಜನೆ ಇಲ್ಲಿ ಉಲ್ಲೇಖನೀಯ ಕನಿಷ ಪಕ್ಷ ಲಬ್ಧಸಾಹಿತ್ಯವೆಲ್ಲ ವೈಜ್ಞಾನಿಕ ವಾದ ಸಂಪಾದನೆ ಸಂಶೋಧನೆಗಳಿಗೆ ಒಳಗಾಗಿ ಪ್ರಕಟಣೆಗೊಂಡಾಗ ಇದಕ್ಕಿಂತಲೂ ನಿಚ್ಚಳವ ದ ಇತಿಹಾಸವನ್ನು ತಿಳಿಯಲು ಸಾಧ್ಯವಿದೆ

ಒಟ್ಟಿನಲ್ಲಿ ದಾಸಸಾಹಿತ್ಯದ ಇತಿಹಾಸವನ್ನು ಅವಲೋಕಿಸಿದರೆ ಈ ಕೆಳಗಿನ ಅಂಶಗಳು ಮುಖ್ಯವಾಗಿ ಕಂಡುಬರ ವೆನ ಬಹುದು

೧) ಇದು ಸಾಹಿತ್ಯರಚನೆಯ ನ್ನೇ ತನ ಗುರಿಯನ್ನಾಗಿಟ್ಟುಕೊಂಡು ಹುಟ್ಟಿದ ಸಾಹಿತ್ಯವಲ್ಲದಿದ್ದರೂ ಸಾಹಿತ್ಯಕ ಮೌಲ್ಯವುಳ ದ್ದು ಮಧ್ವಮತದ ಹಿನೆ ಲೆಯಲ್ಲಿ ಮುಖ್ಯವಾಗಿ ಭಕ್ತಿಯಸ್ವರೂಪ ಮಹತ್ವಗಳನ್ನು ಜನಸಾಮಾನ್ಯರಿಗೆ ತಿಳಿಸಿ ಹೇಳ ಬೇಕೆಂಬ ಪ್ರಧಾನ ಉದ್ದೇಶದಿಂದ ಹರಿದಾಸರು ಕನ ಡದಲ್ಲಿ ರಚನೆಗಳನ್ನು ಪ್ರಾರಂಭಿ ಸಿದರೆನ್ನಬೇಕು ಆದರೆ ತೀವ್ರಾನುಭವವನು ಪ್ರಾಮಾಣಿಕವಾಗಿ ವ್ಯಕ್ತಪಡಿಸಿದಾಗ ಅದರಲ್ಲಿ ಕಾವ್ಯಾಂಶ ತನ್ನಿರವನ್ನು ಪ್ರಕಟಪಡಿಸದೇ ಇರದು ಹರಿದಾಸರಲ್ಲಿ ಪುರಂದ ರದಾಸರ ಕನಕದ ಸರ ರಚನೆಗಳು ಸಾಹಿತ್ಯದ ದೃಷ್ಟಿಯಿಂದ ಉತ್ಕೃಷ್ಟವಾದುವು ಜಗನಾ ಥ ದಾಸ ಮತ್ತಿತರ ಕೆಲವು ದಾಸರ ಕ ತಿಗಳಲ್ಲಿಯೂ ಕಾವ್ಯಾಂಶ ಅಲ್ಲಲ್ಲಿ ಗೋಚರಿಸುತ್ತದೆ ದಾಸರಲ್ಲಿಯು ಕೆಲವರು ಕೀರ್ತನೆಗಳನ ಲ್ಲದೆ ಕೆಲವು ಕಾವ್ಯ ಕೃತಿ ಗಳನ್ನು ರಚಿಸಿದ್ದಾರೆ

೨) ದಾಸಸಾಹಿತ್ಯ ತನ್ನ ಶೈಶವದಲ್ಲಿ ಭಗವನಾ ಮ ಸಂಕಿ ರ್ತನೆಗಷ್ಟೇ ಸೀಮಿತವ ಗಿ ಪ್ರೌಢಕಾಲದಲ್ಲಿ ಭಕ್ತಿಯೊಂದಿಗೆ ಸಾಮಾಜಿಕ ಅಭಿವ್ಯಕ್ತಿಯು ಉದ್ದೇಶ ವ್ಯಾಪ್ತಿಯನ್ನೂ ಪಡೆದು ಪುಷ್ಟಗೊಂಡು ಕಾರಣಾಂತರದಿಂದ ರೋಗಪೀಡಿತ ರಾದಂತೆ ಕುಗ್ಗಿ ಮಧ್ವಮತತತ್ತ್ವಗಳ ಪ್ರಸಾರದಿಂದ ಮತ್ತೆ ನವಚೇತನವನ್ನು ಪಡೆದು ಅಲ್ಲಲ್ಲಿ ಸಾಹಿತ್ಯಾಂಶಗಳನ್ನು ಮಿನುಗಿಸಿ ಜೀವಂತವಾಗಿರಲು ಪ್ರಯತ್ನಿ ಸಿದರೂ ಬರಬರ ತ್ತ ಮೊದಲಿನ ಸತ್ವ ಚೈತನ್ಯಗಳನು ಉಳಿಸಿಕೊಳ್ಳಲಾರದೇ ಸೊರಗ ತ್ತ ಬಂದಂತೆ ತೋರುತ್ತದೆ

೩) ದಾಸಸಾಹಿತ್ಯ ಕೇವಲ ಮಧ್ವಮತ ಸಿದ್ಧಾಂತಗಳಿಗೇ ಕಟ್ಟುಬಿದ್ದ ಸಾಹಿತ್ಯವಲ್ಲ ಭಾಗವತಧರ್ಮದ ವಿಶಾಲ ಮನೋಭಾವ ಸಾರ್ವಜನಿಕ ಕಳಕಳಿ

ಆದನ್ನು ಮತೀಯ ಸಾಹಿತ್ಯದಿಂದ ಭಿನ ವಾಗಿಸಿದೆ ಅಂತೆಯೇ ಇದು ಸರ್ವಜನಾ ದರಣೀಯ ಸಾಹಿತ್ಯವನ್ನಿ ಸಿಕೊಂಡಿತು ಕನಕದಾಸರಂತಹ ಕೆಳವರ್ಗದವನೊಬ್ಬ ಹರಿದಾಸನಾದುದು ಮಹಿಳೆಯರಿಗೂ ಸಾಹಿತ್ಯ ರಚಿಸುವ ಸ್ಫೂರ್ತಿ ಬಂದುದೂ ಇವೆಲ್ಲ ದಾಸಕೂಟದ ವಿಶಾಲ ಮನೋಭಾವನೆಯನ್ನು ವ್ಯಕ್ತಪಡಿಸುವುದರೊಂದಿಗೆ ದಾಸಸಾಹಿತ್ಯಕ್ಕೆ ಹೊಸ ಆಯಾಮ ಗಳನು ಒದಗಿಸಿತ್ತೆ

೪) ಐತಿಹಾಸಿಕವಾ ಗಿ ನೊ ಡಿದ ಗ ದಾಸಸಾಹಿತ್ಯ ವಿಶೇಷವಾಗಿ ಮಠ ಪರಂಪರೆ ಗುರು-ಶಿಷ್ಯ ಪರಂಪರೆಗಳ ಚೌಕಟ್ಟಿನಲ್ಲಿ ಬರುವ ಹಲದಾಸರಿಂದ ರಚಿತ ವಾಗಿರ ವುದು ಕಂಡುಬರ ತ್ತದೆ ಆದರೆ ಈ ಸಾಹಿತ್ಯಕ್ಕೆ ಸಮಾನಾಂತರವ ದ ಮತ್ತು ಹೆಚ್ಚು ಸಂಪ್ರದಾಯಬದ್ಧವಾದ ವ್ಯಾಸಕೂಟ ಪರಂಪರೆಯ ಸಂಸ್ಕೃತ ಸಾಹಿತ್ಯವಿದ್ದುದ ರಿಂದಲೋ ಏನೋ ದಾಸಸಾಹಿತ್ಯವನ್ನು ರಚಿಸಿದ ಯತಿವರೇಣ್ಯರೆಲ್ಲ ಕೆಲವೊಮ್ಮೆ ಮಧ್ವಮತವನ್ನು ಮೀರಿ ವಿಶಾಲಮನೋಭಾವನೆಯಿಂದ ಸಾರ್ವಜನಿಕ ಚಿಂತನೆ ನಡೆ ಸಲು ಸಾಧ್ಯವಾಯಿತು ಸಾಹಿತ್ಯ ಜನಸಾಮಾನ್ಯರ ಸೊತ್ತಾಗಲು ಪ್ರಯತಿ ಸಿದ್ದು ಇಂಥ ಉದಾರ ಮನಸ್ಸುಗಳು ಕೆಲವಾದರೂ ಯೋಚಿಸತೊಡಗಿದ್ದರಿಂದ ಗ ರು- ಶಿಷ್ಯ ಪರಂಪರೆಯಿಂದಾಗಿ ದಾಸಸಾಹಿತ್ಯ ಮೊದಮೊದಲು ಶಿಷ್ಯಾದಿಚ್ಛೇತ್ ಪರಾ ಜಯಂ ಎಂಬಂತೆ ಉತ್ತಮೋತ್ತಮ ದಾಸರನ್ನು ಪಡೆಯಿತು ಆದರೆ ಮಠ ಸ್ಥಾನಗಳು ಸಂಪ್ರದಾಯಬದ್ಧವಾಗುತ್ತ ಬಂದಂತೆ ದೀಕ್ಷೆ ಯಾಂತ್ರಿಕವಾಯಿತು ಅಪರೋಕ್ಷ ಜ್ಞಾನಿಗಳ ಸಂಖ್ಯೆಯೂ ಕಡಿಮೆಯಾಗುತ್ತ ಬಂದಿತು ಎರಡನೆಯ ಘಟ್ಟದಲ್ಲಂತೂ ಹರಿದಾಸರ ಲಕ್ಷ್ಯವೆಲ್ಲ ಪ್ರಾಯಶಃ ವ ತತತ್ತ್ವಗಳ ಸವ ರ್ಧನೆ ಪ್ರಸಾರದತ್ತ ಹೊ ಯಿತು ಶಾಸ್ತ್ರಸಾಹಿತ್ಯ ಹೆಚ್ಚಾಗಿ ಸಾಹಿತ್ಯದಲ್ಲಿ ಕಾವ್ಯಾಂಶ ಕಡಿಮೆಯಾಗತೊಡಗಿತು

ದಾಸ ಸಾಹಿತ್ಯದ ಗುರು-ಶಿಷ್ಯ ಪರಂಪರೆಯಿಂದ ಗಿ ಗ ರುಸ್ತುತಿ ಗುರು ಪರಂಪರೆಯ ಸ್ತುತಿ ಪದ್ಯಗಳು ಗಣನೀಯವಾಗಿ ರಚಿತವಾಗಿವೆ ಗ ರುವೇ ಶಿಷ್ಯ ಅಥವಾ ಶಿಷ್ಯರನ್ನು ಕೊಂಡಾಡಿದ್ದು ಇಲ್ಲದಿಲ್ಲ

೫) ಶ್ರೀಪಾದರಾಜರು ಕೀರ್ತನೆಗಳನ್ನು ರಚಿಸಿ ಹ ಡುತ್ತಾ ಕಾಲಿಗೆ ಗೆಜ್ಜೆ ಕಟ್ಟಿಕೊಂಡ ಕ ಣಿಯ ತ್ತಿದ್ದರಂತೆ ಪ್ರಾಯ ಶಃ ಉಳಿದದಾಸರೂ ಅದೇ ಪದ್ಧತಿ ಯನ್ನು ಮ ಂದುವರಿಸಿಕೊಂಡು ಹೋಗಿರಬೆ ಕು ದಾಸಸಾಹಿತ್ಯ ಗೇಯಸಾಹಿತ್ಯ ರಾಗ-ತಾಳ-ಲಯ ಗಳಿಂದ ಒಳಗೊಂಡಿದ್ದು ಜನಸಾಮಾನ್ಯರ ಮನಸ್ಸನು ಆಕರ್ಷಿಸಿ ಅವರಲ್ಲಿ ಭಕ್ತಿಯ ಬೀಜವನ್ನು ಬಿತ್ತುವ ಉದ್ದೇಶ ಹರಿದಾಸರದ್ದು ಆದುದರಿಂದ ಒದು ಹ ಟ್ಟಿ ಬಂದ ಸಂದರ್ಭ – ಉದ್ದೇಶಗಳೇ ಸಾಹಿತ್ಯದ ಸ್ವರೂಪವನ್ನು ನಿರ್ಧರಿ ಸಿವೆ ಅಂತೆಯೇ ಸಂಗಿ ತ ನೃತ್ಯಗಳಿಂದ ಕೂಡಿದ ಈ ಸಾಹಿತ್ಯ ಜನಮನವನ್ನು ಸೂರೆಗೊಂಡಿದ್ದರೆ ಆಶ್ಚರ್ಯವಿಲ್ಲ

೬) ದಾಸಸಾಹಿತ್ಯ ಕನ್ನಡ ಸಾಹಿತ್ಯಕ್ಕೆ ಅಮೂಲ್ಯವಾದ ಕೊಡುಗೆಯನ್ನಿ

ನೀಡಿದಂತೆ ಸಂಗೀತ ಶಾಸ್ತ್ರಕ್ಕೂ ಅತಿವ ಹತ್ವದ ಕಾಣಿಕೆಯನ್ನು ಸಲ್ಲಿಸಿದೆ ಪುರಂದರ ದಾಸರನ್ನು ಕರ್ನಾಟಕ ಸಂಗೀತ ಶಾಸ್ತ್ರದ ಪಿತಾಮಹರೆಂದು ಗುರುತಿಸಲಾಗುತ್ತದೆ ತ್ಯಾಗರಾಜರಿಗೆ ಮೂಲಸ್ಫೂರ್ತಿ ದೊರಕಿದ್ದು ಅವರಿಂದಲೇ

೭) ಕೀರ್ತನೆಗಳ ಉಗಮ ಎಂದಿನಿಂದ ಎಂಬುದು ಸರಿಯಾಗಿ ತಿಳಿಯದು ದಾಸಸಾಹಿತ್ಯಕ್ಕೊಂದು ಪರಂಪರೆಯನ್ನು ಹಾಕಿಕೊಟ್ಟ ಶ್ರೀಪಾದರಾಜರ ರಚನೆಗಳನ್ನು ನೋಡಿದಾಗ ದಾಸಸಾಹಿತ್ಯದಲ್ಲಿ ಮುಖ್ಯವಾಗಿ ಕಂಡುಬರ ವ ಸಂಳಾದಿ ಕೀರ್ತನೆ ಉಗಾಭೋಗ ದಂಡಕ ವೃತ್ತನಾಮ ಮುಂತಾದ ಪ್ರಕಾರಗಳೆಲ್ಲವೂ ಅಲ್ಲಿ ಗೋಚರ ವಾಗಿವೆ ಪ್ರಾಯ ಶಃ ದಾಸಸಾಹಿತ್ಯ ಜನಪದ ಸಾಹಿತ್ಯದಿಂದಲೇ ಛಂದೋರೂಪ ಗಳನು ಪಡೆದು ಅವನು ಕೆಲವಟ್ಟಿಗೆ ಸಂಸ್ಕರಿಸಿಕೊಂಡಿರಬಹುದು ಶರಣ ಸಾಹಿತ್ಯದಿಂದಲೂ ಪ್ರೇರಣೆ ಪಡೆದಿರಬಹುದು ಆದುದರಿಂದ ಐತಿಹಾಸಿಕವಾಗಿ ನೋಡಿದರೂ ಕಾಲದಿಂದ ಕಾಲಕ್ಕೆ ಅದು ಜನಪದ ಸಾಹಿತ್ಯದಿಂದಲೇ ತನ್ನ ಸಾಹಿತ್ಯ ವನ್ನು ಕೃಷಿಮಾಡಿಕೊಂಡಿರುವುದು ತಿಳಿದುಬರುತ್ತೆ ಎರಡನೆಯ ಘಟ್ಟದಲ್ಲಿ ಮಧ್ವ ವ ತತತ್ತ್ವಗಳನು ವಿವರಿಸುವಾಗಲೂ ಕೆಲವು ದಾಸರು ಜಾನಪದಧಾಟಿಯಲ್ಲಿ ಪದ್ಯ ಗಳನ್ನ ರಚಿಸಿರ ವುದು ಕಂಡುಬರುತ್ತದೆ

೮) ದಾಸರಿಗೆ ತಮ್ಮ ಸಂದೇಶಗಳು ಜನಸಾಮಾನ್ಯರಿಗೆ ತಲುಪಬೇಕೆಂಬ ಉದ್ದೇಶ ಪ್ರಾರಂಭದಿಂದಲೂ ಜಾಗೃತವಾಗಿದ್ದ ಕಾರಣ ಅವರು ಜನಸಾಮಾನ್ಯರ ಆಡುಭಾಷೆಯನ್ನೇ ತಮ್ಮ ಸಾಹಿತ್ಯದ ಭಾಷೆಯನ್ನಾಗಿ ಮಾಡಿಕೊಂಡರು ಸಂಸ್ಕೃತ ದಲ್ಲಿ ಪಾಂಡಿತ್ಯವಿದ್ದ ಕೆಲವು ಹರಿದಾಸರಲ್ಲಿ ಪ್ರೌಢಭಾಷೆ ಕಂಡುಬಂದರೂ ಎರಡನೆಯ ಘಟ್ಟದಲ್ಲಿ ಮಧ್ವಮತತತ್ತ್ವಗಳ ವಿವರಣೆಯ ಸಂದರ್ಭದಲ್ಲಿ ಭಾಷೆ ಹೆಚ್ಚು ಪಾರಿ ಭಾಷಿಕವಾಗಿರುವಂತೆ ಅನ್ನಿಸಿದರೂ ಒಟ್ಟಿನಲ್ಲಿ ದಾಸಸಾಹಿತ್ಯದ ಭಾಷೆ ಆಡುಭಾಷೆ ಯಾಗಿದೆ ಕೆಲವು ದಾಸರಂತೂ ಜನಪದದ ಭಾಷೆಯನು ನುಡಿಗಟ್ಟುಗಳನೂ ನಾಣ್ಣುಡಿಗಳನ್ನೂ ಅನಾಯಾಸವಾಗಿ ಅಷ್ಟೇ ಪರಿಣಾಮಕಾರಿಯಾಗಿ ಬಳಸಿ ಕೊಂಡಿದ್ದಾರೆ

೯) ದಾಸಸಾಹಿತ್ಯದ ಇತಿಹಾಸವನ್ನು ಅವಲೋಕಿಸಿದರೆ ಹರಿದಾಸರೆಲ್ಲ ಉತ್ತರ ಕರ್ನಾಟಕದಲ್ಲೇ ಹೆಚ್ಚಾಗಿ ಕೇಂದ್ರೀಕೃತವಾಗಿದ್ದುದು ಕಂಡುಬರುತ್ತದೆ ದಾಸಕೂಟದ ಕೇಂದ್ರಗಳ ಗಿದ್ದ ಹ ಪಿ ಮತ್ತು ಮಂತ್ರಾಲಯಗಳೂ ಆ ಪ್ರದೇಶ ದಲ್ಲೇ ಇದ್ದದ್ದು ಇದಕ್ಕೆ ಕಾರಣವಾಗಿರಬಹುದು

೧೦) ಮ ಧ್ಯಕಾಲೀನ ಸಮಾಜೋ ಧಾರ್ಮಿಕ ಜೀವನ ಚಿತ್ರಣಗಳ ಅಧ್ಯಯ ನಕ್ಕೆ ದಾಸಸಾಹಿತ್ಯ ಒಂದು ಮ ಹತ್ವದ ಆಕರವ ಗಬಲ್ಲದು ಕನಕದಾಸರ ಮೋಹನ ತರಂಗಿಣಿ ರಾಮ ಧಾನ್ಯ ಚರಿತೆಗಳ ಜೊತೆಗೆ ಕನಕದಾಸ ಪುರಂದರದಾಸರ ಕೀರ್ತನೆ ಗಳಲ್ಲಿ ಈ ಅಂಶ ಹೆಚ್ಚಿನ ಪ್ರಮಾಣದಲ್ಲಿ ದೊರೆಯುತ್ತದೆ

೧೧) ದಾಸಸಾಹಿತ್ಯದಲ್ಲಿಯೂ ಎಲ್ಲ ಸಾಹಿತ್ಯದಲ್ಲಿಯೂ ಸಾಮಾನ್ಯವಾಗಿ

ಕಂಡುಬರುವಂತೆ ಮಹಿಳೆಯರ ಸಂಖ್ಯೆ ಕಡಿಮೆ ಯೇ ಸತ್ವದ ದೃಷ್ಟಿಯಿಂದಲೂ ಒಬ್ಬಿಬ್ಬರು ಮಾತ್ರ ಭಕ್ತ್ಯಾತಿಶಯವೇ ಎಲ್ಲರ ಸಾಹಿತ್ಯದಲ್ಲಿ ಕಂಡ ಬರುವ ಮುಖ್ಯ ಅಂಶ

(೧೨) ಹರಿದಾಸರು ಭಕ್ತಿಯ ಮಹಿಮೆಯನ್ನು ನೈತಿಕ ಎಚ್ಚರವನ್ನು ಸಮಾಜಕ್ಕೆ ತಿಳಿಸುವ ಕಾರಣಕ್ಕಾಗಿಯೇ ಸಾಹಿತ್ಯ ರಚಿಸಿಕೊಂಡರು ತಾವು ರಚಿಸಿರು ವುದನ್ನು ಹಾಡಿಕುಣಿಯುತ್ತ ಮನೆಮನೆಗೂ ಅವನ್ನು ತಲುಪಿಸುವ ಕಾರ್ಯವನ್ನೂ ಜೊತೆ-ಜೊತೆಗೇ ಮಾಡಿದರು ಆದುದರಿಂದ ದಾಸಸಾಹಿತ್ಯ ಸೃಷ್ಟಿ ಮತ್ತು ಅವುಗಳ ಪ್ರಸಾರ ಏಕಕಾಲಕ್ಕೇ ಆಗಿರುವುದು ಗಮನಿಸುವಂತಿದೆ

## ಅಡಿಟಿಪ್ಪಣಿಗಳು

೧ ಗೋರಬಾಳ ಹಣಮಂತರಾಯರು ಕರ್ನಾಟಕ ಹರಿದಾಸರ ಉಗಮ ಮತ್ತು ಶ್ರೀ ಪುರಂದರದಾಸರ ಸುಳಾದಿಗಳು ಲಿಂಗಸೂರು ೧೯೫೭ ಪೀಠಿಕೆ ಪು ೫

೨ ಶ್ರೀ ಕವಟರಾಳ ಕೃಷ್ಣರಾಯ ಹರಿದಾಸ ಪರ ಪರೆ ಪ್ರಬುದ್ಧ ಕರ್ನಾಟಕ ಸಂ ೪೬ ಸಂ ೧

೩ ಶ್ರೀ ಕೆ ಎಂ ಕೃಷ್ಣರಾಯರು ಜಗನ್ನಾಥದಾಸರು ಗ್ರಂಥದ ಕೊನೆಯಲ್ಲಿ ೦೨ ಹರಿದಾಸರ ಪಟ್ಟಿ ಕೊಟ್ಟಿದ್ದಾರೆ ಡಾ॥ ಕೆ ಜಿ ಶಾಸ್ತ್ರಿಯವರು ದಾಸಸಾಹಿತ್ಯದ ದ್ವಿತೀಯ ಘಟ್ಟದ ಹಿನ್ನಲೆಯೊದಗಿಸುತ್ತಾ ಒಟ್ಟು ದಾಸರ ಸಂಖ್ಯೆ ೬೦೦ಕ್ಕೂ ಮಿಕ್ಕು ಪುದೆಂದಿದ್ದಾರೆ ಇದಕ್ಕೆ ಆಧಾರವೇನೆಂಬುದು ತಿಳಿಯದು

೪ ಪುರಂದರದಾಸರು ನಾಲ್ಕು ಲಕ್ಷದ ಎಪತ್ತೈದು ಸಾವಿರ ಕೃತಿಗಳನ್ನು ರಚಿಸಿದರೆಂದೂ ಮುಂದೆ ಅವರಿಂದ ಸ್ವನಾಮಾಂಕಿತರಾದ ವಿಜಯದಾಸರು ಇಪ್ಪತ್ತೈದು ಸಾವಿರ ಕೃತಿಗಳನು ರಚಿಸಿ ಐದು ಲಕ್ಷ ಪೂರ್ತಿಗೊಳಿಸಿದರೆಂದೂ ಹೇಳಲಾಗುತ್ತದೆ

೫ ಬೆಲ್ಲೂರು ಕೆಶವದಾಸರು ಹರಿದಾಸ ಸಾಹಿತ್ಯ ಒಂದು ಅವಲೋಕನ ಮೈಸೂರು ದ್ವಿ ಮು ೧೮೨ ಪು ೩೯

೬ ಎಚ್ ಎಸ್ ವೆಂಕಟೇಶಮೂರ್ತಿ ಕೀರ್ತನಕಾರರು ಬೆಂಗಳೂರು ೧೯೭೫ ಪು ೯

೭ ಜಿ ವರದರಾಜರಾವ ಶ್ರೀ ಪಾದರಾಜರ ಕೃತಿಗಳು ಮೈಸೂರು ೧೯೭೩ ಪೀಠಿಕೆ ಪು VII—XVI

೮ ಶ್ರೀ ಪುರಂದರದಾಸರು ಮತ್ತು ಕರ್ನಾಟಕ ಶ್ರೀ ಹರಿದಾಸಪರಂಪರೆ ಪ್ರಕಟನೆ ೧೨ ೧೯೪೪ ಪು ೬೭

೯ ರಾ ಸ್ವಾ ಪಂಚಮುಖಿ ಕರ್ನಾಟಕದ ಹರಿದಾಸ ಸಾಹಿತ್ಯ ಬೆಂಗಳೂರು ೧೯೫೨ ಪು ೪೯ ೫೦

೧೦ ಎಚ್ ತಿಪ್ಪೇರುದ್ರಸ್ವಾಮಿ ಕರ್ನಾಟಕ ಸಂಸ್ಕೃತಿ ಸಮೀಕ್ಷೆ ಮೈಸೂರು ಪು ೩೫೫

೧ ಡಾ॥ ಕೆ ಜಿ ಶಾಸ್ತ್ರಿ ದಾಸ ಸಾಹಿತ್ಯ ದ್ವಿತಿಯ ಘಟ್ಟದ ಹಿನ್ನಲೆ ದಾಸಸಾಹಿತ್ಯ ದ್ವಿತೀಯ ಘಟ್ಟದ ಸಾಧನೆ ಧಾರವಾಡ ೧೯೭೦ ಪು ॥

೧೨ ರಂ ಶ್ರೀ ಮುಗಳಿ ಕನ್ನಡ ಸಾಹಿತ್ಯ ಚರಿತ್ರೆ ಮೈಸೂರು ನಾಲ್ಕನೇ ಮು ೧ ೬೮ ಪು ೨೮೯

೧೩ ಬೇಲೂರು ಕೇಶವದಾಸರು ಶ್ರೀ ಕರ್ನಾಟಕ ಭಕ್ತ ವಿಜಯ ಮೈಸೂರು ನಾ ಮು ೧೯೭೩ ಪು ೨೨ ೨೩೦

೧೪ ರಂ ಶ್ರೀ ಮುಗಳಿ ಪೂರ್ವೋಕ್ತ ಪು ೨ ೧

೧೫ ರಂ ಶ್ರೀ ಮುಗಳಿ ಪೂರ್ವೋಕ್ತ ಪು ೯೫

೧೬ ಶ್ರೀ ಕಪಟರಾಳ ಕೃಷ್ಣರಾಯ ಪೂರ್ವೋಕ್ತ ಪು ೧೦೦

೧೭ ಡಾ ವ ಆ ದಿವ ಣಜಿ ಪ್ರಸಾದಯೋಗ ಮೈಸೂರು ೧೯ ೨ ಪು ೦೮೫

೧೮ ರಾ ಸ್ವಾ ಪಂಚಮುಖಿ ಪೂರ್ವೋಕ್ತ ಪು ೬೮

೧೯ ರಂ ಶ್ರೀ ಮುಗಳಿ ಪೂರ್ವೋಕ್ತ ಪು ೨೯೭

೨೦ ಒಟಗೇರಿ ಕೃಪ ಶರ್ಮ ಒಗನಾಥದ ರು ದಾಸಸಾಹಿತ್ಯ ದ್ವಿತೀಯ ಘಟ್ಟದ ಸಾಧನೆ ಧಾರವಾಡ ೧೯೭೦ ಪು ೮೫

೨೧ ಬೆಲೂರು ಕೇಶವದಾಸರು ಶ್ರೀ ಕರ್ನಾಟಕ ಭಕ್ತ ವಿಜಯ ನಾ ಮು ೧೯೬೩ ಪು ೫೪೩

## ಸಹಾಯಕ ಸಾಹಿತ್ಯ


೧ ಕಪಟರಾಳ ಕೃಷ್ಣರಾಯರು ಹರಿದಾಸ ಪರಂಪರೆ ಕರ್ನಾಟಕ ಸಂಸ್ಕೃತಿಯ ಶೋಧನೆ ೧ ೭೦

೨ ಕರ್ನಾಟಕ ವಿಶ್ವವಿದ್ಯಾಲಯ (ಸಂ) ದಾಸಸಾಹಿತ್ಯ ದ್ವಿತೀಯ ಘಟ್ಟದ ಸಾಧನೆ ಧಾರವಾಡ ೧೯೭೦

೩ ಕೊರಟಿ ಶ್ರೀನಿವಾಸರಾವ ಹರಿದಾಸ ಸಾಹಿತ್ಯ ಪರಂಪರೆ ಬೆಂಗಳೂರು ೧೯೮೨

೪ ಕೃಷ್ಣರಾವ ಕೆ ಎಂ ಶ್ರೀ ಜಗನ್ನಾಥದಾಸರು ಮೈಸೂರು ೧ ೫

೫ ಗೋರಬಾಳ ಹಣಮಂತರಾಯರು ಕರ್ನಾಟಕದ ಹರಿದಾಸರ ಉಗಮ ಮತ್ತು ಶ್ರೀ ಪುರಂದರದಾಸರ ಸುಳಾದಿಗಳು ಲಿಂಗಸೂರು ೧೯೬೭

೬ ತಿಪ್ಪೇರುದ್ರಸ್ವಾಮಿ ಎಚ ಕರ್ನಾಟಕ ಸಂಸ್ಕೃತಿ ಸಮೀಕ್ಷೆ ಮೈಸೂರು ೧೯೬೮

೭ ದಿವಾಣಜಿ ವ ಆ ಪ್ರಸಾದಯೋಗ, ಮೈಸೂರು ೧೯೭೨

೮ ಪಂಚಮುಖಿ ರಾ ಸ್ವಾ ಕರ್ನಾಟಕದ ಹರಿದಾಸ ಸಾಹಿತ್ಯ ಬೆಂಗಳೂರು ೧೯೫೨

೯ ಬೇಲೂರು ಕೇಶವದಾಸರು ಶ್ರೀ ಕರ್ನಾಟಕ ಭಕ್ತ ವಿಜಯ ಮೈಸೂರು ನಾ ಮು ೧೯೭೪

೧೦ ಬೇಲೂರು ಕೇಶವದಾಸರು ಶ್ರೀ ಹರಿದಾಸ ಸಾಹಿತ್ಯ ಒಂದು ಅವಲೋಕನ ಮೈಸೂರು ಪರಿಷ್ಕೃತ ದ್ವಿ ಮು ೧೯೮೦

೧೧ ಮಂಹಿಷಿ ಸರೋಜಿನಿ ಕರ್ನಾಟಕದ ಕವಯಿತ್ರಿಯರು ಧಾರವಾಡ ೧ ೬೫

೧೨ ಮುಗಳಿ ರಂ ಶ್ರೀ ಕನ್ನಡ ಸಾಹಿತ್ಯ ಚರಿತ್ರೆ ಮೈಸೂರು ನಾ ಮು ೧೯೬೮

೧೩ ವರದರಾಜರಾವ ಜಿ ಹರಿದಾಸಹೃದಯ ಮೈಸೂರು ೧ ೬೭

೧೪ ವರದರಾಜರಾವ ಜಿ ಶ್ರೀಪಾದರಾಜರ ಕೃತಿಗಳು ಮೈಸೂರು ೧೯೭೩

೧೫ ವರದರಾಜರಾವ್ ಜಿ ಹರಿಭಕ್ತಿವಾಹಿನಿ ಬೆಂಗಳೂರು ೧೯೮೩
೧೬ ವೇದವ್ಯಾಸಾಚಾರ್ಯ, ಕರ್ನಾಟಕದ ಹರಿದಾಸರು ನಂಜನಗೂಡು ೧೯೬೪
೧೭ ವೆಂಕಟೇಶಮೂರ್ತಿ ಎಚ್ ಎಸ್ ಕೀರ್ತನಕಾರರು ಬೆಂಗಳೂರು ೧೯೭೫
೧೮ ಕರ್ನಾಟಕ ಕನ್ನಡ ವಿಷಯ ವಿಶ್ವಕೋಶ, ಕ ಅ ಸಂಸ್ಥೆ ಮೈಸೂರು ವಿಶ್ವ ವಿದ್ಯಾನಿಲಯ, ಮೈಸೂರು, ೧೯೭೯

# ದಾಸಕೂಟ ಮತ್ತು ವ್ಯಾಸಕೂಟ

---

— ಟಿ ಕೆ ಇಂದುಬಾಯಿ

ಕನ್ನಡ ಸಾಹಿತ್ಯದ ಸಂದರ್ಭದಲ್ಲಿ ಹರಿದಾಸ ಸಾಹಿತ್ಯಕ್ಕೆ ಸಂಬಂಧಿಸಿದಂತೆ ಕಾಣಿಸಿಕೊಳ್ಳುವ ಈ ಅವಳಿ ಸಮಾಸ ಪದಗಳು ತಮ್ಮದೇ ಆದ ವಿಶಿಷ್ಟತೆಯನ್ನು ಕರ್ನಾಟಕದ ಧಾರ್ಮಿಕ ಸಾಮಾಜಿಕ ಸಂದರ್ಭದಲ್ಲಿಯೂ ಪಡೆದಿವೆ ದಾಸಕೂಟ ಎಂದರೆ ದಾಸರ ಒಂದು ಗುಂಪು ಎನ್ನುವ ಸಾಮಾನ್ಯಾರ್ಥವನ್ನು ಕೊಡಬಹುದು ಆದರೆ ಈ ದಾಸಕೂಟ ಸಮಾಸ ಪದದ ಪೂರ್ವ ಪದವಾದ ದಾಸ ಎಂಬುದು ಹರಿದಾಸ ಸಾಹಿತ್ಯಕ್ಕೆ ಸಂಬಂಧಿಸಿಯೇ ವಿವಿಧ ಅರ್ಥಛಾಯೆಗಳಲ್ಲಿ ಬಳಕೆಯಾಗಿರುವುದು ಕಂಡುಬರುತ್ತದೆ

ದ್ವೈತಮತ ಸಿದ್ಧಾಂತದ ಪ್ರಕಾರ ಪರಮಾತ್ಮ ಒಬ್ಬನೇ ಆತನೇ ಶ್ರೀಹರಿ ಉಳಿದವರೆಲ್ಲರೂ ಆತನ ದಾಸರೇ ! ಹರಿನಿತ್ಯ ಜೀವರೂ ನಿತ್ಯರೇ ಎಂದರೆ ಈ ಹರಿದಾಸರಿಬ್ಬರೂ ಯಾವಾಗಲೂ ಇರುವವರೇ ಎಂದ ಯಿತು ಈ ದ ಷ್ಟಿಯಿಂದ ದಾಸಕೂಟ ಅನಾದಿಯಾದದ್ದು ಹುಟ್ಟಿದುದಲ್ಲ ಬಂದದ್ದು ಲಕ್ಷ್ಮೀದೇವಿಯೋ ಪರಮಾತ್ಮನ ಪ್ರಥಮ ದಾಸಿ ಬ್ರಹ್ಮ ವಾಯು ಸರಸ್ವತಿ ಭಾರತಿ ಶೇಷ ಗರುಡ ರುದ್ರಾದಿಗಳು ಅನಂತರ ಲಕ್ಷ್ಮಿಯನ್ನನುಸರಿಸಿ ಬರುತ್ತಾರೆ

(ಕೆ ಎಂ ಕೃಷ್ಣರಾವ್-ಶ್ರೀ ಜಗನ್ನಾಥದಾಸರು ಪು ೪೩)

ತಮ್ಮ ಶ್ರೀ ಕರ್ನಾಟಕ ಭಕ್ತ ವಿಜಯ ದಲ್ಲಿ ಭಾಗವತ ಧರ್ಮ ಮತ್ತು ದಾಸಕೂಟ ಈ ಎರಡು ಮಾತುಗಳನ್ನು ಒಂದೇ ಅರ್ಥದಲ್ಲಿ ವ್ಯವಹರಿಸಿದ ಶ್ರೀ ಬೇಲೂರು ಕೇಶವದಾಸರು ನಾರದ ಮಹಾಮುನಿಯಿಂದ ಭಾಗವತ ಧರ್ಮ' ಪ್ರಾರಂಭವ ಯಿತು ಎಂದು ಹೇಳಿದ್ದಾರೆ ಅನಂತರ ವಾಲ್ಮೀಕಿ ವಸಿಷ್ಠ ಲವಕುಶರು ವ್ಯಾಸಮಹರ್ಷಿ ಶುಕಾಚಾರ್ಯ ಪ್ರಹ್ಲಾದ ಮೊದಲಾದವರನ್ನು ಭಾಗವತಧರ್ಮದ ಪ್ರವರ್ತಕರು ಎನ್ನುತ್ತಾರೆ ಆದರೆ ಐತಿಹಾಸಿಕವಾಗಿ ನಮಗೆ ಕನ್ನಡದಲ್ಲಿ ಹರಿದಾಸರ ಉಲ್ಲೇಖ ಸಿಕ್ಕುವುದು ೧೨ನೇ ಶತಮಾನದಲ್ಲಿದ್ದ ಶ್ರೀ ಮಧ್ವಾಚಾರ್ಯರು ದ್ವೈತ ಮತವನ್ನು ಸ್ಥಾಪಿಸಿದ ಮೇಲೆಯೇ ಶ್ರೀ ವ ಧ್ವಾಚಾರ್ಯರೇ ಆನಂದತೀರ್ಥ ಎಂಬ ಅಂಕಿತದಿಂದ ದ್ವಾದಶಸ್ತೋತ್ರ ಬರೆದು ಹರಿದಾಸ ಸಾಹಿತ್ಯಕ್ಕೆ ನಾಂದಿ ಹಾಡಿದರು "

(ಗುಂಡ್ಮಿ ಚಂದ್ರಶೇಖರ ಐತಾಳ್—'ದಾಸಕೂಟ' ಎಂಬ ಮಾತು ಎಷ್ಟು ಪ್ರಾಚೀನ? ಪ್ರಬುದ್ಧ ಕರ್ನಾಟಕ, ಸಂ ೫೧ ಸಂ ೩)

ವಾದಿರಾಜರು ಒಂದೆಡೆಯಲ್ಲಿ ಮಧ್ವಾಚಾರ್ಯರನ್ನು ಕ ರತು

ಪನ್ನಂಗಶಯನ ಶ್ರೀ ಹಯವದನ ದಾಸರೊಳು

ನಿನ ಪ್ಪೊ ಲುವರುಂಟೆ ಮಧ್ವ ಮುನಿರಾಯ — ಎಂದಿದ್ದಾರೆ

ಮೇಲಿನ ಮಾತುಗಳಲ್ಲಿ ಹರಿಯನ್ನು ಬಿಟ್ಟು ಉಳಿದ ಜೀವಿಗಳೆಲ್ಲರೂ ದ ಸರು ಎಂಬ ಅಭಿಪ್ರಾಯ ಒಂದೆಡೆ ಇದ್ದರೆ ಹರಿಯ ಭಕ್ತರೆಲ್ಲರೂ ಅವನ ದಾಸರು ಎಂಬ ಅಭಿಪ್ರಾಯವೂ ಇದೆ ವಿಶ ಲಾರ್ಥದಲ್ಲಿ ಹರಿಯ ಭಕ್ತರೆಲ್ಲರೂ ಹರಿದಾಸರು ಎಂಬ ಮಾತನ್ನು ಒಪ್ಪಬಹುದಾದರೂ ಐತಿಹಾಸಿಕವಾಗಿ ಕನ ಡ ನಾಡಿನಲ್ಲಿ ಬದುಕಿ ಮಧ್ವರ ದ್ವೈತ ಸಿದ್ಧಾಂತವನ್ನು ತಳಹದಿಯಾಗುಳ್ಳ ಹರಿಭಕ್ತಿಯನ್ನು ಪ್ರಚಾರ ಮಾಡಿದ ಹರಿದಾಸರನ್ನು ಕುರಿತಂತೆ ಮಾತ್ರ ಈ ಮಾತನು ಇಲ್ಲಿ ಅರ್ಥೈಸಬೇಕಾಗಿದೆ

ದಾಸಕೂಟ ಎಂಬ ಮಾತಿಗೆ ದಾಸ ಎಂದರೆ ಸೇವಕ ಎಂದೂ ಕೂಟ ಎಂದರೆ (ಪಂಥ) ಒಂದೇ ಧ್ಯೇಯವುಳ್ಳ ಅನೇಕ ಸದಸ್ಯರ ಗುಂಪು ಎಂದೂ ಅರ್ಥ ವಾಗುತ್ತದೆ ಭಾರತದ ಇತರ ಪ್ರಾಂತಗಳಲ್ಲಿ ಪ್ರಚ ರದಲ್ಲಿರುವ ಭಕ್ತಿಪಂಥಕ್ಕೆ ಸಮಾನವಾದುದು ಕರ್ನಾಟಕದ ಹರಿದಾಸಕೂಟ ಒಟ್ಟಿನಲ್ಲಿ ಹರಿದಾಸಕೂಟ ಎಂದರೆ ಭಕ್ತಿಪಂಥ ಎಂದೇ ಅರ್ಥವಾಗುವುದು

— (ಕೆ ಎಂ ಕೃಷ್ಣರಾವ್ ಶ್ರೀ ಜಗನ್ನಾಥದಾಸರು ಪು ೪೯)

ಮೊದಲಿಗೆ ಈ ದಾಸಕೂಟ ಮಧ್ವಾಚಾರ್ಯರ ಕಾಲಕ್ಕಿಂತಲೂ ಮೊದಲು ಕ್ರಿ ಶ ೯ನೆಯ ಶತಮಾನದಲ್ಲಿಯೇ ಅಚಲಾನಂದ ವಿಠಲರಿಂದ ಪ್ರಾರಂಭವಾಯಿತಂ ಎಂಬ ಅಭಿಪ್ರಾಯವಿತ್ತು ಆದರೆ ಜಿ ವರದರಾಜರಾಯರು ತಾವು ಸಂಪಾದಿಸಿರುವ ಶ್ರೀಪಾದರಾಜರ ಕೃತಿಗಳು ಎನ್ನುವ ಕೃತಿಯ ಪ್ರಾರಂಭದ ಲೇಖನದಲ್ಲಿ ಈ ೯ನೆಯ ಶತಮಾನದ ಅಚಲಾನಂದದಾಸರ ಗಲಿ ೧೩ನೆಯ ಶತಮಾನದಲ್ಲಿದ್ದ ನರಹರಿತೀರ್ಥ ರಾಗಲಿ ಆದ್ಯರೆಂಬುವರಾಗಲಿ ಹರಿದಾಸ ಪರಂಪರೆಗೆ ಮುಖ್ಯ ಪ್ರವರ್ತಕರೆನ್ನುವ ಅಭಿಪ್ರಾಯಗಳನು ಸಕಾರಣವಾಗಿ ಅಲ್ಲಗಳೆದು ದಾಸ ಸಾಹಿತ್ಯದ ಎಲ್ಲ ಪ್ರಕಾರ ಗಳಲ್ಲಿಯೂ ಪ್ರಯೋಗ ನಡೆಸಿ ಜಯಶಾಲಿಗಳಾದ ಶ್ರೀಪಾದರಾಯ ರೇ ಹರಿದಾಸ ಸಾಹಿತ್ಯ ಸಂಪ್ರದಾಯದ ಆದ್ಯ ಪ್ರವರ್ತಕರೆಂಬ ತೀರ್ಮಾನಕ್ಕೆ ತಲುಪಿದ್ದಾರೆ

ಶ್ರೀ ವ ಧ್ವಾಚಾರ್ಯರ ದ್ವೈತಮತವು ಉದಿಸಿ ಈ ವೇಳೆಗೆ (ಶ್ರೀಪಾದರಾಯರ ಕಾಲಕ್ಕೆ) ಇನೂ ರು ವರ್ಷಗಳಾಗಿದ್ದವು ಅದರ ಪ್ರತಿಪಾದನೆಗೆ ಸಾಕಷ್ಟು ಸಂಸ್ಕೃತ ಗ್ರಂಥಗಳು ನಿರ್ಮಾಣವಾಗಿದ್ದವು ಮೊದ ಮೊದಲಿನಂತೆ ಅದು ವಿದ್ವಜ್ಜನರ ಆವರಣದಲ್ಲಿಯೇ ಸೀಮಿತವಾಗದೆ ಸಾಮಾನ್ಯ ಜನರಿಗೂ ಅದರ ಸಾರ ದೊರೆಯ ಬೇಕಾದುದು ಅಗತ್ಯವೆನಿಸಿತು ಸಾಲದ ದಕ್ಕೆ ಶ್ರೀಪಾದರಾಜರಿಗೆ ಶ್ರೀ ಸ್ವರ್ಣವರ್ಣ ತೀರ್ಥರ ಬಳಿಯಲ್ಲಿ ಶ್ರೀರಂಗದಲ್ಲಿರುವಾಗ್ಗೆ ಅಲ್ಲಿನ ಆಳ್ವಾರರ ಪ್ರಬಂಧಗಳನ್ನು ಕೇಳಿ ಕೇಳಿ ಜನತೆಯಲ್ಲಿ ಭಕ್ತಿ ಸ ವರ್ಧನೆಗೆ ಮಾತೃಭಾಷೆ ಎಂತಹ ಉತ್ತಮ ಮಾಧ್ಯಮ

ವೆಂದು ಮನವರಿಕೆಯಾಗಿರಬೇಕು ಇದಲ್ಲದೆ ಕನ್ನಡನಾಡಿನಲ್ಲಿಯೇ ಶರಣರು ಕನ್ನಡದ ಮೂಲಕವೇ ತಮ್ಮ ಧಾರ್ಮಿಕ ಜಾಗೃತಿಯನ್ನು ಹೇಗೆ ನಿರ್ವಹಿಸಿದರೆನ್ನುವುದೂ ಪ್ರತ್ಯಕ್ಷ ಪ್ರಮಾಣವಾಗಿತ್ತು, ಈ ರೀತಿಯಾದ ಕಾಲ ಧರ್ಮ ಸಂಯೋಗದಿಂದ ಶ್ರೀಪಾದರಾಜರು ಪೂಜಾಕಾಲದಲ್ಲಿ ತಮ್ಮ ಆರಾಧ್ಯ ದೇವತೆಗೆ ಕನ ಡದಲ್ಲಿಯೆ ಕೀರ್ತನೆಗಳನ್ನು ರಚಿಸಿ ಕುಣಿದು ಮಣಿದು ಸಮರ್ಪಿಸುವ ಸಂಪ್ರದಾಯಕ್ಕೆ ಮೊಳಕೆ ಹಾಕಿದರು ಗ ರುವಿಗೆ ತಕ್ಕ ಶಿಷ್ಯರು ಪರಂಪರೆಯಾಗಿ ಉದಿಸಿ ಬಂದು ಈ ಸಂಪ್ರದಾಯ ಮುಂದುವರಿದು ವಿಶಿಷ್ಟವಾಗಿ ವಿರಾಜಿಸಲ ರಂಭಿಸಿತು

— (ಜಿ ವರದರಾಜರಾವ್ ಶ್ರೀಪಾದರಾಜರ ಕೃತಿಗಳು ಪು xix)

ಹೀಗೆ ಕರ್ನಾಟಕದಲ್ಲಿ ೧೫ನೆಯ ಶತಮಾನದಲ್ಲಿ ಪ್ರಾರಂಭವಾದ ಹರಿಭಕ್ತಿ ವಾಹಿನಿ ಹರಿದಾಸರ ಸಾಹಿತ್ಯದ ಮೂಲಕ ಕನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸಿದೆ ಆದರೆ ದ ಸಕೂಟ ಎಂಬ ಮಾತನ್ನು ಯಾರು ಮೊದಲು ಸೃಷ್ಟಿಸಿದರು ಉಲ್ಲೇಖಿಸಿದರು ಕೀರ್ತನೆಗಳಲ್ಲಿ ಪ್ರಯೋಗಿಸಿದರು ಅದರ ಪ್ರಾಚೀನತೆಯೇನು ಎಂಬ ವಿಚಾರ ಯಾವ ದಾಸರೂ ವಿದ್ವಾಂಸರೂ ಹೇಳದಿರುವುದು ಆಶ್ಚರ್ಯ ಎಂದು ಈ ಮೊದಲೇ ಉದ್ಧರಿಸಿದ ಲೇಖನದಲ್ಲಿ ವಿಚಾರ ಮಾಡಿರುವ ಗುಂಡ್ಮಿ ಚಂದ್ರಶೇಖರ ಐತಾಳರು ಮೊತ್ತಮೊದಲಿಗೆ ೧೯ನೆಯ ಶತಮಾನದಲ್ಲಿ ರಚಿತವಾದ ಪ್ರಾಣೇಶ ವಿಠಲರ ಒಂದು ಕೀರ್ತನೆಯಲ್ಲಿ ಈ ಪದ ಪ್ರಯೋಗವಾಗಿರುವುದನ್ನು ಗುರುತಿಸಿ ಈ ಪದ ಕರ್ನಾಟಕದ ಹರಿದಾಸ ಸಾಹಿತ್ಯ ತನ್ನ ಉಚ್ಛ್ರಾಯ ಸ್ಥಿತಿಯಲ್ಲಿದ್ದಾಗ ಅಂದರೆ ೧೫ ೧೬ನೆ ಶತಮಾನಗಳಲ್ಲಿ ಸೃಷ್ಟಿಯಾಗಿ ಬಳಕೆಗೆ ಬಂದಿರಬಹುದು ಎಂದ ಅಭಿಪ್ರಾಯಪಟ್ಟಿದ್ದಾರೆ

ಈ ಎಲ್ಲ ಅಭಿಪ್ರಾಯಗಳನ್ನು ಸಂಗ್ರಹಿಸಿ ಒಟ್ಟಿನಲ್ಲಿ ಹೀಗೆ ಹೇಳಬಹುದು ೧೩ನೆಯ ಶತಮಾನದಲ್ಲಿ ಭ ರತದಾದ್ಯಂತ ಭಕ್ತಿಪಂಥದ ಪ್ರಭಾವವಿದ್ದ ಕಾಲದಲ್ಲಿ ಕರ್ನಾಟಕದಲ್ಲಿ ಮ ಧ್ವಾಚಾರ್ಯರಿಂದ ದ್ವೈತಮತ ಸ್ಥಾಪನೆಯಾಯಿತು ಸಂಸ್ಕೃತ ಭಾಷೆಯಲ್ಲಿ ಇದಕ್ಕೆ ಸಂಬಂಧಿಸಿದಂತೆ ಬಹಳಷ್ಟು ಸಾಹಿತ್ಯ ತಾತ್ವಿಕ ಗ್ರಂಥಗಳು, ವೇದ ಂತ ಗ್ರಂಥಗಳು ರಚನೆಯಾಗಿದ್ದರೂ ಜನಸಾಮಾನ್ಯರಿಗೆ ಸಂಸ್ಕೃತ ತಿಳಿಯದಮರಿಗೆ ಇವು ಎಟುಕುವಂತಿರಲಿಲ್ಲ ಅಲ್ಲದೆ ಆ ಕಾಲದಲ್ಲಿ ಪಂಡಿತರೆನಿಸಿದವರಿಗೆ ಜನಸಾಮಾನ್ಯರ ಭಾಷೆಯಲ್ಲಿ ಬರೆಯುವುದು ಕೀಳರಿಮೆಯ ಸಂಗತಿಯಾಗಿತ್ತು ಸ್ನಾನಾನಂತರ ಪ್ರಾಕೃತ ಭಾಷೆಯಲ್ಲಿ ಮಾತನಾಡುವುದೂ ಶಿಷ್ಟಾಚಾರಕ್ಕೆ ವಿರದ್ಧವೆಂದು ಭಾವಿಸಿದ್ದ ಕಾಲ ಹೀಗಾಗಿ ಜನಸಾಮಾನ್ಯರಿಗೂ ಜ್ಞಾನಕ್ಕೂ ಸಂಸ್ಕೃತ ಭಾಷೆ ಅಡ್ಡಗೋಡೆಯಾಗಿತ್ತು, ಅಲ್ಲದೆ ೧೩ನೆಯ ಶತಮಾನದಿಂದ ೧೬ನೆಯ ಶತಮಾನದ ನಡುವೆ ಅನೇಕ ಹೊಸ ಪಂಥಗಳೂ ಶೈವ ಅದ್ವೈತ ವಿಶಿಷ್ಟಾದ್ವೈತ ಪಾಶುಪತಾದಿ ಮತಗಳು ಕರ್ನಾಟಕದಲ್ಲಿ ಪ್ರಚಾರಗೊಂಡಿದ್ದರಿಂದ ಅವುಗಳ ವಿರೋಧವನ್ನು ಪ್ರತಿಭಟಿಸಿ

ತಮ್ಮ ಧಾರ್ಮಿಕ ಅಸ್ತಿತ್ವವನ್ನು ಸ್ಥಿರಗೊಳಿಸುವ ಜನತೆಯ ಆದರಣೆ ಅನುಸರಣೆ ಯನ್ನು ಸಂಪಾದಿಸುವ ಅವಶ್ಯಕತೆ ಮಧ್ವರ ಅನುಯಾಯಿಗಳಿಗಿತ್ತು. ಇಂಥ ಪರಿಸ್ಥಿತಿಯಲ್ಲಿ ಮುಳುಬಾಗಿಲು ಮಠದ ಒಂಬತ್ತನೆಯ ಪೀಠಾಧಿಪತಿಗಳಾಗಿದ್ದ ಶ್ರೀಪಾದರಾಯರು ಕನ್ನಡದಲ್ಲೇ ಮಧ್ವಮತದ ಸಾರವನ್ನು ಹರಿಭಕ್ತಿಯನ್ನು ಬೋಧಿಸಲು ಮನಸ್ಸುಮಾಡಿ ಕೀರ್ತನೆಗಳನ್ನು ರಚಿಸಿ ಪೂಜಾಸಮಯದಲ್ಲಿ ಹಾಡುವ ನರ್ತಿಸುವ ಸಂಪ್ರದಾಯವನ್ನು ಪ್ರಾರಂಭಿಸಿದರು. ಕೀರ್ತನೆಗಳಷ್ಟೇ ಅಲ್ಲದೆ ದಾಸ ಸಾಹಿತ್ಯದ ವಿಶಿಷ್ಟ ರೂಪಗಳಾದ ಸುಳಾದಿ, ಉಗಾಭೋಗ ಗಳು ಮೊದಲಾದುವಾರಿಗೆ ಇವರಿಂದ ರಚಿತವಾದವು. ಇವರ ಶಿಷ್ಯರಾದ ವ್ಯಾಸರಾಯರು ಇದೇ ಸಂಪ್ರದಾಯ ವನು ಮುಂದುವರಿಸಿ ಬೆಳೆಸಿದರು. ವ್ಯಾಸರಾಯರ ಶಿಷ್ಯರಾದ ವಾದಿರಾಜರು ಪುರಂದರದಾಸರು ಕನಕದಾಸರು ಮೊದಲಾದವರು ಹರಿದಾಸ ಕೂಟವನ್ನು ವ್ಯಾಸ ರಾಯರ ನೇತೃತ್ವದಲ್ಲಿ ಚೆನ್ನಾಗಿ ಬೆಳೆಸಿ ಉನ್ನತಿಗೇರಿಸಿದರು. ಇದು ದಾಸ ಪರಂಪರೆ ಯಲ್ಲಿ ಮೊದಲ ಘಟ್ಟ. ಮುಂದೆ ವಿಜಯದಾಸರು (ಕ್ರಿ.ಶ. ೧೬೮೭-೧೭೫೫) ಹಾಗೂ ಅವರ ಶಿಷ್ಯರಿಂದ ಮತ್ತೆ ಬಲಗೊಂಡು ಮುಂದುವರಿದದ್ದು ಎರಡನೆಯ ಘಟ್ಟವೆಂದು ಗುರುತಿಸಲ್ಪಟ್ಟಿದೆ. ಈ ಎರಡು ಘಟ್ಟಗಳ ನಡುವಿನ ಕಾಲದಲ್ಲಿ ಇದರ ಬೆಳವಣಿಗೆ ತಟಸ್ಥವಾಗಿದ್ದುದಾಗಿಯೂ ರಾಘವೇಂದ್ರತೀರ್ಥರು ಈ ಎರಡು ಘಟ್ಟ ಗಳ ನಡುವಿನ ಕೊಂಡಿಯಾಗಿದ್ದು ದಾಸ ಪರಂಪರೆಯನ್ನು ಮುಂದುವರೆಸಿದರು ಎಂಬ ಅಭಿಪ್ರಾಯವೂ ಇದೆ. ಹೀಗೆ ಧಾರ್ಮಿಕ ಉದ್ದೇಶವನ್ನುಳ್ಳ ಈ ದಾಸ ಪರಂಪರೆ ತನ್ನ ಧರ್ಮ ಪ್ರಸಾರಕ್ಕೆ ಕನ್ನಡ ಭಾಷೆಯನ್ನು ಮಾಧ್ಯಮವಾಗಿರಿಸಿಕೊಂಡು ಕೃತಿ ಗಳನ್ನು ರಚಿಸುವ ಮೂಲಕ ಸಾಹಿತ್ಯಿಕವಾಗಿಯೂ ಗಣ್ಯವಾಯಿತು.

ಹೀಗೆ ಮಧ್ವಾಚಾರ್ಯರಿಂದ ಹರಿದಾಸ ಸಾಹಿತ್ಯ ಪ್ರಾರಂಭವಾಯಿತೆಂದು ಹೇಳಿದರೂ ಅದು ಕನ್ನಡದಲ್ಲಿ ದೊರೆಯುವುದು ಶ್ರೀಪಾದರಾಜರಿಂದಲೇ. ಹರಿದಾಸ ಪರಂಪರೆಯ ಪ್ರಮುಖರನ್ನು ಸ್ಮರಿಸುವಾಗ

> ನಮಃ ಶ್ರೀಪಾದರಾಜಾಯ ನಮಸ್ತೇ ವ್ಯಾಸಯೋಗಿನೇ
> ನಮಃ ಪುರಂದರಾರ್ಯಾಯ ವಿಜಯಾರ್ಯಾಯ ತೇ ನಮಃ

ಎಂದು ಹೇಳುವಲ್ಲಿ ಶ್ರೀಪಾದರಾಯರು ವ್ಯಾಸರಾಯರು ಪುರಂದರದಾಸರು ವಿಜಯದಾಸರನ್ನು ಮುಖ್ಯರಾಗಿ ಪರಿಗಣಿಸಲಾಗಿದೆ. ಇವರಲ್ಲಿ ಶ್ರೀಪಾದರಾಯರು ವ್ಯಾಸರಾಯರು ಯತಿಗಳು, ಮಠಾಧಿಪತಿಗಳು. ಇವರು ದಾಸಸಾಹಿತ್ಯ ರಚನೆ ಮಾಡಿದ್ದರೂ ಇವರನ್ನು ಹರಿದಾಸ ರೆಂದು ಕರೆಯುವ ಪದ್ಧತಿ ಇಲ್ಲ. ಹರಿಯ ಭಕ್ತರೆಲ್ಲರನ್ನು ವಿಶಾಲಾರ್ಥದಲ್ಲಿ ಹರಿದಾಸರೆಂದೇ ತಿಳಿಯಬಹುದಾದರೂ ದಾಸ ಧರ್ಮದೀಕ್ಷೆ ಯನ್ನು ಪಡೆದವರು ಮಾತ್ರವೇ ಹರಿದಾಸ ರೆನಿಸಿಕೊಳ್ಳುತ್ತಾರೆ. ಹರಿದಾಸಕೂಟಕ್ಕೆ ಸೇರಬೇಕಾದರೆ ಕೆಲವು ನಿರ್ದಿಷ್ಟ ನಿಯಮಗಳನ್ನು ಅನುಸರಿಸ ಬೇಕಾಗುತ್ತದೆ. ಹೀಗಾಗಿ ಹರಿಭಕ್ತರೆಲ್ಲರೂ ಹರಿದಾಸರೆನಿಸಲಾರರು.

ವಿಜಯದಾಸರು 'ಹರಿದಾಸ ಲಕ್ಷಣ ಸುಳಾದಿ ಎಂಬ ಒಂದು ಸ ಳಾದಿಯಲ್ಲಿ ಹರಿದಾಸನ ಲಕ್ಷಣಗಳೇನು ಎನ್ನುವುದನ್ನು ಹೇಳಿದ್ದಾರೆ ಹರಿದಾಸನಾಗುವವನು ದೀಕ್ಷೆ ವಹಿಸುವಾಗ ಹೀಗೆ ಪ್ರಮಾಣ ಮಾಡುತ್ತಾನೆ

೧) ಶ್ರುತಿ ಸ್ಮೃತಿ ಪುರಾಣ ಇತಿಹಾಸಗಳಲ್ಲಿ ನಂಬಿಕೆ ಇಡುತ್ತೇನೆ
೨) ಸಾಲ ಮಾಡುವುದಿಲ್ಲ ಸಾಲದೆನ್ನುವುದಿಲ್ಲ ನಾಳೆಗಿಡುವುದಿಲ್ಲ ಎಂದು ಪ್ರತಿಜ್ಞೆಮಾಡಿ ಅದರಂತೆ ನಡೆಯುತ್ತೇನೆ
೩) ಹರಿದಿನ ವ್ರತಾಚರಣೆ ಬಿಡುವುದಿಲ್ಲ
೪) ದೈವನಿಂದೆ ಕೇಳದರೆ ಆತ್ಮಶುದ್ಧಿ ಮಾಡಿಕೊಳ್ಳುತ್ತೇನೆ
೫) ಹರಿಸೇವೆಗೇ ಈ ಜೀವನ ಮೀಸಲು

ಗುರುಗಳು ಶಿಷ್ಯನ ಯೋಗ್ಯತೆಯನ್ನು ಪರಿ ಕ್ಷಿಸಿ ಯೋಗ್ಯನೆನಿಸಿದರೆ ಅಂಕಿತ ವನ್ನು ಕೊಡುತ್ತಾರೆ ಹೀಗೆ ಪಡೆದ ಅಂಕಿತ ದಲ್ಲಿಯೇ ದಾಸರು ಕೃತಿಗಳನ್ನು ರಚಿಸಿದ್ದಾರೆ ಈ ಅಂಕಿತದ ಸಹಾಯ ದಿಂದಲೇ ಇಂದು ನಾವು ಇದು ಈ ದಾಸರ ಕೃತಿ ಎ ದು ಗುರುತಿಸುತ್ತೇವೆ ಅಂಕಿತವನ್ನು ಶಿಷ್ಯನಿಗೆ ಕೊಡುವಾಗ ಗುರುಗಳು ಅಂಕಿತ ಪದ ವನ್ನು ಮಾಡುತ್ತಾರೆ ಈ ಅಂಕಿತಪದ ಶಿಷ್ಯನ ಅಂಕಿತದಿಂದ ಮೊದಲಾಗಿ ಗ ರುಗಳ ಅಂಕಿತದಿಂದ ಕೊನೆಗೊಳ್ಳುತ್ತದೆ ಜಗನ್ನಾಥದಾಸರು ತಮ್ಮ ಶಿಷ್ಯ ಶ್ರೀಶ ವಿಠಲರಿಗೆ ಅಂಕಿತಕೊಟ್ಟಾಗ ರಚಿಸಿದ ಒಂದು ಅಂಕಿತಪದ ಹಿ ೧ಗಿದೆ

ಶ್ರೀಶ ವಿಠಲ ನೀನೆ ಸಂತೈಪುದು
ಕ್ಲೇಶನಾಶನ ನಿನ್ನ ದಾಸರವನೆಂದರಿತು ॥ ಪ ॥

ಸಕಲ ಲೋಕಗಳ ನಾಯಕ ಇವಗೆ ಹೇಯ ಲೌ
ಕಿಕ ವರಾಗ್ರವನೆ ಬಿಡಿಸಿ ನಿತ್ಯದಲ್ಲಿ
ಪ್ರಕಟವನೆ ಗೈಸು ಸದ್ವರ್ಮ ಕರ್ಮಗಳ ದೇ
ವಕಿತನಯ ಶ್ರೀ ಜಗನಾ ಥವಿಠಲ ಒಲಿದು ॥೩॥

ದಾಸಕೂಟದಲ್ಲಿ ಈ ಅಂಕಿತಕ್ಕೆ ವಿಶೇಷವಾದ ಪ್ರಾಶಸ್ತ್ಯವಿದೆ ಶ್ರೀ ಮ ಧ್ವಾ ಚಾರ್ಯರು ದ್ವಾದಶಸ್ತೋತ್ರ ದಲ್ಲಿ ತಮ್ಮ ಆಶ್ರಮನಾಮವಾದ ಆನಂದತೀರ್ಥ ವೆಂಬ ಅಂಕಿತವನ್ನು ಬಳಸಿದ್ದಾರೆ ಶ್ರೀಪಾದರಾಜರು ರಂಗವಿಠಲ ವೆಂಬ ಅಂಕಿತ ದಲ್ಲಿ ಅವರ ಶಿಷ್ಯರ ದ ವ್ಯಾಸರಾಯ ರು ಕೃಷ್ಣ ಶ್ರೀಕೃಷ್ಣ ಎಂಬ ಅಂಕಿತದಲ್ಲಿ ತಮ್ಮ ಕೃತಿಗಳನ್ನು ರಚಿಸಿದ್ದಾರೆ ಅನಂತರ ಬಂದ ಪುರಂದರದಾಸರು ತಮ್ಮ ಗುರುಗ ಳಾದ ವ್ಯಾಸರಾಯರಿಂದ ಪುರಂದರ ವಿಠಲ ಎನ್ನುವ ಅಂಕಿತ ಪಡೆದರು

ಹೀಗೆ ದಾಸಧವ ೯ದೀಕ್ಷೆ ವಹಿಸಿ ಗೃಹಸ್ಥರಾಗಿದ್ದು ಗುರುಗಳಿಂದ ಸಂಪ್ರ ದಾಯ ಬದ್ಧವಾಗಿ ಅಂಕಿತವನ್ನು ಪಡೆದು ಹರಿದಾಸರೆಂದು ಪ್ರಸಿದ್ಧರಾದವರಲ್ಲಿ ಪುರಂದರದಾಸರು ಮೊದಲಿಗರು ಇವರಿಗಿಂತ ಮುಂಚೆ ಇದ್ದವರು ದೇವರನಾಮ

ಗಳನು ರಚಿಸಿದ್ದರೂ ಅಂಕಿತವನ್ನು ಇಟ್ಟುಕೊಂಡಿದ್ದರೂ ಅದು ಗುರು ದತ್ತವಾದುದಲ್ಲ ಸ್ವಯಂ ಸ್ಫೂರ್ತಿಯಿಂದ ಬಂದುದು (ಡಾ|| ಕೆ ಎಂ ಕೃಷ್ಣರಾವ್ ಶ್ರೀ ಜಗನ್ನಾಥದಾಸರು ಪು ೫೩) ಇವರ ನಂತರ ಬಂದವರೆಲ್ಲ ಬಹುಮಟ್ಟಿಗೆ ಇವರ ಸಂಪ್ರದಾಯವನ್ನೇ ಅನುಸರಿಸಿ ಗುರುಗಳಿಂದ ಅಂಕಿತ ತೆಗೆದುಕೊಂಡು ಹರಿದಾಸರಾಗಿ ಸಾಹಿತ್ಯ ಸೃಷ್ಟಿ ಮಾಡಿದ್ದಾರೆ ಪಂಡರಪುರದ ವಿಠಲ ನೇ ದಾಸಕೂಟದ ಮೂಲ ಉಪಾಸ್ಯದೇವತೆಯಾದ ಕಾರಣ ಹೆಚ್ಚಿನ ದಾಸರ ಅಂಕಿತಗಳಲ್ಲಿ ವಿಠಲ ಎಂಬ ಪದ ಸೇರಿದೆ

ಹರಿದಾಸರ ಉಪಾಸನೆ ಕೀರ್ತನೆ ಭಜನೆ ನೃತ್ಯಗಳ ಮೂಲಕ ನಡೆದವು ಈ ಭಜನೆ ನೃತ್ಯಗಳಿಗೆ ಪ್ರಮುಖ ದೇವತಾರೂಪ ಪಂಡರಪುರದ ವಿಠಲ ಈಗಲೂ ತಿರುಪತಿಯ ಶ್ರೀನಿವಾಸನನ್ನು ಕಾಂಚನಬ್ರಹ್ಮನೆಂದೂ ಉಡುಪಿಯ ಶ್ರೀಕೃಷ್ಣನನ್ನು ಅನ್ನಬ್ರಹ್ಮನೆಂದೂ ಪಂಡರಪುರದ ವಿಠಲನನ್ನು ನಾದಬ್ರಹ್ಮನೆಂದೂ ಹೇಳುವ ರೂಢಿಯಿದೆ (ಡಾ|| ಕೆ ಎಂ ಕೃಷ್ಣರಾವ್ ಶ್ರೀ ಜಗನ್ನಾಥದಾಸರು ಪು ೫೪)

ಹೀಗೆ ಹರಿದಾಸರಿಗೆ ವಿಷ್ಣುವಿನ ಬೇರೆ ಬೇರೆ ರೂಪಗಳಾದ ಶ್ರೀನಿವಾಸ, ಕೃಷ್ಣ ವಿಠಲ – ಎಲ್ಲರೂ ಆರಾಧ್ಯ ದೇವತೆಗಳಾದರು ಹರಿದಾಸ ದೀಕ್ಷೆಯ ಬಗೆ ಶ್ರೀ ಪುರಂದರದಾಸರು ಹೀಗೆ ಹೇಳಿದ್ದಾರೆ

ವನಜ ಭವಾಂಡದೊಳು ಹರಿದಾಸತ್ವ ದೀಕ್ಷೆ
ಬಲು ಕಷ್ಟವೆಂದು ಕಾಣೊ
ಮನ ಜಾಥಮಗೆ ಇದು ಸ ಲಭವಲ್ಲವೊ ಪ್ರಾಣಿ

ವಿಜಯದಾಸರ ಪ್ರಕಾರ ಹರಿದಾಸರು ಹೀಗಿರಬೇಕು

ತಪ್ತ ಮುದ್ರಾಂಕಿತ ಧರಿಸಬೇಕು ಭುಜದಿ
ಸಿರಿಬೊಮ್ಮ ಭವಾದ್ಯರಿಗೆ ತರತಮಭೇದದಿಂದೆರಗಿ
ಪೊರೆಯೆಂದಾಡಲಿಬೇಕು
ಅನ್ನಪಾನಕ್ಕೆ ಅವಸರ ಬೀಳದಿರಬೇಕು
ಅಂದವರು ತನಗೆ ಬಹಳ ಬಂಧುಗಳು ಎನಬೇಕು
ಇಂದ್ರಿಯಗಳನೆಲ್ಲ ನಿಗ್ರಹಿಸಬೇಕು
ಭಾವ ಶುದ್ಧಿಲಿ ನಿತ್ಯ ತಿರುಗಬೇಕು

ಜಗನ್ನಾಥದಾಸರ ಪ್ರಕಾರ —

ಆಸೆಯನು ನಿಜದಾಸಗೈದಿಹ ಪುಂಸರೆಲ್ಲರು ದಾಸರೆನಿಸುವರು

ಹೀಗೆ ಮಧ್ವಮತದ ಅನುಯಾಯಿಗಳಾಗಿ ದಾಸಧರ್ಮದೀಕ್ಷೆಯನ್ನು ಪಡೆದು ಹರಿಭಕ್ತಿ ಪ್ರಸಾರ ಕಾರ್ಯವನ್ನು ತಮ್ಮ ಅಪಾರ ಕೃತಿರಾಶಿಯ ಮೂಲಕ ಮಾಡಿ

ಕೀರ್ತಿವಂತರಾದವರು ಈ ಹರಿದಾಸರು ಇವರ ಕೂಟವೇ ದಾಸಕೂಟ ಈ ಪರಂಪರೆಯ ಲ್ಲಿ ಬಂದ ದಾಸರ ಸಂಖ್ಯೆ ಆರುನೂರಕ್ಕೂ ಹೆಚ್ಚಿದೆ ಎಂದು ಹೇಳುತ್ತಾರೆ

ದಾಸಕೂಟ ದ ಅವಳಿ ಪದದಂತೆ ತೋರುವ ವ್ಯಾಸಕೂಟ ವನು ಅರ್ಥೈಸು ವಲ್ಲಿಯೂ ಕೆಲಮಟ್ಟಿನ ಅರ್ಥ ವ್ಯತ್ಯಾಸಗಳು ತೋರಿದಂತೆ ಕಾಣಿಸುತ್ತದೆ —

ವ್ಯಾಸ ಎಂದರೆ ಶ್ರೀ ವೇದವ್ಯಾಸರು—ಬಾದರಾಯಣರು ಈ ವ್ಯಾಸಕೃತ ವಾದ ಸಾಹಿತ್ಯ ಶಾಸ್ತ್ರಗಳನ್ನು ಒಲ್ಲವರು ಪಂಡಿತರು ವ್ಯಾಸಕೂಟದವರೆಂತಲೂ ಪುರಂದರದಾಸರೇ ಮೊದಲಾದ ದಾಸಾರ್ಯರು ಸಾಹಿತ್ಯಜ್ಞರು ದಾಸಕೂಟದವ ರೆಂತಲೂ ಪ್ರತೀತಿ (ಡಾ॥ ಕೆ ಎಂ ಕೃಷ್ಣರಾವ್ ಶ್ರೀ ಜಗನ್ನಾಥರು ಪು ೫೭)

ಶ್ರೀಪಾದರಾಯರ ಕಾಲದಿಂದಲೇ ದಾಸವರ್ಗದ ಸಂಘಟನೆ ಪ್ರಾರಂಭವಾಗಿ ದ್ದರೂ ಶ್ರೀ ವ್ಯಾಸರ ಯರ ಕಾಲದಲ್ಲಿಯೆ ಅದಕ್ಕೆ ಕೂಟ ದ ಸ್ವರೂಪ ಬಂದಿರ ಬೇಕು ದೀಕ್ಷೆಯ ಕ್ರಮ ಅಂಕಿತ ಪ್ರಧಾನಗಳ ಪದ್ಧತಿ ಅಂದಿನಿಂದಲೇ ಜಾರಿಯಲ್ಲಿ ಬಂದುದರಿಂದ ಪುರಂದರದಾಸರೇ ದಾಸಕೂಟ ವೆಂಬ ಪರಂಪರೆಗೆ ಮೊದಲಿಗರೆನ್ನ ಬಹುದು ಹಾಗೆಯೇ ವ್ಯಾಸಕೂಟ ವೆಂಬ ಹೆಸರೇ ಸೂಚಿಸುವಂತೆ ಶ್ರೀ ವ್ಯಾಸ ರಾಯ ರೇ ಅದರ ಸಂಸ್ಥಾಪಕರು

(ದಾಸಸಾಹಿತ್ಯ ದ್ವಿತೀಯ ಘಟ್ಟದ ಸಾಧನೆ ಪು vi)

ಹೀಗೆ ವ್ಯಾಸಕೂಟ ಪದದೊಳಗಿನ ವ್ಯಾಸ ಎಂಬ ಪದ ವೇದವ್ಯಾಸರನ್ನು ಕುರಿತದ್ದು ಎಂದು ಕೆಲವರು ಹೇಳಿದರೆ ಅದು ವ್ಯಾಸರಾಯರನ್ನು ಕುರಿತದ್ದು ಎಂಬ ಸೂಚನೆ ಮೇಲೆ ಉದ್ಧರಿಸಿರುವ ಎರಡನೆ ಭಾಗದಲ್ಲಿ ಇದೆ ಅದೇನೇ ಇದ್ದರೂ ವ್ಯಾಸಕೂಟ ಎಂಬ ಪದ ಒಟ್ಟಿನಲ್ಲಿ ಸೂಚಿಸುವುದು ಹರಿದಾಸ ಪರಂಪರೆಯ ಲ್ಲೇ ಬಂದು ಸಂಸ್ಕೃತದಲಿ ಮಧ್ವಸಿದ್ಧಾಂತದ ಬಗ್ಗೆ ಶಾಸ್ತ್ರೀಯ ಹಾಗೂ ಸಾಹಿತ್ಯಿಕವಾದ ಕೃತಿಗಳನು ರಚಿಸಿದ ಪಂಡಿತರ ಯತಿಗಳ ವರ್ಗವನ್ನು ಎಂದು ಹೇಳಬಹುದು

ವ್ಯಾಸಕೂಟ ಹಾಗೂ ದಾಸಕೂಟ ಗಳೆಂಬ ಪ್ರಭೇದ ಶ್ರೀವ್ಯಾಸರಾಯರ ಹಾಗೂ ಅವರ ಶಿಷ್ಯ ಪುರಂದರದಾಸರ ಕಾಲದಿಂದ ಪ್ರಚಲಿತವಾದವು ಎಂಬ ಅಭಿಪ್ರಾಯವಿದೆ

The words Dasaru and Vyasaru first came into vogue in the time of Purandara Dasa and his religious preceptor Vyasa raja Later on the disciples of Purandara Dasa were called Dasakutastas But afterwards the words Vyasakuta and Dasa kuta aquired a different meaning altogether Vyasakuta meant Those who were well versed in Sanskrit and conversant with the knowledge of the Vedas and the different branches of philosophy And on the other hand Dasakutastas meant

Those who conveyed the message of the Dvaita philosophy and religion through the Vernaculars

(Karnataka Historical Review—Vol IV Jan July 1937 Pp 87 95)

ವ್ಯಾಸಕೂಟ ದಾಸಕೂಟಗಳೆರಡಕ್ಕೂ ಆಧಾರಸ್ತಂಭವಾಗಿ ನಿಂತವರು ವ್ಯಾಸರಾಯರು ಮತ್ತು ಎರಡೂ ಕೂಟಗಳ ಗುರಿ ಒಂದೇ ಆಗಿತ್ತು ವೇದವಿಹಿತವಾದ ತತ್ವಗಳನು ದ್ವೈತ ಸಿದ್ಧಾಂತಾನುಸಾರಿಯಾಗಿ ವಿವರಿಸುವುದು ವ್ಯಾಸರ ಅನುಯಾಯಿಗಳು ಪಂಡಿತಮಾನ್ಯರಿಗೆ ಸಂಸ್ಕೃತ ಮೂಲಕವಾಗಿ ಭಗವಾನ್ ವ್ಯಾಸಕೃತ ಮೂಲಗ್ರಂಥಗಳನ್ನು ವಿವರಿಸಿದರೆ ಪುರಂದರರ ಅನುಯಾಯಿಗಳು ಕನ್ನಡದ ಮೂಲಕವಾಗಿ ಆ ನಿರ್ಣೀತ ತತ್ವಗಳನ್ನು ಕೀರ್ತನೆಗಳ ಮೂಲಕ ಪ್ರಚಾರ ಮಾಡಿದರು ವ್ಯಾಸಕೂಟದವರಿಂದಲೇ ದಾಸಕೂಟದವರು ಪ್ರೇರಣೆ ಪೋಷಣೆಗಳನು ಪಡೆದರ ವ್ಯಾಸಕೂಟದವರೇ ದ ಸಕೂಟದ ಧ್ಯೇಯೋದ್ದೇಶ ಸಾಧನೆಯಲ್ಲಿ ಭಾಗವಹಿಸಿದರು ಆದ್ದರಿಂದ ಮೂಲಭೂತವಾದ ತಾತ್ವಿಕ ಪ್ರಭೆ ದವೇನೂ ಈ ಕೂಟಗಳ ನಡುವೆ ಇಲ್ಲ ಎರಡೂ ಹೇಳುವುದು ಒಂದನೇ ಒಂದೇ ವೃಕ್ಷದ ಶಾಖೆಗಳು ಇವು ಭಾವ ಒಂದೇ ಆದರೂ ಭಾಷೆ ಮಾತ್ರ ಬೇರೆ ಅಷ್ಟೆ ಅಲ್ಲದೆ ದಾಸಕೂಟಸ್ಥರಾದ ಪುರಂದರದಾಸರು ವಿಜಯದಾಸರು ಗೋಪಾಲದಾಸರು ಮೊದಲಾದವರಂತೆಯೆ ವ್ಯಾಸಕೂಟಸ್ಥರಾದ ಶ್ರೀಪಾದರಾಯರು, ವ್ಯಾಸರಾಯರು ವಾದಿರಾಜರು ಕನ್ನಡದಲ್ಲೂ ಕೃತಿರಚನೆ ಮಾಡಿದ್ದಾರೆ

ಈ ಮಹನೀಯರು ಒಬ್ಬರಿಗೊಬ್ಬರು ಅನ್ಯೋನ್ಯ ಮೈತ್ರಿಯಿಂದಲೇ ಇದ್ದರು ಅವರಲ್ಲಿ ಮತಾಂತರವಿರಲಿಲ್ಲ

ವ್ಯಾಸಕೂಟವು ಜ್ಞಾನ ಪ್ರತಿಬಂಧಕವಾಗಿ ಬಂದ ಆಕ್ಷೇಪಗಳನ್ನು ಅಡಗಿಸುವುದಕ್ಕೆ ಮಾಡಿದ ಪ್ರಯತ್ನ ದಾಸಕೂಟವು ಬಂದ ಆಕ್ಷೇಪಗಳು ಅಡಗಿದ ಮೇಲೆ ಪ್ರಮಾಣಗಳಿಂದ ಸಿದ್ಧವಾದ ಪ್ರಮೆಯಗಳನ್ನು ಅನುಷ್ಠಾನದಲ್ಲಿ ತರಲು ಮಾಡಿದ ಉಪದೇಶ ಕ್ರಮವೆನ್ನಬಹುದು ವ್ಯಾಸಕೂಟದಲ್ಲಿ ದಾಸಕೂಟದ ಅಂಶಗಳೂ ದಾಸಕೂಟದಲ್ಲಿ ವ್ಯಾಸಕೂಟದ ಅಂಶಗಳೂ ಹೇರಳವಾಗಿವೆ ಶ್ರೀಜಗನ್ನಾಥದಾಸರಲ್ಲಿ ಈ ಎರಡೂ ಕೂಟಗಳ ಸಮ್ಮಿಳನವಿರುವುದನ್ನು ಅವರ ಜೀವನ ಚರಿತ್ರೆಯಿಂದ ತಿಳಿಯಬಹುದು

(ಡಾ|| ಕೆ ಎಂ ಕೃಷ್ಣರಾವ್ ಶ್ರೀ ಜಗನ್ನಾಥದಾಸರು ಪು ೧೮ ೫೯)

— ಎಂಬ ಮಾತುಗಳಿದ್ದರೂ ರಂ ಶ್ರೀ ಮುಗಳಿಯವರು ತಮ್ಮ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಅವುಗಳಲ್ಲಿ ವಿರೋಧ ಉಂಟಾಯಿತೆಂದೂ ಅನ್ಯೋನ್ಯ ಅವಹೇಳನೆ ನಡೆಯಿತೆಂದೂ ಕೆಲವರು ಹೇಳುತ್ತಾರೆ ಆದರೆ ಒಂದೇ ಭಾಗವತ

ಸಂಪ್ರದಾಯಂದ ಪಂಡಿತಮಾನ್ಯವಾದ ಶಾಖೆ ವ್ಯಾಸಕೂಟವೆಂದೂ ಜನಸಂಮುಖವಾದ ಕನ್ನಡ ಕೀರ್ತನೆಗಳ ಶಾಖೆ ದಾಸಕೂಟವೆಂದೂ ಅವುಗಳಲ್ಲಿ ಸ್ವತಏವ ವಿರೋಧವಿಲ್ಲವೆಂದೂ ಬೇರೆ ಕೆಲವರು ಹೇಳುತ್ತಾರೆ ಎರಡರಲ್ಲೂ ಸತ್ಯಾಂಶವಿದೆ ತತ್ವತಃ ವಿರೋಧವಿರದಿದ್ದರೂ ಆಚರಣೆಯಲ್ಲಿ ಒಬ್ಬರೊಬ್ಬರ ಹೀಯಾಳಿಕೆ ತೋರಿರುವ ಸಂಭವವಿದೆ ಎನ್ನುತ್ತಾರೆ ಈ ಎರಡೂ ಕೂಟದವರ ನಡುವಿನ ಸಂಬಂಧ ನಿಜವಾಗಿ ಹೇಗಿತ್ತು ? ಮೊದಲು ಹಾರ್ದಿಕವಾಗಿದ್ದು ನಂತರ ವಿರಸ ಮೂಡಿತೆ ? ಹಾಗಾಗಿದ್ದರೆ ಅದು ಮೊದಲಾದದ್ದು ಯಾವಾಗ ? ಹೇಗೆ ? ಇತ್ಯಾದಿ ಪ್ರಶ್ನೆಗಳಿಗೆ ಒಂದು ಸ್ಪಷ್ಟ ಉತ್ತರ ಈ ಬಗ್ಗೆ ಬಂದಿರುವ ಲೇಖನಗಳಲ್ಲಾಗಲಿ ಸಾಹಿತ್ಯದಲ್ಲಾಗಲಿ ದೊರೆಯುವುದಿಲ್ಲ ಲೋಕಕ್ಕೇ ಭಕ್ತಿ ಸದಾಚಾರಗಳನ್ನು ಸಾರ ಹೊರಟ ಇವರ ನಡುವೆಯೇ ಹೀಗಾದದ್ದು ಮಾತ್ರ ಕುತೂಹಲಕಾರಿಯಾಗಿದೆ

---

# ಶ್ರೀಪಾದರಾಜರು

—ಎಸ್ ರಮಾನುಜಂ

ಕರ್ನಾಟಕದಲ್ಲಿ 13 ನೇ ಶತಮಾನದಲ್ಲಿ ಶ್ರೀಮಧ್ವಾಚಾರ್ಯರು ಬಿತ್ತಿದ ವೈಷ್ಣವ ಭಕ್ತಿಬೀಜ ನರಹರಿ ತೀರ್ಥರ ಕಾಲದಲ್ಲಿ ಮೊಳಕೆಯೊಡೆಯಿತಾದರೂ ಅದು ಚಿಗುರಿ ಹೆಮ್ಮರವಾಗ ತೊಡಗಿದ್ದು ಶ್ರೀಪಾದರಾಜರ ಕಾಲದಿಂದಲೇ ಇಂದು ನಾವು ಬಹುವಾಗಿ ಕೊಂಡ ಡ ವ ಸಾಹಿತ್ಯಕ್ಷೇತ್ರಕ್ಕೆ ಕನ್ನಡ ನೀಡುವ ಕೊಡುಗೆಗಳ ಲ್ಲೊಂದು ಎಂದು ಹೆಮ್ಮೆಯಿಂದ ಬೀಗುವ ಹರಿದಾಸ ಸಾಹಿತ್ಯ ಲಭ್ಯವಾದುದು ಶ್ರೀಪಾದರಾಜರು ಪಟ್ಟ ಶ್ರಮ ದಿಂದ ಇಟ್ಟ ದಿಟ್ಟ ಹೆಜ್ಜೆಯಿಂದ ನರಹರಿ ತೀರ್ಥರು ಕೆಲವು ಕೀರ್ತನೆಗಳನ್ನು ಕನ ಡದಲ್ಲಿ ರಚಿಸಿದ್ದರೂ ಹರಿದಾಸ ಪರಂಪರೆಯ ಉದಯಕ್ಕೆ ಕಾರಣರಾಗಲಿಲ್ಲ ಪರಂಪರೆಯ ನಿರ್ಮಾಣ ಅವರ ಧ್ಯೇಯವೂ ಆಗಿರಲಿಲ್ಲ ಆದರೆ ಶ್ರೀಪಾದರಾಜರು ಈ ದಿಶೆಯ ಲ್ಲಿ ತ ಮ್ಮೇ ಸ್ವತಃ ಅನೇಕ ಕೃತಿಗಳನ್ನು ರಚಿಸುವುದರ ಜೊತೆಗೆ ಶ್ರೀವ್ಯಾಸರಾಯರಂತಹ ಶಿಷ್ಯರುಗಳನ್ನು ತಯಾರುಮಾಡಿ ಭವ್ಯ ಪರಂಪರೆಯ ನಿರ್ಮಾಣ ಒಂದಕ್ಕೆ ನಾಂದಿ ಹಾಡಿದರು

ವಚನ ಸಾಹಿತ್ಯದ ಹಿನ್ನೆಲೆ ತಮಿಳು ಆಳ್ವಾರರುಗಳು ಪ್ರಬಂಧಗಳ ಪ್ರಭಾವ ಇವರ ಸಾಹಿತ್ಯ ರಚನೆಗೆ ಪ್ರೇರಕಶಕ್ತಿಯಾಗಿ ಪುಷ್ಟಿನೀಡಿತು ಕನ ಡ ವೆಂದರೆ ಮೂಗುಮುರಿಯುತ್ತಿದ್ದ ಕಾಲದಲ್ಲಿ ಅದರಲ್ಲೂ ಪೀಠಾಧಿಪತಿಗಳಾದವರಂ ಸಂಸ್ಕೃತ ಬಿಟ್ಟು ಬೇರೆ ಭ ಷೆಯನಾ ಡುವುದು ಊಹಿಸಲಸಾಧ್ಯವಾಗಿದ್ದ ಪರಿಸ್ಥಿತಿ ಯಲ್ಲಿ ಪೀಠಾಧಿಪತಿಗಳಾಗಿದ್ದುಕೊಂಡೇ ಕನ್ನಡದಲ್ಲಿ ಹಲವಾರು ಸ್ವಂತ ಕೃತಿಗಳನ್ನು ರಚಿಸಿ ಮಠದಲ್ಲಿ ಪೂಜಾಸಮಯದಲ್ಲಿ ಹಾಡುವುದನ್ನು ರೂಢಿಗೆ ತರುವಂತಹ ಕ್ರಾಂತಿಕಾರಕ ನಡೆಗೆ ಸ್ಫೂರ್ತಿಯನ್ನು ಗಂಡೆದೆಯನ್ನು ವಚನ ಸಾಹಿತ್ಯ ಹಾಗೂ ಆಳ್ವಾರರ ಗಳ ಪ್ರಬಂಧ ನೀಡಿತೆನ್ನಬಹ ದು ಸಂಸ್ಕೃತ ತಿಳಿಯದ ವೇದಉಪನಿಷತ್ತು ಪುರಾಣಗಳ ಸಾರ ತಿಳಿಯಲು ಹಂಬಲಿಸುತ್ತಿದ್ದ ಸಾಮಾನ್ಯ ಜನರ ಬೆಂಬಲವೂ ದೇಸೀ ಸಾಹಿತ್ಯದ ಆಕರ್ಷಣೆಯೂ ಇವರ ನಡೆಗೆ ಸಹಾಯಕವಾಗಿದ್ದರಬಹುದು ವೇದ ಪ್ರಮಾಣ ತಿರಸ್ಕರಿಸಿ ನಿರ್ಮಾಣವಾದ ಬಸವಣ್ಣನವರ ವೀರಶೈವ ಧರ್ಮ ಸ್ವೀಕರಿಸಲ ರದೇ ತಮ್ಮ ಒಂದು ಧಾರ್ಮಿ ಕ ಚೌಕಟ್ಟಿನಲ್ಲೇ ಬದಲಾವಣೆ ನಿರೀಕ್ಷಿ ಸುತ್ತಿದ್ದ ಜನತೆ ಇಂತಹದೊಂದು ಬದಲಾವಣೆಯನ್ನು ಹೂತ್ಪೂರ್ವಕವಾಗಿ ಸ್ವಾಗತಿ ಸಿದ್ದಿರಬಹುದು

ಶ್ರೀಪಾದರಾಜರ ಈ ಸಾಧನೆ ಅವರನ್ನು ಹರಿದಾಸ ಪಿತಾಮಹ ಪಟ್ಟಕ್ಕೇರಿ ಸಿದೆ ಇತರ ದಾಸಶ್ರೇಷ್ಠರುಗಳೆಲ್ಲರೂ ಇವರನ್ನು ಹಲವು ಬಗೆಯಾಗಿ ಹಾಡಿ

ಹೊಗಳಿದ್ದಾರೆ ಈ ಕ ರಣದಿಂದಲೇ ಇರಬಹುದು ಪರಂಪರೆಯಿಂದ ಬಂದ ಈ ಕೆಳಗಿನ ಶ್ಲೋಕದಲ್ಲಿ ಧ್ರುವಾಂಶ ಸಂಭೂತರೆಂದು ಪ್ರಖ್ಯಾತರಾಗಿರುವ ಶ್ರೀಪಾದರಾಜರನ್ನು ಮೊದಲು ಅಭಿವಂದಿಸಿ ಪುರಸ್ಕರಿಸಲಾಗಿದೆ

ನಮಃ ಶ್ರೀಪಾದರಾಜ ಯ । ನಮ ಸ್ತೆ ವ್ಯಾಸಯೋಗಿನೇ ।
ನಮಃ ಪುರಂದರ ಯರ್ಾಯ । ವಿಜಯರ ಜಾಯ ನಮಃ ।

ಇವರ ಸ್ಮರಣೆಯಿಂದ ಸಕಲಕಷ್ಟಗಳೂ ಪರಿಹಾರವಾಗಿ ಸವ್ವದ್ದ ಮ್ಯಷ್ಟಾನ್ನ ಭೋಜನ ಲಭಿಸ ವುದೆಂಬ ಪ್ರೀತಿಯೊಂದು ಹಬ್ಬಿಕೊಂಡಿದೆ ಅಂತೂ ಇವರು ಮಾಡಿದ ಕೆಲಸಕ್ಕೆ ತಕ್ಕ ಪ್ರತಿಫಲ ಜನತೆಯಿಂದ ಇವರಿಗೆ ಸಂದಿದೆ

## ಜೀವನ ಚಿತ್ರಣ

ಶ್ರೀಪಾದರಾಜರ ಶಿಷ್ಯ ಶ್ರೀಪ ರಾದ ವ್ಯಾಸರಾಯರು ತಮ್ಮ ಗುರುಗಳನ್ನು ಕುರಿತ ರಚಿಸಿರ ವ ಅನೇಕ ರಚನೆಗಳು ವಾದಿರಾಜರ ಕೀರ್ತನೆಗಳು ಹಾಗೂ ಸಂಸ್ಕೃತದ ಶ್ರೀಪಾದರಾಜ ಗ ರುರಾಜ ಸ್ತೋತ್ರ ಮತ್ತು ವಿಜಯದಾಸರು ರಚಿಸಿರುವ ಶ್ರೀಪ ದರಾಜರ ಸುಳಾದಿ ಮುಂತಾದವುಗಳು ಶ್ರೀಪಾದರಾಜರ ಬದುಕಿನ ಮೇಲೆ ನಿಶ್ಚಿತ ಬೆಳಕನ್ನು ಬಿ ರುತ್ತವೆ ಅಂತೆಯೇ ಶ್ರೀನಿಧಿ ತೀರ್ಥರ ಶ್ರೀಪ ದರ ಜಾಷ್ಟಕ ಮತ್ತು ಭೀಮಾಚಾ ರ್ಯರು ರಚಿಸಿರುವ ಶ್ರೀಪೂರ್ಣಬೋಧ ಗುರುವಂಶ ಕಲ್ಪತರು ವ ಂತಾದ ಸಂಸ್ಕೃತ ಕೃತಿಗಳೂ ಸಹ ಅವರ ಯತ್ಯಾಶ್ರಮದ ನಂತರದ ವಿಶೇಷ ಸಂಗತಿಗಳನು ವರ್ಣಮಯವಾಗಿ ಚಿತ್ರಿಸಿವೆ

ಶ್ರೀಪಾದರ ಜರು ಸನ್ಯಾಸ ಸ್ವೀಕರಿಸುವ ಮ ಂಚಿನ ಪ್ರಸಂಗವೊಂದನ್ನು ಬೇಲೂರು ಕೇಶವನದಾಸರು ಸುದೀರ್ಘವಾಗಿ ಆಕರ್ಷಕವಾಗಿ ತವ್ಮ ಕರ್ನಾಟಕ ಭಕ್ತಚರಿತೆ ಯ ಲ್ಲಿ ಚಿತ್ರಿಸಿದ್ದಾರೆ ಆದರ ಸ ರಾಂಶವಷ್ಟನ್ನೇ ಇಲ್ಲಿ ಕೊಡಲಾಗಿದೆ

ಲಕ್ಷ್ಮೀನಾರಾಯಣ ಎಂಬುದು ಶ್ರೀಗಳವರ ಪೂರ್ವಾಶ್ರವ ದ ಹೆಸರು ತಂದೆ ಶೇಷಗಿರಿಯಪ್ಪ ಹಾಗೂ ತಾಯಿ ಗಿರಿಯಮ್ಮ ಬೆಂಗಳೂರು ಜಿಲ್ಲೆ ಚೆನ್ನಪಟ್ಟಣ ತಾಲ್ಲೂಕಿನ ಅಬ್ಬೂರಿನ ಸಮೀಪದಲ್ಲಿ ಈ ದಂಪತಿಗಳು ವಾಸವಾಗಿದ್ದರು ಸ್ಥಿತಿ ಗತಿ ಹೇಳಿಕೊಳ್ಳುವಂತೇನೂ ಇರಲಿಲ್ಲ ಲಕ್ಷ್ಮೀನಾರಾಯಣನು ಒಮ್ಮೆ ಸಾಯ ಂಕಾಲದ ವೇಳೆಯಲ್ಲಿ ತನ ದನಕರ ಗಳನ್ನು ಮನೆಗೆ ಹೊಡೆದುಕೊಂಡು ಹೊರಟಿದ್ದನು ಅದೇ ಸವ ಯದಲ್ಲಿ ಸ್ವರ್ಣವರ್ಣತೀರ್ಥಸ್ವಾಮಿಗಳು ಅಬ್ಬೂರಿನ ಸಮೀಪದ ಗುಹೆಯಲ್ಲಿನ ಪುರುಷೋತ್ತಮ ರನ್ನು ಭೇಟಿಯಾಗಲು ಬರುತ್ತಿದ್ದರು ಬಾಲಕನನ್ನು ಕರೆದು ಮಗು ಅಬ್ಬೂರು ಇನ್ನು ಎಷ್ಟು ದೂರವಿದೆಯಪ್ಪ ಎಂದು ಕೇಳಲು ಬಾಲಕನು ನೇರವಾಗಿ ಉತ್ತರಿಸದೆ ಇಗೋ ನನ್ನನ್ನು ನೋಡಿ ದನಗಳನ್ನು ನೋಡಿ ಸೂರ್ಯನನ್ನು ನೋಡಿ ಎಷ್ಟು ದೂರವೋ ಗೊತ್ತಾಗುತ್ತದೆ ಎಂದ

ಚಮತ್ಕಾರವಾಗಿ ಉತ್ತರಿಸಿದನು ಸ್ವಾಮಿಗಳ ಸಂತುಷ್ಟರಾಗಿ ಮೇನೆಯಲ್ಲಿ ಕುಳಿತು ಅಬ್ಬೂರಿನ ದಾರಿ ತೋರಿಸಲು ಹೇಳಿದರು ಆದರೆ ಆ ಬಾಲಕ ಅದು ನನಿಂದ ಸಾಧ್ಯವಿಲ್ಲ ಈಗಾಗಲೇ ನಮ್ಮ ದೊಡ್ಡಮ್ಮನ ಮಗನಿಗೆ ಸಂನ್ಯಾಸವಿತ್ತು ಇಲ್ಲಿ ನೆಲೆಸಿರುವ ಸ್ವಾಮಿಗಳು ಮಠಕ್ಕೆ ಸೇರಿಸಿಕೊಂಡಿದ್ದಾರೆ ನಾನ ನಿಮ್ಮ ಜೊತೆ ಕುಳಿತು ಬರುವುದೆಂದರೆ ನಮ್ಮ ತಾಯಿ ಹೆದರಿಯಾಳು ಎಂದನು ಸ್ವಾಮಿಗಳು ಬಾಲಕನಿಂದ ಅವನ ಅಣ್ಣನಿಗೆ ದೀಕ್ಷೆಕೊಟ್ಟವರ ಪುರುಷೋತ್ತಮರೆಂದು ಅರಿತು ಅವನನ್ನು ಹರಿಸಿ ಬೀಳ್ಕೊಟ್ಟರು ಅನಂತರ ಪುರ ಷೋತ್ತಮ ತೀರ್ಥರ ಬಳಿಗೆ ಬಂದು ಅಲ್ಲಿಂದ ಬಾಲಯತಿಯನ್ನು ಕಂಡು ತಮಗೂ ಇಂಥ ಒಬ್ಬ ಶಿಷ್ಯನು ಬೇಕೆಂದು ಬಯಸಿದರು ಹರಿಕೃಪೆಯಿಂದ ಇಲ್ಲೇ ದೊರೆಯಬಹುದೆಂದು ಪುರುಷೋತ್ತಮರು ಉತ್ತರವಿತ್ತರು ನಂತರ ಸ್ವರ್ಣವರ್ಣರು ಲಕ್ಷ್ಮೀನಾರಾಯಣನ ಭೇಟಿಯ ವೃತ್ತಾಂತವನ್ನು ವಿವರಿಸಿ ಬಾಲಕನನು ಬಾಯಿ ತುಂಬ ಕೊಂಡಾಡಿದರು ಶ್ರೀ ಪುರುಷೋತ್ತಮರು ಆ ಬಾಲಕನಾರಿರಬಹುದೆಂದು ಮನಸ್ಸಿನಲ್ಲಿಯೇ ಯೋಚಿಸಿ ಗ್ರಹಿಸಿದರು

ಇತ್ತ ಮಗನು ಬಂದದ್ದು ತಡವಾದುದರಿಂದ ಅವನಿಗಾಗಿ ಕಾಯುತ್ತ ನಿಂತಿದ್ದ ಅವನ ತಾಯಿ ಬಂದ ಕ್ಷಣವೇ ಏಕಮ್ಮ ಹೊತ್ತಾಯಿತು ಎಂದು ಕೇಳಲು ಯತಿವರ್ಯರ ಭೇಟಿಯ ವಿಷಯ ತಿಳಿಸಿದನು ಆಕೆಯ ಮಾತೃ ಹೃದಯ ಮುಂದೇನು ಕಾದಿದೆಯೋ ಎಂದು ಆತಂಕಗೊಂಡಿತು ಅದಕ್ಕೆ ತಕ್ಕಂತೆ ಮಾರನೇ ದಿನವೇ ಶೇಷಗಿರಿ ಮತ್ತು ಗಿರಿಯಮ್ಮ ದಂಪತಿಗಳಿಗೆ ತಮ್ಮ ಮಗನನ್ನು ಕರೆತರುವಂತೆ ಪುರುಷೋತ್ತಮರಿಂದ ಆದೇಶಬಂತು ಇದನ್ನು ಕೇಳಿ ದಂಪತಿಗಳು ಅವಾಕ್ಕಾದರು ಆದರೆ ಗುರುವಾಜ್ಞೆ ಮೀರಲಾರದೆ ಪುತ್ರಸಮೇತರಾಗಿ ಪುರುಷೋತ್ತಮ ತೀರ್ಥರನ್ನು ಕಂಡರು ಅವರು ಶೇಷಗಿರಿಯನ್ನು ಕರೆದು ನಿನ್ನ ಮಗನಿಗೆ ಬ್ರಹ್ಮೋಪನಯನ ಮಾಡಿ ಅವನ ವಿದ್ಯಾಭ್ಯಾಸ ಸರ್ವಸ್ವವನ್ನು ನೆರವೇರಿಸಲು ಸುವರ್ಣ ತೀರ್ಥರು ಸಿದ್ಧರಿರುವರು ಮುಂದೆ ಅವನನ್ನೇ ಉತ್ತರಾಧಿಕಾರಿಯನ್ನಾಗಿ ಸ್ವೀಕರಿಸುವರು ಈ ಬಗ್ಗೆ ನಿನ್ನ ಪತ್ನಿಯನ್ನು ವಿಚಾರಿಸಿ ತಿಳಿಸು ಎಂದು ಮನಒಲಿಸುವಂತೆ ಹೇಳಿದರು ಅವರ ಆಶ್ರಮದಲ್ಲಿ ತಾವೂ ಇರಬಹುದೆಂಬುದನ್ನು ದೃಢಪಡಿಸಿಕೊಂಡು ಆ ದಂಪತಿಗಳು ಒಪ್ಪಿಗೆ ಕೊಟ್ಟರು

ಸುವರ್ಣತೀರ್ಥರ ಆಶ್ರಯದಲ್ಲಿ ಲಕ್ಷ್ಮೀನಾರಾಯಣನು ದಿನೇ ದಿನೇ ವೃದ್ಧಿ ಹೊಂದುತ್ತಿದ್ದನು ಬ್ರಹ್ಮೋಪನಯನ ವಿದ್ಯಾಭ್ಯಾಸ ಉತ್ಸವಗಳ ನಂತರ ಸಂನ್ಯಾಸ ದೀಕ್ಷೆಯನ್ನು ಕೊಟ್ಟು ಪೀಠಾಧಿಕಾರಕ್ಕೆ ತಕ್ಕ ವೇದಾಂತ ವ್ಯಾಸಂಗಕ್ಕಾಗಿ ಲಕ್ಷ್ಮೀನಾರಾಯಣ ತೀರ್ಥರನು ಸುಪ್ರಸಿದ್ಧರಾದ ರಘುನಂದನ ಮಠದ ಪೂರ್ವಪೀಠಿಗೆಯ ವಿಬುಧೇಂದ್ರ ತೀರ್ಥರಲ್ಲಿಗೆ ಕಳುಹಿಸಿಕೊಟ್ಟರು ಹೀಗೆ ಅವರಲ್ಲಿ ವ್ಯಾಸಂಗ ಮಾಡುತ್ತಿದ್ದಾಗ ಅವರೊಂದಿಗೆ ಕಲೆತು ಸಂಚಾರ ಮಾಡುವ ಸುಯೋಗ ಪ್ರಾಪ್ತವಾಯಿತು

ಇಬ್ಬರೂ ಸಂಚಾರ ಮಾಡುತ್ತಾ ಕೊಪ್ಪ ಎಂಬ (ರಾಯಚೂರು ಜಿಲ್ಲೆ, ದೇವಗಿರಿ ತಾಲ್ಲೂಕು) ಸ್ಥಳಕ್ಕೆ ಬಂದರು. ಇದೇ ಸಮಯದಲ್ಲಿ ಉತ್ತರಾದಿಮಠದ ರಘುನಾಥ ತೀರ್ಥರೂ ಕೊಪ್ಪಕ್ಕೆ ಬಂದರು. ಇಬ್ಬರೂ ಯತಿವರ್ಯರು ಕೇಳಬೇಕೆ ? ಸಮಾಗಮ ದಿಂದ ಸಂತೋಷಗೊಂಡರು. ನಂತರ ವಿಬುಧೇಂದ್ರರು ವಿದ್ಯಾಪಾರಂಗತರೆನಿಸಿದ್ದ ರಘುನಾಥರಿಗೆ ತಮ್ಮ ಶಿಷ್ಯನ ಪರಿಚಯ ಮಾಡಿಕೊಟ್ಟು ಅವನ ವಿದ್ಯಾಪರಿಶ್ರಮ ವನ್ನು ಅವಲೋಕಿಸಿ ಆಶೀರ್ವದಿಸಬೇಕೆಂದು ಕೋರಿದರು. ಅಂತೆಯೇ ಕೊಪ್ಪದಲ್ಲಿ ಆ ಮಾರನೆಯದಿನ ವಿದ್ವಾಂಸರ ಸಭೆಯೊಂದು ನಡೆಯಿತು. ಲಕ್ಷ್ಮೀನಾರಾಯಣ ತೀರ್ಥರು ರಘುನಾಥ ತೀರ್ಥರ ನ್ಯಾಯಸುಧೆಯಲ್ಲಿನ ಕಠಿಣವಾದ ವಾಕ್ಯವೊಂದಕ್ಕೆ ಉತ್ತರವಾಗಿ ಟೀಕಾಚಾರ್ಯರ ಇಡೀ ಗ್ರಂಥವನ್ನೇ ವಿಶಿಷ್ಟ ರೀತಿಯಲ್ಲಿ ವ್ಯಾಖ್ಯಾನ ಮಾಡಿತೋರಿಸಿದರು. ರಘುನಾಥತೀರ್ಥರು ಇವರ ಪಾಂಡಿತ್ಯಕ್ಕೆ ಬೆರಗಾಗಿ ಮತ್ತೆ ಮತ್ತೆ ಪ್ರಶಂಸಿಸುತ್ತಿರಲು ಲಕ್ಷ್ಮೀನಾರಾಯಣರು ನಾನೊಬ್ಬ ಬಾಲಸಂನ್ಯಾಸಿ ತಾವಾದರೋ ಮಹಾಸಂಸ್ಥಾನಾಧಿಪತಿಗಳು ಶ್ರೀಪಾದಂಗಳು ನನ್ನಂಥವನ ಗುಣಕಥನ ಮಾಡಬಾರದು ಎಂದು ನಮ್ರರಾಗಿ ನುಡಿಯಲು ರಘುನಾಥರು ಮೆಚ್ಚುಗೆಯಿಂದ ನಾವು ಬರೇ ಪಾದಂಗಳು ತಾವಾದರೋ ಶ್ರೀಪಾದರಾಜರು ನಾವು ಇದನ್ನು ಮನಃ ಪೂರ್ವಕವಾಗಿ ಆಡುತ್ತಿದ್ದೇವೆ ಎಂದರು. ಅಂದಿನಿಂದ ಲಕ್ಷ್ಮೀನಾರಾಯಣ ತೀರ್ಥರು ಶ್ರೀಪಾದರಾಜರಾದರು. ಸಂಚಾರದನಂತರ ಶ್ರೀರಂಗಕ್ಕೆ ಸ್ವರ್ಣವರ್ಣ ತೀರ್ಥರಲ್ಲಿಗೆ ಶ್ರೀಪಾದರಾಜರು ವಿದ್ಯಾಭ್ಯಾಸ ಪೂರೈಸಿದ್ದರಿಂದ ವಾಪಸ್ಸಾದರು. ಕೆಲದಿನಗಳಲ್ಲೇ ಸ್ವರ್ಣವರ್ಣರು ಬೃಂದಾವನಸ್ಥರಾಗಲು ಪದ್ಮನಾಭತೀರ್ಥರ ಮಠದ ಸರ್ವಾಧಿಪತ್ಯವೂ ಶ್ರೀಪಾದರಾಜರದಾಯಿತು. ಶ್ರೀರಂಗದಲ್ಲಿ ಕೆಲವು ವರ್ಷಗಳಿದ್ದು ಸಂಚಾರ ಹೊರಟು ಮುಳುಬಾಗಿಲಿಗೆ ಬಂದು ಅಲ್ಲಿನ ಮಹತ್ವವರಿತು ಅಲ್ಲಿಯೇ ಮಠವನ್ನು ಸ್ಥಿರವಾಗಿ ಸ್ಥಾಪಿಸಿದರು. ಮುಳುಬಾಗಿಲು ವಿಜಯನಗರದ ಅರಸರ ಅಧಿಪತ್ಯಕ್ಕೆ ಒಳಪಟ್ಟು ತುಂಬಾ ಪ್ರಸಿದ್ಧವಾಗಿತ್ತು. ಇವರ ಆಗಮನದಿಂದ ದ್ವೈತದರ್ಶನವನ್ನು ಕಲಿಸುವ ಪ್ರಮುಖ ಕೇಂದ್ರವೂ ಆಯಿತು.

ಶ್ರೀಪಾದರಾಜರು ಮಠಾಧಿಪತ್ಯವನ್ನು ವಹಿಸಿಕೊಂಡಕೂಡಲೇ ಸಾಮಾನ್ಯ ಜನರಿಗೆ ತಿಳಿಯುವಂತೆ ದ್ವೈತ ತತ್ವಗಳು ಭಾಗವತದ ಕಥೆಗಳು ಮಹಾಭಾರತ ರಾಮಾಯಣಗಳು ಇವೇ ಮೊದಲಾದುವನ್ನು ಕನ್ನಡೀಕರಿಸಿ ಹಾಡುಗಳನ್ನಾಗಿ ಪರಿವರ್ತಿಸಿ ಪೂಜಾಸಮಯದಲ್ಲಿ ಭಾಗವತರ ಮುಖೇನ ಹಾಡಿಸುವ ಪದ್ಧತಿಯನ್ನು ಜಾರಿಗೆ ತಂದರು. ಕೆಲವೊಮ್ಮೆ ತಾವೇ ಹಾಡಿ ನರ್ತಿಸುತ್ತಿದ್ದರು. ಆ ಕಾಲದಲ್ಲಿ (147) ಚಂದ್ರಗಿರಿಯ ಅರಸನಾದ ನರಸಿಂಹರಾಜನು ಇವರ ಗುಣಗಳಿಗೆ ಉಪದೇಶಗಳಿಗೆ ಮನಸೋತು ಇವರನ್ನು ತನ್ನ ಸಿಂಹಾಸನದ ಮೇಲೆ ಕೂಡಿಸಿ ಕನಕಾಭಿ

ಷೇಕ ಮಾಡಿಸಿದನೆಂದು ಪ್ರತೀತಿ ಇದೆ ಇದಕ್ಕೆ ಆಧಾರ ಶ್ರೀಪಾದ ರಾಜ ಷ್ಟಕ ಹಾಗೂ ವ್ಯಾಸರಾಯರ ಒಂದು ದೇವರನಾಮ

ಶ್ರೀಪಾದರಾಜರು ಉತ್ತರ ಯಾತ್ರೆಮಾಡಿ ಬರಲು ಆಲೋಚನೆ ಅಂತೆಯೇ ಪ್ರಯಾಣ ಕೈಗೊಂಡು ಹೋದಲೆಲ್ಲಾ ವಿದ್ವತ್ಸಭೆಗಳನ್ನು ಮಾಡಿ ಭಾಗವತ ಧರ್ಮವನ್ನು ಉಪದೇಶಿಸಿದರು ಕಾಶಿಯ ಕೊಬ್ಬಿದ ಪಂಡಿತರನ್ನು ಕಾಶೀರಾಜನ ಸಭಾಂಗಣದಲ್ಲಿ ಸೋಲಿಸಿ ಸೋತ ಪಂಡಿತರು ಸಂನ್ಯಾಸ ಸ್ವೀಕರಿಸುವಂತೆ ಮಾಡಿದರು ನಂತರ ಪಂಡಿತರು ಚಿಟಂ ತಂತ್ರಗಳಿಂದ ವಾಗ್ಬಂಧ ಮಾಡಲು ಹಯಗ್ರೀವ ಮಂತ್ರೋಚ್ಚಾರಣೆಯಿಂದ ಅದನ್ನು ಬಿಡಿಸಿಕೊಂಡರು ಈ ರೀತಿ ಅನೇಕ ಕೇಂದ್ರಗಳಲ್ಲಿ ಪ್ರಾಶಸ್ತ್ಯ ಪಡೆದು ಮುಳಬಾಗಿಲಿಗೆ ಹಿಂದಿರುಗಿ ಬಂದು ಕಾಲಾನಂತರದಲ್ಲಿ ಬೃಂದಾವನಸ್ಥರಾದರು

ಹೀಗೆ ಶ್ರೀಪಾದರಾಜರು ಚನ ಪಟ್ಟಣದ ಅಬ್ಬೂರಿನಲ್ಲಿ ಜನಿಸಿ ಬಾಲ್ಯವನ್ನು ಕಳೆದು ಶ್ರೀರಂಗಕ್ಷೇತ್ರದಲ್ಲಿ ಸ್ವರ್ಣವರ್ಣತೀರ್ಥರಿಂದ ಸಂನ್ಯಾಸ ಸ್ವೀಕರಿಸಿ ಹಲವು ಕಾಲ ಅಲ್ಲಿದ್ದು ವ ರ ದಿಗತ ವಹಿಸಿಕೊಂಡನಂತರ ಮ ಳಬಾಗಿಲಿಗೆ ಬಂದು ಅಲ್ಲಿಯೇ ನೆಲೆಯಾಗಿ ನಿಂತರು ಡಾ॥ ಜಿ ವರದರಾಜಾರಾಯರ ಪ್ರಕಾರ ಇವರು ತೊಂಬತ್ತೆಂಟು ವರ್ಷಗಳ ಕಾಲ ಜಿ ಎಸಿದ್ದರು ಇವರ ಕಾಲ ಕ್ರಿ ಶ 1404-1502 (ಶ್ರೀಪಾದರಾಜರಾಯ ರು ಪು xii) ಬಿ ಎನ್ ಕೆ ಶರ್ಮಾರವರು ಇವರ ಕಾಲವನ್ನು ಕ್ರಿ ಶ 1420 1486 ಎಂದು ಹೇಳ ತ್ತಾರೆ (ಪುಟ 250) ಬೇಲೂರು ಕೇಶವದಾಸರ ಪ್ರಕಾರ ಆವರು ಬೃಂದಾವನಸ್ಥರಾದುದು ಕ್ರಿ ಶ 1486 (ಪುಟ 37) ಇದು ಮೇಲಿನ ಶರ್ಮಾರವರ ಹೇಳಿಕೆಯನ್ನು ದೃಢೀಕರಿಸುತ್ತದೆ ಅಂತೂ 15 ನೇ ಶತಮಾನದ ಆದಿಯಲ್ಲಿ ಜನಿಸಿ ಆ ಶತಮಾನದ ಅಂತ್ಯದ ಹತ್ತಿರ ಹತ್ತಿರದವರೆಗೂ ಜೀವಿಸಿದ್ದರೆಂದು ಇಟ್ಟುಕೊಳ್ಳಬಹ ದು

## ಶ್ರೀಪಾದರಾಜರ ಅತಿಮಾನುಷ ಮಹಿಮೆಗಳು

ಶ್ರೀಪಾದರಾಜರು ತೋರಿದರೆಂದು ಹೇಳಲಾಗುವ ಅತಿಮಾನುಷ ಮಹಿಮೆಗಳಲ್ಲಿ ಕೆಲವೊಂದಕ್ಕೆ ಶ್ರೀ ವ್ಯಾಸರ ಯ ರ

ಮಹಿಮೆ ಸಾಲದೆ ಇಷ್ಟೇ ಮಹಿಮೆ ಸಾಲದೆ
ಅಹಿಶಯನನ ಒಲುಮೆ ಯಿಂದ । ಮಹಿಯೊಳೊಪ್ಪೆ ಶ್ರೀಪಾದರಾಯರ
ಮುತ್ತಿನ ಕವಚ ಮೇಲ್ಕುಲಾವಿ । ರತ್ನ ಕೆತ್ತಿದ ಕರ್ಣಕುಂಡಲ ।
ಕಸ್ತೂರಿ ತಿಲಕ ಶ್ರೀಗಂಧಲೇಪನ । ವಿಸ್ತಾರದಿಂದ ಮೆರೆದು ಬರುವ ೧

---

1 ಶ್ರೀಮದ್ವೀರನೃಸಿಂಹರಾಜ ನ ಪತೇರ್ಭೂದೇವಹತ್ಯಾವ್ಯಥಾಂ ।
ದೂರೀಕೃತ್ಯ ದರ್ಪತೋಜ್ವಲ ವ ಹಾ ಸಿಂಹಾಸನೇ ಸಂಸ್ಥಿತಂ ॥
ಶ್ರೀಮತ್ಪೂರ್ವಕವಾಟ ನಾಮಕಪುರೇ ಸರ್ವೇಷ್ಟಸಿದ್ಧಿಪ್ರದಃ ।
ಶ್ರೀ ಶ್ರೀಪಾದಯತೀಂದ ಶೇಖರ ಮಣಿರ್ಭೂಯಾತ ನಃ ಶ್ರೇಯಸೇ ॥

ವಿಪ್ರಹತ್ಯ ದೋಷ ಬರ ು । ಕ್ಷಿಪ್ರ ಶಂಖೊ ದಕದಿ ಕಳೆಯೆ ।
ಅಪ್ರಬುದ್ಧರು ದೂಷಿಸೆ ಗೇರೆಣ್ಣೆ । ಕಪ್ಪು ವಸನವ ಶುಭ್ರಮಾಡಿದ ೨
ಹರಿಗೆ ಸಮರ್ಪಿಸಿದ ನಾನಾ । ಪರಿಯ ಶಾಕಗಳನು ಭುಂಜಿಸೆ ।
ನರರು ನಗಲಂ ಶ್ರಿ ಕೃಷ್ಣನ । ಕರ ಣದಿಂದ ಹಸೆಯ ತೋರಿದ ೩

ಕೀರ್ತನೆ ಆಧಾರವಾಗಿದೆ ಹೆಚ್ಚಿನ ವಿಶ್ಲೇಷಣೆಗೆ ತೊಡಗದೆ ಅವರ ಮ ಹಿಮೆಗಳನ್ನು ಪಟ್ಟಿಮಾಡಿ ನಂತರ ಅವರ ಕೃತಿಗಳತ್ತ ಗಮನ ಹರಿಸುವ

1) ಶ್ರೀ ಪಾದರಾಜರ ಭಕ್ತಜನರ ಕೋರಿಕೆಯಂತೆ ಗಂಗೆಯನು ಸ್ತೋತ್ರ ಮಾಡಿ ನೃಸಿಂಹ ತಿ ರ್ಥದಲ್ಲೇ ಆಕೆ ಅವತರಿಸುವಂತೆ ಮಾಡಿ ಎಲ್ಲರಿಗೂ ಗಂಗಾಸ್ನಾನ ಮಾಡಿಸಿದರು

2) ಶಂಖೊ ದಕ ಪ್ರೋಕ್ಷಣೆಯಿಂದ ಬ್ರಹ್ಮಹತ್ಯಾ ಪಾತಕಿಯಾದ ಬ್ರಾಹ್ಮಣ ನೊಬ್ಬನ ಬ್ರಹ್ಮಹತ್ಯವನ್ನು ಪರಿಹರಿಸಿದರು ಇದರ ಬಗ್ಗೆ ಶಿಷ್ಯರು ಗುಸು ಗುಸು ಮಾತಿಗಾರಂಭಿಸಿದಾಗ ಧವಳ ವಸ್ತ್ರವನ್ನು ತರಿಸಿ ಗೇರೆಣ್ಣೆಯಲ್ಲಿ ಅದ್ದಿಸಿ ಅದನ್ನು ಶುಭ್ರಮಾಡಲು ಶಿಷ್ಯರಿಗೆ ಆಜ್ಞಾಪಿಸಿದರು ಅವರಿಂದ ಅದು ಸಾಧ್ಯವಾಗದಿರಲು 7 ದಿನಗಳು ನಿತ್ಯ ಶಂಖೋದಕವನು ಅದಕ್ಕೆ ಪ್ರೋಕ್ಷಿಸಿ ಶುಭ್ರಗೊಳಿಸಿ ತೋರಿಸಿದರು

3) ವ್ಯಾಸರಾಯರು ಬಾಲಕರಾಗಿದ್ದಾಗ ಪುರ ಷೋತ್ತಮ ತೀರ್ಥರ ಗುಹೆ ಯ ಲ್ಲೊಮ್ಮೆ ಮಲಗಿರಲು ದೊಡ್ಡದೊಂದು ಅಜಗರವು ಅವರನ್ನು ನುಂಗುವುದಕ್ಕೆ ಬಂತು ಆ ಸಮಯದಲ್ಲಿ ಶ್ರಿಪಾದರಾಯ ರು ಸರ್ಪಭಾಷೆಯಿಂದ ಅಜಗರದೊಡನೆ ಮಾತನಾ ಡಿ ಅದರಿಂದ ವ್ಯಾಸರಾಯರನ್ನು ರಕ್ಷಿಸಿದರು

4) ಭೀಮರಥೀ ತೀರದಲ್ಲಿ ಭೂಗರ್ಭದಲ್ಲಡಗಿದ್ದ ಸ್ವರ್ಣಪೀಠಿಕೆಯೊಂದನ್ನು ಸ್ವಪ್ನ ಸೂಚನೆಯಿಂದ ತೆಗೆಸಿ ಅದರಲ್ಲಿ ದೊರೆತ ರಂಗವಿಠಲದೇವರನ್ನು ಪೂಜೆಗೆ ಇಟ್ಟುಕೊಂಡರು

5) ಶ್ರೀಪಾದರಾಜರು ಎಲ್ಲಿದ್ದರೂ ಅರುವತ್ನಾಲ್ಕು ಬಗೆಯ ಪದಾರ್ಥ ಗಳನ್ನೇ ಮಾಡಿಸಿ ನೈವೇದ್ಯಮಾಡಿ ಭಿಕ್ಷಾಸ್ವೀಕಾರ ಮಾಡುತ್ತಿದ್ದರು ಪರೀಕ್ಷಾರ್ಥ ವಾಗಿ ಒಮ್ಮೆ ರಾಜನು ಶ್ರಿಪಾದರಾಜರನ್ನು ಒಂದು ಅರಣ್ಯದಲ್ಲಿರುವಂತೆ ಮಾಡಿ ಏನೂ ಸಿಗದಂತೆಮಾಡಲು ಮಧ್ಯಾಹ್ನ ಕಾಲಕ್ಕೆ ಸರಿಯಾಗಿ ಭಗವತ್ಪ್ರೇರಣೆಯಿಂದ ಯಾರೋ ಅವರಿಗೆ ಬೇಕಾದ ಸಾಮಗ್ರಿಯನ್ನು ತಂದುಕೊಟ್ಟರು ಎಂದಿನಂತೆ ಪೂಜಾಭಿಕ್ಷೆಗಳು ನೆರವೇರಲು ರಾಜನು ನಾಚಿ ಪಶ್ಚಾತ್ತಾಪದಿಂದ ಶರಣಾದನು

6) ಸಾಳುವ ನರಸಿಂಹನ ಬ್ರಹ್ಮಹತ್ಯಾದೋಷ ನಿವಾರಣೆ

7) ಶ್ರಿಪಾದರಾಜರು ದೈವಕೃಪೆಯಿಂದ ಸುಖ ಪಾರಬ್ಧದ ವರ್ಗಕ್ಕೆ ಸೇರಿದ ವರು ಇದನ್ನು ಕಂಡ ಕೆಲವು ಅಸುಯೂಪರರು ಸನ್ಯಾಸಿಗಳು ಈ ಸುಖಭೋಗ

ಗಳಿಗೂ ಎಲ್ಲಿಂದೆಲ್ಲಿಗೆ ಸಂಬಂಧ ಎಂದು ಅಲ್ಲಗೆಳೆಯಲಾರಂಭಿಸಿದರು ಆಗ ಶ್ರೀಪಾದ ರಾಜರು ತಾವು ತಿಂದ ಆಹಾರವನ್ನೆಲ್ಲ ಅಸೂಯಾಪರರ ಎದುರಿಗೆ ಮತ್ತೆ ತೆಗೆದಿಡಲು ಆಗ ಅದು ಅವರಿಂದ ಭೋಜ್ಯವಾಗದೆ ಹಸಿಹಸಿಯದಾಗಿ ಹಾಗೆಯೇ ಇತ್ತಂತೆ

8) ಮುಸ್ಲಿಮನೊಬ್ಬನು ಪರೀಕ್ಷಿಸಲೋಸುಗ ಮುಚ್ಚಿದ ಹರಿವಾಣದಲ್ಲಿ ಮಧ್ಯಮಾಂಸವನ್ನು ನೈವೇದ್ಯಕ್ಕೆ ತಂದಿಟ್ಟು ನಿಯಮ ಭಂಗಮಾಡಿದೆನೆಂದು ಹಿಗ್ಗುತ್ತಿರಲು ರಾಯರ ಮಂತ್ರಪರನದಿಂದ ಅದು ಹೂವು ಹಣ್ಣಾಗಿದ್ದುದನ್ನು ಕಂಡು ಶರಣಾದ ದು

ಇಂತಹ ಹಲವಾರು ಪವಾಡಗಳನ್ನು ಮೆರೆದರೆಂದು ಹೇಳಲ ಗಿದೆ ಮಹಾತ್ಮರುಗಳ ವಿಷಯ ದಲ್ಲಿ ಇಂತಹ ಕಥೆಗಳು ಇವುಗಳ ನಿಜಾಂಶ ಏನೇ ಇರಲಿ ಹುಟ್ಟಿಕೊಳ್ಳುವುದು ಸರ್ವಸಾಮಾನ್ಯ ಇವರು ತಮ್ಮ ಕಾಲದಲ್ಲಿ ಹಾಗೂ ಕ ಲಾನಂತರ ಪಡೆದ ಜನಾದರ ಜನಪ್ರಿಯತೆಗಳಿಗೆ ಇವು ಸಹಾಯಕವಾದವೆಂಬುದರಲ್ಲಿ ಸಂಶಯವಿಲ್ಲ ಆದರೆ ಇಂತಹ ಕಥೆಗಳು ಹುಟ್ಟಿಕೊಳ್ಳದಿದ್ದರೂ ಅವರ ಸಾಧನೆಯೇ ಅವರಿಗೆ ಈ ಜನಪ್ರಿಯತೆಯನ್ನು ತಂದ ಕೊಡುತ್ತಿತ್ತೆಂಬುದೂ ನಿಜವೇ

## ಕೃತಿಗಳ ಅವಲೋಕನ

ಸಂಸ್ಕೃತದಲ್ಲಿ ವಾಗ್ವಜ್ರ ವೆಂಬ ಗ್ರಂಥವನ್ನು ರಚಿಸಿರುವರೆಂದು ಪ್ರಖ್ಯಾತರಾಗಿರುವ ಇವರು ಕನ್ನಡದಲ್ಲಿ ಹಲವಾರು ಕೃತಿಗಳನ್ನು ರಚಿಸಿದ್ದಾರೆ ಕನ್ನಡ ಅಧ್ಯಯನ ಸಂಸ್ಥೆ ಪ್ರಕಟಿಸಿರುವ ಶ್ರೀಪಾದರಾಜರು ಪುಸ್ತಕದಲ್ಲಿ ಶ್ರೀಪಾದರ 101 ರಚನೆಗಳಿವೆ ಇಲ್ಲಿನ ಅಧ್ಯಯನಕ್ಕೆ ಇದನ್ನೇ ಆಧಾರವಾಗಿಟ್ಟುಕೊಳ್ಳಲಾಗಿದೆ ಹಾಗೂ ಇಲ್ಲಿ ಸೂಚಿಸಿರುವ ಪದ್ಯ ಸಂಖ್ಯೆಯೂ ಶ್ರೀಪಾದರಾಜರು ಪುಸ್ತಕದಲ್ಲಿನ ಪದ್ಯಸಂಖ್ಯೆಯೇ ಇವರ ಕನ್ನಡದಲ್ಲಿನ ಹಲವು ಬಗೆಯ ರಚನೆಗಳಲ್ಲಿ ಭಕ್ತಿಯ ಪಂಚಭಾವ ನಿರೂಪಣೆ ಉಪದೇಶ ತತ್ತ್ವಪ್ರತಿಪಾದನೆ ಆತ್ಮಶೋಧನೆ ಇವೇ ಮುಂತಾದವುಗಳು ಕಂಡು ಬರುತ್ತವೆ

## ಪಂಚಭಾವ ನಿರೂಪಣೆ

ಭಗವಂತನ ಅನುಗ್ರಹವನ್ನು ಸಂಪಾದಿಸುವಲ್ಲಿ ಪ್ರಸಿದ್ಧವಾದ ಜ್ಞಾನ ಭಕ್ತಿ ಕರ್ಮ ಮಾರ್ಗಗಳಲ್ಲಿ ಭಕ್ತಿಮಾರ್ಗವು ಅತ್ಯಂತ ಸರಳವೂ ಸುಲಭವೂ ಪ್ರಿಯವೂ ಅದದ್ದೆಂಬುದು ನಿರ್ವಿವಾದವಾದ ಸಂಗತಿ ಭಕ್ತನಾದವನು ಭಗವಂತನಲ್ಲಿ ಇಟ್ಟುಕೊಂಡಿರುವ ನಿರ್ಮಲ ಪ್ರೇಮವೇ ಭಕ್ತಿ (ನ ರದ) ಭಕ್ತಭಗವಂತನ ನಡುವಿನ ಸಂಬಂಧವೇ ಭಕ್ತಿ ಕೃಷ್ಣನಿಗೂ ಇಂತಹ ಭಕ್ತರೇ ಅತ್ಯಂತ ಪ್ರಿಯ ರಾದವರೆಂಬುದನ್ನು ಭಗವದ್ಗೀತೆಯಲ್ಲಿ ನಾವು ಕಾಣಬಹುದು

ಭಕ್ತಿಯ ನವವಿಧಮಾರ್ಗಗಳ ಹಾಗೂ ಪಂಚಭಾವಗಳ ಶಾಂತ ದಾಸ್ಯ

ಸಖ್ಯ ಮಧುರ ವಾತ್ಸಲ್ಯಗಳ ಪರಿಚಯ ಎಲ್ಲರಿಗೂ ಇದೆ ಈ ಎರಡರಲ್ಲಿ ಎರಡ ನೆಯದು ಭಕ್ತ-ಭಗವಂತನ ಸಂಬಂಧವನ್ನು ಪ್ರತಿಪಾದಿಸುವುದರಲ್ಲಿ ಹೆಚ್ಚು ಪ್ರಭಾವ ಯುತವೂ ಹೃದಯ ಕ್ಕೆ ಹತ್ತಿರವೂ ಆಗಿದೆ ಭಕ್ತನಾದವನು ಭಗವಂತನನು ತನಗೆ ತೀರ ಪರಿಚಿತವಾದ ಒಡೆಯ ಗೆಳೆಯ ನಲ್ಲ ಎಳೆಯ ಇವೇ ಮುಂತಾದ ಲೌಕಿಕ ಸಂಬಂಧ ಗಳಲ್ಲಿ ಕಲ್ಪಿಸಿಕೊಂಡು ತನ್ನ ಹೃದಯನು ಭವವನ್ನು ವ್ಯಕ್ತಪಡಿಸುವ ರೀತಿ ಸುಮಧುರ ಸುಂದರ ಹಾಗೂ ಹೃದಯಸ್ಪರ್ಶಿ ಈ ಭಾವಗಳನ್ನು ದಾಸ ಸಾಹಿತ್ಯ ದಲ್ಲಿ ಮೊಟ್ಟಮೊದಲಿಗೆ ಅನುಷ್ಠಾನಕ್ಕೆ ತಂದವರು ಶ್ರೀಪಾದರಾಜರು

ಇದರಲ್ಲಿ ಮೊದಲನೆಯದಾದ **ಶಾಂತ** ಭಾವದಲ್ಲಿ ಭಕ್ತನು ದೇವನ ಲೀಲಾ ವಿನೊದಗಳನ್ನು ಕಂಡು ಅಚ್ಚರಿಗೊಂಡು ಸಂಭ್ರಮದಿಂದ ಅವುಗಳನ್ನು ಹಾಡಿ ಹೊಗಳುತ್ತಾನೆ ಆತನ ಅನೇಕ ಮಹಿಮೆಗಳನ್ನು ವರ್ಣಿಸುತ್ತಾನೆ ಭಗವಂತನ ನಾಮಸ್ಮರಣೆಯಿಂದ ತಪ್ತ ಹೃದಯದಲ್ಲಿ ಪ್ರಶಾಂತಿ ನೆಲಸುತ್ತದೆ ಈ ಭಾವದ ನಿರೂಪಣೆ ಶ್ರೀಪಾದರಾಜರ ಹಲವಾರು ಕೃತಿಗಳಲ್ಲಿ ಆವಿಷ್ಕಾರ ಹೊಂದಿದೆ

ಭಗವಂತನ ದಿವ್ಯ ಮಂಗಳ ರೂಪವನ್ನು ಕಂಡು ಶರಣಾಗಿ ಅವನ ಪ್ರತಿ ಯೊಂದು ಅಂಗಾಂಗಳ ಚೆಲುವನು ಹಲವು ಉಪಮಾನಗಳೊಂದಿಗೆ ಬಣ್ಣಿಸುತ್ತಾ ಆನಂದ ಪರವಶರಾಗಿದ್ದಾರೆ

ಶ್ರೀರಂಗ ವಿಠಲನ ಶ್ರೀ ಮುಕುಟಕೆ ಶರಣು

ಸೊಂಪು ನೋಟದ ಚೆಲುವ ಸೋಗೆಗಣ್ಣಿಗೆಶರಣು
ಸಂಪಿಗೆಯ ಕುಸುಮ ಸಮ ನಾಸಿಕಕೆ ಶರಣು
ಗುಂಪುರತ್ನದ ಕರ್ಣ ಕ ಂಡಲಕ್ಕೆ ಶರಣು
ಇಂಪುದರ್ಪಣ ನಿಭ ಕಪೋಲಗಳಿಗೆ ಶರಣು (ಅನುಬಂಧ 2 ಕೀ 6)

ತಾವು ನೋಡಿ ಸಂತುಷ್ಟರಾದ ಪಾತ್ರಕ್ಕೆ ಅವರಿಗೆ ತೃಪ್ತಿಯಿಲ್ಲ ಇತರರು ಆ ಆನಂದವನ್ನು ಅನುಭವಿಸಲೆಂದು ರಂಗನಾಥನ ನೋಡುವ ಬನ್ನಿ ದಿವ್ಯವಿಮಾನದಲ್ಲಿ ಹನ (48) ಆಹ್ವಾನಿಸುತ್ತಾರೆ

ಎಷ್ಟು ವರ್ಣಿಸಿದರೂ ತೃಪ್ತಿಯಾಗದು ಅವರ ಮನಸ್ಸಿಗೆ ಕಂತು ಪಿತನೆ ನಿನ್ನ ಎಂತು ವರ್ಣಿಪೆ ಲಕ್ಷ್ಮೀಕಾಂತ ಪಾಲಿಸನ್ನನು ನಿರಂತರದಲಿ (ಅನುಬಂಧ 2 ಕೀ 6) ಎಂದು ಕೇಳುತ್ತಾ ಅವನ ದಶಾವತಾರಗಳಲ್ಲಿನ ಕೆಲವೊಂದನ್ನು ಎತ್ತಿ ಆಡಿತೋರಿ ಸುತ್ತಾರೆ

ಎಚ್ಚರವಿರುವ ಹೊತ್ತಿನಲ್ಲೆಲ್ಲಾ ಅವನನ್ನು ನೆನೆದು ಸಂಭ್ರಮಿಸುವ ಈ ಭಕ್ತನಿಗೆ ಕನಸಿನಲ್ಲೂ ಅವನ ಮಂಗಳಮೂರ್ತಿಯೇ

ಇಂದಿನಿರುಳು ಕನಸಿನಲ್ಲಿ ಬಂದು
ಮುಂದೆ ಎಂದೂದ ಕಂಡೆನೆ ಗೋವಳನ

ಆಣಿ ಮುತ್ತಿನ ಪೆಂಡೆಯ ಕಾಲಂದುಗೆ ಗೆಜ್ಜೆ
ಜಾಣನಂಗಜನ ಪಿತನ ಕೈಯ ವೇಣು
ಮಾಣಿಕ್ಯದ ಕಂಕಣ ಹೊನ್ನುಡಿ ಘಂಟೆ
ವಾಣಿಯ ರಚನೆ ಎಲ್ಲಿ (ಯ) ಈ ಗೋವಳನಾ (ಅನು 3 ಕೀ 1)

ಭಗವಂತನ ಮಹಿಮೆಯನ್ನು ಅವನನ್ನು ಸುತ್ತಿಸುವುದರಿಂದ ಹೊಂದುವುದರಿಂದ ಸಿಗುವ ಆನಂದವನ್ನು ಭಕ್ತರಲ್ಲದೇ ಅನ್ಯರು ಅರಿಯರು ಸದಾ ಹೀಗೆ ಭಗವಂತನ ನಾಮಸ್ಮರಣೆಯಲ್ಲೇ ಲೀನನಾದವನು ಕೆಲವರಿಗೆ ಹುಚ್ಚನಂತೆ ಕಾಣಿಸಬಹುದು ಯಾರಾದರೂ ಇದೇನು ಹುಚ್ಚೇ ಎಂದು ಪ್ರಶ್ನಿಸಿದರೆ ಉತ್ತರಸಿದ್ಧವಾಗಿದೆ

ಆಕಾಶದ ಆಳವನ್ನು ಸೂರ್ಯಚಂದ್ರರಲ್ಲದೆ ಪಕ್ಷಿಗಳು ಬಲ್ಲವೆ —————————————ಕೊಳದ ಆಳವನು ತಾವರೆ ಬಲ್ಲುದಲ್ಲದೆ ದಡದ ಮೇಲೆ ಬೆಳೆದಿರುವ ಗಿಡಮರ ಬಳ್ಳಿ ತಿಳಿಯಲಾರದೆಂದು ಇಂತಿವೇ ಹೋಲಿಕೆಗಳನ್ನು ನೀಡುತ್ತಾ ಭಗವಂತನ ಮಹಿಮೆಯನ್ನು ಭಕ್ತರಲ್ಲದೇ ಅನ್ಯರು ಅರಿಯರು ಅರಿತವರಿಗಷ್ಟೆ ಅದರ ತೀವ್ರತೆ ಅರಿವಾಗುವುದು (ಅನು 2 ಕೀ) ಎಂದು ನುಡಿಯುತ್ತಾರೆ

ದಾಸ್ಯ ಭಾವ ನಿರೂಪಣೆಯಲ್ಲಿ ಹರಿದಾಸರದು ಎತ್ತಿದಕೈ ಭಗವಂತನನ್ನು ಧ್ಯಾನಮಾಡಲು ಮನುಷ್ಯ ಜನ್ಮ ದೊರಕಿರುವುದೇ ಹಿರಿತನವೆಂಬುದು ಅವರ ನಂಬುಗೆ ಆದರಲ್ಲೂ ಆ ಭಗವಂತನ ದಾಸನೆನಿಸುವುದು ಆ ಜನ್ಮ ಸುಕೃತವೆಂದು ಭಾವಿಸುತ್ತಾರೆ

ಅನ್ನಂತ ಕಾಲದಲ್ಲಿ ನಿನ್ನ ನಾನರಿಯದೆ ಭವಗಳಲ್ಲಿ ಬಂದೆನೋ
ಅನ್ನಂತ ಕಾಲದಲ್ಲಿ ಅದಾವ ಪುಣ್ಯದಿಂದ ಬಂದು ಇಂದು
ನಿನ್ನವನೆನಿಸಿದೆ ಅದಾವ ಪುಣ್ಯದಿಂದಲೆನ ಮನ
ನಿನ ಲ್ಲೆರಗಿತೋ ನೋಯದಂತೆ
ಎನ್ನಪೊರೆದು ಪಾಲಿಸೋ ದೀನನಾಥ ಶ್ರೀರಂಗವಿಠಲ (12)

ಒಮ್ಮೆ ತನುಮನಧನವನ್ನು ಭಗವಂತನಿಗೆ ಅರ್ಪಿಸಿದರೆ ಮುಗಿಯಿತು ಬಳಿಕ ಆ ಭಕ್ತನನ್ನು ಯಾರೂ ಏನೂ ಮಾಡಲಾರರು

"ಕರುಣದಿ ತನುಮನಧನಂಗಳೆಲ್ಲವು
ನಿನ ಚರಣ ಕಮಲ ಕೊಪ್ಪಿಸಿದ ಒಳಿಕ
ಮರಳಿ ಎನ್ನ ಮರಳುಮಾಡುವರೆ
ಸರಕು ಒಪ್ಪಿಸಿದ ಮ್ಯಾಲೆ ಸುಂಕಉಂಟೇ ದೇವಾ (ಉಗಾಭೋಗ 14)
ಕರ ಕಾಕರ ನಿನ್ನ ಚರಣದಡಿಯೊಳಿಟ್ಟುಕಾಯೋ ರಂಗವಿಠಲ

ಸರ್ವವೂ ಭಗವಂತನ ಅಧೀನವೆನ್ನುತ್ತಾ, ಆತನ ಅನಂತ ಮಹಿಮೆಗೆ ಶರಣಾಗಿದ್ದಾರೆ. ಶರಣಾಗಿ ಬಂದ ತನ್ನ ಗುಣದೋಷವನ್ನು ಲೆಕ್ಕಿಸದೇ ರಕ್ಷಿಸೆಂದು ಭಗ

ವಂತನಲ್ಲಿ ಮೊರೆಯಿಡುತ್ತಾರೆ ಇನ್ನು ಭಗವಂತನನ್ನ ಖಂಡಿತಾ ಬಿಡುವುದಿಲ್ಲ ವೆಂದು ನಿರ್ಧರಿಸುತ್ತಾರೆ

> ನಿನಾ ಧೀನ ಶರೀರ ಕರಣ ಚೆ ಷ್ಟೆಗಳೆಲ್ಲ
> ನಿನ್ನಾಧೀನ ಬಂಧ ಮೋಕ್ಷ ನಿರಯಗಳು
> ಅಂತರಾತ್ಮನೆ ನಿನ್ನ ಮಹಿಮೆಗೆ ನಮೋ ಎಂಬೆ
> ಎಂತೋ ಚಿತ್ತವಿನ್ನೆಂತೋ ಪಾಲಿಸೋ ರಂಗವಿಠಲ
> (ಸ ಆದಿ 30)
>
> ಪನ್ನಗೇಶಶಯನ ಶ್ರೀಹರೇ
> ಇನ್ನು ಬಿಡೆನೊ ಬಿಡೆನಯ್ಯಾ ಸಂಪನ್ನ
> ಎನ್ನ ಗುಣ ದೋಷವರಸದೆ
> ಇನ್ನು ಕಾಯೊ ರಂಗವಿಠಲ

ಕೆಲವರಿಗೆ ಮನೆಯಿಂದ ಕೆಲವರಿಗೆ ಧನದಿಂದ ಕೆಲವರಿಗೆ ಹೆಂಡತಿ ಮಕ್ಕಳಿಂದ ಸಂತೋಷ ಉಂಟ ದರೆ ಈ ದಾಸರಿಗೆ ಭಗವಂತನನ್ನು ನೆನೆಯುವುದೇ ಸಂತಸದ ವಿಚಾರ ಉಗಾಭೋಗ (40) ಅವನ ನಾಮ ಜಪದಿಂದ ದೊರೆಯ ವಂತ ಸುಖಕ್ಕೆ ಸಮನಾ ದದ್ದು ಬೇರೊಂದಿಲ್ಲ ಎಂಬುವ ಭಾವ ಇಲ್ಲಿ ಮೂಡಿಬಂದಿದೆ

**ಸಖ್ಯ** ಈ ಭಾವಕ್ಕೆ ಉತ್ತಮೋತ್ತಮ ಉದಾಹರಣೆ ಕೃಷ್ಣಾರ್ಜುನರ ಸಂಬಂಧ ಶ್ರೀಪಾದರಾಜರು ಈ ಭಾವವನ್ನು ಪರಮಾತ್ಮನನು ಲಘುವಾಗಿ ಟೀಕಿಸುವಲ್ಲಿ ಆತ ನೊಂದಿಗೆ ಪೈಪೋಟಿ ಹೂಡುವುದರಲ್ಲಿ ಆತನೊಲಿಯದಿದ್ದಾಗ ನಿಂದಿಸುವಲ್ಲಿ ಪ್ರಕಟ ಗೊಳಿಸಿದ್ದಾರೆ ಉದಾಹರಣೆಗೆ ಈ ಕೆಳಗಿನ ಅವರ ಕೃತಿಗಳನ್ನು ನೋಡಬಹುದು

ಯಾಕೆ ಪುಟ್ಟಿಸಿದಿ ನೀ ಸಾಕಲ ರದೆ ಜಗದೇಕ ಕಾರಣ ಪುರ ಷನೆ ಕೃಷ್ಣ (ಕೀ 47) ಎಂದು ಆತನನ್ನೇ ಪ್ರಶ್ನಿಸ ವ ಧೈರ್ಯ ತೋರಿದ್ದಾರೆ ಪಾರ್ಥನ ರಥಕ್ಕೆ ಸಾರಥಿಯಾದುದನು ಬಲಿಯ ಮನೆ ಕಾದುದನ್ನು ಪರಮಾತ್ಮನಿಗೆ ನೆನಪಿಸ ತ್ತಾ ನೀನು ಭಕ್ತರಿಗೆ ಆಳಾದಮೇಲೆ ಯಾರು ಶ್ರೇಷ ರಪ್ಪಾ ನೀನೋ ನಿನ್ನ ದಾಸರೋ ಎಂದು ಲಘುವ ಗಿ ಛೇಡಿಸ ತ್ತಾರೆ ಈ ಮೂಲಕ ಪರಮಾತ್ಮನು ಭಕ್ತರಿಗಾಗಿ ಏನೂ ಆಗಬಲ್ಲ ಎನ್ನುವ ಸತ್ಯವನ್ನು ಸಾರುತ್ತಾರೆ

> ನೀನೇ ಬಲ್ಲಿದನೋ ರಂಗಾ ನಿನ ದಾಸರು ಬಲ್ಲಿದರೋ
> ನಾನಾ ತೆರದಿ ನಿಧಾನಿಸಿ ನೋಡಲು ನೀನೇ ಭಕ್ತರಾಧೀನನಾದ ಮೇಲೆ
> (ಕೀ 31)

ಇನ್ನೊಂದೆಡೆ ನನ್ನ ಹೃದಯದಲ್ಲಿ ಬಂದು ತೆಪ್ಪನೆ ವಾಸಮಾಡ ತ್ತೀಯೋ ಇಲ್ಲ ನಿನ್ನ ಆಟಗಳನ್ನೆಲ್ಲಾ ಲೋಕಕ್ಕೆ ಸಾರಲೋ ಎಂಬ ಧಾಟಿಯಲ್ಲಿ ಪರಮಾತ್ಮನಿಗೆ ಬೆದರಿಕೆ

ಹಾಕಿರುವ ರೀತಿ ನೋಡಿದರೆ ಭಗವಂತ ತನ್ನ ಭಕ್ತರಿಗೆ ಕೊಡುವ ಸಲಿಗೆಯು ಮಟ್ಟಿ ಎಷ್ಟರ ಮಟ್ಟಿನದು ಎಂಬುದನ್ನು ತಿಳಿಯಬಹುದು

ದೇಶದೇಶದಲ್ಲಿ ಪ್ರಕಟಿಸಲೋ
ಬೇಸರದೆ ಎನ್ನ ಹೃದಯಕಮಲದಲ್ಲಿ
ವಾಸವಾಗಿ ಸುಮ್ಮನಿದ್ದೀಯೋ (ಅನುಬಂಧ 2 ಕೀ 6)

ಮಧುರ ಮಧುರ ಭಾವಕ್ಕೆ ಅತ್ಯಂತ ಹಿತವಾದ ಉದಾಹರಣೆ ಗೋಪಿಯರು ಶ್ರೀಪಾದರಾಜರು ಇವರ ಹೃದಯಾಂತರಾಳದ ಪರಿಶುದ್ಧ ಪ್ರೇಮವನ್ನೇ ಪರಿಪರಿಯಾಗಿ ಚಿತ್ರಿಸುವದರ ಮೂಲಕ ತಮ್ಮ ಜೀವವು ಪರಮಾತ್ಮನ ಪ್ರೇಮಕ್ಕಾಗಿ ಹಾತೊರೆಯುವುದನ್ನು ಪರೋಕ್ಷವಾಗಿ ಸೂಚಿಸಿದ್ದಾರೆ ಇವರ ಭ್ರಮರ ಗೀತೆ ಈ ಭಾವ ಪ್ರದರ್ಶನದ ಅತ್ಯುತ್ತಮ ರಚನೆ ಇವರ ಮಧುರ ಭಾವ ನಿರೂಪಣೆಯಲ್ಲಿ ಆಳ್ವಾರರ ಪ್ರಭಾವವನ್ನು ಚೆನ್ನಾಗಿ ಗುರುತಿಸಬಹುದು

ಸದ್ದುಮಾಡಲು ಬೆಡವೋ ನಿನ ಕಾಲಿಗೆ ಬಿದ್ದುನಾ ಬೇಡಿಕೊಂಬೆನು (ಕೀ 55) ಎಂದು ಮೊದಲಾಗುವ ಕೃತಿಯಲ್ಲಿ ರಾತ್ರಿ ಕಳ್ಳತನದಲ್ಲಿ ಬಂದ ಶ್ರಿ ಕೃಷ್ಣನನ್ನು ನನ್ನ ಕೈ ಎಳೆದು ಬಳೆಗಳನ್ನು ಒಡೆಗಳೆದು ಪದಕಗಳನು ಸದ್ದುಮಾಡಬೇಡ ನೆರಿಗೆ ಹಿಡಿದು ಡಾಬಿನ ಗೆಜ್ಜೆ ಸದ್ದಾಗುವಂತೆ ಮಾಡಬೇಡ ಈಗ ನನ್ನ ಅಧರಾಮೃತವನು ನಿನು ಸವಿದಲ್ಲಿ ಸದ್ದಿನಿಂದ ನನ್ನ ಗಂಡನಿಗೆ ಎಚ್ಚರವಾದರೆ ಆತ ಮತ್ಸರಿಯಾಗುವುದಿಲ್ಲವೇ ? ಎಂದು ಹೇಳಿ ಭೇಟಿಗೆ ಇದು ತಕ್ಕ ಸಮಯವಲ್ಲವೆಂದು ಸೂಚಿಸಿದ್ದಾರೆ

ಹೀಗೆ ಎಲ್ಲರನ್ನೂ ತನ ಪ್ರೇಮಬಂಧದಲ್ಲಿ ಬಂಧಿಸಿ ಅವರು ತಮ್ಮ ಗಂಡದಿರನ್ನು ಬಿಟ್ಟು ತನ್ನನ್ನೋಲಿಯುವಂತೆ ಮಾಡಿದ ಕೃಷ್ಣನು ಮಧುರೆಗೆ ಬಿಲ್ಲು ಹಬ್ಬಕ್ಕಾಗಿ ಹೋಗುತ್ತಿರುವನೆಂಬ ಸುದ್ದಿ ಎಲ್ಲೆಡೆ ಹರಡುತ್ತದೆ ಆ ಸುದ್ದಿ ಕೇಳಿದಾಗಿನ ಗೋಪಿಯರ ಕಳವಳ ಕೇಳಿದ್ಯಾ ಕೌತುಕ ಕೇಳಿದ್ಯಾ (ಕೀ 16) ದಲ್ಲಿ ತುಂಬಾ ಚೆನಾಗಿ ಮೂಡಿ ಬಂದಿದೆ

ನಂತರ ಒಬ್ಬರಿಗೊಬ್ಬರು ಮಾತಾಡಿಕೊಂಡು ಹೋಗಿ ಆತನನ್ನು ಅಡ್ಡಗಟ್ಟಿ ಹೊಗಬೆಡ ನಿನ್ನನ್ನಗಲಿ ಇರಲಾರವೆಂದು ಬೇಡಿಕೊಳ್ಳುತ್ತಾರೆ ಆತ ನನಗೂ ನಿಮ್ಮನ್ನಗಲಿರುವುದು ಕಷ್ಟ ಹೋಗಿ ಬೇಗ ಬಂದುಬಿಡುವೆ ನನ್ನ ಮಾವ ಮಲ್ಲಯುದ್ಧ ನೋಡಲು ಹೇಳಿಕಳುಹಿಸಿದ್ದಾನೆ ಎಂದು ಅಭಯವಿತ್ತರೂ ಇವರಿಗೆ ಸಮಾಧಾನವಿಲ್ಲ ನಿನ್ನಬಿಟ್ಟರೆ ನಮಗಿನ್ನಾರು ಇಲ್ಲ ರತಿಪತಿಪಿತ ಎಲ್ಲವೂ ನೀನೇ ಎಂದು ಗೊಳಾಡುತ್ತಾರೆ ಅಲ್ಲಿ ಹೋಗಿ ಅಲ್ಲಿನ ಹೆಂಗಳ ಪ್ರೇಮಕ್ಕೆ ಮರುಳಾಗಿ ನಮ್ಮನ್ನು ಮರೆತು ಬಿಡುತ್ತಾನೆಂಬ ಶಂಕೆ ಆತನು ಇವರನ್ನು ಓಲೈಸಿ ಮಕ್ಕಳ ಮೇಲಾಣೆ ಇಡಲು ಒಬ್ಬ ಮಂಗ ಮನ್ಮಥ ಸುಟ್ಟು ಬೂದಿಯಾದ ಇನ್ನೊಬ್ಬ ಬ್ರಹ್ಮ ಅವನಿಗೆ ತಾಯಿಯೇ

ಇಲ್ಲ ಇವರ ಮೇಲೆ ಆಣೆಯಿಟ್ಟರೂ ಒಂದೇ ಬಿಟ್ಟರೂ ಒಂದೇ ಎಂದು ನೊಂದು ಕೊಂಡು ಕಡೆಗೆ ದಾರಿಕಾಣದೆ ಅವನಿಗೆ ಶರಣಾಗುತ್ತಾರೆ (ಕೀ 43) ಕೃಷ್ಣಗೋಪಿಯರ ಸಂಭಾಷಣಾರೂಪದಲ್ಲಿರುವ ಈ ನೀಳವಾದ ವೃತ್ತನಾಮ ಚತುರತೆಯಿಂದ ಕೂಡಿ ತುಂಬಾ ಸೊಗಸಾಗಿ ವಡಿಬಂದಿದೆ ಸಂಭಾಷಣೆಯ ತುಣುಕುಗಳು ಇಂತಿವೆ

> ವಾರಿನಯ್ಯನೆ ಕೇಳು ಆಲಿರುತಿಹ ನಾರೇರು ಬಲು ನಿಪುಣರೋ
> ನೀರಜಾಂಬಕ ನೋಡು ನಿನ್ನ ಮನವ ನಿಮಿಷಾರ್ಧದೊಳು ಸೆಳೆವರೋ
> ಬಿಲ್ಲು ಹಬ್ಬವೆ ಸುಳು ಬಿಸರುಹಾಕ್ಷಿಯರಿಕ್ಷು
> ಬಿಲ್ಲಿನುತ್ಸವಕ್ಕೆ ನಿನ್ನ
> ಖುಲ್ಲ ಅಕ್ರೂರನನು ಕಳುಹಿ ಕರೆಸಿದರಲ್ಲಿ
> ವಲ್ಲಭೆಯರನು ನೆರೆವೆ ನಮ್ಮೆಲ್ಲರನು ಮರೆವೆ
> ನಾರೀಹಾರಕಿರೀಟ ಕುಂಡಲಯುಗ
> ಮಾರಕೆ ಳಿಯ ವತಾತಿಲಿಂದಲದರೆ ಮನಸೆಮ್ಮಳೊಂದಾಗದೆ
> ನಾರೇರೊಲುಮೆಯುಂಟೆ ಲೋಕದೊಳಗೆ ನನ್ನಾ ಕೆಕೆ ದೂರ್ವಿರೇ
> ಮಲ್ಲಯುದ್ಧವ ನೋಡಬೇಕೆನುತ ನಮ್ಮಾವ
> ಅಲ್ಲಿಗೆ ಕರಸಲದಕೆ
> ಇಲ್ಲದಪವಾದ ಈ ಸುಳ್ಳು ಸುದ್ದಿಗಳ ನೀ
> ವೆಲ್ಲಿ ಸೃಜಿಸಿದಿರಿ ಸರಿಯಲ್ಲ ನಿಮಗಿಳೆಯೊಳಗೆ

ಗೋಪಿಯೊಬ್ಬಳು ಕೃಷ್ಣನ ವಿರಹದಿಂದ ಬೆಂದು ಬಸವಳಿದು ನಡೆಯಲಾರಳು ನುಡಿಯಲಾರಳು ಆತನ ಕಾಣದೆ ಕಾತರಿಸುವ ಮನದಿಂದಾಗಿ ಊಟಸೇರದು ನಿದ್ರೆ ಬಾರದು ಇಷ್ಟೆಲ್ಲ ಅವಸ್ಥೆ ಅನುಭವಿಸುತ್ತಾ ಹೆಣ್ಣು ಜನ್ಮ ಸಾಕಪ್ಪ ಎಂದು ಉದ್ಗಾರವಡುತ್ತಾಳೆ (17) ಇನ್ನೊಬ್ಬಳು ಬಲ್ಲೆನವ್ವಾ ಲಕುಮಿಯು ನಲ್ಲ ಬಾರದಿದ್ದರೆ ತನುಹೊರೆಯನೊಲ್ಲೆನವ್ವಾ (11) ಶರೀರದ ಭಾರ ತಡೆಯಲಾರೆ ಮನ್ಮಥನ ಬಾಣಕ್ಕೆ ನನ್ನನ್ನು ಈಡುಮಾಡಿ ಹೊರಟ ಹೋಗಿದ್ದಾನೆ ಮಂದಾನಿಲ ಶುಕಪಿಕಗಳ ಕಲರವ ಚಂದ್ರಕಿರಣ ಎಲ್ಲವೂ ಬಾಧಿಸುತ್ತಲಿವೆಯೆಂದು ಪ್ರಲಾಪಿಸುತ್ತಾ ಅವನು ನನಗೆ ಸುಳ್ಳು ಹೇಳಿ ಅಲ್ಲಿನ ವನಿತೆಯರನ್ನು ಕಾಣಹೋಗಿದ್ದಾನೆ ಇವನಿಂದ ಹೆಣ್ಣುಗಳಿಗೆ ಕಷ್ಟತಪ್ಪದಲ್ಲ ಎಂದು ಮರುಗುತ್ತಾಳೆ ಮಗದೊಬ್ಬಳಿಗೆ ಕೃಷ್ಣನೊಂದಿಗೆ ಸೇರಿ ವಿಹರಿಸಿರುವ ಜಾಗಗಳೆಲ್ಲ ಅವನ ನೆನಪನ್ನು ಮೂಡಿಸಿ ವಿರಹತಾಪವನ್ನು ಹೆಚ್ಚಿಸುತ್ತಿವೆ ಆಕೆ ತನ್ನ ಗೆಳತಿಯೊಂದಿಗೆ ಹೃದಯದ ದುಃಖವನ್ನು ತೋಡಿಕೊಳ್ಳುವ ರೀತಿ ಹೃದಯ ಸ್ಪರ್ಶಿಯಾಗಿದೆ

ಈ ವನವೆಡೆಗಳು ಈ ಲತೆವಗಗಳು
ಈ ನದಿಪುಳಿನಗಳು ಶಶಿಶಿಲೆಗಳು
ಈ ಸುರತರು ನೆಳಲು ಶುಕಪಿಕರವ
ಯಾಕೆ ಮಾದವನ ಮರೆಯಲೀಯದಿವೆಕ್ಕಿದಿ (ಕೀ 7)[2]

ಕೃಷ್ಣ ಮದುರೆಗ್ಹೋದ ನಂತರ ನಾನಾ ವಿಧದಲ್ಲಿ ವಿರಹ ತಾಪವನ್ನನುಭವಿಸುವ ಈ ತರಳೆಯರ ಚಿತ್ರಣ ಅಂತ್ಯಂತ ರಮಣಿ ಯವಾಗಿದೆ ಮಠಾಧಿಪತಿಯೊಬ್ಬರು ಇಷ್ಟು ಸಂಂದರವಾಗಿ ಕವಿತೆ ಕಟ್ಟಬಲ್ಲರೇ ಎಂದು ಆಶ್ಚರ್ಯ ಪಡ ಪಂತಿದೆ

ವಾತ್ಸಲ್ಯ ತಾಯಿಮಗುವಿನ ಸಂಬಂಧ ಎಲ್ಲ ಸಂಬಂಧಗಳಿಗಿಂತಲೂ ಸುಮಧುರವಾದುದು ಮಿಗಿಲಾದುದು ತಾಯಿ ತನ್ನ ಮಗುವಿಗೆ ಪ್ರತಿಫಲಾಪೇಕ್ಷೆಯಿಲ್ಲದೆ ತೋರುವ ಪ್ರೀತಿ ಅಸದಳವಾದುದು ಶ್ರೀಪಾದರು ತಮ್ಮನ್ನು ಯಶೋದೆಯ ಸ್ಥಾನದಲ್ಲಿ ಕಲ್ಪಿಸಿಕೊಂಡು ಕೃಷ್ಣನನ್ನು ಮುಂದ್ದಾಡುವುದು ಅವನ ಒಗ್ಗೆ ಆತಂಕ ವ್ಯಕ್ತ ಪಡಿಸುವುದು ಶೃಂಗರಿಸಿ ಉಪಚರಿಸ ವುದು ಚಾಡಿ ಹೇಳಿದ ಗೋಪಿಯರ ಹತ್ತಿರ ಅವನನ್ನೇ ವಹಿಸಿಕೊಂಡು ಮಾತಾಡುವುದು ಇವೇ ಮೊದಲಾದವುಗಳನ್ನು ತುಂಬ ಮನೋಜ್ಞವಾಗಿ ತಮ್ಮ ರಚನೆಗಳಲಿ ಮೂಡಿಸಿದ್ದಾರೆ ಭಗವಂತನಿಗಾಗಿ ಆ ದಾಸ ಹೃದಯದಲ್ಲಿ ಅಡಗಿರುವ ವಾತ್ಸಲ್ಯದ ಆಳದ ಅರಿವನ್ನು ತೆರೆದು ತೋರುತ್ತದೆ

ಕೃಷ್ಣ ಯ ಶೋದೆಯ ಕಣ್ಣು ಪ ಂದಾಡದೇ ಎಲ್ಲೋ ದೂರದಲ್ಲಿ ಆಡುವುದನ್ನು ಆಕೆ ಸಹಿಸಳು ಅವನನ್ನು ಎಲ್ಲ ದಿಕ್ಕನ್ನಲ್ಲೂ ಅರಸಿ ಸುಸ್ತಾಗಿ ಕಾಯುತ್ತಿರುವಾಗ ಬಂದ ಮಗನನ್ನು ನೋಡುತ್ತಾಳೆ ಹಣೆಯಲ್ಲಿ ಬೆವರಿಟ್ಟಿದ ಬೆರಳ ಉಂಗುರ ಪದಕ ಎಲ್ಲವೂ ಮಾಯವಾಗಿದೆ ಈ ಅವಸ್ಥೆಯನ್ನು ನೋಡಿ ಬೇಸರಿಸಿ ನನ್ನ ಕಣ್ಣ ದುರಿಗೆ ಇರದೆ ದೂರವೇಕೆ ಹೋಗುತ್ತೀಯೆ ? ಎಂದು ಮುಂನಿದು ನುಡಿಯುತ್ತಾಳೆ ಈ ಪ್ರಸಂಗದ ಸುಂದರ ಚಿತ್ರಣ (ಕೀ 9 10) ಮೋಹಕವಾಗಿ ಮೂಡಿಬಂದಿದೆ ಇವರ ಎರಡು ರಚನೆಗಳಲ್ಲಿ ಹೊರಗೆ ಹೋಗಿ ಆಡಿದರೆ ಚೆಲುವಾದ ತನ್ನ ಮಗನಿಗೆ ದೃಷ್ಟಿ ತಾಕಿ ತೆಂಬ ಭಯ ಬೇರೆ ಯಶೋದೆಗೆ ಬೀದಿಗೆ ಹೋಗಬೇಡವೊ" ಎಂದು (24) ಹಲುಬುತ್ತಾಳೆ ಕೃಷ್ಣನಿಗೆ ಮನೆಯಲ್ಲೇ ತನ್ನ ಕಣ್ಣುಮುಂಂಯೇ ಕುಳಿತು ಬೇಸರವಾದೀತೆಂದು ಪೋವು ಹೋಗೋಣಬಾರೋ ರಂಗ ಎಂದು ಕರೆಯು

---

2 ಆಂಡಾಳ್ ನಾಚ್ಚಿಯಾರ್ ತಿರುಮೊಳಿಯಲ್ಲಿ ಇಂತೆಯೇ ವಿಲಾಪಿಸುತ್ತಾಳೆ 10ನೆಯ ತಿರುಮೊಳಿಯಲ್ಲಿ ತನ್ನ ಸುತ್ತಲಿರುವ ಗಿಡಬಳ್ಳಿಗಳು ಹೂಗಳು ಪಕ್ಷಿಪ್ರಾಣಿಗಳು ಭಗವಂತನ ದಿವ್ಯಾವಯವದ ಶೋಭೆಯನ್ನೂ ನುಡಿಗಳನೂ ನೆನಪಿಗೆ ತರುತ್ತಿರಲು ಅವುಗಳಿಂದ ಬಹಳ ವಾಗಿ ನೊಂದ ನಾಯಕಿ ಇನೂ ಜೀವಿಸುವ ಆಶೆಯೇ ಇಲ್ಲವೆಂದು ನಿರಾಶಳಾಗುತ್ತಾಳೆ

ತಿರುಮಂಗೈಯಾಳ್ವಾರರ ತಿರುನೆಡುಂದಾಂಡಹಂ ನ 25ನೇ ಶ್ಲೋಕವನು ಉದಾಹರಿಸಬಹುದು

ತ್ತಾಳೆ (33) ಇಲ್ಲಿನ **ಪೋಷು** ಬಾಲಬಾಷೆಯ ಪ್ರಯೋಗ ಆತ್ಮೀಯಂತೆಯನ್ನು ಮೂಡಿಸುತ್ತದೆ

ಭಕ್ತ ಬಗವಂತನನ್ನು ಅರೆಗಳಿಗೆಯೂ ಕಾಣದೆ ಇರಲಾರನೆಂದು ಪರೋಕ್ಷವಾಗಿ ಸೂಚಿಸುವ ಈ ಕೃತಿಗಳು ವ ನಸ್ಸನ್ನು ಸೆರೆಹಿಡಿದು ನಿಲ್ಲಿಸುತ್ತವೆ

ಯಶೋದೆಯ ಮಾತನ್ನು ಕೇಳುತ್ತಾನೆಯೇ ? ಮತ್ತೆ ತುಂಟಾಟಗಳನ್ನು ಪ್ರಾರಂಭಿಸುತ್ತಾನೆ ಎಲ್ಲರಿಗೂ ಕಾಟಕೊಡುವುದೇ ಅವನಿಗೆ ಆನಂದ ಎಲ್ಲರ ಮನೆಗೆ ನುಗ್ಗಿ ಹಾಲು ಮೊಸರು ಬೆಣ್ಣೆ ಕುಡಿದು ಬರುವುದಲ್ಲದೆ ಅವರ ನೀರ ಮಡಿಕೆ ಗಳನು ಒಡೆಯುತ್ತಾನೆ ಮತ್ತೆ ಹೆಂಗಸರು ಜಲಕ್ರೀಡೆಯಾಡುತ್ತಿರಲು ಅವರ ಬಟ್ಟೆಯನ್ನೆಲ್ಲಾ ಮರೆಸಿಡುತ್ತಾನೆ ನಿದ್ದೆಗಣ್ಣಿನಲ್ಲಿದ್ದಾಗ ಅವರ ಗಂಡಂದಿರಂತೆ ಬಂದು ಮೋಸಮಾಡ ತ್ತಾನೆ ಒಂದೇ ಎರಡೇ ಅವನ ಆಟಗಳು ಯ ಶೋದೆಯಂ ಹತ್ತಿರ ಇವುಗಳನ್ನು ಹೇಳಿ ನಿನ್ನ ವ ಗನಿಗೆ ಬ ದ್ಧಿ ಕಲಿಸಬಾರದೇ ಎಂದು ಬೈಯಂ ತ್ತಾರೆ ಆ ಹೆಂಗೆಳೆಯರು (ಅನಂ 3 ಕೀ 15)[3] ಅದಕ್ಕೆ ಉತ್ತರವಾಗಿ ಯಶೋದೆ

> ಏಕೆ ದೂರುವಿರೆ ರಂಗಯ್ಯನ
>
> ಏಕೆ ದೂರುವಿರೆ
>
> ಸಾಕು ನಿಮ್ಮ ದೂರಬಲ್ಲೆನಂ
>
> ಈ ಕುವರನಾಕೃತ್ಯ ಮಾಳ್ಪನೆ (ಅನು 3 ಕೀ 3)

"ಏನು ಸುಮ್ಮನೆ ಏಕೆ ನನ ಮಗನನ್ನು ದೂರುತ್ತೀರಿ ಅಂತಹುದನ್ನೆಲ್ಲ ನನ್ನ ಪುಟ್ಟ ಕಂದ ಮಾಡುತ್ತಾನೆಯೇ ಎಂದು ಛಿ ಮಾರಿ ಹಾಕುತ್ತಾಳೆ

ಅವಳಿಗೂ ಗೊತ್ತು ತನ್ನ ಮಗ ತುಂಟನೆಂದು ಹಾಗೆಂದು ಅವರೆದುರಿಗೆ ಹೇಳುವುದಕ್ಕಾಗುತ್ತದೆಯೇ ಅವರನ್ನು ಅತ್ತ ಕಳುಹಿ ಒಳಗೆ ಬಂದು ಮಗನನ್ನು ಇಹಾಕೆ ಹೀಗೆ ಮಾಡುತ್ತೀಯಪ್ಪಾ ಸಾಕಾಗಿದೆ ನನಗೆ ಎಂದು ಗದರುತ್ತಾಳೆ

ಹೀಗೆ ಗರಿಗೆದರಿ ಸಾಗುವ ಕಲ್ಪನೆಯ ಬರೆಹಗಳು ಅತ್ಯಂತ ಮೋಹಕವಾಗಿವೆ ಓದುಗರ ಚಿತ್ತಭಿತ್ತಿಯಲ್ಲಿ ಅಚ್ಚೊತ್ತುವಂತಿವೆ

ರಾಮಕೃಷ್ಣರಿಗೆ ಲಾಲಿ ಹಾಡುವ ನೆವದಲ್ಲಿ ದಶಾವತಾರವನ್ನು ಬಣ್ಣಿಸುತ್ತಾರೆ (21 50) ಇನ್ನೊಂದು ರಚನೆ ಗುಮ್ಮ ಬಂದನೆಂದು ಪೊ ರ ಕೃಷ್ಣನನ್ನು ಹೆದರಿ

3 ಪದಿಯಾಳ್ವಾರರ ಪದಿಯ್‌ಳಾ ರ ತಿರ ಮೊಳಿ ಯ ಲ್ಲಿ ಇಂಥ ವರ್ಣನೆಗಳು ಅಧಿಕವಾಗಿವೆ

ಉದಾ ಎಲ್‌ ಗ ಣಶಾಲಿಯೆ ಯಶೋದೆಯೇ ನಿನ ಮಗ ಮಾಡಿದ ತುಂಟತನ ಹೇಳಿದರೆ ನೀನು ಕೋಪಿಸಿಕೊಳ್ಳುತ್ತೀಯೆ ನಿನ್ನ ಮಗ ನಿನಗೆ ಹೇಳದೇ ಇರುವ ದಕ್ಕಾಗದಂ ಹ ತುಂಟತನಗಳನ್ನು ಮಾಡ ವವನಾಗಿದ್ದಾನೆ

ಎಂದು ಅವನ ತುಂಟಾಟಗಳನ್ನು ವರ್ಣನೆಮಾಡುತ್ತಾರೆ

ಸುವ ಘಾಟಿಯಲ್ಲಿದೆ (ಅನು 3 9) ಮತ್ತೊಂದೆಡೆ ಹರಿಗೆ ಮಂಗಳ ಹಾಡಿದ್ದಾರೆ (ಅನು 3 ಕ 11)

## ಆತ್ಮಶೋಧನೆ

ಭಕ್ತಿ ಸಾಹಿತ್ಯದಲ್ಲೀ ಆತ್ಮಶೋಧನೆ ಗೆ ಬಹುಮುಖ್ಯವಾದ ಸ್ಥಾನವಿದೆ ಪ್ರತಿಯೊಬ್ಬರೂ (ಬಕ್ತ) ಈ ಹಂತ ದಾಟಿಯೇ ಪರಿಪೂರ್ಣರಾಗುವುದು ಹಿಂದೆ ದೇವನನ್ನು ನೆನೆಯದೆ ಹಲವಾರು ಜನ್ಮದಲ್ಲಿ ಸಂಸಾರದಲ್ಲಿ ಸಿಲುಕಿ ನೊಂದು ಬೆಂದು ಕಾಲಕಳೆದೆನಲ್ಲಾ ಎಂದು ಪರಿತಪಿಸ ತ್ತಾ ಹತ್ತು ಹಲವಾರು ಬಗೆಯಲ್ಲಿ ಅವನಲ್ಲಿ ತಮ್ಮ ಸುಖ ದುಃಖಗಳನ್ನು ನಿವೇದಿಸಿ ಆತನನ್ನೇ ನೆನೆನೆನೆದು ಹಂಬಲಿಸುತ್ತಾ ದಯಾಮಯನಾದ ಆತ ದಯೆಗೈಯದಿರಲು ಆತನನು ನಿಂದಿಸುತ್ತಾ ಕಡೆಗೆ ಆತ ನಲ್ಲದೇ ಇನ್ನಾರಿಂದಲೂ ನಮ್ಮ ಭವ ದುಃಖ ನಿವಾರಣೆಯಾಗದೆಂಬ ಸತ್ಯದ ಅರಿವು ಮೂಡಿ ಆತನನ್ನೇ ಮತ್ತೆ ಮತ್ತೆ ಭಜಿಸಿ ಸಾಕ್ಷಾತ್ಕಾರಿಸಿಕೊಂಡು ತೃಪ್ತಿ ಹೊಂದು ತ್ತಾರೆ ಭಗವದ್ಭಕ್ತರು ಭಗವಂತನು ತನ್ನ ಭಕ್ತನು ಈ ರೀತಿಯಾಗಿ ಹಂಬಲಿಸಿ ನೊಂದು ಬೆಂದು ಪರಿಪಕ್ವನಾಗ ವವರೆಗೂ ಕಾಯುತ್ತಾನೆ ಒಮ್ಮೆ ಒಲಿದನೆಂದ ಮೇಲೆ ಭಕ್ತನಿಗಾಗಿ ಏನನಾ ದರೂ ಮಾಡಬಲ್ಲನು ಆ ಜಗನಿಯಾಮಕ

ಶ್ರೀಪಾದರು ಭಗವಂತನಲ್ಲಿ ತಪ್ಪು ಮಾಡಿರುವೆ ಕ್ಷಮಿಸಿ ರಕ್ಷಿಸೆಂದು ಮೊರೆಯಿಡುವುದನ್ನು ಹಲವಾರು ಕೃತಿಗಳಲ್ಲಿ ಕಾಣಬಹುದು

> ನೀ ಕರುಣಿಯೆಂದು ನಿನ್ನ ನಾ ಮ ರೆಹೊಕ್ಕೆ
> ನೀಕರಿಗದೆ ಎನ್ನ ಶ್ರೀಕಾಂತ ಕಾಯಯ್ಯ
> ನಿನ್ನವನೆಂಬೆ ನಾನು ಮತ್ತನೂವನರಿಯೆ ನು
> ನಿನ ವನೆಂಬೆ ನಾನು
> ಕಂದರ್ಪನೆಂದೆಂದು ಕಾಣದಂತೆ ಮಾಡೋ
> ವೃಂದಾರಕಾಧೀಶ ರಂಗವಿಠಲ (ಸುಳಾದಿ 2-4)

ನೀ ಕರುಣಾಕರನೆಂದು ನಾ ನಿನ್ನ ಮೊರೆಹೊಕ್ಕಿದ್ದೇನೆ ನನ್ನನ್ನು ಕಾಪಾಡು ಎಂದು ಬೇಡುತ್ತಾರೆ ಇದನ್ನರಿಯದೆ ಸಂಸಾರದಲ್ಲಿ ಸಿಕ್ಕಿ ನಮ್ಮದಿಯನ್ನರಸಿ ಕಾಣದೆ ಕಡೆಗೆ ವ್ರತ ಜಪ ತಪಗಳನ್ನು ಮಾಡುತ್ತಾ ಮ ನೆಮನೆಗೂ ಅಲೆಯುತ್ತಾ ಕಡೆಗೆ ಹರಿಯ ನಾಮಾಶ್ರಯವಲ್ಲದೇ ಬೇರೆ ದಾರಿಯಿಲ್ಲವೆಂದು ಕಂಡ ಅವನಲ್ಲಿ ಶರಣಾಗಿ ಕೃಪೆದೋರುವಂತೆ ಕೇಳಿಕೊಳ್ಳುತ್ತಾರೆ

> ಹರಿ ನಿನ್ನ ನಾಮಾಶ್ರಯವಲ್ಲದೆ ಮತ್ತುಂಟೆ
> ಮನುಲೋಕದಲ್ಲುಂಟೆ ತನ ಪರಿಣಮಲ್ಲಭ
> ಅಮೃತ ಒಸರುವ ಪದಪದುಮದ
> ನೆಳಲ ನೆಲೆವನೆಯಲಿ ಎನ್ನನಿರಿಸೊ ರಂಗವಿಠಲ (ಸು 2 7)

ಬೆಂದ ಸಂಸಾರದಿ ಬಂದು ನೊಂದು ಬಳಲಿದೆನಯ್ಯ
ನಂದನಂದನ ಕಾಯೊ ರಂಗವಿಠಲ

ಹರಿಯನ್ನು ನೆನೆಯ ದೆ ಸುಮ್ಮನೆ ಜಪತಪ ಮಾಡುತ್ತಾ ಡಂಭಾಚಾರ ತೋರುವವರಿಗೆ ವ ನಮನೆ ಅಲೆಯುವವರಿಗೆ ಏನೂ ಪ್ರತಿಫಲವಿಲ್ಲವೆನ್ನುವುದನ್ನು ಈ ಮೂಲಕ ನಿರೂಪಿಸಿದ್ದಾರೆ

ತಪ್ಪುಮಾಡಿಲ್ಲವೆಂದು ಹೇಳ ವುದಿಲ್ಲ ನಾನು ಮಾಡಿದ ಪಾಪಗಳಿಗೆ ಲೆಕ್ಕ ವಿಲ್ಲ ವ ನವು ಚಂಚಲವಾಗದೆ ಇಲ್ಲ ಆದರೆ ನೀ ಈ ಅವಗ ಣಗಳನ್ನು ಎಣಿಸದೆ ನನ್ನನ್ನು ದಾಸನನ್ನಾಗಿ ಮಾಡಿಕೋ ಅಜಾಮಿಳನಿಗೆ ಮು ಕ್ತಿಕೊಟ್ಟ ಖ್ಯಾತಿಯ ನ್ನು ಕೇಳಿ ನಾ ನಿನ್ನಲ್ಲಿ ಶರಣಾಗಿರುವೆ (ಕೀ 22) ಎಂದು ನುಡಿಯುತ್ತಾರೆ

ಭಗವಂತನನು ಎಂದು ತಿಳಿದೇನು ? ದಾಸರ ಸಂಗವೆಂದು ದೊರೆಕೀತು ? ಎಂದು ಹಂಬಲಿಸುತ್ತಾರೆ (58) ನೀನಲ್ಲದೆ ನನ್ನನ್ಯಾರು ರಕ್ಷಿಸುವವರು ? ನಿ ನಲ್ಲದೆ ಅನ್ಯರಲ್ಲ ಎಂದು ಪರಿಪರಿಯಾಗಿ ತಮ್ಮ ದುರಿತ ಕಳೆಯುವಂತೆ ಪ್ರಾರ್ಥಿಸುತ್ತಾರೆ (61) ಹರಿಯನ್ನು ಒವ್ಮೆ ನೆನೆದರೆ ಸಾಕು ನರಕ ಭಯವಿಲ್ಲವೆಂದಿರ ವಾಗ (30-5) ತಾನೆಷ್ಟು ಭಾರಿ ನೆನೆದರೂ ಹರಿಯೇಕೆ ಪ್ರತ್ಯಕ್ಷನಾಗಲೊಲ್ಲ ಎಂದು ಚಿಂತಿಸುತ್ತಾರೆ ನಾನೇನು ಬೋಗಭಾಗ್ಯ ಬೇಡಿಬಂದಿರುವೆನೆ ನಿನ್ನ ದಾಸರ ದಾಸ್ಯ ಸಾಕು ನಿನ್ನ ಕಥಾ ಮೃತಕೊಡು ನಿನ ನಾಮೋಚ್ಚಾರಣೆ ಕೊಡು ಕಡೆಗೆ ನಿನ್ನ ಬಾಗಿಲು ಕಾಯುವ ಭಾಗ್ಯಕೊಡು ಸಾಕು (5) ಎಂದು ಪರಿಪರಿಯಾಗಿ ಬೇಡುತ್ತಾರೆ ಕೊನೆಗೆ ನಿನ್ನನ್ನು ನಾನೇನು ಬೇಡುವುದಿಲ್ಲ ನನ್ನ ಹೃದಯದಲ್ಲಿ ಬಂದು ನೆಲಸು (27) ಎಂದು ಒಡ ತ್ತಾರೆ ಅವನು ಒಲಿಯದಿರಲು ಕಾರಣವೇನೆಂದು ಚಿಂತಿಸುತ್ತಾ ನಾನೇ ಸಜ್ಜನನಾದರೇ ಇಂತೆ ಹೀನ ವಿಷಯಗಳಿಗೆಗೆರಗುವೆನೇನಯ್ಯ ? (28) ಗೊತ್ತಿ ದ್ದಲ್ಲಿ ನಾನಿಂತಹ ತಪ್ಪುಗಳನು ಮಾಡ ತ್ತಲೇ ಇರಲಿಲ್ಲ ಆದ್ದರಿಂದ ನೀನು ನನ ತಪ್ಪನು ಮನಿ ಸಿ ಕಾಯ ಬೇಕೆಂದು ಅಗ್ರಹಪಡಿಸುತ್ತಾರೆ ಉತ್ತಮ ರ ಸಂಗ ಎನ ಗಿತ್ತು ಸಂತೋೞ (8) ಎಂದು ಮೊರೆಯಿ ಡುತ್ತಾರೆ ಅದರಿಂದಲಾದರೂ ತನ್ನ ಭವದುಃಖ ಹಿಂಗಿ ಬಗವಂತನ ದರ್ಶನವಾಗಬಹ ದೆಂಬ ಹಂಬಲ ಆವರಿಗೆ ನನ್ನ ವ ನೆಗೆ ಬಾ ನೀನೇ ಗತಿ ಬೇಗನೆ ಉದ್ಧರಿಸು ನಾನಿನ್ನ ಸೇವಕ (35) ಎಂದು ಹೃತ್ಪೂರ್ವಕ ಆಹ್ವಾನನೀಡುತ್ತಾರೆ ತಂದೆ ತಾಯಿ ಯ ರು ತಮ್ಮ ಕಂದನ ಅ ವಗುಣ ವನ್ನು ಎಣಿಸುತಾರೆಯೆ ಶರಣು ಬಂದವರನ್ನು ಹೀಗೆ ಬಿಡುವುದು ನಿನಗೆ ನಿನ್ನ ಘನತೆಗೆ ಸರಿಯಲ್ಲ (ಅನು 3 17) ವೆಂದು ಹೇಳಿ ನೋಡುತ್ತಾರೆ

ಹೀಗೆ ಪರಿಪರಿಯಾಗಿ ನ ಡಿದು ಬೇಡುವ ಅವರ ರಚನೆಗಳು ಬಗವಂತನಿ ಗಾಗಿ ಕಾತರಿಸುತ್ತಿರುವ ಮನದ ಚಿತ್ರಣವಾಗಿದೆ ಅನ ಬವದ ಮೂಸೆಯ ಲ್ಲಿ ತಯಾರಾಗಿ ಬಂದ ಈ ರಚನೆಗಳು ಉನ ತ ವ ಟ್ಟದ್ದ ವಾಗಿವೆ

ಕಡೆಗೆ ಇಟ್ಟಾಂಗೆ ಇರುವೆನೋ ಹರಿಯೆ ಎನ ದೊರೆಯೇ (4) ಹಾಲ ಲ್ಲಾದರೂ ಆದು ನೀರಲ್ಲಾದರು ಅದ್ದು ನಿನ್ನನೇ ನಂಬಿರುವೆ (32) ಎಂದು ಹತಾಶೆಯಿಂದ ನ ಡಿಯುತ್ತಾರೆ ಇಷ್ಟಾದರೂ ಆತ ಒಲಿಯ ದಿದ್ದಾಗ ಪ್ರಾಣಾರ್ಪಣೆ ಮಾಡ ವುದೇ ಸರಿಯೆಂದು ಆಲೋಚಿಸಿ ಯಾವ ರೀತಿ ಸಾಯಲಿ

ಉರಿಯೊಳಗೆ ಬಿದ್ದು ಶರೀರವನು ಕಳೆಯ ಲೋ
ಪರಂವತವನೇರ್ರ್ಯ ರ ಆಲೋ ಕೃಷ್ಣ
ಗರಳ ಮಡ ವನೆ ಧುಮುಕಿ ಉರಗ ಫಣ ತ ಳಿಯಲೋ ( )

ಎಂದು ಕೇಳ ತ್ತಾರೆ

ಈ ಹಂತದಲ್ಲಿ ಭಗವಂತನ ಸಾಕ್ಷಾತ್ಕಾರವಾಗಿ ಪುನೀತರಾಗಿ ಬೇರೆಯ ವರಿಗೂ ಅವನನ್ನು ಕೀರ್ತಿಸಿ ಕೃತಾರ್ಥರಾಗುವಂತೆ ಹೇಳುತ್ತಾರೆ

ಕೀರ್ತಿಸಿ ಜನರೆಲ್ಲ ಹರಿಯಗುಣ
ಕೀರ್ತಿಸಿ ಜನರು ಕೃತಾರ್ಥರಾಗಿರೋ (ಅನುಬಂಧ 3 ಕೀ 8)

ಕಿರಾತನನ್ನು ಒಲಿದ ಅಹಲ್ಯೆಯ ನ್ನು ಉದ್ಧರಿಸಿದ ಶಬರಿಯ ಎಂಜಲನ್ನು ತಿಂದು ಅನುಗ್ರಹಿಸಿದ ರಾವಣನನ್ನು ಸಂಹರಿಸಿದ ನಾನಾ ಪ್ರಸಂಗಗಳನ್ನು ಉಲ್ಲೇಖಿಸಿ

ತನ್ನ ನಂಬಿದ ಜನರ ಮಂತ್ರೆ ತಾ
ನನ್ಯರಿಗೊಪ್ಪಿಸದೆ ಮುನ್ನಿನ ಘನವೆ ಕಳೆದಿನ್ನು ಕಾಪಾಡುವ
ಘನ್ನ ಮಹಿಮ ಶ್ರೀ ರಂಗ ವಿಠಲನ್ನ

ಎಂದು ನಂಬಿದ ಭಕ್ತರನ್ನೆಂದು ಸಲಹದೆ ಬಿಡನೆಂದು ದೃಢವಾಗಿ ಹೇಳುತ್ತಾರೆ

ಒಮ್ಮೆ ಹರಿಯ ಕೃಪಾಕಟಾಕ್ಷ ಸಂಪಾದಿಸಿದನಂತರ ಆತ ಎಂದೆಂದಿಗೂ ಭಕ್ತ ನನ್ನು ಕೈಬಿಡ ವುದಿಲ್ಲ ಹರಿಭಕ್ತ ಅರಿತು ಪಾಪಮಾಡ ವುದಿಲ್ಲ ಆದರೆ ಆತ ಅರಿಯ ದೆ ಮಾಡಿದರೆ ಅದನ್ನು ಹರಿ ಎಣಿಸ ವುದಿಲ್ಲವೆಂದು (ಅನು 3 ಕೀ 28) ಸಾರುತ್ತಾರೆ

## ಉಪದೇಶವಾಣಿ

ತಾವು ಪಡೆದ ಸಂತೋಷವನು ಬೇರೆಯವರಿಗೂ ಹಂಚುವ ಆಸೆ ಭಕ್ತರಿಗೆ ಅಂತೆಯೇ ಇತರ ಮನ ಜರಿಗೂ ಸಂಸಾರವನ್ನು ನೆಚ್ಚಿ ಹರಿಯ ನ್ನು ಭಜಿಸದೆ ಕೆಡ ಬೇಡಿರೆಂದು ನಾನಾ ರೀತಿಯಲ್ಲಿ ತಿಳಿ ಹೇಳುತ್ತಾರೆ ಶ್ರೀಪಾದರಾಯ ರು ಇದಕ್ಕೆ ಹೊರತಲ್ಲ ತಾವು ಕಂಡ ಸತ್ಯವನು ಇತರರು ಕಾಣಬೇಕೆಂಬ ಹಂಬಲ ಮಾನವ ಕೋಟಿಯ ಉದ್ಧಾರಕ್ಕಾಗಿ ಟೊಂಕಕಟ್ಟಿ ನಿಂತವರೆಲ್ಲರ ಸಹಜ ಗುಣ

ಅಕಟಕಟ ಸಂಸಾರವನು ನೆಚ್ಚಿ ಕೆಡಬ್ಯಾಡ

ವಿಕಟದಲಿ ಮಾನವರು ಕೆಟರೆಲ್ಲರುನಿಜ (ಕೀ 1) ಎಂದು ನರಕಾಸುರ ಅಂದು 1 600ಮಂದಿ ಹೆಂಗೆಳೆಯರನ್ನು ತಂದಾ ಸತ್ತವೇಳೆ ಒಬ್ಬಳನ್ನೂ ಒಯ್ಯಲಿಲ್ಲ ಕಾರ್ತವೀರ್ಯಾರ್ಜುನ ದುರ್ಯೋಧನ ನಹುಷ ಇವರನ್ನು ಉದಾಹರಿಸಿ ಏನೆಲ್ಲ ಮೆರೆದರೂ ಏನನೂ ಅವರೊಂದಿಗೆ ಕೊಂಡೊಯ್ಯಲಾಗಲಿಲ್ಲ ಆದರೆ ವಿಭೀಷಣ ಧ್ರುವ ಹನುಮಾದಿಗಳು ಹರಿಯನು ಭಜಿಸಿ ಸಕಲ ಭಾಗ್ಯವನ್ನೂ ಪಡೆದರು ಎಂದು ಉದಾಹರಣೆಗಳ ಮೂಲಕ ತಿಳಿಹೇಳಿರುತ್ತಾರೆ

ಸಂಸಾರದಲ್ಲಿ ಕಷ್ಟ ಯಾರಿಗೂ ತಪ್ಪಿದ್ದಲ್ಲ ಧರ್ಮರಾಯ ಹರಿಶ್ಚಂದ್ರ ರಂಥವರು ಪಾಡುಪಡಬೇಕಾಯಿತಂ ವ ನುಷ್ಯನು ಸ್ಥಿತಿವಂತನಾಗಿದ್ದಲ್ಲಿ ಎಲ್ಲರೂ ಅವನ ಹಿಂದೆ ಬರುವರು ದರಿದ್ರನಾದ ಮೇಲೆ ತಿರುಗಿನೋಡ ನೋಡುವುದಿಲ್ಲ ಆದ್ದ ರಿಂದ ಐಶ್ವರ್ಯವೆಲ್ಲ ಮೂರು ದಿನದ ಭಾಗ್ಯ (ಕೀ 15) ಎಂದು ಸಂಸಾರದ ಕಷ್ಟ ಕೋಟಲೆಗಳ ಪರಿಚಯಮಾಡಿಕೊಡುತ್ತಾರೆ

ಹೆಂಡತಿಮಕ್ಕಳು ಬಂಧು ಬಾಂಧವರು ಯಾರೂ ಯಮನಿಂದ ಬಿಡಿಸುವುದಿಲ್ಲ ಆದ್ದರಿಂದ ಹೆಚ್ಚು ತಡಮಾಡದೆ ಸಮಯ ಕಳೆಯ ದೇ ಭಗವಂತನನ್ನು ನೆನೆ ಎಂದಾ ಬೋಧಿಸುತ್ತಾರೆ (ಕೀ 19) ಮಾನವ ಜನ್ಮ ಹೊಂದಿದ್ದೂ ಹರಿಯ ಚರಣಕ್ಕೆ ಶರಣಾಗದಿದ್ದರೆ ಆ ಜನ್ಮ ವ್ಯರ್ಥವೆಂದು ಘಂಟಾಘೋಷವಾಗಿ ಹೇಳುತ್ತಾರೆ (54)

ಇಷ್ಟು ಹೇಳಿದರೂ ಯಾರೂ ಇವರ ಮಾತಿಗೆ ಬೆಲೆಕೊಡದಿರಲು ಏನು ಭ್ರಮೆ ಈ ಜನರಿಗೆ ಏನು ವಾಂಛಲ್ಯ ಈ ಪ್ರಕೃತಿಯ ಮೇಲೆ ಗಾಣವನ ೧ಗಿ ಮೀನು ಮೋಹ ಹೋಗುವಂತೆ ಇವರು ಮೋಸ ಹೋಗುತ್ತಾರಲ್ಲಾ ಎಂದು ಪರಿತಪಿಸುತ್ತಾರೆ

ಏನು ಭ್ರಮೆ ಮನುಜರಿಗೆ ಎಷ್ಟು ಮಮತೆ ಪ್ರಕೃತಿಯಲಿ
ವಿನಾನು ಗಾಣ (ಳ) ವ ನುಂಗಿ ಮೋಸ ಹೋದ ತೆರನಂತೆ

(ಅನು 3 ಕೀ 4)

ನನ್ನ ಮನೆ ನನ್ನ ಹೆಂಡತಿ ನನ ವ ಕ್ಕಳು ಎಂದು ಸಂಸ ರ ಜಾಲದಲ್ಲಿ ಬಿದ್ದು ತೊಳಲುತ್ತಾ ಮಾಡಬಾರದ್ದನ್ನು ಮಾಡಿ ಕೊನೆಗೆ ಏನೂ ತೋಚದೆ ಒದ್ದಾಡುವ ಮನುಜರನ್ನು ಕಂಡು ಅವರ ಆಸೆ ಆಕಾಂಕ್ಷೆಗಳೇ ಅವರನ್ನು ದುಃಖಕ್ಕೆ ದೂಡುತ್ತ ವೆಂದು ವ ಮ್ಮಲ ಮರುಗುತ್ತಾ ರಂಗವಿಠಲನ ನಾಮಸ್ಮರಿಸಲು ವಿಗಡ ಸಂಸಾರ ಹಗರಣ ನೀರಗ ಳ್ಳಿಯಂತೆ ಎಂದು ಮತ್ತೆ ಉಪದೇಶಮಾಡ ತ್ತಾರೆ ಬುದ್ಧಿ ಬಲ ಕೀರ್ತಿ ಧೈರ್ಯ ಆರೋಗ ಆನಂದ ಅಜಾಡ್ಯ ವಾಕ್ಪಟುತ್ವ ಮುಂತಾದ ವು ರಂಗವಿಠಲನನ್ನು ಹನುಮಂತನನ್ನು ಸ್ಮರಿಸಲು ಸಿದ್ಧಿಸುತ್ತವೆಂದು ಆಸೆ ತೋರಿಸುತ್ತಾರೆ

ಇಷ್ಟಾದರೂ ಸಂಸಾರ ಬಿಡದಿದ್ದರೆ ಹೋಗಲಿ ಎಂದುಕೊಂಡು ಅಲ್ಲಿದ್ದೇ ಮುಕ್ತಿ ಪಡೆಯುವ ವಿಧಾನವನ್ನು ತಿಳಿಯ ಹೇಳುತ್ತಾರೆ

ಭಕ್ತಿ ಬೇಕು ವಿರಕ್ತಿ ಬೇಕು ಸರ್ವ
ಶಕ್ತಿಬೇಕು ವಂಂದೆ ವಾುಕ್ತಿಯ ಬಯುಸುವಗೆ
ಸತಿ ಅನುಕೂಲ ಬೇಕು ಸುತನಲಿ ಗ ಣಬೇಕು
ವಂಂತಿವಂತನಾಗಬೇಕು ಮತ ಂದಾಗಿರಬೇಕು
ಜಪದ ಜಾಣಾವೆ ಬೇಕು ತ್ ದನೇಮವೆ ಬೇಕು
ಉಪವಾಸ ವ್ರತ ಬೇಕು ಉಪಶಾಂತವಿರಬೇಕು
ಸುಸಂಗ ಹಿಡಿಯಲಿಬೇಕು ದುಸ್ಸಂಗ ಬಿಡಲಿಬೇಕು
ರಂಗವಿಠಲನ್ನ ಬಿಡದೆ ನೆರೆ ನಂಬಿರಬೇಕು (ಕೀ 37)

ಸಂಸಾರದಲ್ಲಿದ್ದು ಮುಕ್ತಿ ಪಡೆಯುವವನಿಗೆ ಸುತ ಮುತ್ತಲ ವಾತಾವರಣ ಹೇಗಿರ ಬೇಕು ಎಂಬುದರ ಒತ್ತಣವಿದೆ ಇಲ್ಲಿ ಆತನಿಗೆ ಭಕ್ತಿ ವಿರಕ್ತಿ ಮತ್ತು ಸರ್ವಶಕ್ತಿಗಳೂ ಒಂದುಗೂಡಿರಬೇಕು ಅನುಕೂಲಳಾದ ಸತಿ ಗುಣವಂತನಾದ ಮಗ ಇರಬೇಕು ಜಪ ತಪ ವ್ರತಗಳನ್ನು ನೇಮದಿಂದ ಆಚರಿಸುತ್ತ ಕೆಟ್ಟ ಸಂಗವನ್ನು ತೊರೆದು ಒಳ್ಳೆಯ ಜನರ ಸಂಪರ್ಕವನ್ನು ಹೊಂದಿರಬೇಕು ಎಂಬುದನ್ನು ತಿಳಿಯಪಡಿಸಿದ್ದಾರೆ

ಹೇಗಾದರೂ ಸರಿ ಜನರನ್ನು ನೀತಿ ಮಾರ್ಗಕ್ಕೆ ಹಚ್ಚಿ ಭಗವದ್ದರ್ಶನ ಮಾಡಿಸ ಬೇಕೆಂಬ ಆಕಾಂಕ್ಷೆ ಇವರದು ಇವರ ಈ ರಚನೆಗಳಲ್ಲಿ ಮಾನವರಿಗಾಗಿ ಮಿಡಿಯುವ ಹೃದಯದ ದರ್ಶನವಾಗುತ್ತದೆ ಒಡುಗರಿಗೆ

**ತತ್ತ್ವಪ್ರತಿಪಾದನೆ**

ಗುರು ಮಧ್ವರ ಶ್ರೇಷ್ಠತೆ ಹರಿಸರ್ವೋತ್ತಮತ್ವ ಪರಮತಗಳ ಖಂಡನೆ ಜಗತ್ ಸತ್ಯತ್ವ ತಾರತಮ್ಯ ಮೊದಲ ದ ವಿಷಯಗಳು ಶ್ರೀಪಾದರ ಕೃತಿಯ ಲ್ಲಿ ಸ್ಥಾನ ಪಡೆದಿವೆ ಇವರ ಮೂಲೋದ್ದೇಶ ಮಾಧ್ವ ತತ್ತ್ವ ಪ್ರಚಾರವೇ ಆಗಿರುವುದರಿಂದ ಇದು ಸ್ವಾಭಾವಿಕವೇ ಆಗಿದೆ ಶ್ರೀ ಗೋಕುಲನಾಥರು ಶ್ರೀಪಾದರ ಒಗ್ಗೆ ಬರೆಯು ತ್ತಾ ಶ್ರೀ ಪಾದರು ದ್ವೈತ ತತ್ತ್ವಶಾಸ್ತ್ರ ಸಮುದ್ರದ ಅಮೂಲ್ಯ ಆಣಿಮುತ್ತುಗಳನ್ನು ಸುಳಾದಿ ಕೀರ್ತನೆ ಉಗಾಭೋಗ ವೃತ್ತನಾಮಗಳೆಂಬ ಕನ್ನಡ ಚಿನ್ನದ ಚೌಕಟ್ಟಿ ನಲ್ಲಿಟ್ಟು ಅಪೂರ್ವ ಕಂಠ ಹಾರವನ್ನು ಕನ್ನಡ ಸಾಹಿತ್ಯ ವಾಕ್‌ದೇವಿಗೆ ಸಮರ್ಪಿಸಿ ದ್ದಾರೆ ಎಂದು ಪ್ರಶಂಸಿಸಿದ್ದಾರೆ

**ಹರಿಸರ್ವೋತ್ತಮತ್ವ**—ಯಾವುದೇ ಸತ್ಯವನ್ನು ಕಥೆಯ ಮೂಲಕ ನಿರೂಪಿಸಿದಲ್ಲಿ ಸುಲಭವಾಗಿ ಮನಸ್ಸಿಗೆ ನಾಟಿ ನೆಲೆಗೊಳ್ಳುತ್ತದೆಂಬುದನ್ನು ಅರಿತಿದ್ದಾರೆ ಶ್ರೀಪಾದರು ಅಂತೆಯೇ ಒಂದು ರಚನೆಯಲ್ಲಿ ಭೃಗುಮುನಿಯ ವೃತ್ತಾಂತದ ಮೂಲಕ ಹರಿಸರ್ವೋ ತ್ತಮತ್ವವನ್ನು ಪ್ರತಿಪಾದಿಸಿದ್ದಾರೆ

ಭೃಗುಮುನಿಯು ಹರಿ, ಹರ ಬ್ರಹ್ಮರಲ್ಲಿ ಯಾರು ಶ್ರೇಷ್ಠರೆಂದು ಮುನಿಜನ ಗಳಲ್ಲಿ ತರ್ಕ ಮೊದಲಾಗಲು ಅದನ್ನು ನಿಶ್ಚಯಿಸಲು ಆರಿಸಲ್ಪಡುತ್ತಾನೆ ಅವನು

ಹೊರಟು ಮೊದಲು ಬ್ರಹ್ಮನಲ್ಲಿಗೆ ಬರುತ್ತಾನೆ ಬ್ರಹ್ಮನು ಭೃಗುಮುನಿಯು ತನಗೆ ವಂದಿಸದಿರಲು ಸಿಟ್ಟಾಗಿ ನಿಂದಿಸಲು ಅವನು ಪರತತ್ತ್ವವಲ್ಲವೆಂದು ಬಗೆದು ಹರನನ್ನು ಕಾಣಲು ಹೊರಡುತ್ತಾನೆ ಹರನು ಭೃಗುಮುನಿಯನ್ನು ತನ್ನ ತಮ್ಮನೆಂದು ತಬ್ಬಿಕೊಳ್ಳಬರುತ್ತಾನೆ ಮುನಿ ನಿರಾಕರಿಸಲು ಸಿಟ್ಟಾಗಿ ತಾಳ್ಮೆ ತಪ್ಪಿ ಇವನನ್ನೇ ಕೊಲ್ಲಲು ಬರುತ್ತಾನೆ ಈಶ್ವರನು ಪರತತ್ತ್ವವಲ್ಲವೆಂದು ನಿರ್ಧರಿಸಿ ವಿಷ್ಣುವಿನ ಹತ್ತಿರ ಬಂದು ತಾನೇ ಕಾಲುಕೆರೆದು ಜಗಳ ತೆಗೆಯುವ ಅಂಗವಾಗಿ ಅವನ ಎದೆಗೆ ಒದೆಯುತ್ತಾನೆ ವಿಷ್ಣುವು ಅದನ್ನು ಲೆಕ್ಕಿಸದೆ ಮುನಿಯ ಕಾಲಿಗೆ ಭಕ್ತಿಯಿಂದ ಪೂಜೆ ಮಾಡಲು ಭೃಗುವ ಮುನಿಯು ಹರಿಯೇ ಶ್ರೇಷ್ಠನೆಂಬ ನಿರ್ಧಾರಕ್ಕೆ ಬಂದು ತನ್ನ ತೀರ್ಮಾನವನ್ನು ಎಲ್ಲರಿಗೂ ತಿಳಿಸುತ್ತಾನೆ ಇದಲ್ಲದೆ ವಿಷ್ಣುವಿನ ಮೇಲ್ಮೆಯನು ಎತ್ತಿಹಿಡಿಯ ಎವ ಹಲವಾರು ಸಂದರ್ಭಗಳನ್ನು ಉಲ್ಲೇಖಿಸುತ್ತಾರೆ ಉದಾ ಸಮುದ್ರದ ಧನ ಕಾಲದಲ್ಲಿ ಲಕ್ಷ್ಮೀ ಹರ ಬ್ರಹ್ಮರನ್ನು ಬಿಟ್ಟ ಹರಿಯನ್ನು ವರಿಸಿದ್ದು ಗಜೇಂದ್ರನನು ವಿಷ್ಣು ಮೊಸಳೆಯ ಬಾಯಿಂದ ಬಿಡಿಸಿದ್ದು ರಾಜಸೂಯಯಾಗದಲ್ಲಿ ಭೀಷ್ಮನು ಕೃಷ್ಣನೇ ಅಗ್ರಪೂಜೆಗೆ ಅರ್ಹನೆಂದು ಹೇಳಿದ್ದು ಹರಿಸರ್ವೋತ್ತಮತ್ವವನ್ನು ಘಂಟಾಘೋಷವಾಗಿ ಸಾರುತ್ತಾರೆ

ಬಿಡಿ ಬಿಡಿ ಸಂದೇಹವನ್ನು ಪೊಡವಿಮನುಜರೆಲ್ಲ
ಒಡೆಯನೊಬ್ಬನೆ ಜಗಕೆ ರಂಗವಿಠಲ(36)

ಇಲ್ಲಿನ ಕಥನ ಶೈಲಿ ಸರಳವಾಗಿದ್ದು ಆಕರ್ಷಕವಾಗಿದೆ

ಹಲವಾರು ಪುರಾಣದ ಕಥೆಗಳನ್ನು ನಿರೂಪಿಸುತ್ತ ಹರಿಹರರನ್ನು ಪರಸ್ಪರ ತುಲನಾತ್ಮಕವಾಗಿ ತೂಗಿ ನೋಡಿ ಹರಿಯೇ ಶ್ರೇಷ್ಠನೆಂಬುವ ಸತ್ಯವನ್ನು ಪ್ರತಿಪಾದಿಸಿ ಹರಿಹರರು ಸರಿಯೆಂಬ ಮರುಳು ಜನರು ಹರಿಹರರ ಚರಿತೆಯನು ತಿಳಿದು ಭಜಿಸುವುದು (60) ಎಂದು ಬೋಧನೆ ಮಾಡುತ್ತಾರೆ

ಹಾಗೆಂದು ಇವರು ಈಶ್ವರನನ್ನು ಹೀಗಳೆಯುತ್ತಾರೆಂದಲ್ಲ ಆದರೆ ಅವನನ್ನು ಸ್ತುತಿಸುವ ಕೊಂಡಾಡುವ ರೀತಿ ಮಾಧ್ವ ಮತಕ್ಕೆ ಅನುಗುಣವಾದ ತಾರತಮ್ಯ ತತ್ತ್ವಕ್ಕೆ ಅನುಗುಣವಾಗಿದೆಯಷ್ಟೆ ಮೊದಲು ಹರಿ ನಂತರ ಈಶ್ವರ ಹರಿ ತಾತ ಹರ ಮೊಮ್ಮಗ ಹಸಳೆ ಪಾರ್ವತಿ ಮೆಚ್ಚಿದ ಜಟಾಮಂಡಲಧಾರಿ ಕೈಲಾಸ ಗಿರಿಯ ದೊರೆ ಫಣಿಭೂಷಣ ಎಂದೆಲ್ಲಾ ಹರನನ್ನು ವರ್ಣಿಸುತ್ತ ಹರಿಯ ದಯದಿಂದ ವಿಷವನ್ನು ಭಕ್ಷಿಸಿಯೂ ಉಳಿದುಕೊಂಡನೆಂದು ಹೇಳುತ್ತಾರೆ ಇದೇ ಕೃತಿಯಲ್ಲಿ ಹರಿಹರರ ನಡುವಿನ ಒಂದು ರಸ ಪ್ರಸಂಗವನ್ನು ನಿರೂಪಿಸುತ್ತಾರೆ ಈಶ್ವರನು ತನ್ನ ತಾತನಾದ ಹರಿಯಲ್ಲಿಗೆ ಬಂದು ಮೋಹಿನೀರೂಪ ತೋರಿಸಬೇಕೆಂದು ಬೇಡುತ್ತಾನೆ ಮಾರನೇ ದಿನ ಮೋಹಿನೀವೇಷ ಧರಿಸಿ ಹರಿ ಬರಲು ತಾನೇ ಮೋಹಪರವಶನಾಗಿ ಹಿಡಿಯ ಹೋಗುತ್ತಾನೆ ಕಡೆಗೆ ವಿಷ್ಣುವೆಂದರಿತು ನಾಚಿ ಕ್ಷಮಾಪಣೆ ಬೇಡುತ್ತಾನೆ

ಇಂತ ಸರ್ವಶ್ರೇಷ ನಾದ ಹರಿಯನೂ ನಾನಾವಿಧವಾಗಿ ಹಾಡಿ ಹೋಗಳಿದ್ದಾರೆ ನಾರಾಯಣ ನಿನ್ನ ನಂಬಿದೆ ಲಕ್ಷ್ಮೀನಾರಾಯಣ ನಿನ್ನೊರತು ಪೊರವ ದೈವವಲ್ಲಿದೆ ಎಂದು ನಾರಾಯಣನನ್ನು (29) ಕಂಗಳಿದ್ಯಾತಕೆ ಕಾವೇರಿ ರಂಗನ ನೋಡದ (12) ಎಂದು ಶ್ರೀರಂಗನನ್ನೂ ಸ್ಮರಿಸಿದವರನು ಕಾಯ್ವನವನ್ನು ಸೂರ್ಯನೇ ಈ ಪ್ರಭಾವ ಸುರಮುನಿಗಳ ಸಂಜೀವ ಶ್ರೀ ವೆಂಕಟ ನಮ್ಮ ಪೊರೆವ ಎಂದು ಶ್ರೀ ವೆಂಕಟೇಶನನ್ನೂ ಕುರಿತು ಹಾಡಿದ್ದಾರೆ ದಶಾವತಾರವನ್ನಂತೂ ನಾನಾ ಕಡೆಯಲ್ಲಿ ಸಂದರ್ಭೋಚಿತವಾಗಿ ದೃಷ್ಟಾಂತಗಳಿಗೆ ಬಳಸಿದ್ದಾರೆ ನರ ಸಿಂಹಾವತಾರದ ಮೇಲೆ ಇವರ ವಾಂಛೆ ಸ್ವಲ್ಪ ಅಧಿಕವಾಗಿದೆ ಕೃಷ್ಣಾವತಾರದ ನಂತರದ ಸ್ಥಾನ ಇದು ಪಡೆದಿದೆ ಇವರ ಕೃತಿಗಳಲ್ಲಿ ಹುಂಡಿಗಳಲ್ಲಿ ಪ್ರಾಸಂಗಿಕವಾಗಿ ಸ್ಮರಿಸಿರುವುದಲ್ಲದೆ (31 50 ಮೊದಲಾದವುಗಳು) ಶ್ರೀಲಕ್ಷ್ಮೀ ನೃಸಿಂಹ ಪ್ರಾದುರ್ಭಾವದಂಡಕ ವೆಂಬ ದೀರ್ಘ ಕೃತಿಯನ್ನು ರಚಿಸಿದ್ದಾರೆ

**ಲಕ್ಷ್ಮೀನೃಸಿಂಹ ಪ್ರಾದುರ್ಭಾವ ದಂಡಕ** ಶ್ರೀ ವದ್ಭಾಗವತದ ಏಳನೆಯ ಸ್ಕಂದ ಎಂಟನೆಯ ಅಧ್ಯಾಯದ ಕನ ಡ ಅನುವಾದವಿದು ವೀರ ರಸ ಪ್ರಧಾನ ವಾಗಿರುವ ಇದು 546 ಸಾಲುಗಳನ್ನೊಳಗೊಂಡಿದೆ ಶ್ರೀಪಾದರಾಜರ ಈ ವಿಶಿಷ್ಟ ಕೃತಿ ಹೆಸರೇ ಸೂಚಿಸುವಂತೆ ವಿಷ್ಣುವು ನರಸಿಂಹಾವತಾರವನ್ನೆತ್ತಿ ಹಿರಣ್ಯಕಶಿಪುವನ್ನು ಸಂಹರಿಸಿ ಭಕ್ತನಾದ ಪ್ರಹ್ಲಾದನನ್ನು ಅನುಗ್ರಹಿಸಿದುದಾಗಿದೆ ಅನುವಾದವಾದರೂ ಅಂಧಾನುಕರಣೆಯಾಗಿಲ್ಲದಿರುವುದು ಇದರ ಗುಣವಿಶೇಷವೆಂದು ಹೇಳಬಹುದು ವಿವರಣೆಗಳಲ್ಲಿ ಶ್ರೀಪಾದರು ಸ್ವಾತಂತ್ರ್ಯತೋರಿ ಕೃತಿಯ ಸೌಂದರ್ಯಕ್ಕೆ ಮೆರಗು ಹಚ್ಚಿದ್ದಾರೆ

ಪ್ರಹ್ಲಾದನ ಮೂಲಕ "ಕಾಮಾದಿ ಷಡ್ವರ್ಗಗಳು ಮಹಾವೈರಿಗಳು ದೇಹ ವೆಂಬ ರಾಜಧಾನಿಯನ್ನು ಹಾಳುಮಾಡುವವರು ಅದನ್ನು ಗೆಲ್ಲದೆ ಸಕಲ ದಿಕ್ಕುಗಳನ್ನು ಜಯಿಸಿದನೆಂದು ಕೊಚ್ಚಿಕೊಳ್ಳುತ್ತಾರೆ ಕಾಮಾದಿ ಷಡ್ವರ್ಗಗಳನ್ನು ಗೆದ್ದವನು ತಾನೆ ಶ್ರೇಷ ನೆಂದು ಸಾರಿದ್ದಾರೆ ನೃಸಿಂಹ ಹಾಗೂ ಹಿರಣ್ಯ ಕಶಿಪುವಿನ ಕಾಳಗ ರುದ್ರರವ ಣೀಯವಾಗಿದೆ ಉದಾಹರಣೆಗೆ

ನರಸಿಂಹನ ಆಕೃತಿಯನ್ನು ಕಂಡು ನಾನು ನನ್ನ ಮಗನನ್ನು ಕೊಲ್ಲಬೇಕೆಂದಿ ರ ವ ಈ ಸಮಯದಲ್ಲಿ ನನ್ನನ್ನು ಕೊಲ್ಲಲು ಬಂದವನೋ ಇನು ನನಗೆ ಮೃತ್ಯು ಸಮೀಪಿಸಿದಂತೆಯೇ ಎಂದು ಕೊಂಡರೂ ವೀರನಾದ್ದರಿಂದ ಹಿಮ್ಮೆಟ್ಟದೆ ಪತಂಗದ ಹ ಳು ಜ್ವಾಲೆಯ ಮಹತ್ವವರಿತೂ

ಪುತ್ರ ಸಂಹಾರಕುದ್ಯುಕ್ತನಾಗಿಪ್ಪೊಡೇ
ಎನ ಸಂಹಾರಕ್ಕಾಗಿಲ್ಲಿಗೆ ಬಂದನೋ
ಇನ್ನು ಮೇಲೀನನಿಂದೆನ್ನಗೆ ಮೃತ್ಯು ತಾ
ಸಿದ್ಧವಾಂತಿಪ್ಪುದೇನೋ ಪುರಾಣ ಪ್ರಸಿ

ದ್ಭೋಕ್ತ್ಯಬಿವ್ಯಕ್ತಿಗೆ ತೇನಹೋ ಎಂದು ವಿಜಾ
ತಾಡುತಾ ನಿಂತು ಉದ್ಧಗ್ದದಾಧಾರಿ ತ
ತ್ತೇಜ ಉಚ್ಛೈಸದೇ ಶಬ್ದವಾ ಕಕ್ಷಭುಕ್
ಜ್ವಾಲೆಯೋಳ್ ಬಿದ್ದುದೆನ್ನೇ ಸಮುದ್ಯುದ್ಧ ಸ
ನದ್ಧನಂತಾಗಿ ನೃಸಿಂಹನಲ್ ಹಾರಿದಂ

ಅದನು ಸಮೀಪಿಸುವಂತೆ ನೃಸಿಂಹನ ಮೇಲೆ ಹಾರಿದ್ದಾನೆ

ಹರಿಯಾದರೋ ಹಿರಣ್ಯಾಸುರ ಶ್ರೇಷ ನನ್ನು ಸ ಹರಿಸುವುದು ಹೆಚ್ಚಲ್ಲದಿದ್ದರೂ ರೋಷಾವೇಶದಿಂದ ಅವನನ್ನು ಎದುರಿಸುತ್ತಾನೆ

ಲೋಕ ದೃಷ್ಟ್ಯಾನುಸಾರ ಕ್ರಿಯಾ
ಕಾರಿಯಾಗಿಪ್ಪ ನೃಸಿಂಹನ ದ್ಯದ್ಗದಾ
ಧಾರಿ ತಾನಾಗಿ ಸದ್ವಿದ್ಯುದಾಭೋದ್ಯದು
ದ್ವೇಗವೇಗೋರು ಸಂಪದ್ಗದಾದಂಡವಂ
ಕೊಂಡು ಯ ಎದ್ದಕ್ಕಿ ಬಾಹೊ ಮಹಾದೈತ್ಯವ
ರ್ಯನ್ನ ತಾ ನೋಡಿ ರೊ ಷೋಜ್ವಲ ಜ್ವಾಲೆಗಳ್
ತೇಲಿ ಹಾನೊಲ್ಲಸಜ್ಜಿಹ್ವೆಯಿಂದಲ್ ಪ್ರಕಾ
ಶೈಸ ತಾ ಚೀರ ತಾಗಾಟ್ಟಹಾಸ ಕ್ರಮಂ
ನ್ಯಾಸದಿಂ ಹಾರುತಾ ಕೊ ಟಿ ಸೂರ್ಯಪ್ರಭಾ
ಬೀರುತಾ ಆ ಗುರ ತ್ಮಂತ ಕಾಳಾಹಿನಂ
ಪಿಡಿವನಂತೊಪ್ಪಿ ತಾನಾ ದಿತೀಪುತ್ರನಲ್
ದೂಕಿದಂ

ಮೂಲ ಶ್ಲೋಕದಲ್ಲಿರುವ ಅನೇಕ ಸಂಸ್ಕೃತ ಶಬ್ದಗಳನ್ನೂ ಅದೇ ರೂಪಿನಲ್ಲಿಯೇ ಕನ ಡಧಾಟಿಗೆ ತಕ್ಕಂತೆ ಬಳಸಿದ್ದಾರೆ ಕೆಲವೆಡೆ ಸಂಸ್ಕೃತ ಮಾತುಗಳು ಕನ ಡಕ್ಕೆ ಒಗ್ಗಿ ಬಂದರೆ ಹಾಗೆ ಇಡಿಯಾಗಿ ಬಳಸಿರುವುದೂ ಉಂಟು ನಿರರ್ಗಳ ಸರಳ ಶೈಲಿ ಮನಸ್ಸಿಗಾನಂದ ನೀಡುತ್ತದೆ

ಕೊನೆಯಲ್ಲಿ ಮೂಲದಲ್ಲಿನ ಪ್ರಹ್ಲಾದನ ಪ್ರಾರ್ಥನೆಗೆ ಮಿ ಸಲಾಗಿರುವ ಒಂದು ಅಧ್ಯಾಯಕ್ಕೆ ಬದಲಾಗಿ ಇಲ್ಲಿ ಪ್ರಹ್ಲಾದ ನರಸಿಂಹದೇವರಿಗೆ ಮಾಡಿದ ಪೂಜಾ ವಿವರಗಳ ಕಡೆ ಹೆಚ್ಚು ಒತ್ತುಕೊಟ್ಟಿದ್ದಾರೆ ಈ ವಿಧಾನ ಮಧ್ವಾಚಾರ್ಯರ ತಂತ್ರಸಾರ ಮೊದಲಾದ ಪೂಜಾವಿಧಾನಗಳನ್ನು ಕುರಿತ ಗ್ರಂಥವನ್ನೂ ಹೋಲುವುದು ಇನ್ನೊಂದು ವಿಶೇಷ ಅಂತೂ ಸಮಯ ಸಿಕ್ಕಾಗಲೆಲ್ಲ ದ್ವೈತ ಸಿದ್ಧಾಂತದ ಬಗ್ಗೆ ತಮಗಿರುವ ಅಭಿಮಾನವನ್ನೇ ನಾನಾರೀತಿಯಾಗಿ ವ್ಯಕ್ತಪಡಿಸುತ್ತಾರೆ

ಶ್ರೀಪಾದರಾಜರು ರಚಿಸಿದ ಮ ಮಧ್ವನಾಮ (20) ದಾಸ ಸಾಹಿತ್ಯದಲ್ಲಿ ವಿಶೇಷವಾದುದು 27 ನುಡಿಗಳುಳ್ಳ ಈ ಕೃತಿ (+3 ಫಲಶ್ರುತಿ ಜಗನ್ನಾಥ ದಾಸ ರಿಂದ) ಒಯ ಜಯ ಜಗತ್ರಾಣ ಜಗದೊಳಗೆ ಸುತತ್ರಾಣ ಅಖಿಳ ಗುಣಸದ್ಧಾಮ ಮಧ್ವನಾಮ ಎಂದು ಮೊದಲಾಗುತ್ತದೆ ವಾಯುದೇವರ ಅವತಾರಿಗಳಾದ ಹನುಮ ಭೀಮ ಮಧ್ವರ ಹಿರಿಮೆಯನು ಕುರಿತು ತುಂಬ ಭಕ್ತಿಯಿಂದ ಹಾಡಿದ್ದಾರೆ ಹನುಮಂತನ ಹಲವಾರು ಪ್ರತಾಪಗಳನ್ನೇ ಚಿತ್ರಿಸಿ ಕೊನೆಗೆ ರಾಮನಿಗೆ ಅವಿಚ್ಛಿನ ವಾಗಿ ಹೇಗೆ ಸೇವೆ ಸಲ್ಲಿಸಿದನೆಂಬುದನ್ನು ತಿಳಿಸುತ್ತಾ

ಅಜಪದವಿಯನು ರಾಮ ಕೊಡಲುವೆನೆನೆ ಹನುಮಂತ
ನಿಜ ಭಕುತಿಯನೆ ಬೇಡಿ ವರವ ಪಡೆದ

ರಾಮ ಮೆಚ್ಚುಗೆಯಿಂದ ಬ್ರಹ್ಮ ಪದವಿಯನ್ನು ನೀಡಲು ಮುಂದಾದರೆ ನಿರಾಕರಿಸಿ ಭಕ್ತಿಯನ್ನು ಬೆ ಡುತ್ತಾನೆಂದು ಹೇಳಿ ದಾಸ್ಯ ಭಕ್ತಿಯ ಶ್ರೇಷ್ಠತೆಯನ್ನು ಮೆರೆದಿದ್ದಾರೆ ಹನುಮಂತ ದಾಸ್ಯಭಾವಕ್ಕೆ ಆದರ್ಶನಾದವನು

ದ್ವಾಪರದಲ್ಲಿ ಭೀಮನಾಗಿ ಹಿಡಿಂಬ ಬಕ ಕೀಚಕ ಕೌರವರನ್ನು ಸಂಹರಿಸಿ ವೀರ ನರಹರಿಯ ಲೀಲೆಯನ್ನು ಮೆರೆದ ಭೀಮ ಇವರ ಪ್ರಕಾರ ಶಕ್ತಿ ಸಾಹಸಗಳ ಸಂಕೇತ ಇವನ ಚಿತ್ರಣ ಸೊಗಸಾಗಿ ಮೂಡಿ ಬಂದಿದೆ ಕಲಿಯುಗದಲ್ಲಿ ಮಾಯಾ ವಾದವು ಅವೈದಿಕ ಮತವೂ ಪ್ರಾಬಲ್ಯ ಹೊಂದಿದ ಕಾಲದಲ್ಲಿ ಮಾಧ್ವಮುನಿಯಾಗಿ ಅವತರಿಸಿ ಲೋಕಕ್ಕೆ ಜ್ಞಾನ ಸುಧೆಯನ್ನಿತ್ತು ಉದ್ಧರಿಸಿದ್ದಂತೂ ಇವರ ಅಪಾರ ಮೆಚ್ಚುಗೆಗೆ ಪಾತ್ರವಾಗಿದೆ

ಈ ಮಧ್ವನಾಮದ ಪ್ರಾಶಸ್ತ್ಯವನ್ನೂ ಜಗನ್ನಾಥದಾಸರ ಈ ಫಲ ಶ್ರುತಿ ಯಿಂದ ಅರಿಯಬಹುದು

ಪುತ್ರರಿಲ್ಲದವರು ಸತ್ಪುತ್ರರೈದುವರು
ಸರ್ವತ್ರದಲ್ಲಿ ದಿಗ್ವಿಜಯವಹುದು ಸಕಲ
ಶತ್ರುಗಳು ಕೆಡುವರಪಮೃತ್ಯು ಬರಲಂಜುವುದು
ಸೂತ್ರನಾಮಕನ ಸಂಸ್ತುತಿ ಮಾತ್ರದಿ
ಶ್ರೀಪಾದರಾಯ ಪೇಳಿದ ಮಧ್ವನಾಮ ಸಂ
ತಾಪ ಕಳೆದಖಿಳ ಸೌಖ್ಯವನೀವುದು
ಶ್ರೀಪತಿ ಜಗನ್ನಾಥವಿಠಲನ ತೋರಿ ಭವ
ಕೂಪದಿಂದ ಕಡೆ ಹಾಯಿಸುವುದು

ಮಧ್ವನಾಮ ಪಠನೆಯಿಂದ ಸಕಲ ಇಷ್ಟಾರ್ಥಗಳು ಸಿದ್ಧಿಸುವುದೆಂದು ನುಡಿಯುತ್ತಾ ಜಗನ್ನಾಥದಾಸರು ಮಧ್ವನಾಮದ ಗುಣಮಟ್ಟವನ್ನು ಎತ್ತಿ ಹಿಡಿಯುವುದರ ಮೂಲಕ ಅದರ ರಚನಕಾರರಿಗೆ ಗೌರವ ಸಲ್ಲಿಸಿದ್ದಾರೆ

ಶ್ರೀಪಾದರಾಜರ ಮಾಧ್ವಮತ ನಿಷೆ ಮರುದಂಶ ಮತ ಹಿಡಿಯದೆ ಇಹ ಪರ ದಲ್ಲಿ ಸುಖವಿಲ್ಲವಂತೆ (41) ಎಂದು ಹೇಳುವಲ್ಲಿ ಹಾಗೂ ಅರಿತು ವಿವೇಕದಿ ವ ರ ಯ ದೆ ನಮ್ಮ ಗುರ ರಾಯರ ನಂಬಿ ಬದುಕಿರೋ (41) ಎಂದು ನ ಡಿಯುವಲ್ಲಿ ಎದ್ದು ಕರ್ಣ ತ್ರದೆ ಉಪದೇಶವಿಲ್ಲದ ಮಂತ್ರ ಏಸು ಜಪಿಸಲು ಫಲಕೊಡದಂತೆ (41) ಎಂದು ಹೇಳುವಲ್ಲಿ ಗ ರೂಪದೇಶ ವ ಹತ್ವವನ್ನು ಒತ್ತಿ ಹೇಳಿದ್ದಾರೆ ಹಾಗೂ ಸ ರ ವ ಧ್ವಶಾಸ್ತ್ರವೇದದೆ ಗುರು ತಾರತಮ್ಯ ಜ್ಞಾನ ಪುಟದಂತೆ ಎಂದು ಹೇಳುತ್ತಾ ಕಡೆಯಲ್ಲಿ ಶ್ರೀರಂಗವಿಠಲನ ಭಜಿಸದೆ ಮುಂದೆ ಪರಮಗತಿ ದೊರಕದೆಂದು ಸಾರಿ ಹೇಳುತ್ತಾರೆ

ಮಧ್ವಾಚಾರ್ಯರ ಬಗ್ಗೆಯಂತೂ ಅವಿ ತ ವಿಶ್ವಾಸ ಅದ್ವೈತ ಮತ ಮುರಿದು ದ್ವೈತ ಮತ ಉದ್ಧರಿಸಿದ ಅವರನ್ನು ವಂದಿಸುವಂತೆ ಕೋರಿದ್ದಾರೆ ಇನ್ನೊಂದು ರಚನೆಯಲ್ಲಿ[4]

ಮಧ್ವಶಾಸ್ತ್ರ ಗ್ರಂಥಸಾರದ ಪದ್ಧತಿ ತಿಳಿದಂಥ
ಅದ್ವೈತ ಪಂಥ ಮುರಿದು ಮತ ಉದ್ಧರಿಸಿದಂಥ
ರುದ್ರ ವಂದ್ಯ ವರಾರುತಿ ರಂಗವಿಠಲ ಪದ
ಪದ್ಮಾರಾಧಕ ಪ್ರಸಿದ್ಧ ಮುನೀಂದ್ರರ
ವಂದನೆ ಮಾಡಿರೈ

(ಅನುಬಂಧ 3 ಕೀ 22)

ಮೇಲಿನ ಉದಾಹರಣೆಗಳಲ್ಲಿ ನೇರ ಪ್ರಶಂಸೆ ಇದ್ದರೆ ಇನ್ನೊಂದೆರಡು ಕ ತಿಗಳಲ್ಲಿ ಪರವ ತ ಖಂಡನೆಯ ಮೂಲಕ ಮಧ್ವವ ತದ ಶ್ರೇಷ ತೆಯನು ಎತ್ತಿ ಹಿಡಿಯು ತ್ತಾರೆ ಮಾಯಾಮತ[ವೊ]ಳಿತಲ್ಲ ನಿನಗೆ ನಾಯಿ ಜನ್ಮವು ಬಾರದೆ ಒಡಲ್ಲ (41) ಎಂದು ಮೊದಲಾಗುವ ಕೃತಿಯಲ್ಲಿ ಅದ್ವೈತ ಮತದ ತತ್ತ್ವಗಳನು ಜಾತಿಭೇದ ಸಂಸಾರದಲ್ಲಿನ ವಯೋಭೇದ ಪಾಪ ಭೇದ ಇಂತಿವೆ ಲೌಕಿಕ ಉದಾಹರಣೆಗಳನ್ನು ಕೊಟ್ಟು ಅಲ್ಲಗಳೆದು ಅದಕ್ಕಿಂತ ಭೇದಮತವನ್ನು ಬೋಧಿಸ ವ ದ್ವೈತಮತವನ್ನು ಗೌರವಿಸಿರೆಂದು ವಾದಿಸುತ್ತಾರೆ ಮತ್ತೊಂದೆಡೆ ನೀನಿರುವಾಗ ನಿನ್ನನ್ನು ಭಜಿಸದೆ ಕ್ಷುಲ್ಲಕರ ಮತವನ್ನು ಅನುಸರಿಸಿ ಸುಖವನ್ನು ಬಯಸುವ ನನ ಸ್ಥಿತಿ ಕಲ್ಲು ಗೋವಿನ ಹಾಲನ್ನು ಒಯ ಸಿದ ಕರು ಹಲ್ಲುಮುರಿದು ಹೋಗುತ್ತದೆಯೆಂಬುದನ್ನು ಅರಿಯ ದಂತಿದೆ ಎಂದು ತಮ್ಮ ಅಜ್ಞಾನವನ್ನು ಉಪಮೆ ಸಹಿತ ಪ್ರದರ್ಶಿಸುವುದರ ಮೂಲಕ ಪರಮತವನ್ನು ಖಂಡಿಸಿದ್ದಾರೆ

ಸುಮ್ಮನೆ ವೈಷ್ಣವನೆಂಬಿರಿ ಎಂಬ ಕೃತಿಯಲ್ಲಿ (58) ನರರು ಸುರರು, ಸುರೇಂದ್ರರು ಹರವಿರಿಂಚಿ ಸಿರಿ ಇವೆಲ್ಲಕ್ಕಿಂತ ಮೇಲಾದವನು ಹರಿ ಜಗತ್ತು

4 ಈ ಕೃತಿ ತಮ್ಮ ಗುರು ರಘುನಾಥತೀರ್ಥರನು ಸ್ತುತಿಸಿರುವುದಾಗಿದೆ ಎಂಬ ಅಭಿಪ್ರಾಯವಿದೆ

ಸತ್ಯವೆಂದು ಅರಿವು ಪಂಚ ಭೇದವ ತಿಳಿದು ರಾಗದ್ವೇಷಗಳನು ವರ್ಜಿಸಿ ಭಗ ವಂತನ ಲೀಲೆಯ ಶ್ರವಣದಿಂದ ಹರಿಯನ್ನು ಒಲಿಸಿಕೊಳ್ಳಬಹುದೆಂಬುದನ್ನು ಅರಿ ಯದೆ ಹೋಗಿದ್ದೆ ಎಂದು ತಮ್ಮನ್ನು ನಿಂದಿಸಿಕೊಳ್ಳುತ್ತಲೇ ವೈಷ್ಣವನ ಗುಣ ಲಕ್ಷಣಗಳನ್ನು ತಿಳಿಸಿದ್ದಾರೆ

> ಶಿಷ್ಯ ವ್ಯಾಸರಾಯ ರನು ಪ್ರಶಂಶಿಸಿರುವ ಕೃತಿಯಲ್ಲಿ (6) ಯತಿಶ್ರೇಷ ರೆಂದು
> ಯತಿಗಳೊಳಗೆ ನಿಮ್ಮಂದದವರುಗಳ
> ಪ್ರತಿಗಾಣೆನು ಈಕ್ಷಿತಿಯೊಳು ಯತಿರಾಯಾ

ವ್ಯಾಸರಾಯರನ್ನು ಹೊಗಳಿದ್ದಾರೆ ವ್ಯಾಸರಾಯರ ಮುಂದೆ ತಮ್ಮ ಶಿಷ್ಯ ಪುರಂದರ ರನ್ನು ದಾಸರೆಂದರೆ ಪುರಂದರದಾಸರಯ್ಯ ಎಂದು ಸ್ತುತಿಸಿರುವುದನ್ನು ಅಂತೆಯೇ ಶ್ರೀಪಾದರಾಜರನ್ನು ರಘುನಾಥ ತೀರ್ಥರು ನಾವೋ ಬರಿ ಶ್ರಿಪಾದಂಗಳು ತಾವಾ ದರೋ ಶ್ರೀಪಾದರಾಜರು ಎಂದು ಹೊಗಳಿರುವುದನ್ನು ಇಲ್ಲಿ ನೆನಪು ಮಾಡಿಕೊಳ್ಳ ಬಹುದು ತಮ್ಮ ಶಿಷ್ಯರನ್ನು ಬಾಯಿತುಂಬಾ ಸಂಕುಚಿತ ಭಾವವಿಲ್ಲದೇ ಹೊಟ್ಟೆ ಕಿಚ್ಚಿಲ್ಲದೇ ಹೊಗಳುವ ಈ ಶ್ರೇಷ ರ ಶ್ರೇಷ್ಠಗುಣದ ಅರಿವು ಇಲ್ಲಿ ನಮಗಾಗುತ್ತದೆ

## ವಿಶೇಷ ರಚನೆಗಳು

ಭ್ರಮರಗೀತೆ ರುಕ್ಮಿಣೀ ಸತ್ಯಭಾವಾ ಸಂವಾದ ಲಕ್ಷ್ಮೀಪಾದುರ್ಭಾವ ದಂಡಕ ಹಾಗೂ ಮಧ್ವನಾಮ ಇವು ಸ್ವಲ್ಪ ದೀರ್ಘವಾದ ವಿಶೆ ಷ ರಚನೆಗಳು ಕೊನೆಯಿಂದೆರಡರ ಪರಿಚಯ ಈಗಾಗಲೇ ಆಗಿರುವುದರಿಂದ ಮೊದಲೆರಡದರತ್ತ ಗಮನ ಹರಿಸೋಣ

**ಭ್ರಮರಗೀತೆ** (39) ಭಾಗವತದಲ್ಲಿನ ಭ್ರಮರಗೀತೆ ( × ಅ 47) ಇದಕ್ಕೆ ಸ್ಫೂರ್ತಿ ನೀಡಿದ್ದರೂ ಹಲವ ರು ಸ್ವಂತ ಕಲ್ಪನೆಗಳಿಂದ ಕೂಡಿ ಇದೊಂದು ಸುಂದರ ಭಾವ ಸೂಸುವ ರಮ್ಯಗೀತೆಯಾಗಿ ಮೂಡಿಬಂದಿದೆ ಸಂಸ್ಕೃತ ಮೂಲದಲ್ಲಿ 17 ಶ್ಲೋಕಗಳಿವೆ ಪ್ರಕೃತ ಶ್ರೀಪಾದರಾಜರ ರಚನೆಯಲ್ಲಿ ಅಷ್ಟ ಪಾದಗಳುಳ್ಳ 8 ನುಡಿಗಳಿವೆ ಗೊ ಪಿಯರು ತಮ್ಮ ಬಳಿಗೆ ಬಂದ ದುಂಬಿಯನ್ನು ಕೃಷ್ಣನ ದೂತ ನೆಂದು ಭಾವಿಸಿ ತಮ್ಮ ಅಗಲಿಕೆಯ ನೋವನ್ನು ಹೇಳಿಕೊಳ್ಳುತ್ತಾರೆ ಗೋವಿಂದನ ಯೋಗಕ್ಷೆ ಮ ವಿಚಾರಿಸಿ ತಮ್ಮನ್ನು ನಂಬಿಸಿ ಕೈ ಬಿಟ್ಟಿರುವನೆಂದು ಪರಿತಪಿಸುತ್ತಾರೆ ಇಲ್ಲಿ ತಾವು ಅವನನ್ನೆ ನೆನೆದು ದುಃಖಿಸುತ್ತಿರುವಾಗ ಅವನು ಅಲ್ಲಿ ಸುಖಿಸ ತ್ತಿರುತ್ತಾನೆ ಚೇರೆ ಮದಿರಾಕ್ಷಿಯ ರೊಂದಿಗೆ ಎಂದು ಆಕ್ಷೇಪಿಸುತ್ತಾರೆ ಅವನ ಅಲಂಕಾರ ವನ್ನು ಬಣ್ಣಿಸುತ್ತಾ ತಮ್ಮನ್ನೆ ಸಂತವಿಸಿಕೊಂಡು ಅವನಿಗೂ ತಮಗೂ ಎಲ್ಲಿಯ ಸಾಟಿ ಎಂಬುದರ ವಿಮರ್ಶೆಮಾಡಿಕೊಂಡು ರಾಸಕ್ರೀಡೆಯ ಸಮಯದಲ್ಲಿ ತಮ್ಮಿಂದ ತಪ್ಪೇನಾದರೂ ಸಂಭವಿಸಿದಲ್ಲಿ ಕ್ಷಮಿಸುವಂತೆ ಕ್ಷಮಿಸಿ ಸಲಹುವಂತೆ ಭೃಂಗದ ಕೈಯಲ್ಲಿ ಹೇಳಿ ಕಳುಹಿಸುತ್ತಾರೆ

ಲಕ್ಷುಮಿರಮಣನವ ಸೂಕ್ಷ್ಮವು ಗೊಲ್ಲತೇರಾವು
ಕುಕ್ಷಿಯೊಳು ಬೊಮ್ಮಾಂಡವವಗೆ ಮಕ್ಷಿಕಗಳಂತಿಪ್ಪೆವು
ಮೊ ಕ್ಷದರಸನು ಅವ ಗೋಕ್ಷೀರದಿ ತೃಪ್ತರಾವು
ಲಕ್ಷಿಸುವುದೇತೋ ಎಮ್ಮನು ಶ್ರೀಹರಿಯು
ರಕ್ಷಿಸಲುದಿಸಿ ಜನರ ರಕ್ಷಣೆಗೆ ಪಾಲ್ಬೆಣ್ಣೆಯ
ಭಕ್ಷಿಸಿ ನಿರುತ ನಮ್ಮ ಅಕ್ಷಿಗೆ ಹಬ್ಬವನುಣಿಸಿ
ಈ ಕ್ಷೋಣಿ ಚರಾಚರ ದೀಕ್ಷಿಗೆ ನರರ ಸಾಮ್ಯ
ವಕ್ಷ [ಮ]ಣರಾದೆವೋ ಮೂರ್ಖರೋ ಹೇ ಕಿತವಾ

ಅಂದೆಮ್ಮೊಳು ರಾಸಕ್ರೀಡೆಯಿಂದ ಬಂದಪರಾಧವ
ನೊಂದನೆಣಿಸದೆ ಸಲಹೆಂದು ಬಿನ್ನೈಸಿ ಸಾಷ್ಟಾಂಗದಿಂದ
ವಂದಿಪೆವೋ ಭಕ್ತ ಬಂಧುವಿಗೆ ನಮ್ಮ ಹೃದಯಂ
ಮಂದಿರದೊಳೆಂದೆಂದಿರೆಂದು ಹೆ ಕತವಾ

ಗೋಪಿಯರ ಮೊರೆಯೇ ಉದ್ಧವ ಕೂಡ್ ಕೇಳುವ ಈ ವೃತ್ತನಾಮ ಗೀತಗೋವಿಂದದ ಶ್ಲೋಕ ಸಂಗೀತವನ್ನು ಸ್ಮರಿಸಿಕೊಳ್ಳುವಂತೆ ಮಾಡುತ್ತದೆ ಪ್ರತಿಯೊಂದು ನುಡಿಯೂ ಹೇ ಕತವಾ ಎಂದು ಕೊನೆಯಾಗುತ್ತದೆ ಶ್ರೀಪಾದರಾಯರ ಸುಂದರ ಕವಿ ಹೃದಯವನ್ನು ತೆರೆದು ತೋರುವ ಈ ಕೃತಿ ಅಪೂರ್ವ ಕಲಾಕೃತಿಯನ್ನುವುದರಲ್ಲಿ ಸಂದೇಹವಿಲ್ಲ

**ರುಕ್ಮಿಣಿ ಸತ್ಯಭಾಮೆಯರ ಸಂವಾದ** (13) ಕುಂಜನೇತ್ರ ಶುಭ ಮಂಗಳ ಗಾತ್ರೆ ಎಂದು ಶುರುವಾಗುವ ಈ ಕೃತಿ ರುಕ್ಮಿಣಿ ಸತ್ಯಭಾಮೆಯರ ನಡುವಿನ ಬಿರುಸು ವ ಗ್ವಾದವನ್ನು ಚಿತ್ರಿಸುತ್ತದೆ ಕೃಷ್ಣನಿಗೆ ಯಾರು ಅಪ್ತರು ಎನ್ನುವುದೇ ಇವರ ಸಂವಾದದ ವಸ್ತು ಕೃಷ್ಣ ರ ಕ್ಮಿಣಿಯನ್ನು ಅಪಹರಿಸಿಕೊಂಡು ಬಂದು ವಿವಾಹವಾದ ಸತ್ಯಭಾಮೆಯನ್ನು ಸತ್ರಾಜಿತ ಕೃಷ್ಣನಿಗೆ ಮದುವೆ ಮಾಡಿಕೊಡು ತ್ತಾನೆ ಇಬ್ಬರ ಸಂವಾದ ತೀಕ್ಷ್ಣವಾಗಿ ರ ಕ್ಮಿಣಿ ಗೆಲುವಿನ ಪತಾಕೆ ಹಾರಿಸುತ್ತಾ ಭಾವೆ ಯ ಮೋರೆ ಕೆಳಗೆ ಇಳಿ ಒಲಿಯುವಂತೆ ಮಾಡಿದ ಘಟ್ಟದಲ್ಲಿ ಕೃಷ್ಣನ ಪ್ರವೇಶ ವಾಗಿ ಇಬ್ಬರನ್ನೂ ಕರೆದು ಆಲಿಂಗಿಸಿ ಸಂತವಿಸುತ್ತಾನೆ

ಸಂಭಾಷಣೆಯ ತುಣುಕುಗಳು ಹೀಗಿವೆ

ನಿಜಳೆಂದು ರಂಗನು ಎನ್ನ
ವಿಜಯಯಾತ್ರೆಯಲ್ಲಿ ತನ್ನ
ಭುಜಗಳಿಂದಾಲಿಂಗಿಸಿದ
ಸುಂಜನೆ ರ ಕ್ಮಿಣಿ ಸಂಪದ್ಮಗಂಧಿನಿ
ಅರಸರ ಸ್ವಭಾವ ತಮ್ಮ

ಆರ್ ೀರ ಮನೆಯೊಳಗಿಟ್ಟು
ಅರಸ ದಾಸೇರಿಂದ್ಹೋಗೋದಂ
ಸ್ಮರಿಸೆ ಭಾಮಿನಿ ಸುಗುಣೆ ಕಾಮಿನಿ

ವಿಜಯಯಾತ್ರೆಯಲ್ಲಿ ತನ್ನನ್ನು ಸೇರಿಸಿಕೊಂಡಿದ್ದನೆಂದು ಭಾಮೆ ಬಿಗಿದರೆ ರುಕ್ಮಿಣಿ ಅರಸಿಯರನು ಮನೆಯಲ್ಲಿ ಬಿಟ್ಟು ಇಂತಹ ಸಮಯದಲ್ಲಿ ದಾಸಿಯರನ್ನು ಕರೆದುಕೊಂಡ ಹೋಗುವುದು ನಿನಗೆ ತಿಳಿಯದೆ ಎಂದು ಭಾಮೆಯನ್ನು ಪೆಚ್ಚು ಹಿಡಿಸುತ್ತಾಳೆ ರುಕ್ಮಿಣಿ ಭಾಮಿನಿ ಸುಗುಣೆ ಕಾಮಿನಿ ಎಂದು ಭಾಮೆಯನ್ನು ಸಂಬೋಧಿಸಿದರೆ ಬಾಮೆ ರುಕ್ಮಿಣಿ ಸುಪದ್ಮಗಂಧಿನಿ ಎಂದು ರುಕ್ಮಿಣಿಯನ್ನು ಸಂಬೋಧಿಸುತ್ತಾಳೆ ಇಬ್ಬರೂ ಕದನೋತ್ಸಾಹಿಗಳಾಗಿದ್ದರೂ ಒಬ್ಬರನ್ನೊಬ್ಬರು ಕೆಟ್ಟ ಅವಾಚ್ಯ ಶಬ್ದಗಳಿಂದ ಸಂಬೋಧಿಸದೆ ಇರುವುದು ವಿಶಿಷ್ಟವಾಗಿದೆ

ಇಲ್ಲಿನ ಸಂಭಾಷಣೆ ಸರಸಮಯವಾಗಿಯೂ ಜೀವಂತವಾಗಿಯೂ ಇದ್ದು ಓದುಗರನ್ನು ಆಕರ್ಷಿಸುತ್ತದೆ ಉತ್ತಮ ಕುಲದಲ್ಲಿ ಹುಟ್ಟಿದರೂ ಸವತಿ ಮಾತ್ಸರ್ಯದಿಂದ ಮುಕ್ತರಾಗದೇ ಕಾರಣವಿಲ್ಲದೆ ಹೇಗೆ ಸತಿಯರು ಜಗಳವಾಡುತ್ತಾರೆಂಬ ದಕ್ಕೆ ಉತ್ತಮ ನಿದರ್ಶನವಿದು

**ವಾಗ್ವಜ್ರ** ವಾಗ್ವಜ್ರವೆನ್ನುವುದು ಇವರದೆಂದು ಹೇಳಲಾಗುವ ಸಂಸ್ಕೃತ ಗ್ರಂಥ ಮೈಸೂರು ಪ್ರಾಚ್ಯ ಸಂಶೋಧನಾಲಯ ಗ್ರಂಥ ಭಂಡಾರದಲ್ಲಿದ್ದ ಇದರ ಹಸ್ತ ಪ್ರತಿಯೊಂದನು (c 1560) ಮೂಲ ಪ್ರತಿಯಾಗಿ ಭಾವಿಸಿ ಪಂಡಿತರ ಪರಿಶೋಧನೆಗೊಳಪಡಿಸಿ ಶ್ರೀ ಕ್ಷೇತ್ರ ನರಸಿಂಹ ತೀರ್ಥ ಮುಳಬಾಗಿಲಿನ ಮಂಧ್ವೇಶರು (ರಾಭೀ ಮಾಧವರಾವ್) 1974 ರಲ್ಲಿ ವಾಗ್ವಜ್ರ ಎಂಬ ಹೆಸರಿನಲ್ಲಿ ಪುಸ್ತಕ ರೂಪದಲ್ಲಿ ಹೊರತಂದಿದ್ದಾರೆ

ಶ್ರೀಮನ್ನ್ಯಾಯ ಸುಧಾ ಗ್ರಂಥಾತ್ಕ್ರಿಯತೇತ್ವರ್ಥ ಸಂಗ್ರಹಃ
ವಾಗ್ವಜ್ರಾಖ್ಯಂ ಮಹಾಗ್ರಂಥಂ ನಿರ್ಮಾತುಂ ತರ್ಕ ಸಂಗ್ರಹಮ್

ಎಂದು ಪ್ರಾರಂಭವಾಗುವ ಶ್ಲೋಕದಿಂದ ಶ್ರೀಮನ್ನ್ಯಾಯ ಸುಧಾ ಗ್ರಂಥದ ಅಭಿಪ್ರಾಯವನು ಶ್ರೀಮನ್ನ್ಯಾಯ ಸುಧಾ ವಾಕ್ಯಗಳಿಂದಲೇ ಸಂಗ್ರಹಿಸಿ ಹೇಳುವುದೇ ಈ ಗ್ರಂಥ ರಚನೆಯ ಮುಖ್ಯ ಉದ್ದೇಶವೆಂದು ತಿಳಿದು ಬರುತ್ತದೆ ಇದರಲ್ಲಿ ಅನೇಕ ಸುಧಾ ವಾಕ್ಯಗಳು ಬರುತ್ತವೆ ವೇದ ಪೌರುಷೇಯತ್ವವನ್ನು ಸಮರ್ಥಿಸುತ್ತಾ ಕಾರ್ಯತಾವಾದ ಚಾರ್ವಾಕ ಮತ ಹಾಗೂ ಅರ್ಹತ ಮತ ಖಂಡನ ಮಾಡಿ ವಿಷ್ಣುತತ್ವವನು ನಿರ್ಣಯ ಮಾಡಲಾಗಿದೆ ಶ್ರೀಮನ್ನ್ಯಾಯ ಸುಧಾ ವಿಯದಧಿಕರಣ ಮತ್ತು ತೃತೀಯಾಭ್ಯುದಯ ಚತುರ್ಥಾಧ್ಯಾಯದ 2 ಪಾದಗಳ ಸಂಗ್ರಹದಿಂದ ಮೊದಲಿಗೆ ಹೇಳಿದ ನುಡಿ ತಥ್ಯವೆಂದು ತಿಳಿದು ಬರುತ್ತದೆ ಬ್ರಹ್ಮಸೂತ್ರ ಪ್ರಾಮಾಣ್ಯ

ಸಮರ್ಥನೆ ಮಾಡುವಾಗ ಗ್ರಂಥದ ರೀತಿಯಲ್ಲಿಯೇ ವಿವಕ್ಷಿತಾರ್ಥ ತತ್ವಜ್ಞಾನಂ ಕರಣ ಪಾಟವಂ ಎಂದಂ ಮಾಡಲಾಗಿದೆ [4a]

ಗ್ರಂಥವು ಗದ್ಯ ಪದ್ಯದಿಂದ ಕೂಡಿದೆ ಗದ್ಯವೇ ಅಧಿಕವಾಗಿ ಅಲ್ಲಲ್ಲಿ ವಿರಳ ವಾಗಿ ಶ್ಲೋಕಗಳು ಕಂಡು ಬರುತ್ತವೆ ಬಿ ಎನ್ ಕೆ ಶರ್ಮಾರವರು ಇದು 300 ಗ್ರಂಥ (ಶ್ಲೋಕ ?)ಗಳ ಳ್ಳ ಸ ಸ್ಪಷ್ಟವಾದ ವ ತ್ತು ಚಿತ್ತಾಕರ್ಷಕವಾದ ಒಂದು ವ್ಯಾಖ್ಯಾನಗ್ರಂಥ ವಿಚಾರ ಪ್ರತಿಪಾದನೆ ಪರಿಪೂರ್ಣವಾ ಗಿದೆ ಶೈಲಿ ಮನೋಹರ ವಾಗಿದೆ ಅನೇಕ ರೀತಿಯಲ್ಲಿ ಇಷ್ಟು ಆಕರ್ಷಕವಾಗಿದ್ದರೂ ಇದು ಸಾಂಪ್ರದಾಯಿಕ ವರ್ಗದಲ್ಲಿ ಹೆಚ್ಚು ಪ್ರಚಲಿತವಾಗಿಲ್ಲ ಎಂದು ಅಭಿಪ್ರಾಯಪಡುತ್ತಾರೆ [5]

ಶ್ರೀಪಾದರಾಜರಿಗೆ ಕನ್ನಡವಷ್ಟೇ ಅಲ್ಲ ಸಂಸ್ಕೃತದಲ್ಲೂ ಅಪಾರ ಪಾಂಡಿತ್ಯ ವಿತ್ತು ಎನ್ನುವುದಕ್ಕೆ ಈ ಗ್ರಂಥ ಸಾಕ್ಷಿಯಾಗಿದೆ ಹಾಗೂ ಅವರ ಜೀವನ ಚಿತ್ರಣ ದಲ್ಲಿ ಬರುವ ರಘು ನಾಥ ತಿ ರ್ಥರ ಭೆ ಟಿಯ ಸಂದರ್ಭ ಇವರ ಸುಧಾ ಗ್ರಂಥದ ವಿಶಿಷ್ಟ ರೀತಿಯ ವ್ಯಾಖ್ಯಾನ ಸತ್ಯವೆಂದು ಸ ರುತ್ತದೆ

## ವಿವಿಧ ಪ್ರಕಾರಗಳು ಹಾಗೂ ಶೈಲಿ

ಕೀರ್ತನೆ ಸುಳಾದಿ ಉಗಾಭೋಗ ವೃತ್ತನಾಮ ಹಾಗೂ ದಂಡಕ ಇವೇ ಮೊದಲಾದ ವಿವಿಧ ಪ್ರಕಾರಗಳನ್ನೂ ಶ್ರೀಪಾದರಾಜರ ರಚನೆಯ ಲ್ಲಿ ನಾವು ಕಾಣ ಬಹ ದು ಸ ಳಾದಿ ಉಗಾಭೋಗಗಳ ಪ್ರಯೋಗ ಇದರಿಂದಲೇ ಮೊದಲಾಯಿತೆನ್ನ ಬಹುದು ಉಗಾಭೋಗಕ್ಕೆ ವಚನ ಸಾಹಿತ್ಯ ಪ್ರೇರಣೆಯಾಗಿರಬಹುದೆಂಬ ಅಭಿ ಪ್ರಾಯವಿದೆ

ಧ್ರುವ ರ ಗೀತೆ ಗೋಪೀಗೀತ ಗಳಲ್ಲಿ ಕಾವ್ಯ ಗ ಣ ಮಿಂಚಿದ್ದರೂ ಪುರಂದರ ಕನಕರಿಗೆ ಹೋಲಿಸಿ ನೋಡಿದಾಗ ಇವು ಉತ್ತಮೋತ್ತಮ ಕಾವ್ಯದ ಪ್ರತಿ ರೂಪಗಳೆಂದು ಹೇಳುವುದು ಸಾಧ್ಯವಿಲ್ಲ ಭಕ್ತನೊಬ್ಬನು ಪಾಮರರನ್ನು ದೃಷ್ಟಿ ಯಲ್ಲಿಟ್ಟುಕೊಂಡು ರಚಿಸಿದ ಕೃತಿಗಳು ಇವಾದ್ದರಿಂದ ಸರಳವಾಗಿವೆ ಭಕ್ತಿ ಗೀತೆ ಗಳಲ್ಲಿ ಭಾವಾವೇಶಕ್ಕೆ ಇರುವಷ್ಟು ಪ್ರಾಧಾನ್ಯ ಅಲಂಕ ರ ಚಮತ್ಕಾರಗಳಿಗಿಲ್ಲ ಅನುಭವ ಗಾಢವಾದಾಗ ಭಕ್ತನ ವಚಾತು ಗಾದೆಯ ಂತೆ ರಸವತ್ತಾಗಬಲ್ಲವು ಮೇರೆಯ ಕರೆ ಮೀರಿದಾಗ ಮಾತುಗಳು ಮಂತ್ರಶಕ್ತಿಯನ್ನೂ ಪಡೆಯಬಲ್ಲವು ಕಿವಿಗೆ ಇಂಪಾದ

4a ಈ ವಿವರಗಳು ವಾಗ ಜ್ರ ಪುಸ ಕದ ಮುನು ಡಿಯಿಂದ ಸಂಗ್ರಹಿಸಲಾಗಿದೆ

5 A History of Dvaita School of Vedanta and its Literature Vol II 1961 pp 251 252
ಕನ್ನಡಾನುವಾದ ಡಾ॥ ಜಿ ವರದರಾಜರಾಯರದು

6 ಶ್ರೀಪಾದರಾಜರ ಕೃತಿಗಳು ಸಂ ಡಾ॥ ಜಿ ವರದರಾಜರಾವ್, p xiv (ಜನಪ್ರಿಯ ಆವೃತ್ತಿ)

ಪ್ರಾಸ ವೈವಿಧ್ಯಗಳು ಸಹಜವಾಗಿ ಹೆಣೆದುಕೊಳ್ಳಬಹುದು ಶ್ರೀಪಾದರಾಜರ ಕೀರ್ತನೆಗಳಲ್ಲಿಯೂ ಇವುಗಳನು ಆಗಿಂದಾಗ್ಗೆ ಕಾಣಬಹುದ * ಎನ್ನುವುದು ಸತ್ಯದ ಮಾತು

ಇವರ ರಚನೆಯಲ್ಲಿನ ಕೆಲವು ವಾಕ್ಯಗಳು ಗಾದೆ ಮಾತಿನಂತೆಯೇ ಪ್ರಸಿದ್ಧವಾಗಿವೆ ಉದಾ ಹೆತ್ತ ಮಕ್ಕಳು ಹುಚ್ಚರಾದರೆ ತಾಯ್ಕಂದೆ ಎತ್ತದೆ ನೆಲಕೆ ಬಿಸುಡುವರೆ ಗೋವಿಂದ ಸರಕು ಒಪ್ಪಿಸಿದ ಮ್ಯಾಲೆ ಸುಂಕ ಉಂಟೇ ದೇವಾ ಅರಸು ಮುಟ್ಟಲು ದಾಸಿ ರಂಭೆಯಾದಳು ದೇವ ಪರುಶು ಮುಟ್ಟಲು ಲೋಹ ಸ್ವರ್ಣ ಗೋವಿಂದ

ನರಸಿಂಹ ಪ್ರಾದುರ್ಭಾವ ದಂಡಕದಲ್ಲಿನ ವೀರರಸ ಭ್ರಮರ ವೇಣು ಗೋಪೀಗೀತೆಗಳಲ್ಲಿನ ಮಾರ್ದವತೆ ಇವರ ಸಾಮರ್ಥ್ಯವನು ಪರಿಚಯಮಾಡಿಕೊಡುತ್ತವೆ ತುರುಗಾಯಬಂದ ಗೋಪಿಯಕಂದ ಆನಂದದಿಂದ ಎಂದು ಆರಂಭವಾಗುವ ರಚನೆಯಲ್ಲಿ (ಅನು 3 ಕೀ 12) ಹಾಸ್ಯದಹೊನಲನೇ ಹರಿಸಿದ್ದಾರೆ ಕೃಷ್ಣನ ವೇಣುಗಾನವನು ಕೇಳಿ ಅವನನ್ನು ನೋಡುವ ಆತುರದಲಿ ಗೋಪಿಯರ ಆಭಾಸಗಳು ನಗು ಉಕ್ಕಿಸುತ್ತವೆ

ತಂದೆಯು ಕಂದನೆಂದು ಕೊಂಕುಳೊಳಿಟ್ಟು
ಕಂದನ ಕೆಳಗಿಟ್ಟು
ಅಂದಿಗೆ ಗೆಜ್ಜೆ ಕಿವಿಗಳಿಗಿಟ್ಟು
ಮುತ್ತಿನ ಬಟ್ಟು
ಹೊಂದಿಸಿ ಗಲ್ಲದಲ್ಲಿ ತಾನಿಟು

I

ಮುರಳಿಯ ಸ್ವರಕ್ಕೆ ಮೋಹಿತರಾಗಿ
ಕರುಗಳನು ತಂದು
ಕರದಿಂದಲೆತ್ತಿ ತೊಟ್ಟಿಲೊಳಗೆ
ಇರಿಸುತ್ತ ಹಾಲ
ಬೆರೆಸುತ್ತ ಮಜ್ಜಿಗೆ ಮೊಸರಿನೊಳಗೆ
ಪರಮಾತ್ಮನ ನೆನೆದು
ಹೊರಟರು ಬಿಸಿಲು ಚಳಿ ಮಳೆಯೊಳಗೆ
ಮನೆಮನೆಯೊಳಗೆ
ತರಳರ ಬೆದರಿಸಿ ಮಾರ್ಜಾಲಿಕೆ ಮೊಲೆ
ತ್ವರಿತದಿ ಉಣಿಸುತ ಸರಿಸರಿಯನುತಲಿ

ಪೂರ್ವ ಕಥೆಗಳನು ಪಂಚಾನನಪೂಂಚಿ ವಾಗಿ ಉದಾಹರಿಸುತ್ತಾ ದೃಷ್ಟಾಂತ ಗಳನ್ನು ಕೊಡುತ್ತಾ ತಮ್ಮ ರಚನೆಗಳಿಗೆ ಕಳೆಕಟ್ಟಿದ್ದಾರೆ ಶ್ರೀಪಾದರಾಜರು ಇವರ ರಚನೆಗಳ ಸಾಹಿತ್ಯ ಮೌಲ್ಯದ ಬಗ್ಗೆ ಏನೇ ವಿವಾದವಿದ್ದರೂ ಇವರ ಕೃತಿಗಳು ಮುಂದೆ ಈ ಪಂಥದಲ್ಲಿಯೇ ಬಂದ ಪ್ರತಿಭಾಶಾಲಿಗಳಿಗೆ ಪ್ರೇರಣೆ ಸ್ಫೂರ್ತಿ ಒದಗಿಸ ದವೆಂಬುದು ನಿರ್ವಿವಾದವಾದ ಸಂಗತಿ ಆತ್ಮವನು ತಟ್ಟುವ ಮನಸ್ಸನ್ನು ಮುಟ್ಟುವ ಹೃದಯವನು ಸೂರೆಗೊಳ್ಳುವ ಇಂಪಿನ ತಂಪನ್ನು ಗಾಳಿಯಕಂಪಿನಲ್ಲಿ ಕಿವಿಗೆ ತಾಕಿಸುವ ಅಂತಃ ಕರಣಕ್ಕೆ ಸ್ಪಂದಿಸುವ ಜ್ಞಾನದ ಹೊಂಗಿರಣಗಳನು ನರನಾಡಿ ಯಲ್ಲೆಲ್ಲಾ ಧುಮ್ಮಿಕ್ಕಿಸುವ ಭಕ್ತಿರಸ ಸಾಹಿತ್ಯವಾದ ಹರಿದಾಸಸಾಹಿತ್ಯದ ನವ ವಿಧ ಭಕ್ತಿಯ ನವಪಂಥವೊಂದನ್ನು ನಿರ್ಮಿಸಿ ವೈಕುಂಠಕ್ಕೆ ಪಾಥೇಯವನ್ನು ಕಟ್ಟಿದ ಕಟ್ಟಾಳುಗಳಾದವರು ಶ್ರೀಪಾದರಾಜರು ಎಂದು ಹೊಗಳಿದ್ದಾರೆ [7] ಅರಳು ಮಲ್ಲಿಗೆ ಪಾರ್ಥಸಾರಥಿಯವರು

## ಉಪಸಂಹಾರ

ಒಟ್ಟಿನಲ್ಲಿ ದಾಸ ಸಾಹಿತ್ಯದಲ್ಲಿ ಶ್ರೀಪಾದರಾಯರ ಸ್ಥಾನ ಅತ್ಯಂತ ಹಿರಿದಾದುದು ಅವರ ಸಾಧನ ಕೊಡುಗೆಗಳನ್ನು ಈ ಕೆಳಕಂಡಂತೆ ಕ್ರೋಡೀಕರಿಸಿ ಹೇಳಬಹುದು

ಹರಿದಾಸ ಪಂಥದ ಸ್ಥಾಪನೆ ಬೆಳವಣಿಗೆಗೆ ಕಾರಣರಾದ ಶ್ರೀಪಾದರಾಜರು ವ್ಯಾಸಕೂಟ ದಾಸ ಕೂಟಗಳೆರಡರಲ್ಲೂ ಸಮಾನ ಗೌರವ ಪ್ರಸಿದ್ಧಿ ಹೊಂದಿರುವರು ಸಂಸ್ಕೃತ ಕನ್ನಡ ಎರಡೂ ಭಾಷೆಗಳಲ್ಲಿ ಕೃತಿ ರಚನೆ ಮಾಡಿ ಎರಡೂ ಭಾಷೆಯಲ್ಲಿನ ತಮ್ಮ ಪ್ರೌಢಿಮೆಯನ್ನು ಮೆರೆದಿರುವರು ಸಂಗೀತದ ಮೌಲ್ಯವರಿತು ಅದನ್ನು ತತ್ವಪ್ರಸಾರಕ್ಕೆ ಸಾಹಿತ್ಯ ನಿರ್ಮಾಣಕ್ಕೆ ಮಾಧ್ಯಮವಾಗಿ ಬಳಸಿದ ಕೀರ್ತಿ ಹರಿ ದಾಸರದಾಗಿರುವುದಕ್ಕೆ ಕಾರಣ ಶ್ರೀಪಾದರಾಜರು ಎಂಬುದನ್ನು ನಾವು ಮರೆಯುವಂತಿಲ್ಲ ಕಲಿಯುಗದಿ ಗಾನದಲಿ ಕೇಶವಯೆನಲಂ ಕೈಗೊಡುವನು ವಿರಲ ಎಂದು ಹಾಡುತ್ತಾ ಗಾನದಿಂದಲೇ ದೈವಸಾಕ್ಷಾತ್ಕಾರ ಸಾಧ್ಯವೆಂಬ ಸುಲಭೋಪಾಯವನ್ನು ತೋರಿಸಿಕೊಟ್ಟವರು ಶ್ರೀಪಾದರಾಜರು ತಮ್ಮ ಸ್ವಂತ ಆಲೋಚನೆಯಿಂದ ಇವರು ನಡೆಸಿದ ಈ ಪ್ರಯೋಗ ಮುಂದೆ ಹೇಗೆ ಯಶಸ್ವಿಯಾಗಿ ಕೀರ್ತಿಗಳಿಸುವಂತೆ ಮಾಡಿ ತೆಂಬುದನ್ನು ಕನ್ನಡಿಗರೆಲ್ಲರೂ ಬಲ್ಲರು ಸುಳಾದಿ ಕೀರ್ತನೆ ವೃತ್ತನಾಮ ಉಗಾ ಭೋಗಗಳನ್ನು ಮೊದಲ ಬಾರಿಗೆ ಬೆಳಕಿಗೆ ತಂದು ಮುಂದೆ ಪುರಂದರ ದಾಸರಂಥ ಸಂಗೀತ ಪಿತಾಮಹರಿಗೆ ಬೇಕಾದ ಸ್ಫೂರ್ತಿ ತಳಪಾಯ ಒದಗಿಸಿಕೊಟ್ಟವರು ಶ್ರೀಪಾದರಾಜರು ಮಠಾಧಿಪತಿಗಳಾಗಿದ್ದುಕೊಂಡೇ ಕನ್ನಡದಲ್ಲಿ ಕೃತಿಗಳನ್ನು ರಚಿಸಿ ಅವುಗಳನ್ನು ಪೂಜಾಸಮಯದಲ್ಲಿ ಹಾಡಿಸಿ ತಮ್ಮ ಶಿಷ್ಯರಿಗೆ ಮೇಲ್ಪಂಕ್ತಿ ಹಾಕಿಕೊಟ್ಟವರು ಇವರು ತಮ್ಮ ಕೃತಿಗಳಲ್ಲಿ ಹರಿಸ್ತುತಿ ಭಕ್ತಿಭಾವ ಪ್ರತಿಪಾದನೆ ನೀತಿಬೋಧೆ

7 ಹರಿದಾಸ ಸಾಹಿತ್ಯ ವೈಭವ pp 29–30

ಮತ್ತು ತತ್ತ್ವಪ್ರತಿಪಾದನೆಗಳನ್ನು ಅಳವಡಿಸುವುದರ ಮೂಲಕ ಹರಿದಾಸ ಸಾಹಿತ್ಯ ಕ್ಷೇತ್ರ ವಿಸ್ತರಣೆಗೆ ಅಂತೆಯೇ ಕನ್ನಡ ಸಾಹಿತ್ಯ ಕ್ಷೇತ್ರದ ವಿಸ್ತರಣೆಗೂ ಕಾರಣರಾದವರು ಈ ಮಹಾತ್ಮರು ಒಬ್ಬ ಬಾಲ ಸಂನ್ಯಾಸಿಯಿಂದ ಇದಕ್ಕಿಂಥ ಇನ್ನೇನು ನಿರೀಕ್ಷಿಸಬಹುದು

## ಗ್ರಂಥಋಣ


1. ಶ್ರೀಪಾದರಾಜರ ಕೃತಿಗಳು (ಜನಪ್ರಿಯ ಆವೃತ್ತಿ) ಸಂ ಡಾ॥ ಜಿ ವರದರಾಜರಾವ್ ಕನ್ನಡ ಅಧ್ಯಯನ ಸಂಸ್ಥೆ ಮೈಸೂರು ವಿಶ್ವವಿದ್ಯಾನಿಲಯ 1973 ಪ್ರಕಟಣೆ
2. ಕರ್ನಾಟಕ ಹರಿದಾಸ ಸಾಹಿತ್ಯ ಆರ್ ಎಸ್ ಪಂಚಮುಖಿ, ಕನ್ನಡ ಸಾಹಿತ್ಯ ಪರಿಷತ್ತು, 1982 ಶ್ರೀಪಾದರಾಜರ ಹಾಡುಗಳು, ಸಂಪಾದಕ ಕಾವ್ಯಪ್ರೇಮಿ ಸಮಾಜ ಪುಸ್ತಕಾಲಯ ಧಾರವಾಡ 1977
3. ಕರ್ನಾಟಕ ಹರಿದಾಸರು ಎಚ್ ಕೆ ವೇದವ್ಯಾಸಾಚಾರ್ಯ, 1965
4. ರಂಗವಿಠಲ, ಸಂ ಅರಳು ಮಲ್ಲಿಗೆ ಪಾರ್ಥಸಾರಥಿ
5. ಶ್ರೀಪಾದರಾಜರು, ಅರಳುಮಲ್ಲಿಗೆ ಪಾರ್ಥಸಾರಥಿ
6. ಹರಿದಾಸ ಸಾಹಿತ್ಯ ವೈಭವ, ಅರಳುಮಲ್ಲಿಗೆ ಪಾರ್ಥಸಾರಥಿ
   ಮೇಲಿನ ಮೂರು ಪುಸ್ತಕಗಳು ಶ್ರೀಪಾದರಾಜರ 5ನೇ ಶತಮಾನೋತ್ಸವದ ಪ್ರಕಟಣೆಗಳು ಶ್ರೀಪಾದರಾಜಮಠ, ಮುಳಬಾಗಿಲ, 1982
7. ಶ್ರೀ ವಿಜಯದಾಸರು, ಜೀವನ ಮತ್ತು ಕೃತಿಗಳ ಸಮೀಕ್ಷೆ ಡಾ॥ ಕೆ ಗೋಕುಲನಾಥ್, ಸಿಂಧುಶಯನ ಪ್ರಕಾಶನ, ಬೆಂಗಳೂರು, 1978
8. ಶ್ರೀ ಕರ್ನಾಟಕ ಭಕ್ತ ವಿಜಯ, ಬೇಲೂರು ಕೇಶವದಾಸರು, ಉಷಾ ಸಾಹಿತ್ಯ ಮಾಲೆ, ಮೈಸೂರು 4ನೇ ಆವೃತ್ತಿ 1974
9. ಸುಮಧ್ವ ವಿಜಯ, ಆಚಾರ್ಯ ಜಿ ಎಚ್ ಬಿ , ಕರ್ನಾಟಕ ಹರಿದಾಸರು ? ?
10. A History of the Dvaita School of Vedanta and Its Literature Vol II Dr B N K Sarma Booksellers Publishing Co Bombay 1961

# ಹರಿದಾಸ ಸಾಹಿತ್ಯ ಸಾರ್ವಭೌಮ – ಶ್ರೀ ಪುರಂದರದಾಸರು

ಡಾ|| ಜಿ ವರದರಾಜರಾವ್

ವ್ಯಾಸಬೋಧಿತ ಶಿಷ್ಯ ಹರಿದಾಸ ಕುಲವರ್ಯ
ನಿಮ್ಮ ನೆನೆವುದೆ ಪುಣ್ಯ ಪಾಡುವುದೆ ಶುಭಕಾರ್ಯ

## ೧ ಸ್ತುತಿ ಪರಂಪರೆ

ಕನ ಡ ಸಾಹಿತ್ಯದ ವಿವಿಧ ಪ್ರಕಾರಗಳನು ಪರಿಶೀಲಿಸಿದರೆ ಒಂದೊಂದು ಪ್ರಕಾರಕ್ಕೂ ಒಬ್ಬೊಬ್ಬ ಪ್ರತಿನಿಧಿಗಳು ಕಂಡ ಬರ ತ್ತಾರೆ ಚಂಪೂ ಪ್ರಕಾರಕ್ಕೆ ಪಂಪ ರಗಳೆಯ ಪ್ರಕಾರಕ್ಕೆ ಹರಿಹರ ಷಟ್ಪದಿ ಪ್ರಕಾ ರಕ್ಕೆ ಕುಮಾರವ್ಯಾಸ ಸಾಂಗತ್ಯ ಪ್ರಕಾರಕ್ಕೆ ರತ್ನಾಕರವರ್ಣಿ ತ್ರಿಪದಿಯ ಪ್ರಕಾರಕ್ಕೆ ಸರ್ವಜ್ಞ ಮೊದಲ ದವರು ಹೇಗೆ ಪ್ರಮುಖರಾಗಿರುವರೋ ಹಾಗೆಯೇ ವಚನ ಪ್ರಪಂಚಕ್ಕೆ ಬಸವೇಶ್ವರರೂ ಕೀರ್ತನ ಕ್ಷೇತ್ರಕ್ಕೆ ಪುರಂದರದಾಸರೂ ಮುಖ್ಯ ಪ್ರತಿನಿಧಿಗಳಾಗಿ ಪರಿಗಣಿತರಾಗಿದ್ದಾರೆ ಈ ಸಂತ ಸಾಹಿತ್ಯ ವರ್ಗ ಕ್ಕೆ ಸೇರಿದ ಯಾರೂ ತಾವಾಗಿ ಸಾಹಿತಿಗಳೆಂದು ಹೇಳಿ ಕೊಂಡಿಲ್ಲ ಈ ಸಮುದಾಯದವರು ಪ್ರಥಮತಃ ದೈವಭಕ್ತರು ಅವರು ತಮ್ಮ ಇಷ್ಟದೆ ವತೆಯನು ಕೊಂಡಾಡಿದ ಮಾತುಗಳು ಭಾವಾವೇಶದಿಂದ ಹೃದಯ ದಿಂದ ಹೊರಹೊಮ್ಮಿದ ಭಕ್ತರಚನೆಗಳಾಗಿರುವುದರಿಂದ ಅವುಗಳಲ್ಲಿ ಸಾಹಿತ್ಯ ದ ಸತ್ವವಿರು ವುದನು ಕಂಡ ಸಹೃದಯರು ಅವರ ರಚನೆಗಳನ್ನು ಒಂದು ಪ್ರಕಾರವಾಗಿ ಭಾವಿಸುವುದು ರೂಢಿಯಾಗಿದೆ ಪ್ರೌಢ ಕವಿಗಳಂತೆ ಅವರು ಹಲಗೆ ಬಳಪವನ್ನು ಹಿಡಿದು ಕಾವ್ಯರಚನೆ ಮಾಡಿದವರಲ್ಲ ಆದರ ಈ ಒಂದೊಂದು ಸಾಹಿತ್ಯ ವಿಧಾನವೂ ಆಯಾ ಕ್ಷೇತ್ರದ ಪ್ರತಿಭಾಶಾಲಿಯೊಬ್ಬನ ಪರಿಶ್ರಮದಿಂದ ಪುಷ್ಟಿಗೊಂಡ ಬಳಿಕ ಇತರರೂ ಆತನನು ಅನುಸರಿಸಿ ಅದನ್ನು ಬೆಳೆಸಿದರು ಈ ಹಿನ್ನೆಲೆಯಲ್ಲಿ ಪರಿಶೀಲಿಸಿ ದಾಗ ಹರಿದಾಸ ಸಾಹಿತ್ಯವೆಂದ ಕೂಡಲೇ ನಮಗೆ ಪುರಂದರದಾಸರ ನೆನಪಾಗುತ್ತದೆ ಅವರ ಕೃತಿ ಸಮುದಾಯವನು ಪರಿಶೀಲಿಸಿದ ಗ ಆ ಮಾಧ್ಯಮದ ಉತ್ತಮೋತ್ತಮ ನಿದರ್ಶನಗಳೆಲ್ಲ ನಮಗೆ ಮನವರಿಕೆಯಾಗುತ್ತವೆ ಮೊದಲು ಆ ಕ್ಷೇತ್ರದಲ್ಲಿ ಕೈಂಕರ್ಯ ವನ್ನು ಕೈಕೊಂಡವರು ಅವರನ್ನು ಹೇಗೆ ಆದರ್ಶ ಪುರುಷನೆಂದು ಪರಿಗಣಿಸಿರುವರೆನ್ನು ವುದನ್ನು ಸಂಕ್ಷಿಪ್ತವಾಗಿ ಪರಿಶೀಲಿಸಬಹುದು

ಪುರಂದರದಾಸರಿಗೆ ಹರಿದಾಸ ದೀಕ್ಷೆಯನ್ನೂ ಅಂ ತವನ್ನೂ ನೀಡಿದಶ್ರೀವ್ಯಾಸ ರಾಯರು ತಮ್ಮ ಶಿಷ್ಯನ ಸಿದ್ಧಿಯನ್ನು ಮೆಚ್ಚಿಕೊಂಡು ದ ಸರೆಂದರೆ ಪುರಂದರ ದಾಸರಯ್ಯ ಎಂದು ಮುಕ್ತಕಂಠದಿಂದ ಹೊಗಳಿರ ತ್ತಾರೆ ಈ ಹೊಗಳಿಕೆಯ

ದಾಟಿಯೂ ಸಹ ಗಮನಾರ್ಹವಾದುದು ಹರಿದಾಸರೆಂಬ ವೇಷ ತೊಟ್ಟು ನಟಿಸುತ್ತಿದ್ದವರ ದುರ್ಗುಣಗಳನ್ನೆಲ್ಲ ಮೊದಲು ಪಟ್ಟಿಮಾಡಿ ಹೇಳುವರು ಕಾಡಿ ಬೇಡಿ ಬಳಲಿಸುತ ಕಾಸು ಗಳಿಸುವ ಪುರುಷ ಹರಿದಾಸನೇ ? ಅಂಬುಜೋದ್ಭವ ಪಿತನ ಆಗಮಂಗಳರಿಯದೆ ತಂಬೂರಿ ಮೀಟಲವ ಹರಿದಾಸನೇ ? ಮಾಯಾ ಸಂಸಾರದಲ್ಲಿ ಮಮತೆ ಹೆಚ್ಚಾಗಿಟ್ಟು ಗಾಯನವ ಮಾಡಿದವ ಹರಿದಾಸನೇ ? ಗೋಟನಾಮವ ನಿಟ್ಟು ಕೊಟ್ಟುರಿಯ ತಾನೆನುತ ಕೂಟಕವ ಮಾಡಿದವ ಹರಿದಾಸನೇ ? ಎಂದು ಕಟುವಾಗಿ ಖಂಡಿಸಿರುವರು ಪುರಂದರದಾಸರು ಬಾಳಿ ಬದುಕಿದ ಅವಧಿಯಲ್ಲಿ ಈಗ ನಮಗೆ ತಿಳಿದುಬರುವಂತೆ ಕನಕದಾಸರು ಮತ್ತು ಬೇಲೂರಿನ ವೈಕುಂಠದಾಸರೆನ್ನುವವರು ಇದ್ದರು ಕನಕದಾಸರಂತೂ ಶ್ರೀ ವ್ಯಾಸರಾಯರ ಅನುಗ್ರಹಕ್ಕೆ ಪಾತ್ರರಾದವರು ವೈಕುಂಠದಾಸರಿಗೆ ಶ್ರೀಕೃಷ್ಣನು ಒಲಿದಿದ್ದನೆಂದೂ ಆತನ ಬಾಲಲೀಲೆಯನ್ನು ಕಂಡು ಅವರ ಕೃತಾರ್ಥರಾಗಿದ್ದರೆಂದೂ ತಿಳಿದುಬರುತ್ತದೆ ಶ್ರೀ ವಾದಿರಾಜರು ಈ ದಾಸರನ್ನು ನೋಡಲೆಂದು ಬೇಲೂರಿಗೆ ಹೋಗಿದ್ದರೆಂದು ವ್ಯಕ್ತವಾಗುತ್ತದೆ ಕನಕದಾಸರೂ ಸಹ ವೈಕುಂಠದಾಸರ ಮನೆಯ ಊಳಿಗ ಮಾಡಿದುದಾಗಿ ತಾವೇ ಹೇಳಿಕೊಂಡಿರುವ ಒಂದು ರಚನೆಯಿದೆ ಹರಿದಾಸ ಸಾಹಿತ್ಯದ ಈ ಸ್ವರ್ಣಯುಗದಲ್ಲಿ ಶ್ರೀ ಶ್ರೀಪಾದರಾಜರು ಶ್ರೀ ವ್ಯಾಸರಾಯರು ಶ್ರೀ ವಾದಿರಾಜರು ಯತಿಗಳಾಗಿದ್ದರೂ ಹರಿದಾಸ ಸಾಹಿತ್ಯದ ಏಳ್ಗೆಗೆ ಮುಖ್ಯ ಆಧಾರಪ್ರಾಯರಾಗಿದ್ದರು ಶ್ರೀ ವ್ಯಾಸರಾಯರು ಮಾಡಿರುವ ಆಕ್ಷೇಪಣೆಗಳನ್ನು ಗಮನಿಸಿದರೆ ಇನ್ನೂ ಕೆಲವರು ಇದ್ದಿರಬಹುದೆಂದು ತೋರುತ್ತದೆ

ಹರಿದಾಸ ಸಾಹಿತ್ಯದ ಈ ಸ್ವರ್ಣಯುಗವಾದ ಬಳಿಕ ಸುಮಾರು 118 ವರ್ಷಗಳ ತರುವಾಯ ವಿಜಯದಾಸರ ನೇತೃತ್ವದಲ್ಲಿ ಈ ಹರಿದಾಸ ಸಾಹಿತ್ಯದ ಪುನರುಜ್ಜೀವನವಾಯಿತು ಆಗ ಹರಿದಾಸ ದೀಕ್ಷೆಯನ್ನು ತಾಳಿದ ಹರಿದಾಸರಲ್ಲಿ ಬಹುಮಟ್ಟಿಗೆ ಎಲ್ಲರೂ ಪುರಂದರದಾಸರನ್ನು ಸ್ತುತಿಸಿರುತ್ತಾರೆ ಎಂದ ಮೇಲೆ ಪುರಂದರದಾಸರ ಹಿರಿಮೆ ಹೇಗೆ ಶತಮಾನ ಕಳೆದರೂ ಸ್ವಲ್ಪವೂ ಕುಗ್ಗಲಿಲ್ಲವೆನ್ನುವುದು ಸ್ಪಷ್ಟವಾಗುತ್ತದೆ ಈ ಉತ್ತರಾರ್ಧದ ಹರಿದಾಸರಲ್ಲಿ ಕೆಲವು ಪ್ರಮುಖರು ಪುರಂದರದಾಸರನ್ನು ಹೇಗೆ ಕೊಂಡಾಡಿರುವರೆನ್ನುವುದನ್ನು ನೋಡಬಹುದು

ಪುರಂದರದಾಸರಿಂದ ವಿಜಯವಿಠಲನೆಂಬುದಾಗಿ ಸ್ವಪ್ನಾಂಕಿತವನ್ನು ಪಡೆದ ವಿಜಯದಾಸರೊಬ್ಬರೇ ಈಗ ತಿಳಿದು ಬಂದಿರುವ ಮಟ್ಟಿಗೆ ಪುರಂದರದಾಸರನ್ನು ಕುರಿತು ಇಪ್ಪತ್ತು ಮೂರು ಕೃತಿಗಳನ್ನು ರಚಿಸಿರುವರು ಪುರಂದರದಾಸರ ಜೀವನ ಸಾಧನೆಗಳನ್ನು ತಿಳಿಸಿರುವವರಲ್ಲಿ ಅವರೇ ಮೊದಲಿಗರು ಆ ವೇಳೆಗಾಗಲೇ ಒಂದು ನೂರು ವರ್ಷ ಕಳೆದಿದ್ದುದರಿಂದಲೂ ವಿಜಯದಾಸರಿಗೆ ಪುರಂದರದಾಸರಲ್ಲಿ ಅಪಾರವಾದ ಗುರುಭಕ್ತಿ ಇದ್ದುದರಿಂದಲೂ ಪುರಂದರದಾಸರ ಜೀವನ ವೃತ್ತಾಂತದಲ್ಲಿ ಇತಿಹಾಸಕ್ಕಿಂತಲೂ ಐತಿಹ್ಯದ ಅಂಶ ಕಂಡುಬಂದರೆ ಆಶ್ಚರ್ಯವೇನಿಲ್ಲ ವಿಚಾರವಂತಿ

ಗಳು ಪುರಂದರದಾಸರ ಜೀವನವನು ಪುನರ್ರಚಿಸಂವಲ್ಲಿ ಪ್ರಯತ್ನಿಸಿರುತ್ತಾರೆ ಅವರ ಜನ್ಮಸ್ಥಳ ಮೊದಲ್ಗೊಂಡು ಅವರು ಹೇಗೆ ಜೀವನದಲ್ಲಿ ಪರಿವರ್ತಿತರಾದರು ಎನ್ನುವುದನು ಸಾಧ್ಯವಾದಷ್ಟು ಮಟ್ಟಿಗೆ ವಿಶ್ಲೇಷಿಸಂ ಪ್ರಯತ್ನಿಸಿರುತ್ತಾರೆ ಈ ಕೆಲವು ಅಂಶಗಳು ಚರ್ಚಾಸ್ಪದವಾಗಿರುವುದರಿಂದ ಅವುಗಳನ್ನು ನಾನು ವಿವರಿಸಲು ತೊಡಗುವುದಿಲ್ಲ ವಿಜಯದಾಸರು ತಮ್ಮ ರಚನೆಗಳಲ್ಲಿ ಪುರಂದರದಾಸರ ತಂದೆಯ ಹೆಸರು ವರದಪ್ಪನಾಯಂಕನೆಂದೂ ಅವರು ಚಿನಿವಾರದವರಾಗಿದ್ದರೆಂದೂ ಹೇಳುವರೇ ವಿನಾ ಪುರಂದರದಾಸರ ಪೂರ್ವನಾಮವನ್ನೇ ಉಲ್ಲೇಖಿಸಿಲ್ಲ ಇತ್ತೀಚೆಗೆ ಅದು ಹೇಗೋ ಶ್ರೀನಿವಾಸನಾಯಕರೆಂದೋ ಕೃಷ್ಣಪ್ಪನಾಯ ಕರೆಂದೋ ಬಳಕೆಗೆ ಬಂದಿದೆ ಅವರ ಹೆಂಡತಿಯ ಹೆಸರನು ಸಹ ಕೆಲವೆಡೆಗಳಲ್ಲಿ ಸರಸ್ವತೀಬಾಯಿಯೆಂದೋ ಲಕ್ಷ್ಮೀಬಾಯಿಯೆಂದೋ ನಿರ್ದೇಶಿಸಿದೆ ವಿಜಯದಾಸರಿಗೆ ತಮ್ಮ ಗ ರುಗಳಾದ ಪುರಂದರದಾಸರ ಹೆಸರು ಮುಖ್ಯವೇ ಹೊರತು ಅವರ ಪೂರ್ವನಾಮವಲ್ಲ ಅವರು ನಾರದರ ಅವತಾರವೆಂಬ ಅಂದಿನ ಪ್ರತೀತಿಯನು ಕ ರಿತೇ ಒಂದು ಪಾರ್ಥಕ ಷಟ್ಪದಿಯನ್ನು ರಚಿಸಿರ ವರು ದೇವಲೋಕದಲ್ಲಿ ವಿಷ್ಣು ತನ ಪರಿವ ರ ಸಮೇತನಾಗಿ ಸಂತೋಷ ದಿಂದಿರಲು ಆಗ ನಾರದರು ಮಂಗವತ್ತೆರಡು ರಾಗಗಳಲ್ಲಿ ದೇವರನು ಸ್ತುತಿಸುತ್ತ ಆ ಸಭೆಗೆ ಬಂದರು ಆಗ ನಾರದರ ಗಾನಕ್ಕೆ ಸಂಪ್ರೀತನಾದ ಹರಿ ನಾರದರ ಇಷ್ಟಾರ್ಥವೇನೆಂದು ಕೇಳಿದನು ಭಕ್ತಶಿರೋವ ಣಿಗಳಾದ ನಾರದರು ಅಚ್ಯಗನಿ ಕೆ ರವಣ ದೀನನನು ಪ ನಿ ಪುದು ನಿಚ್ಚಟನ ಯ ಕೂಡೆ ಬಿಡದೆ ಆಡು ಎಂದು ಕೇಳಿಕೊಂಡರು ಭಕ್ತವತ್ಸಲನಾದ ಭಗವಂತನು ಕಲಿ ಹೆಚ್ಚಿದಾ ಯುಗದಲ್ಲಿ ಸಲಿಸುವೆನು ಕೀರ್ತಿಗಳ ಬಿಚ್ಚಿ ತೋರಿಸುವೆನು ಎಂದು ವಾಗ್ದಾನವಿತ್ತನು ಆ ಮೇರೆಗೆ ನಾರದರು ಪುರಂದರವೆಂಬ ನಗರಿಯಲ್ಲಿ ಹುಟ್ಟಿದರು ಕೆಲವು ಕಾಲದಮಟ್ಟಿಗೆ ಸಂಸಾರ ಬಂಧನದಲ್ಲಿ ಸಿಕ್ಕಿ ತೊಳಲಿದರು ಅನಂತರ ವೈರಾಗ್ಯೋದಯವಾಗಿ ಕಿಷ್ಕಿಂಧನಗರಿಯಿರುವ ಹಂಪೆಗೆ ಬಂದರು ಶ್ರೀ ವ್ಯಾಸರಾಯರಿಂದ ಉಪದೇಶ ಪಡೆದರು ದೇವರು ಅಂದು ಭಕ ತಗೆ ಇತ್ತ ಭಾಷೆ ತಪ್ಪಲಿಬಾರದೆಂದು ಇಂದಿರಾಪತಿ ದಯದಿಂದ ಒಲಿದವರ ಮುಂದೆ ಒಂದರೆಘಳಿಗೆ ತೊಲಗದಲೆ ಕುಣಿಕುಣಿದಾನಂದವನೆ ತೋರಿಕೊಳುತ ತನ್ನ ವಾಗ್ದಾನವನ್ನು ನೆರವೇರಿಸಿದನು ಪುರ ದರದಾಸರು ತಮ್ಮ ಹರಿದಾಸ ಕೈಂಕರ್ಯವನ್ನು ತ್ರಿಕರಣಪೂರ್ವಕವಾಗಿ ನೆರವೇರಿಸಿದರು ಅವರಂದ ವಚನಗಳೆಲ್ಲ ವೇದಾರ್ಥವಾಗಿ ಅವನಿಯೊಳು ತುಂಬಿಹವು ಎಂದು ವಿಜಯ ದಾಸರು ನುಡಿದಿರುವರು ಆ ಬಳಿಕ ಪುರಂದರದಾಸರು ಪುನಃ ದೇವಲೋಕಕ್ಕೆ ತೆರಳಿದ ಸಂಗತಿಯನ್ನು ತಿಳಿಸುವರು

ವಿಜಯದಾಸರು ತಮ್ಮ ಬೇರೊಂದು ರಚನೆಯಲ್ಲಿ ವರದಪ್ಪನೇ ಸೋಮ ಗುರುರಾಯ ದಿನಕರನು ಗುರುಮಧ್ವಪತಿಯೇ ಭೃಗು ಅಭಿನವನೇ ಜೀವ ಎಂದು ಪುರಂದರದಾಸರ ನಾಲ್ವರು ಮಕ್ಕಳ ಹೆಸರನ್ನು ಅವರೂ ಸಹ ದೈವಾಂಶರೆನ್ನು

ವುದನ್ನು ತಿಳಿಸ ವರು ವಿಜಯ ದಾಸರ ಕಾಲಕ್ಕೆ (ಕ್ರಿ ಶ 1687–1755) ಪುರಂದರದಾಸರು ಮಾತ್ರವಲ್ಲದೆ ಅವರ ವ ಕ್ಕಳೂ ಸಹ ದೆ ವಾಂಶ ಪುರುಷರೆಂಬ ಕಲ್ಪನೆ ಹೇಗೆ ಪ್ರಚಲಿತವಾಗಿತ್ತು ಎನು ವುದನು ಇಲ್ಲಿ ಗಮನಿಸಬಹುದು ಇನ್ನೊಂದು ಕೃತಿಯಲ್ಲಿ ಪುರಂದರದಾಸರಿಗೆ ಸಂಬಂಧಿಸಿದಂತೆ ಸ ಪ್ರಸಿದ್ಧ ವಾಗಿರುವ ಅವರ ಹೆಂಡತಿಯ ಮೂಗುತಿಯ ಸಂಗತಿ ಯ ವಿವರಣೆಯಿದೆ (ಇಲ್ಲಾದರೂ ವಿಜಯ ದಾಸರು ಪುರಂದರದಾಸರ ಹೆಂಡತಿಯ ಹೆಸರನು ಹೇಳಬಹು ದಾಗಿತ್ತು ) ಸ ಳಾದಿ ಯೊಂದರಲ್ಲಿ ವಿಜಯ ದಾಸರು ಕೆಲವು ಆದ್ಯರ ಹೆಸರುಗಳನು ಉಲ್ಲೇಖಿಸಿ ಆ ಸಮೂಹದವರೊಂದಿಗೆ ಕೂಡಿ ಪುರಂದರದಾಸರು ತಮ್ಮ ಪುತ್ರರ ಸಮೇತವಾಗಿ ತಮ್ಮ ಹರಿದಾಸ ಕೈಂಕರ್ಯವನ್ನು ನಿರ್ವಹಿಸಿದರೆಂದು ಹೇಳಿರುವರು ಪ್ರಕೃತ ಸುಳಾದಿ ಚಾರಿತ್ರಿಕ ದೃಷ್ಟಿಯಿಂದಲೂ ಮುಖ್ಯವಾದದ್ದು ಏಕೆಂದರೆ ಈ ಮೊದಲೇ ತಿಳಿಸಿದಂತೆ ಪುರಂದರದಾಸರ ಸಮಕಾಲೀನರಾಗಿ ಕನಕದಾಸರು ಬೇಲೂರು ವೈಕುಂಠದಾಸರನ್ನು ಬಿಟ್ಟು ಬೇರೆ ಯಾವ ಹರಿದಾಸರಿದ್ದರೆನ್ನುವುದು ನಮಗೆ ತಿಳಿದಿಲ್ಲ ಈ ಆದ್ಯರು ಹರಿದಾಸ ಪರಂಪರೆಯ ಮೊತ್ತಮೊದಲಿಗರೆಂದು ಕೆಲವು ವಿದ್ವಾಂಸರು ವಿಚಾರ ಮಾಡಿರುವುದುಂಟು ಪುರಂದರದಾಸರಾಗಲಿ ಕನಕದಾಸರಾಗಲಿ ಈ ವಿಚಾರವನ್ನು ಎಲ್ಲಿಯೂ ಹೇಳಿಲ್ಲ ಹರಿದಾಸ ಸಾಹಿತ್ಯದ ಪುನರುಜ್ಜೀವನ ಯುಗದ ಮುಂದಾಳು ಗಳಾದ ವಿಜಯದಾಸರಾಯ ರಾದರೋ ತಮ್ಮ ಈ ಸುಳಾದಿಯಲ್ಲಿ ಆದ್ಯರ ಹೆಸರು (ಅಂಕಿತ)ಗಳನ್ನೂ ಹೇಳಿ ಅವರು ಈ ಪರಿಯಲ್ಲಿ ಅಂಕಿತವನು ಹಾಕಿ ಅವನಿಯೊಳಗೆ ಸಂಚರಿಸ ತ್ತಲಿರಲಿತ್ತಲು ಭವದೂರರಾಗಿ ದಾಸರು ತಮ್ಮ ಸ ತರೊಡನೆ ವಿರಚಿಸಿದರು ಪುರಂದರ ವರದ ಅಭಿನವ ಗುರುಮಧ್ವಪತಿ ಎಂಬಂಕಿತದಿಂದ ಎಂದು ಸ್ಪಷ್ಟವಾಗಿ ಉಲ್ಲೇಖಿಸಿರುವುದನ್ನು ಕಂಡರೆ ಹರಿದಾಸ ಸಾಹಿತ್ಯದ ಸುವರ್ಣಯುಗದ ಇಲ್ಲವೇ ಆ ಪ್ರಾರಂಭ ಕಾಲಕ್ಕೆ ಸೇರಿರಬಹ ದಾದ ಇತರ ಹರಿದಾಸರನ್ನು ವಿಜಯ ದಾಸರು ಆದ್ಯರೆಂದು ಕರೆಯ ುವುದರ ಮೂಲಕ ಪೂರ್ವ ಪರ ಪರೆಯ ಸ್ತುತಿಯನ್ನು ಮಾಡಿರು ವಂತಿದೆ ಪುನಃ ಇನ್ನೊಂದು ಸುಳಾದಿಯಲ್ಲಿ ವೇದಿನಿಯೊಳಗಿಂದು ವ್ಯಾಸಮುನಿ ನಿತ್ಯ ಮೊ ದಮನಸು ಉಳ್ಳ ಪುರಂದರದಾಸರು ವಾದಿರಾಜಸ್ವಾಮಿಯು ಬಲು ಜನ ಆದ್ಯರು ಭೆ ದಸಿದ್ದರು ಶ್ರೀ ನಾರಾಯಣ ಯೋಗಿ ವೇದ ವೇದಾಂತರು ಇವರಿವರು ಕಾಣೊ ಎಂದು ತಮ್ಮ ಕೃತಜ್ಞತೆಯನ್ನು ವ್ಯಕ್ತಪಡಿಸಿರ ವರು ಇಲ್ಲಿಯೂ ಸಹ, ಶ್ರೀಪಾದರಾಜರು ಶ್ರೀ ವ್ಯಾಸರಾಯ ರು ಶ್ರೀ ವಾದಿರಾಜರು ಪುರಂದರದಾಸರು ವ ತ್ತು ಆದ್ಯರನ್ನು ಒಟ್ಟಾಗಿ ಸ ರಿಸಿರುವುದು ಕಂಡುಬರುತ್ತದೆ ಆದ್ಯರ ಬಗ್ಗೆ ಪುನರಾಲೋಚಿಸುವಲ್ಲಿ ವಿಜಯ ದಾಸರ ಈ ಉಲ್ಲೇಖಗಳು ಸಾಕಷ್ಟು ನೆರವಾಗಬಲ್ಲ ವೆಂದು ನನ್ನ ಎಣಿಕೆ ಈ ವಿಷಯ ಗಳೊಂದಿಗೆ ವಿಜಯದಾಸರು ಒಂದೆಡೆಯಲ್ಲಿ ಪುರಂದರದಾಸರು ರಚಿಸಿದ ಕೃತಿಗಳ ವಿವರಗಳನ್ನು ಪಟ್ಟಿಮಾಡಿ ಅವರು ಬರೆಯ ದೆ ಬಿಟ್ಟಿದ್ದ 75 000 ರಚನೆಗಳನ್ನು ತಾವು ಮಾಡಿರುವುದಾಗಿ ವಿಶದಪಡಿಸುವರು

ವಿಜಯದಾಸರಿಗೆ ತಮ್ಮ ಪೂರ್ವ ಪರಂಪರೆಯಲ್ಲಿರುವ ಭಕ್ತಿ ಮಿಗಿಲಾದುದು ಎಲ್ಲರನ್ನೂ ಈ ಮೊದಲೇ ಹೇಳಿದಂತೆ ಕೊಂಡಾಡಿ ಕಡೆಗೆ ಈ ರೀತಿ ಹೇಳಿರುವರು

> ಇಂಥ ಹರಿದಾಸರು ವಿ ಗಿಸಿದ್ದ ಪ್ರಸಾದ
> ಇಂತು ಎನಗೆ ಬಂದು ಪ್ರಾಪುತವಾದ ಮೇಲೆ
> ಚಿಂತೆ ಯಾತಕೆ ಮನವೆ ಆನಂದತೀರ್ಥರ
> ಗ್ರಂಥದಲ್ಲಿಗೆ ಸಮ್ಮತವಾಗಿಪ್ಪುದು
> ಪಂಥವಾಡುವ ಜನರು ಆಡಿಕೊಳ್ಳಲಿ ಅವರ
> ಪಂಥ ಪೋಗದಲಿರು ಕಂಡರೆ ಕೆಲ ಸಾರು
> ಕಂತು ಜನಕ ರಂಗ ವಿಜಯವಿಠಲ ತಾನೆ
> ಚಿಂತೆ ಮಾಡುವ ತನ್ನ ನನೆಸಿದ ಭಕ್ತನಿಗೆ

ಪುರಂದರದಾಸರ ಆಪ್ತ ಶಿಷ್ಯ ವರ್ಗಕ್ಕೆ ಸೇರಿದವರೆಂದು ಭಾವಿಸಬಹುದಾದ ವಿಜಯದಾಸರ ರಚನೆಗಳನೆಲ್ಲ ಪರಿಶೀಲಿಸಿದರೆ ಆ ವೇಳೆಗೆ ಪುರಂದರದಾಸರ ಸ್ಥಾನ ವೇನಿತ್ತು ಎನ್ನುವುದು ಪ್ರಥವತಃ ಬೆಳಕಿಗೆ ಬರತ್ತದೆ

ವಿಜಯದಾಸರ ಅನಂತರ ಪುರಂದರದಾಸರ ಗುಣಕೀರ್ತನ ಮಾಡಿದ ಇತರ ಹರಿದಾಸರಲ್ಲಿ ಕೆಲವರ ರಚನೆಗಳನ್ನು ಇಲ್ಲಿ ಅವಲೋಕಿಸಬಹುದು

ಪ್ರಸನ್ನ ವೆಂಕಟದಾಸರು (ಕ್ರಿ ಶ 1680) ತಂದೆ ಪುರಂದರದಾಸರ ಸ್ಮರಿಸುವೆ ಎನ್ನ ಮಂದಮತಿಗಳೆಂದು ಹರಿಭಟನೆನಿಸುವೆ ಎಂದು ತಮ್ಮ ಪೂಜ್ಯ ಭಾವನೆಯನ್ನು ವ್ಯಕ್ತಪಡಿಸಿ ಪುರಂದರದಾಸರ ಮಹತ್ವವನು ಅತ್ಯಂತ ಸಂಕ್ಷಿಪ್ತವಾಗಿ ನಿವೇದಿಸಿರುವರು

> ಗುರು ವ್ಯಾಸರಾಜರ ಚರಣಾಬ್ಜ ಭಟ ಚರಣ
> ವಿರತಿ ಭಕುತಿ ಜ್ಞಾನಾರ್ಣವನ
> ವರ ಉಪನಿಷದ್ವಾರಿಧಿಗೆ ತಿಮಿಂಗಿಲನಹನ
> ಧರೆಯ ಕವಿಕುಲ ಶಿಖಾವ ಣಿ ಎನಿಪನ

ಇದೇ ಕೀರ್ತನೆಯ ಕಡೆಯ ನುಡಿಯಲ್ಲಿ ಪುರಂದರದಾಸರ ಕೃತಿ ವೈವಿಧ್ಯವನ್ನು ಹೀಗೆ ನಿರೂಪಿಸಿರುವರು

> ಗೀತ ರಾಯ ಸುಳ್ಳಾದುಗಾಭೋಗ ಪದ ಪದ್ಯ
> ವ್ರಾತ ಪ್ರಬಂಧ ರಚಿಸಿ ವಿರಲನ
> ಪ್ರೀತಿ ಬಡಿಸಿ ಪ್ರತ್ಯಕ್ಷ ಕಂಡು ನಲಿವ ವೈಷ್ಣವಾಗ್ರ
> ನಾಥ ಪ್ರಸನ್ನ ವೆಂಕಟಕೃಷ್ಣ ಪ್ರಿಯನ

ಇಲ್ಲಿ ಉಕ್ತವಾಗಿರುವ ಕೆಲವು ಪ್ರಕಾರಗಳು ಪಾರಿಭಾಷಿಕ ಶಬ್ದಗಳೆಂದು ತೋರುವುದ ರಿಂದ ಪುರಂದರದಾಸರ ರಚನೆಗಳಿಗೆ ಇವು ಎಷ್ಟರವ ಟ್ಟಿಗೆ ಅನ್ವಯಿಸುವುದೆನ್ನು ವುದನ್ನು ನೋಡಬೇಕಾಗಿದೆ

ಭಕ್ತಿಯಲ್ಲಿ ಭಾಗಣ್ಣ ನೆಂದು ಹೆಸರುವಾಸಿಯಾದವರೂ ವಿಜಯದಾಸರ ಶಿಷ್ಯರೂ ಆದ ಗೊ ಪಾಲದಾಸರು ಪುರಂದರದಾಸರು ಕಿ ರ್ತನ ಮಾಧ್ಯಮದ ಮೂಲಕ ಸಾಧಿಸಿದ ಮಹತ್ವವನ್ನು ಮುಕ್ತಕಂಠದಿಂದ ಹೀಗೆ ಹೊಗಳಿರುವರು

> ಆಗಮಾರ್ಥಗಳ ಅನುವ ಗಿ ಸಾರವ ತೆಗೆದು, ರಾಗ ಪದ ಕಾವ್ಯದಿಂದ
> ಶ್ರೀ ಗುರು ಮಧ್ವಮುನಿಮತವ ಪೊಂದಿ ಬಲು ಭಾಗವತ ದರ್ವಿ ವಹಿಸಿ
> ನಾಗಶಯನನ ಗುಣವ ಕೊಂಡಾಡಿ ಜಗದೊಳಗೆ ಯೋಗಪ್ರವಾಹದಿಂದ ಮೆರೆದ
> ಯೋಗದಲಿ ಚರಿಸಿ ಒಳಗಾಗದೆ ಕಲಿಯ ಗೆದ್ದ

ಪುರಂದರದಾಸರು ತಮ್ಮ ಆಧ್ಯಾತ್ಮಿಕವಾದ ರಚನೆಗಳ ಮೂಲಕ ಹೇಗೆ ಕಲಿ ಪುರುಷನನ್ನು ಗೆದ್ದರೆನ್ನುವ ಹೇಳಿಕೆ ಬಹು ಅರ್ಥವತ್ತಾಗಿದೆ ವಿಜಯದಾಸರು ತಮ್ಮ ಒಂದು ಕೀರ್ತನೆಯಲ್ಲಿ ನಾರಾಯಣನೂ ನಾರದನೂ ಒಪ್ಪಂದ ಮಾಡಿಕೊಂಡು ಕಲಿಯುಗದ ದೋಷನಿವಾರಣೆಗಾಗಿ ಹೇಗೆ ಅವತರಿಸಿದರೆಂದು ಈ ಮೊದಲು ಹೇಳಿರುವ ಸಂಗತಿಯೇ ಇಲ್ಲಿ ಅಡಕವಾಗಿದೆ

ಗೋ ಪಾಲದಾಸರಿಂದ ನಾಲ್ವತ್ತು ವರ್ಷಗಳು ಆಯುರ್ದಾನ ಪಡೆದ ಜಗನ್ನಾಥ ದಾಸರಾದರೋ ಪ್ರಾಕೃತ ಭಾಷೆಲಿ ಈ ಕೃತಿ ಪೇಳಿ ಅಪ್ರಾಕೃತ ಹರಿಯಿಂದ ಸ್ವೀಕೃತ ನೀನಾದ್ಯೊ ಎಂದು ಪುರಂದರದಾಸರ ಅಗ್ಗಳಿಕೆಯನ್ನು ಹೃತ್ಪೂರ್ವಕವಾಗಿ ಮೆಚ್ಚಿ ಕೊಂಡಿರುವರು ಒಂದು ಕಾಲದಲ್ಲಿ ಸಂಸ್ಕೃತ ಪಕ್ಷಪ ತಿಯಾಗಿದ್ದ ಜಗನ್ನಾಥದಾಸರು ಈ ರೀತಿ ಹೇಳಿರುವುದನ್ನು ಮನಗಂಡರೆ ಹರಿದಾಸ ಸಾಹಿತ್ಯದ ಪ್ರಭಾವ ಅವರ ಮೇಲೆ ಎಷ್ಟು ಗಾಢವಾಗಿವೆಯೆಂದು ವ್ಯಕ್ತವಾಗುತ್ತದೆ ಕಾರ್ಯತಃ ಅವರು ಸಾಧಿಸಿರುವ ಕೆಲಸವೂ ಅಷ್ಟೇ ಮಹತ್ವಪೂರ್ಣವಾದುದು

ಪುರಂದರದಾಸರನ್ನು ಕೊಂಡಾಡಿರುವ ಹರಿದಾಸರ ಪಟ್ಟಿಯನ್ನು ಹಿ ಗೆಯೇ ಬೆಳೆಸುತ್ತ ಹೋಗಬಹುದು ಈ ಕ್ಷೇತ್ರದಲ್ಲಿ ಶ್ರಮಿಸುತ್ತಿರುವ ಇಂದಿನ ಹರಿದಾಸರೂ ಮೊದಲು ಪುರಂದರದಾಸರಿಗೆ ಕೈಮುಗಿದು ತಮ್ಮ ಕಾರ್ಯದಲ್ಲಿ ಉದ್ಯುಕ್ತರಾಗಿರು ವುದನ್ನು ಕಾಣಬಹುದು ಭಕ್ತವರ್ಗದವರ ಬರವಣಿಗೆಯಲ್ಲಿ ಇಂಥ ಸ್ತುತಿ ಮಾಲಿಕೆ ಒಂದು ಸಂಪ್ರದಾಯವೇ ಸರಿ (ಹೀಗಿದ್ದರೂ ಕನಕದಾಸರು ಶ್ರೀವ್ಯಾಸರಾಯ ರನ್ನಾಗಲಿ ಪುರಂದರದಾಸರನ್ನಾ ಗಲಿ ಸ್ತುತಿಸಿರುವ ಒಂದು ರಚನೆಯೂ ಈವರೆಗೂ ಲಭಿಸದಿರುವುದು ಒಂದು ಸೋಜಿಗವೇ ಸರಿ !)

ಈ ಸ್ತುತಿ ಪರಂಪರೆಗಳನು ವಿಶ್ಲೇಷಿಸಿದಲ್ಲಿ ಪುರಂದರದಾಸರ ಪೂರ್ವ ವೃತ್ತಾಂತವೂ ಹರಿದಾಸ ಪರಂಪರೆಯಲ್ಲಿ ಹೇಗೆ ಅವರು ಪ್ರಪ್ರಥಮ ಪಂಕ್ತಿಗೆ ಸೇರಿದವರೆನ್ನುವುದೂ ದೃಢವಾಗುತ್ತವೆ *

## ೨ ಪುರಂದರದಾಸರ ಕೃತಿಗಳ ತಿರುಳು

ಈವರೆಗೆ ನಮಗೆ ಲಭ್ಯವಾಗಿರುವ ಪುರಂದರದಾಸರ ಕೃತಿಗಳನ್ನು ವಿಷಯಾನುಸಾರವಾಗಿ ವಿಂಗಡಿಸಿ ಅವುಗಳ ಮೌಲ್ಯವನು ವಿವೆ ಚಿಸಿದ್ದೇ ಆದರೆ ಅವರು ಆಗಲೂ ಸಹ ಇತರ ದಾಸರುಗಳಿಗಿಂತಲೂ ಅದ್ವಿತೀಯರಾಗಿ ಕಾಣುತ್ತಾರೆ ಅವರಲ್ಲಿ ಕಂಡುಬರ ವ ವಿಷಯ ವೈವಿಧ್ಯ ನಿರೂಪಣ ನೈಪುಣ್ಯ ಶೈಲಿಯ ಸೌಕುಮಾರ್ಯಗಳನ್ನು ಇತರರಲ್ಲಿ ಕಾಣಲಾರೆವು ಪ್ರಕೃತದಲ್ಲಿ ಇವುಗಳಲ್ಲಿ ಕೆಲವನ್ನು ಸಂಕ್ಷಿಪ್ತವಾಗಿ ಸಮಾಲೋಚಿಸಬಹುದು

### ಆತ್ಮ ವಿಶ್ಲೇಷಣೆ

ವಿಜಯದಾಸರು ಹೇಳಿರುವಂತೆ ಚಿನಿವಾರ ವೃತ್ತಿಯಲ್ಲಿ ತೊಡಗಿದ್ದ ಒಬ್ಬ ವ್ಯಕ್ತಿ ಇದ್ದಕ್ಕಿದ್ದಂತೆಯೇ ಹರಿದಾಸರಾದದ್ದು ಹೇಗೆ ಎಂಬ ಪ್ರಶ್ನೆ ಸಹಜವಾಗಿಯೇ ಉದ್ಭವಿಸುತ್ತದೆ ಈ ಬಗ್ಗೆ ವಿಜಯ ದಾಸರು ತಮ್ಮ ಕಾಲದಲ್ಲಿ ಪ್ರಚಲಿತವಾಗಿದ್ದ ಒಂದು ಸಂಗತಿಯನ್ನು ಆಧರಿಸಿ ಒಮ್ಮೆ ಜಿಪುಣರಾಗಿದ್ದ ಪುರಂದರದಾಸರು ತಮ್ಮ ಹೆಂಡತಿಯ ಔದಾರ್ಯದಿಂದ ಪ್ರೇರಿತರಾಗಿ ತಮ್ಮ ಆಸ್ತಿಪಾಸ್ತಿಗಳನ್ನೆಲ್ಲ ಶ್ರೀ ಕೃಷ್ಣಾರ್ಪಣವೆಂದು ದೇವರಿಗೆ ಸಮರ್ಪಿಸಿ ಅನಂತರ ಹರಿದಾಸರಾದರೆಂದು ತಿಳಿಸಿರುತ್ತಾರೆ ಪ್ರಕೃತ ನಿರೂಪಣೆಯಲ್ಲಿ ಕಂಡುಬರುವ ಮೂಗುತಿಯ ಘಟನೆ ಇಂದಿನ ವಿಚಾರಮತಿಗಳಿಗೆ ಸಹಜವೆನಿಸದಿರಬಹ ದು ಅದೊಂದು ಪವಾಡವೆಂದು ತೋರಬಹುದು ಆದರೂ, ಈ ಐತಿಹ್ಯದ ಗರ್ಭದಲ್ಲಿ ಹುದುಗಿರುವ ನೈಜವಾಗಿರಬಹುದಾದ ಸಂಗತಿಯನು ಗಮನಿಸಿದ್ದೇ ಆದರೆ ಪುರಂದರದಾಸರ ಜೀವನ ಪರಿವರ್ತನೆಯಲ್ಲಿ ಅವರ ಪತಿ ಪ್ರಧಾನ ಪಾತ್ರವಹಿಸಿರಬೇಕೆನ್ನುವುದು ಸ್ಪಷ್ಟವಾಗುತ್ತದೆ ಮೂಲಭೂತವಾದ ಕಾರಣದ ಸ್ವರೂಪ ವೇದ್ಯವಾ ಗದಿದ್ದರೂ ಆ ಮೂಲಕ ಆದ ಕಾರ್ಯವನ್ನು ಕುರಿತಂತೆ ಪುರಂದರದಾಸರು ರಚಿಸಿರುವ ಕೀರ್ತನೆ ಈ ಸಂಗತಿಗೆ ಪರಮ ಪ್ರಮಾಣದಂತಿದೆ

ಆದದ್ದೆಲ್ಲ ಒಳಿತೇ ಆಯಿತು ನಮ್ಮ
ಶ್ರೀಧರನ ಸೇವೆ ಮಾಡಲು ಸಾಧನ ಸಂಪತ್ತಾಯಿತು ಪ
ದಂಡಿಗೆ ಬೆತ್ತ ಹಿಡಿಯುವುದಕ್ಕೆ
ಮಂಡೆ ಬಾಗಿ ನಾಚುತಲಿದ್ದೆ
ಹೆಂಡತಿ ಸಂತತಿ ಸಾವಿರವಾಗಲಿ
ದಂಡಿಗೆ ಬೆತ್ತ ಹಿಡಿಸಿದಳಯ್ಯ ೧

---

* ಇಲ್ಲಿ ಉದಾಹರಿಸಿರುವ ರಚನೆಗಳನು ಶ್ರೀ ಉರಗಾದ್ರಿವಾಸ ವಿಠಲ ಪ್ರಕಾಶನ ದವರು ಸಂಗ್ರಹಿಸಿ ಕೊಟ್ಟಿರುವ ಸ್ತೋತ್ರ ಪದಗಳ ವಿಭಾಗದಿಂದ ಆರಿಸಿಕೊಂಡಿದೆ

ಗೋಪಾಳಬಟ್ಟಿ ಹಿಡಿಯುವುದಕ್ಕೆ
ಭೂಪತಿಯೆಂದು ಗರ್ವಿಸುತಿದ್ದೆ
ಆ ಪತ್ನೀಕುಲ ಸಾವಿರವಾಗಲಿ
ಗೋಪಾಳಬುಟ್ಟಿ ಹಿಡಿಸಿದಳಯ್ಯ
ತುಳಸೀಮಾಲೆ ಹಾಕುವುದಕ್ಕೆ
ಅರಸನೆಂದು ತಿರುಗುತಲಿದ್ದೆ
ಸರಸಿಜಾಕ್ಷ ಪುರಂದರವಿಠಲನು
ತುಳಸೀಮಾಲೆ ಹಾಕಿಸಿದನು ೩

ಈ ಕೀರ್ತನೆಯಲ್ಲಿ ವ್ಯಕ್ತವಾಗುವ ಪುರಂದರದಾಸರ ಅಂತರಂಗದ ಚಿತ್ರ, ಅವರ ಜೀವನದ ಮಾರ್ಪಾಟಿನ ಮೇಲೆ ನೇರವಾಗಿ ಬೆಳಕನ್ನು ಬೀರುವಂತಿದೆ. ಒಂದು ಕಡೆ ಅವರು ಈ ಮೊದಲು ಎಷ್ಟು ರೀತಿಯಿಂದ ಗತ್ತಿನಿಂದ ಜೀವಿಸುತ್ತಿದ್ದರೆನ್ನುವ ವಿವರವಿದ್ದರೆ ಇನ್ನೊಂದು ಕಡೆ ಅವರು ಹೇಗೆ ತಮ್ಮ ಪತ್ನಿಯ ಪ್ರೇರಣೆಯಿಂದ ಪರಿವರ್ತಿತರಾದರೆನ್ನುವುದು ಪ್ರಕಾಶಕ್ಕೆ ಬರತ್ತದೆ. ವಿಜಯದಾಸರ ಹೇಳಿಕೆಯಂತೆ ಪುರಂದರದಾಸರ ತಂದೆ ವರದಪ್ಪನಾಯಕನು ಚಿನಿವಾರನಾಗಿದ್ದನೆಂದ ಬಳಿಕ ಅವರ ಮಗನೂ ಶ್ರೀಮಂತನಾಗಿದ್ದಿರಬೇಕು ಎನ್ನುವುದರಲ್ಲಿ ಸಂದೇಹವಿಲ್ಲ. ಪುರಂದರದಾಸರ ಈ ರಚನೆ ಅವರ ಹರಿದಾಸ್ಯ ಜೀವನದ ಹೆಬ್ಬಾಗಿಲಿನಂತಿದೆ ಎನ್ನಬಹುದು.

ಅವರು ಈ ಮೊದಲು ವ್ಯಾಪಾರವೃತ್ತಿಯನ್ನು ಕೈಕೊಂಡಿದ್ದರು ಎನ್ನುವುದಕ್ಕೆ ಅವರ ಮನಸ್ಸು ಸ್ವಾಭಾವಿಕವಾಗಿ ತಮ್ಮ ಪೂರ್ವಚರ್ಯೆಯನ್ನು ಕುರಿತಂತೆ ಚಿಂತಿಸುವ ಮತ್ತೊಂದು ರಚನೆ ನಮಗೆ ನೆರವಾಗುವಂತಿದೆ. ಆ ಕೀರ್ತನೆಯ ಸರಣಿ ಇಂತಿದೆ:

ವ್ಯಾಪಾರ ನಮಗಾಯಿತು ಪ
ಶ್ರೀಪತಿ ಪಾದ ರದಿಂದ ಸೇವೆಯೆಂಬ ಅ ಪ

ಹರಿಕರಣವೆ ಅಂಗಿ ಗುರುಕರುಣ ಮುಂಡಾಸು
ಹರಿದಾಸರ ದಯ ವೆಂಬೊ ವಲ್ಲಿ
ಪರಮ ಪಾಟ ಕಲಿ ಎಂಬೊ ಪಾಪಾಸು ಮೆಟ್ಟಿ

ದುರಾತ್ಮರಾದವರ ಎದೆ ಮೇಲೆ ನಡೆವಂಥ ೧
ಬಿಳಿಯ ಕಾಗದ ಹೃದಯ ಬಾಯಿ ಕೀ ಮದಾನಿ
ನಾಲಿಗೆ ಎಂಬೋದು ಲೇಖಣಿಕೆಯು
ಶ್ರೀಲೋಲನ ಕಥೆ ದಿವ್ಯ ನಾಮಂಗಳ
ಶೀಲವ ನದಿ ಬರೆದು ಹರಿಗೆ ಒಪ್ಪಿಸುವಂತ ೨

ಈ ಸ್ತುತಿ ಪರಂಪರೆಗಳನು ವಿಶ್ಲೇಷಿಸಿದಲ್ಲಿ ಪುರಂದರದಾಸರ ಪೂರ್ವ ವೃತ್ತಾಂತವೂ ಹರಿದಾಸ ಪರಂಪರೆಯಲ್ಲಿ ಹೇಗೆ ಅವರು ಪ್ರಪ್ರಥಮ ಪಂಕ್ತಿಗೆ ಸೇರಿದವರೆನ್ನುವುದೂ ದೃಢವಾಗುತ್ತವೆ *

## ೨ ಪುರಂದರದಾಸರ ಕೃತಿಗಳ ತಿರುಳು

ಈವರೆಗೆ ನಮಗೆ ಲಭ್ಯವಾಗಿರುವ ಪುರಂದರದಾಸರ ಕೃತಿಗಳನ್ನು ವಿಷಯಾನು ಸಾರವಾಗಿ ವಿಂಗಡಿಸಿ ಅವುಗಳ ಮೌಲ್ಯವನು ವಿವೆ ಚಿಸಿದ್ದೇ ಆದರೆ ಅವರು ಆಗಲೂ ಸಹ ಇತರ ದಾಸರುಗಳಿಗಿಂತಲೂ ಅದ್ವಿತೀಯರಾಗಿ ಕಾಣುತ್ತಾರೆ ಅವರಲ್ಲಿ ಕಂಡು ಬರ ವ ವಿಷಯ ವೈವಿಧ್ಯ ನಿರೂಪಣ ನೈಪುಣ್ಯ ಶೈಲಿಯ ಸೌಕುಮಾರ್ಯಗಳನ್ನು ಇತರರಲ್ಲಿ ಕಾಣಲಾರೆವು ಪ್ರಕೃತದಲ್ಲಿ ಇವುಗಳಲ್ಲಿ ಕೆಲವನ್ನು ಸಂಕ್ಷಿಪ್ತವಾಗಿ ಸಮಾಲೋಚಿಸಬಹುದು

### ಆತ್ಮ ವಿಶ್ಲೇಷಣೆ

ವಿಜಯದಾಸರು ಹೇಳಿರುವಂತೆ ಚಿನಿವಾರ ವೃತ್ತಿಯಲ್ಲಿ ತೊಡಗಿದ್ದ ಒಬ್ಬ ವ್ಯಕ್ತಿ ಇದ್ದಕ್ಕಿದ್ದಂತೆಯೇ ಹರಿದಾಸರಾದದ್ದು ಹೇಗೆ ಎಂಬ ಪ್ರಶ್ನೆ ಸಹಜವಾಗಿಯೇ ಉದ್ಭವಿಸುತ್ತದೆ ಈ ಬಗ್ಗೆ ವಿಜಯ ದಾಸರು ತಮ್ಮ ಕಾಲದಲ್ಲಿ ಪ್ರಚಲಿತವಾಗಿದ್ದ ಒಂದು ಸಂಗತಿಯನ್ನು ಆಧರಿಸಿ ಒಮ್ಮೆ ಜಿಪುಣರಾಗಿದ್ದ ಪುರಂದರದಾಸರು ತಮ್ಮ ಹೆಂಡತಿಯ ಔದಾರ್ಯದಿಂದ ಪ್ರೇರಿತರಾಗಿ ತಮ್ಮ ಆಸ್ತಿಪಾಸ್ತಿಗಳನ್ನೆಲ್ಲ ಶ್ರೀ ಕೃಷ್ಣಾ ರ್ಪಣವೆಂದು ದೇವರಿಗೆ ಸಮರ್ಪಿಸಿ ಅನಂತರ ಹರಿದಾಸರಾದರೆಂದು ತಿಳಿಸಿರುತ್ತಾರೆ ಪ್ರಕೃತ ನಿರೂಪಣೆಯಲ್ಲಿ ಕಂಡುಬರುವ ಮೂಗುತಿಯ ಘಟನೆ ಇಂದಿನ ವಿಚಾರಮತಿ ಗಳಿಗೆ ಸಹಜವೆನಿ ಸದಿರಬಹ ದು ಅದೊಂದು ಪವಾಡವೆಂದು ತೋರಬಹುದು ಆದರೂ, ಈ ಐತಿಹ್ಯದ ಗರ್ಭದಲ್ಲಿ ಹುದುಗಿರುವ ನೈಜವಾಗಿರಬಹುದಾದ ಸಂಗತಿ ಯನು ಗಮನಿಸಿದ್ದೇ ಆದರೆ ಪುರಂದರದಾಸರ ಜೀವನ ಪರಿವರ್ತನೆಯಲ್ಲಿ ಅವರ ಪತಿ ಪ್ರಧಾನ ಪಾತ್ರವಹಿಸಿರಬೇಕೆನ್ನುವುದು ಸ್ಪಷ್ಟವಾಗುತ್ತದೆ ಮೂಲಭೂತವಾದ ಕಾರಣದ ಸ್ವರೂಪ ವೇದ್ಯವ ಗದಿದ್ದರೂ ಆ ಮೂಲಕ ಆದ ಕಾರ್ಯವನ್ನು ಕುರಿತಂತೆ ಪುರಂದರದಾಸರು ರಚಿಸಿರುವ ಕೀರ್ತನೆ ಈ ಸಂಗತಿಗೆ ಪರಮ ಪ್ರಮಾಣದಂತಿದೆ

ಆದದ್ದೆಲ್ಲ ಒಳಿತೇ ಆಯಿತು ನಮ್ಮ
ಶ್ರೀಧರನ ಸೇವೆ ಮಾಡಲು ಸಾಧನ ಸಂಪತ್ತಾಯಿತು ಪ
ದಂಡಿಗೆ ಬೆತ್ತ ಹಿಡಿಯುವುದಕ್ಕೆ
ಮಂಡೆ ಬಾಗಿ ನಾಚುತಲಿದ್ದೆ
ಹೆಂಡತಿ ಸಂತತಿ ಸಾವಿರವಾಗಲಿ
ದಂಡಿಗೆ ಬೆತ್ತ ಹಿಡಿಸಿದಳಯ್ಯ ೧

* ಇಲ್ಲಿ ಉದಾಹರಿಸಿರುವ ರಚನೆಗಳನು ಶ್ರೀ ಉರಗಾದ್ರಿವಾಸ ವಿಠಲ ಪ್ರಕಾಶನ ದವರು ಸಂಗ್ರಹಿಸಿ ಕೊಟ್ಟಿರುವ ಸ್ತೋತ್ರ ಪದಗಳ ವಿಭ ಗದಿಂದ ಆರಿಸಿಕೊಂಡಿದೆ

ಶ್ರೀ ವ್ಯಾಸರಾಯ ರು ಮತ್ತು ಪುರಂದರದಾಸರ ಪರಸ್ಪರ ಸಂದರ್ಶನವೊಂದು ಅತ್ಯಂತ ಗಹನತ್ವಪೂರಿತವಾದ ಘಟನೆ ಪುರಂದರದಾಸರು ಶ್ರೀನಿವಾಸರಾಯರ ಸುಳಾದಿ ಯಲ್ಲಿ ಈ ಸಂದರ್ಭವನ್ನು ಸಾಕಷ್ಟು ದೀರ್ಘವಾಗಿಯೆ ನಿರೂಪಿಸಿರುತ್ತಾರೆ ವ್ಯಾಸರಾಯರ ಚರಣಕಮಲದರುಶನವೆನಗೆ ಏಸುಜನ್ಮದ ಸಂಕೃತ ಫಲ ದೊರಕಿತೋ ಎನ್ನ ಸಾಸಿರ ಕುಲಕೋಟಿ ಪಾವನ ವಾಯಿತು ಶ್ರೀಶನ್ನ ಭಜಿಸುವುದಕಧಿಕಾರಿ ನಾನಾದೆ ದೋಷರಹಿತನಾದ ಪುರಂದರವಿಠಲನ ದಾಸರ ಕರುಣವೆನ್ನ ಮೇಲೆ ಇರಲಾಗಿ ಎಂದು ಗುರುಗಳ ದರ್ಶನದಿಂದ ತಮಗಾದ ಅಮಿತಾನಂದವನು ಹೇಳಿಕೊಂಡಿರುತ್ತಾರೆ ಅಂಕಿತವಿಲ್ಲದ ದೆ ಹ ನಿಷಿದ್ಧ ಅಂಕಿತವಿಲ್ಲದ ಕಾರ್ಯ ಶೋಭಿಸದು ಅಂಕಿತವಿಲ್ಲದಿರ ಬಾರದು ಎಂದು ಪಂಕಜನಾಭ ಶ್ರೀ ಪುರಂದರವಿಠಲನ ಅಂಕಿತವೆನಗಿತ್ತ ಗುರುವರ್ಯ ಮುನಿರಾಯ ಎಂಬುದಾಗಿ ತಮಗೆ ಅಂಕಿತ ದೊರೆತ ಸಂಗತಿಯನ್ನು ವಿಶದಪಡಿಸಿರು ತ್ತಾರೆ ಈ ಸುಳಾದಿಯಲ್ಲಿ ಶ್ರೀ ವ್ಯಾಸರಾಯರ ಸಮಗ್ರ ಜೀವನದ ಚಿತ್ರಣವನ್ನು ಬಹಳ ಸಂಕ್ಷಿಪ್ತವಾಗಿ ತಿಳಿಸಿರುತ್ತಾರೆ ಕಟ್ಟಕಡೆಯಲ್ಲಿ ಗುರು ವ್ಯಾಸರಾಯರ ಚರಣವೆನಗೆ ಗತಿ ಪುರಂದರವಿಠಲನ ಅರಿತೆ ಇವರಿಂದ ಎಂದು ತಮ್ಮ ಧನ್ಯತೆಯ ನ್ನು ವ್ಯಕ್ತಪಡಿಸಿರುವರು

ಅತ್ತ ವೈರಾಗ್ಯೋದಯ ಇತ್ತ ಶ್ರೀ ವ್ಯಾಸರಾಯರಿಂದ ಅಂಕಿತೋಪದೇಶ ವಾದ ಬಳಿಕ ಪುರಂದರದಾಸರು ಪರಮಾತ್ಮನ ಅನುಗ್ರಹವನ್ನು ಸಂಪಾದಿಸಲು ಪಟ್ಟ ಶ್ರಮ ಅಷ್ಟಿಷ್ಟಲ್ಲ ಅಪರೋಕ್ಷಾನುಭವವನು ಗಳಿಸಲು ಅವರು ನಡೆಸಿದ ಅನು ಸಂಧಾನದ ಚಿತ್ರವಾಳಿ ಸುರುಳಿ ಸುರುಳಿಯಾಗಿ ನಮ್ಮ ಕಣ್ಣ ಮುಂದೆ ಸುಳಿಯ ುತ್ತವೆ ನಲ್ವತ್ತು ವರ್ಷಗಳ ಕಾಲ ಸಂಸಾರಿಗಳಾಗಿದ್ದವರು ಕ್ಷಣ ಮಾತ್ರದಲ್ಲಿ ವೈರಾಗ್ಯವನ್ನು ಕೈಕೊಂಡರೂ ತಮ್ಮ ಚಂಚಲಚಿತ್ತವನ್ನು ಗೆಲ್ಲಲು ಅವರು ಹೆ ಗೆ ಪ್ರಯತಿ ಸಿರುವ ರೆನ್ನುವುದು ಅವರ ಮಾತುಗಳಿಂದಲೇ ಮನವರಿಕೆಯಾಗುತ್ತದೆ

ಒಮ್ಮೆ ತಮ್ಮ ಉಗಾಭೋಗವೊಂದರಲ್ಲಿ

> ಮನೆಯ ಲಂಬ ಆಸೆಯ ು ಎನ್ನ ಮುಂದುಗೆಡಿಸುತಿದೆ
> ಮನೆವಾರುತೆಯು ಎನ್ನ ಭಂಗ ಪಡಿಸುತಿದೆ
> ಸುತರ ಸೆಯು ಎನ್ನ ದೈನ್ಯಪಡಿಸುತಿದೆ
> ಇನಿತಾಸೆಯುಳಿದು ಬುದ್ಧಿ ನಿನ್ನಲ್ಲಿ
> ನಿಲುವಂತೆ ಮಾಡೊ ಸಿರಿ ಪುರಂದರವಿಠಲ

ಎಂದು ಹೇಳಿಕೊಂಡು ತೊಳಲುವರು

> ಹಗಲು ನಿನ್ನ ನೆನೆಯಲಿಲ್ಲ ಹಸಿವು ತೃಷೆಯಿಂದ
> ಇರುಳು ನಿನ್ನ ನೆನೆಯಲಿಲ್ಲ ನಿದ್ರೆ ಭರದಿಂದ
> ಈ ಎರಡು ಬಾಧೆಗೆ ನಾನೊಳಗಾದೆನೊ ಪುರಂದರವಿಠಲ

ಎಂದು ಪೇಚಾಡುವರು

ಈ ಸ್ತುತಿ ಪರಂಪರೆಗಳನು ವಿಶ್ಲೇಷಿಸಿದಲ್ಲಿ ಪುರಂದರದಾಸರ ಪೂರ್ವ ವೃತ್ತಾಂತವೂ ಹರಿದಾಸ ಪರಂಪರೆಯಲ್ಲಿ ಹೇಗೆ ಅವರು ಪ್ರಪ್ರಥಮ ಪಂಕ್ತಿಗೆ ಸೇರಿದವರೆನ್ನುವುದೂ ದೃಢವಾಗುತ್ತವೆ *

## ೨ ಪುರಂದರದಾಸರ ಕೃತಿಗಳ ತಿರುಳು

ಈವರೆಗೆ ನಮಗೆ ಲಭ್ಯವಾಗಿರುವ ಪುರಂದರದಾಸರ ಕೃತಿಗಳನ್ನು ವಿಷಯಾನುಸಾರವಾಗಿ ವಿಂಗಡಿಸಿ ಅವುಗಳ ಮೌಲ್ಯವನು ವಿವೆ ಚಿಸಿದ್ದೇ ಆದರೆ ಅವರು ಆಗಲೂ ಸಹ ಇತರ ದಾಸರುಗಳಿಗಿಂತಲೂ ಅದ್ವಿತೀಯರಾಗಿ ಕಾಣುತ್ತಾರೆ ಅವರಲ್ಲಿ ಕಂಡು ಬರ ವ ವಿಷಯ ವೈವಿಧ್ಯ ನಿರೂಪಣ ನೈಪುಣ್ಯ ಶೈಲಿಯ ಸೌಕುಮಾರ್ಯಗಳನ್ನು ಇತರರಲ್ಲಿ ಕಾಣಲಾರೆವು ಪ್ರಕೃತದಲ್ಲಿ ಇವುಗಳಲ್ಲಿ ಕೆಲವನ್ನು ಸಂಕ್ಷಿಪ್ತವಾಗಿ ಸಮಾಲೋಚಿಸಬಹುದು

### ಆತ್ಮ ವಿಶ್ಲೇಷಣೆ

ವಿಜಯದಾಸರು ಹೇಳಿರುವಂತೆ ಚಿನಿವಾರ ವೃತ್ತಿಯಲ್ಲಿ ತೊಡಗಿದ್ದ ಒಬ್ಬ ವ್ಯಕ್ತಿ ಇದ್ದಕ್ಕಿದ್ದಂತೆಯೇ ಹರಿದಾಸರಾದದ್ದು ಹೇಗೆ ಎಂಬ ಪ್ರಶ್ನೆ ಸಹಜವಾಗಿಯೇ ಉದ್ಭವಿಸುತ್ತದೆ ಈ ಬಗ್ಗೆ ವಿಜಯ ದಾಸರು ತಮ್ಮ ಕಾಲದಲ್ಲಿ ಪ್ರಚಲಿತವಾಗಿದ ಒಂದು ಸಂಗತಿಯನ್ನು ಆಧರಿಸಿ ಒಮ್ಮೆ ಜಿಪುಣರಾಗಿದ್ದ ಪುರಂದರದಾಸರು ತಮ್ಮ ಹೆಂಡತಿಯ ಔದಾರ್ಯದಿಂದ ಪ್ರೇರಿತರಾಗಿ ತಮ್ಮ ಆಸ್ತಿಪಾಸ್ತಿಗಳನ್ನೆಲ್ಲ ಶ್ರೀ ಕೃಷ್ಣಾರ್ಪಣವೆಂದು ದೇವರಿಗೆ ಸಮರ್ಪಿಸಿ ಅನಂತರ ಹರಿದಾಸರಾದರೆಂದು ತಿಳಿಸಿರುತ್ತಾರೆ ಪ್ರಕೃತ ನಿರೂಪಣೆಯಲ್ಲಿ ಕಂಡುಬರುವ ಮೂಗುತಿಯ ಘಟನೆ ಇಂದಿನ ವಿಚಾರಮತಿಗಳಿಗೆ ಸಹಜವೆನಿಸದಿರಬಹ ದು ಅದೊಂದು ಪವಾಡವೆಂದು ತೋರಬಹುದು ಆದರೂ, ಈ ಐತಿಹ್ಯದ ಗರ್ಭದಲ್ಲಿ ಹುದುಗಿರುವ ನೈಜವಾಗಿರಬಹುದಾದ ಸಂಗತಿಯನು ಗಮನಿಸಿದ್ದೇ ಆದರೆ ಪುರಂದರದಾಸರ ಜೀವನ ಪರಿವರ್ತನೆಯಲ್ಲಿ ಅವರ ಪತಿ ಪ್ರಧಾನ ಪಾತ್ರವಹಿಸಿರಬೇಕೆನ್ನುವುದು ಸ್ಪಷ್ಟವಾಗುತ್ತದೆ ಮೂಲಭೂತವಾದ ಕಾರಣದ ಸ್ವರೂಪ ವೇದ್ಯವ ಗದಿದ್ದರೂ ಆ ಮೂಲಕ ಆದ ಕಾರ್ಯವನ್ನು ಕುರಿತಂತೆ ಪುರಂದರದಾಸರು ರಚಿಸಿರುವ ಕೀರ್ತನೆ ಈ ಸಂಗತಿಗೆ ಪರಮ ಪ್ರಮಾಣದಂತಿದೆ

ಆದದ್ದೆಲ್ಲ ಒಳಿತೇ ಆಯಿತು ನಮ್ಮ
ಶ್ರೀಧರನ ಸೇವೆ ಮಾಡಲು ಸಾಧನ ಸಂಪತ್ತಾಯಿತು ಪ
ದಂಡಿಗೆ ಬೆತ್ತ ಹಿಡಿಯುವುದಕ್ಕೆ
ಮಂಡೆ ಬಾಗಿ ನಾಚುತಲಿದ್ದೆ
ಹೆಂಡತಿ ಸಂತತಿ ಸಾವಿರವಾಗಲಿ
ದಂಡಿಗೆ ಬೆತ್ತ ಹಿಡಿಸಿದಳಯ್ಯ ೧

* ಇಲ್ಲಿ ಉದಾಹರಿಸಿರುವ ರಚನೆಗಳನು ಶ್ರೀ ಉರಗಾದ್ರಿವಾಸ ವಿಠಲ ಪ್ರಕಾಶನ ದವರು ಸಂಗ್ರಹಿಸಿ ಕೊಟ್ಟಿರುವ ಸ್ತೋತ್ರ ಪದಗಳ ವಿಭ ಗದಿಂದ ಆರಿಸಿಕೊಂಡಿದೆ

ನಿನ್ನನೊಪ್ಪಿಸುವುದು ಎನ್ನ ನೀತಿ
ನಿನ್ನ ಅಡಿಗೆರಗುವುದು ಎನ್ನ ಕರ್ಮ
ಎನ್ನ ತಪ್ಪುಗಳ ಎಣಿಸುವುದು ನಿನ್ನದಲ್ಲ
ನಿನ್ನ ಮರೆದು ಬದುಕುವುದು ಎನ್ನದಲ್ಲ
ನೀನಲ್ಲದಿನ್ನಾರಿಗೆ ಮೊರೆಯಿಡುವೆ ಪುರಂದರವಿಠಲ

ಈ ರೀತಿ ಪುಟ್ಟ ಪುಟ್ಟ ಉಗಾಭೋಗಗಳಲ್ಲಿ ಪುರಂದರದಾಸರು ತಮ್ಮ ಅಂತರಂಗವನ್ನು ಹೇಗೆ ತೆರೆದಿಟ್ಟಿರುವರೋ ಹ ಗೆಯೇ ತಮ್ಮ ಕೀರ್ತನೆಗಳಲ್ಲಿಯೂ ಮತ್ತಷ್ಟು ಮನದಟ್ಟುವಂತೆ ತಮ್ಮ ಹಂಬಲವನ್ನು ತೋಡಿಕೊಂಡಿರುವರು ದಾಸನ ಮಾಡಿಕೋ ಎನ ಇಷ್ಟು ಘಾಸಿ ಮಾಡುವರೇನೋ ಕರುಣಾ ಸಂಪನ್ನ ಎಂದು ಒಮ್ಮೆ ಗೋಗರೆದರೆ ಬಿನ್ನಹಕೆ ಬಾಯಿಲ್ಲವಯ್ಯಾ ಅನಂತ ಅಪರಾಧ ಎನ್ನಲ್ಲಿ ಇರಲಾಗಿ ಎಂದು ಮೊರೆಯಿಟ್ಟು ತಮ್ಮ ತಪ್ಪುಗಳ ಪಟ್ಟಿಯನ್ನೇ ಒಪ್ಪಿಸುವರು ಭಗವಂತನಾದರೋ ಭಕ್ತನನ್ನು ಒರೆಗಿಟ್ಟು ನೋಡುವವನು ಇದನ್ನೂ ಪುರಂದರ ದಾಸರು ಅರಿಯದೆ ಇಲ್ಲ ನಿನ್ನ ಭಕ್ತರೆಂದೆನಿಸಿದ ಜನರು ಭಂಗಪಡಲಿಬೇಕು ದಿನ ಪ್ರತಿದಿನ ಅನ್ನ ಉದಕ ವಸ್ತ್ರಗಳು ಕಾಣದೆ ಇರಬೇಕು ಬೆನ್ನತ್ತಿ ರೋಗಗಳು ಹತ್ತಿ ಇರಲಿಬೇಕು ತನ್ನವರ ಕೈಯಿಂದ ಛೀ ಅನಿಸಿಕೊಳ್ಳಬೇಕು ಪನ್ನಗಶಯನ ಶ್ರೀ ಪುರಂದರವಿಠಲಾ ಎಂದು ಭಕ್ತನ ಸಹನ ಸಂಯಮಗಳಿಗೆ ತಮ್ಮ ಸಮ್ಮತಿಯಿತ್ತಿರುವರು ಆದರೆ ಈ ಸೈರಣೆಯೂ ಎಷ್ಟರ ಆಸೆ-ನಿರಾಸೆಗಳ ಹೊಯ್ದಾಟದಲ್ಲಿ ಕಂಗೆಡುವಂತಾಗಲು ಆಗ ಪುರಂದರದಾಸರು ಆರು ಬದುಕಿದರಯ್ಯ ಹರಿ ನಿನ್ನ ನಂಬಿ ತೋರು ಈ ಜಗದೊಳಗೆ ಒಬ್ಬರನು ಕಾಣೆ ಎಂದು ನಿದರ್ಶನಗಳನ್ನಿತ್ತು ನಿಷ್ಠುರದ ನುಡಿಗಳನು ಆಡುವರು ಕರುಣಾಕರ ನೀನೆಂಬುವುದ್ಯಾಕೋ ಭರವಸೆ ಇಲ್ಲೆನಗೆ ಎಂದು ಆಕ್ಷೇಪಿಸುವರು

ಈ ರೀತಿ ಪರಿಪರಿಯಾಗಿ ಪರಿತಪಿಸಿ ಪಶ್ಚಾತ್ತಾಪದಿಂದ ನೊಂದು ಬೆಂದ ಪುರಂದರದಾಸರ ಹೃದಯ ಪುಟಕ್ಕಿಟ್ಟ ಚಿನ್ನದಂತೆ ಪರಿಪಕ್ವವಾಯಿತು ಆಗ ಅವರಿಗೆ ಪರಮಾತ್ಮನ ಅರಿವು ಕ್ರಮಕ್ರಮವಾಗಿ ಆಗತೊಡಗಿರುವುದನ್ನು ಅವರು ಬಹಳ ಹೃದಯಸ್ಪರ್ಶಿಯಾಗಿ ವ್ಯಕ್ತಪಡಿಸಿರುವರು ಒಮ್ಮೆ ಕಂಡೆ ನಾ ಕನಸಿನಲಿ ಗೋವಿಂದನ ಕಂಡೆ ನಾ ಕನಸಿನಲಿ ಕನಕರತ್ನದ ಖಣಿಯ ಎಂದು ಹಾಡತೊಡಗಿ ತಮ್ಮ ಇಷ್ಟದೇವತೆಯನು ನಖಶಿಖಾಂತವಾಗಿ ವರ್ಣಿಸಿ ಕಟ್ಟಕಡೆಗೆ ಶೃಂಗಾರ ಮೂರುತಿ ಪುರಂದರವಿಠಲನ ಕಂಗಳಿಂದಲಿ ಕಂಡೆ ಹಿಂಗಿತು ಭವಭಯ ಎಂದು ಹಿಗ್ಗುವರು ಬಳಿಕ ಇನ್ನೊಂದು ಹೆಜ್ಜೆ ಮುಂದುವರಿದು ಕೃಷ್ಣಮೂರ್ತಿ ಕಣ್ಣ ಮುಂದೆ ನಿಂತಿದೆ ಎಂದು ಅರ್ಧಮರ್ಧ ಎಚ್ಚೆತ್ತವರಂತೆ ಭಾವಿಸಿ ತಮ್ಮ ಸ್ವಾಮಿಯನ್ನು ಮುಡಿಯಿಂದ ಅಡಿಯವರೆಗೆ ವರ್ಣಿಸಿರುವರು ಈ ಘಟ್ಟವನ್ನು ಮುಟ್ಟಿದ ಬಳಿಕ ಕಣ್ಣಾರೆ ಕಂಡೆನಚ್ಯುತನ ಕಂಚಿ ಪುಣ್ಯಕೋಟಿ ಕರಿರಾಜ ವರದನ ಎಂದು

ದೃಢವಾದ ವಾಣಿಯಲ್ಲಿ ತಮ್ಮ ಆರಾಧ್ಯ ದೇವತೆಯನು ಸ್ಪಷ್ಟವಾಗಿ ವರ್ಣಿಸಿರುವರು ಈ ನೆಲೆಯನ್ನು ಮುಟ್ಟಿದ ಮೇಲೆ ಪುರಂದರದಾಸರಿಗೆ ತಮ್ಮ ದೇವತೆಯನು ತಮ್ಮ ಹೃದಯದಲ್ಲಿಯೇ ಸಂತತವೂ ಕಂಡು ಸಂತೋಷಿಸಬೇಕೆಂಬ ಹಂಬಲ ಮಿಡಿಯುವುದು ಸಹಜವೇ ಸರಿ ಆದಕ್ಕಾಗಿಯೇ ನಿಲ್ಲಬೇಕಯ್ಯ ಕೃಷ್ಣಯ್ಯ ನೀ ನಿಲ್ಲಬೆ ಕಯ್ಯ ಮಲ್ಲಮರ್ದನ ಸಿರಿವಲ್ಲಭ ಎನ್ನ ಹೃದಯದಲ್ಲಿ ಸತತ ನಿ ಎಂದು ಕೇಳಿಕೊಂಡು ಆ ಬಾಲಗೋಪಾಲನನ್ನು ತಾವು ಹೇಗೆ ಲಾಲಿಸಿ ಪಾಲಿಸುವರೆನು ವುದನ್ನು ಅರಿಕೆ ಮಾಡಿಕೊಳ್ಳುವರು ಒಂದು ಕಾಲಕ್ಕೆ ಆರು ಬದುಕಿದರಯ್ಯ ಹರಿ ನಿನ್ನ ನಂಬಿ ಎಂದು ಕನಲಿ ಕಿಡಿಕಿಡಿಯಾದವರು ಈಗ ನಂಬಿ ಕೆಟ್ಟವರಿಲ್ಲವೋ ರಂಗಯ್ಯನ ನಂಬದೆ ಕೆಟ್ಟರೆ ಕೆಡಲಿ ಎಂದು ಸಂತೃಪ್ತರಾಗಿ ತಮ್ಮ ಅಚಲ ವಿಶ್ವಾಸವನ್ನು ವ್ಯಕ್ತಪಡಿಸು ವರು ಈ ರೀತಿ ಹರಿದಾಸ್ಯದಿಂದ ಹದಗೊಂಡ ಪುರಂದರದಾಸರು ತಮ್ಮ ಸಮಗ್ರ ಸಾಧನೆಯನೂ ಒಂದು ಕೀರ್ತನೆಯಲ್ಲಿ ವಿಹಂಗಮಾವಲೋಕನದಿಂದ ಬಹಳ ಯ ಶಸ್ವಿ ಯಾಗಿ ಅಭಿವ್ಯಕ್ತಪಡಿಸಿರುವರು

> ವರಗುರು ಉಪದೇಶ ನೆರವಾಯಿತೆನಗೀಗ ಇನ್ನೇನಿನೆ ೀನು ॥ಪ॥
> ಹರಿದಾಸರ ಸಂಗ ದೊರಕಿತು ಎನಗಿ ಗ ಇನೆ ೀನಿನ್ನೇನು ॥ಅ ಪ॥
>
> ಮಾಯದ ಸಂಸಾರ ಮಮ ಕಾರ ಹಿಂಗಿತು ಇನ್ನೇನಿನ್ನೇನು
> ತೋಯಜಾಕ್ಷನನಾಮ ಜಿಹ್ವೆಯೊಳ್ನೆಲೆಸಿತು ಇನೆ ೀನಿನ್ನೇನು
> ಹಲವು ದೈವಗಳೆಂಬ ಹಂಬಲು ಬಿಟ್ಟಿತು ಇನ್ನೇನಿನ್ನೇನು
> ಜಲಜನಾಭನ ಧ್ಯಾನ ಹೃದಯದೊಳ್ನೆಲೆಸಿತು ಇನೆ ೀನಿನೆ ೀನು
> ತಂದೆ ತಾಯಿ ವ ುಚುಕುಂದ ವರದನಾದ ಇನ್ನೇನಿನ್ನೇನು
> ಸಂದೇಹವಿಲ್ಲ ಮು ಕುಂದ ದಯಮಾಡ್ದ ಇನ್ನೇನಿನ್ನೇನು
> ಏನೆಂದು ಪೇಳಲಿ ಆನಂದ ಸಂಭ್ರಮ ಇನ್ನೇನಿನೆ ೀನು
> ಆ ನಂದಗೊ ಪನ ಕಂದನ ಮಹಿಮೆ ಯು ಇನ್ನೇನಿನೆ ೀನು
> ಎನ್ನ ವಂಶಗಳೆಲ್ಲ ಪಾವನವಾದವು ಇನೆ ೀನಿನ್ನೇನ
> ಚೆನ್ನಯ ಪುರಂದರವಿಠಲ ದೊರಕಿದ ಇನ್ನೇನಿನ್ನೇನು

ಪುರಂದರದಾಸರಂತೆ ಈ ಆತ್ಮಾನುಸಂಧಾನದ ವಿವಿಧ ಮೆಟ್ಟಿಲುಗಳನ್ನು ಬೇರೆ ಯಾವ ದಾಸರ ರಚನೆಗಳಲ್ಲಿಯೂ ನಾವು ಕಾಣಲಾರೆವು ಆಗರ್ಭ ಶ್ರೀಮಂತರಾಗಿ ದ್ದವರು ಆಕಸ್ಮಿಕವಾದ ಘಟನೆಯೊಂದರಿಂದ ಪರಮಾತ್ಮನ ಪ್ರೀತಿಗೆ ಪಾತ್ರರೆನ್ನಿಸಿ ಆತನ ಕೈಂಕರ್ಯವನ್ನು ಕೈಕೊಳ್ಳುವುದು ಸಾಮಾನ್ಯವಾದ ಸಂಗತಿಯಲ್ಲ ದ ಸನಾಗು ವುದಕ್ಕೆ ಏಸು ಜನ್ಮದ ಸುಕೃತ ಭಾಸುರ ರವಿ ಕೋಟಿ ಶ್ರೀಶ ಗುಣವಂತ ನಾಶರಹಿತ ನಿನ ದಾಸರ ದಾಸ್ಯವ ಲೇಸಾಗಿಕೊಂಡು ಕಂಡ್ಯ ಪುರಂದರವಿಠಲ ಎಂಬ ಕೋರಿಕೆಯ ಮೂಲಕ ಅವರು ಹರಿದ ಸತ್ವದ ಬಗ್ಗೆ ಎಷ್ಟು ಗೌರವವನ್ನು ಇಟ್ಟುಕೊಂಡಿದ್ದರೆನ್ನು

ವುದು ಗ್ವಯ ೦ ವ್ಯಕ್ತ ಾಗುತ್ತದೆ ಎಲ್ಲ ಹರಿದಾಸರಿಗೂ ಅವರು ಹೇಗೆ ಆದರ್ಶ ಪ್ರಾಯರಾದರೆನ್ನುವುದು ಅವರ ಈ ವಿಶಿಷ್ಟ ಲಕ್ಷಣಗಳಿಂದ ಸ್ಪಷ್ಟವಾಗುತ್ತದೆ ಇನ್ನು ಅವರು ರಚಿಸಿರುವ ಕೃತಿ ಸಮುದಾಯದತ್ತ ದೃಷ್ಟಿ ಹಾಯಿಸಿದರೆ ಅವರು ಸಾಧಿಸಿರುವ ಮೇಲ್ಮೆ ಮತ್ತಷ್ಟು ಮನವರಿಕೆಯಾಗುವುದು

## ಆಧ್ಯಾತ್ಮಿಕ ದೃಷ್ಟಿ

ಪುರಂದರದಾಸರ ರಚನೆಗಳಲ್ಲಿ ಪ್ರತಿಪಾದಿತವಾಗಿರುವ ಅವರ ಆಧ್ಯಾತ್ಮಿಕ ದೃಷ್ಟಿಯನ್ನು ನಾವು ಎರಡು ಹಂತಗಳಲ್ಲಿ ಎಶೀ ಕ್ಷಿಸಬೇಕಾಗುತ್ತದೆ ಶ್ರೀವ್ಯಾಸ ರಾಯರ ಪರಮ ಶಿಷ್ಯರಾದ ಅವರು ಸ್ವಮತ ನಿಷೆ ಯನ್ನು ಹೇಗೆ ನಿರೂಪಿಸಿರ ವ ರೆಂಬ ದು ಒಂದು ಘಟ್ಟವಾದರೆ ವೇದೋಪನಿಷತ್ತುಗಳೇ ಮೊದಲಾದ ಧ ರ್ಮಿಕ ಗ್ರಂಥಗಳಲ್ಲಿ ಅಡಕವಾಗಿರುವ ತತ್ವಗಳನ್ನು ತಮ್ಮ ಅಪರೋಕ್ಷಾನುಭೂತಿಯಿ ಂದ ಮಂಥಿಸ್ವಾಮ್ಯ ಹೃದ್ಗತ ಮಾಡಿಕೊಂಡು ಅವುಗಳನ್ನು ತಿಳಿಗನ್ನಡದಲ್ಲಿ ಎಷ್ಟು ಪರಿಣಾಮಕಾರಿಯಾಗಿ ಪ್ರತಿಪಾದಿಸುವರೆನ್ನುವುದು ಇನ್ನೊಂದು ಪ್ರಮುಖ ಘಟ್ಟ

ಶ್ರೀವ್ಯಾಸರಾಯರು ಮಧ್ವ ಸಿದ್ಧಾಂತದ ಪ್ರಮುಖ ಪ್ರಮೇಯಗಳನ್ನು ಒಂದು ಶಾರ್ದೂಲ ವಿಕ್ರೀಡಿತ ವೃತ್ತದಲ್ಲಿ ಹೀಗೆ ಹೆ ಳಿರುವರು

ಶ್ರೀಮನ್ಮಧ್ವಮತೇ ಹರಿಃ ಪರತರಃ ಸತ್ಯಂ ಜಗತ್ ತತ್ವತೋ
ಭೇದಃ ಜೀವಗಣಾಃ ಹರೇ ರನುಚರಾಃ ನೀಚೋಚ್ಚ ಭಾವಂಗತಾ
ಮುಕ್ತಿರ್ನೈಜ ಸುಖಾನುಭೂತಿರಮಲಾ ಭಕ್ತಿಶ್ಚ ತತ್ಸಾಧನಂ
ಹ್ಯಕ್ಷಾದಿ ತ್ರಿತಯಂ ಪ್ರಮಾಣಮಖಿಲಾಮ್ನಾಯೈಕ ವೇದ್ಯೋ ಹರಿಃ

ಇಲ್ಲಿ ಹೆ ಳಿರುವ ಮುಖ್ಯಾಂಶಗಳು ಯಾವುವೆಂದರೆ —

1 ಮಧ್ವಮತದಲ್ಲಿ ಶ್ರೀ ಹರಿಯೇ ಸರ್ವೋತ್ತಮ
2 ಜಗತ್ತು ಸತ್ಯ
3 ಭೆ ದವು ನಿಜ (ಪಂಚ ಭೇದಗಳು)
4 ಎಲ್ಲ ಜೀವಿಗಳೂ ಶ್ರೀಹರಿಯ ಅನುಚರರ
5 ಉಚ್ಚ ಮತ್ತು ನೀಚವೆಂಬ ತಾರತಮ್ಯವುಂಟು
6 ಮುಕ್ತಿಯೆಂದರೆ ಸ್ವಸ್ವರೂಪಾನಂಭವ
7 ಈ ಮುಕ್ತಿಗೆ ಭಕ್ತಿಯೇ ಸಾಧನ
8 ಪ್ರತ್ಯಕ್ಷ ಅನುಮಾನ ಮತ್ತು ಶಬ್ದ ಎಂಬುವು ಪ್ರಮಾಣಗಳು
9 ಶ್ರೀಹರಿಯನ್ನು ವೇದಗಳಿಂದ ಮಾತ್ರ ತಿಳಿಯಲು ಸಾಧ್ಯ

ಇಲ್ಲಿ ಒಂಬತ್ತು ಪ್ರಮುಖ ಅಂಶಗಳು ಅಡಕವಾಗಿರುವುದರಿಂದ ಇದಕ್ಕೆ ಪ್ರಮೇಯ ನವರತ ಮಾಲಾ ಎಂಬ ಹೆಸರೂ ಉಂಟು

ಪುರಂದರದಾಸರಾದರೋ ತಮ್ಮ ಗುರುಗಳ ಈ ಮೆಲ್ಪಂಕ್ತಿಯನ್ನೇ ಅನುಸರಿಸಿ ಒಂದು ಕೀರ್ತನೆಯನು ರಚಿಸಿರ ವರು

ಸತ್ಯಂ ಜಗತಿದು ಪಂಚಭೇದವು ನಿತ್ಯ ಶ್ರೀ ಗೋವಿಂದನ
ಕೃತ್ಯವರಿತು ತಾರತಮ್ಯದಿ ಕೃಷ್ಣನಧಿಕೆಂದು ಸಾರಿರೈ
ಜೀವ ಈಶಗೆ ಭೇದ ಸರ್ವತ್ರ ಜೀವ ಜೀವಕೆ ಭೇದವು
ಜೀವ ಜಡಕೆ ಜಡ ಜಡಕೆ ಭೆ ದ ಜೀವಜಡ ಪರಮಾತ್ಮಗೆ
ಮಾನುಷೋತ್ತಮರಿಗಧಿಕ ಕ್ಷಿತಿಪರು ಮನುಜ ದೇವ ಗಂಧರ್ವರು
ಜ ನಪಿತರಜಾನ ಕರ್ಮಜ ದಾನವಾರಿ ತತ್ವಾತ್ಮರು

x x x x

ವಾಯ ವಿಗೆ ಸವ ರಿಲ್ಲ ಜಗದೊಳು ವಾಯುದೇವರೆ ಬ್ರಹ್ಮರು
ವಾಯು ಬ್ರಹ್ಮಗೆ ಕೋಟಿ ಗುಣದಿಂದ ಅಧಿಕ ಮಹಿಮ ಳು ಶ್ರೀರಮಣ
ಅನಂತ ಗುಣಗಳಿಂದಧಿಕ ಲಕುಮಿ ಗೆ ಆದಿ ಪುರಂದರವಿಠಲನು
ಘ ರೂ ಸವ ರೂ ಇಲ್ಲ ಜಗದೊಳು ಹನ ಮ ಹೃತ್ಪದ್ಮವಾಸನೆ

ಶ್ರೀವ್ಯಾಸರಾಯರ ಹೇಳಿಕೆಯ ಲ್ಲಿ ಅಡಗಿರುವ ಕೆಲವು ಸಂಗತಿಗಳನ್ನು ಇಲ್ಲಿ ಪುರಂದರದಾಸರು ವಿಸ್ತರಿಸಿರ ವರು ಪಂಚಭೇದಗಳ ವಿವರಣೆಯಾದ ಬಳಿಕ್ಕ ಮಾನ ಷೋತ್ತ ಮ ರಿಂದ ಹಿಡಿದು ದೇವಾನುದೇವತೆಗಳ ಮೂಲಕ ಹಾದು ಶ್ರೀಹರಿ ಹೇಗೆ ಸರ್ವೋತ್ತಮನೆಂಬುದನು ಆರೋಹಣ ಕ್ರಮದಲ್ಲಿ ಆಯಾ ಸ್ಥಾನಕ್ಕೆ (ಇದಕ್ಕೆ ಕಕ್ಷವೆಂದು ಹೆಸರು) ಅನುಗುಣವಾಗಿ ಪಟಿ ಮಾಡಿ ವಿಶದಪಡಿಸಿರುವರು ಈ ಕೀರ್ತನೆ ಯ ಲಿ ಪುರಂದರದಾಸರು ಕೇವಲ ಶಾಸ್ತ್ರದ ಸರಣಿಯನ್ನೇ ಅನುಸರಿಸಿರುವರು ಆದರೆ ಬೇರೆ ಬೆ ರೆ ಕೀರ್ತನೆಗಳಲ್ಲಿ ಮಧ್ವ ಸಿದ್ಧಾಂತದ ಪ್ರಮೇಯಗಳನ್ನು ಬಹಳ ಲಲಿತವಾಗಿ ಸರ್ವಜನ ಗ್ರಾಹ್ಯವಾಗುವಂತೆ ತಿಳಿಸಿರುವರು ಅಂಥವುಗಳಲ್ಲಿ ಕೆಲವನ್ನು ಇಲ್ಲಿ ಪರಿಶೀ ಲಿಸಬಹುದು

ಶ್ರೀಹರಿಸರ್ವೋತ್ತಮನೆಂದು ತಿಳಿಸುವಲ್ಲಿ ಆತನ ಆಧಿಕ್ಯವನ್ನು ಸಮರ್ಥಿಸಿರುವ ಈ ಕೀರ್ತನೆಯನು ನೋಡಿರಿ

ಈ ಪರಿಯ ಸೊಬಗಾವ ದೇವರಲಿ ಕಾಣೆ ಪ
ಗೋಪೀಜನ ಪ್ರಿಯ ಗೋಪಾಲಗಲ್ಲದೆ ಅ ಪ
ದೊರೆಯಂತನದಲಿ ನೋಡೆ ಧರಣಿದೇವಿಗೆ ರಮಣ
ಸಿರಿಯತನದಲಿ ನೋಡೆ ಶ್ರೀಕಾಂತನು
ಹಿರಿಯ ತನದಲಿ ನೋಡೆ ಸರಸಿಜೋದ್ಭವನಯ್ಯ
ಗುರುವುತನದಲಿ ನೋಡೆ ಜಗದಾದಿ ಗುರುವು ॥೧॥

ಪ ವನತ್ವದಿ ನೋಡೆ ಅಮರ ಗಂಗಾಜನಕ
ದೇವತ್ವದಲಿ ನೋಡೆ ದಿವಿಜರೊಡಯ
ಅ ವಣ್ಯದಲಿ ನೋಡೆ ಲೋಕ ವೋ ಹಕನಯ್ಯ
ಆವ ಧೈರ್ಯದಿ ನೋಡೆ ಅಸ ರಾಂತಕ ॥೨॥

ಗಗನದಲಿ ಸಂಚರಿಪ ಗರುಡದೇವನೆ ತುರಗ
ಜಗತೀಧರ ಶೇಷ ಪರಿಯಂಕ ಶಯನ
ನಿಗಮಗೋಚರ ಪುರಂದರವಿಠಲಗಲ್ಲದೆ
ಮಿಗಿಲಾದ ದೈವಗಳಿಗೆ ಭಾಗ್ಯವುಂಟೆ ॥೩॥

ಶ್ರೀಮನ್ಮಧ್ವಮತೇ ಹರಿಃ ಪರತರಃ ಎಂಬ ಸೂತ್ರ ಸದೃಶವಾದ ವಾಕ್ಯಕ್ಕೆ ಪುರಂದರದಾಸರು ಈ ಕೀರ್ತನೆಯು ವ ಆಲಕ ವ್ಯಾಖಾನ ಮಾಡಿದಂತಿದೆ ಅತನ ಮೇಲ್ಮೆಯನು ಸೋದಾಹರಣವಾಗಿ "ವ ರ್ಥಿಸಿ ಕಡೆಯಲ್ಲಿ ವಿ ಗಿಲಾದ ದೈವ ಗಳಿಗೀ ಭಾಗ್ಯವುಂಟೆ? ಎಂದು ಪ್ರಶಿ ಸುವ ಸಂವಿಧಾನವಂತೂ ಮನವೊಪ್ಪುವಂತಿದೆ

ಶ್ರೀಹರಿಗೂ ಇತರ ದೇವತೆಗಳಿಗೂ ಇರುವ ತಾರತಮ್ಯವನ್ನು ಪ್ರಸ್ತಾಪಿಸುವಲ್ಲಿ ಪುರಂದರದಾಸರು ಬರೆದಿರುವ ಒಂದು ಉಗಾಭೋಗ ಇಂತಿದೆ

ನಿತ್ಯ ಪತಿಭಾವ ಶ್ರೀಲಕುಮಿಗಯ್ಯ
ನಿತ್ಯ ಪುತ್ರಭಾವ ಬ್ರಹ್ಮ, ಪ್ರಾಣರಿಗೆ
ನಿತ್ಯ ಪೌತ್ರಭಾವ ಗರುಡ ಶೇಷ ರುದ್ರರಿಗೆ
ನಿತ್ಯ ಭೃತ್ಯಭಾವ ಇಂದ್ರ ಕಾಮ ಆತ್ಮ ಜೀವರಿಗೆ
ಇಂತೆಂದ ಪುರಂದರವಿಠಲ

ಪ್ರಕೃತ ಉಗಾಭೊ ಗದಲ್ಲಿ ಪುರಂದರದಾಸರು ಶ್ರೀಹರಿಯ ಸಂಸಾರದಲ್ಲಿ ಯಾರ ಯಾರ ಸ್ಥಾನವೇನು ಎನ್ನುವುದನ್ನು ತಿಳಿಸುವ ಮೂಲಕ ತಾರತಮ್ಯ ತತ್ವದ ಮಹತ್ವವನ್ನು ಅತ್ಯಂತ ಮನಃಪ್ರಿಯವಾಗಿಸಿರುವರು

ಭೇದ ತತ್ವವನು ಎತ್ತಿ ಹಿಡಿಯುವ ಮಧ್ವ ಸಿದ್ಧಾಂತದ ಇನ್ನೊಂದು ಪ್ರಮೇಯವನ್ನು ಪುರಂದರದಾಸರು ಬಹಳ ಸರಳವಾಗಿ ತಿಳಿಸಿರ ತ್ತಾರೆ

ಜೀವ ಜೀವಕೆ ಭೇದ ಜಡ ಜಡಕೆ ಭೇದ
ಜೀವ ಜಡ ಪರಮಾತ್ಮನಿಗೆ ಭೇದ
ಜೀವಾಜೀವ ಮುಕ್ತಾಮುಕ್ತರ ಭೇದ
ಸಂಸಾರದೊಳು ಭೇದ
ಮುಕ್ತರೊಡೆಯ ಹರಿ ಭಕ್ತರಾಧೀನ
ಜಗತ್ಕರ್ತ ನೀ ಸಲಹಯ್ಯ ಪುರಂದರವಿಠಲ

ಭಕ್ತಿ ಮುಕ್ತಿಗಳ ಪರಸ್ಪರ ಸಂಬಂಧವನ್ನು ಶ್ರೀವಾಸರಾಜರು ತಮ್ಮ ಮೇಲ್ಕಂಡ ವೃತ್ತದಲ್ಲಿ ಮುಕ್ತಿರ್ನೈಜಸುಖಾನುಭೂತಿರಮಲಾ ಭಕ್ತಿಶ್ಚ ತತ್ಸಾಧನಮ್ ಎಂದು ಸೂತ್ರ ಪ್ರಾಯವಾಗಿ ಹೇಳಿರುವರಷ್ಟೆ. ಪುರಂದರದಾಸರು ರಚಿಸಿರುವ ಒಂದು ಉಗಾಭೋಗವು ಅದಕ್ಕೆ ವ್ಯಾಖ್ಯಾನ ಬರೆದಂತಿದೆ

ಸಕಲ ಸಾಧನಕೆಲ್ಲ ಸಿದ್ಧ ಗೊಳಿಸುವುದು
ಭಕುತಿ ಸಾಧನವಲ್ಲದನ್ಯ ಸಾಧನವುಂಟೆ ?
ಭಕುತಿಗಭಿವಾನಿ ಭಾರತಿಯು ಕರುಣದಿಂ
ಮುಕುತಿಗೆ ಪಥವೆಂದು ಮನವಿಟ್ಟು ಭಜಿಸಿರೋ
ಅಖಿಳೇಶ ಪುರಂದರವಿಠಲ ತಾನೊಲಿವ

ಪುರಂದರದಾಸರು ದ್ವೈತ ಸಿದ್ಧಾಂತದಲ್ಲಿ ಪ್ರತಿಪಾದಿತವಾಗಿರುವ ಪರಮಾತ್ಮ ಮತ್ತು ಜೀವಾತ್ಮಗಳ ಈಶ-ದಾಸ್ಯಭಾವವನ್ನು ನಿದರ್ಶನ ಪೂರ್ವಕವಾಗಿ ಒಂದು ಸಣ್ಣ ಕೀರ್ತನೆಯಲ್ಲಿ ಹೀಗೆ ಹೇಳಿರುವರು

ಎರಡೂ ಒಂದಾಗದು ರಂಗ ॥ಪ॥
ಎರಡು ಒಂದಾಗದು ಎಂದೆಂದಿಗು ರಂಗ ॥ಅ ಪ॥

ಒಂದು ವೃಕ್ಷದಲ್ಲಿ ಎರಡು ಪಕ್ಷಿಗಳೆ
ಒಂದೇ ಗೂಡಿನಲ್ಲಿ ಇರುತಿಹವು
ಒಂದು ಪಕ್ಷಿ ಫಲಗಳನುಂಬುದು ಮ
ತ್ತೊಂದು ಫಲಂಗಳನುಣ್ಣದು ರಂಗ ॥೧॥

ಹಲವು ಕೊಂಬೆಗೆ ಒಂದು ಹಾರಿತು, ಒಂದು
ಹಲವು ಕೊಂಬೆಗೆ ಹಾರಲರಿಯದು
ಹಲವನೆಲ್ಲ ಒಂದು ಬಲ್ಲುದು ಒಂದೆ
ಹಲವನೆಲ್ಲವ ಅರಿಯದು ರಂಗ ॥೨॥

ನೂರೆಂಟು ಕೊಂಬೆಗೆ ಹಾರಿತು ಅದು
ಹಾರಿ ಮೇಲಕ್ಕೇರಿ ಮೀರಿತು
ಮೀರಿ ಪುರಂದರ ವಿಠಲ ನಿಮ್ಮನು
ಸೇರಿ ಸುಖಿಯಾಗಿ ನಿಂತಿತು ರಂಗ

ಇಲ್ಲಿ ನೀಡಿರುವ ದೃಷ್ಟಾಂತ ಮತ್ತು ತತ್ವ ನಿರೂಪಣೆಗಳು ಪುರಂದರದಾಸ ಸ್ವಯಂ ಸೃಷ್ಟಿಯಲ್ಲ. ಉಪನಿಷತ್ತಿನಲ್ಲಿ ಉಕ್ತವಾಗಿರುವ ದ್ವಾ ಸುಪರ್ಣಾ ಸಯುಜಾ ಸಖಾಯಾ ಸಮಾನಂ ವೃಕ್ಷಂ ಪರಿಷಸ್ವಜಾತೇ । ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತ್ಯನ ಶ್ನನ್ನನ್ಯೋ ಅಭಿಚಾಕಶೀತಿ ಎಂಬ ಸುಪ್ರಸಿದ್ಧವಾಗಿರುವ ಸೂಕ್ತಿಯ ಕನ್ನಡ

ರೂಪಾಂತರ ಒಂದೇ ವೃಕ್ಷವನ್ನು ಆಶ್ರಯಿಸಿರುವ ಎರಡು ಹಕ್ಕಿಗಳಲ್ಲಿ ಒಂದು ಪರಮಾತ್ಮನಾದರೆ ಇನ್ನೊಂದು ಜೀವಾತ್ಮ. ಪರಮಾತ್ಮನು ಕೇವಲ ಸಾಕ್ಷಿಭೂತನಾಗಿ ರುವನೇ ಹೊರತು ಲೋಕಾಸಕ್ತನಲ್ಲ. ಜೀವಾತ್ಮನಾದರೋ ಕರ್ತನೆಯಲ್ಲಿ ವ್ಯಕ್ತ ಪಡಿಸಿರುವಂತೆ ಹಲವು ಕೊಂಬೆಗಳ ಮೇಲೆ ಹಾರಿ ಕುಳಿತು ತನಗೆ ಬೇಕಾದುದನ್ನು ಸವಿದು ಕಡೆಗೆ ಜ್ಞಾನೋದಯವಾಗಲು ದೇವರ ಸಾನ್ನಿಧ್ಯವನ್ನು ಸೇರುವುದು. ಇದೇ ಗಹನವಾದ ತತ್ತ್ವವನ್ನು ಪುರಂದರದಾಸರು ತಾವು ರಚಿಸಿರುವ ಬಡುಬ ಡುಕೆಯು ಹಾಡಿ ನಲ್ಲಿಯೂ ಗ್ರಾಮ್ಯಶೈಲಿಯಲ್ಲಿ ನಿರೂಪಿಸಿರುವರು. ಒಂದೇ ಹಕ್ಕಿ ಹಣ್ಣುಂತೈತೆ ವತ್ತೊಂದ್ಹಕ್ಕಿ ನೋಡತದಪ್ಪ ಹಣ್ಣುಂದ್ಹಕ್ಕಿ ಬಡವಾಗೈತೆ ತಿನ್ನದ ಹಕ್ಕಿ ಬಲಿ ತೈತಣ್ಣ ಸುಳ್ಳಲ್ಲ ನೀಕೇಳೋ ತಮ್ಮ ದ್ವಾಸುಪರ್ಣದ ಶ್ರುತಿಯಲ್ಲೈತೆ ಎಂದು ಸಾಧಾರವಾಗಿ ಸ್ಪಷ್ಟಪಡಿಸಿರುವರು.

ಶ್ರೀಮಧ್ವಾಚಾರ್ಯರನ್ನು ಕೊಂಡಾಡುವಲ್ಲಿ ಒಮ್ಮೆ ಹನುಮ ನಮ್ಮ ತಂದೆ ಭೀಮ ನಮ್ಮ ಬಂಧು ಬಳಗ, ಆನಂದತೀರ್ಥರೇ ಗತಿ ಗೋತ್ರವಯ್ಯ ಎಂದು ಅವರ ಅವತಾರತ್ರಯವನ್ನು ಹೇಳಿ ಆ ಬಳಿಕ ಒಂದೊಂದೇ ನುಡಿಯಲ್ಲಿ ಆ ಅವತಾರಪುರು ಷರು ಏನು ಮಹತ್ಕಾರ್ಯಗಳನ್ನು ಸಾಧಿಸಿದರು ಎನುವುದನ್ನು ತಿಳಿಸುವರು. ಶ್ರೀಮಧ್ವಾಚಾರ್ಯರೊಬ್ಬರನ್ನೇ ಸ್ತುತಿಸುವಾಗ ಒಂದು ನಿಡಿದಾದ ಸುಳಾದಿಯಲ್ಲಿ ಅವರು ಮಾಡಿದ ಮಹೋಪಕಾರವನ್ನು ಮನಃಪೂರ್ವಕವಾಗಿ ಸ್ತುತಿಸಿರುವರು. ಈ ಸುಳಾದಿಯ ಪ್ರಾರಂಭ ಬಹಳ ವಿಶಿಷ್ಟಪೂರ್ಣವಾಗಿದೆ.

ಒಬ್ಬಾಚಾರಿಯನು ದೈವವೆ ಇಲ್ಲ ವೆಂದ,
ಒಬ್ಬಾಚಾರಿಯನು ದೈವಕಿತೇ ಗುಣವೆಂದ
ಒಬ್ಬಾಚಾರಿಯನು ನಿರ್ಗುಣ ನಿರಾಕಾರ
ನಿರವಯವನೆಂದ ಕಡೆಯಲಿ ತಾನೇ ದೈವವೆಂದ
ಒಬ್ಬರು ವೇದಾರ್ಥವರಿತು ಅರಿಯರು
ಒಬ್ಬ ಮಧ್ವಾಚಾರ್ಯರೆ ಪುರಂದರ ವಿಠಲ
ನೊಬ್ಬನೆ ದೈವವೆಂದು ತೋರಿಕೊಟ್ಟರು

ಶ್ರೀ ಮಧ್ವಾಚಾರ್ಯರಿಗಿಂತ ಪೂರ್ವದಲ್ಲಿದ್ದ ನಾಸ್ತಿಕರನ್ನು ಮೊದಲ್ಗೊಂಡು ಆಸ್ತಿಕರಾದ ಇತರ ಆಚಾರ್ಯರು ಯಾವ ರೀತಿ ತಮ್ಮ ಪಂಥವನ್ನು ಮಂಡಿಸಿದರೆಂಬ ಚಾರಿತ್ರಿಕ ದೃಷ್ಟಿ ಮೆಚ್ಚುವಂತಹುದು. ಅವರುಗಳಾದರೋ ವೇದಾರ್ಥವರಿತು ಅರಿಯರು ಎಂದು ಹೇಳಿರುವ ರೀತಿ ಸ್ವಾತಂತ್ರ್ಯವಾದುದು. ಇತರ ಆಚಾರ್ಯರೂ ತಮ್ಮ ತಮ್ಮ ಶಕ್ತ್ಯನುಸಾರ ವೇದಾರ್ಥವನ್ನು ತಿಳಿಯಲು ಮಾಡಿರುವ ಪ್ರಯತ್ನವನ್ನು ದಾಸರು ನಿರಾಕರಿಸುವುದಿಲ್ಲ. ಆದರೆ ಆ ಇತರ ಆಚಾರ್ಯರಿಗಿಂತ ಶ್ರೀಮಧ್ವಾಚಾರ್ಯರು ಈ ಕಾರ್ಯದಲ್ಲಿ ಯಶಸ್ವಿಯಾಗಿರುವರೆಂದು ಅವರ ನಂಬಿಕೆ. ಅಂತೆಯೇ ಈ ಸುಳಾದಿಯ ಮಿಕ್ಕ ಭಾಗದಲ್ಲಿ ಶ್ರೀಮಧ್ವಾಚಾರ್ಯರು ಏನನ್ನು ಸಾಧಿಸಿದರು ಎನ್ನುವುದನ್ನು ವಿಶದ ಪಡಿಸುವರು.

ಪುರಂದರದಾಸರು ತಮ್ಮ ಮತದ ಸಿದ್ಧಾಂತವನು ಕೇವಲ ಪಾರಿಭಾಷಿಕ ಶಬ್ದಗಳ ಪಟ್ಟಿಯನ್ನು ಹೇಳಿ ತೃಪ್ತರಾಗಲಿಲ್ಲ ಅವರು ಸ್ವಭಾವತಃ ಅಪರೋಕ್ಷ ಜ್ಞಾನಿಗಳಾದ್ದರಿಂದ ವೇದೋಪನಿಷತ್ತುಗಳಲ್ಲಿ ಅಡಕವಾಗಿರುವ ಋಷಿಗಳ ಅನುಭವದ ಸಾರವನ್ನು ತಾವೂ ಗ್ರಹಿಸಿ ಅದನ್ನು ಕನ ಡದಲ್ಲಿ ಅಭಿವ್ಯಕ್ತಿಪಡಿಸುವಲ್ಲಿ ಹೊಸ ಮೆರುಗನ್ನಿತ್ತಿರುವರು ಇದನ್ನು ಒಂದೆರಡು ಸರಳವಾದ ಉದಾಹರಣೆಗಳಿಂದ ಮನನಮಾಡಿಕೊಳ್ಳಬಹುದು ಇಡೀ ಪ್ರಪಂಚ ಪರಮಾತ್ಮನ ಅಧೀನವೆಂದೂ ಇಲ್ಲಿನ ಗ್ರಹ ತಾರೆಗಳು ಆತನ ಆಜ್ಞೆಗನುಸಾರವಾಗ ವರ್ತಿಸುವವೆಂದೂ ಉಪನಿಷತ್ತಿನಲ್ಲಿ ಮೇಲಿಂದ ಮೇಲೆ ಹೇಳಿದೆ ಅಂಥವುಗಳಲ್ಲಿ ಕಠೋಪನಿಷತ್ತಿನ ಒಂದು ಹೇಳಿಕೆ ಹೀಗಿದೆ

> ಭಯಾದಸ್ಯಾಗ್ನಿಸ್ತಪತಿ ಭಯಾತ್ತಪತಿ ಸೂರ್ಯಃ
> ಭಯಾದಿಂದ್ರಶ್ಚ ವಾಯುಶ್ಚ ಮೃತ್ಯುರ್ಧಾವತಿ ಪಂಚಮಃ
>
> (ಅ ॥ ವಲ್ಲೀ ॥ ಪದ್ಯ 2)

ಈ ಮೇಲ್ಕಂಡ ಅಭಿಪ್ರಾಯವನು ಪುರಂದರದಾಸರು ತಮ್ಮ ಒಡೆಯ ಸುಳಾದಿ ಯಲ್ಲಿ ಬಹಳ ವ ನೋಜ್ಞವಾಗಿ ವಿಶದಪಡಿಸಿರ ವರು

> ಚಂದಿರಗೊಂದು ಕ್ಷಣ ನಿಂದಿರಲಿಕ್ಕಂಬಿಲ್ಲ
> ಇಂದ್ರಾದಿಗಳಿಗೆ ಕುಳ್ಳಿರಲಿಕ್ಕೊತ್ತಿಲ್ಲ
> ಒಂದು ಕ್ಷಣವಾದರೂ ಸೂರ್ಯಾದಿಗಳಗೆ
> ನಿಂದು ತಾರಿಸಿಕೊಳ್ಳಲು ಹೊತ್ತಿಲ್ಲ ಪು
> ರಂದರವಿಠಲರಾಯ ಗಟ್ಟರಸು ಕಾಣಿರೋ
> ಕೃಷ್ಣರಾಯನ ಮನೆಯ ಭಜಕರಾವು
> ವಿದ್ಯಾವಂತರ ವು ಉತ್ತಮಾಂಗನ ತೆತ್ತಿಗರಾವು
> ಪುರಂದರ ವಿಠಲರಾಯನ ಪೊಗಳುವರಾವು
> ಧರೆ ಅಂಜುತಲಿದೆ ಗಿರಿ ಅಂಜುತಲಿದೆ
> ಸರಿತ್ಸಮ ದ್ರುಗಳಂಜಿ ಬೆಚ್ಚಾಗುತ್ತಿವೆ
> ಮರುತ ಪಾವಕ ಅಂಜಿ ಚರಿಸಿ ದಹಿಸುತಿವೆ
> ಮರ ಬಳ್ಳಿಗಳುಫಲ ವೀವುತಲಿವೆ
> ಪುರಂದರ ವಿಠಲ ನೀನೆಂಥ ಅರಸೋ !

ಇಲ್ಲಿ ಕಂಡುಬರುವ ಪುರಂದರದಾಸರ ಕನ್ನಡ ಶೈಲಿಯ ಸರಣಿ ನಮ್ಮನ್ನು ಬೆರಗಾಗಿಸದೆ ಇರದು

ಭಗವಂತನ ವಿರಾಡ್ರೂಪವನ್ನು ಮನಗಂಡು ಅದನು ಚಿತ್ರಿಸುವ ಆನಂದದ ಸಂವಿಧಾನವೂ ಹೀಗೇ ಹೃದಯ ಂಗಮವಾಗಿದೆ

ನಿನ್ನ ಬೊಮ್ಮ ಮೂರುತಿಗೆ ನಮೋ ನಮೋ
ನಿನ್ನ ರುದ್ರಮೂರ ತಿಗೆ ನಮೋ ನಮೋ
ನಿನ್ನ ಚಂದ್ರ ಮೂರ ತಿಗೆ ನಮೋ ನಮೋ
ನಿನ ಸ್ಥಾ ವರ ಮ ೂರುತಿಗೆ ನಮೋ ನಮೋ
ಪುರಂದರವಿಠಲ ನಿನ್ನ ವಿಶ್ವ ಮೂರುತಿಗೆ ನಮೋ ನಮೋ

ಆನಂದಂ ಬ್ರಹ್ಮೇತಿ ವ್ಯಜಾನಾತ್ ॥ ಆನಂದಾದ್ಧ್ಯೇವ ಖಲ್ವಿಮಾನಿ ಭೂತಾನಿ ಜಾಯಂತೇ॥ ಆನಂದೇನ ಜಾತಾನಿ ಜೀವಂತಿ॥ ಆನಂದಂ ಪ್ರಯಂತ್ಯಭಿಸಂ ವಿಶಂತೀತಿ ಎಂಬ ಉಪನಿಷದ್ವಾಕ್ಯಗಳನ್ನು ಗ್ರಹಿಸಿದವರಿಗೆ ಪರಬ್ರಹ್ಮನು ಹೀಗೆ ಪರ ಮಾನಂದಸ್ವರೂಪಿ ಎಂಬ ದು ಅನುಭವವಾಗದಿರದು ಈ ಆನಂದದ ಪ್ರತಿ ಸ್ಪಂದನ ಪುರಂದರದಾಸರ ಸುಳಾದಿಯೊಂದರಲ್ಲಿ ಹೇಗೆ ಹೊರಹೊಮ್ಮಿದೆಯೆನ್ನುವುದನ್ನು ಒಂದೇ ಒಂದು ನ ಡಿಯನ್ನು ನೊ ಡಿ ನಲಿಯಬಹುದು

ಆ ಪಾದ ಆನಂದ ಆ ನಖ ಆನಂದ
ಆ ಜಾನು ಜಂಘೆ ಆನಂದಮಯ ಮಯ್ಯ
ಆ ಊರು ಆನಂದ ಆ ಕಟಿ ಆನಂದ
ಆ ಉರ ಆನಂದ ಆ ಭುಜ ಆನಂದ
ಆ ಕಂಠ ಆ ಮುಖ ಆನಂದವ ಯುವಯ್ಯ
ಆ ಶಿರೋರುಹಗಳಂ ಆನಂದಮಯುಮಯ್ಯ
ಆ ಸರ್ವಾಂಗದ ಅವಯುವಗಳಲ್ಲಿ
ಆನಂದವ ಯುವಯ್ಯ ಪುರಂದರ ವಿಠಲ

ಪುರಂದರದಾಸರ ಪರಮಾನಂದ ಹಂತಹಂತವಾಗಿ ಉಕ್ಕಿ ಹೀಗೆ ತುಂಬಿ ತುಳುಕ ವುದನ್ನು ಕೇಳಿದೊಡನೆಯೇ ಮೈ ಪುಳಕಿತವಾಗುವುದು

ಈ ಒಗೆಯ ದ ಕ ತಿಗಳನು ಓದುತ್ತಿದ್ದರೆ ಪುರ ದರದಾಸರು ತಮ್ಮ ಭಕ್ತಿಯು ತುತ್ತ ತುದಿಯ ನ್ನು ಮುಟಿ ದಾಗ ಅವರು ಆಡುವಮಾತುಗಳ ಮೂಲಕ ಹೇಗೆ ದಾರ್ಶನಿಕ ದ ಷ್ಟಿಯುಳ್ಳವರೆನ್ನುವುದು ವಿದಿತವಾಗುತ್ತದೆ ಅವರ ಆಧ್ಯಾತ್ಮಿಕ ಕೃತಿಗಳನ್ನು ವಿಶ್ಲೇಷಿಸುವಲ್ಲಿ ಅವು ಯಾವ ಆರ್ಷ್ಯವಾಣಿಯು ಹಿನ್ನೆಲೆಯುಲ್ಲಿ ರಚನೆ ಯಾಗಿರಬಹ ದು ಎನ್ನುವುದನ್ನು ತಿಳಿಯಬೇಕಾಗುತ್ತದೆ ಇದೇ ಧಾಟಿಯಲ್ಲಿ ಅವರ ರಚನೆಗಳಲ್ಲಿ ರಾಮಾಯಣ ಭಾರತ ಭಾಗವತ ಮೊದಲಾದ ಧಾರ್ಮಿಕ ಗ್ರಂಥ ಗಳ ಸಾರಸರ್ವಸ್ವವೇ ಹಾಸುಹೊಕ್ಕಾಗಿ ಹೆಣೆದುಕೊಂಡು ಬರುತ್ತವೆ ಪುರಂದರ ದಾಸರ ಪಾರಮಾರ್ಥಿಕದೃಷ್ಟಿಯ ಈ ವೈಶಿಷ್ಟ್ಯವನ್ನು ಮನಗಂಡ ಶ್ರೀವ್ಯಾಸರಾಯ ರು ಅವರ ಒಟ್ಟು ಕೃತಿಗಳನು ಪುರಂದರೋಪನಿಷತ್ತು ಎಂದು ಕರೆದು ಗೌರವಿಸಿದ ರೆಂಬ ಪ್ರತೀತಿ ಉಚಿತವೆನ್ನಿಸುತ್ತದೆ

## ಸಾಹಿತ್ಯಿಕ ಮೌಲ್ಯ

ಈ ರಚನೆಗಳು ತಮ್ಮಲ್ಲಿನ ಆತ್ಮೀಯ ತೆಯಿಂದ ಸ್ವಾನುಭವ ಪ್ರಾಮಾಣ್ಯ ದಿಂದ ಹೃದಯಾ ಹ್ಲಾದಕಾರಿಯಾದ ದರಿಂದ ಸಾಹಿತ್ಯವ ಗಿ ಪರಿಗಣಿತ ವಾಗಿವೆ ಯಾವ ಸಂಶರೇ ಆಗಲಿ ತಾವು ನಿಂತಲ್ಲಿಯೆ ತಮ್ಮ ಆನಂದವನು ಅಭಿವ್ಯಕ್ತಿ ಪಡಿಸುವುದರಿಂದ, ಅವರ ರಚನೆಗಳು ಆತ್ಮಗೀತಗಳೂ ಹೌದು ಆಶುಕವಿತೆ ಗಳೂ ಹೌದು ರಸಾರ್ದ್ರ ಚಿತ್ತದಿಂದ ಹೊರ ಹೊಮ್ಮಿದ ನುಡಿಗಳು ಹ ದಯವನ್ನು ಮುಟ್ಟುವಂತಿರ ತ್ತವೆ ಪುರಂದರದಾಸರ ದರೋ ಪರಮ ವೈಷ್ಣವಭಕ್ತರು ಅವರ ಕೃತಿಸಮುದಾಯವನು ಅಧ್ಯಯನ ಮಾಡುವಲ್ಲಿ ನವವಿಧಭಕ್ತಿ ಮಾರ್ಗಗಳ ಹಿನ್ನೆಲೆ ಯಲ್ಲಾಗಲಿ ಪಂಚವಿಧ ಭಾವಗಳ ಪ್ರಕಾರಗಳ ಮೂಲಕವ ಗಲಿ ಪೃಥಕ್ಕರಿಸಿದರೆ ಅವುಗಳ ಮೌಲ್ಯವೇನು ಎನು ವುದು ಮನವರಿಕೆಯಾಗ ತ್ತದೆ ಭಕ್ತ ವ ತ್ತು ಭಗವಂತನ ಸಂಬಂಧವನ್ನು ಸುಲಭವಾಗಿ ಸ್ಪಷ್ಟವಾಗಿ ಗ್ರಹಿಸಲು ಪಂಚವಿಧ ಭಾವಗಳಾದ ಶಾಂತ ದಾಸ್ಯ ಸಖ್ಯ ಮಧ ರ ವ ತ್ತು ವಾತ್ಸಲ್ಯಗಳು ಬಹಳ ನೆರವಾಗುತ್ತವೆ ಒಂದು ರೀತಿಯ ಲ್ಲಿ ಚೈತನ್ಯ ಪಂಥದವರ ದೃಷ್ಟಿಯಿಂದ ಹೇಳುವುದಾದರೆ ಈ ಒಂದೊಂದು ಭ ವವೂ ಸ ಷ್ಟಿಗೊಂಡು ಅವು ರಸದ ನೆಲೆಯನೇ ಮುಟ್ಟಬಲ್ಲವು ಪ್ರಕೃತದಲ್ಲಿ ಈ ತತ್ತ್ವದ ಪಾರಿಭಾಷಿಕ ಸಂಗತಿಗಳ ಸರಣಿಯ ವಿವರಣಕ್ಕೆ ಹೋಗದೆ ಸಾಹಿತ್ಯದ ರಸಾಸ್ವಾದನೆಯನ್ನು ಉಂಟುಮಾಡುವ ಕೆಲವುಕೃತಿಗಳನು ಮಾತ್ರ ಇಲ್ಲಿ ಪರಿಶೀಲಿ ಸಿದೆ

ಅವರ ಸಮಗ್ರ ಜೀವನದಲ್ಲಿನ ಹರಿದಾಸ್ಯದ ಅನುಸಂಧಾನವೇ ದಾಸ್ಯಭಾವದ ವಿವಿಧ ಹಂತಗಳಿಗೆ ಪ್ರಮಾಣದಂತಿವೆ ಅವರ ಈ ಆರಾಧನ ಕ್ರಮದಲ್ಲಿ ಸರ್ವಜನಾ ದರಣೀಯ ವಾದ ವೆಂದರೆ ಒಂದು ಅವರ ಸಖ್ಯಭಾವ ಇನೊ ಂದು ವಾತ್ಸಲ್ಯ ಭಾವ

ಬಹಳ ಕಷ್ಟ ಪಟ್ಟು ತಮ್ಮ ಒಡೆಯನ ಅನುಗ್ರಹವನ್ನು ಸಾಧಿಸಿದ ಅವರು ಭಗವಂತನೊಂದಿಗೆ ಎಷ್ಟು ಸಲಿಗೆಯಿಂದ ವರ್ತಿಸಬಲ್ಲರೆನ್ನುವುದನ್ನುಕಂಡರೆ ಅವರ ಸಖ್ಯಭಾವದಸೊಗಸೇನೆನ್ನುವುದು ಅನುಭವವಾಗುತ್ತದೆ ನೀನ್ಯಾಕೊನಿನ್ನಹಂಗ್ಯಾಕೊ ನಿನ್ನ ನಾಮದ ಬಲವೊಂದಿದ್ದರೆ ಸಾಕೋ ಎಂಬ ಧೋರಣೆಯನ್ನು ವ ನಗಂಡರೆ ಅವರ ಸಲಿಗೆಯ ಸ್ವರೂಪ ಎಷ್ಟು ನಿಕಟವಾದುದು ಎನ್ನಿಸುತ್ತದೆ ಪರಮಾತ್ಮನನ್ನು ಆಪ್ತ ವಿ ತ್ರನೆಂದು ಭಾವಿಸಿ ಎನಗೂ ಆಣೆ ರಂಗ ನಿನಗೂ ಆಣೆ ಎನಗೂ ನಿನಗೂ ಇಬ್ಬರಿಗೂ ಭಕ್ತರಾಣೆ ಎಂಬ ಸವಾಲಿನ ಸೊಗಸು ಹೇಳತೀರದು ಇಡೀ ಕೃತಿಯಲ್ಲಿ ಮಿಡಿಯುವ ಈ ಸ್ನೇಹದ ಸವಿ ಅನ್ಯಾದೃಶವಾದುದು ದೇವರೊಂದಿಗೆ ಅವರು ಮಾಡಿರುವ ತರ್ಕಸರಣಿಯೂ ಇಷ್ಟೇ ಆಪ್ಯಾಯಮಾನವಾದುದು

ತಾಯಿ ಗೋಪಿಯಂತೆ ಒರಳನೆಳಸಲಿಲ್ಲ
ವಾಲಿಯಂತೆ ಎದುರ ವಾದಿಸಲಿಲ್ಲ

ಭೃಗುಮುಂನಿಯಂತೆ ನಿನ್ನ ಎದೆಯಂನೊದೆಯಲಿಲ್ಲ
ಭಿ ಷ್ಮನಂತೆ ನಿನ್ನ ಹಣೆಯ ನೊಡೆಯಲಿಲ್ಲ
ಕೊಂಕಣಿ ರೆವ್ಮಗೆ ಕೊಡತಿ ವ ದ್ದಂಬಂತೆ
ಅವರೆ ಮುದ್ದು ನಿನಗೆ ಪುರಂದರವಿಠಲ

ಮೇಲೆ ಹೇಳಿದ ಪ್ರತಿಯೊಬ್ಬರೂ ದೈವಭಕ್ತರಾಗಿದ್ದುದರಿಂದ ಅವರ ತೋರ್ಪ ಅಂತರ್ಯವನ್ನು ಅರಿತ ಭಗವಂತನಿಗೆ ಅವರ ಮೇಲೆ ಅಭಿಮಾನವೇ ಹೊರತು ಆಗ್ರಹವೆಂದಿಗೂ ಇಲ್ಲ ವಾಲಿಯ ಚರ್ಯೆಗಾಗಿ ಶ್ರೀರಾಮನು ಕುಪಿತನಾದರೂ ಅವನ ಅನಂತರ ಅಂಗದನಿಗೆ ಪಟ್ಟಕಟ್ಟುವುದನ್ನು ಕಂಡರೆ ದೇವರ ದಯೆ ಎಷ್ಟು ಉದಾತ್ತವಾದುದು ಎನುವುದು ವಿದಿತವಾಗ ತ್ತದೆ ಭೃಗು ಮತ್ತು ಭೀಷ್ಮರು ಸಾಂದರ್ಭಿಕವಾಗಿ ಸಿಟ್ಟುಗೊಂಡವರಂತೆ ಕಂಡು ಬಂದರೂ ಆಯಾ ಘಟನೆಯ ಅಂತ್ಯದಲ್ಲಿ ತೋರಿಬರುವ ಪ್ರಸನ್ನತೆಯನ್ನು ಮರೆಯುವಂತಿಲ್ಲ

ಸಖ್ಯಭಾವದ ಸರಣಿಯ ಲ್ಲಿಯೇ ತಮ್ಮ ಸ್ವಾಮಿ ಯ ಸರ್ವೋತ್ತಮತ್ವವನೂ ಅಸಾಧ್ಯಶಕ್ತತ್ವವನ್ನೂ ಸಾಧಿಸಿರುವ ಈ ಕೆಳಗಿನ ಉಗಾಭೋಗವನ್ನು ಪುನಃ ಪುನಃ ಪಠಿಸುವಂತಿದೆ

ನಿನ ಂತ ಸ್ವಾಮಿ ಎನಗ ಂಟು ನಿನಗಿಲ್ಲ
ನಿನ್ನಂಥ ತಂದೆ ಎನಗುಂಟು ನಿನಗಿಲ್ಲ
ನೀನೆ ಪರದೇಶಿ ನಾನೆ ಸ್ವದೇಶಿ
ನಿನ್ನರಸಿ ಲಕುಮಿ ಎನ್ನ ತಾಯಿ
ನಿನ್ನ ತಾಯ ತೋರೋ ಪುರಂದರವಿಠಲ

ನಮ್ಮ ಹರಿದಾಸರಿಗೆಲ್ಲ ಬಾಲಗೋಪಾಲನೆಂದರೆ ಬಹಳ ಪ್ರಿಯ ಆತನ ಆಟ ಪಾಠ ತುಂಟಾಟಗಳನ್ನು ವರ್ಣಿಸುವುದರಲ್ಲಿ ಪ್ರತಿಯೊಬ್ಬರಿಗೂ ಆಸಕ್ತಿ ಆದರೆ ಈ ವಾತ್ಸಲ್ಯಭಾವವನು ಚಿತ್ರಿಸುವಲ್ಲಿ ಪುರಂದರದಾಸರನ್ನು ಯಾರೂ ಮೀರಿಸಲಾರರು ಎನ್ನಬಹುದು ದಾಸರು ಆ ಕಾರಣಿಕ ಶಿಶುವಿನ ಬೇರೆರೊಂದ ಚಲನವಲನವನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸಿರುತ್ತಾರೆ ಒಮ್ಮೆ ಆ ಪೋರನನ್ನು ನೇರವಾಗಿ ಚಿತ್ರಿಸಿದರೆ ಇನೊಮ್ಮೆ ಗೊ ಪಿಯ ಪಾತ್ರದ ಮಾಧ್ಯಮ ದ ಮ ೂಲಕ ನಮ್ಮ ಹೃದಯವನ್ನೇ ಸೂರೆಗೊಳ್ಳುತ್ತಾರೆ

"ಕೂಸನು ಕಂಡಿರಾ ಜ್ಞಾನಿಗಳೆಲ್ಲ ಕೂಸನು ಕಂಡಿರಾ ಸಾಸಿರನಾಮದ ಶತ ಕೋಟಿ ತೇಜದ ಸೂಸುವ ಸುಖಮಯ ಜ್ಞಾನದ ಕೂಸು ಎಂದು ಭಗವಂತನ ಶಿಶು ರೂಪವನ್ನೂ ಆತನ ಅಲೌಕಿಕ ಗುಣವನೂ ಏಕಕಾಲದಲ್ಲಿಯೇ ಪ್ರಸ್ತಾಪಿಸ ವರು ಆ ಮುದ್ದು ಗೋಪಾಲನನ್ನು ಎತ್ತಿ ಆಡಿಸುವ ಪುಣ್ಯವನ್ನು ಪಡೆದಿರುವ ಯ ಶೋದೆ ಯ ನ್ನು ಕಂಡು, ಒಂದು ಕಿ ರ್ತನೆಯಲ್ಲಿ ಗೊ ಪಿಯ ಭಾಗ್ಯವಿದು ಶ್ರೀಪತಿ ತಾ ಶಿಶು

ರೂಪಿನಲಿರುವುದು ಎಂದು ಹೊಗಳಿ ಹಿಗ್ಗಿದರೆ ಇನೊಂದು ರಚನೆಯಲ್ಲಿ ಜಗ
ದೋದ್ಧಾರನ ಆಡಿಸಿದಳೆಶೋದೆ ಎಂದು ಅದೇ ಸಂಗತಿಯನು ಬೇರೊಂದು ಬಗೆ
ಯಾಗಿ ಹೇಳಿ ಆತನ ಅತಿಶಯವನ್ನೆಲ್ಲ ಪಂಕ್ತಿ ಪಂಕ್ತಿಯಲ್ಲಿಯೂ ಹೊಗಳಿ ತಣಿಸು
ವರು ಆ ಅಪ್ರಾಕೃತ ಮಗುವನು ಪಡೆದ ಯಶೋದೆಗೆ ಎಷ್ಟು ಆನಂದವೋ ಅಷ್ಟೇ
ಆತಂಕವೂ ಕಾಡತ್ತದೆ ಆ ಮಗುವಿನ ವರ್ತನೆಯಲ್ಲಿ ಅಲ್ಪ ಸ್ವಲ್ಪ ಬದಲಾವಣೆ
ಕಂಡು ಬಂದರೂ ಸರಿಯೇ ಒಡನೆಯೇ ತನ್ನವರೊಡನೆ ಹ್ಯಾಗೆ ಮಾಡಲಿ ಈ
ಮಗುವಿಗೇನಾಯಿತೋ ಇದರಾಗಮ ಬಲ್ಲವರು ತಿಳಿದು ಹೇಳಿ ಎಂದು ಕೋರಿ ಕಳ
ವಳಪಡುವಳು ಪೊಗಾದಿರೆಲೊ ರಂಗ ಬಾಗಿಲಿಂದಾಚೆಗೆ ಭಾಗವತರು ಕಂಡರೆ
ಕೊಂಡೊಯ್ದರೋ ಎಂದು ಬಗೆಬಗೆಯಾಗಿ ಬೆಡಿಕೊ ಳ್ಳುವಳು ತುಂಟ ಕೃಷ್ಣ
ಅಷ್ಟು ಸುಲಭವಾಗಿ ತಾಯಿಯ ಮಾತಿಗೆ ಕಿವಿಗೊಡುವನಲ್ಲ ಗೊಪ ಗೊಪಿಯ
ರೆಲ್ಲ ಅವನ ಒಡನಾಡಿಗಳು ಗೊಕುಲವೆಲ್ಲ ಅವನ ಪಾಲೇ। ಎಷ್ಟು ಬುದ್ಧಿ ಮಾತನ್ನು
ಹೇಳಿದರೂ ಕೇಳದಿರಲು ಗುಮ್ಮನನ್ನು ಕರೆಯುವೆನೆಂದೋ ಬೂಚಿ ಬುದಿದೆಯೆಂದೋ
ಬೆದರಿಸುವಳು ಕೃಷ್ಣ ಒಂದೆರಡು ಬಾರಿ ಹೆದರಿದರೂ ಆ ಬಳಿಕ ಅದಕ್ಕೂ ಸಗ್ಗು
ವವನಲ್ಲ ಈ ಮಧ್ಯೆ ಕೆಲವು ಗೋಪಿಯರು ಗುಂಪು ಕಟ್ಟಿಕೊಂಡು ಬಂದು ನಿನ್ನ
ಮಗನ ಬಾಧೆ ಬಹಳವಾಗಿದೆ ನಾವು ಇನ್ನಷ್ಟು ತಾಳುವೆವೆ ಗೋಪಮ್ಮ ಎಂದು
ಮಗನ ಮೇಲೆ ದೂರಿನ ಮಳೆಯನ್ನೇ ಕರೆದರೆ ಅವಳಿಗೆ ಕೇಳಿ ಸಹಿಸುವುದೇ ಕಷ್ಟ
ವಾಗುತ್ತದೆ ಅವರ ಎದರಿನಲ್ಲಿ ತನ ಮಗನನ್ನೇ ವಹಿಸಿಕೊಂಡು ದೂರು ಮಾಡ್ಯ
ವರ ನೆ ರಂಗಯ್ಯನ ದೂರು ಮಾಡುವರೆ ನೆ ಎಂದು ಪ್ರತ್ಯುತ್ತರವೀಯುವಳು
ಆದರೂ ಮನೆಗೆ ಬಂದ ಗೊವಿಂದನನ್ನು ಕಂಡು ಹೊರಗೋಗಿ ಆಡದಿರು ಹರಿಯೇ
ಎನ್ನ ದೊರೆಯೇ, ನೆರೆ ಹೊರೆಯವರು ಕಂಡರೆ ದೂರುವುದರಿಯೆ ಎಂದು ಹಿತೋಕ್ತಿ
ಗಳನ್ನು ಹೇಳುವಳು ಒಮ್ಮೊಮ್ಮೆ ಯಾಕಾದರೂ ಬೆಳಗಾಯಿತೋ ಎಂದು ಸೊಂದು
ಕೊಳ್ಳುವ ಮಾತೃಸ್ವಭಾವವನ್ನು ಪುರಂದರದಾಸರು ಮರೆತಿಲ್ಲ ಏನು ಮಾಡಲೋ
ಮಗನೆ ಯಾಕೆ ಬೆಳಗಾಯಿತೊ ಏನು ಮಾಡಲೊ ಕೃಷ್ಣಯ್ಯ ? ಏನು ಮಾಡಲಿ,
ಇನ್ನು ಮಾನಿನಿಯರು ಎನ್ನ ಮಾನವ ಕಳೆಯುವರೊ ರಂಗಯ್ಯ ಎಂದು ಚಿಂತಿಸ
ತೊಡಗುವಳು ಆದರೇನು ? ಗೋಕುಲದ ಗೋಪಿಯರೆಲ್ಲ ಗೋವಿಂದನನ್ನು ಒಂದೇ
ಸಮನೆ ನಿಂದಿಸುವವರಲ್ಲ ಅವನನು ಕಂಡು ಆನಂದಿಸುವವರೂ ಉಂಟು ತಾರ
ಮಯ್ಯ ಯದುಕುಲವಾರಿಧಿ ಚಂದ್ರಮನ, ಮಾರಜನಕನ ಮೋಹನಾಂಗನ ಸೇರಿ
ಸ ಖಿಸಲು ಹಾರೈಸಿ ಬಂದೆವು ಎಂದು ಕೃಷ್ಣನನು ಹಡಕಿಕೊಂಡು ಬರುವರು
ಅವನ ಸುತ್ತಲೂ ಬಳಸಿ ನಿಂತ ಆ ಹೆಣ್ಣುಮಕ್ಕಳು ಎಷ್ಟು ಆನಂದ ಪಡುವರೆನ್ನು
ವುದನ್ನು ಹರಿದಾಸರು ಬಹಳ ಮನೋಜ್ಞವಾಗಿ ಚಿತ್ರಿಸಿರುವರು

> ಅಂಗನೆಯರೆಲ್ಲ ನೆರೆದು ಚಪ್ಪಾಳಿಕ್ಕುತ್ತ ದಿವ್ಯ
> ಮಂಗಳ ನಾಮವ ಪಾಡಿ ರಂಗನ ಕುಣಿಸುವರು ॥ಪ॥

ಪ ಡಿ, ವ ಲ್ಹಾರಿ ಭೈರವಿ ಸ ರಂಗಿ, ದೇಶಿ
ಗ ಂಡಕ್ರಿಯ ಗ ಜ್ಜರಿ ಕಲ್ಯಾಣಿ ರ ಗದಿ
ತಂಡತಂಡದಲಿ ನೆರೆದು ರಂಗನ ಉಡಿಯ ಘಂಟೆ
ಘಣ್ ಘಣ್ ಘಣಿರೆಂದು ಹಿಡಿದು ಕುಣಿಸುವರು

ಗೋಪಿಯರ ಈ ಉತ್ಸಾಹವನ್ನು ಕಂಡ ಯಾರಿಗಾದರೂ ಕೃಷ್ಣನ ಕಳ್ಳತನ, ತುಂಟ ತನಗಳೆಲ್ಲ ತಟ್ಟನೆ ಮರೆತುಹೋಗುವುದು

ಅವನು ಕ್ಷಣಕಾಲ ಕಣ್ಣಿಗೆ ಕಾಣದೆ ಹೋದರೆ ಯಶೋದೆ ಮೊದಲ್ಗೊಂಡು ಎಲ್ಲರಿಗೂ ಆತಂಕ ಅವನನು ಹುಡುಕಲು ಒಟ್ಟುಗೂಡಿ ಹೊರಡುವರು

ಅಮ್ಮಾ ನಿಮ್ಮ ಮನೆಗಳಲ್ಲಿ ನಮ್ಮ ರಂಗನ ಕಾಣೆರೇನೆ ॥ ಪ ॥
ಕ ಶಿ ಪೀತಾಂಬರ ಕೈಯಲ್ಲಿ ಕೊಳಲು
ಪೂಸಿದ ಶ್ರೀಗಂಧ ಮೈಯೊಳಗಮ್ಮ
ಲೇಸಾಗಿ ತುಲಸಿಯ ಮಾಲೆಯ ಹಾಕಿದ
ವಾಸುದೇವನು ಬಂದ ಕಾಣಿರೇನೆ
ಕರದಲ್ಲಿ ಕಂಕಣ ಬೆರಳಲ್ಲಿ ಉಂಗುರ
ಕೊರಳಲ್ಲಿ ಹಾಕಿದ ಹುಲಿಯುಗುರಮ್ಮ
ಅರಳೆಲೆ ಕನಕ ಕುಂಡಲ ಕಾಲಲಂದಿಗೆ
ಉರಗಶಯನ ಬಂದ ಕಾಣೆರೇನೆ
ಕಾಲಲಿ ಕಿರುಗೆಜ್ಜೆ ನೀಲದ ಬಾವುಲಿ
ನೀಲವರ್ಣನು ನಾಟ್ಯವಾಡುತಲಿ
ಮೇಲಾಗಿ ಬಾಯಲ್ಲಿ ಜಗವನ್ನು ತೋರಿದ
ಮೂಲೋಕದೊಡೆಯನ ಕಾಣೆರೇನೆ

ಎಂದು ಶ್ರೀಕೃಷ್ಣನ ಚಹರೆಗಳನ್ನೆಲ್ಲ ಹೇಳಿಕೊಂಡು ಗೋಕುಲವನೆ ಲ್ಲ ಸುತ್ತಾಡುವರು,

ಗೋಪಿಯ ರ ಹೃದಯದಾನ ಭವವನ್ನೇ ಇಷ್ಟು ಗಾಢವಾಗಿ ವರ್ಣಿಸಿದ ಪುರಂದರದಾಸರು ತಮ್ಮಲ್ಲಿನ ಅಂತಃಕರಣವನ್ನು ತಿಳಿಸುವಲ್ಲಿ ಇನ್ನೂ ಮಿಗಿಲಾಗಿ ಹರ್ಷಪುಲಕಿತರಾಗುತ್ತಾರೆ

ಯಾದವ ನೀ ಬಾ ಯದ ಕುಲ ನಂದನ
ಮಾಧವ ಮಧುಸೂದನ ಬ ರೊ
ಸೋದರಮಾವನ ಮಥ ರೆಲಿ ಮಡುಹಿದ‍ಯ
ಶೋದೆನಂದನ ನೀ ಬಾರೋ

ಎಂದು ಕರೆಯುವಲ್ಲಿ ತ ವು ನೋಡಬಯಸುವ ಬಾಲಕೃಷ್ಣನ ವೈಭವವನ್ನು ಬಹಳ ಚಿತ್ತಾಕರ್ಷಕವಾಗಿ ಚಿತ್ರಿಸಿರುವರು ಕಾಲಂದಿಗೆ ಘಲುಘಲುರೆನುತಲಿ ರಘುಣ

ರಕ್ಷಣ ವೇಣುನಾದದಲಿ ಚೆಣಿಕೊಲ್ ಚೆಂಡು ಬುಗುರಿಯನಾಡುತ ಸಣ್ಣಸಣ್ಣ ಗೋವಳರೊಡಗೂಡಿ ಎಂದು ಹೊಗಳುವರು ಹೀಗೆಯೆ ಬೇರೊಂದು ಕೀರ್ತನೆಯಲ್ಲಿ ಓಡಿ ಬಾರೈ ಶ್ರೀವೈಕುಂಠಪತಿ ನಿನ್ನ ತೋರುವೆ ಮನದಣಿಯೇ ಎಂದು ಹೃದಯ ಹಂಬ ವನ್ನು ತೆರೆದಿಕೊಂಡು ಆತನ ಆಗಮನವನ್ನೆ ನಿರೀಕ್ಷಿಸಿ, ನೋಡಿ ಮದ್ದಾಡಿ ಮಾತಾಡಿ ಸಂತೊಷಗೂಡಿ ಪಾಡಿ ಪೊಗಳುವೆನು ಪರಮ ಪುರುಷ ಹರಿ ಎಂದು ತಮ್ಮ ಮನದಾಸೆಯನ್ನು ವ್ಯಕ್ತಪಡಿಸುವರು ಕೆಂದಾವರೆ ಪೊಲ್ವ ಪದಗಳಿಂದ ರಂಗ ಧಿಂಧಿಮಿ ಕೆಂದು ಕುಣಿಯುತಲಿ ಅಂದಿಗೆ ಕಿರಗೆಜ್ಜೆ ಘುಲ ಘುಲ ರೆನ್ನುತ ಚೆಂದದಿ ಪೀತಾಂಬರ ನಲಿದಾಡುತ ಬರೆಂದು ಬಾಯಿಬಿಟ್ಟು ಕರೆಯುವರು

ಶ್ರೀಕೃಷ್ಣನು ಕೊಳಲೂದಿ ಎಲ್ಲರನೂ ಮರುಳು ಮಾಡುವ ವೈಭವವನೂ ಕಾಳಿಂಗನ ಹೆಡೆಯ ಮೇಲೆ ನಿಂತು ನಿರ್ಭಯದಿಂದ ಕುಣಿದಾಡುವ ರೋಮಾಂಚಕದ ಶ್ಯವನ್ನೂ ಪುರಂದರದಾಸರು ಅಸದೃಶವಾಗಿ ನಿರೂಪಿಸಿರುವರು ಈ ಎರಡು ಕೀರ್ತನೆಗಳೂ ನಿಡಿದಾಗಿರುವುದರಿಂದ ಕೆಲವು ಭಾಗಗಳನು ಮಾತ್ರ ಪರಿಶೀಲಿಸಬಹುದು ರಂಗ ಕೊಳಲನೂದಲಾಗಿ ಮಂಗಳೆಮಯವಾಯ್ತು ಧರೆ ಜಗಂಗಳು ಚೈತನ್ಯ ವರೆದು ಅಂಗ ಪರಶವಾದುವು ಎಂದು ಮೊದಲುಮಾಡಿ ಇಡೀ ಪ್ರಕೃತಿಯೇ ಹೇಗೆ ಪರಿವರ್ತಿಸಿತು ಎನುವುದನ್ನು ಚಾಚೂ ಬಿಡದೆ ವಿವರಿಸಿರುವರು ವೇಣುನಾದದ ಪ್ರಭಾವದಿಂದ ತೀಡಿದ ಮಾರುತ ಮಂದಗತಿ ಗೈಯೆ ಬಾಡಿದ ಬರಲು ಫಲಗೊಂಚಲು ಬಿಡೆ ಪಾಡಲೊಲ್ಲವಳಿಕುಲಗಳು ಬಾಡಿದ ಮಾಮರ ಚಿಗುರೊಡೆಯೆ ಎಂಬ ಮಾತುಗಳನ್ನು ಗಮನಿಸಿದರೆ ಪುರಂದರದಾಸರ ಕವಿ ಹೃದಯ ತನಗೆ ತಾನಾಗಿಯೇ ವ್ಯಕ್ತವಾಗುವುದು ಬೀಸಿ ಬರುವ ಗಾಳಿ ತುಸು ನಿಧಾನವಾಗುವುದೂ ಒಣಗಿದ ಕಸ ಕಡ್ಡಿಗಳು ಚಿಗುರುವುದು ತುಂಬಿಗಳು ಝೇಂಕರಿಸದೆ ತೆಪ್ಪನಾಗುವುದೂ ಒಣಗಿದ ಮಾವಿನಗಿಡ ತಳಿರೊಡೆಯುವುದೂ ಅಪೂರ್ವ ಅನುಭವವೇ ಸರಿ! ಮೃಗ ಪಕ್ಷಿಗಳು ಬೆರಗಾಗಿ ಸ್ತಂಭೀಭೂತವಾದರೆ ಯಮುನೆಯು ತಂಬಿ ತುಳುಕಿ ಚೆಲ್ಲಾಡತೊಡಗಿತೆಂಬ ಕಲ್ಪನೆ ಮುರಲೀನಾದದ ಮೋಹಕತೆಯನ್ನು ಮತ್ತಷ್ಟು ಹೆಚ್ಚಿಸುತ್ತದೆ ಗೋಪ ಗೋಪಿಯರು ಪರವಶರಾಗುವುದು ಹಾಗಿರಲಿ ಚಿತ್ತ ಸಂಯಮದಿಂದ ಸಮಾಧಿಸ್ಥರಾಗಿದ್ದ ಸಿದ್ಧ ಮುನಿಜನರು ಎಚ್ಚೆತ್ತು ಪರಸ್ಪರ ಎದುರಾಗಿ ನಿಂತು ಕುಣಿದು ಕುಪ್ಪಳಿಸಿ ಕಣ್ಣೆದುರಿಗಿದ್ದ ದೇವನನ್ನು ಓಲೈಸಿ ಗೆದ್ದರು ಭವ ಸಮುದ್ರವ ಎನ್ನುವ ಚಿತ್ರಣವಂತೂ ಭವ್ಯವೆನಿಸುತ್ತದೆ ಕೊಳಲನಾದ ಕೇಳಿದೊಡನೆಯೇ ಕಿವಿ ನಿಮಿರಿಸಿ ನಿಲ್ಲುವ ಗೋವುಗಳು ತಮ್ಮ ಕೆಚ್ಚಲು ಹಾಲು ತುಂಬಿ ತುಳುಕುತಿದ್ದರೂ ಅತ್ತ ಗಮನ ಹರಿಸಲಿಲ್ಲ ಹಾಲಿಗಾಗಿ ಹತೊರೆಯುವ ಕರುಗಳೂ ಸಹ ತಾವು ತಿನ್ನುತ್ತಿದ್ದ ಗರಿಕೆಯನ್ನೂ ಸಹ ತಿನ್ನದೆ ಸ್ಥಗಿತವಾದವು ಎಂಬ ತನ್ಮಯತೆಯ ನಿರೂಪಣೆ ಬೆರಗಾಗಿಸುವಂತಿದೆ ಬಾಲಕೃಷ್ಣನ ಆ ಚೆಲುವು ನಿಲುವು

ಚಿಲ ಪುಗಳನ್ನು ಕಂಡ ದೇವತೆಗಳೂ ತ ವು ಧನ್ಯರ ದೆವೆಂದು ಎಣಿಸಿ, ಪುಷ್ಪವೃಷ್ಟಿ ಯನ್ನೇ ಕರೆದರೆಂಬ ಸಂಗತಿ ಸೋಜಿಗವಲ್ಲದೆ ವ ತ್ತೇನು ! ಕಟ್ಟಕಡೆಯ ನುಡಿಯಂತೂ ಈ ಕೀರ್ತನೆಗೆ ಕಿರೀಟಪ್ರಾಯ ವ ಗಿದೆ

ಧಾಮುವನಮಾಲೆ ಬರ್ಹಿಭೂಷಿತ
ಸ್ವಾಮಿ ಪುರಂದರವಿಠಲರಾಯನು
ನಾಮಕ್ರಿಯ ಮೇಘರಂಜಿಸಿ ಪಾಡೆ
ಸಾಮವೇದ ನಮೋ ನಮೋ ಎನ್ನೆ

ಈ ಒಟ್ಟು ರಚನೆಯೇ ಎಷ್ಟು ರಸವತ್ತಾಗಿರುವುದೆಂದು ಮನಗಂಡರೆ ಪುರಂದರ ದಾಸರು ಸ್ವಭಾವತಃ ಎಷ್ಟು ಭಾವುಕರಾಗಿದ್ದರೆನ್ನುವುದು ಗೋಚರವಾಗುತ್ತದೆ ಆಧ್ಯಾತ್ಮಿಕ ಚಿಂತನೆಗೆ ಲವಲೇಶವೂ ಕ ಂದು ಬಾರದಂತೆ ತಮ್ಮ ಕಲ್ಪನಾಬಲದಿಂದ ಎಂಥ ಅಪೂರ್ವವಾದ ಕೃತಿಯನ್ನು ರಚಿಸಿರುವರೆನ್ನುವುದು ವೇದ್ಯವಾಗುತ್ತದೆ

ಬಾಲಕೃಷ್ಣನ ಜೀವನದಲ್ಲಿ ಮುರ ಲೀನಾದದ ಸಂಗತಿ ಎಷ್ಟು ಮಧುರವಾದ ಪ್ರಸಂಗವೋ ಆತನು ದುಷ್ಟ ಕಾಳಿಂಗನ ಹೆಡೆಯ ಮೇಲೆ ನಿಂತು ಕುಣಿದ ಸನಿ ವೇಶವೂ ಅಷ್ಟೇ ಅದ್ಭುತವಾದುದು ಪುರಂದರದಾಸರು ಈ ಘಟನೆಯನ್ನು ಪ್ರಸ್ತಾಪಿಸುವ ಮೊದಲಿನಲ್ಲಿಯೇ ಆಡಿದನೋ ರಂಗ ಅದ್ಭುತದಿಂದಲಿ ಕಾಳಿಂಗನ ಫಣೆಯಲಿ ಎಂದು ಹೇಳುವರು ಒಂದು ಕಡೆ ಆತನ ಕ ಣಿತದ ವೈಖರಿ ನೋಡುವವರನ್ನು ದಿಗ್ಭ್ರಮೆಗೊಳಿಸಿದರೆ ಇನ್ನೊಂದು ಕಡೆ ಆತನು ಪಾಡಿವವರಿಗೆ ಬೇಡಿದ ವರ ಗಳ ನೀಡುತಲಿ ದಯಮಾಡುತಲಿ ನಲಿದಾಡುತಲಿ ಬೆಣ್ಣೆ ಬೇಡುತಲಿ ಇದ್ದ ನೆಂಬ ಚಿತ್ರ ಆತನ ಭಕ್ತಿವ ತ್ಸಲ್ಯವೆಷ್ಟನ್ನುವುದನ್ನು ತೋರಿಸ ತ್ತದೆ ಪರ ಮಾತ್ಮನ ಈ ನೃತ್ಯಕ್ಕೆ ತಮ್ಮ ದನಿಗೂಡಿಸುವರಂ ರಂಭೆ ಊರ್ವಶಿ ಮೊದಲಾದ ಅಪ್ಸರ ಕನೆ ಯ ರು ನಾಟ್ಯವನ್ನು ಆಡಲಾರಂಭಿಸುವರು ನಾರದ ತುಂಬುರರು ಗಾನಗೈಯ್ಯುವರು ನಂದಿಯು ಮದ್ದಲೆ ಬಾರಿಸುವನು ಕೃಷ್ಣನ ಈ ನಾಟ್ಯದ ಸೊಗಗು ನಿಮಿಷ ನಿಮಿಷಕ್ಕೂ ಹೆಚ್ಚುತ್ತಿರಲು ಈ ವೃತ್ತಾಂತ್ತವನ್ನು ಕೇಳಿದ ಯ ಶೋದೆ ಗಾಬರಿಗೊಂಡು ಅಲ್ಲಿಗೆ ಓಡಿ ಬಂದು ನೋಡಿದೊಡನೆಯೇ ಬೆಕ್ಕಸ ಬೆರಗಾಗುವಳು ಕೇವಲ ಚಿಣ್ಣನೆಂದು ಭಾವಿಸಿದ್ದ ಆಕೆಗೆ ತನ್ನ ಮಗನು ಸಾಕ್ಷಾತ್ ಪರಮಾತ್ಮನೆಂದು ಅರಿವಾಗುವುದು ಆದರೂ ಉಕ್ಕಿ ಬಂದ ಅಕ್ಕರೆಯಲ್ಲಿ ಶ್ರೀಕೃಷ್ಣನನ್ನು ಬಿಂಕದೊಳಿತ್ತು ಮುದ್ದಾಡ ವಳು ಶ್ರೀಕೃಷ್ಣನಾದರೋ ಕಾಳಿಂಗ ನನ್ನು ಸಂಹರಿಸದೆ ನಾಗಕನ್ನಿಕೆಯರ ಕೋರಿಕೆಯ ಮೇರೆಗೆ ಅವನಿಗೆ ಜೀವದಾನವ ನ್ನಿತ್ತು ಗೋಕುಲದಿಂದ ದೂರವಿರುವಂತೆ ಕಳುಹಿಸುವನು ಪುರಂದರದಾಸರ ಕವಿ ಪ್ರತಿಭೆಗೆ ಇದಕ್ಕಿಂತ ಮಿಗಿಲಾದ ಪ್ರಮಾಣ ಬೇಕೆ ?

ಅವರ ಕೈಯಲ್ಲಿ ಭಕ್ತಿ ಅಕ್ಷರಶಃ ಹೇಗೆ ರಸದ ನೆಲೆಯನ್ನು ಮುಟ್ಟುತ್ತದೆ ಯೆನ್ನುವುದನ್ನು ಇಂಥ ಹಲವಾರು ಸಾಕ್ಷಿಗಳಿಂದ ತಿಳಿಯಬಹುದು ಪುರಂದರ

ದಾಸರಿಗೆ ತಮ್ಮ ಬಾಲಗೋಪಾಲನ ಬಾಲಲೀಲೆಯನ್ನು ವರ್ಣಿಸುವಲ್ಲಿ ಶ್ರೀಮದ್ಭಾಗವತ ಒಂದು ನಿಮಿತ್ತ ಮಾತ್ರವೇ ಹೊರತು ಬಹುಭಾಗ ಅವರ ಕಲ್ಪನೆಗೇ ಸೇರಿದುದು ಕನ್ನಡದ ಪ್ರೌಢಸಾಹಿತ್ಯದಲ್ಲಿಯೂ ಬಾಲಲೀಲೆ ಇಷ್ಟು ನೈಜವಾಗಿ ಕಂಡು ಬರುವುದಿಲ್ಲ ಶ್ರೀಕೃಷ್ಣ ಬಾಲಲೀಲೆಯನ್ನು ವರ್ಣಿಸುವಲ್ಲಿ ಅಗ್ರಗಣ್ಯರೆನ್ನಿಸಿರ ಭಕ್ತ ಸೂರದಾಸರ ರಚನೆಗಳೊಂದಿಗೆ ಹೋಲಿಸಿದರೆ ಪುರಂದರದಾಸರು ತಮ್ಮ ಪ್ರತಿಯೊಂದು ಕೀರ್ತನೆಯಲ್ಲಿಯೂ ಶ್ರೀಕೃಷ್ಣನ ಲೌಕಿಕ ಮತ್ತು ಅಲೌಕಿಕ ಗುಣಗಳನ್ನು ಸಮನ್ವಯಗೊಳಿಸಿರುವ ಸರಣಿ ವಿಶಿಷ್ಟವೆನ್ನಿಸುತ್ತದೆ ಸೂರದಾಸರು ಕೆಲವೆಡೆಗಳಲ್ಲಿ ಬಾಲಗೋಪಾಲನನ್ನು ಕೇವಲ ಲೌಕಿಕ ದೃಷ್ಟಿಯಿಂದಲೇ ವಿವರಿಸಿರುವುದರಿಂದ ಆ ರಚನೆಗಳಲ್ಲಿ ವಿದಿತವಾಗುವ ನೈಜನಿರೂಪಣೆ ಆತ್ಮೀಯವೆನ್ನಿಸುತ್ತದೆ

ಪುರಂದರದಾಸರ ಕವಿ ಸಹಜವಾದ ಹೃದಯವನ್ನು ಅವರ ಕೃತಿಗಳಲ್ಲಿ ಕಂಡು ಬರುವ ಅನಾಯಾಸವಾದ ಅಲಂಕಾರಗಳಿಂದಲೂ ಅನುಭವ ಸಿದ್ಧವಾದ ನಾಣ್ನುಡಿ ಜಾಣ್ನುಡಿಗಳಿಂದಲೂ ಕಾಣಬಹುದು ಕಲ್ಲು ಸಕ್ಕರೆ ಕೊಳ್ಳಿರೋ ನೀವೆಲ್ಲರು ಕಲ್ಲು ಸಕ್ಕರೆ ಕೊಳ್ಳಿರೊ ಕಲ್ಲು ಸಕ್ಕರೆ ಸವಿ ಬಲ್ಲವರೆ ಬಲ್ಲರು ಫುಲ್ಲಲೋಚನ ಶ್ರೀಕೃಷ್ಣ ನಾಮವೆಂಬ ಎಂದು ಮೊದಲಾಗುವ ಕೀರ್ತನೆಯನ್ನು ಆಮೂಲಾಗ್ರವಾಗಿ ಪರಿಶೀಲಿಸಿದರೆ ಕಲ್ಲು ಸಕ್ಕರೆಯ ಶಬ್ದದ ಪ್ರಯೋಗದ ಸ್ವಾರಸ್ಯವನ್ನು ತಿಳಿಯಬಹುದು ಇದೇ ರೀತಿ ಜನಪ್ರಿಯವಾದ ಕೆಲವು ವಸ್ತುಗಳನ್ನು ರೂಪಕವನ್ನಾಗಿ ಬಳಸಿಕೊಂಡಿರುವ ಅವರ ಚಾತುರ್ಯ ಮೆಚ್ಚಬೇಕಾದದ್ದು ಹರಿನಾಮದರಗಿಣಿಯು ಹಾರುತಿದೆ ಜಗದಿ ಪರಮ ಭಾಗವತರು ಬಲೆಯ ಬೀಸುವರು ಎಂಬ ಮತ್ತೊಂದು ಕೀರ್ತನೆಯಲ್ಲಿ ತಾವು ಚಿತ್ರಿಸಿರುವ ಅರಗಿಣಿಯ ಅಪೂರ್ವ ಲಕ್ಷಣಗಳನ್ನು ವಿವರಿಸಿರುವರು ಅದನ್ನು ಕೋಪವೆಂಬ ಮಾರ್ಜಾಲ ಕಂಡರೆ ನುಂಗುವುದು ತಾಪವೆಂಬುವ ಹುಲಿಯು ಕೊಂಡೊಯ್ವುದು ಆದರೆ ಕಾಪಾಡಲದನೊಯ್ದು ಹೃದಯದೊಳಗಿಂಬಿಟ್ಟು ಆಪತ್ತಿಗೊದಗುವುದು ಆ ಮುದ್ದು ಅರಗಿಣಿಯ ಏನು ವಲ್ಲಿ ಹರಿನಾಮ ಸ್ಮರಣೆಗೆ ಇರುವ ಆಪತ್ತುಗಳನ್ನು ಆಸರೆಗಳನ್ನು ಬಹುಮಾರ್ಮಿಕವಾಗಿ ಹೇಳಿರುತ್ತಾರೆ

ಅವರು ಬಳಸಿರುವ ಕೆಲವು ಜಾಣ್ನುಡಿಗಳತ್ತ ಕಣ್ಣು ಹಾಯಿಸಿದರೆ ಅವರ ಲೋಕಾನುಭವ ಎಷ್ಟು ವಿಶಾಲವಾದುದು ಎನ್ನಿಸುತ್ತದೆ ಅಂದಿಗೆ ಅರಳೆಲೆ ಇಟ್ಟರೆ ಕೋಡಗ ಕಂದನಾಗಬಲ್ಲುದೆ ? ಭರದಿಂದ ಶ್ವಾನರ ಬಾಲವ ತಿದ್ದಲು ಸರಳವಾಗಬಲ್ಲುದೆ ಮೋಡಕೆ ಮಯೂರ ಕುಣಿವಂತೆ ಕುಕ್ಕುಟ ನೋಡಿ ಕುಣಿಯ ಬಲ್ಲುದೆ ಊರ ಒಳಗಿನ ಕಳ್ಳ ಅವ ನೆಂಟನೇ ಮಂಡೂಕ ಕೂಗಲದು ಮಂತ್ರವೆಂತೆನಬಹುದೆ ನೆಂಟರಿಗೆ ಸಾಲವನ್ನು ಕೊಡುವಾತ ಮೂರ್ಖ ಮಡದಿ ಹುಟ್ಟಿದ ಮನೆಯೊಳಿರುವವನು ಮೂರ್ಖ ಹೇನು ಬಲ್ಲುದೆ ಮುಡಿದ ಹೂವಿನ

ಪರಿಮಳವ ದುಗ್ಗಾಣಿ ಎಂಬ ದು ದುರ್ಜನಸಂಗ ದುಗ್ಗಾಣಿ ಬಲು ಕೆಟ್ಟದಣ್ಣಾ ರೊಕ್ಕ ಎರಡಕ್ಕು ದುಃಖ ಕಾಣಕ್ಕ ಕೆಟ್ಟು, ನೆಂಟರ ಸೇರುವುದು ಕಠಿಣ ರಮಣನಿಲ್ಲದ ನಾರಿ ಪರರಿಗೆ ಕಣ್ಣಿಗೆ ಮಾರಿ ಬೆಟ್ಟದ ನವಿಲಿಗೆ ಕಣ್ಣೀರು ಬಂದರೆ ಬೇಟೆಗಾರಗೆ ದಯ ಪುಟ್ಟೀತೆ ನರಹರಿಯ ಕಾಣದ ಕಣ್ಣು ನವಿಲುಗರಿಯ ಕಣ್ಣು ಎಂಬ ಈ ವಾಕ್ಯ ಮಾಣಿಕ್ಯ ರಾಶಿಯನು ಕಂಡರೆ ಪುರಂದರದಾಸರಿಗಿದ್ದ ನಿತ್ಯ ಜೀವನದ ನಿಕಟ ಪರಿಚಯ ಪ್ರಕಟವಾಗುತ್ತದೆ

ಉಪಮಾನ ರೂಪಕಾಲಂಕಾರಗಳನ್ನು ಪುರಂದರದಾಸರು ಒಹಳ ಪರಿಣಾಮ ಕಾರಿಯಾಗಿ ಬಳಸಬಲ್ಲರು ಕಣ್ಣೆದುರು ಕಂಡು ಬಂದ ಯಾವ ಸಾಮಾನ್ಯ ಸಂಗತಿ ಯನ್ನಾಗಲಿ ತಮ್ಮ ಉದ್ದೇಶಕ್ಕೆ ತಕ್ಕಂತೆ ಸಾದೃಶ್ಯವಾಗಿ ಪ್ರಯೋಗಿಸಬಲ್ಲ ಅವರ ಪ್ರತಿಭೆ ಪ್ರಶಂಸನೀಯವಾದುದು ಎಲ್ಲೋ ಗಂಟೆ ಬಾರಿಸುವ ಶಬ್ದ ಕೇಳಿಬಂದರೆ ಕೂಡಲೇ ಅವರು ತಾಸು ಬಾರಿಸುತಿದೆ ಕೇಳಿ ಹರಿದಾಸರೆಲ್ಲ ಶ್ರೀಶನ ಭಜನೆಯ ಮಾಡದ ಮನುಜನ ಆಯುಷ್ಯ ವ್ಯರ್ಥವು ಹೋಯಿತು ಎಂದು ದನಿಯೆತ್ತಿ ಮನುಷ್ಯರು ಭಗವಂತನ ಸ್ಮರಣೆ ಮಾಡದೆ ಹೇಗೆ ವೃಥಾ ಹೊತ್ತನ್ನು ಕಳೆಯುವರೆಂಬ ಚಿತ್ರವನ್ನು ನೀಡಿರುವರು ನಗಾರಿಬಾರಿಸುತ್ತಿದ್ದುದನ್ನು ಕಂಡ ಕೂಡಲೇ ಹೊಡೀ ನಗಾರಿ ಮೇಲೆ ಕೈಯ್ಯ ಘಡಘಡ ಹೊಡೀ ನಗಾರಿ ಮೇಲೆ ಕೈಯ್ಯ ಎಂದು ಆರಂಭಿಸಿ ಆ ಮೂಲಕ ಹರಿಸರ್ವೋತ್ತಮತ್ವವನ್ನು ಪ್ರತಿಪಾದಿಸುವರು ಅವರ ಹೃದಯ ಸಂತತವಾಗಿ ಭಕ್ತಿಯಿಂದ ಸ್ಫುರಿಸುತ್ತಿದ್ದುದರಿಂದ ಈ ರೀತಿ ಯಾವುದೇ ಬಾಹ್ಯಘಟನೆಗೂ ಪ್ರತಿಕ್ರಿಯೆ ವ್ಯಕ್ತ ಪಡಿಸಲು ಸಾಧ್ಯವಾಯಿತು ಎನ್ನಬಹುದು ಪುರಂದರದಾಸರು ಒಮ್ಮೊಮ್ಮೆ ತತ್ತ್ವೋಪದೇಶಕ್ಕೆ ನಿತ್ಯಜೀವನದಲ್ಲಿನ ಉಪಮಾನ ಗಳನ್ನು ಹೇಗೆ ಬಳಸುತ್ತಿದ್ದರೆನ್ನುವುದಕ್ಕೆ ಒಂದು ಉಗಾಭೋಗವನ್ನು ಇಲ್ಲಿ ಉಲ್ಲೇಖಿಸಬಹುದು ನಮ್ಮ ಬಾಳು ಎಷ್ಟು ಕ್ಷಣಿಕವಾದುದು ಎಂಬ ತಿಳಿವನ್ನು ಉಂಟುಮಾಡಿಕೊಡುವ ಅವರ ಈ ರಚನೆಯನ್ನು ನೋಡಿರಿ

ಹೇಗೆ ಬರೆದೀತು ಪ್ರಾಚೀನದಲ್ಲಿ
ಹಾಗೆ ಇರಬೇಕು ಸಂಸಾರದಲ್ಲಿ
ಪಕ್ಷಿ ಕೂತಿತು ಬಂದು ಅಂಗಳದಲ್ಲಿ
ಹಾರಿ ಹೋಯಿತು ಆ ಕ್ಷಣದಲ್ಲಿ
ಆಡುವ ಮಕ್ಕಳು ಮನೆಕಟ್ಟಿದರು
ಆಟ ಸಾಕೆಂದು ಮುರಿದೋಡಿದರು
ಸಂತೆ ನೆರೆದೀತು ನಾನಾಪರಿ
ತಿರುಗಿ ಹೋಯಿತು ತಮ್ಮ ತಮ್ಮ ದಾರಿ
ವಸ್ತ್ರಕಾರ ವಸ್ತ್ರಗೆ ಬಂದ
ಹೊತ್ತಾರೆ ಎದ್ದು ಊರಿಗೆ ಹೋದ

ಈ ಸಂಸಾರ ಮಾಯಬಿಡಿಸಿ
ಕಾಯೋ ಪುರಂದರವಿಠಲ

ಇಷ್ಟೇ ಸುಲಲಿತವಾಗಿ ಪೌರಾಣಿಕ ಉಪಮಾನಗಳನ್ನು ಸಹ ಅವರು ಬಳಸಬಲ್ಲವರಾಗಿದ್ದರು

ಬಲಿಯ ಮನೆಗೆ ವಾಮನ ಬಂದಂತೆ
ಭಗೀರಥಗೆ ಶ್ರೀಗಂಗೆ ಬಂದಂತೆ
ಮ ಚುಕುಂದಗೆ ಶ್ರೀಮುಕುಂದ ಬಂದಂತೆ
ವಿದ ರನ ಮನೆಗೆ ಶ್ರೀಕೃಷ್ಣ ಬಂದಂತೆ
ವಿಭಿ ಷಣನ ಮನೆಗೆ ಶ್ರೀರಾಮ ಬಂದಂತೆ
ನಿನ್ನ ನಾಮವು ಬಂದು ಎನ್ನ ನಾಲಿಗೆಯಲಿ
ನಿಂದು ಸಲಹಲಿ ಪುರಂದರವಿಠಲ

ಪ್ರತಿಯೊಬ್ಬ ಭಕ್ತನ ಜೀವನವೂ ಒಂದು ರಸವತ್ತಾದ ಕಾವ್ಯದಷ್ಟು ಅಮೋಘವಾದದ್ದು ಆತನು ಆಡಿದ ಮಾತು, ಹಾಡಿದ ಹಾಡ ಗಳು ಸಹಜವಾಗಿ ಭಾವಪೂರ್ಣವಾಗಿದ್ದು ಅತ್ಯುತ್ತಮ ಸಾಹಿತ್ಯವಾಗಬಲ್ಲದು ಎನ್ನುವುದಕ್ಕೆ ಪುರಂದರದಾಸರ ಕೃತಿಗಳು ನಿತ್ಯ ಸಾಕ್ಷಿಗಳಂತಿವೆ

## ೩ ಸಾತ್ವಿಕ ಜೀವನ ಸಂವಿಧಾನ

ಪುರಂದರದಾಸರ ರಚನೆಗಳ ವ್ಯಾಪ್ತಿ ಇಷ್ಟಕ್ಕೇ ಸೀಮಿತವಾಗುವುದಿಲ್ಲ ತಮ್ಮ ಸುತ್ತ ಮುತ್ತಲಿನ ಜೀವನದ ಕಡೆಗೂ ಮಾನವ ಸ್ವಭಾವದ ಕಡೆಗೂ ಅವರ ದೃಷ್ಟಿ ಹರಡಿದೆ ಅವರು ಯಾವ ಸಾಮಾಜಿಕ ಕ್ರಾಂತಿಗೂ ಕಹಳೆ ಊದಿದವರಲ್ಲ ಅವರು ಮ ನುಷ ರ ನಡೆ-ನುಡಿಗಳ ಓರೆ ಕೋರೆಗಳನ್ನು ಕ ರಿತು ಹೇಳಿರುವ ಕೆಲವು ರಚನೆಗಳನ್ನು ಪರಿಶೀಲಿಸಿದರೆ ಅವರು ಸಾತ್ವಿಕ ಜಿ ವನದ ನಿರ್ವಹಣೆಗೆ ಎಷ್ಟು ಅಮೂಲ್ಯವಾದ ಸಲಹೆಗಳನ್ನು ನಿ ಡಿರುವರೆನ ವುದು ವಿದಿತವಾಗುತ್ತದೆ ಯಾವ ಸಿದ್ಧಾಂತವೇ ಆಗಲಿ ಮಾನವನ ಮೇಲ್ಮೆಯನು ತಿಳಿಯ ಹೇಳುವಲ್ಲಿ ನೈತಿಕ ಆಚರಣೆಗೆ ಸ್ಥಾನವನ್ನು ಕಲ್ಪಿಸಿಕೊಡುವುದು ಸಹಜವೇ ಸರಿ ಈ ಕೆಲಸವನ್ನು ಭಕ್ತ ಪುರಂದರದಾಸರು ಹೇಗೆ ಸಾಧಿಸಿರುವರೆನ್ನುವುದನ್ನು ಅತ್ಯಂತ ಸಂಕ್ಷಿಪ್ತವಾಗಿ ಇಲ್ಲಿ ಪರಿಚಯ ಮಾಡಿಕೊಟ್ಟಿದೆ

ಶ್ರೀವ್ಯಾಸರಾಯರು ಕಿ ಮು ವೆ ಷಧಾರಿಗಳ ದ ಹರಿದಾಸರನ್ನು ಹೇಗೆ ಖಂಡಿಸಿರುವರೋ ಹಾಗೆಯೇ ಪುರಂದರದಾಸರು ಬೂಟಾಟಿಕೆಯ ಡಾಂಭಾಚಾರವನ್ನು ಬಹಳ ಕಟುವಾಗಿ ಖಂಡಿಸಿರುತ್ತಾರೆ ಅವರ ಸುಪ್ರಸಿದ್ಧವಾದ ಒಂದು ಕೀರ್ತನೆಯ ಕೆಲವು ಪಂಕ್ತಿಗಳನ್ನು ಇಲ್ಲಿ ನೋಡಬಹುದು

ಉದರ ವೈರಾಗ್ಯವಿದು ನಮ್ಮ
ಪದುಮನಾಭನಲಿ ಲೇಶ ಭಕುತಿಯಿಲ್ಲ

ಉದಯಕಾಲದಲೆದ್ದು ಗಡಗಡ ನಡುಗುತ
ನದಿಯಲಿ ಮಿಂದನೆಂದು ಹಿಗ್ಗುತಲಿ
ಮದ ಮತ್ಸರ ಕ್ರೋಧ ಒಳಗೆ ತುಂಬಿಟ್ಟುಕೊಂಡು
ಬದಿಯಲಿದ್ದವರಿಗಾಶ್ಚರ್ಯವ ತೋರುವುದು
ಕಂಚುಗಾರನ ಬಿಡ ರದಂದದಿ
ಕಂಚು ಹಿತ್ತಾಳೆ ಪ್ರತಿಮೆಗಳು ನೆರಹಿ
ಮಿಂಚಬೇಕೆಂದು ಬಲು ಜ್ಯೋತಿಗಳ ಹಚ್ಚಿ
ವಂಚನೆಯಲಿ ಪೂಜೆ ಮಾಡುವುದು

ಉದರ ವೈರಾಗ್ಯ ಎಂಬ ಶಬ್ದ ಸಂಯೋಜನೆಯು ಕೀರ್ತನೆ ಪುರಂದರದಾಸರಿಗೆ ಸಲ್ಲಬೇಕೆಂದು ತೋರುತ್ತದೆ ಯಾಂತ್ರಿಕವಾದ ಪೂಜಾವಿಧಾನವನ್ನು ಇಲ್ಲಿ ಮುಚ್ಚುಮರೆಯಿಲ್ಲದೆ ಖಂಡಿಸುತ್ತಾರೆ ಸ್ನಾನದ ಸೋಗು ದೇವರ ಪ್ರತಿಮೆಗಳ ಪ್ರದರ್ಶನಗಳನ್ನು ಬೆನು ಮುಟ್ಟಿ ನೋಡಿಕೊಳ್ಳುವಂತೆ ಹರಿತವಾದ ಮಾತುಗಳಲ್ಲಿ ತೆಗಳಿರುವರು

ಇನ್ನು ಮಡಿಯ ಹೆಸರಿನಲ್ಲಿ ನಡೆಯುವ ಆಡಂಬರವನ್ನು ಸಹ ಇಷ್ಟೇ ಕಟುವಾಗಿ ಟೀಕಿಸಿರುವರು ಮಡಿಮಡಿ ಮಡಿಯೆಂದಡಿಗಡಿಗ್ಹಾರುತಿ ಮಡಿ ಮಾಡುವ ಬಗೆ ಬೇರುಂಟು ಎಂದು ಘೋಷಿಸಿ, ಪೊಡವಿ ಪಾಲಕನ ಪಾದಧ್ಯಾನವನು ಬಿಡದೆ ಮಾಡುವುದು ಅದು ಮಡಿಯು ಎಂದು ಸ್ಪಷ್ಟಪಡಿಸಿರುವರು ಈ ಸಮಗ್ರ ಕೀರ್ತನೆಯು ಒಂದೊಂದು ನುಡಿಯಲ್ಲಿಯೂ ಬಾಹ್ಯಾಚಾರದ ಪೊಳ್ಳುತನವನ್ನು ಬಾಯಿಬಿಟ್ಟು ತೆಗಳಿರುವರು ಕೇವಲ್ ಖಂಡನೆಯಲ್ಲಿಯೇ ನಿರತರಾಗದೆ ಸಾತ್ವಿಕಮಾರ್ಗ ಯಾವುದು ಎನ್ನುವುದನ್ನು ತಿಳಿಯ ಹೇಳಿರುವವರು ಅವರ ಸರಣಿಯನ್ನು ತಿಳಿಯಲು ಒಂದೆರಡು ನುಡಿಗಳನ್ನು ನೋಡಬಹುದು

ಬಟ್ಟೆಯ ನೀರೊಳಗದ್ದಿ ಒಣಗಿಸಿ
ಉಟ್ಟುಕೊಂಡರೆ ಅದು ಮಡಿಯಲ್ಲ
ಹೊಟ್ಟೆಯೊಳಗಿನ ಕಾಮ ಕ್ರೋಧವ
ಬಿಟ್ಟು ನಡೆದರೆ ಅದು ಮ ಡಿಯು
ಇಚ್ಛೆಯಿಂದ ಮಲಮೂತ್ರ ಶರೀರವ
ನೆಚ್ಚಿ ತೊಳೆಯಲು ಅದು ಮಡಿಯೆ
ಅಚ್ಯುತಾನಂತನ ನಾಮವ ನೆನೆದು
ಸಚ್ಚಿತ್ತದಿ ನಡೆದರೆ ಅದು ಮಡಿಯು

ಕೇವಲ ಕರ್ಮಠರಾಗಿ ಹಾರ್ದಿಕವಾದ ಭಕ್ತಿಯನ್ನು ಅರ್ಥಮಾಡಿಕೊಳ್ಳದವರ ಶುಷ್ಕ ಆಚಾರ ವ್ಯವಹಾರಗಳನ್ನು ಕಂಡು ಪುರಂದರದಾಸರ ತುಂಬ ರೋಸಿರಬೇಕೆಂದು ತೋರುತ್ತದೆ

ಹೆಣ್ಣು ಹೊನ್ನು ಮಣ್ಣುಗಳಿಗೆ ಮರುಳಾಗಿರುವ ಮಾನವರನ್ನು ಪುರಂದರದಾಸರು ಬಹಳ ಜಾಣತನದಿಂದ ಎಚ್ಚರಿಸಿರುವರು

ಯಾರು ಹಿತವರು ನಿನಗೆ ಮೂರುಮಂದಿಗಳೊಳಗೆ
ನಾರಿಯೋ ಧಾರುಣಿಯೋ ಬಲು ಧನದ ಸಿರಿಯೋ

ಎಂದು ನವನ್ನೇ ಪ್ರಶ್ನಿಸಿ ಆ ಮೂವರ ಅಸ್ಥಿರತೆಯ ಕಡೆಗೂ ನಮ್ಮ ಗಮನವನ್ನು ಸೆಳೆದಿರುವರು ಮದುವೆಯ ಹೆಸರಿನಲ್ಲಿ ವಧುವಾಗಿ ಮನೆಗೆ ಬರುವ ಹೆಣ್ಣು ಒಮ್ಮೊಮ್ಮೆ ಕಡೆಗಣಿಸಿ ವರ್ತಿಸುವ ಸಂದರ್ಭವನು ಕಂಡು ಈ ಬಗ್ಗೆ ಮುನ್ನೆಚ್ಚರಿಕೆಯನ್ನು ಇತ್ತಿರುವರು ಇನ್ನು ನಾವು ನೆಚ್ಚಿರುವ ನೆಲದ ಸ್ವಭಾವವನ್ನಂತೂ ಹೇಳಲು ಅಸಾಧ್ಯ ಅದಕ್ಕಾಗಿ ಪ್ರಾಣತೆತ್ತಿರುವ ರಾಜಾಧಿರಾಜರ ಕಾಳಗಗಳನ್ನು ಕಂಡಿರುವ ಪುರಂದರದಾಸರು ಅದು ಎಂದೆಂದಿಗೂ ಏಕೈಕ ರಾಜನ ರಾಣಿಯಲ್ಲವೆಂದು ಸಮರ್ಥಿಸಿರುವರು ಇನ್ನು ಹೊನ್ನಿನ ಸ್ವಭಾವವೇ ಚಂಚಲ ಯಾರ ಗಳಿಕೆ ಯಾರ ಪಾಲಿಗೆ ಸೇರುವುದೋ ಹೇಳಬರುವಂತಿಲ್ಲ ಒಟ್ಟಿನಲ್ಲಿ ಈ ಮೂರೂ ಕಡೆಯವರೆಗೂ ನಮ್ಮದಾಗಿ ಉಳಿಯುವುದಿಲ್ಲವೆನ್ನುವುದನ್ನು ಮನಮುಟ್ಟುವಂತೆ ತಿಳಿಸಿರುವರು

ಇಂಥ ಸಂದರ್ಭ ಸನ್ನಿವೇಶಗಳನ್ನು ಮೇಲಿಂದ ಮೇಲೆ ಕಂಡ ಪುರಂದರದಾಸರು ಒಮ್ಮೆ ಅತ್ಯಂತ ವ್ಯಂಗ್ಯವಾಗಿ ಬಯಲಿಗೆಳೆದಿರುತ್ತಾರೆ

ನಗೆಯು ಬರುತಿದೆ ಎನಗೆ ನಗೆಯು ಬರುತಿದೆ ಪ
ಜಗದೊಳಿರುವ ಜಾಣರೆಲ್ಲ ಹಗರಣ ಮಾಡುವುದನೆ ಕಂಡು ಅ ಪ
ಪರರ ವನಿತೆಯೊಲುಮೆಗೊಲಿದು ಹರುಷದಿಂದ ಅವಳ ಬೆರೆದು
ಹರಿವ ನೀರಿನೊಳಗೆ ಮುಳುಗಿ ಬೆರಳೆಣಿಸುವವರ ಕಂಡು
ಪತಿಯ ಸೇವೆಯ ಬಿಟ್ಟು ಪರಪತಿಯ ಕೂಡೆ ಸರಸವಾಡಿ
ಸತತ ಮೈಯ ತೊಳೆದು ವ್ರತವ ಮಾಳ್ಪ ಸತಿಯ ಕಂಡು
ಹೀನಗುಣವ ಮನದೊಳಿಟ್ಟು ತಾನು ವಿಷಪುಂಜನಾಗಿ
ಮೌನಿ ಪುರಂದರವಿಠಲನ್ನ ಧ್ಯಾನವ ಮಾಡುವವರ ಕಂಡು

ಪುರಂದರರ ಈ ರಚನೆಗಳನ್ನು ಕಂಡರೆ ಅವರು ಸಾತ್ವಿಕಗುಣದ ಹೆಸರಿನಲ್ಲಿ ಎಂಥೆಂಥ ಅನಾಚಾರಗಳು ನಡೆಯುತ್ತಿವೆ ಎನ್ನುವುದನ್ನು ಬಿಚ್ಚಿ ಹೇಳಿರುವರು ಈ ರೀತಿ ಸಾರಿ ಹೇಳಲು ಯಾರಿಗಾದರೂ ಕೆಚ್ಚೆದೆ ಇರಬೇಕು ಪುರಂದರದಾಸರು ತ್ರಿಕರಣಶುದ್ಧಿಯನ್ನು ಸಾಧಿಸಿದ್ದುದರಿಂದ ಹೀಗೆ ಹೇಳಲು ಸಾಧ್ಯವಾಯಿತು ಅವರು ಸದಾಚಾರದತ್ತ ನಮ್ಮ ಮನಸ್ಸನ್ನು ಸೆಳೆಯುವುದರಲ್ಲಿ ದುರಾಚಾರದ ಸ್ವರೂಪವನ್ನು ವಿವರಿಸಿ ನಮ್ಮ ಕಣ್ಣನ್ನು ತೆರೆಸುವರು ಪ್ರತ್ಯಕ್ಷವಾದ ಬೋಧೆಗಿಂತಲೂ ಈ ಪರೋಕ್ಷವಾದ ಪ್ರತಿಪಾದನ ಕ್ರಮ ಹೆಚ್ಚು ಪರಿಣಾಮಕಾರಿಯಾದುದೆಂದು ಅವರು

ಭಾವಿಸಿರಬಹುದು ಈ ಕೃತಿಗಳಲ್ಲಿ ಕಂಡುಬರುವ ಕಟಕಿ ವಿಡಂಬನೆ ಕಹ ಕಗಳನ್ನು ಎಷ್ಟು ಮೆಚ್ಚಿಕೊಂಡರೂ ಸಾಲದು

ಇಡೀ ಮಾನವ ಸಮ ದಾಯಕ್ಕೇ ಅನ್ವಯಿಸ ವಂತೆ ಪುರಂದರದಾಸರು ರಚಿಸಿ ಸಿರುವ ಕೆಲವು ಕೃತಿಗಳನ್ನು ಕಂಡರೆ ಅವರಿಗೆ ಮಾನವಜನ್ಮದಲ್ಲಿರುವ ಶ್ರದ್ಧೆಯೂ ಆ ಮಾೂಲಕ ನಾವು ಸಾಧಿಸಬಹುದಾದ ಸಾರ್ಥಕ್ಯದ ಅರಿವೂ ಸ್ಪಷ್ಟವಾಗ ತ್ತವೆ ಮನುಜಶರೀರವಿದೇನು ಸುಖ ಎ ದು ಅದರ ಅಶಾಶ್ವತೆಯ ಬಗೆ ಅವರು ಉದ್ಗಾರ ವೆತ್ತಿದ್ದರೂ ಮಾನವ ಜನ್ಮ ದೊಡ್ಡದು' ಎಂಬ ಸಂದೇಶವನ್ನು ಸಾರಿ ಹೇಳುವರು

ಮಾನವ ಜನ್ಮ ದೊಡ್ಡದು–ಇದ
ಹಾನಿಮಾಡಲುಬೇಡಿ ಹುಚ್ಚಪ್ಪಗಳಿರಾ !

ಎಂಬ ಪಲ್ಲವಿಯ ಲ್ಲಿ ಪ್ರಕಟವಾಗುವ ದಾಸರ ಆತ್ಮೀಯತೆ ಮನಸೆಳೆಯುವಂತಹುದು ಮುಂದಿನ ಮೂರು ನ ಡಿಗಳೂ ಹೀಗೇಯೇ ಮನಮುಟ್ಟುವಂತಿವೆ

ಕಣ್ಣು ಕೈ ಕಾಲ್ಕಿವಿ ನಾಲಿಗೆ ಇರಲಿಕ್ಕೆ
ಮಣ್ಣುಮುಕ್ಕಿ ಮರುಳಾಗುವರೆ
ಹೆಣ್ಣು ಮಣ್ಣಿಗಾಗಿ ಹರಿಯ ನ ಮಾಮೃತ
ಉಣ್ಣದೆ ಉಪವಾಸ ಇರ ವರೆ ಖೋಡಿ
ಕಾಲನ ದೂತರು ಕ ಲ್ಪಿಡಿದೆಳೆವಾಗ
ತಾಳು ತ ಳಿ ದರೆ ತಾಳುವರೆ
ದಾಳಿ ಬಾರದ ಮುನ್ನ ಧರ್ಮ ವ ಗಳಿಸಿರೊ
ಸುಳ್ಳಿನ ಸಂಸಾರ ಸುಳಿಗೆ ಸಿಕ್ಕಲು ಬ್ಯಾಡಿ
ಏನು ಕಾರಣ ಯದುಪತಿಯನು ಮರೆತಿರಿ
ಧನ ಧಾನ್ಯ ಪುತ್ರರು ಕ ಯುವರೆ
ಇನ್ನಾದರು ಏಕೋಭಾವದಿ ಭಜಿಸಿರೊ
ಚೆನ್ನ ಶ್ರೀಪುರಂದರವಿಠಲರಾಯನ

ಅಪೂರ್ವವಾಗಿ ದೊರೆತಿರ ವ ಈ ಮಾನವ ಜನ್ಮದಲ್ಲಿ ಪಾರಮಾರ್ಥಿಕವನ್ನು ಸಾಧಿಸಿ ಹೇಗೆ ಕೃತಾರ್ಥರಾಗಬೇಕೆನು ವುದನ್ನು ಈ ಕೀರ್ತನೆಯಲ್ಲಿ ವಿಶದಪಡಿಸಿರು ವರು ನಾವು ದೃಢವಾಗಿರುವಾಗಲೆ ದೈವ ಚಿಂತನೆಯ ಲ್ಲಿ ತೊಡಗಬೇಕೆಂದು ಎಚ್ಚರಿ ಸಿರುವರು ದಾಳಿ ಬಾರದ ಮುನ್ನ ಧರ್ಮವ ಗಳಿಸಿರೋ ಎನ್ನುವ ಬುದ್ಧಿವಾದ ವಂತೂ ಯಾರಿಗಾದರೂ ಕಣ್ತೆರಿಸ ವಂತಿದೆ

ಪ್ರತಿಯೊಬ್ಬರೂ ತಮ್ಮ ತಮ್ಮ ತ್ರಿಕರಣಶುದ್ಧಿಯನ್ನು ಸಾಧಿಸಿದರೆ ಬಾಳಿನ ಏಳಿಗೆ ತನಗೆ ತಾನೇ ಆಗ ವುದೆಂದ ಅವರ ಅಭಿಪ್ರಾಯ ತನುವ ನೀರೊಳಗದ್ದಿ ಫಲವೇನು ತನ್ನ ಮನದಲ್ಲಿ ದೃಢಭಕ್ತಿಯಿಲ್ಲದ ಮನ ಜನು ಎಂದು ತರ್ಕಿಸಿ, ನೀರಿನಲ್ಲಿ ಮಿಂದು ಮಡಿಯ ಡುವುದಕ್ಕಿಂತಲೂ ಹಲವಾರು ಸತ್ಕಾರ್ಯಗಳಿಂದ

ಮನದ ಮಾಲಿನ್ಯವನ್ನು ಹೋಗಲಾಡಿಸಿದ್ದೇ ಆದರೆ ಅದೇ ನಿಜವಾದ ತನುಶುದ್ಧಿ ಯೆನು ವರು ಮನವ ಶೋಧಿಸಬೇಕು ನಿಚ್ಚ ದಿನದಿನ ಮಾಡುವ ಪಾಪಪುಣ್ಯದ ವೆಚ್ಚ ಎಂಬಲ್ಲಿ ಪ್ರತಿನಿತ್ಯವೂ ಆತ್ಮ ಶೋಧನೆಯ ಅಗತ್ಯವನ್ನು ಒತ್ತಿ ಹೇಳುವರು ಆಚಾರವಿಲ್ಲದ ನಾಲಿಗೆ ನಿನ್ನ ನೀಚ ಬುದ್ಧಿಯ ಬಿಡು ನಾಲಿಗೆ ವಿಚಾರವಿಲ್ಲದೆ ಪರರ ದೂಷಿಸುವುದಕ್ಕೆ ಚಾಚಿಕೊಂಡಿರುವಂಥ ನಾಲಿಗೆ ಎಂದು ನಾಲಿಗೆಯ ದುರ್ಗಣವನ್ನು ತಿಳಿಯ ಹೇಳಿ ವಚಶ್ಶುದ್ಧಿಯನ್ನು ಹೇಗೆ ಸಾಧಿಸಬೇಕೆನು ವುದನ್ನು ಸೂಚಿಸಿರುವರು

ತ್ರಿಕರಣಶುದ್ಧಿಯನ್ನು ಸಾಧಿಸುವುದು ಎಷ್ಟು ಅನಿವಾರ್ಯವೋ ಅಷ್ಟೇ ಆಸಕ್ತಿ ಯಿಂದ ಸತ್ಯಂ ವದ ಧರ್ಮಂ ಚರ ಎಂಬ ಆರ್ಷೇಯ ವಾಕ್ಯವನ್ನು ಅನುಸರಿಸಿದಲ್ಲಿ ಮಾನವನ ಜೀವನ ಹಸನಾಗುವುದರಲ್ಲಿ ಸಂದೇಹವಿಲ್ಲವೆಂದು ಎಣಿಸ ವರು ಸತ್ಯ ವೆಂಬುದೆ ಸ್ನಾನ ಉಪವಾಸ ಜಪ ನೇಮ ಅಸತ್ಯದಲಿ ಮಾಡುವ ಕರ್ಮ ವ್ಯರ್ಥ ಎಂಬ ಹೇಳಿಕೆಯನ್ನು ಗಮನಿಸಿದರೆ ಅವರ ಕಾಲಕ್ಕಾಗಲೇ ಕೆಲವು ಸಾತ್ವಿಕ ಸಂಪ್ರದಾಯಗಳು ಹೇಗೆ ತಮ್ಮ ಸತ್ವವನ್ನ ಕಳೆದುಕೊಂಡಿದ್ದುವು ಎನ್ನುವುದು ಪ್ರಕಟವಾಗುತ್ತದೆ ಈ ಶಷ್ಕ ಆಚಾರಗಳನ್ನು ಪುರಂದರದಾಸರು ವಿಡಂಬಿಸಿರುವ ವಿಧಾನವಂತೂ ಬಹಳ ಕುತೂಹಲಕಾರಿಯಾಗಿದೆ

ಅಪ್ಪಳಿಸಿ ಪರರ ಒಡವೆಗಳ ತಂದ ಡು ತಾ
ಒಪ್ಪದಿಂದುಪವ ಸವ್ರತವಮಾಡಿ
ತಪ್ಪದಲೆ ಸ್ವರ್ಗವನು ಸೂರೆಗೊಂಬುವೆನೆಂಬಿ
ಸರ್ಪಗಳು ಮಾಡಿದ ಅಪರಾಧವೇನಯ್ಯ

ನಮ್ಮಲ್ಲಿ ಉರಗನ ಉಪವಾಸ ಎಂಬ ನಾಣ್ಣುಡಿಯೇ ಉಂಟು (ಪುರಂದರ ದಾಸರೆ ಗುರು ಉಪದೇಶವಿಲ್ಲದ ಕ್ರಿಯೆಗಳು ಉರಗನ ಉಪವಾಸದಂತೆ ಕಾಣಿರೊ ಎಂದು ಪ್ರಯೋಗಿಸಿರುತ್ತಾರೆ) ಹಾವುಗಳು ಗಾಳಿಯನೇ ಕುಡಿದು ಬದುಕಬಲ್ಲವೆಂದು ನಮ್ಮ ಕವಿಗಳ ಹೇಳಿಕೆ ಅದಕ್ಕೆ ಗಾಳಿಯೇ ಆಹಾರವಾಗಿರ ಬೇಕಾದರೆ ಅದನ್ನು ಉಪವ ಸವೆಂದು ಕರೆಯುವುದು ಸಾಧವೆನಿಸದು ಇನ್ನು ಅದು ನೆಲಸಂವ ಹುತ್ತವಾದರೋ ಗೆದ್ದಲು ಹುಳುವಿನ ಕರ್ಮ ಕೌಶಲ್ಯ ಆದ ದ ರಿಂದ ಪುರಂದರದಾಸರು ಕಂಡವರ ಆಸ್ತಿಯನ್ನು ಅಪಹರಿಸಿ ಪರದ್ರವ್ಯವನ್ನು ಅವಲಂಬಿಸಿ ಉಪವಾಸವ್ರತವನ್ನು ಆಚರಿಸಬಯಸುವವರನು ಬಹಳ ತೀಕ್ಷ್ಣವಾಗಿ ಖಂಡಿಸಿರುವರು ಹೀಗೆ ಪರಾಡ ವ ಉಪವ ಸನನು ಅತ್ಯುಗ್ರವಾಗಿ ಆಕ್ಷೇಪಿಸಿರು ವರು

ಇನ್ನು ಕಪಟ ಜಪವನ್ನು ಅವರು ಅವಹೇಳನಮಾಡುವ ರೀತಿಯೂ ಇಷ್ಟೇ ಕಟ ವಾಗಿದೆ

ಬಿಡದೆ ಮದ ಮತ್ಸರಾಹಂಕ ರದಲಿ ಮುಳುಗಿ
ಒಡವೆ ಬೆರಳುಗಳೆಣಿಸಿ ಮೌನದಿಂದ
ತಡೆಯದಲೆ ಪರಲೋಕ ಸೂರೆಗೊಂಬುವೆನೆಂಬೆ
ಬಡ ಬಕನು ಮಾಡಿದ ಅಪರಾಧವೇನಯ್ಯ

ಇಲ್ಲಿಯೂ ಸಹ ಪುರಂದರದಾಸರು ಬಕಧ್ಯಾನ ಎಂಬುದಾಗಿ ಕಪಟ ಜಪ ವನ್ನು ಕ ರಿತ ಪರಿಚಿತ ಪ್ರಯೋಗವನ್ನು ಬಹಳ ಅರ್ಥವತ್ತಾಗಿ ಬಳಸಿರುವರು ಅದೂ ತನ್ನ ಸ್ವಭಾವಕ್ಕೆ ತಕ್ಕಂತೆ ನೀರಿನಲ್ಲಿ ಇಲ್ಲಿಂವುದುಂಟು ಅದರಂತೆಯೇ ಮನದ ಕಲ್ಮಷದಿಂದ ಕೂಡಿ ನೀರಿನಲ್ಲಿ ನಿಂತು ಬೆರಳುಗಳನ್ನು ಎಣಿಸುವ ಕಪಟವನ್ನು ಇಲ್ಲಿ ಹೀಯಾಳಿಸಿರುವರು ಈ ಪೊಳ್ಳು ಆಕಾರಗಳನ್ನು ಕಂಡು ಕಿಡಿಕಿಡಿಯಾಗುವ ದಾಸರು ಅಸತ್ಯದಲ್ಲಿ ಮಾಡ ವ ಕರ್ಮ ವ್ಯರ್ಥ ಎಂದು ಖಂಡಿತೊ ಕ್ತಿಯಿಂದ ಖಂಡಿಸಿರುವರು

ಇನ್ನು ಧರ್ಮವನ್ನು ಕುರಿತು ಪುರಂದರದಾಸರು ಮಾಡಿರುವ ವ್ಯಾಖ್ಯಾನ ವಂತೂ ಸಾರ್ವತ್ರಿಕ ಸಂದೇಶದಂತಿದೆ

ಧರ್ಮವೇ ಜಯ ವೆಂಬ ದಿವ್ಯಮಂತ್ರ ಮ
ಮ ರ್ಮವನರಿತು ಮಾಡಲಿಬೇಕು ತಂತ್ರ ಅ ಪ
ವಿಷವಿಕ್ಕಿದವಗೆ ಷಡ್ರಸವನ ೦ಸಲಿಬೇಕು
ದ್ವೇಷಮಾಡಿದವನ ಪೋ ಷಿಸಲಿಬೇಕು
ಪುಸಿಮಾಡಿ ಕೆಡಿಸುವನ ಹಾಡಿ ಹರಸಲಿಬೇಕು
ಮೋಸ ಮಾಡುವವನ್ನೆಸರು ಮಗನಿಗಿಡಬೇಕು
ಹಿಂದೆ ನಿಂದಿಪರನ್ನು ವಂದಿಸುತಲಿರಬೇಕು
ಬಂಧನದೊಳಿಟ್ಟವರ ಬೆರೆಯಬೇಕು
ಕೊಂದ ವೈರಿಯ ಮನೆಗೆ ನಡೆದು ಹೋಗಲಿಬೇಕು
ಕುಂದೆಣಿಸ ವವರ ಗೆಳೆತನ ಮಾಡಬೇಕು
ಕೊಂಡೊಯ್ದು ಬಡಿಯುವವರ ಕೊಂಡಾಡುತಲಿರಬೇಕು
ಕಂಡುಸಹಿಸದವರ ಕರೆಯಬೇಕು
ಪುಂಡರೀಕಾಕ್ಷ ಶ್ರೀ ಪುರಂದರವಿಠಲನ
ಕೊಂಡಾಡಿ ತಾ ಧನ್ಯನಾಗಬೇಕು

ಈ ಕೀರ್ತನೆಯ ಒಂದೊಂದು ಪಂಕ್ತಿಯೂ ಪುನಃ ಪುನಃ ಮೆಲುಕುಹಾಕು ವಂತಿದೆ ಇಂಥ ಕೀರ್ತನೆಯನ್ನು ಒರೆಯುವ ಕ ಲಕ್ಕೆ ಪುರಂದರದಾಸರ ಮನಸ್ಸು ತುಂಬ ಪರಿಪಕ್ವವಾಗಿರಬೇಕೆನಿ ಸ ತ್ತದೆ ಧರ್ಮವನ್ನು ನಾನಾ ರೀತಿಗಳಲ್ಲಿ

ವ್ಯಾಖ್ಯಾನ ಮಾಡಿರುವುದನ್ನು ನಾವು ಕಾಣಬಹುದು ದಯವೆ ಧರ್ಮದ ಮೂಲವಯ್ಯ ಎಂದು ಬಸವಣ್ಣನವರ ಸೂತ್ರವನು ಇಲ್ಲಿ ಸ್ಮರಿಸಬಹುದು ಆದರೆ ದಯಾಳುವಾದ ಮನೀಷ್ಯನು ಎಂತೆಂತಹ ಇಕ್ಕಟ್ಟಿನಲ್ಲಿ ಸಿಕ್ಕಿ ಬೀಳುವನೆಂದು ಆಗ ಅವನು ಹೇಗೆ ವರ್ತಿಸಬಹುದೆನ್ನುವುದನ್ನೂ ಇಲ್ಲಿ ಪುರಂದರದಾಸರು ಬಹಳ ಪ್ರಭಾವ ಶಾಲಿಯಾಗಿ ಚಿತ್ರಿಸಿರುವರು ಧರ್ಮವೆಂಬುದು ಹೃದಯ ವೈಶಾಲ್ಯದ ಹೆಗ್ಗುರು ತೆಂದೂ ಅಹಿತರನ್ನು ಪರಮ ಪ್ರೇಮದಿಂದ ಪರಿವರ್ತಿಸಿ ಬಾಳಬೇಕೆನ್ನುವುದನ್ನು ವಿಶದ ಪಡಿಸುವ ಪುರಂದರದಾಸರ ಈ ಕೀರ್ತನೆ ಕೆಲವರಿಗೆ ಕೈಗೆ ಎಟುಕಲಾರದ ಆದರ್ಶಪಾತ್ರವೆಂದೂ ಎನಿಸಬಹುದು ಆದರೆ ಬುದ್ಧನು ಅಂಗುಲೀಮಾಲ ನೆಂಬ ದರೋಡೆಕಾರನನು ಪ್ರೀತಿಯಿಂದ ಒಲಿಸಿಕೊಂಡಿದುದನ್ನೂ ಏಸುಕ್ರಿಸ್ತನು ತನ್ನನ್ನು ಶಿಲುಬೆಗೇರಿಸಿದವರನ್ನು ಕಂಡು, ದೇವರನ್ನು ಕುರಿತು ಅವರನ್ನು ಕ್ಷಮಿಸ ಬೇಕೆಂದು ಕೋರಿದದನ್ನೂ ಇಡೀ ಭರತಖಂಡವೇ ಸ್ವಾತಂತ್ರ್ಯೋತ್ಸವವನ್ನು ಆಚರಿಸುತ್ತಿರವಲ್ಲಿ ನವಖಾಲಿಯಲ್ಲಿ ನೊಂದ ಜನರನ್ನು ಸಮಾಧಾನ ಪಡಿಸಲು ತೆರಳಿದ ಗಾಂಧೀಜಿಯವರನ್ನೂ ನೆನೆದರೆ ಪುರಂದರದಾಸರ ಈ ಕೀರ್ತನೆ ಕೇವಲ ಅತಿಶಯೋಕ್ತಿಯೆನ್ನಿಸುವುದಿಲ್ಲ ಉದಾರ ಚರಿತಾನಾಂತು ವಸುಧೈವ ಕುಟುಂಬಕಂ ಎಂಬ ಮಹಾತಿನ ಮರ್ಮವಾದರೂ ಇಷ್ಟೆ

ಈ ರೀತಿ ಪರಮ ಸಾತ್ವಿಕರಾದ ಪುರಂದರದಾಸರು ಸಾತ್ವಿಕ ಜೀವನಕ್ಕೆ ತಕ್ಕು ದಾದ ಅನೇಕ ಅಂಶಗಳನ್ನು ಆಗಿಂದಾಗ್ಗೆ ಹೇಳಿರುವರು

ಪುರಂದರದಾಸರು ತಮ್ಮ ಆತ್ಮಾನುಸಂಧನದಿಂದ ಭಗವಂತನ ಭಕ್ತರೆನ್ನಿಸಿ ಪ್ರಥಮತಃ ಅಪರೋಕ್ಷ ಜ್ಞಾನಿಗಳಲ್ಲಿ ಅಗ್ರಗಣ್ಯರೆನಿಸಿದರು ತಮ್ಮ ಕವಿ ಸಹಜ ವಾದ ವಾಣಿಯಿಂದ ಅವರ ಧಾರ್ಮಿಕ ರಚನೆಗಳು ಶಪ್ಪ ಬೋಧೆಯಾಗಿ ಪರಿಣಮಿ ಸದೆ ರಸವತ್ತಾದ ಆತ್ಮಗೀತೆಗಳೆನ್ನಿಸಿ ಸಾಹಿತಿಗಳಿಗೂ ಸವಿಯೆನ್ನಿಸಿದವು ಅಷ್ಟೇ ಅಲ್ಲ ಅವರು ಅರಿಸಿಕೊಂಡ ಸಂಗೀತದ ಮಾಧ್ಯಮದಿಂದ ಅವರು ಈ ಕ್ಷೇತ್ರದಲ್ಲಿ ನಡೆಸಿದ ಕೆಲವು ಪ್ರಯೋಗಗಳಿಂದ ಕರ್ನಾಟಕ ಸಂಗೀತ ಪಿತಾಮಹರೆಂಬ ಪ್ರಶಸ್ತಿಗೂ ಪಾತ್ರರಾದರು ಹರಿದಾಸಸಾಹಿತ್ಯದ ಸ್ವರ್ಣಯುಗದಲ್ಲಿ ಅವರಿಗೆ ತಮ್ಮ ಗುರುಗ ಳಿಂದ ಪೂಜ್ಯಸ್ಥಾನ ದೊರೆತಂತೆಯೇ ಹರಿದಾಸ ಸಾಹಿತ್ಯದ ಉತ್ತರಾರ್ಧದಲ್ಲಿಯೂ ದಾಸಚತುಷ್ಟಯರೆನ್ನಿಸಿದವರಲ್ಲಿ ಅವರಿಗೇ ಮೊತ್ತ ಮೊದಲನೆಯ ಪಟ್ಟ ಪ್ರಾಪ್ತ ವಾಯಿತು ಅವರ ತರುವಾಯ ವಿಜಯದಾಸರು ಗೋಪಾಲದಾಸರು ಮತ್ತು ಜಗನ್ನಾಥದಾಸರು ಈ ಉತ್ತರಾರ್ಧದ ಮಾರ್ಗದರ್ಶಕರು

ಹರಿದಾಸ ಸಾಹಿತ್ಯದ ರಚನೆಗೆ ಯತಿತ್ರಯರಾದ ಶ್ರೀಪಾದರಾಜರು ಶ್ರೀವ್ಯಾಸರಾಯರು ಮತ್ತು ಶ್ರೀವಾದಿರಾಜರು ಮೇಲುಪಂಕ್ತಿ ಹಾಕಿಕೊಟ್ಟರೆನು ವು ದನ್ನು ಮರೆಯಲಾಗದಿದ್ದರೂ ಈ ಪ್ರಕಾರದ ಪ್ರಾಶಸ್ತ್ಯವನ್ನು ತಮ್ಮ ಪ್ರತಿಭೆ

ಯಿಂದ ಬೆಳಗಿ ಬೆಳಸಿದ ಕೀರ್ತಿ ಪುರಂದರದಾಸರಿಗೆ ಸಲ್ಲುವುದೆನ್ನುವುದರಲ್ಲಿ ಯಾವ ಸಂಶಯವೂ ಇಲ್ಲ ಅವರೇ ಈ ಅಪೂರ್ವ ಕ್ಷೇತ್ರದ ಸಾರ್ವಭೌಮರು ಈ ಸಲುವಾಗಿಯೇ ಅವರನ್ನು ಕುರಿತು ಸ್ತುತಿಯೊಂದರಲ್ಲಿ ಪುರಂದರ ಗುರುಂ ವಂದೇ ದಾಸ ಶ್ರೇಷ್ಠಂ ದಯಾನಿಧಿಂ ಎಂದು ಹೇಳಿರುವುದು ಇಂದಿಗೂ ಅಚ್ಚಳಿಯದೆ ಅಕ್ಷರಶಃ ಸತ್ಯವೆನ್ನಿಸಿದೆ

# ಸಂತಕವಿ ಅನುಭಾವಿ ಕನಕದಾಸರು

—ಜಿ ಎಸ್ ಭಟ್ಟ

ದಾಸಸಾಹಿತ್ಯದ ಅಶ್ವಿನೀ ದೇವತೆಗಳಲ್ಲಿ ಒಬ್ಬರೆಂದು ಪರಿಗಣಿತರಾಗಿರುವ ಕನಕದಾಸರು ಕನ್ನಡದ ಶ್ರೇಷ್ಠ ಸಂತಕವಿ ಅನುಭಾವಿ ಮತ್ತು ಹರಿದಾಸರು ತಮ್ಮ ಕಾವ್ಯ ಕೀರ್ತನೆಗಳಿಂದ ಕನ್ನಡ ಸಾಹಿತ್ಯವನು ಶ್ರೀಮಂತಗೊಳಿಸಿದವರಲ್ಲಿ ಅಗ್ರಗಣ್ಯರು ಪುರಂದರದಾಸರಿಗೆ ಸಮತೂಕದವರೂ ಸ್ವತಂತ್ರ ಕಾಂತಿಯ ಎಳ್ಳವರೂ ಆಗಿ ಅದೇ ಕಾಲದಲ್ಲಿ ಜೀವಿಸಿದರು ಜನರ ಆಡುಭಾಷೆಯಲ್ಲಿ ಸತ್ವಯುತವಾಗಿ ಬರೆದ ಕೀರ್ತಿ ಇವರದಾಗಿದೆ ಬಸವೇಶ್ವರರ ಸಮಕಾಲೀನರಾದ ಅನೇಕ ವಚನಕಾರರು ಸಮಾಜದ ನಾನಾ ವರ್ಗಗಳಿಂದ ಬಂದವರು ಹಾಗೆಯೇ ಕನಕದಾಸರಾದರೂ ಹ ಟ್ಟಿನಿಂದ ಸಮಾಜದ ಕೆಳವರ್ಗದಿಂದ ಬಂದವರು ಆದರೆ ತಮ್ಮ ಸಾಧನೆಯಿಂದ ಶ್ರೇಷ್ಠ ದಾಸರು ಎಂಬ ಕೀರ್ತಿಗೆ ಭಾಜನರಾದರು ತಮ್ಮ ಸುತ್ತಲಿನ ಸಮಾಜದ ಅಂಕ ಡೊಂಕುಗಳನ್ನು ತಿದ್ದಲು ಪ್ರಯತ್ನಿಸಿದ ಸಮಾಜ ಸುಧಾರಕ ಹಾಗೂ ಕ್ರಾಂತಿಕಾರಿ ಅವರ ಕಾವ್ಯಗಳು ಸ್ಪಂದಿಸುವುದು ಅಂದು ಅವರು ಅನುಭವಿಸಿದ ನೋವುನಲಿವುಗಳನ್ನು ಕನಕದಾಸರ ಜೀವನಚರಿತ್ರೆ ಅರಿಯಲು ನಮಗೆ ಆಧಾರ ಮುಖ್ಯವಾಗಿ ಅವರ ಕೃತಿಗಳೆ ಆಗಿವೆ

ವ್ಯಾಸರಾಯರ (1447–1539) ಶಿಷ್ಯರೆಂದು ಮಿನುಗಿದ ಎರಡು ನಕ್ಷತ್ರಗಳು— ಒಬ್ಬರು ಪುರಂದರ ಇನ್ನೊಬ್ಬ ಕನಕ ಅಂದಿನ ಸನಾತನಿಗಳ ಮೇಲ ಜಾತಿಯವರ ವಿರೋಧವನ್ನು ವ್ಯಾಸರಾಯ ರು ಎದ ರಿಸಿದ ಪ್ರಸಂಗವನು ಪುರಂದರದಾಸರೇ ಉಲ್ಲೇಖಿಸಿದ್ದಾರೆ ಕನಕದಾಸರ ಮೇಲೆ ದಯಮಾಡಲು ವ್ಯಾಸಮುನಿ ಮರದ ಜನರೆಲ್ಲ ದೂರಿಕೊಂಬುವರು ಹೀಗೆ ಹೇಳುವಲ್ಲಿ ಅಂದಿನ ಸಾಮಾಜಿಕ ಜೀವನದ ಸ್ಪಷ್ಟಚಿತ್ರ ನಮ್ಮ ಕಣ್ಣ ಮ ಂದೆ ನಿಲ್ಲುತ್ತದೆ ವ್ಯಾಸರಾಯ ರು ತೀರ್ಥ ಕೊಡಲು ಕನಕದ ಸರನ್ನೇ ಮೊದಲಿಗೆ ಕರೆದಾಗ ತೀರ್ಥವನ್ನು ಕೊಡುವಾಗ ಕನಕನ ಕರೆಯಲು ಧೂರ್ತರ ಗಿದ್ದ ವಿದ್ವಾಂಸರೆಲ್ಲ ಸಾರ್ಥಕವ ಯಿ ತು ಇವನ ಸಂನ್ಯಾಸಿತನವೆಲ್ಲಾ ಪೂರ್ತಿಯಾಯಿತು ಎನಲು ಯತಿಯ ು ನಗುತಿಹನು –ಈ ಪ್ರಸಂಗವನ್ನು ಪುರಂದರದಾಸರು ಬಣ್ಣಿಸಿದ್ದಾರೆ

ತಮ್ಮ ಒಂದೆರಡು ಕೃತಿಗಳಲ್ಲ ಕನಕದಾಸರೇ ಚಿತ್ರಿಸಿರುವ ಸಮಕಾಲೀನ ಜನಜೀವನದ ವರ್ಣನೆಯ ಆಧಾರದಿಂದ ಅವರ ಕಾಲ ನಿರ್ಣಯಿಸಬಹುದಾಗಿದೆ, 17ನೆಯ ಶತಮಾನಕ್ಕೆ ಸೇರಿದವನೆಂದು ಊಹಿಸಲಾಗಿರುವ ಕಾಖಂಡಿಕೀ ಕೃಷ್ಣರಾಯ ನೆನೆದು ನವಿ ಸುಮನು ನಾನು ದಿನ ಹರಿಪದಮನಜ ಮಧ ಪರಾದ ಅನುಭವ ಶರಣರ

ಎಂದು ಹರಿದಾಸರ ಪರಂಪರೆಯನ್ನು ಸ್ತುತಿಸಿ ನೆರೆ ತಾಳಪಾಕರ ಸಂತಮೂತಿ ಕನಕರ ಹರಿಭಕ್ತಿ ಉಲ್ಲಾಸಕರ' ಎಂದು ತೆಲುಗಿನ ತಾಳ್ಳಪಾಕ ಅಣ್ಣಾವರಾಚಾರ್ಯರನ್ನು ಕನ್ನಡದ ಕನಕದಾಸರನ್ನೂ ಒಟ್ಟಿಗೆ ಬಣ್ಣಿಸಿದ್ದಾನೆ ಸುಮಾರು ಒಂದು ಶತಮಾನದ ವೇಳೆಗೆ ಕನಕದಾಸರ ಕೀರ್ತಿ ಹಬ್ಬಿತ್ತೆಂದು ಸ್ಪಷ್ಟವಾಗುವುದು ಕನಕದಾಸರು ವ್ಯಾಸರಾಯರನ್ನು ಸಂದರ್ಶಿಸಿದ್ದು ಅವರು ವ್ಯಾಸಸಮುದ್ರ ಕಟ್ಟಿಸುತ್ತಿದ್ದಾಗ ವಿಜಯನಗರದ ಉನ್ನತ ಕಾಲದಲ್ಲಿ ಕನಕದಾಸರು ಜೀವಿಸಿದ್ದರು ಎಂಬ ದಕ್ಕೆ ಅವರು ರಚಿಸಿರುವ ಮೊ ಹನತರಂಗಿಣಿ [1] ಆಧಾರ ಇದರಲ್ಲಿ ಅವರು ರಾಮಾನುಜ ಮುಗಿಗೆ ಶರಣು ಎಂದು ಹೇಳಿದ್ದಾರೆ

ಈ ರೀತಿಂ ು ಪೆಂಪುವಡೆದ ಸದ್ಗುರುಕರ  
ವಾರಿಜೋದ್ಭವ ಶಿಷ್ಯಜನರ  
ಪ್ರೇರಿಸಿ ನಾಲ್ವಗೆ ಫಲವೀವ ತಾತಾ  
ಚಾರಿಯರಡಿಗೆರಗುವೆನು

ಶ್ರೀ ವೈಷ್ಣವ ಪಂಥದ ತಿರುಮಲೈ ತಾತಾಚಾರಿ ಇವರ ಮೊದಲ ಗುರು ಬಹುಜನ ವಿದ್ವಾಂಸರ ಅಭಿಪ್ರಾಯದಂತೆ ಕನಕದಾಸರ ಕಾಲ 1508-1606 ಅವರು ಹುಟ್ಟಿದ ಸ್ಥಳದ ಬಗ್ಗೆ ಭಿನಾ ಭಿಪ್ರಾಯಗಳಿಲ್ಲ ಅವರ ಬಹು ಕೃತಿಗಳಲ್ಲಿ ಬಾಡದಾದಿ ಕೇಶವ ಕಾಗಿನೆಲಯಾದಿ ಕೇಶವ ಎಂಬ ಅಂಕಿತಗಳಿವೆ ತಮ್ಮ ಜೀವಿತದ ಬಹ ಕಾಲವನ್ನು ಅವರು ಈ ಎರಡು ಸ್ಥಳಗಳಲ್ಲಿ ಕಳೆದಿರಬಹುದು

## ಜನನ ಬಾಲ್ಯ

ಕನಕದಾಸರು ಹುಟ್ಟಿದ್ದು ಧಾರವಾಡ ಜಿಲ್ಲೆಯ ಹಿರೇಕೇರೂರು ತಾಲ್ಲೂಕಿನ ಬಾಡ ಎಂಬ ಗ್ರಾಮದಲ್ಲಿ ನೆಲೆಸಿದ್ದು ಹಾವೇರಿ ತಾಲ್ಲೂಕಿನ ಕಾಗಿನೆಲೆಯಲ್ಲಿ ತಂದೆ ಬೀರಪ್ಪ ತಾಯಿ ಬಚ್ಚಮ್ಮ ಬೀರಪ್ಪ ವಿಜಯ ನಗರ ಸಾಮ್ರಾಜ್ಯದ ಒಬ್ಬ ಜನಪ್ರಿಯ ಡಣಾಯಕ ಅವನ ಆಡಳಿತಕ್ಕೆ ಒಳಪಟ್ಟ ಹಳ್ಳಿಗಳು 75 ವಿಜಯ ನಗರದ ದೊರೆಗಳ ಪ್ರೀತಿಗೆ ಪಾತ್ರನಾಗಿದ್ದ ಬೀರಪ್ಪ–ಬಚ್ಚಮ್ಮ ಇವರಿಗೆ ಬಹು ಕಾಲದಿಂದ ಮಕ್ಕಳು ಇರಲಿಲ್ಲ ತಿರುಪತಿಯ ತಿಮ್ಮಪ್ಪನಿಗೆ ಅವರು ವಿಶೇಷ ಸೇವೆ ಸಲ್ಲಿಸಿ ಹಿಂದಿರುಗಿದ ಕೆಲ ದಿವಸಗಳಲ್ಲಿ ಅವರ ಇಷ್ಟಾರ್ಥ ಸಿದ್ಧಿಯಾಗಿ ಗಂಡುಮಗು ಜನಿಸಿತು ಏಳುಮಲೆಯ ತಿಮ್ಮಪ್ಪನ ಸೇವೆಯಿಂದ ತಮಗೆ ಪುತ್ರ ಜನಿಸಿದನೆಂದು ಭಾವಿಸಿದ ಆ ದಂಪತಿಗಳು ಮಗನಿಗೆ ನಾಮ ಕರಣ ಮಾಡಿದ್ದು ತಿಮ್ಮಪ್ಪನೆಂದೇ ಬಾಲ್ಯದಲ್ಲೇ ತಿಮ್ಮಪ್ಪ ರಾಮಾಯಣ ಮಹಾಭಾರತ ಭಾಗವತ ಅಲಂಕಾರ ಕಾವ್ಯಮೀಮಾಂಸಾ ಶಾಸ್ತ್ರ ಛಂದಸ್ಸು ವ್ಯಾಕರಣ ಮುಂತಾದವನ್ನು ಅಧ್ಯಯನ ಮಾಡಿದ ಕತ್ತೀವರಸೆ

1 ಡಾ ರಂ ಶ್ರೀ ಮುಗಳಿ ಕನ ಡ ಸಾಹಿತ್ಯ ಚರಿತ್ರೆ

ಕಂಸ್ತಿ, ಅಶ್ವವಿದ್ಯೆಗಳಲ್ಲಿ ಯೋಗ್ಯ ತರಬೇತಿ ನೀಡಲು ಬೀರಪ್ಪ ವ್ಯವಸ್ಥೆ ಮಾಡಿದ್ದ ಕೆಲದಿನಗಳಲ್ಲಿ ತಿಮ್ಮಪ್ಪ ಯುದ್ಧಕಲೆ ಮತ್ತು ಆಡಳಿತಗಳಲ್ಲಿ ಸಿದ್ಧಿ ಸಾಧಿಸಿದ ಬಾಹುಬಲವಿದ್ದರೆ ಜೀವನದಲ್ಲಿ ಏನನಾ ದರೂ ಸಾಧಿಸಬಹುದು ಎಂಬುದು ತರುಣ ತಿಮ್ಮಪ್ಪನ ನಂಬಿಕೆ ಯುದ್ಧವೆಂದರ ಅವನ ರೊ ಮ ನಿಮಿರುತ್ತಿತ್ತು ರಣರಂಗ ದಲ್ಲಿ ತಿಮ್ಮಪ್ಪ ಹೊಕ್ಕನೆಂದರೆ ಎದ ರಾಳಿಗಳು ಚೆಲ್ಲಾಪಿಲ್ಲಿಯಾಗುತ್ತಿದ್ದರು ಕನಕ ದಾಸರು ತಮ್ಮ ಕೀರ್ತನೆಯೊಂದರಲ್ಲಿ ಈ ಪ್ರಸಂಗ ಉಲ್ಲೇಖಿಸಿದ್ದಾರೆ

ಕನಕ ದಳದಲಿ ಕಲಿತನೆಂದರೆ ಫೌಜಂ
ಕನಕುಮನಕಾಗ ವುದು ಹರಿಯೆ

ತಿಮ್ಮಪ್ಪ ತಾರುಣ್ಯದ ಹೊಸ್ತಿಲಲ್ಲಿರುವಾಗ ಪ್ರೀತಿಯ ತಂದೆಯನ್ನು ಕಳೆದುಕೊಂಡ ಇದರಿಂದ ಅವನ ಮನಸ್ಸಿಗೆ ಆಘಾತವಾಯಿತು ಆದರೂ ಧೈರ್ಯದಿಂದ ಢಣಾಯಕ ನಾಗಿ ಅಧಿಕಾರ ವಹಿಸಿಕೊಂಡ ಹೀಗೆ ಅಧಿಕಾರ ವಹಿಸಿಕೊಂಡ ಕೆಲ ದಿವಸಗಳಲ್ಲಿಯೇ ಕನಕಲಕ್ಷ್ಮಿ ಒಲಿದು ಒಂದಳು ಭೂಮಿಯನ್ನು ಅಗೆಯುತ್ತಿದ್ದಾಗ ಏಳು ಕೊಡಗಳ ತುಂಬ ಚಿನ್ನ ದೊರೆತವಂತೆ ಹೀಗೆ ದೊರೆತ ಹಣವನ್ನು ತಿಮ್ಮಪ್ಪ ಬಳಸಿದ್ದು ದೇವಾಲಯಗಳ ಜೀರ್ಣೋದ್ಧಾರಕ್ಕೆ ಮತ್ತು ಬಡಬಗ್ಗರ ಕಲ್ಯಾಣಕ್ಕೆ ಇದರಿಂದ ತಿಮ ಪ್ಪನನ್ನು ಜನ ಕೊಂಡಾಡಿದರು ಕನಕ ದೊರೆತದ್ದರಿಂದ ತಿಮ್ಮಪ್ಪ ಕನಕನಾಯಕ ನಾದನು ದಕ್ಷನಾಗಿ ಮತ್ತು ಜನೋಪಯೋ ಗಿ ಕಾರ್ಯ ಕೈಗೊಂಡು ಆಡಳಿತ ನಡೆಸ ತ್ತಿದ್ದ ಕೆಲ ದಿನಗಳಲ್ಲಿ ಕನಕನಿಗೆ ಬಂಕಾಪುರದ ಸೈನ್ಯಾಧಿಪಟ್ಟ ಲಭಿಸಿತು ಬಂಕಾಪುರ ಆಗ ವಿಜಯನಗರದ ಆಡಳಿತಕ್ಕೆ ಒಳಪಟ್ಟಿತ್ತು

ತಿಮ್ಮಪ್ಪನಿಗೆ ವಿವಾಹವೂ ಆಗಿತ್ತು ಮೋಹನತರಂಗಿಣಿಯಲ್ಲಿ ಕಥೆಯ ತಂತ್ರ ಹೆಂಡತಿಗೆ ಹೇಳುವಂತೆ ಇರುವುದರಿಂದ ಮತ್ತು ಅದರಲ್ಲಿ ಮದ್ವಲ್ಲಭೆ ಮಡದಿ ಎಂದು ಸಂಬೋಧಿಸಿರುವುದರಿಂದ ನಿಸ್ಸಂದೇಹವಾಗಿಯೂ ಅವರಿಗೆ ವಿವಾಹವಾಗಿತ್ತು ಕಾವ್ಯದಲ್ಲಿ ಉಲ್ಲೇಖಿಸಿರುವ ಸುಜ್ಞಾನವಧೂಟಿ ಕವಿಯ ಹೆಂಡತಿ ಕನಕ ತಮ್ಮ ಕಾವ್ಯದಲ್ಲಿ ಹೆಂಡತಿ ಗುಣಶೀಲೆ ರೂಪವತಿ ಎಂಬುದನ್ನು ಬಣ್ಣಿಸಿದ್ದಾರೆ ಆದರೆ ಹೆಂಡತಿಯ ಹೆಸರು ಎಲ್ಲೂ ಉಲ್ಲೇಖಿತವಾಗದಿರುವುದು ಸೋಜಿಗದ ಸಂಗತಿ ಕನಕನ ಮನಸ್ಸಿನ ಮೇಲೆ ಉಂಟಾದ ಎರಡನೆಯ ಆಘಾತ ತಾಯಿ ತೀರಿಕೊಂಡದ್ದು ವಿವಾಹವಾದ 3-4 ವರ್ಷಗಳಲ್ಲಿ ಕನಕ ದಂಪತಿಗಳಿಗೆ ಹ ಟ್ಟಿದ ಮಗು ಕೂಡ ಅಕಾಲ ಮೃತ್ಯುವಿಗೆ ಈಡಾಯಿತು ಅನಂ್ತರ ಏಳೆಂಟು ವರ್ಷಗಳಲ್ಲಿ ಮಮತೆಯ ಮಡದಿ ಕೂಡ ಅಸು ನೀಗಿದಳು ಆಗಾಗ ಸಂಸಾರದಲ್ಲಿ ವಿರಕ್ತಿಯುಂಟಾಗುತ್ತಿದ್ದರೂ ತನ್ನ ಪ್ರೀತಿಪಾತ್ರರಾದ ಜನರನ್ನು ತ್ಯಜಿಸಿ ಹೋಗಲು ಮನಸ್ಸು ಹಿಂದೇಟು ಹಾಕುತ್ತಿತ್ತು

ವಿಜಯನಗರ ಸಾಮ್ರಾಜ್ಯ ಸಮೃದ್ಧವಾಗಿದ್ದರೂ ಆಗಾಗ ಚಿಕ್ಕಪುಟ್ಟ ಕಾಳಗ ಗಳು ಆಗುತ್ತಿದ್ದುದುಂಟು ಹೀಗೆ ನಡೆದ ಕಾಳಗವೊಂದರಲ್ಲಿ ಕನಕನಿಗೆ ಪರಾಭವ ಉಂಟಾಯಿತು ಎಲವಾದ ಪೆಟ್ಟುಬಿದ್ದು ಕ ದ ರೆಯಿಂದ ಬಿದ್ದುಬಿಟ್ಟ ಯುದ್ಧ ದಲ್ಲಿ ಗಾಯಗಳು ಮೈತುಂಬ ಆಗಿದ್ದವು ಏಳುವುದೇ ಸಾಧ ವಾಗಲಿಲ್ಲ ಆಗ ಕನಸಿನಲ್ಲಿ ದೇವರು ಬಂದು ನನ್ನ ದಾಸನಾಗುವೆಯಾ ಎಂದು ಕೆ ಳಿದನಂತೆ ಎಲ್ಲಿಯಾದರೂ ಉಂಟೆ ಅರಸನಾದವನು ಆಳಾಗಬಲ್ಲನೆ ಎಂದು ಕನಕ ಉತ್ತರಿಸಿದ ನೋಡ ದಾಸನಾಗುವೆಯಾದರೆ ಬದುಕ ವೆ ಎಂದಂತಾಯಿ ತು ನೋವನ್ನು ಸಹಿಸದ ಕನಕ ದಾಸನಾಗುವೆ ಈ ನೋವಿನಿಂದ ಮುಕ್ತಿನೀಡು ಎಂದನಂತೆ ಆಗ ರಣರಂಗದಲ್ಲಿ ಯಾರೋ ಅಪರಿಚಿತ ಬಂದು ಉಪಚರಿಸಿದನಂತೆ ದೈವಕೃಪೆ ಇಲ್ಲದಿದ್ದರೆ ತಾನು ಬದುಕ ತ್ತಿರಲಿಲ್ಲ ಎಂದು ಕನಕ ಭಾವಿಸಿದ ಈ ಘಟನೆಯ ನ್ನು ಅವರು ಕೀರ್ತನೆಯೊಂದರಲ್ಲಿ ವ್ಯಕ್ತಪಡಿಸಿದ್ದಾರೆ

> ರಣದೊಳಗೆ ದೇಹವ ಖಂಡತ ಂಡವ ಮಾಡಿ ।
> ರಣವನುತ್ತರಿಸಿ ಮರಣ ತೋರಿದೆ ॥
> ಪ್ರ್ಣವಗೋಚರನಾಗಿ ಲೀಲೆಯಿಂದಲಿ ಬಂದು
> ಹೆಣಕೆ ಪ್ರಾಣವನು ತಂದಿತ್ತ ಮಹಾತುಮನೆ ॥ 1 ॥
> ತೊಂತಿಕೊಂಡವು ಬೆನ್ನಲೊಸರುವ ರೋಹಿತಕೆ
> ಒಂತ್ಕ ಮುಖ ಗ್ರಹಗಳನು ಕಳಚಿ ಬಿಸುಟೆ ॥

ವೀರರಾಹುತ ಬಲದ ಭಾರವನು ತರಿದಹಂಕಾರವನು ಮುರಿದ ಹರಿಯೆ ದೊರೆತನ ಬಿಡಿಸಿ ಸುಸ್ಥಿರಮಾರ್ಗವನೆ ತೋರಿ ಪರಿಪಾಲಿಸಿದೆನ್ನ ಹರಿಯೆ' ಹರಿ ನಿನ್ನ ಪದ ಕಮಲ ತರುಣದಿಂದಲಿ ಎನಗೇ ದೊರಕಿತೀ ಗುರುಸೇವೆ ಹರಿಯೇ ಎಂದು ವಿವಿಧ ಬಗೆಗಳಲ್ಲಿ ಕನಕದಾಸರು ವಿವರಿಸಿದ್ದಾರೆ ಹೀಗೆ ಕನಕನಾಯಕ ಕನಕದ ಸರು ಸುಪ್ತವಾಗಿದ್ದ ದೈವಭಕ್ತಿಗೆ ಕಾಳಗವೊಂದು ನಿಮಿತ್ತ ಮಾತ್ರ ಎನ್ನಬಹುದು

ಕನಕದಾಸರು ಯಾವ ಪಂಥಕ್ಕೆ ಸೇರಿದವರು ಎನ್ನುವುದರ ಬಗ್ಗೆ ಜಿಜ್ಞಾಸೆಗಳಿವೆ ಅವರ ಕೃತಿಗಳನ್ನು ಆಧಾರವಾಗಿಟ್ಟುಕೊಂಡು ಅವರು ಇಂಥ ಪಂಥದವರೆಂದು ಹೇಳಲು ಕೆಲವು ವಿದ್ವಾಂಸರು ಪ್ರಯ ತಿ ಸಿದ್ದಾರೆ ಶ್ರೀ ವೈಷ್ಣವ ವ ತದ ಶ್ರೀ ರಾಮಾನುಜಾಚಾರ್ಯ ಮತ್ತು ತಾತಾಚಾರ್ಯರನ್ನು ಅವರು ಸ್ತುತಿಸುವುದರಿಂದ ವೈಷ್ಣವ ಪಂಥದವರು ಎಂದು ಹೇಳುವುದುಂಟು ಮುಂದೆ ಅವರು ವ್ಯಾಸರಾಯ ರಿಂದ ದೀಕ್ಷೆ ಪಡೆದವರಾದ್ದರಿಂದ ಮಾಧ್ವ ಪಂಥದವರೆಂದೂ ಕೆಲವರು ಊಹಿಸಿದ್ದಾರೆ ಅವರ ಕಾವ್ಯಗಳಲ್ಲಿ ಕ್ವಚಿತ್ತಾಗಿ ಗೋಚರಿಸುವ ಕೆಲವು ಶಿಷ್ಟ ಕಾರಣಗಳಿಂದ ಅವರನ್ನು ಆ ಈ ಪಂಗಡಗಳಿಗೆ ಸೇರಿಸುವುದಾಯಿತು ಆದರೆ ಅವರು ಯಾವ ಮತವನ್ನೂ ತಿರಸ್ಕರಿಸದೆ ಯಾವ ದೇವರನ್ನೂ ಬಹಿಷ್ಕರಿಸದೆ ವಿಷ್ಣು–ಶಿವರಲ್ಲಿ ಭೇದವೆಣಿಸದೆ

ಆತ್ಮ ಸಾಕ್ಷಾತ್ಕಾರ ಮಾಡಿಕೊಂಡು ಕಾವ್ಯ ಕ್ಷೇತ್ರ ಆಧ್ಯಾತ್ಮ ಕ್ಷೇತ್ರಗಳೆರಡರಲ್ಲೂ ಸಮಾನ ಖ್ಯಾತಿ ಗಳಿಸಿದ ಮಹಾನ ಭಾವರು *

## ಜಾತಿ

ಜಾತಿಯ ಮೇಲಿನಿಂದ ಅಂತಸ್ಸನ್ನು ಅಳೆಯುವ ಕಾಲದಲ್ಲಿ ಕನಕದಾಸರು ಇದ್ದರು ಅವರು ಯಾವ ಪಂಥದವರೆಂಬ ಜಿಜ್ಞಾಸೆಗೆ ಒಳಪಟ್ಟ ವಿದ್ವಾಂಸರು ಅವರ ಜಾತಿಯ ಬಗ್ಗೆಯೂ ಭಿನ್ನವಾದ ನಿಲವನ್ನು ತಳೆದಿದ್ದಾರೆ ಡಾ॥ ರಂ ಶ್ರೀ ಮುಗಳಿಯವರು ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಉಪಲಬ್ಧ ಸಾಮಗ್ರಿಯನ್ನು ಕಣ್ಣಿಟ್ಟು ನೋಡಲಾಗಿ ಅವನು ಬಾಡವೆಂಬ ಹಳ್ಳಿಯಲ್ಲಿ ಕುರುಬರ ಕುಲದಲ್ಲಿ ಹುಟ್ಟಿ ಬೆಳೆದು ದಂಡನಾಯಕನಾದನೆಂದೂ ಯಾವುದೋ ಯುದ್ಧ ಕಾಲದಲ್ಲಿ ಸಂಸಾರದ ಬಗ್ಗೆ ಉಪರತಿ ಹ ಟ್ಟಿ ಭಕ್ತನಾದನೆಂದೂ ತೋರುತ್ತದೆ ಎಂದಿದ್ದಾರೆ

ಕನಕದಾಸರ ಭಕ್ತಿ ಗೀತೆಗಳು ಪ್ರಕಟಿಸಿರುವ ಬೆಟಗೇರಿ ಕೃಷ್ಣಶರ್ಮ ಮತ್ತು ಬೆಂಗೇರಿ ಹುಚ್ಚುರಾಯರು ಕನಕದಾಸರು ಹ ಟ್ಟಿದ ಜಾತಿ ಯಾವುದೆಂಬುದೂ ಒಂದು ಒಡೆಯ ಲಾರದ ಒಗಟೇ ಆಗಿದೆ ಅವರನ್ನು ಕುರುಬ ಜಾತಿಯವರೆಂದು ಹೇಳುವ ಪರಂಪರೆಯೂ ಇದೆ ನ ಯ ಕ (ಬೇಡ) ಜಾತಿಯವರೆಂದು ಹೇಳುವ ಪರಂಪರೆಯೂ ಇದೆ ಶ್ರೀ ಪುರಂದರದಾಸರು ರಚಿಸಿರುವರೆಂದು ಹೇಳಲಾದ ದಾಸರ ನಿಂದಿಸಬೇಡ ಮನುಜಾ ಹರಿದಾಸರನು ನಿಂದಿಸಲೇ ಬೇಡ ಎಂಬ ಗೀತದಲ್ಲಿ ಕನಕದಾಸ ಕಬ್ಬಲಿಗ ಜಾತಿಯವರೆಂದೂ ತುಂಬುರನ ಅವತಾರಿಗಳೆಂದೂ ಇದೆ ಎಂಬ ಪ್ರಶೆಯನ್ನು ಮುಂದೊಡ್ಡಿ ಕನಕದಾಸರು ಹುಟ್ಟಿದ ಜಾತಿ ಯಾವುದೇ ಇರಲಿ ಅವರು ಅನ ಸರಿಸಿದ ಮತತತ್ವ ರಾಮಾನುಜಾಚಾರ್ಯರ ವಿಶಿಷ್ಟಾದ್ವೈತವೆಂದು ಕಂಡುಬರುತ್ತದೆ ಎಂದಿದ್ದಾರೆ ಕಾಗಿನೆಲೆಗೆ ಸಮೀಪವಿರುವ ಕುಮ್ಮೂರಿನಲ್ಲಿ ಕನಕದಾಸರ ಮನೆತನದವರು ನೆಲೆಸಿರುವರು ಎಂಬ ವಿಷಯವನ್ನು ಎಲ್ ಜಿ ಹಾವನೂರರ ಮೂಲಕ ತಿಳಿದು ಹೊಸ ಸಂಗತಿ ತಿಳಿಸಿದ್ದಾರೆ ಕನಕದಾಸರು ಕುರುಬರೋ ನಾಯಕರೋ ಎಂಬುದನ್ನು ಚರ್ಚಿಸಿದ್ದಾರೆ ಪುರಂದರದಾಸರು ಕಬ್ಬಲಿಗ ಜಾತಿಯವ ಎಂಬುದನ್ನು ಚರ್ಚಿಸಿಲ್ಲ ಪ್ರಸಿದ್ಧ ಇತಿಹಾಸಕಾರ ಡಾ॥ ಪಿ ಬಿ ದೇಸಾಯಿ ಅವರು ಕನಕದಾಸ ಕುರುಬ ಜಾತಿಗೆ ಸೆ ರಿದವನೆಂಬುದನ್ನು ಒಪ್ಪಿಕೊಂಡಿದ್ದಾರೆ ಕನಕದಾಸರ ಕೀರ್ತನೆಗಳಲ್ಲಿ

> ನಾವು ಕುರುಬರು ನಮ್ಮ ದೇವರು ಬೀರಯ್ಯ
> ಕಾವ ನಮ್ಮಜ್ಜ ನರಕುರಿ ಹಿಂಡುಗಳ

ಎಂದಿದ್ದಾರೆ ಆದ್ದರಿಂದ ಅವರು ಕುರುಬರೆನ್ನಬಹುದು ಈ ವಾದವನ್ನು ಕಟ್ಟೀ

* ದೇಜಗೌ ಪ್ರಸ್ತಾವನೆ ನಳಚರಿತ್ರೆ *1965*

ಶೇಷಾಚಾರ್ಯ ಅವ್ರಗಳೆದು ಕೀರ್ತನೆಗಳಲ್ಲಿ ದೇವರನು ಕುರುಬನಿಗೂ ನರರನ್ನು ಕುರಿಗಳಿಗೂ ಹೋಲಿಸಿರುವುದರಿಂದ ಕನಕದಾಸ ಕುರುಬರಲ್ಲ ಎಂದು ಅಭಿಪ್ರಾಯ ಪಟ್ಟಿದ್ದಾರೆ ಆದರೆ ಕೀರ್ತನೆಯ ಕೊನೆಯಲ್ಲಿ ನಮ್ಮ ದೇವರು ಬೀರಪ್ಪ ಎಂದು ದಾಸರು ಹೇಳಿದ್ದಾರೆ ಬೀರಪ್ಪ ಕುರುಬರ ದೇವರು

ಮಾರಪಿತ ಕಾಗಿನೆಲೆಯಾದಿ ಕೇಶವನಂಘ್ರಿ
ವಾರಿಜವ ನೆರೆನಂಬದವನೆ ಕುರುಬ

ಜನರು ಕುರುಬ ಎಂದು ನಿಂದಿಸಿದಾಗ ಅವರಿಗೆ ಉತ್ತರವಾಗಿಯೂ ಕನಕದಾಸರು ಇದನ್ನು ಬರೆದಿರಬಹುದು ಅವರ ಇನ್ನೊಂದು ಕೀರ್ತನೆಯಲ್ಲಿ ಡೊಳ್ಳಿನ ಹಾಡಿನ ಮಾದರಿ ಇದೆ ಬಾಲ್ಯದ ಡೊಳ್ಳಿನ ಪದ ಅವರ ಮೇಲೆ ಗಾಢ ಪ್ರಭಾವ ಬೀರಿರಬಹುದು ಕನಕದಾಸರೇ ರಚಿಸಿದ ಉಗಾಭೋಗವೊಂದಿದೆ ಅದರಲ್ಲಿ

ನಾರದರ ಅಂಶವೇ ಪುರಂದರದಾಸರು ನಾ ಯಮನು ಮುಂದೆ
ಮಾಂಡವ್ಯ ಶಾಪದಿಂದ ಎರಡು ಜನ್ಮ ಶೂದ್ರಯೋನಿಯಲ್ಲಿ ಪೊಕ್ಕೆನು
ಒಂದು ಜನುಮ ವಿದುರನಾಗಿ ಕುರುಂಬರ ಕುಲದಲ್ಲೀಗ ಪುಟ್ಟಿದೆ
ಎನಗೆ ಈ ಜನ್ಮದಲ್ಲಿ ಮುಕ್ತಿ ಎಂತೆಂಬೆ

ಹೀಗೆ ಕನಕದಾಸರೇ ತಮ್ಮ ಜಾತಿ ಸ್ಪಷ್ಟಪಡಿಸಿದ್ದಾರೆ ಎಸ್ ಕೆ ರಾಮ ಚಂದ್ರರಾಯರು ಕಾಗಿನೆಲೆಯ ಕನಕ ಎಂಬ ಲೇಖನದಲ್ಲಿ ಕನಕದಾಸರು ತಾವು ಕುರುಬರೆಂದೂ ತಮ್ಮ ದೇವರು ಬೀರೇದೇವರೆಂದು ಹೇಳಿಕೊಂಡಿದ್ದಾರೆ ಕುರುಬರು ಒಂದು ಕಾಲಕ್ಕೆ ಇಡೀ ನಾಡಿನಲ್ಲಿ ವಿಸ್ತೃತರಾಗಿದ್ದರು ಮೊದಲಿಗೆ ಇವರೆಲ್ಲ ವೀರಶೈವರು ಕಾಳಹಸ್ತೀಶ್ವರನ (ತಿರುಕ್ಕಾಳತ್ತಿ ದೇವರ) ಒಕ್ಕಲು ಆದರೆ ಬಹುಮಟ್ಟಿಗೆ ಗಂಗಮ್ಮ ಮುತ್ಯಾಲಮ್ಮ ಹೊನ್ನಿಯಮ್ಮ ಎಲ್ಲಮ್ಮ ಅಂಕಾಲಮ್ಮ ಪೋಲೇರಮ್ಮ ಮುಂತಾದ ಗ್ರಾಮದೇವತೆಗಳನ್ನೇ ಪೂಜೆ ಮಾಡುತ್ತಿದ್ದ ಜನ ಇವರು ಬೀರೇದೇವರೆಂಬುದು ಗ್ರಾಮದೇವತೆ ವೀರನೆಂಬುವ ಸಂಸ್ಕೃತ ಪದದ ತದ್ಭವ ರೂಪ ವೀರಭದ್ರನನ್ನೋ ಅಥವಾ ಮಹಾವೀರನನ್ನೋ (ಶಿವನನ್ನೋ) ಸೂಚಿಸುವ ಪದ ಇದು ಆದರೆ ಒಂದು ಕಾಲಕ್ಕೆ ಕುರುಬರೆಲ್ಲ ತಿರುಪತಿಯ ದೇವರ ಒಕ್ಕಲಾದರು ಅವರ ಪ್ರಮುಖ ಗ್ರಾಮ ದೇವತೆಯಾದ ಗಂಗಮ್ಮನೂ ವೆಂಕಟೇಶ್ವರನ ತಂಗಿಯೆಂದೇ ಕಲ್ಪನೆ ಈಗಲೂ ಕುರುಬ ಜನರೆಲ್ಲ ತಿರುಮಲೆ ದೇವರ ಭಕ್ತರು *

ಡಾ ರಂಗನಾಥ ದಿವಾಕರರು ಕನಕದಾಸರು ಅಂಡೆಕುರುಬ ಎಂಬ ಅಭಿಪ್ರಾಯಂ ಪಟ್ಟಿದ್ದಾರೆ ಬಿ ಶಿವಮೂರ್ತಿಶಾಸ್ತ್ರಿಯವರು ಕನಕದಾಸರು ಜನ್ಮತಃ ಕುರುಬರು ಎಂದಿದ್ದಾರೆ

---

* ಸುಧಾ ಸಂಪುಟ 1 ಸಂಚಿಕೆ 15, 1965 ಏಪ್ರಿಲ್ 1

ಕನಕದಾಸರು ಯಾವುದೆ ಕುಲದವರಾಗಿದ್ದರೂ ಅವರು ದಾಸರಲ್ಲಿ ಅತ್ಯಂತ ಶ್ರೇಷ್ಠರು ಕನ್ನಡ ಕವಿಪರಂಪರೆಗಳಲ್ಲಿ ಅವರದು ಅತ್ಯಂತ ಹಿರಿಯ ಸ್ಥಾನ ತಮ್ಮ ಕೀರ್ತನೆ ಚೂಣ್ಣುಡಿ ವ್ಯಂಗ್ಯೋಕ್ತಿಗಳ ಮೂಲಕ ಕನ್ನಡ ಸಾಹಿತ್ಯ ಶ್ರೀಮಂತಗೊಳಿಸಿದ ಕನಕದಾಸರ ಪ್ರಮುಖ ಕೃತಿಗಳನ್ನು ಇಲ್ಲಿ ಸಂಕ್ಷಿಪ್ತವಾಗಿ ಅವಲೋಕಿಸಿದೆ ಮೋಹನ ತರಂಗಿಣಿ ನಳಚರಿತ್ರೆ ಹರಿಭಕ್ತಿಸಾರ, ರಾಮಧಾನ್ಯಚರಿತೆ ನೃಸಿಂಹಸ್ತುತಿ ಇವು ದಾಸರು ಕನ್ನಡಸಾಹಿತ್ಯಕ್ಕೆ ನೀಡಿದ ಅನರ್ಘ್ಯ ರತ್ನಗಳು ಅವುಗಳಲ್ಲಿ ಕೊನೆಯದು ಲಭ್ಯವಿಲ್ಲ

**ಮೋಹನತರಂಗಿಣಿ** ಕನಕದಾಸರ ಪ್ರಾರಂಭದ ಕೃತಿ ಭೋಗಮೂಲವಾದ ಶೃಂಗಾರವೇ ವಸ್ತು ಇದು ಭಕ್ತಿ ಸಾಹಿತ್ಯ ಪರಂಪರೆಗೆ ಸೇರಿದ್ದಲ್ಲ 42 ಸಂಧಿಗಳಿವೆ ಸಾಂಗತ್ಯಗಳಿರುವುದು 2700 ಇದರ ಇನ್ನೊಂದು ಹೆಸರು ಕೃಷ್ಣಚರಿತೆ ಶ್ರೀ ಕೃಷ್ಣ ರುಕ್ಮಿಣಿ ರತಿಮನ್ಮಥ ಉಷಾಅನಿರುದ್ಧರ ಪ್ರೇಮಗಾಥೆಯನ್ನು ದಾಸರು ಅತ್ಯಂತ ಸೊಗಸಾಗಿ ನಿರೂಪಿಸಿದ್ದಾರೆ
ದೈವೀಪಾತ್ರಗಳನ್ನು ಶೃಂಗಾರಕಾವ್ಯಗಳಲ್ಲಿ ಜೀವಂತವಾಗಿರಿಸಿದ ಶ್ರೇಯಸ್ಸು ಇವರದು ಮೋಹನತರಂಗಿಣಿಗೆ ಕಥಾ ವಸ್ತುವನ್ನು ಆಯ್ದುಕೊಂಡಿರುವುದು ಮಹಾಭಾರತ ಭಾಗವತ ಮತ್ತು ಪುರಾಣಗಳಿಂದ ವಿಜಯನಗರದ ಸಮಕಾಲೀನ ಜೀವನವನ್ನು ನಮ್ಮ ಕಣ್ಮುಂದೆ ಪೌರಾಣಿಕ ಪಾತ್ರಗಳ ಹಿನ್ನೆಲೆಯಲ್ಲಿ ಇರಿಸಿರುವುದರಿಂದ ಅವರನ್ನು ಆಕಾಲದ ಚರಿತ್ರಕಾರರ ಸಾಲಿಗೆ ಸೇರಿಸಿದೆ ವಿಜಯನಗರದ ಸಾಮ್ರಾಜ್ಯದ ಸುವರ್ಣ ಯುಗದಲ್ಲಿ ಈ ಕೃತಿ ರಚಿಸಲ್ಪಟ್ಟಿತು ಎಂಬುದು ಗಮನಿಸಬೇಕಾದ ಸಂಗತಿ

ಮೋಹನತರಂಗಿಣಿಯಲ್ಲಿನ ಶ್ರೀ ಕೃಷ್ಣನ ದ್ವಾರಕೆ ಮತ್ತು ವಿದೇಶೀಪ್ರವಾಸಿಗಳ ವಿಜಯನಗರದ ವರ್ಣನೆ ಇವುಗಳಲ್ಲಿನ ಸಾಮ್ಯತೆಯನ್ನು ನಾವು ಗುರುತಿಸಬಹುದು, ಪುರಾಣಪುರುಷ ಶ್ರೀ ಕೃಷ್ಣನನ್ನು ವಿಜಯನಗರದ ಶ್ರೀಕೃಷ್ಣದೇವರಾಯನೊಂದಿಗೆ ಕಾವ್ಯದಲ್ಲಿ ಹೋಲಿಸಿದ್ದಾರೆ ಶ್ರೀ ಕೃಷ್ಣದೇವರಾಯನನ್ನು ಸ್ತುತಿಸಲೆಂದೇ ಕನಕದಾಸರು ಮೋಹನತರಂಗಿಣಿ ರಚಿಸಿದರೆಂದು ಹೇಳುವವರಿದ್ದಾರೆ ಡಾ ಜಿ ವರದರಾಜ ರಾವ್ ಅವರು ಪೌರಾಣಿಕವಾದ ಕಥಾವಸ್ತುವನ್ನು ಜನಪ್ರಿಯವಾದ ಧಾಟಿಯಲ್ಲಿ ಕಾವ್ಯಮಯವಾದ ಶೈಲಿಯಲ್ಲಿ ನಿರೂಪಿಸಿರುತ್ತಾರೆ ವಸ್ತುವಿನ ದೃಷ್ಟಿಯಿಂದ ಕನ್ನಡ ಕಾವ್ಯಗಳಲ್ಲಿ ಈ ಕವಿಗೆ ಒಂದು ಸ್ಥಾನ ಸಲ್ಲುತ್ತದೆ ಎಂದಿದ್ದಾರೆ *

ಸೌರಾಷ್ಟ್ರ ದ್ವಾರಕಾಪುರ ಕುಸುಮಾವತಿ ಶೋಣಿತಪುರ ಇವುಗಳ ವರ್ಣನೆಯನ್ನು ಕನಕದಾಸರು ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದ್ದಾರೆ ವಿಜಯನಗರದ ಸಂಪತ್ತು ಎಷ್ಟಿತ್ತು ಎಂಬುದಕ್ಕೆ ಮುಂದಿನ ಪದ್ಯದ ಉದಾಹರಣೆ ಸಾಕು

ಸೋಮಸೂರಿಯ ವೀಥಿ ವೀಥಿಯಿಕ್ಕೆಲದಲ್ಲಿ
ಹೇಮನಿರ್ಮಿತ ಸೌಧದೊಳು

---

* ಹರಿದಾಸ ಹೃದಯ ಪುಟ 79

ರಾಮಣೀಯತವೆತ್ತ ಕಳಸದಂದಡಿಯಿರ್ದು
ವಾ ಮಹಾದ್ವಾರಕಾಪುರದ (3–11)
ಭೋಜಿಪ ಕರ್ಪೂರ ಕಸ್ತೂರಿ ಜೀರ್ಣಜ
ವಾಜಿ ಪ್ರಣುಗು ಬಹುತೈಲ
ಸೋಜಿಗವಡೆದ ಸುಗಂಧದಂಗಡಿಗಳು
ರಾಜಿಸುತಿರ್ದುವಿಕ್ಕೆಲದಿ
ಚಪ್ಪನ್ನದೇಶದ ನಾಣೆಯುಂಗಳ ನೋಟ
ತುಪ್ಪದ ಚಪಲ ಸೆಟ್ಟಿಗಳು
ಒಪ್ಪವಡೆದು ಕುಳಿತಿರ್ದರು ಹಣಹೊನ
ಕುಪ್ಪೆಯು ವ ಂದಿಟ್ಟುಕೊಂಡು
ಒರೆಗಲ್ಲ ರಜವ ಮೇಣದೊಳಿಒತ್ತಿ ತಿಗೆದದ
ಕರಗಿಸುವರ್ಣ ಬಂಡುಗವ
ನೆರೆದ ಯಾಚಕರಿಗೆ ಹಂಚಿಕಂಡುವ ಚಿನ್ನ
ವರದರೊಪ್ಪಿದರು ಕಟ್ಟೆಯಲಿ
ಓರಂತೆ ಮರಕಾಲರು ಹಡಗಿನ ವ್ಯವ
ಹಾರದಿ ಗಳಿಸಿದ ಹಣವ
ಭಾರಸಂಖ್ಯೆಯಲಿ ತೂಗುವರು ಬೇಡಿದರೆ ಕು
ಬೇರಂಗೆ ಕಡವ ಕುಡುವರು

ಚಿನ್ನದಿಂದ ನಿರ್ಮಿಸಲ್ಪಟ್ಟ ಉಪ್ಪರಿಗೆ ಮನೆಗಳು ಸುವರ್ಣವನ್ನೇ ಮಾಡಿಟ್ಟು ಕುಳಿತಿರುವ ಶೆಟ್ಟರು ಹಡಗಿನ ವ್ಯಾಪಾರದಿಂದ ಗಳಿಸಿದ ಹಣವನ್ನು ಭಾರಸಂಖ್ಯೆಯಲ್ಲಿ ತೂಗ ವೆ ಬೇಡಿದರೆ ಕುಬೇರನಿಗೂ ಕಡನೀಡುವ ಶ್ರೀಮಂತರಿದ್ದರು ಎಂದರೆ ಅದು ಎಂಥ ವೈಭವದ ಕಾಲ ಎನಿಸುವುದು ವಿದೇಶಿ ಪ್ರವಾಸಿಗರು ಉಲ್ಲೇಖಿಸಿರುವ ವಿಜಯನಗರದಲ್ಲಿ ಕಳ್ಳಕಾಕರ ಭೀತಿ ಭಯವಿರಲಿಲ್ಲ ಮುತ್ತು ರತ್ನಗಳನ್ನು ಬೀದಿಯ ಇಕ್ಕೆಲಗಳಲ್ಲಿ ಇಟ್ಟುಕೊಂಡು ಮಾರುತ್ತಿದ್ದುದು ಸತ್ಯ– ಎಂಬುದಕ್ಕೆ ಕನಕದಾಸರ ಕಾವ್ಯಗಳೆ ನಿದರ್ಶನ ಯುದ್ಧದ ವರ್ಣನೆಯು ಅತ್ಯಂತ ಸಮರ್ಪಕವಾಗಿ ಕಾವ್ಯದಲ್ಲಿ ಮೂಡಿಬಂದಿದೆ ಶ್ರೀ ಕೃಷ್ಣ ಬಾಣಾಸುರನ ಶೋಣಿತ ಪುರಕ್ಕೆ ದಂಡೆತ್ತಿ ಹೋಗುವಾಗಿನ ವರ್ಣನೆಯನ್ನು ನೋಡಿ

ಮುತ್ತಿನ ಗದ್ದುಗೆ ಗರುಡನ ಹೆಗಲಿನೊ
ಳೆತ್ತಿಸಿ ಬಿಗಿದು ಹಲ್ಲಣಿಸಿ
ಅತ್ಯಂತ ಸೌಖ್ಯವ ಮಾಡಿ ಸಂತಸದಿಂದೆ
ಹತ್ತಿದ ಶ್ರೀ ಕೃಷ್ಣರಾಯ।

ಇಲ್ಲಿ ಶ್ರೀ ಕೃಷ್ಣದೇವರಾಯ ಬಿಜಾಪುರದ ಆದಿಲಷಾನ ಮೇಲೆ ಯುದ್ಧಕ್ಕೆ ಹೊರಟಿರುವುದನ್ನು ಹೋಲಿಸಲಾಗಿದೆ ಮುಂದೆ ದಾಸರು ಶ್ರೀ ಕೃಷ್ಣದೇವರಾಯ ಸುಖಸಂತೋಷದಿಂದ ಸಾಮ್ರಾಜ್ಯ ಆಳಿದನು ಎಂಬುದನ್ನು ಉಲ್ಲೇಖಿಸಿದ್ದಾರೆ ಒಂದೆಡೆ ಅವರು ವಿಜಯನಗರದ ಕಾಲದ ಸವಿಯೂಟವನ್ನು ಬಣ್ಣಿಸಿದ್ದಾರೆ

> ಜೇನು ಸಕ್ಕರೆ ಕ್ಷೀರ ರಸವಪ್ಪ ಫೇಣಿ ಸು
> ಖೀನುಂಡೆ ವಡೆ ಗಾರಿಗೆಯ
> ನಾನಾಭಕ್ಷ್ಯ ಭೊ ಜ್ಯಂಗಳ ಪರಮ ಸು
> ಮ್ಮಾನದೆ ಬಡಿಸಿದರೊಲಿದು

ವಾರವನಿತೆಯರನ್ನು ಬಣ್ಣಿಸುವಾಗ ಪದ್ಮಿನಿ ಶಂಖಿನಿ ಹಸ್ತಿನಿ ಚಿತ್ರಿನಿ ವ ಎಂತಾದ ಹೆಣ್ಣುಗಳೆಂದು ಹೆಸರಿಸಿರುವುದು ಅವರಿಗಿದ್ದ ಕಾಮಶಾಸ್ತ್ರಪಾಂಡಿತ್ಯಕ್ಕೆ ಸಾಕ್ಷಿ ಕಾವ್ಯದಲ್ಲಿ ಶೃಂಗಾರ ಒಮ್ಮೊಮ್ಮೆ ಹದ್ದುಮೀರಿರುವ ಪ್ರಸಂಗಗಳೂ ಉಂಟು ರತಿ ಮಗುವಾಗಿದ್ದ ತನ ಗಂಡನೊಡನೆ ನಡೆದುಕೊಳ್ಳುತ್ತಿದ್ದ ರಿ ತಿ–ಅವಳ ಕಾಮ ದ ಇಚ್ಛೆಯನ್ನು ಎತ್ತಿತೋರಿಸುತ್ತದೆ

> ನೆಟ್ಟನೆ ಮೊಗ ನೋಡಿ ಮುದ್ದಿಪಳ್ ತರಳನ
> ಪುಟ್ಟ ಕೈಗಳ ತಂದು ತನ್ನ
> ಬಟ್ಟ ಬಲ್ಮೊಲೆಗಡರ್ಚುವಳು ಬ ಯೊಳು ಬಾಯ
> ನಿಟ್ಟು ಗಲ್ಲವ ಪೀಡಿಪಳು

ಕನಸಿನಲ್ಲಿ ಪ್ರಣಯ ಭೇಟಿ ಚಿತ್ರಲೇಖೆಯ ಯಕ್ಷಿಣಿ ಪ್ರದ್ಯುಮ್ನನನ್ನು ಕಂಡಾಗ ರುಕ್ಮಿಣಿಯ ಮೊಲೆಹಾಲು ಚಿಮ್ಮುವಿಕೆ ಇವೆಲ್ಲಾ ಅತ್ಯಂತ ಸೊಗಸಾಗಿ ಮೂಡಿಬಂದಿವೆ ಆದರೆ ಬಲಿಷ ವಾಗಿ ಬರಬೇಕಾದ ಅನಿರುದ್ಧನ ಪಾತ್ರಪೋಷಣೆ ಆಗದಿರುವುದು ಒಂದು ಕೊರತೆ ಬಾಣನ ಪಾತ್ರ ಶ್ರೀ ಕೃಷ್ಣನ ಶೃಂಗಾರವಿಲಾಸಗಳು ವಿಶಿಷ್ಟವಾಗಿ ಬಂದಿವೆ ಉಷೆಯ ಅರಮನೆಯಿಂದ ರಣಾಂಗಣಕ್ಕೆ ಹೊರಡುವ ಅನಿರುದ್ಧನನ್ನು ಮನೆಯ ಸ್ತ್ರೀಯರು ಬೀಳ್ಕೊಡುವುದು–ಯುದ್ಧಕ್ಕೆ ತೆರಳ ವ ವಿಜಯನಗರದ ವೀರರನ್ನು ಅವರ ಪತ್ನಿಯ ರು ಬೀಳ್ಕೊಡ ತ್ತಿದ್ದರು ಎಂಬುದನ್ನು ಜ್ಞಾಪಿಸುತ್ತದೆ ಆಕಾಲದ ಉಡುಗೆ ತೊಡುಗೆಯ ಬಗ್ಗೆಯೂ ಕಾವ್ಯದಲ್ಲಿ ಉಲ್ಲೇಖವಿದೆ ನಾಡೊಳಗುಳ್ಳ ಜಾಣರು ಜಾಣೆಯರೊಡನೆಯಾಡುವ ಮಾತುಗಳು ಸಕ್ಕದ ಕನ್ನಡ ಬಳಸಿಕೊಂಡಿದ್ದೇನೆಂದು ಕನಕದಾಸರು ಹೇಳಿಕೊಂಡಿದ್ದಾರೆ ಆದರೂ ಅಲ್ಲಲ್ಲಿ ಸಂಸ್ಕೃತದ ಬಳಕೆಯಿದೆ ಆಕಾಲದ ಪಂಡಿತರ ಮೆಚ್ಚುಗೆಗಳಿಸಬೇಕೆಂದು ಅವರು ಹೀಗೆ ಮಾಡಿರಬಹುದು ಅವರು ಬಳಸಿದ ಒಂದೆರಡು ನುಡಿಗಟ್ಟುಗಳು ಸೊಗಸಾಗಿವೆ

ಮೂಢರಂದದೊಳು ಗುದ್ದಲಿಯನು ಕೊಂಡು ನಾಡ ಕಾಲುವೆ ತಿದ್ದುವರೆ
ಕನಸಿನ ಛತ್ರಕ್ಕೆ ಗೋಣಿಯನಾಂತರೆ

ಶ್ರೀ ಕೃಷ್ಣ ರುಕ್ಮಿಣಿಯರ ವಿವಾಹೋತ್ಸವ ಶೃಂಗಾರದಿಂದ ಪ್ರಾರಂಭವಾಗುವ ಕಥೆ ದ್ವಾರಕಿಯ ಲ್ಲಿ ಉಷೆಯನು ಮನೆಗೆ ತುಂಬಿಸಿಕೊಳ್ಳುವಲ್ಲಿ ಕೊನೆಗೊಳ್ಳುವುದು ಕಾವ್ಯ ಪ್ರಪಂಚದಲ್ಲಿ ಮೋಹನತರಂಗಿಣಿ ಮಹಾಕಾವ್ಯದ ವರ್ಗಕ್ಕೆ ಸೇರಿದ್ದು ಮಹಾಕಾವ್ಯಕ್ಕೆ ಅವಶ್ಯಕವಾದ 18 ಅಂಗಗಳು ಅದರಲ್ಲಿ ಉಂಟು ಕನಕದಾಸರ ಪ್ರಾಯೋಗಿ ಕಥೆ ಮತ್ತು ಪ್ರಾಮಾಣಿಕ ಯತ್ನಗಳನ್ನು ಇಲ್ಲಿ ಕಾಣಬಹುದು *

**ನಳಚರಿತ್ರೆ** ಪುರಾಣ ಪ್ರಸಿದ್ಧ ನಳೋಪಾಖ್ಯಾನ ಈ ಕಾವ್ಯದ ವಸ್ತು ಭಾಮಿನಿ ಷಟ್ಪದಿಯಲ್ಲಿ ರಚಿತಗೊಂಡಿರ ಈ ಕೃತಿಯಲ್ಲಿ 481 ಪದ್ಯಗಳಿವೆ ಸಂಧಿಗಳು 9 ಇದಾದರೂ ಮೋಹನತರಂಗಿಣಿಯಂತೆ ಶೃಂಗಾರದ ಕಥೆ ಆದರೆ ಕವಿ ಇಲ್ಲಿ ಹೆಚ್ಚು'ಒತ್ತುಕೊಟ್ಟಿರುವುದು ತ್ಯಾಗಕ್ಕೆ ಪೌರಾಣಿಕ ಪಾತ್ರಗಳಿಗೆ ಮಾನವೀಯ ಕಳೆತ ಂಬಿದ್ದೇ ಇಲ್ಲಿನ ವೈಶಿಷ್ಟ್ಯ ಡಾ ಜಿ ಎಸ್ ಶಿವರುದ್ರಪ್ಪ ಅವರು ಬರೆದಂತೆ ಇದೊಂದು ಹೃದಯಸ್ಪರ್ಶಿ ಖಂಡಕಾವ್ಯ ವರಪುರದ ಚೆನ್ನಿಗರಾಯನ ಅಂಕಿತದಲ್ಲಿ ಕೃತಿರೂಪುಗೊಂಡಿದೆ ಈ ಕಾವ್ಯವನ್ನು ದಾಸರು ಬೇಲೂರಿನಲ್ಲಿ ರಚಿಸಿದರು ಎನ್ನಲಾಗಿದೆ ನಳಚರಿತ್ರೆಯಲ್ಲಿ ಕೂಡ ಕನಕದಾಸರು ಸಮಕಾಲೀನ ವಿಜಯನಗರದ ಇತಿಹಾಸ ಮಿಣುಕುಹಾಕುವಂತೆ ಮಾಡಿದ್ದಾರೆ ರಕ್ಕಸತಂಗಡಿಯ ಪರಾಭವದ ಅನಂತರ ಪುನಹ ವಿಜಯನಗರದವರು ಅಧಿಕಾರಕ್ಕೆ ಬಂದದ್ದು ಇವು ಅವರ ಮನಸ್ಸಿನಲ್ಲಿ ಇದ್ದಿರಬಹುದು ಮಹಾಭಾರತದಲ್ಲಿ ಬರುವ ನಳೊ ಪಾಖ್ಯಾನ ಒಂದು ಉತ್ಕೃಷ್ಟ ಕಥೆ ಕನ್ನಡನಾಡಿನಲ್ಲಿ ಈ ಕಥೆಯನ್ನು ಜನಪ್ರಿಯಗೊಳಿಸಿದ ಶ್ರೇಯಸ್ಸು ಕನಕದಾಸರದು ಚೌಂಡರಸ ಹಿಂದೆ ಚಂಪೂಕಾವ್ಯದಲ್ಲಿ ನಳಚರಿತೆ ರಚಿಸಿದ್ದು ಉಂಟು ಆದರೆ ಅದು ಕನಕದಾಸರು ರಚಿಸಿದ ನಳಚರಿತೆಯಷ್ಟು ಜನಪ್ರಿಯವಾಗಲಿಲ್ಲ ಇದಕ್ಕೆ ಕ ರಣ ದಾಸರು ಬಳಸಿರುವ ಅಚ್ಚಕನ್ನಡ ನುಡಿಕಟ್ಟುಗಳು ಜನರ ಆಡು ಭಾಷೆಯಲ್ಲಿ ರಚಿಸಿದರೆ ಅದು ಬಹುಬೇಗನೆ ಅವರ ಹೃದಯತಟ್ಟುತ್ತದೆ ಎಂಬುದಕ್ಕೆ ಈ ಕೃತಿ ಸಾಕ್ಷಿ ನಳದಮಯಂತಿಯರ ಆದರ್ಶಪ್ರೇಮ ಶೃಂಗಾರ ಪುನರ್ಮಿಲನ ಇವುಗಳನ್ನು ಚಿತ್ರಿಸುವಲ್ಲಿ ಕುಸುರಿಗೆಲಸ ಗೈದಿದ್ದಾರೆ ಕನಕದಾಸರು ತಮ್ಮ ಪ್ರೌಢಿಮೆಯನ್ನು ಅವರು ಕರುಣಾರಸದಲ್ಲೂ ಮೆರೆದಿದ್ದಾರೆ ನಳ ಕಾಡಿನಲ್ಲಿ ಪತ್ನಿಯನ್ನು ತ್ಯಜಿಸಿ ಹೋದಾಗ ದಮಯಂತಿಯ ಶೋಕ ಬಣ್ಣಿಸುವ ಪದ್ಯ ಹೃದಯ ಕಲಕುವಂತೆ ಇದೆ ಇದು ಮಹಾಕವಿ ಕಾಳಿದಾಸನ ರತಿವಿಲಾಪ ಮತ್ತು ರಾಘವಾಂಕನ ಚಂದ್ರಮತಿ ಪ್ರಲಾಪ ಇವುಗಳನ್ನು ನೆನಪಿಗೆ ತರುತ್ತದೆ ನಳಮಹಾರಾಜನನ್ನು

* ಕಟ್ಟಿ ಶೇಷಾಚಾರ್ಯ ಕವಿ ಕನಕದಾಸ

ಕಾರ್ಕೋಟಕ ಕಚ್ಚುವುದು ಒಂದು ಭೀಭತ್ಸ ಪ್ರಸಂಗ ಕುರೂಪಿಯಾದ ನಳಮಹಾ ರಾಜನ ವರ್ಣನೆಯನ್ನು ನೋಡಿ

ಅಡ್ಡ ಮೋರೆಯ ಗಂಟುಮೂಗಿನ
ದೊಡ್ಡ ಹೊಟ್ಟೆಯ ಗೂನು ಬೆನ್ನಿನ
ಗಿಡ್ಡ ಕೈಕಾಲುಗಳ ಉದುರಿದ ರೊ ಮಮೀಸೆಗಳ
ಜಡ್ಡು ದೇಹದ ಗುಜ್ಜುಗೊರಲಿನ
ಗಿಡ್ಡ ರೂಪಿನ ಹರುಕುಗಡ್ಡದ
ಹೆಡ್ಡನಾದ ಕುರೂಪಿತನದಲ್ಲಿ ನೃಪತಿ ವಿಷದಿಂದ

ಈ ಕೃತಿಯಲ್ಲಿ ಬೇಟೆಯ ವರ್ಣನೆ ಸೊಗಸಾಗಿದೆ ನಾಯ ಕನಾಗಿದ್ದಾಗ ಸ್ವತಃ ಬೇಟೆಯಾಡಿದ ಅನುಭವವಿದ್ದ ಕನಕದಾಸರು ಅದನ್ನು ಅತ್ಯಂತ ನೈಜವಾಗಿ ಚಿತ್ರಿಸಿದ್ದಾರೆ ಪತಿವ್ರತೆ ದಮಯಂತಿಯ ಪಾತ್ರವನ್ನು ಪುರಾಣದ ಕಥೆಗೆ ಸ್ವಲ್ಪವೂ ಭಂಗ ಬಾರದಂತೆ ಚಿತ್ರಿಸುವುದು ಕನಕದಾಸರ ವೈಶಿಷ್ಟ್ಯ ನಳನ ತ್ಯಾಗಕ್ಕೆ ಮಾರುಹೋದ ಕನಕದಾಸರು ಕನ್ನಡಿಗರಿಗೆ ಸರಳ ಶೈಲಿಯಲ್ಲಿ ನಳಚರಿತ್ರೆಯನ್ನು ತಿಳಿಸುವ ನಿರ್ಧಾರ ಸಿರಬೇಕು ತ್ಯಾಗಮೂಲವಾದ ಮಹಾನ್ ಆಖ್ಯಾನವೊಂದನ್ನು ನಮಗೆ ನೀಡಿದ ದಾಸರು ಕೃತಜ್ಞತೆಗೆ ಪಾತ್ರರು

**ರಾಮಧಾನ್ಯ ಚರಿತ್ರೆ** ಭಾಮಿನೀ ಪಟ್ಪದಿಯಲ್ಲಿ ರಚಿತವಾಗಿದೆ ಪದ್ಯಗಳು 156 ಚಮತ್ಕಾರದ ವಸ್ತುವನ್ನು ಬಳಸಲಾಗಿದೆ ಬಡವರು ತಿನುವ ರಾಗಿಯೇ ಶ್ರೀಮಂತರು ತಿನ್ನುವ ಅಕ್ಕಿಗಿಂತ ಶ್ರೇಷ್ಠ ಎಂಬುದನ್ನು ಕನಕದಾಸರು ಇಲ್ಲಿ ಪ್ರತಿಪಾದಿಸಿದ್ದಾರೆ ರಾಮನು ರಾಗಿಗೆ ತನ್ನ ಹೆಸರನ್ನು ಕೊಟ್ಟ (ರಾಘವ) ಎಂಬುದನ್ನು ಹೊರಗೆಡಹಿದ್ದಾರೆ ವಿಸ್ತಾರ ವರ್ಣನೆ ಮತ್ತು ಮಹಾಕಾವ್ಯದ ಲಕ್ಷಣಗಳಿಂದ ಇದು ಹೊರತಾಗಿದೆ ಇದರಲ್ಲಿ ಕನಕದಾಸರು ಭಾಗವತ ಮನೋಭಾವವನ್ನೂ ಜನತಾ ದೃಷ್ಟಿಯನ್ನೂ ಪ್ರದರ್ಶಿಸಿದ್ದಾರೆಂದು ಕೆಲವರು ಅಭಿಪ್ರಾಯಪಟ್ಟಿದೆ ರಾಗಿಗೆ ನರೆದಲದ ಮತ್ತು ಅಕ್ಕಿಗೆ ವ್ರೀಹಿ ಎಂದು ಕರೆದಿದ್ದಾರೆ ಧಾನ್ಯಗಳ ಪಾತ್ರವನ್ನು ರಚಿಸಿಕೊಂಡಿರುವುದರಿಂದ ಇದೊಂದು ರೂಪಕ ಸಮಾಜದಲ್ಲಿ ತಾವು ಅನುಭವಿಸಿದ ದುಃಖದುಮ್ಮಾನಗಳನ್ನು ಬಹುಶಃ ಇದರಲ್ಲಿ ವ್ಯಕ್ತಪಡಿಸಿರಬಹುದು ದಾಸರು ಮೇಲುವರ್ಗದವರ ನಿಂದೆ ಮೂದಲಿಕೆಗಳಿಗೆ ಒಳಗಾದರು ಎಂಬುದು ಸತ್ಯ ಸಂಗತಿ ಆದ್ದರಿಂದಲೇ ರಾಗಿಯ ಮೂಲಕ ಬಡವರನ್ನು ಅವರು ಎತ್ತಿಹಿಡಿದಿರಬೇಕು ರಾಮಧಾನ್ಯ ಚರಿತೆಯನ್ನು ಸಂಪಾದಿಸಿದ ಪ್ರೊ ದೇಜಗೌರವರು ಅದಕ್ಕೆ ಬರೆದ ಮುನ್ನುಡಿಯಲ್ಲಿ ಇದೊಂದು ಸುಂದರವಾದ ಮತ್ತು ಕಾಂತಿಯುತವಾದ ವಿಡಂಬನಕಾವ್ಯ ಬಿಂಕಗಾರಿಗಳ ಮತಾಂಧರ ಮತ್ತು ಪಟ್ಟಭದ್ರಹಿತಾಸಕ್ತರ ಮೂಗು ಕತ್ತರಿಸಿ ಅವರ ಓರೆಕೋರೆಗಳನ್ನು ತಿದ್ದಬೇಕೆಂಬುದೇ ಕವಿಯ ಪ್ರತಿಜ್ಞೆಯಾ

ಗಿದೆ ಜೊತೆಗೆ ಈ ಓರೆಕೊರೆಗಳು ಸಾಮಾನ್ಯರಿಗೆ ಗ್ರಹಿಕೆಯಾಗಿ ಅವರು ಎಚ್ಚೆತ್ತು ಕೊಳ ಬೇಕೆಂಬ ದು ಅವರ ಆಶಯವಾಗಿದೆ ಸತ್ಯಾಸತ್ಯಗಳ ನಡುವೆ ರಾಜಿಯಂ ಸೂತ್ರ ಸಲ್ಲದೆಂಬುದು ಕವಿಯ ದೃಢನಿಲುವಾಗಿದೆ

ಶಾಂಡಿಲ್ಯಮುನಿ ಯುಧಿಷ್ಠಿರನಿಗೆ ಶ್ರೀ ರಾಮನ ಕಥೆಯನ್ನು ಹೆ ಳುವನು ರಾವಣನ ವಧೆಯ ಅನಂತರ ಶ್ರೀರಾಮ ಋಷಿಗಳ ಆಶ್ರಮಕ್ಕೆ ಆಗಮಿಸಿ ಅವರು ನೀಡಿದ ಆದರಾತಿಥ್ಯಗಳನ್ನು ಸ್ವೀಕರಿಸುವನು ಅವರು ನಿ ಡಿದ ಧಾನ್ಯಗಳನ್ನು ತರಿ ಸಲು ಹೇಳುವನು ಆಗ ಅವರು ಎಲ್ಲ ಧಾನ್ಯಗಳನ್ನೂ ತಂದು ಸುರಿವರು ಇವು ಗಳಲ್ಲಿ ಯಾವುದು ಶ್ರೇಷ ಎಂಬ ಜಿಜ್ಞಾಸೆ ಪ್ರಾರಂಭವಾಗುವುದು ಆಗ ನೆರೆದಲದ ನಿಗೂ ವ್ರೀಹಿಗೂ ವಾಗ್ವಾದ ಉಂಟಾಗ ವುದು ರಾಮ ಇವೆರಡು ಧಾನ್ಯಗಳನ್ನು ಸೆರೆಯ ಲ್ಲಿಡುವಂತೆ ಆಜ್ಞಾಪಿಸಿ ಅಯೋಧ್ಯೆಗೆ ಹಿಂದಿರುಗುವನು ಗೌತಮ ಅವುಗಳನ್ನು ರಾವ ನ ಆಸ್ಥಾನಕ್ಕೆ ಒಯ್ಯುವನು ಇಂದ್ರನ ಪಂಚಾಯಿತಿಗೆ ಒಪ್ಪಿಸಿದಾಗ ಅವನು ನೆರೆದಲಗ ಶ್ರೆ ಷ ಎಂಬ ತೀರ್ಮಾನ ಕೊಡುವನು ಅದನ್ನೆ ಒಪ್ಪಿಕೊಂಡ ಎಲ್ಲರೂ ಅದಕ್ಕೆ ರಾಘವ ಎಂಬ ಬಿರುದುಕೊಡುತ್ತಾರೆ ಹೀಗೆ ರಾಮಧಾನ್ಯವೆ ರಾಗಿಯಾ ಯಿತು ಎನ್ನಲಾಗಿದೆ ಕನಕದಾಸರು ಮೂಲತಃ ರಾಗಿಬೆಳೆಯುವ ಪ್ರದೇಶದವರಲ್ಲ ಆದರೂ ಅದರ ಸವಿಯನ್ನು ಉಂಡವರು ರಾಗಿ ಕುಲಹೀನನಾದ ತನ್ನಂತಹವರು ಪ್ರತಿನಿಧಿ ಎಂದು ಭಾವಿಸಿದ ಅವರು ಅದರ ಉತ್ಕೃಷ್ಟತೆಯ ನ್ನು ಎತ್ತಿತೋರಿಸ ಬೇಕೆಂದು ಈ ಕೃತಿ ರಚಿಸಿರಬಹುದು ಅಕ್ಕಿ ಸವರ್ಣದ ಮೇಲ್ವರ್ಗದವರ ಪ್ರತಿನಿಧಿ

ಭತ್ತ ಮತ್ತು ರಾಗಿ ಇವುಗಳಲ್ಲಿಯ ಸಂಭಾಷಣೆ ಮೊನಚಾಗಿಯೂ ಅತ್ಯಂತ ಸ್ವಾರಸ್ಯ ಪೂರ್ಣವಾಗಿಯೂ ವ ಡಿಬಂದಿದೆ ಭೋಜನಪ್ರಿಯರು ಪಂಡಿತರೂ ತಿರಸ್ಕರಿಸಿದ್ದರಿಂದ ಶೂದ್ರಾನ್ನವಾದದೆಂದು ಅಕ್ಕಿ ರಾಗಿಯನ್ನು ಮೂದಲಿಸುವುದು

ಲೋಕದಲಧಿಕ ಭೋಜನ ವಿದೆಂ
ದಾಕವಾಳರು ಒಧರು ಜರೆದು ನಿ
ರಾಕರಿಸಿ ಬಿಡಲಂತು ನೀ ಶೂದ್ರಾನ್ನವಾದೆಯಲ
ನ ಕನಿಳೆಯರು ಸಾಕ್ಷಿ ನಿನ್ನವಿ
ವೇಕಿಗಳು ಮೆಚ್ಚುವರೆ ಬಾಹಿರ
ಸಾಕು ನಡೆ ನೀನಾವ ಮಾನ್ಯನು ಕಡೆಗೆ ತೊಲಗೆಂದ

ರಾಗಿ ಇದರಿಂದ ಕೋಪಗೊಂಡಿತು ಆತ್ಮಾಭಿಮಾನದಿಂದ ನುಡಿಯಿತು—

ಸತ್ವಹೀನನು ಬಡವರನಂ ಕ
ಣ್ಣೆತ್ತಿ ನೋಡೆ ಧನಾಢ್ಯರನ ಬೆಂ
ಬೆತ್ತಿ ನಡೆವವುಪೇಕ್ಷೆ ನಿನ್ನದು ಹೇಳಲೇನದನು
ಹೆತ್ತ ಬಾಣಂತಿಯರಿಗೆ ರೋಗಿಗೆ

ಪತ್ತ ಪಾನದಿ ಹೆಣದ ಬಾಯಿಗೆ
ತುತ್ತು ನೀನಹೆ ನಿನ ಜನ್ಮ ನಿರರ್ಥಕರವೆಂದ
ಮಳೆದೆಗೆದು ಬೆಳೆಯಡಗಿ ಕ್ಷಾಮದ
ವಿಲಯಕಾಲದೊಳನ್ನವಿಲ್ಲದೆ
ಅಳಿವ ಪ್ರಾಣಿಗಳಾದರಿಸಿ ಸಲಹ ವೆನು ಜಗ'ತರಿಯೇ
ಎಲವೊ ನೀನೆಲಿತೆಯೋ ನಿನ್ನಯ
ಬಳಗವದು ತಾನೆಲ್ಲಿಹುದಂ ಈ
ಹಲವು ಹುಲು ಧಾನ್ಯಸರಿಯೇ ಎನಗೆ ಕೇಳೆಂದಾ

ಬರಗಾಲ ಬಂದಾಗ ಒಡವರನ್ನು ಕ ಪಾಡಂವುದು ತ ನೆಂದು ರಾಗಿ ಹೇಳಿಕೊಳ್ಳು ವುದು ಬಡವ ಬಲ್ಲಿದ ಎಂಬ ಭೇದವನ್ನು ತಾನು ಎಣಿಸುವುದಿಲ್ಲ ಎಂಬ ವಹಾತನ್ನು ಅದು ಹೇಳ ತ್ತದೆ ಆಗ ಅಕ್ಕಿ ಎಲವೋ ನರೆಗೇಡದ ನೀನ ಸಮಾನನೆ ಎನಗಿಲ್ಲಿ? ಮತಿಹೀನ ನೀನು ಕುಲಹೀನ ನಿ ನು ನೀನು ಪ್ರತಿಪ ನೇ ನಿನ ನ್ನು ಸುಡಬೇಕು ಎಂದಿತು ಇದನ್ನು ಕೇಳಿದ ರಾಗಿ

ನುಡಿಯ ಕೇಳುತ ಕನಲಿ ಕಂಗಳಂ
ಕಿಡಿಮಸಗಿ ಖತಿಗೊಂಡು ನುಡಿದನಂ
ಸಿಡಿಲ ಘರ್ಜನೆಯ ಂತೆ ಸಭೆಯ ಲಿ ಜರೆದನಾ ವ್ರೀಹಿಯ

ನ್ಯಾಯ ನಿರ್ಣಯ ಮಾಡಿದ ಇಂದ್ರನ ಮಾತು ಕೇಳಿ ವ್ರೀಹಿ ತಲೆ ತಗ್ಗಿಸಿತು ರಾಗಿಯ ದೊಡ್ಡಗುಣವನ್ನು ದಾಸರು ಚಿತ್ರಿಸಿದ್ದಾರೆ ಆದರ ಪರವಾಗಿ ನಿರ್ಣಯ ವ ದರೂ ಭತ್ತದ ಕಣ್ಣೀರನ್ನು ರಾಗಿ ಒರೆಸಿತು ವಿಜಯನಗರ ಕಾಲದ ಶ್ರೀಮಂತ ಮತ್ತು ಕೆಳವರ್ಗದವರ ನಡುವೆ ನಡೆಯುತ್ತಿದ್ದ ಹೋರಾಟದ ಚಿತ್ರಣವನ್ನು ಪುರಾ ಣದ ಹಿನ್ನೆಲೆಯಲ್ಲಿ ಜಾನಪದ ಶೈಲಿಯಲ್ಲಿ ಕನಕದಾಸರು ಈ ಕೃತಿಯ ಲ್ಲಿ ಮೆರೆದಿದ್ದಾರೆ ರಾಗಿಯ ವಿಜಯ ಶ್ರೀಸಾಮಾನ್ಯನ ವಿಜಯ ಮುಂದೆ ಒಂದು ದಿನ ದುರ್ಬಲವರ್ಗ ದವರ ಕೈಮೇಲಾಗುತ್ತದೆ ಎಂಬುದು ಸೂಕ್ಷ್ಮವಾಗಿ ವ್ಯಕ್ತವಾಗಿರ ವುದನು ಇಲ್ಲಿ ಕಾಣಬಹುದು –

ಸಾಮಾನ್ಯವಾಗಿ ಕಾಣುವ ಈ ಕೃತಿ ಒಳಹೊಕ್ಕು ನೋಡಿದಾಗ ತನ ಲ್ಲಿನ ಸಾಮಾಜಿಕ ಧ್ವನಿಯಿಂದಾಗಿ ಅಸಾಧಾರಣ ವಿರಳಕೃತಿಗಳಲ್ಲಿ ಒಂದೆಂದು ಕಂಡು ಬರುತ್ತದೆ

**ಹರಿಭಕ್ತಿಸಾರ** ಭಕ್ತಿಯೇ ಪ್ರಧಾನವಸ್ತುವಾಗುಳ್ಳ ಕೃತಿ ಇದೊಂದು ಖಂಡಕಾವ್ಯ ಭಾಮಿನಿಷಟ್ಪದಿಯಲ್ಲಿರುವ ಈ ಕೃತಿಯ ಲ್ಲಿ 110 ಷಟ್ಪದಿಗಳಿವೆ ಭಕ್ತಿ ನೀತಿ ವೈರಾಗ್ಯಗಳ ಉನ್ನತ ಶಿಖರವನ್ನು ಕನಕದಾಸರು ಏರಿದ್ದನ್ನು ಹರಿ ಭಕ್ತಿಸಾರದಲ್ಲಿ ಕಾಣಬಹ ದು ಪ್ರತಿಯೊಂದು ಪದ್ಯವೂ ಕೊನೆಗೊಳ್ಳುವುದು ರಕ್ಷಿಸು ನಮ್ಮನನವರತ ಎಂದು ಪ್ರಾರಂಭದ 16 ಪದ್ಯಗಳು ಸಂಸ್ಕೃತಮಯ ಅನಂತರ

ನಾವು ಕಾಣುವುದು ಸುಲಭಕನ್ನಡ ಭಾಷೆಯ ಬಳಕೆ ಕನಕದಾಸರ ಆಧ್ಯಾತ್ಮಿಕ ಜೀವನದ ಕೊನೆಯ ಕೃತಿ ಹರಿಭಕ್ತಿಸಾರ ಅನನ್ಯ ಭಕ್ತಿಯಿಂದ ಶ್ರೀಹರಿಯನ್ನು ಭಜಿಸುವುದೇ ಮುಕ್ತಿಗೆ ದಾರಿ ಎಂಬುದನ್ನು ಅವರು ಪ್ರತಿಪಾದಿಸಿದ್ದಾರೆ ನಮ್ಮ ಸಂಸ್ಕೃತಿಯ ಸಾರಸಂಗ್ರಹವೇ ಈ ಕೃತಿಯಲ್ಲಿದೆ ಪರಮಾತ್ಮನೇ ತತ್ತ್ವ ಭಕ್ತಿಪ್ರಪತ್ತಿಗಳ ಹಿತ-ಮುಕ್ತಿ ಪುರುಷಾರ್ಥ ನಿರ್ಮಲ ಭಕ್ತಿಯನ್ನು ಜೊತೆಗೆ ಪ್ರತಿಪಾದಿಸಲಾಗಿದೆ ಭಗವಂತ ಒಲಿದರೆ ಹಲ್ಲುಕಡ್ಡಿಯೂ ಬೆಟ್ಟವಾಗಬಲ್ಲದು ಎಂಬುದು ಅವರ ಅಚಲ ವಿಶ್ವಾಸ ಈ ಕೃತಿಯಲ್ಲಿ ಅಲ್ಲಲ್ಲಿ ಕುಮಾರವ್ಯಾಸನ ಪ್ರಭಾವವನ್ನು ಕಾಣಬಹುದಾಗಿದೆ ಹರಿಭಕ್ತಿಸಾರದ ನಿರರ್ಗಳವಾದ ಓಟ ಅದರಲ್ಲಿ ವ್ಯಕ್ತವಾಗಿರುವ ಜೀವನದ ಅನನ್ಯತಾಭಾವ ಅನನ್ಯ ಶರಣಾಗತಿ ಅತ್ಯಂತ ಹೃದಯ ಸ್ಪರ್ಶಿಯಾಗಿದೆ

ದೇಹ ದೇವರ ಆಲಯ ಎನು ವ ದಾಸರು ಅನನ್ಯ ಭಾವದಿಂದ ವಿಷ್ಣುವನ್ನು ಭಜಿಸಿರಿ ಎನುವರು ಕನಕದಾಸರಿಗೆ ವಿಷ್ಣುವಿನ ಮೇಲೆ ಇರುವ ಭಕ್ತಿ ಅನನ್ಯವಾದದ್ದು ಭಕ್ತರ ಪ್ರತಿನಿಧಿಯಾಗಿ ಅವರ ಪ್ರಾರ್ಥನೆಯ ಪದ್ಯ ಒಂದು ಉದಾಹರಣೆ

ದೀನ ನಾನು ಸಮಸ್ತಲೋಕಕೆ
ದಾನಿ ನೀನು ವಿಚಾರಿಸಲು ಮತಿ
ಹೀನ ನಾನು ಮ ಹಾ ಮಹಿಮ ಕೈವಲ್ಯಪತಿ ನೀನು
ಏನ ಬಲ್ಲೆನು ನಾನು ನೆರೆ ಸು
ಜ್ಞಾನ ಮೂರ ತಿ ನೀನು ನಿನ್ನ ಸ
ಮಾನರುಂಟೇ ದೇವ ರಕ್ಷಿಸು ನಮ್ಮನನವರತ—
ಮರೆದೆನಭ್ಯುದಯದಲಿ ನಿಮ್ಮನು
ಮರೆಯನಾಪತ್ತಿನಲಿ ಹರಿಯೆಂ
ದೊರೆಯುಂಪೆನು ಮನವೇಕಭಾವದೊಳಿಲ್ಲ ನಿಮ್ಮಡಿಯ
ಮರೆದು ಬಾಹಿರನಾದವನು ನೀ
ಮರೆವರೇ ಹಸು ತನ್ನ ಕಂದನ
ಮರೆವುದೇ ಮಮತೆಯಲಿ ರಕ್ಷಿಸು ನಮ್ಮನನವರತ —

ಮೃತ್ಯುಬರುವ ಮುನ್ನ ಈ ನಶ್ವರ ಶರೀರವನ್ನು ಹರಿಭಕ್ತಿಗೆ ಬಳಸುವ ಕಾರ್ಯವನ್ನೇ ಮಾಡಬೇಕೆಂದು ಅವರ ಇಚ್ಛೆ ಕನಕದಾಸರ ಪಕ್ವಮನಸ್ಸಿನ ಪ್ರತೀಕ ಹರಿಭಕ್ತಿಸಾರ ಭಕ್ತನ ಸಾತ್ತ್ವಿಕ ವ್ಯಕ್ತಿತ್ವವನ್ನು ಕನ ಡಿಸುವ ಒಂದು ಸರಳ ರಚನೆ *

ನೃಸಿಂಹ ಸ್ತವನ ಎಂಬ ಕ ತಿಯನ್ನು ಕನಕದಾಸರು ರಚಿಸಿದ್ದಾರೆಂದು ಕವಿಚರಿತೆಗಾರರು ಪ್ರಸ್ತಾಪಿಸಿದ್ದಾರಾದರೂ ಗ್ರಂಥ ಲಭ್ಯವಿಲ್ಲ ತಿರುಕನ ಕನಸು

* ಡಾ ಟಿ ವಿ ವೆಂಕಟಾಚಲಶಾಸ್ತ್ರಿ—ಕನಕ ಕಿರಣ, ಪುಟ 137

ಎಂಬುದು ಪುಟ್ಟಕೃತಿ ಇದನ್ನೂ ಕನಕದಾಸರು ರಚಿಸಿದ್ದಾರೆಂದು ಒಂದು ಅಭಿಪ್ರಾಯ ಇನ್ನೊಂದು ಅಭಿಪ್ರಾಯ ಈ ಕೃತಿ ಮಂಪ್ಪಿನ ಷಡಕ್ಷರಿ ಅವರದೆಂದು ಬಡವನ ವಿಡಂಬನೆಯ ಎಳ್ಳ ಈ ಪದ್ಯ ಕನ್ನಡನಾಡಿನ ಮಕ್ಕಳಿಗೆಲ್ಲ ಅತ್ಯಂತ ಪ್ರಿಯವಾದದ್ದು

**ಕೀರ್ತನೆಗಳು** ಪುರಂದರದಾಸರಷ್ಟು ಕೀರ್ತನೆಗಳನ್ನು ಕನಕದಾಸರು ರಚಿಸಿಲ್ಲ ಆದರೆ ಪುರಂದರದಾಸರ ಕೀರ್ತನೆಗಳೊಂದಿಗೆ ಸಮಸಾಟಿಯಾಗಿ ನಿಲ್ಲಬಲ್ಲ ಶಕ್ತಿ ಕನಕದಾಸರ ಕೀರ್ತನೆಗಳಿಗಿವೆ ಕಾವ್ಯಗುಣದ ಪ್ಟಿಯಿಂದ ಕನಕದಾಸರ ಕೀರ್ತನೆಗಳು ವೆ ೀಲ್ಮಟ್ಟದವು ತಲ್ಲಣಿಸದಿರು ಕಂಡ್ಯ ತಾಳು ಮನವೆ ಎಲ್ಲರನು ಸಲಹವನು ಇದಕೆ ಸಂಶಯವಿಲ್ಲ ಎಂದು ಉದಾಹರಣೆ ಕೀರ್ತನೆಗಳಲ್ಲಿ ಕೂಡ ಸಮಾಜದ ವಿಡಂಬನೆ ದೇವರ ಸ್ತುತಿ ನಾಮ ಸ್ಮರಣೆಗಳಿವೆ ಅವರ ತತ್ತ್ವ ವಿಚಾರಗಳು ಸ್ಫೂಲವಾಗಿ ಪ್ರಕಟಣೆಗೊಂಡಿದ್ದು ಕೀರ್ತನೆಗಳಲ್ಲಿಯೇ ಎನ್ನಬಹುದಾಗಿದೆ ಅವರ ಸಮರ್ಪಣ ಭಾವವನ್ನು ತನು ನಿನ ದು ಜೀವನ ನಿನ್ನದು ರಂಗಾ ರಂಗಾ ಅನುದಿನದಲಿ ಬಹ ಸುಖ ದುಃಖ ನಿನ ಮಯಕ್ಯಾ ಎಂಬುದರಲ್ಲಿ ಕಾಣಬಹುದು ಸಾರಿದೂರಿ ಹೇಳ್ತೀನಿ ಏನೂ ಇಲ್ಲದ ಎರಡು ದಿನದ ಸಂಸಾರ ಡಿಂಬದಲ್ಲಿರುವ ಜೀವ ಕಂಭ ಸೂತ್ರದಂತೆ ಎನ್ನುವಲ್ಲಿ ಜೀವನ ಎಷ್ಟು ನಶ್ವರವಾದದ್ದು ಎಂಬುದನ್ನು ಹೇಳಿದ್ದಾರೆ ಅವರ ಜಾನಪದ ಶೈಲಿ ಗುರುತಿಸಲು ಈ ಸಾಲುಗಳನ್ನು ನೋಡಬಹುದು ಬೆಳ್ಳಿ ಬಂಗಾರಿತ ಕೊಂಡು ಒಳ್ಳೆವಸ್ತ್ರ ಹೊದ್ದಿಕೊಂಡು ಚಳ್ಳಪಿಳ್ಳಿ ಗೊಂಬೆಯ ಂತೆ ಆಡಿಹೋಯಿತು ಹಳ್ಳಹರಿದುಹೊ ಗ ವಾಗ ಗುಳ್ಳೆಬಂದು ಒಡೆಯುವಂತೆ ಉಳ್ಳಪೊರೆಯಂತೆ ಸಂಸಾರ ನಾಯಿ ಬಾಯಿ ಅರವಿಯಂತೆ ನಾನಾಕೋಟಲೆಗಳಲ್ಲಿ ಬಿದ್ದು

ಭಕ್ತಿ ಇಲ್ಲದವನಿಗೆ ಮೋಕ್ಷ ದೊರೆಯ ದು ಎಂಬುದು ಅವರ ಅಚಲ ವಿಶ್ವಾಸ ಅವರ ದೃಷ್ಟಿಯಲ್ಲಿ ಮಾನರ ಅಂದರೆ ಕಾಗಿನೆಲೆಆದಿಕೇಶವನನ್ನು ಭಜಿಸದವನು

ಹರಿಯ ಮಹಿಮೆಯನ್ನು ಸಾರುವ ಅವರ ಕೀರ್ತನೆಗೆ ಉದಾಹರಣೆ—

ಈತನೀಗ ವಾಸುದೇವನು ಲೋಕದೊಡೆಯ ॥ ಪ ॥
ದಾಸಗೊಲಿದು ತೇರನೇರಿ ತೇಜಿ ಪಿಡಿದು ನಡೆಸಿದಾತ ॥ ಅ ಪ ॥

ದನ ಜೆಯೊಳ್ದನಣ್ಣನಯ್ಯನ ಪಿತನ ಮ ಂದೆ ಕೌರವೇಂದ್ರ
ನನುಜೆಯಾಳಿದವನ ಶಿರವ ಕತ್ತರಿಸುತ
ಅನುಜೆಯಾಳಿದವನ ಬೆಂಕಿ ಮುಟ್ಟದಂತೆ ಕಾಯ್ದ ರುಕ್ಮ
ನನುಜೆಯಾಳಿದವನ ಮೂರ್ತಿಯನ್ನು ನೋಡಿರೋ ೧

ಹರಿಯ ಮಹಿಮೆ ಸಾರಲು ಅವರು ತಮ್ಮನ್ನು ತಾವೇ ಕೊರವಂಜಿಯೊಂದು ಕಲ್ಪಿಸಿಕೊಂಡು

ಕಣಿಯ ಹೇಳಬಂದೆ ನಾರಾಯಣನಲ್ಲದಿಲ್ಲವೆಂದು ॥ ಪ ॥
ಸಿಕ್ಕ ಒಣಗು ದೈವದ ಗೊಡವೆ ಬೇಡ ನರಕ ತಪ್ಪದು ॥ ಅ ಪ ॥

ಅವರ ಇನ್ನೊಂದು ಕೀರ್ತನೆ ಸಂತೃಪ್ತಿಭಾವದ ಪ್ರತೀಕವಾಗಿ ಮೂಡಿಬಂದಿದೆ

ಬದ ಕಿದೆನು ಬದುಕಿದೆನು ಭವ ಎನಗೆ ಹಿಂಗಿತು ॥ ಅ ॥
ಪದುಮನಾಭನ ಪಾದದೊಲುಮೆ ಎನಗಾಯಿತು ॥ ಅ ಪ ॥

ಹರಿತೀರ್ಥ ಪ್ರಸಾದ ಎನ್ನ ಜಿಹ್ವೆಗೊದಗಿತು
ಹರಿಯ ನಾಮಾಮೃತ ಕಿವಿಗೊದಗಿತು
ಹರಿಯ ದಾಸರು ಎನ್ನ ಬಂಧು ಬಳಗಾದರು
ಹರಿಯ ಶ್ರೀಮುದ್ರೆ ಆಭರಣವಾಯಿತು

ಕನಕದಾಸರ ಯಾಕೆ ನೀನಲ್ಲಿ ಪವಡಿಸಿದೆಯೋ ಹರಿಯೇ ಮತ್ತು ಇನ್ನೆಷ್ಟು ಕಾಲ ನೀನಿಲ್ಲಿ ವ ಲಗಿದರು ಎಬ್ಬಿಸುವವರು ಇಲ್ಲ ಎಂಬುದು ಕೀರ್ತನೆಗಳಲ್ಲೇ ಅತ್ಯಂತ ಶ್ರೇಷ ವ ಗಿದೆ ಸತ್ತ್ವಶಾಲಿಯಾದ ಕೀರ್ತನೆಗಳನ್ನು ರಚಿಸಿದ ಕನಕದಾಸರು ಕನ್ನಡಿಗರ ಆದರಕ್ಕೆ ಪಾತ್ರರಾಗಿದ್ದಾರೆ

**ಮುಂಡಿಗೆಗಳು** ಒಗಟಿನಂಥ ಹಾಡು ಮತ್ತು ಬೆಡಗಿನ ಪದಗಳಿಗೆ ಈ ಹೆಸರು ಇದೆ ಈ ಪ್ರಕಾರದಲ್ಲಿ ಕನ್ನಡ ಸ ಹಿತ್ಯಕ್ಕೆ ಕನಕದಾಸರು ನೀಡಿದ ಕೊಡುಗೆ ಅಮೂಲ್ಯವಾದದ್ದು ತತ್ತ್ವಜ್ಞಾನ ಆತ್ಮಾನುಭವಗಳನು ಅವರಿಲ್ಲಿ ವಿವರಿಸಿದ್ದಾರೆ ಅಂದಿನ ಸಮಾಜಕ್ಕೆ ಕಹಿಗುಳಿಗೆಗಳನ್ನು ತಿನಿ ಸಿದ್ದಾರೆ ಪಂಡಿತರಿಗೆ ಮ ಂಡಿಗೆಗಳ ಮೂಲಕ ಸವಾಲೆಸಗಿದ್ದಾರೆ ವಿಡಂಬನೆಯ ವ ೂಲಕ ಸಮಾಜದ ಅಂಕು ಡೊಂಕು ಗಳನ್ನು ತಿದ್ದಲು ಪ್ರಯತ್ನಿ ಸಿದ್ದಾರೆ ಕಟ್ಟಿಗೆಯ ದೊಡ್ಡ ತೊಲೆಯನು ಹೇಗೆ ಎತ್ತಲು ಸಾಧ್ಯವಿಲ್ಲವೋ ಹ ಗೆಯೆ ೀ ಕನಕನ ಈ ಜಾತಿಯ ಹಾಡುಗಳು ಸುಲಭವಾಗಿ ಅರ್ಥವಾಗಲು ಸ ಧ್ಯವಿಲ್ಲವೆಂದೇ ಇವುಗಳಿಗೆ ಮುಂಡಿಗೆಗಳೆಂದು ಕರೆದಿರುವರು * ಕನಕದಾಸರು ಮುಂಡಿಗೆ ರಚಿಸಲು ಹಿಂದಿನ ವಚನಕಾರರ ಕೃತಿಗಳು ಪ್ರೇರಣೆ ನೀಡಿರ ಬಹ ದು ಶಬ್ದ ಚಮತ್ಕಾರ ಪೌರಾಣಿಕ ಘಟನೆ ಇವುಗಳನ್ನು ಅವರ ವ ಂಡಿಗೆ ಗಳು ಒಳಗೊಂಡಿವೆ ಕಂತಿ ನಾಗಚಂದ್ರ ಅಲ್ಲಮ ಮೊದಲಾದವರ ಈ ಮಾದರಿಯ ಸ್ವಾರಸ್ಯವಾದ ಪದ್ಯ ರಚನೆಗಳನ್ನು ರಚಿಸಿದ್ದಂತು ಒಂದೆಡೆ ಕನಕದಾಸರು

ಎಲ್ಲರೂ ಕೇಳಿರಿ ಕನಕ ಹೇಳಿದ ಮಾತ
ಎಲ್ಲರೂ ಗ್ರಹಿಸಿಕೊಳ್ಳಿ
ಬೆಳ್ಳಿಕಣ್ಣಿನವರೆ ತಿಳಿಯಲಾರದ ಮಾತು
ಬಲ್ಲಾದಿಕೇಶವನು

* ಬುರ್ಲಿ ಬಿಂದುಮಾಧವ ಕನಕದಾಸರ ಪ್ರಶಸ್ತಿ ಪುಟ 49

ಎಂದಿದ್ದಾರೆ ಇದು ಆ ಕಾಲದ ಸಿರಿವಂತರನು ಉದ್ದೇಶಿಸಿ ಹೇಳಿದ್ದು ಸ್ಪಷ್ಟ ಸ್ವಾರಸ್ಯಕರವಾದ ಅವರ ಮುಂಡಿಗೆಗಳಿಗೆ ಒಂದೆರಡು ಉದಾಹರಣೆ

ಕೆಂಪುಮೂಗಿನ ಪಕ್ಷಿ ತಂಪಿನೊಳಿರುವುದು
ನೆಂಪು ಬಲ್ಲವರು ಪೇಳಿ ॥ ಪ ॥
ಹಂಪೆಯ ವಿರೂಪಾಕ್ಷ ಲಿಂಗನಲ್ಲಿ
ರಘುಪತಿಯನಾಡುತಿದೆ ॥ ಅನು ಪ ॥
ಆರು ತಲೆಯು ಹದಿನಾರು ಕಣ್ಣುಗಳುಂಟು
ಮೂರು ಮೂರು ನಾಲಿಗೆ
ಬೇರೆ ಹನ್ನೆರಡು ಕಣ್ಣು ಕಿವಿಗಳುಂಟು
ಸೇರಿತು ತೆಂಕಲಾಗೆ
ಬಲೆಯ ಬೀಸಿದರು ಸಿಕ್ಕದು ಆ ಮೃಗ
ಜಲದೊಳು ತಾನಿಲ್ಲದು
ನೆಲನ ಮೇಲಿರುವದು ಎಂತರೆ ಸಾವುದು
ಕುಲದೊಳಗಾಡುತಿದೆ
ಸಕಲ ಕಲೆಯ ಬಲ್ಲ ಸೀತಳ ಮಲ್ಲಿಗೆ
ಬೇರೆ ಬೇರೆನಬಹುದು
ಚೆನ ಕೇಶವನಲ್ಲಿ ಕೃಪೆಯ ಉಟಾದರೆ
ಅಲ್ಲ ಉಟು ಇಲ್ಲಿಲ್ಲವೆ

ದ್ವಂದ್ವಾರ್ಥವಿರುವ ಅವರು ಮುಂಡಿಗೆಗಳಿಗೆ ಇನ್ನೊಂದು ಉದಾಹರಣೆ—

ಪರಮ ಪುರುಷ ನೀ ನೆಲ್ಲಿಕಾಯಿ ॥ ಪ ॥
ಸರಸಿಯೊಳಗೆ ಕರಿ ಕೂಗಿರೆ ಕಾಯಿ ॥ ಅ ಪ ॥

ಹಿರಿದು ಮಾಡಿದ ಪಾಪ ನುಗ್ಗೇಕಾಯಿ
ಹರಿ ನಿನ್ನ ಧ್ಯಾನ ಬಾಳೆಕಾಯಿ
ಕರಿರಾಜಗೊಲಿದಂಥ ಬದನೆಕಾಯಿ
ಅರಿಷಡ್ವರ್ಗವಿ ಒದಗಿಲಿ ಕಾಯಿ
ಕ್ರೂರವ್ಯಾಧಿಗಳೆಲ್ಲ ಹೀರೇಕಾಯಿ
ಘೋರದುಷ್ಕೃತಗಳ ತೋರೆಕಾಯಿ
ಭಾರತಾ ಕಥೆ ಕರ್ಣ ತುಂಬಿದ ಕಾಯಿ
ವಾರಿಜಾಕ್ಷನೆ ಗತಿಯೆಂದಿಪ್ಪೆ ಕಾಯಿ

ನಿಗೂಢವಾದ ಅರ್ಥವಿರುವ ಮುಂಡಿಗೆಗೆ ನಿದರ್ಶನ—

ಎಂದೆಂದು ಇಂಥ ಚೋದ್ಯ ಕಂಡಿದ್ದಿಲ್ಲವೊ
ಅಂಗಡಿ ಬೀದಿಯೊಳೊಂದು ಆಕಳ ಕರು ನುಂಗಿತು

ಲಂಘಿಸುವ ಹುಲಿಯ ಕಂಡು ನರಿಯು ನುಂಗಿತು
ಹುತ್ತದೊಳಾಡುವ ಸರ್ಪ ಮತ್ತಗಜವ ನುಂಗಿತು
ಉತ್ತರದಿಶೆಯೊಳು ಬೆಳುದಿಂಗಳಾಯಿತಮ್ಮ

ಇಲ್ಲಿ ಜೀವಕ್ಕೆ ಆಕಳೆಂದು ಕ ಂಡಲಾಗ್ನಿಯ ಅನ್ನತೃಪ್ತಿಗೆ ಕರು ಸರ್ಪ— ಕುಂಡಲಿನೀ ಅಹಂಕಾರವೇ ಆನೆ ಅಪರವಯಸೇ ಉತ್ತರಿಲೀ ಜ್ಞಾನೋದಯವೇ ಬೆಳದಿಂಗಳು —ಹೀಗೆ ದ್ವಂದ್ವಾರ್ಥವಿಟ್ಟು ಹೇಳುವ ದಾಸರ ಜಾಣ್ಮೆ ತಲೆದೂಗಿಸುವಂತಹುದು ಆಗಿದೆ

**ಜಾಣನುಡಿಗಳು** ಕನಕದಾಸರ ಲೋಕಾನುಭವಗಳನ್ನು ಅವರ ಜಾಣ ನುಡಿಗಳಲ್ಲಿ ಕಾಣುತ್ತೇವೆ ಹಾಸ ದ ಹೊನಲಿನೊಂದಿಗೆ ಅವು ನೀತಿ ಬೋಧೆಯನ್ನು ಮಾಡುವುವು ಸಂದರ್ಭೋಚಿತವಾಗಿ ಅವನ್ನು ಬಳಸಿದ ದಾಸರ ಜಾಣ್ಮೆ ಮೆಚ್ಚು ವಂತಹುದು ಅವುಗಳಲ್ಲಿ ಕೆಲವನ್ನು ಮಾತ್ರ ಉದಾಹರಿಸಿದೆ— ಕಂತೆಗೆ ತಕ್ಕ ಬೊಂತೆ ಮಂಜುಸುರಿಯ ಲಿ ಕೆರೆ ತುಂಬುವುದೇ ಮಾಣಿಕ್ಯವೆಂದು ಹಿಡಿದರೆ ಭೂರಿ ಕೆಂಡವಿದಾಯಿತು ಮ ಂಗ್ಯೆ ಕಂಕಣಕ್ಕೆ ಕನ ಡಿಯೆ ಕೆ ಸತ್ಯವಂತರ ಸಂಗವಿರಲು ತೀರ್ಥವೇತಕೆ ಸಿರಿಒಂದಕಾಲಕ್ಕೆ ಮರೆಯಬೇಡ ಮಕ್ಕಳಿಲ್ಲದ ಸಿರಿಯು ಕೊಳೆತ ತೆಂಗಿನಕಾಯಿ ಯ ತುರಿಯು ಬಡತನ ಬಂದಾಗ ನೆಂಟರ ಬಾಗಿಲು ಸೇರಬಾರದು ದೇವರಿಲ್ಲದ ಗುಡಿಯು ಹಾಳು ಬಿದ ಅಂಗಡಿಯ ಹರಿಯ ಕೀರ್ತನೆಗೈಯದ ಜಿಹ್ವೆ ಕಡಲ ನ ಲಿಗೆ —ಹೀಗೆ ಕನಕದಾಸರ ಅನ ಭವ ಅಸಾಧಾರಣ ಕಲ್ಪನಾಶಕ್ತಿಗೆ ಈ ಜಾಣನುಡಿ ಕನ್ನಡಿ ಹಿಡಿದಂತಿದೆ

**ಪವಾಡಗಳು** ಕನಕದಾಸರ ಬದುಕಿನ ಸುತ್ತ ಹಲವು ಪವಾಡಗಳ ಕಥೆ ಹೆಣೆಯ ಲಾಗಿದೆ ಅವರ ಹುಟ್ಟಿನಿಂದ ಪ್ರಾರಂಭವಾದ ಪವಾಡಗಳ ಕಥೆ ಅವರು ಅಂತರ್ಧಾನವಾದರೂ ಎನ್ನುವವರೆಗೂ ಹುಟ್ಟಿಕೊಂಡಿದೆ

ವ್ಯಾಸರಾಯರ ಶಿಷ್ಯನಾಗಬೇಕೆಂಬ ಒಯಕೆಯಿಂದ ಕನಕದಾಸರು ಗುರ ಗಳ ದರ್ಶನಕ್ಕೆ ಹೊರಟರು ಅವರಿಗೆ ವ್ಯಾಸರಾಯ ರಿಂದ ಮಂತ್ರೋಪದೇಶ ಲಭಿಸಿದ್ದು ಪವಾಡ ಗುರುಗಳು ಕುರುಬನಿಗೆ ಎಂತಹ ಮಂತ್ರವೊ ಕೋಣ ಮಂತ್ರ ಎಂದರಂತೆ ಆಗ ಕನಕ ಕೋಣ ಮಂತ್ರ ಜಪಿಸಿದ ಸಾಕ್ಷಾತ್ ಕೋಣವೇ ಆಗ ಪ್ರತ್ಯಕ್ಷವಾಯಿ ತಂತೆ ಕನಕದಾಸರು ಅದನ್ನು ವ್ಯಾಸರಾಯ ರಲ್ಲಿಗೆ ತಂದು ಸ್ವಾಮಿ ಕೋಣ ಬಂದಿದೆ ಏನು ಕೆಲಸ ಮಾಡಿಸಲಿ ಎಂದರಂತೆ ಆಗ ವ್ಯಾಸರಾಯರು ಕೆರೆ ಕಟ್ಟಿಸುತ್ತಿದ್ದ ರು ತೂಬಿಗೆ ಅಡ್ಡವಾಗಿದ್ದ ದೊಡ್ಡ ಬಂಡೆ ಕಿತ್ತೊಗೆಯಿಸು ಎಂದರಂತೆ ದಾಸರು ಅದ ರಂತೆ ಮಾಡಿಸಿದರು

ಒಂದು ದಿನ ವ್ಯಾಸರಾಯರು ತಮ್ಮ ಶಿಷ್ಯರ ಪರೀಕ್ಷೆಗಾಗಿ ಎಲ್ಲರಿಗೂ ಒಂದೊಂದು ಬಾಳೆಹಣ್ಣು ಕೊಟ್ಟು ಇದನ್ನು ಅಜ್ಞಾತ ಸ್ಥಳದಲ್ಲಿ ತಿಂದು ಬನ್ನಿರಿ

ಎಂದರಂತೆ ಉಳಿದ ಶಿಷ್ಯರೆಲ್ಲ ಆತುರದಲ್ಲಿ ತಿಂದು ಮುಗಿಸಿದರು ಕನಕದಾಸರು ಮಾತ್ರ ದೇವರಿಲ್ಲದ ಸ್ಥಳವಿಲ್ಲ ಎಂದ ಬಾಳೆಹಣ್ಣನ್ನೇ ಹಿಂದಿರುಗಿಸಿದರಂತೆ

ಒಂದು ದಿನ ಗುರುಗಳು ನಮ್ಮಲ್ಲಿ ವೈಕುಂಠಕ್ಕೆ ಹೋಗಲು ಯಾರು ಶಕ್ತರು ? ಎಂದು ಪ್ರಶ್ನಿಸಿದರ ಆಗ ಕನಕ ನಾನು ಹೋದರೆ ಹೋಗಬಹುದು ಎಂದರು ಇದರ ಅರ್ಥ ಉಳಿದವರಿಗೆ ಆಗಲಿಲ್ಲ ಗುರುಗಳಿಗೆ ಆಯಿತು ಅದನ್ನು ವಿವರಿಸುವ ಕೆಲಸವನ್ನು ಅವರು ಕನಕದಾಸರಿಗೆ ಬಿಟ್ಟರು ನಾನು ಎನು ವ ಅಹಂಕಾರವು ಹೋದರೆ ಯಾರಾದರೂ ವೈಕುಂಠಕ್ಕೆ ಹೋಗಬಹುದು ಎಂದು ದಾಸರು ವಿವರಿಸಿದರು

ವ್ಯಾಸರಾಯರು ಒಂದು ದಿನ ಪೂಜೆ ಆದ ನಂತರ ಮುಷ್ಟಿಯನ್ನು ಬಿಗಿಯಾಗಿ ಹಿಡಿದುಕೊಂಡು ಶಿಷ್ಯರನ್ನು ಕರೆದು ಕೇಳಿದರು ಅಂಗೈಯಲ್ಲಿ ಇರ ವುದು ಏನು ? ಒಬ್ಬೊಬ್ಬರು ಒಂದೊಂದು ಉತ್ತರ ಹೇಳಿದರು ಕನಕದಾಸರು ಮಾತ್ರ ಈತನೀಗ ವಾಸುದೇವ ಲೋಕದೊಡೆಯ ಎಂದರು ವ್ಯಾಸರಾಯರ ಕೈಯಲ್ಲಿ ವಾಸುದೇವನ ಸಾಲಿಗ್ರಾಮವಿತ್ತು

ಸಮಸ್ತತೀರ್ಥಕ್ಷೇತ್ರಗಳ ಯಾತ್ರೆ ಕೈಗೊಂಡ ಕನಕದಾಸರು ಶ್ರೀಕೃಷ್ಣನ ದರ್ಶನಕ್ಕಾಗಿ ಉಡುಪಿಗೆ ಬಂದರಂತೆ ತಿರ ಕನಂತೆ ಇರುವ ದಾಸರನ್ನು ದೇವಾಲಯ ದ ಒಳಗೆ ಬಿಡಲಿಲ್ಲ ಇಷ್ಟೇ ಅಲ್ಲ ಶೂದ್ರನ ನೆರಳು ಬೀಳಬಾರದೆಂದು ದೇವಾಲಯದ ಬಾಗಿಲು ಮುಚ್ಚಿದರಂತೆ ಆಗ ಕನಕದಾಸರು ಗರ್ಭಗುಡಿಯ ಹಿಂಭಾಗದಲ್ಲಿ ನಿಂತು ಶ್ರೀಕೃಷ್ಣನನ್ನು ಸ್ತುತಿಸಿದರು ಪೂಜೆ ತೆಗೆದುಕೊಳ್ಳುತ್ತಿದ್ದ ಶ್ರೀಕೃಷ್ಣ ಪಶ್ಚಿಮಾಭಿಮುಖವಾಗಿ ತಿರುಗಿದ ಕನಕನಿಗೆ ದರ್ಶನ ನೀಡಿದ ಎಲ್ಲರೂ ಕನಕದಾಸರ ಭಕ್ತಿಗೆ ಮೆ ಚ್ಚಿದರು ಇಂದಿಗೂ ಕನಕನ ಕಿಂಡಿಯ ಮೂಲಕ ಕೃಷ್ಣ ದರ್ಶನವಾದ ಮೇಲೆಯೆ ೯ ಗರ್ಭಗುಡಿಯ ಪ್ರವೇಶ ನಡೆದು ಬಂದಿದೆ

ವ್ಯಾಸರ ಯರು ಒಂದು ದಿನ ಕನಕ ನಿನಗೆ ಬೇಕೆಂದಾಗ ದೇವರು ಕಾಣಿಸುವ ನಂತೆ ಒಮ್ಮೆ ತೋರಿಸಬಾರದೆ ಎಂದರಂತೆ ಅದಕ್ಕೆ ಕನಕ ಆಗಲಿ ನಾಳೆಯ ಪೂಜೆಯ ಕಾಲದಲ್ಲಿ ಬರುವಂತೆ ಹೇಳುತ್ತೇನೆ ಎ ದರು ಮಾರನೆಯ ದಿವಸ ಪೂಜೆಯ ಸಮಯ ದಲ್ಲಿ ದೊಡ್ಡ ನಾಯಿಯೊಂದು ಮಠ ಪ್ರವೇಶಿಸಿತು ಮಠದವರು ಬಡಿಗೆ ತಂದು ನಾಯಿಯನ್ನು ಓಡಿಸಿಬಿಟ್ಟರು ಜೂಲ್‌ಬಾಲದ ನಾಯ ಕರೆ ನೀವೇನೇ ನೂಟ ಮಾಡಿದಿರಿ ಎಂದು ದಾಸರು ಹಾಡಿದರು ಆಗ ಲೀಲಾಭೈರವ ಅಲ್ಲವೋ ಕನಕ ನನ್ನನ್ನು ಬಡಿಗೆಯಿಂದ ಹೊಡಿಸಬೇಕೆಂದು ಎಷ್ಟು ದಿನಗಳಿಂದ ಕಾದಿದೆಯೋ ಎಂದು ಕೇಳಲು ದೇವ ನಿನಂದು ಕಾಳಗದಲ್ಲಿ ನನಗೆ ಪೆಟ್ಟುಕೊಡಿಸಿ ಕೆಡಹಿದಂದಿನಿಂದ ಎಂದು ಹೇಳಿದರು ಗುರುಗಳು ಏನು ನಿನ್ನ ದೇವರು ಬರಲಿಲ್ಲವೇ ? ಎಂದಾಗ ಕನಕ ಬಂದಿದ್ದರು ಮಠದವರು ಓಡಿಸಿಬಿಟ ರು" ಎಂದರು ದೇವರು ಭೈರವರೂಪಿ

ನಿಂದ ಮೈಲಿಗೆಯಲ್ಲಿ ಬಂದಿದ್ದ ಅದಕ್ಕೆ ಬಡಿಗೆಯೇಟು ಬಿತ್ತು ಎಂದರು ಹಾಗಾದರೆ ಇಂದು ಮಡಿಯಲ್ಲಿ ಕರೆಸು ಎಂದರು ಗುರುಗಳು ಆಗ ಕನಕ ಮಡಿಯಲ್ಲಿ ಬಂದು ದರ್ಶನ ನೀಡುವಂತೆ ಸ್ವಾಮಿಯನ್ನು ಪ್ರಾರ್ಥಿಸಿದರು ಪೂಜಾ ಸಮಯದಲ್ಲಿ ಹಾವೊಂದು ಪ್ರತ್ಯಕ್ಷವಾಯಿತು ಗುರುಗಳು ಅದಕ್ಕೆ ಹಾಲು ತರಿಸಿ ಕುಡಿಸಿ ಹೆಡೆಯ ಮೇಲೆ ಕೈ ಆಡಿಸಿ ಕಳಿಸಿದರು ಸುದೀರ್ಘಕಾಲ ಬದುಕಿದ್ದ ಕನಕದಾಸರು ಶ್ರೀ ಆದಿ ಕೇಶವಸ್ವಾಮಿ ಪಾದದಲ್ಲಿ ತನುಸಮರ್ಪಿಸಿದರೆಂದು ಕೆಲವರು ತಿರುಪತಿಯಲ್ಲಿ ಅದೃಶ್ಯರಾದರೆಂದು ಕೆಲವರು ಹೇಳುತ್ತಾರೆ

**ಸಮಕಾಲೀನರು :** ಮೋಹನತರಂಗಿಣಿಯಲ್ಲಿ ತ್ರಿವಿಕ್ರಮದಾಸಸ್ವದಾಸ ಎಂದು ಕನಕದಾಸರು ಕರೆದುಕೊಂಡಿರುವ ಶ್ರೀವಾದಿರಾಜ ತೀರ್ಥರು ಕನಕದಾಸರು ಸಮಕಾಲೀನರು ಆ ಕಾಲದ ಮಹಾನ್ ತತ್ತ್ವಜ್ಞಾನಿ ವ್ಯಾಸರಾಯರು ಪ್ರಸಿದ್ಧ ಮಾಧ್ವ ಯತಿ ಅವರಿಗೆ ಕನಕದಾಸರು ಅಚ್ಚುಮೆಚ್ಚಿನ ಶಿಷ್ಯರಾಗಿದ್ದರು ಗದುಗಿನ ಕುಮಾರವ್ಯಾಸ ತಾತಾಚಾರ್ಯ ಇವರು ಕೂಡ ಕನಕದಾಸರ ಸಮಕಾಲೀನರು ಕುಮಾರವ್ಯಾಸ ಕನಕದಾಸರ ಗೌರವಕ್ಕೆ ಪಾತ್ರನಾಗಿದ್ದ ಮೋಹನ ತರಂಗಿಣಿಯಲ್ಲಿ ಚಿತ್ರಿಸಿದ ತಾತಾಚಾರ್ಯರು ಆ ಕಾಲದಲ್ಲಿ ರಾಜಗುರುಗಳಾಗಿದ್ದರು ವೈಕುಂಠ ದಾಸರು ಹಲವು ರಾಜಮರ್ಯಾದೆ ಪಡೆದ ಅಗ್ರಗಣ್ಯರು ಇವರ ಕಾವಲುಗಾರನಾಗಿ ಕನಕದಾಸರು ಕೆಲಕಾಲವಿದ್ದರು ಹಲವು ದಾಸರಮನೆಯ ಹೊಲೆದಾಸನಾನಯ್ಯ ಕುಲವಿಲ್ಲದ ದಾಸ ಕುರುಬದಾಸ ಎಂದೂ ಒಂದೆಡೆ ಕನಕದಾಸರು ಹೇಳಿಕೊಂಡಿದ್ದಾರೆ

ಪುರಂದರದಾಸರು ಕನಕದಾಸರ ಸಮಕಾಲೀನರು ಇಬ್ಬರೂ ವ್ಯಾಸರಾಯರ ಶಿಷ್ಯರು ಇಬ್ಬರೂ ಕೀರ್ತನೆಗಳನ್ನು ರಚಿಸಿರುವರು ಆದರೆ ಪುರಂದರದಾಸರಿಗಿಂತ ಹೆಚ್ಚು ಸ್ವತಂತ್ರ ವಿಮರ್ಶನ ಧೈರ್ಯ ಕನಕದಾಸರದು ಕನಕದಾಸರ ಕವಿಯಾಗಿಯೂ ಹೆಸರಾದರು ಪುರಂದರದಾಸರಷ್ಟು ಕೊಡುಗೆಯನ್ನು ಕರ್ನಾಟಕ ಸಂಗೀತಕ್ಕೆ ಕನಕದಾಸರು ಕೊಡಲಿಲ್ಲ ಪುರಂದರದಾಸರಲ್ಲಿದ್ದ ಭಾವೋತ್ಕಟತೆ ಕನಕದಾಸರಲ್ಲಿ ವ್ಯಕ್ತವಾಗಲಿಲ್ಲ

**ಕ್ರಾಂತಿಕಾರಿ ಕನಕ** ಜಾತಿಮತಗಳೇ ಪ್ರಬಲವಾಗಿದ್ದ ಆ ಕಾಲದಲ್ಲಿ ಕನಕದಾಸರು ಅನುಭವಿಸಿದ್ದ ನೋವು ಅಪಾರವಾದದ್ದು ಒಬ್ಬ ವ್ಯಕ್ತಿಯ ಹಿರಿಮೆಯನ್ನು ಅಳೆಯುವುದು ಅವನ ಹುಟ್ಟಿನಿಂದಲ್ಲ ಅವನ ಸಾಧನೆಯಿಂದ 12 ನೆಯ ಶತಮಾನದ ಬಸವೇಶ್ವರರಂತೆ ಕನಕದಾಸರೂ ಕ್ರಾಂತಿಯ ರಣಕಹಳೆಯನ್ನೇ ಊದಿದರು ಸನಾತನಿಗಳನ್ನು ವ್ಯಂಗ್ಯಮಾಡಿದರು ಆದರೂ ಎಲ್ಲ ಮತದವರನ್ನೂ ಒಂದೇ ಎಂದು ಭಾವಿಸಿದರು ಅವರು ಯಾವ ಜಾತಿಯವರು ಎಂದು ಪ್ರಶ್ನಿಸುತ್ತಿದ್ದವರಿಗೆ ಉತ್ತರವಾಗಿ ಬರೆದ ಈ ಕೀರ್ತನೆ ಅಪೂರ್ವವಾದದ್ದು

ಕುಲ ಕುಲವೆನ್ನುತಿಹರೊ
ಕುಲ೯ಾವುದು ಸತ್ಯ ಜನರಿಗೆ ? ॥ ಪ ॥

ಕೆಸರೊಳು ತಾವರೆ ಪುಟ್ಟಲು ಅದ ತಂದು
ಕುಸುಮನಾಭನಿಗೆ ಅರ್ಪಿಸರೇನಯ್ಯ ?
ಪಶುವಿನ ಮಾಂಸದೊಳುತ್ಪತ್ತಿ ಕ್ಷೀರವ
ವಸುಧೆಯೊಳಗೆ ಭೂಸುರರುಣ್ಣರೇನಯ್ಯ ?

ಆತ್ಮನಾವ ಕ ಲ ಜೀವನಾವ ಕುಲ
ತತ್ವೇಂದ್ರಿಯಗಳ ಕುಲ ಪೇಳಿರಯ್ಯ
ಆತ್ಮನು ಕಾಗಿನೆಲೆಯಾದಿಕೇಶವನೊಲಿದ
ಭಕ್ತರಿಗೆ ಕುಲವಾವುದು ಹೇಳಿರಯ್ಯ ?

ಎಲ್ಲರೂ ಮಾಡುವುದು ಹೊಟ್ಟೆಗಾಗಿ ಗೇಣು ಒಟ್ಟೆಗಾಗಿ ಎಂಬುದರಲ್ಲಿ ಜೀವನದ ತತ್ತ್ವವೇ ಅಡಗಿದೆ ಅಂದಿನ ಬ್ರಾಹ್ಮಣರ ಮಡಿವ್ಯೆಲಿಗೆಯ ಆಚರಣೆಯನು ಕುರಿತು ಅವರು ಟೀಕಿಸಿದ್ದಾರೆ

ತೀರ್ಥವನು ಪಿಡಿದವರೆಲ್ಲ ತಿರುನಾಮಧಾರಿಗಳೆ
ಜನ್ಮ ಸಾರ್ಥಕವಿಲ್ಲದವರೆಲ್ಲ ಭಾಗವತರೆ

ಅವರ ಟೀಕೆಗೆ ಬ್ರಾಹ್ಮಣರಷ್ಟೇ ಅಲ್ಲ ಲಿಂಗಾಯಿತ ಮತ್ತು ಮುಸ್ಲಿಮರೂ ಒಳಗಾಗಿದ್ದಾರೆ ಅದರಂತೆ ಎಲ್ಲ ಜಾತಿಯವರನ್ನೂ ಏಕ ಭಾವದಿಂದ ನೋಡಿದ ಶ್ರೇಯಸ್ಸು ಕನಕದಾಸರದು ಹೀಗೆ ವೈಚಾರಿಕ ಕ್ರಾಂತಿಯನ್ನು ಕನಕದಾಸರು ಪ್ರಾರಂಭಿಸಿದರು ಮತ್ತು ಅವರ ಹಲವು ವಿಚ ರಗಳು ಇಂದಿಗೂ ಸಮಕಾಲೀನಗಳಾಗಿವೆ ಕವಿಯಾಗಿ ಸಂತರಾಗಿ ಅನುಭಾವಿಯಾಗಿ ಮೆರೆದ ಕನಕದಾಸರು ಕರ್ನಾಟಕದ ದಾಸರ ಪರಂಪರೆಯಲ್ಲಿ ಆಗಿಹೋದ ಶ್ರೇಷ ದಾಸರು

ಕನಕದಾಸರು ಕವಿ ಸಂತರ ಸಂಗಮ ತಮ್ಮ ಸಾಹಿತ್ಯದಲ್ಲಿ ಅವರು ನಮಗೆ ಕಾವ್ಯವನ್ನೂ ಮೌಲ್ಯಗಳನ್ನೂ ಸಂದೇಶವನ್ನೂ ಉಳಿಸಿ ಹೋಗಿದ್ದಾರೆ ಅವರ ಬೋಧೆ ಕಾವ್ಯಮಯವಾಗಿದೆ ಅವರ ಕಾವ್ಯದಲ್ಲಿ ಬೋಧೆಯು ಇದೆ ತಳಮಳ ಕ್ಕೊಳಗಾಗಿರುವ ಇಂದಿನ ಬದುಕಿಗೆ ಕನಕದಾಸರ ಕೀರ್ತನೆಗಳಲ್ಲಿ ಒಂದು ನೆಮ್ಮದಿ ಸಮಾಧಾನಗಳು ತೋರುತ್ತವೆ ಅಸ್ತವ್ಯಸ್ತವಾಗಿರುವ ನಮ್ಮ ಸಮಾಜ ಜೀವನಕ್ಕೆ ಅವುಗಳಲ್ಲಿ ಒಂದು ಮಾರ್ಗ ಕಾಣಿಸುತ್ತದೆ ಎಂದು ಡಾ॥ ಹಾ ಮಾ ನಾಯಕ್ ಅವರು ಹೇಳಿರುವುದು ಔಚಿತ್ಯಪೂರ್ಣವಾಗಿದೆ ಕನಕದಾಸರು ನೀಡಿದ ಜೀವನ ಸಂದೇಶವನ್ನು ನಾವು ಪಾಲಿಸುವುದೇ ಅವರಿಗೆ ನೀಡಬಹುದಾದ ಕಾಣಿಕೆ ಕನಕದಾಸರ

ವ್ಯಕ್ತಿತ್ವ ಕೃತಿಗಳ ಪುನರ್ ವಿಮರ್ಶೆ ನಡೆದು ಅವರಿಗೆ ಸಂಬಂಧಿಸಿದಂತೆ ಹೆಚ್ಚಿನ ಅಧ್ಯಯನ ನಡೆಯಬೇಕು ಕನಕದಾಸರು ಇಂದಿಗೂ ಕನ್ನಡಿಗರ ಹೃದಯದಲ್ಲಿ ನೆಲೆಯೂರಿದ್ದಾರೆ

## ಆಕರ ಗ್ರಂಥಗಳು


1 ಕನಕ ಕಿರಣ ಸಂಪಾದಿತ ಕಾ ತ ಚಿಕ್ಕಣ್ಣ
2 ಮಹಾತ್ಮ ಕನಕದಾಸ ಪ್ರಶಸ್ತಿ
3 ಕನ ಾಟಕದ ಹರಿದಾಸರು ಜಿ ಎಚ್ ಬಿ ಆಚಾರ್ಯ
4 ಕವಿ ಕನಕದಾಸರು ಕಟ್ಟಿ ಶೇಷಾಚಾರ್ಯ
5 ಕನಕದಾಸರು ಪ್ರೊ ಎಸ್ ಕೆ ರಾಮಚಂದ್ರರಾಯರು
6 ಹರಿದಾಸ ಹೃದಯ ಡಾ|| ಜಿ ವರದರಾಜರ ವ್
7 ಶ್ರೀ ಕನಕದಾಸರ ಭಕ್ತಿಗೀತೆಗಳು
8 ಕನಕದಾಸರ ಕೀರ್ತನೆಗಳು ಬಿ ಶಿವಮೂರ್ತಿಶಾಸ್ತ್ರಿ ಮತ್ತು ಕೆ ಎಂ ಕೃಷ್ಣರಾವ್
9 ಕರ್ನಾಟಕದ ಕವಿ ಚರಿತೆ ಸಂಪುಟ 2 ರಾ ನರಸಿಂಹಾಚಾರ್ಯ
10 ರಾಮಧಾನ್ಯಚರಿತೆ ಸಂಪಾದಿತ, ದೇ ಜ ಗೌ
11 ಮೊ ಹನತರಂಗಿಣಿಸಂಗ್ರಹ ಬಿ ಎಸ್ ಸಣ್ಣಯ್ಯ
12 ಹರಿದಾಸ ಸಾಹಿತ್ಯ ಆರ್ ಎಸ್ ಪಂಚಮುಖಿ
13 ಕರ್ನಾಟಕದ ಜನಜೀವನ ಬೆಟಗೇರಿ ಕೃಷ್ಣಶರ್ಮ
14 ಕನ್ನಡ ಸಾಹಿತ್ಯ ಚರಿತ್ರೆ ಡಾ|| ರಂ ಶ್ರೀ ಮುಗಳಿ
15 ಕನ್ನಡ ವಿಶ್ವಕೋಶ

# ಶ್ರೀ ವಾದಿರಾಜ ಗುರುಗಳು

ಸುಬ್ಬಣ್ಣ ರಂಗನಾಥ ಎಕ್ಕುಂಡಿ

ಗುರು ಭಕುತಿ ಬೇಕು ಹಿರಿಯರ ಕರುಣಬೇಕು
ಹರಿಕಥೆಗಳ ನಿತ್ಯ ಕೇಳುತ ಇರಬೇಕು
ವಿರಕುತಿ ಬೇಕು ವಿಷ್ಣುವಿನಾರಾಧನೆ ಬೇಕು
ಪರಮಂತ್ರಜಪಬೇಕು ತಪಬೇಕು ಪರಗತಿಗೆ
ಪರಿಪರಿವ್ರತಬೇಕು ಸಿರಿಹಯವದನನ
ಪರಮಾನುಗ್ರಹಬೇಕು ವಿಷಯನಿಗ್ರಹ ಬೇಕು॥

ಸಾಧು ಸಂತರ ಮಹಾತ್ಮರ ಜೀವನವು ಸುಭಾಷಿತಕಾರರು ಉಲ್ಲೇಖಿಸಿದ ವೃಕ್ಷಗಳಂತೆ ಮೋಡಗಳಂತೆ ಇರುತ್ತದೆ. ಅವರು ಯಾವಾಗಲೂ ಪರೋಪಕಾರದಲ್ಲಿಯೇ ತೊಡಗಿದ್ದು ಲೋಕಕ್ಕೆ ನೆರಳನ್ನೂ ತಂಪನ್ನೂ ತಮ್ಮ ಶ್ರಮದ ಫಲಗಳನ್ನೂ ನೀಡುತ್ತಾರೆ. ಋಗ್ವೇದದಲ್ಲಿಯ ಮಂತ್ರವೊಂದು ಮಹಾತ್ಮರ ಜೀವನದ ರಹಸ್ಯವನ್ನು ಸುಂದರವಾಗಿ ಒಡಮೂಡಿಸಿದೆ.

ಅಕ್ಷೇತ್ರವಿತ್ ಕ್ಷೇತ್ರವಿದಂ ಹ್ಯಪ್ರಾಟ್
ಸ ಪ್ರೈತಿ ಕ್ಷೇತ್ರವಿದಾನುಶಿಷ್ಟಃ॥
ಏತದ್ವೈ ಭದ್ರಮ ನ ಶಾಸನಸ್ಯ।
ಸ್ರುತಿಂ ವಿಂದತ್ಯಜಸೀನಾಂ॥ ಋಗ್ವೇದ x-32 7

ಹಾದಿ ತಿಳಿಯದವನು ಹಾದಿ ತಿಳಿದವನನು ಕೇಳಿದನು. ಹಾದಿ ಬಲ್ಲವನಿಂದ ಅನುಶಿಷ್ಟನಾಗಿ ಮುಂದೆ ಹೋದನು. ಅನಾಯಾಸವಾಗಿ ಮಾರ್ಗವನ್ನು ಹಿಡಿಯುವ ದುಂಟಲ್ಲ ಅದು ಅನುಶಾಸನದ ಫಲವು. ಇದನ್ನು ಬಲ್ಲವರು ಅನುಶಾಸನ ಶ್ರುತಿಯೆನುತ್ತಾರೆ. ಮಹಾತ್ಮರು ಬದುಕುವುದು ಬಾಳುವುದು ಚಿಂತಿಸುವುದು ಹಾಡುವದು ಮಾಡುವದು ಎಲ್ಲವೂ ಲೋಕಹಿತಕ್ಕಾಗಿ. ಅದಕ್ಕಾಗಿ ಅವರು ಆ ಹಾದಿಯಲ್ಲಿ ನಡೆದವರನ್ನು ಕೇಳುತ್ತಾರೆ. ತಾವೂ ಆ ಹಾದಿಯಲ್ಲಿ ಅನುಶಿಷ್ಟರಾಗಿ ನಡೆಯುತ್ತಾರೆ. ಇಂಥ ಅಲೌಕಿಕ ಪುಣ್ಯಪುರುಷರಲ್ಲಿ ಸೋದೆಯ ಶ್ರೀವಾದಿರಾಜಗುರುಗಳೂ ಒಬ್ಬರಾಗಿದ್ದಾರೆ. ಅವರು ಶ್ರೀ ಮಧ್ವಗುರುಗಳಿಂದ ದಾರಿಯನ್ನು ಕೇಳಿ ತಿಳಿದುಕೊಂಡರು. ತಾವೂ ಅದೇ ದಾರಿಯಲ್ಲಿ ಮುನ್ನಡೆದರು. ಮೇಲೆ ಉಲ್ಲೇಖಿಸಿದ ಶ್ರೀ ವೆಂಕಟೇಶದರ್ಶನ ಸುಳಾದಿಯಲ್ಲಿ ಪ್ರಪಂಚದ ಮುಮುಕ್ಷುಗಳಿಗೆಲ್ಲ ಮುಕ್ತಿಮಾರ್ಗದ ಸುಲಭೋಪಾಯವನ್ನು ಬೋಧಿಸಿರುವರು. ಇಲ್ಲಿಯ ಬದುಕು ಹಸನಾಗಿ

ಸುಖಿವ ಯವಾಗಿ ಅಲ್ಲಿಯ ಇನ್ನಷ್ಟು ಸುಖದ ಬದ ಕಿಗೆ ನಾವು ಅರ್ಹರಾಗಬೇಕಾದರೆ ನಮಗೆ ಅಗತ್ಯವಾದ ಸಾಧನ ಸಲಕರಣೆಗಳೆಲ್ಲವನ್ನೂ ಈ ಸುಳಾದಿಯಲ್ಲಿ ವಿವರಿಸಿದ್ದಾರೆ ಗುರುಭಕ್ತಿ ಬೇಕು ಹಿರಿಯರ ಕರುಣೆಬೇಕು ಹರಿಯ ಕಥೆಗಳನ್ನು ನಿತ್ಯಕೇಳಬೇಕು ವಿರಕ್ತಿಬೇಕು ವಿಷ್ಣುವಿನ ಆರಾಧನೆಬೇಕು ನಂತ್ರ ಬೆ ಕು ತಪ ಬೇಕು ಪರಿಪರಿಯ ವ್ರತ ಬೇಕು ವಿಷಯನಿಗ್ರಹ ಬೆ ಕು ನಮ್ಮ ಪ್ರಯತ್ನಗಳು ಸಫಲವಾಗಲು ಮುಖ್ಯ ಸಿರಿಹಯವದನನ ಪರಮಾನುಗ್ರಹಬೇಕು ಈ ವಿಷಯದಲ್ಲಿ ನಮ್ಮ ಕನ್ನಡನಾಡು ಬಹಳ ಭಾಗ್ಯಶಾಲಿಯೆನ ಬೇಕು ಇಲ್ಲಿ ಆಗಿಹೋದ ಹರಿದಾಸರೂ ಶಿವಶರಣರೂ ತಮ್ಮ ಭಕ್ತಿ ವೈರಾಗ್ಯ ತಪಸ್ಸುಗಳಿಂದ ವೈಕುಂಠದ ದಾರಿಯನ್ನು ಒಂದು ಕೂಗಳತೆಯಲ್ಲಿ ತಂದು ನಿಲ್ಲಿಸಿದ್ದಾರೆ ಹರಿದಾಸಕೂಟದ ರತ್ನತ್ರಯರಲ್ಲಿ ಒಬ್ಬರಾದ ಶ್ರೀ ವಾದಿರಾಜರು ಶ್ರೀಹರಿಯ ಪರಮಾನುಗ್ರಹ ಪಡೆದುಕೊಂಡ ರಷ್ಟೇ ಅಲ್ಲ ಕುದುರೆಯರೂಪದಲ್ಲಿ ಬರುತ್ತಿದ್ದ ಸ್ವಾಮಿಗೆ ಚಿನ ದ ಹರಿವಾಣದಲ್ಲಿ ಕಡಲೆ ಬೆಲ್ಲದ ಹೂರಣವನ್ನು ಉಣಬಡಿಸಿದ ಮಹಾತ್ಮರವರು ಶ್ರೀಪ ದರಾಜರು ಶ್ರೀ ವ್ಯಾಸರಾಜರು ಇವರಂತೆಯೇ ಶ್ರೀ ವಾದಿರಾಜಗುರುಗಳೂ ಕೂಡ ಸಂಸ್ಕೃತದಲ್ಲಿ ಅಗಾಧ ಪಾಂಡಿತ್ಯವುಳ್ಳವರಾಗಿದ್ದರು ಮತ್ತು ಪಂಡಿತಲೋಕವು ಬೆರಗಾಗಿ ತಲೆ ದೂಗುವಂಥ ಅನೇಕ ಉದ್ಗ್ರಂಥಗಳನ್ನು ರಚಿಸಿದರು ಆದರೆ ಪಂಡಿತರನ್ನು ತಲೆ ದೂಗಿಸ ವದಷ್ಟರಿಂದಲೇ ಇವರು ತೃಪ್ತರಾಗಲಿಲ್ಲವೆಂಬುದು ನಮ್ಮ ಭಾಗ್ಯ ಜನ ಸಾಮಾನ್ಯರಿಗೆ ಭಗವಂತನಲ್ಲಿ ಭಕ್ತಿ ಉಂಟಾಗಿ ಆ ಅಲೌಕಿಕದ ಶ್ರದ್ಧೆ ಮತ್ತು ಅನ್ವೇಷಣೆಗಳಿಂದ ದೊರಕುವ ಅಖಂಡ ಆನಂದ ನಿಧಿಯು ಕನ್ನಡನಾಡಿನ ಮನೆ ಮನೆಗಳಿಗೆ ದೊರಕಬೇಕೆಂಬ ಅವರ ಕನಿಕರಪೂರ್ಣ—ಅಭಿಲಾಷೆಯು ಅವರಿಂದ ಕನ್ನಡದಲ್ಲಿ ಸಾವಿರಾರು ಕೃತಿಗಳನ್ನು ರಚಿಸುವಂತೆ ಪ್ರೇರಿಸಿತು ಅಪ್ರಾಕೃತ ಮಹಿಮನ ಭಕ್ತಿಗಂಗೆಯನು ಪ್ರಾಕೃತ ನುಡಿಯ ಸಣ್ಣ ಸಣ್ಣ ಗಿಂಡಿಗಳಲ್ಲಿ ತುಂಬಿಕೊಂಡು ಈ ಹರಿದಾಸರು ಕನ್ನಡ ನಾಡಿನ ಜನಕ್ಕೆ ತೀರ್ಥಪ್ರಾಶನ ಮಾಡಿಸಿ ಪುನೀತಗೊಳಿಸಿದರು ಹೀಗೆ ಈ ಮಹಾನುಭಾವರು ವ್ಯಾಸಕೂಟಕ್ಕೂ ದಾಸಕೂಟಕ್ಕೂ ಕೂಡಿಯೇ ಸೇರಿಕೊಂಡು ಒಂದೆಡೆ ಪಂಡಿತರನ್ನು ನಲಿಸಿದರು ಇನ್ನೊಂದೆಡೆ ಜನಸಾಮಾನ್ಯರನ್ನು ಸಂತಸಪಡಿಸಿದರು ಇದರಲ್ಲಿ ಶ್ರೀವಾದಿರಾಜಗುರುಗಳ ವ್ಯಕ್ತಿತ್ವವೂ ಸಾಧನವೂ ಅಸದೃಶವಾಗಿವೆ

ಹರಿದಾಸ ಸಾಹಿತ್ಯದ ಒಂದು ರೋಮಾಂಚಕ ವೈಶಿಷ್ಟ್ಯವೆಂದರೆ ಅದರಲ್ಲಿ ಅಲೌಕಿಕದ ಅನುಭವವನ್ನು ಅತಿ ಸುಲಭವಾಗಿ ಸುಲಲಿತವಾಗಿ ಲೌಕಿಕಕ್ಕೆ ತರುವುದಾಗಿದೆ ಹರಿದಾಸರು ತಮ್ಮ ಉತ್ಕಟವಾದ ಭಕ್ತಿಯಿಂದ ತಪಸ್ಸಿನಿಂದ ದಿವ್ಯಾನುಭೂತಿಯನ್ನು ದೊರಕಿಸುತ್ತಾರೆ ಸೊನಗಾರರು ಚಿನ್ನವನ್ನು ಕರಗಿಸಿ ಕೊನೆಗೆ ಬಯಸಿದ ಆಭರಣಗಳನ್ನಾಗಿ ರೂಪಿಸುವಂತೆ ಹರಿದಾಸರು ಆ ಅನುಭೂತಿಯನ್ನು ಈ ನುಡಿಗಳಲ್ಲಿ ಎರಕ ಹೊಯ್ಯುತ್ತಾರೆ ಸಾಮಾನ್ಯರು ಇಂಥ ನುಡಿಗಳನ್ನು ಕೇಳಿದಾಗ ಇಲ್ಲವೆ ಓದಿದಾಗ ಅವರಲ್ಲಿ ಕೂಡ ಆ ಅಲೌಕಿಕದ ಉಜ್ವಲ ಅನುಭೂತಿಯ ಕಾವು ಹರಿದು ಬರು

ತ್ತದೆ ಆದ್ದರಿಂದಲೇ ನಮ್ಮ ನಾಡಿನ ಜನಸಾಮಾನ್ಯರಲ್ಲಿ ಒಂದು ಜ್ವಲಂತ ಶ್ರದ್ಧೆ ಒಂದು ಉದ್ದೀಪ್ತ ಧರ್ಮನಿಷ್ಠೆ ಅನೇಕ ಶತಮಾನಗಳಿಂದ ಉಳಿದುಕೊಂಡು ಬಂದಿದೆ ಶ್ರೀವಾದಿರಾಜಗುರುಗಳ ಕೃತಿಗಳು ನಮ್ಮ ನಾಡಿನ ಜನಮನದಲ್ಲಿ ಅಚ್ಚಳಿಯದೆ ನೆಲೆಸಿದ್ದು ಅವರ ಇಂಥ ಕಾವ್ಯಶಕ್ತಿಯಿಂದ ಅವರ ಪದ ಸುಳಾದಿಗಳನ್ನು ಓದಿದವರಿಗೆ ಇವೆಲ್ಲ ಕೈವಲ್ಯ ಪದಕ್ಕೆ ಇಕ್ಕಿದ ನಿಚ್ಚಣಿಕೆ ಯಾಗಿವೆ

ಶ್ರೀ ವಾದಿರಾಜಗುರುಗಳ ಜೀವನವೂ ಅವರ ವ್ಯಕ್ತಿತ್ವವೂ ಅವರ ಸಾಧನೆಗಳೂ ಅವರು ಜೀವಿಸಿದ ಕಾಲದ ಹಿನ್ನೆಲೆಯಲ್ಲಿ ಗಮನಿಸಿದಾಗ ಅಸಾಮಾನ್ಯವಾಗಿದ್ದವೆಂಬುದನ್ನು ಸುಲಭವಾಗಿ ಗಮನಿಸಬಹುದು 120 ವರ್ಷಗಳ ತುಂಬು ಜೀವನ ನಡೆಸಿದ ಈ ಮಹಾತ್ಮರು ಉಡುಪಿಯಲ್ಲಿ ನಾಲ್ಕು ಸಲ ಪರ್ಯಾಯ ಪೂಜೆ ನಡೆಸಿದ್ದು ಅತ್ಯದ್ಭುತ ಸಂಗತಿಯಾಗಿದೆ ಸಾಹಿತ್ಯ ರಚನೆಯಲ್ಲಿ ಧರ್ಮಪ್ರಚಾರದಲ್ಲಿ ಪರವಾದಿಗಳನ್ನುಗೆಲಿದು ಸ್ವಮತ ಸ್ಥಾಪಿಸುವದರಲ್ಲಿ ಕೆರೆ ಕೊಳ ದೇವಾಲಯಗಳನ್ನು ಕಟ್ಟಿಸುವದರಲ್ಲಿ ಸಮಾಜದ ಕೆಳಸ್ತರಗಳ ಜನರಲ್ಲಿ ಧಾರ್ಮಿಕ ಶ್ರದ್ಧೆಯನ್ನೂ ದೈವ ಭಕ್ತಿಯ ಆತ್ಮವಿಶ್ವಾಸವನ್ನೂ ಬೆಳೆಸುವದರಲ್ಲಿ ಪೂಜೆ ಪರ್ಯಾಯ ಉತ್ಸವ ಕ್ರಮಗಳನು ಸಂಘಟಿಸುವದರಲ್ಲಿ ಹೀಗೆ ಎಲ್ಲದರಲ್ಲಿಯೂ ಶ್ರೀ ವಾದಿರಾಜಗುರುಗಳು ದಕ್ಷತೆಯನ್ನೂ ದೂರದೃಷ್ಟಿಯನ್ನೂ ತೋರಿಸಿ ನಮ್ಮ ಬದುಕಿಗೆ ಮಾಡಿದ ಉಪಕಾರವನ್ನು ನಾವೆಂದಿಗೂ ಮರೆಯಲಾಗುವಂತಿಲ್ಲ ಕಾವ್ಯ ವ್ಯಾಕರಣ ತರ್ಕ ನ್ಯಾಯ ವೇದಾಂತ ಮತ್ತು ಶಾಸ್ತ್ರಗಳಲ್ಲಿ ಪಾಂಡಿತ್ಯವನ್ನೂ ತತ್ವ ಪ್ರಮೇಯಗಳ ಗಾಂಭೀರ್ಯವನ್ನೂ ಅವರು ಕನ್ನಡಕ್ಕೆ ನೀಡಿದರು ಕನ್ನಡದ ಪದಲಾಲಿತ್ಯವನು ಸುಸಂಸ್ಕೃತ ಮತ್ತು ಮಂಜುಳವಾದ ಸತ್ವವನ್ನು ತಮ್ಮ ದಶಾವತಾರ ಸ್ತುತಿಯಂಥ ಕೃಷ್ಣಾಷ್ಟಕದಂಥ ಸಂಸ್ಕೃತಕೃತಿಗಳಿಗೆ ನೀಡಿದರು ಡಾ ಜಿ ವರದರಾಜರಾಯರು ಹರಿದಾಸರ ಪ್ರಸನ್ನ ವಾಣಿಯನು ಪ್ರಸ್ತಾಪಿಸುತ್ತ ಒಂದು ಬರಹದಲ್ಲಿ ಹೀಗೆ ಹೇಳಿದ್ದಾರೆ ಕನ್ನಡ ಹರಿದಾಸರ ಪರಂಪರೆಯನ್ನು ನೆನೆದಾಗ ಒಬ್ಬೊಬ್ಬ ಮಹಿಮರು ಹೇಗೆ ವೈಷ್ಣವ ಭಕ್ತಿಯನು ತಮ್ಮ ತಮ್ಮ ಕಾಲದಲ್ಲಿ ಪ್ರಿಯವಾಗುವಂತೆ ಹೇಳಿದ್ದನ್ನು ಮನಗಂಡರೆ ಹೆಮ್ಮೆ ಪಡುವಂತಾಗುತ್ತದೆ ಸಂಸ್ಕೃತದಲ್ಲಿ ಅಸೀಮಪಾಂಡಿತ್ಯಗಳಿಸಿದ್ದ ಶ್ರೀಪಾದರಾಜರು ಶ್ರೀ ವ್ಯಾಸರಾಜರು ಶ್ರೀವಾದಿರಾಜರು ಕೀರ್ತನ ಕೈಂಕರ್ಯದಲ್ಲಿ ಎಷ್ಟು ಆಸಕ್ತಿ ವಹಿಸಿದ್ದರೆಂಬುದು ಗಮನಾರ್ಹವಾದದು ಇವರೆಲ್ಲರ ವಾಣಿಯು ಅವರವರ ವ್ಯಕ್ತಿತ್ವಕ್ಕೆ ಅನುಗುಣವಾಗಿ ವಿಶಿಷ್ಟವಾಗಿ ತೋರಿಬರುತ್ತಿದೆ ಶ್ರೀಪಾದರಾಜರ ಕೃತಿಗಳಲ್ಲಿ ಮಧುರಭಾವ ಶ್ರೀವ್ಯಾಸರಾಜರ ಕೃತಿಗಳಲ್ಲಿಯ ಆರ್ತ ಭಕ್ತಿಗಳನ್ನು ಕಂಡರೆ ಅವಿತಾನಂದವಾಗುತ್ತದೆ ವಾದಿರಾಜರ ವಾಗ್ವಿಲಾಸವಂತೂ ವರ್ಣನಾತೀತವಾದದ್ದು ಅನೇಕ ಗಹನವಾದ ಭಾವನೆಗಳನ್ನು ಅವರು ತಮ್ಮ ಪ್ರಾಸಾದಿಕ ವಾಣಿಯಲ್ಲಿ ಹುದುಗಿಟ್ಟಿರುವರು ವಿಷ್ಣುವಿನ ದಶಾವತಾರವನು ಪರಿಪರಿಯಾಗಿ ಪ್ರತಿಪಾದಿಸಿರುವರು ಸಾಂಗತ್ಯದ ಮೂಲಕ ವೈಕುಂಠದ ವೈಭವವನ್ನು ಬಹು

ಪ್ರಭಾವಶಾಲಿಯಾಗಿ ಚಿತ್ರಿಸಿರುವರು ಅತ್ಯಂತ ಜಟಿಲವಾದ ಸಿದ್ಧಾಂತದ ರಹಸ್ಯಗಳನ್ನು ತಮ್ಮ ಗುಂಡಕ್ರಿಯೆ ಮುಂತಾದ ಕೃತಿಗಳಲ್ಲಿ ಸರಳವಾಗಿ ಹೇಳಿದ್ದಾರೆ

ಹೀಗೆ ಶ್ರೀವಾದಿರಾಜರ ಕೃತಿಗಳಲ್ಲಿ ಭಕ್ತಿಯ ರಸಾನುಭವವೂ ಶಾಸ್ತ್ರ ಪ್ರಜ್ಞೆಯ ಗಾಂಭೀರ್ಯವೂ ಚೆನ್ನಾಗಿ ಸಂಗಮಿಸಿವೆ ಕ್ರಿ ಶ 1614ರಲ್ಲಿ ವಿಜಯ ನಗರದ ವೀರವೆಂಕಟಪತಿದೇವ ಮಹಾರಾಯರು ಮತ್ತು ಅವರ ಆಶ್ರಿತನಾದ ವೆಂಕಟಪ್ಪ ನಾಯಕನು ಉಡುಪಿಯ ಕೃಷ್ಣನ ಗುಡಿಯ ಜೀರ್ಣೋದ್ಧಾರವಾಡಿ ನಿಲ್ಲಿಸಿದ ಶಾಸನ ವೊಂದರಲ್ಲಿ ಶ್ರೀ ಗುರುಗಳನ್ನು ಶ್ರೀ ಮದ್ವೈಷ್ಣವ ಸಿದ್ಧಾಂತ ಪ್ರತಿಷ್ಠಾಪನಾ ಚಾರ್ಯರಾದ ಶ್ರೀಹಯಗ್ರೀವ ದೇವ ಪಾದ ಪದ್ಮಾರಾಧಕ ರೆಂದು ಉಲ್ಲೇಖಿಸಿದ್ದಾರೆ ನ್ಯಾಯವಾಗಿ ಆ ಬಿರುದು ಅವರ ವರದ ಮೂಲ ಪುರುಷರಾದ ಶ್ರೀ ಮನ್ಮಧ್ವಾಚಾರ್ಯರಿಗೆ ಸಲ್ಲಬೇಕು ಅದನ್ನು ಶ್ರೀವಾದಿರಾಜಗುರುಗಳಿಗೆ ಸಲ್ಲಿಸಿದ್ದರಲ್ಲಿಯೂ ಅವರ ಋಜು ಪದಸ್ಥ ಭಾವಿ ಸಮೀರತ್ವವನ್ನು ಗರುತಿಎದ ಧ್ವನಿಯು ಅಡಗಿದೆ ಪ್ರೊ ಎಸ್ ಕೆ ರಾಮಚಂದ್ರರಾಯರು ತಮ್ಮ ಒಂದು ಲೇಖನದಲ್ಲಿ ಶ್ರೀ ಗುರುಗಳ ಉಜ್ವಲ ವ್ಯಕ್ತಿತ್ವವನ್ನು ಚಿತ್ರಿಸುತ್ತ ಹೀಗೆ ಬರೆದಿದ್ದಾರೆ– ಮಧ್ವಾಚಾರ್ಯರ ಪರಂಪರೆಯಲ್ಲಿ ವಾಗೀಶತೀರ್ಥರ ಶಿಷ್ಯರಾಗಿ ಬಂದ ವಾದಿರಾಜ ತೀರ್ಥರು ಪಂಡಿತರಾಗಿ ಸಮಾಜ ಸುಧಾರಕರಾಗಿ ಪ್ರತಿಭಾಶಾಲಿಗಳಾಗಿ ಮೆರೆದು ವಿಖ್ಯಾತರಾದವರು ಯುಕ್ತಿ ಮಲ್ಲಿಕಾ ಗುರುವರ್ಥದೀಪಿಕಾ ನ್ಯಾಯ ರತ್ನಾವಳಿ ಪಾಷಂಡ ಮತ ಖಂಡನ ಮೊದಲಾದ ಶಾಸ್ತ್ರ ಗ್ರಂಥಗಳನು ತುಳು ಕನ್ನಡ ಭಾಷೆಗಳಲ್ಲಿ ದೇವರ ನಾಮಗಳನ್ನು ರಚಿಸಿ ಹೆಸರಾಂತರಾದವರು ದೇಶ ದೇಶಗಳಲ್ಲಿ ಸಂಚರಿಸಿ ದುರ್ವಾದಿಗಳನ್ನು ಗೆದ್ದು ರಾಜಮಾನ್ಯರಾದವರು ಋಜುಪದಸ್ಥರಾಗಿ ಭಾವಿ ಸಮೀರರೆಂದು ಪರಿಗಣಿತರಾದವರು ಮಾಧ್ವ ಜನಾಂಗವನ್ನು ಅವರೇ ಪರಿಷ್ಕರಿಸಿದವರು ಮಂರೆ ಸಂಪ್ರದಾಯವನ್ನು ಹಾಕಿದವರೂ ಅವರೇ ಅವರ ಉಜ್ವಲ ವ್ಯಕ್ತಿತ್ವವು ಜನಾಂಗದ ಮೇಲೆ ಧೃಢವಾದ ಮುದ್ರೆಯನ್ನೊತ್ತಿತು

ಶ್ರೀ ವಾದಿರಾಜ ಗುರುಗಳು ಹಲವು ವಿಷಯಗಳಲ್ಲಿ ಹೊಸ ಹಾದಿಗಳನ್ನು ತೆರೆದು ತೋರಿಸಿದಂತೆಯೆ ತಮಗೆ ಅತ್ಯಂತ ಪ್ರಿಯರಾದ ಶ್ರಿ ಮಧ್ವಗುರುಗಳು ತೋರಿದ ಹಾದಿಯಲ್ಲೂ ಅನ್ಯಾದೃಶವಾದ ನಿಷ್ಠೆಯಿಂದ ನಡೆದಿದ್ದಾರೆ ಶ್ರೀ ಮನ್ಮಧ್ವಾಚಾರ್ಯರು ತಾವು ರಚಿಸಿದ ದ್ವಾದಶಸ್ತೋತ್ರದಲ್ಲಿ ಒಂದೆಡೆಗೆ ಹೇಳಿದ್ದಾರೆ – ನಿರ್ಮಲವಾದ ಸತ್ಯವಾದ ಅತಿಶ್ರೇಷ್ಠವಾದ ಮಾತುಗಳನ್ನು ಆಲಿಸಿರಿ ಶಪಥ ಪೂರ್ವಕವಾಗಿ ಎರಡೂ ಕೈಗಳನ್ನೆತ್ತಿ ಸಾರಿ ಹೇಳುತ್ತೇನೆ ಶ್ರೀ ಹರಿಗಿಂತ ಮಿಗಿಲಾದ ವಸ್ತುವಿಲ್ಲ ಶ್ರೀಹರಿಗೆ ಸಮನಾದ ವಸ್ತುವೂ ಇಲ್ಲ ಅವನೊಬ್ಬನೇ ಸಕಲ ಚೇತನ ಪ್ರಪಂಚಕ್ಕಿಂತ ಅತ್ಯಂತ ಶ್ರೇಷ್ಠನು ಶ್ರೀಮಧ್ವಾಚಾರ್ಯರು ನುಡಿದ ಈ ಮಾತುಗಳೇ ಶ್ರೀವಾದಿರಾಜಗುರುಗಳ ಒಂದೊಂದು ಕೃತಿಯಲ್ಲಿಯೂ ಮತ್ತೆ ಮತ್ತೆ ಪ್ರತಿಧ್ವನಿಸುತ್ತವೆ ಯತಿಪ್ರಣವ ಕಲ್ಪದಲ್ಲಿ ಶ್ರೀಮಧ್ವಾಚಾರ್ಯರು

ಕೊಟ್ಟಿರುವ ಶ್ರೀ ಹರಿಸರ್ವೋತ್ತಮತ್ವವನ್ನು ಸರ್ವದಾ ಪ್ರತಿಪಾದಿಸಿರಿ" ಎಂಬ ಆದೇಶವನು ಶ್ರೀವಾದಿರಾಜಗ ರ ಗಳು ಅಕ್ಷರಶಃ ಪಾಲಿಸಿದ್ದಾರೆ ಬದರಿಯಲ್ಲಿ ಶ್ರೀ ವೇದವ್ಯಾಸರ ಸಂದರ್ಶನ ಪಡೆಯ ಲು ತೆರಳುವದಕ್ಕಿಂತ ಮುಂಚೆ ಶ್ರೀ ಮಧ್ವ ಗ ರುಗಳು ತಮ್ಮ ಶಿಷ್ಯರಿಗೆ ಸಂದೇಶವೊಂದನ್ನು ಬರೆದಿಟ್ಟರು ನಮ್ಮ ವಚನಗಳಿಗೆ ಸಮಾನವಾದ ಹಿತ ವಚನಗಳಿಲ್ಲ ಎಂದು ಅದನ್ನು ಲೋಕಕ್ಕೆ ತಮ್ಮ ಹರಿಸಮರ್ಪಿತ ಜೀವನದಿಂದ ಹರಿಸರ್ವೋತ್ತಮತ್ವ ಪ್ರತಿಪಾದನೆಯ ಗ್ರಂಥಗಳಿಂದ ಹರಿಪ್ರೀತಿಕರ ವಾದ ಲೋಕಹಿತದ ಆಚರಣೆಗಳಿಂದ ದೃಢವಾಗಿ ಮನಗಾಣಿಸಿಕೊಟ್ಟವರು ಶ್ರೀ ವಾದಿ ರ ಜಗ ರುಗಳು ತೀರ್ಥಪ್ರಬಂಧದ ಒಂದು ಪದ್ಯದಲ್ಲಿ ಹಯಗ್ರೀವರೂಪಿಯಾದ ಪರಮಾತ್ಮನನು ಸ್ತುತಿಸುತ್ತ ಬಹುಚಮತ್ಕಾರವಾಗಿ ಶ್ರೀ ಹರಿಸರ್ವೋತ್ತ ಮತ್ವವನ್ನು ಪ್ರತಿಪಾದಿಸಿದ್ದಾರೆ ಶ್ರೀ ಹರಿಯ ಅವತಾರ ಕಥೆಗಳನೆ ಲ್ಲ ನೆನಪಿಟ್ಟು ಕೊಂಡು ಯಾರು ಯಾವ ಅವತಾರದಲ್ಲಿ ಪರಮಾತ್ಮನಿಂದ ಪ್ರಯೋ ಜನ ಪಡೆದಿರು ವರೋ ಅವರನ್ನೇ ಈ ಸರ್ವೋತ್ತಮತ್ವಕ್ಕೆ ಸಾಕ್ಷಿಗಳನ್ನಾಗಿ ಕರೆದು ನುಡಿಸಿದ್ದಾರೆ ಓ ಬ್ರಹ್ಮದೇವರೇ ಓ ದೇವತೆಗಳೇ ಮಂದರಪರ್ವತವೇ ಭೂಮಿಯೇ ಪ್ರಲ್ಹಾದನೇ ಇಂದ್ರನೇ ಬ್ರಾಹ್ಮಣ ವೃಂದವೇ ಓ ಸಮುದ್ರನೇ ಓ ಅರ್ಜುನನೇ ಶಿವನೇ ಎಲ್ಲೈ ನಿರ್ದೋಷವಾದ ಧರ್ಮವೇ ಸುಳ್ಳು ಹೇಳಬೇಡಿರಿ ಸತ್ಯವನ್ನೇ ನ ಡಿಯಿರಿ ಈ ಹಯ ಗ್ರೀವ ಪರಮಾತ್ಮನ ಹೊರತು ನಾವಿನ್ನಾವದೇವರನ್ನು ನಮ ಸ್ಕರಿಸೋಣ? ಹಾಡಿ ಹೊಗಳೋಣ? ಪೂಜಿಸೋಣ? ಕರ್ಮವೇ ಬ್ರಹ್ಮವೆನ್ನು ತ್ತಾರೆ ಒದೆಂದಾದರೂ ನಿತ್ಯ ಸುಖರೂಪವಾದ ಸುಖವನು ಕೊಟ್ಟೀತೆ? ಈ ಹಯ ಗ್ರೀವನಿಗಿಂತ ಬೇರೆ ನಾ ವ ಬ್ರಹ್ಮವು ನಮಗೆ ಉಂಟು ?

ಶ್ರೀಹರಿಯು ಮೀ ನನಾಗಿ ಬ್ರಹ್ಮನಿಗೆ ವೇದಗಳನ್ನಿತ್ತು ಉಪಕರಿಸಿದನು ಕೂರ್ಮನಾಗಿ ಮ ಂದರ ಪರ್ವತವನು ಬೆನ ಲ್ಲಿಟ್ಟು ದೇವತೆಗಳಿಗೆ ಅಮೃತವಿತ್ತು ಉಪಕರಿಸಿದನು ವರಾಹನಾಗಿ ದೈತ್ಯನಿಂದ ಘನೋದಕದಲ್ಲಿ ಮುಳುಗಿಸಲ್ಪಟ್ಟ ಭೂಮಿಯ ನ್ನು ಮೇ ಲೆ ತಂದಿತ್ತನು ಕ್ರೂರಿಯಾದ ತಂದೆಯ ಪೀಡೆಗಳಿಂದ ಪ್ರಲ್ಹಾದನನು ಸಲುಹಿದನು ವಾಮನನಾಗಿ ಇಂದ್ರನಿಗೆ ಅವನ ಸ್ವರ್ಗಾಧಿಪತ್ಯವನ್ನೂ ವೈಭವವನ್ನೂ ಮ ರಳಿ ತಂದು ಕೊಟ್ಟನು ಸಮುದ್ರ ಮಧ್ಯದಲ್ಲಿ ಸೇತುವನ್ನು ನಿರ್ಮಿಸಿ ಸಮು ದ್ರರಾಜನಿಗೆ ಕೀ ರ್ತಿ ತಂದಿತ್ತನು ಅರ್ಜುನನಿಗೆ ಸಾರಥಿಯಾಗಿದ್ದಲ್ಲದೆ ತನ್ನ ವಿಶ್ವರೂಪದರ್ಶನದ ಭಾಗ್ಯವನ್ನು ಅವನಿಗೆ ನೀಡಿದನು ಭಸ್ಮಾಸುರನ ಭಯ ದಿಂದ ಓಡುತ್ತಿದ್ದ ಶಿವನನ್ನು ಮೋಹಿನಿಯಾಗಿ ಬಂದು ಪಾರು ಮಾಡಿದನು ಕಲಿ ಯಿಂದ ಧರ್ಮಗಳೆಲ್ಲ ನಷ್ಟಗೊಂಡಾಗ ಕಲ್ಕಿಯಾಗಿ ಬಂದು ಧರ್ಮವನ್ನು ಮತ್ತೆ ನಿಲ್ಲಿಸಿ ಉಪಕರಿಸಿದನು ಅಂದಮೇಲೆ ಇವರೆಲ್ಲರೂ ಹಯಗ್ರೀವನೇ ಸರ್ವೋತ್ತಮನೆಂದಲ್ಲದೇ ಮತ್ತಿನ್ನೇನೆಂದು ಹೇಳಿಯಾರು ? ನಮಗೆಲ್ಲ ತಂದೆಯೂ ತಾಯಿಯೂ ಸೋದರನೂ ಮಿತ್ರನೂ ಬಂಧ ವೂ ಆಗಿ ನಮಗೆ ಮಹೋಪಕಾ ರ

ಮಾಡುವನೆಂದು ಶ್ರುತಿಗಳು ಹೊಗಳುವ ಈ ಹಯಗ್ರೀವನನ್ನು ಬಣ್ಣಿಸುವದು ಮನನಿಸುವುದು ಆರಾಧಿಸುವದು ಅಗತ್ಯವೆಂದು ಶ್ರೀ ವಾದಿರಾಜರು ತಮ್ಮ ಕನ್ನಡ ಕೃತಿಯೊಂದರಲ್ಲಿ ಬಣ್ಣಿಸಿದ್ದಾರೆ

ನಾರಾಯಣನ ವರ್ಣಿಸು ಮನ್ನಿಸು ।
ಆರಾಧನೆಗಳ ಮಾಡುತ ಪಾಡುತ ॥
ನೀರಾಜನದಿ ಅವನರ್ಚಿಸು ಮೆಚ್ಚಿಸು ವೇದ ।
ಪಾರಾಯಣ ಪ್ರಿಯನಾ ॥ಪ॥

ಅವನ ಶ್ರವಣ ಮನನ ಜಪತಪ ಭಕ್ತಿಗಳೇ ಮೋಕ್ಷ ಸಾಧನವಾಗಿವೆ ಹರಿಯ ನಿರ್ಮಾಲ್ಯವನ್ನು ಧರಿಸಬೇಕು ಹರಿನೈವೇದ್ಯವನ್ನು ಭುಂಜಿಸಬೇಕು ಹರಿಸ್ಮರಣೆ ಮಾಡುತ್ತಿರಬೇಕು ಹರಿ ಪರದೈವತವೆಂದು ಸದಾ ನೆನೆಯಬೇಕು ಏಕೆಂದರೆ—

ಓಡುವ ನಡುಗುವ ದೇವನೆ ಬಲ್ಲನು ।
ಬಾಡುವ ಬೇಡುವ ಮುನಿಗಳೇ ಬಲ್ಲರು ॥
ನೋಡುವ ನಡಿವ ಮುಕುತರೆ ಬಲ್ಲರೊಡೆ ।
ನಾಡುವ ರಮೆ ಬಲ್ಲಳು ॥

ಯಾರಿಗೆ ಶ್ರೀದೇವಿ ಪತ್ನಿಯಾಗಿದ್ದಾಳೊ ದೇವಗುರು ಬ್ರಹ್ಮನು ಮಗನೋ ಆದಿಶೇಷನು ಮಂಚವೊ ಪಕ್ಷಿರಾಜನು ವಾಹನನೊ ಶಿವನು ಯಾರ ಪಾದನಖದಿಂದ ಹುಟ್ಟಿದ ಪಾವನ ಗಂಗೆಯನು ಧರಿಸಿರುವನೊ ಇಂದ್ರನು ಯಾರ ಚರಣ ಸೇವಕನೊ ಆ—

ಹಯವದನಗಿನ್ನಾರನು ಸರಿಯೆಂದು ಪೇಳುವೆನೈ

ಎಂದು ವರ್ಣಿಸಿದ್ದಾರೆ ಅದಕ್ಕೆ ಇನ್ನೊಂದು ಪದದಲ್ಲಿ ಇನ್ನು ಸ್ಫುಟವಾಗಿ ಕೇಳಿದ್ದಾರೆ—

ಕೊಂಡಾಡಲಳವೇ ನಿನಯ ಕೀರ್ತಿ । ಭೂ ।
ಮಂಡಲದೊಳು ಹಯಗ್ರೀವ ಮೂರ್ತಿ ॥ಪ॥

ಜನಮಾನ್ಯರಿಗೆ ಶ್ರೀ ಮಧ್ವಸಿದ್ಧಾಂತವನ್ನು ತಲುಪಿಸಿದ ಮಹಾತ್ಮರ ಪರಂಪರೆಯಲ್ಲಿ ಶ್ರೀವಾದಿರಾಜ ಗುರುಗಳಿಗೆ ಒಂದು ವಿಶಿಷ್ಟ ಸ್ಥಾನವಿರುತ್ತದೆ ಶ್ರೀಮಧ್ವಾಚಾರ್ಯರು ಉಡುಪಿಯಲ್ಲಿ ಶ್ರೀಕೃಷ್ಣ ಪ್ರತಿಷ್ಠೆ ಮಾಡಿ ಅವನ ಪೂಜೆಗೆಂದು ಎಂಟು ಜನ ಶಿಷ್ಯರಿಗೆ ಯತ್ಯಾಶ್ರಮ ವಿತ್ತರು ಅವರಲ್ಲಿ ಶ್ರೀಮಧ್ವರ ಪೂರ್ವಾಶ್ರಮ ಸೋದರ ಶ್ರೀವಿಷ್ಣುತೀರ್ಥರು ಒಬ್ಬರು ಇವರ ಪರಂಪರೆಯಲ್ಲಿ 17 ನೇಯವರು ಸೋದೆಯ ಮಠದ ಶ್ರೀವಾಗೀಶತೀರ್ಥರು ಇವರು ತಪಸ್ವಿಗಳು ಯೋಗಿಗಳು ತ್ರಿಕಾಲಜ್ಞರು ಮತ್ತು ಮಹಾತ್ಮರು ಆಗಿದ್ದರು ಇವರ ಶಿಷ್ಯರೇ ಶ್ರೀವಾದಿರಾಜತೀರ್ಥರು ದಕ್ಷಿಣ ಕನ್ನಡ ಜಿಲ್ಲೆಯ ಕುಂದಾಪುರ ತಾಲ್ಲೂಕಿನ ಕುಂಭಾಸಿಯ ಬಳಿಯಲ್ಲಿ ಹೂವಿನಕೆರೆ ಎಂಬ ಗ್ರಾಮವಿದೆ ಅಲ್ಲಿ ರಾಮಾಚಾರ್ಯರು

ಸರಸ್ವತಿ ಎಂಬ ದಂಪತಿಗಳು ನೆಲೆಸಿದ್ದರು  ಇವರು ತಮಗೆ ದೊರೆತದ್ದುದರಲ್ಲಿಯೇ ಸಂತೃಪ್ತರಾಗಿ ದಾನ ಧರ್ಮ ಸತ್ಕಾರ್ಯಗಳಲ್ಲಿ ತೊಡಗಿ ಬಾಳುತ್ತಿದ್ದರು  ಕ್ರಿ ಶ 1480 ಶಾರ್ವರಿ ಸಂವತ್ಸರ ಮಾಘ ಶುಕ್ಲ ದ್ವಾದಶಿಯಂದು ಇವರಿಗೆ ಗಂಡುಮಗುವೊಂದು ಹುಟ್ಟಿತು  ಈ ಮಗು ಸೋದೆ ಮಠದ ಪಟ್ಟದ ದೇವರಾದ ಶ್ರೀವರಾಹ ದೇವರ ದಯೆಯಿಂದ ಹುಟ್ಟಿದ್ದರಿಂದ ಇವನಿಗೆ ವರಾಹನೆಂದೇ ಹೆಸರಿಟ್ಟರು ಶ್ರೀವಾಗೀಶತೀರ್ಥರ ನೆರಳಿನಲ್ಲಿಯೇ ಈ ಮಗು ಬೆಳೆಯುತ್ತಿದ್ದನು  ಚಿಕ್ಕಂದಿನಿಂದಲೂ ಇವರು ಮೇಧಾವಿಗಳು  ಶ್ರೀವಾಗೀಶತೀರ್ಥರ ಪೂರ್ವಾಶ್ರಮದ ಬಂಧುಗಳೊಬ್ಬರು ಶ್ರೀವಿದ್ಯಾನಿಧಿತೀರ್ಥರೆಂದು ಬಿಡಿ ಸಂನ್ಯಾಸ ಪಡೆದು ಪ್ರಸಿದ್ಧರಾಗಿದ್ದರು ಇವರಲ್ಲಿ ವರಾಹಮೂರ್ತಿ ಕಾವ್ಯ ವ್ಯಾಕರಣ ತರ್ಕ ವೇದಾಂತಗಳ ಅಧ್ಯಯನ ಮಾಡಿದರು  ತುಸು ದಿನಗಳಲ್ಲಿ ಎಂಥ ಪಂಡಿತರನ್ನೂ ಚಕಿತಗೊಳಿಸುವ ಪಾಂಡಿತ್ಯ ಪಡೆದರು  ಎಂಟನೆಯ ವಯಸ್ಸಿನಲ್ಲಿ ಶ್ರೀವಾಗೀಶತೀರ್ಥರು ಇವರಿಗೆ ಸಂನ್ಯಾಸ ಕೊಟ್ಟು ಶ್ರೀವಾದಿರಾಜರೆಂದು ಹೆಸರಿಟ್ಟರು  ತಮಗಿಟ್ಟ ಹೆಸರನ್ನು ಶ್ರೀವಾದಿರಾಜರು ಸಂಪೂರ್ಣ ಸಾರ್ಥಕಗೊಳಿಸಿದರು  ಅವರ ಸ್ತುತಿಯೊಂದರಲ್ಲಿ ವಾದಿಗಳನ್ನೆಲ್ಲ ಗೆಲಿದ ರಾಜರಿವರು ಎಂದು ಹೊಗಳಿದ್ದಾರೆ  ಆದರೆ ಭಾವಪ್ರಕಾಶಿಕೆ ಎಂಬ ಕೃತಿಯಲ್ಲಿ ತಮ್ಮ ಹೆಸರನು ಅರ್ಥೈಸುತ್ತ ಹೀಗೆ ಹೇಳಿದ್ದಾರೆ— ವಾದಿ ಎಂದರೆ ಶ್ರೀಮಧ್ವರು  ಅವರೆ ರಾಜರಾಗಿ ಉಳ್ಳವರು ತಾವು  ಮಧ್ವರ ದಾಸನಾದ ವಾದಿರಾಜನೆಂಬ ನಾನು ಅವರ ಕೃಪೆಯಿಂದ ವೈಣಿಕನ ಕೈಚಳಕದಿಂದ ವೀಣೆ ನುಡಿಯುವಂತೆ ನುಡಿಯುತ್ತಿದ್ದೇನೆ  ಇದರಿಂದ ಅವರ ಗುರುಭಕ್ತಿ ಎಷ್ಟು ದೃಢ ಮತ್ತು ಆಳವಾಗಿತ್ತೆಂಬುದನ್ನು ಗಮನಿಸಬಹುದು  ವಿದ್ಯೆಯ ಪರ್ವತದಂತಿದ್ದರೂ ಈ ಮಹಾತ್ಮರು ತುಂಬಾ ವಿನಯಶೀಲರು  ತಮ್ಮ ಯುಕ್ತಿಮಲ್ಲಿಕಾ ಗ್ರಂಥದ ಶ್ಲೋಕವೊಂದರಲ್ಲಿ ಹೀಗೆ ಹೇಳುತ್ತಾರೆ— ಕೆಲವರಿಗೆ ಅರ್ಥಮದ ಕೆಲವರಲ್ಲಿ ದುಷ್ಟಮಂತ್ರಶಕ್ತಿ ಕೆಲವರಿಗೆ ದುಸ್ಸಹವಾಸ ಕೆಲವರಿಗೆ ದುಃಶಾಸ್ತ್ರವೋದಿದ ಅಹಂಕಾರ ಇವುಗಳಿಂದ ಉದ್ಧತವೆಂದು ತೋರುವ ನಾನಾ ಕಾರ್ಯಗಳನ್ನು ಮಾಡುತ್ತಾರೆ ಆದರೆ ಶ್ರೀಹಯಗ್ರೀವನ ಉಪಾಸನೆ ಮಾಡಿ ಆ ದೇವನ ಅನುಗ್ರಹದಿಂದ ನಾವು ಉತ್ತಮ ಕೃತಿಗಳನ್ನು ರಚಿಸಿದ್ದೇವೆ  ಶ್ರೀಮಧ್ವಗುರುಗಳಲ್ಲಿ ಇವರ ಭಕ್ತಿ ಅಸೀಮವಾಗಿತ್ತೆಂಬುದನು ಇವರು ರಚಿಸಿದ ಅನೇಕಾನೇಕ ಕೃತಿಗಳಿಂದಲೇ ಮನಗಾಣಬಹುದು ಹನುಮ ಭೀಮ ಮಧ್ವರೆಂಬ ಮೂರು ಅವತಾರಗಳನ್ನು ವರ್ಣಿಸುವಂಥ ಅನೇಕ ಸುಂದರ ಪದ್ಯಗಳನು ರಚಿಸಿದ್ದಾರೆ  ಇಲ್ಲಿ ಮಧ್ವರನ್ನು ಹೊಗಳಿ ಹಾಡಿದ್ದಾರೆ

ಆರ್ಯರನ್ನಾ । ಯೋಗ ಧಾರ್ಯರನ್ನಾ । ಭಜಿಸಿ ।  
ವರ್ಯರನ್ನಾ ಮಧ್ವಾಚಾರ್ಯರನ್ನಾ ॥ಪ॥  
ಅಕಳಂಕ ಮಹಿಮ ಚಾರಿತ್ರನ ।ಈ।  
ಸಕಲ ಭುವನ ಪವಿತ್ರನ್ನ ॥

ಪ್ರಕಟ ಭ ರತಿ ಸತ್ಕಳತ್ರನ್ನ ।ಪಾಪ।
ನಿಕಟಕಾನನ ವೀತಿಹೋತ್ರನ ॥೧॥

ದಿವ್ಯ ಮಹಿಮೆಯ ಉಳ್ಳವರು ಭುವನ ಪಾವನರು ಭಾರತೀಶರು ಆದ ಶ್ರೀಮಧ್ವ ರನ್ನು ಭಜಿಸಿರಿ ಆದರಿಂದ ನೆನೆದವರ ಪಾಪಗಳೆಲ್ಲ ಸ ಟ್ಟು ಹೋಗುತ್ತವೆ ಶ್ರೀಮ ಧ್ವಗುರುಗಳು ಸಕಲ ದ ರ್ ತಗಳನ್ನು ನಿರ ಕರಿಸಿದರು ಅವರು ದೋಷ ವರ್ಜಿತರು ಅಲ್ಲದೆ ಭವದ ದುಃಖದಿ ದ ತಾವೂ ದೂರರು ತಮ್ಮನಾ ಶ್ರಯಿ ಸಿದವ ರನ್ನು ಸಲಹುವವರು ಅವರು ಸಜ್ಜನರ ಪಾಪಗಳನೆ ಲ್ಲ ಕಳೆಯು ವರು ಇಂಥ ಸದ್ಗುಣ ಪೂರ್ಣರಾ ದ ಪೂರ್ಣಬೋಧರನ್ನು ಭಜಿಸಬೇಕು

ಸದಮಲ ಲಕ್ಷಣ ತ ಂಗನಾ ।ಸಿರಿ।
ಸದನನ್ನ ಕರುಣಾಂತರಂಗನಾ ॥
ಮದಮೋಹ ತಿಮಿ ರ ಪತಂಗನ್ನಾ ।ಹಯ।
ವದನನ ಚರಣಾಬ್ಜಭೃಂಗನ್ನಾ ॥

ಶ್ರೀಹರಿಯ ಚರಣಗಳಲ್ಲಿ ಸದಾ ಧ್ಯಾನಸ್ಥರಾಗಿರುವ ಶ್ರೀಮಧ್ವರ ಚರಣಗಳನ್ನು ಭಜಿಸಿರೆಂದು ಅವರು ಬೋಧಿಸಿದ್ದಾರೆ

ನೆರೆನಂಬಿ ಪಡೆಯಿರೊ ಹಿತವ ।ನಮ್ಮ।
ಗುರ ವರ ಮಧ್ವಮುನಿಯ ಸನ್ಮತವ

ಎಂದು ಲೋಕಕ್ಕೆ ಹಿತವಚನ ನೀಡಿರ ವರು ಇನ್ನೊಂದು ಪದ್ಯದಲ್ಲಿ ಮ ಧ್ವಗುರು ಗಳ ಹನುಮ ಭೀಮ ಮ ಧ್ವರೆಂಬ ಮೂರು ಅವತಾರಗಳನ್ನು ಬಣ್ಣಿಸ ತ್ತ

ಮರುದಂಶ ಮಧ್ವಮುನಿ ರನ್ನಾ ।
ನಿನಗೆಣೆಗಾಣೆ ಜಗದೊಳಗೆ ಸರ್ವರೊಳು ಪೂರ್ಣ

ಎಂದು ಕೊಂಡಾಡಿದ್ದಾರೆ ಸಿಂಹದಂತೆ ಸಂಚರಿಸುತ್ತ ಪರವಾದಿಗಳನ್ನು ತಮ್ಮ ನಿಸ್ಸೀಮ ಜ್ಞಾನಗರ್ಜನೆಯಿಂದ ಓಡಿಸುತ್ತಿದ್ದ ಶ್ರೀಮಧ್ವರನ್ನು ಎಷ್ಟು ವಿಧವಾಗಿ ಒಣ್ಣಿಸಿದರೂ ಶ್ರೀವಾದಿರಾಜಗುರುಗಳಿಗೆ ತೃಪ್ತಿಯಿಲ್ಲ

ಈತನೆ ಕಾಣಿರೋ ಮಧ್ವಮ ಎನಿ ॥ಪ॥
ಪರಿಪರಿ ಶ್ರುತಿಗಳೆಂಬ ಗುಹೆಗಳಲ್ಲಿ ।
ಕೇಸರಿಯ ಂತೆ ಚರಿಸುತ ॥
ಶ್ರೀಹರಿಯೆ ಸರ್ವೋತ್ತಮನೆಂದು ।
ನರಿಗಳೋಡಿಸಿದಾತ ॥೧॥

ಶ್ರುತಿಗಳೆಂಬ ಗುಹೆಗಳಲ್ಲಿದ್ದ ಶ್ರೀಮಧ್ವಸಿಂಹನು ಮಾಡಿದ ತತ್ತ್ವಗರ್ಜನೆಗೆ ಎದುರು ನಿಲ್ಲದಂತೆ ಪರವಾದಿಗಳೆಲ್ಲ ಚದುರಿಹೋದರು ಸಕಲ ವೇದಗಳೆಂಬ ಸಮುದ್ರವನ್ನು

ಬಹು ಸುಲಭವಾಗಿ ದಟವಂತೆ ಯುಕುತಿಗಳೆಳ್ಳ ಗ್ರಂಥ ರಚಿಸಿದರು ಈ ಕಡಲನ್ನು ಕಡಿದು ನಿರ್ದೋಷನಾದ ಶ್ರೀಹರಿಯೆಂಬ ರತ್ನವನ್ನು ಅವರು ಶಿರಸ್ಸಿನಲ್ಲಿಟ್ಟುಕೊಂಡರು

ವೇದಸ ರವೆಂಬ ಈಶತ್ವವಾದ ।
ಅಮ ತವನು ಕಲ್ಪಿಸಿ ॥
ಆದಿವ ಉರುತಿ ಶ್ರೀಹಯ ವದನನ್ನ ।
ದಿವ್ಯ ಪಾದಸೇವಕನಾದ ।
ಮಧ್ವಮುನಿಯೆ ಜಾತ ॥

ತಮ್ಮ ರುಕ್ಮೀಣೀಶವಿಜಯ ವೆಂಬ ಕೃತಿಯ ಲ್ಲಿಯೂ ಶ್ರೀಮಧ್ವರ ಮಹಿಮೆಯನ್ನೂ ಮಧ್ವಮತದ ಹಿರಿಮೆಯನ್ನೂ ಇನ ಷ್ಟು ಸ್ಪಷ್ಟವಾಗಿ ಸಾರಿದ್ದಾರೆ ಶ್ರೀಆನಂದ ತೀರ್ಥರ ಮತವು ದೋಷರಹಿತವಾಗಿದೆ ಅದು ಮುಕ್ತಿಗೆ ಸಾಧನವಾದ ಮಾರ್ಗ ಅಪರೋಕ್ಷಜ್ಞಾನವನ್ನು ಕರುಣಿಸುವಂಥದು ಅದ್ವೈತವನೂ ಮಾಯಾವಾದವನ್ನೂ ಸೋಲಿಸಿದ ಮತವಿದು ಈ ಮತವು ಅನುಪಮ ಪ್ರಮಾಣಗಳಿಂದ ಕೂಡಿದ್ದು ಯಾರಿಂದಊ ಭಯವಿರದ ಉತ್ತಮ ಕವಿತಾ ಶಕ್ತಿಯನು ನೀಡುವ ಬುದ್ಧಿಯು ನನಗೆ ಉಂಟಾದದ್ದು ಶ್ರೀಆನಂದತೀರ್ಥರ ಮತವನ್ನು ಅನುಸರಿಸಿದ್ದರಿಂದಲೇ ಎಂದು ಘೋಷಿಸಿದ್ದಾರೆ ಸಂಸ್ಕೃತದಲ್ಲಿಯೂ ಕೂಡ ಶ್ರೀಮಧ್ವರನ್ನು ಕ ರಿತು ಅವತಾರತ್ರಯ ಸ್ತೋತ್ರ ಶ್ರೀಮಧ್ವಮುನಿ ಪ್ರತಾಪಾಷ್ಟಕ ಮುಂತಾದ ಅನೇಕ ಸ್ತೋತ್ರಗಳನ್ನು ಬರೆದಿದ್ದಾರೆ ಅವರು ಉತ್ತರ ಭಾರತದಲ್ಲಿ ಸಂಚರಿಸುತ್ತ ದ್ವಾರಕಿಗೆ ಬಂದರು ಅಲ್ಲಿದ್ದ ಶ್ರೀಕೃಷ್ಣಯ ತಿಗಳೆಂಬ ವರು ಜ್ವರದಿಂದ ಬಳಲ ತ್ತಿದ್ದಾಗ ಜ್ವರ ನಿವಾರಣೆಗೆಂದು ಶ್ರೀವಾದಿರಾಜರು ಸ್ವಪ್ನಸೂಚಿತವಾದಂತೆ ಶ್ರೀಮಧ್ವಾಷ್ಟಕ ವನ್ನು ರಚಿಸಿಕೊಟ್ಟರು ಅದರ ಪಠನೆಯಿಂದ ಶ್ರೀಕೃಷ್ಣಯ ತಿಗಳಿಗೆ ಗುಣವಾಗಿ ಆರೋಗ್ಯವುಳ್ಳವರಾದರು

ಶ್ರೀವಾಗೀಶತೀರ್ಥರ ಅಪ್ಪಣೆಯನ್ನು ಪಡೆದು ಶ್ರೀವಾದಿರಾಜರು ಕಾಲು ನಡುಗೆಯಿಂದಲೇ ಭಾರತದ ತೀರ್ಥಕ್ಷೇತ್ರಗಳನ್ನು ಸಂಚರಿಸಿದರು ಅವರು ತೆರಳುವ ಮೊದಲು ತಮ್ಮ ತಾಯಿಗೆ ಅಗಲಿಕೆಯ ದುಃಖವಾಗಕೂಡದೆಂದು ತಮ್ಮ ಒಂದು ಪ್ರತಿಮೆಯನ್ನು ಮಾಡಿಸಿಕೊಟ್ಟರು ಆ ಪ್ರತಿಮೆ ಈಗಊ ಸೋದೆಯ ಮಠದಲ್ಲಿ ಇರುತ್ತದೆ ಅಲ್ಲಲ್ಲಿ ತೀರ್ಥಸ್ನಾನ ಮಾಡುತ್ತ ಕ್ಷೇತ್ರ ಮೂರ್ತಿಗಳನ್ನು ನೊ ಡುತ್ತ ಸಂಚರಿಸಿದ್ದಲ್ಲದೆ ಅವೆಲ್ಲವುಗಳ ಪರಿಚಯ ಮಾಡಿ ಕೊಡುವ ತೀರ್ಥ ಪ್ರಬಂಧವೆಂಬ ಅತ್ಯುತ್ತಮವಾದ ಕೃತಿಯ ನು ರಚಿಸಿದ್ದಾರೆ ಇದರಲ್ಲಿ ಅಯೋಧ್ಯೆ ತಿರುಪತಿ ಪಂಢರಪುರ ದ್ವಾರಕಿ ಪ್ರಯಾಗ ಹಂಪೆ ಗೋಕರ್ಣಗಳಲ್ಲದೆ ತುಂಬಾ ಜಾಗ್ರುತವಾದ ಆದರೆ ಅನೇಕರಿಗೆ ಗೊತ್ತಿಲ್ಲದ ಮಹತ್ವದ ಕ್ಷೇತ್ರಗಳ ಪರಿ

ಜಯವನ್ನೂ ಮಾಡಿಕೊಟ್ಟಿದ್ದಾರೆ. ಇದರ ಪರನೆಯಿಂದ ತೀರ್ಥಯಾತ್ರೆಯ ಫಲ ಬರುತ್ತದೆಯೆಂದು ಶ್ರೀವಾದಿರಾಜರೇ ಅಪ್ಪಣೆ ಕೊಡಿಸಿದ್ದಾರೆ. ಶ್ರೀಗಳವರ ಸಂಚಾರವು ತೀರ್ಥಯಾತ್ರೆಗೆ ಮಾತ್ರವೇ ಸೀಮಿತವಾಗಿರಲಿಲ್ಲ. ತಮ್ಮ ಸಂಚಾರ ಕಾಲದಲ್ಲಿ ಅಲ್ಲಲ್ಲಿ ಆಗ ಪ್ರಬಲವಾಗಿದ್ದ ಶೈವ ಪಾಶುಪತ ಮುಂತಾದ ಮತಗಳ ಪಂಡಿತರನ್ನೆಲ್ಲ ಗೆಲಿದು ಶ್ರೀಮಧ್ವಮತವೇ ಮತವು ಸಕಲ ಶ್ರುತಿ ಸಮ್ಮತವು ಎಂದು ಜಯಭೇರಿ ಹೊಡಿಸಿದರು. ದಾರಿಯುದ್ದಕ್ಕೂ ಅಲ್ಲಲ್ಲಿ ಅನೇಕ ಪವಾಡಗಳನ್ನು ಮೆರೆಸಿ ತಮ್ಮ ಮಹಿಮೆಗಳನ್ನು ಪ್ರಕಟಿಸಿದರು. ಇದಲ್ಲದೆ ಅನೇಕ ಕಡೆಗಳಲ್ಲಿ ಅಪೂರ್ವವಾದ ದೇವತಾ ವಿಗ್ರಹಗಳನ್ನು ಅರಾಧನೆಯ ಸಾಮಾಗ್ರಿಗಳನ್ನು ಸಂಗ್ರಹಿಸಿದರು. ದ್ವಾರಕೆಯ ಗುಹೆಯೊಂದರಲ್ಲಿ ಅವರು ಶ್ರೀ ಹಯಗ್ರೀವ ಸಾಲಿಗ್ರಾಮವೊಂದನ್ನು ದೊರಕಿಸಿದರು. ಬದರಿಯಲ್ಲಿದ್ದಾಗ ಭೀಮಕುಂಡದಲ್ಲಿ ಒಮ್ಮೆ ಸ್ನಾನ ಮಾಡುತ್ತಿರಲು ಶ್ರೀಭೀಮಸೇನ ಪೂಜಿಸಿದಂಥ ಶ್ರೀಲಕ್ಷ್ಮೀನರಸಿಂಹನ ಮೂರ್ತಿಯನ್ನು ಶ್ರೀವೇದವ್ಯಾಸರ ಸೂಚನೆಯಂತೆ ಪಡೆದುಕೊಂಡರು. ಹಂಪೆಯ ಗುಹೆಗಳಲ್ಲಿ ಅಡಗಿದ್ದ ವಾಲಿ ಸುಗ್ರೀವರ ಭಂಡಾರಗಳಿಂದ ಮಲಿಸುಗ್ರೀವರು ಪೂಜಿಸಿದ್ದ ಶ್ರೀರಾಮಮೂರ್ತಿ ಶ್ರೀವಿಠಲಮೂರ್ತಿಗಳನ್ನು ಸಂಗ್ರಹಿಸಿದರು. ಮೂಡುಬಿದರೆಯ ಜೈನ ಮಠಕ್ಕೊಮ್ಮೆ ಹೋದಾಗ ಅಲ್ಲಿಯ ಪಚ್ಚೆಯ ವಿಗ್ರಹವೊಂದು ಪಚ್ಚೆಯ ವಿಠಲಮೂರ್ತಿಯಾಗಿ ಇವರ ಕೈಸೇರಿತು. ಅಯೋಧ್ಯೆಯಿಂದ ತಂದ ಶ್ರೀಮುಖ್ಯಪ್ರಾಣ ಗರುಡ ವಿಗ್ರಹಗಳನ್ನು ಉಡುಪಿಗೆ ತಂದು ಶ್ರೀಕೃಷ್ಣ ಮಠದಲ್ಲಿ ಪ್ರತಿಷ್ಠಾಪಿಸಿದರು. ಇನ್ನೊಮ್ಮೆ ದ್ವಾರಕೆಯಲಿ ಸಮುದ್ರಸ್ನಾನ ಮಾಡುತ್ತಿರುವಾಗ ಬಲಮುರಿ ಶಂಖವೊಂದು ಅವರಿಗೆ ದೊರಕಿತು. ಗಂಡಕಿಯಲ್ಲಿ ಕೂಡ ದೊರೆತ ಹನೆರಡು ಲಕ್ಷ್ಮೀನಾರಾಯಣ ಶಾಲಿಗ್ರಾಮಗಳು ಇಂದಿಗೂ ಸೋದೆಯ ಮಠದಲ್ಲಿ ಇರುತ್ತವೆ. ಈ ಅಲೌಕಿಕ ಪೂಜಾಸಾಮಗ್ರಿಗಳು ಅವರಿಗೆ ದೊರೆತದ್ದೆ ಅವರ ವಿಶಿಷ್ಟ ಮಹಿಮೆಗೆ ದೃಷ್ಟಾಂತವಾಗಿವೆ.

ಡಾ || ಎಚ್. ಕೆ. ವೇದವ್ಯಾಸಾಚಾರ್ಯರು ದಾಸಸಾಹಿತ್ಯದ ಬಗ್ಗೆ ಬರೆದ ತಮ್ಮ ಉದ್ಗ್ರಂಥದಲ್ಲಿ ಶ್ರೀವಾದಿರಾಜರ ವಿಷಯವನು ಪ್ರಸ್ತಾಪಿಸುತ್ತ ವಾಗೀಶತೀರ್ಥರಿಂದ ಆಶ್ರಮ ಪಡೆದ ವೇಳೆ ಇವರು ವ್ಯಾಸರಾಯರ ಅಪಾರ ಕೀರ್ತಿಯನ್ನು ಕೇಳಿ ಅವರಲ್ಲಿ ಹೋಗಿ ವಿಜಯೀಂದ್ರರೊಡಗೂಡಿ ಸಕಲ ಉದ್ಗ್ರಂಥಗಳನ್ನೂ ಚತುಷಷ್ಠಿ ಕಲೆಗಳನ್ನೂ ಅಭ್ಯಾಸ ಮಾಡಿದರು. ಇವರ ವಾಕ್ಚಾತುರ್ಯ ಪಾಂಡಿತ್ಯ ಪ್ರತಿಭೆಯನ್ನು ನೋಡಿ ಕೃಷ್ಣದೇವರಾಯನು ಇವರನ್ನು ಪ್ರಸಂಗಾಭರಣತೀರ್ಥರೆಂದು ಗೌರವಿಸಿದನು ಎಂದಿದ್ದಾರೆ. ಡಾ|| ಆರ್. ಎಸ್. ಪಂಚಮುಖಿಯವರು ತಮ್ಮ ಹರಿದಾಸ ಸಾಹಿತ್ಯದಲ್ಲಿ ಇಂಥವೇ ಮಾತನ್ನು ಬರೆದಿದ್ದಾರೆ. ಶ್ರೀವಾದಿರಾಜರು ಶ್ರೀವ್ಯಾಸತೀರ್ಥರಲ್ಲಿ ಶಿಷ್ಯರಾಗಿದ್ದು ಅವರಲ್ಲಿ ಎಲ್ಲ ಶಾಸ್ತ್ರಗಳ ಅಧ್ಯಯನ ಮಾಡಿದರೆಂದು ಪುರಂದರದಾಸರ ಹಾಡುಗಳಿಂದಲೂ ವಿಜಯದಾಸರ ಪದಗಳಿಂದಲೂ ತಿಳಿದು ಬರು

ತ್ರದೆ ಇವರು ಶ್ರೀಹಯಗ್ರೀವ ದೇವರ ಉಪಾಸಕರು. ಇವರು ಮಹಾವಿದ್ವಾಂಸರಾಗಿದ್ದರಲ್ಲದೆ ರಾಜನೀತಿಯಲ್ಲಿ ಒಳ್ಳೆ ನುರಿತವರಾಗಿದ್ದರು. ಶ್ರೀದ ವಿಠಲದಾಸರ ಒಂದು ಕೃತಿಯಲ್ಲಿ ಈ ಮಾತುಗಳನ್ನು ಸಮರ್ಥಿಸುವ ಚರಣಗಳು ಹೀಗಿವೆ—

ಇದಿರ್ಯಾರೊ । ಗುರುವೆ । ಸಮರ್ಯಾರೊ ॥ಪ॥
ದುರುಳವಾದಿಗಳನು ಮರುಳು ಮಾಡೋರನ್ನ ।
ತರಿದಿಟ್ಟು ಚಂದ್ರಿಕ ಗ್ರಂಥವ ರಚಿಸಿ ॥

ಶ್ರೀದವಿಠಲನಿಗೆ ಅತಿ ಪ್ರಿಯರಾದ ಶ್ರೀಪಾದರಾಜರಲ್ಲಿ ಗ್ರಂಥಗಳನ್ನು ಓದಿದ ಮಹಾ ಮಹಿಮ ವ್ಯಾಸರಾಯರು

ವಾದಿರಾಜ ವಿಜಯೀಂದ್ರ ಪ್ರಮುಖರಿಗೆ ।
ಆದರದಲಿ ಪಾಠ ಹೇಳುತಲಿಪ್ಪನೆ ॥ ಎಂದಿದ್ದಾರೆ

ಶ್ರೀ ಸೋದೆಯ ಮಠದ ಪಟ್ಟದ ದೇವರು ವರಾಹದೇವರಾಗಿದ್ದರೂ ಶ್ರೀ ವಾದಿರಾಜರ ಉಪಾಸ್ಯ ದೇವತಾ ಹಯಗ್ರೀವನಾಗಿದ್ದನು. ಅವರೊಮ್ಮೆ ಸಂಚರಿಸುತ್ತಿದ್ದಾಗ ಒಂದೆಡೆಗೆ ಅಕ್ಕಸಾಲಿಗನೊಬ್ಬನ ಪಂಚಲೋಹದ ಗಣಪತಿಯ ಪ್ರತಿಮೆಯನು ಮಾಡಲು ಅನೇಕ ದಿವಸಗಳಿಂದ ಪ್ರಯತ್ನಿಸಿದರೂ ಪ್ರತಿಮೆಯ ಮುಖವು ಗಣಪತಿಯದಾಗಿರದೆ ಕುದುರೆಯದೇ ಆಗಿದ್ದಿತು. ಆಗ ಶ್ರೀವಾದಿರಾಜರಿಗೆ ಸ್ವಪ್ನದಲ್ಲಿ ನಿನ್ನಿಂದ ಪೂಜೆಗೊಳ್ಳಲು ಬರಲಿದ್ದೇನೆ. ಅಕ್ಕಸಾಲಿಗನಿಂದ ನನನ್ನು ಕರೆದೊಯ್ಯಬೇಕು ಎಂದು ಸೂಚನೆಯಾಯಿತು. ಆ ಸೂನಗರನಿಗೂ ಮಹಾತ್ಮ ಯತಿಗಳೊಬ್ಬರು ನಾಳೆ ಬಂದಾಗ ಅವರಿಗೆ ಪ್ರತಿಮೆಯನ್ನು ಒಪ್ಪಿಸಬೇಕು ಎಂದು ದೃಷ್ಟಾಂತವಾಯಿತು. ಅದರಂತೆ ಚತುರ್ಮುಖ ಬ್ರಹ್ಮನಿಗೆ ಅಸುರನು ಕದ್ದೊಯ್ದ ವೇದಗಳನು ಮರಳಿಸಿ ವೇದಗಳನ್ನು ಉಪದೇಶಿಸಿದ ದಿವ್ಯ ಹಯಗ್ರೀವ ಮೂರ್ತಿಯು ಶ್ರೀವಾದಿರಾಜರ ಕೈಸೇರಿತು. ಅಂದಿನಿಂದ ಶ್ರೀಗುರುಗಳು ಮಹಾ ಅಭಿಷೇಕ ಮಾಡುತ್ತ ನಿತ್ಯದಲ್ಲಿ ಐದು ಸೇರಿಗೆ ಕಡಿಮೆಯಾಗದಂತೆ ಕಡಲೆ ಬೆಲ್ಲದ ಹೂರಣಮಾಡಿ ಶ್ರೀಹಯಗ್ರೀವನಿಗೆ ಸಮರ್ಪಿಸುತ್ತಿದ್ದರು. ದಿನಾಲು ಬಾಗಿಲು ಮುಚ್ಚಿಕೊಂಡು ಸಕ್ಕರೆ ಮಡ್ಡಿಯನ್ನು ಚಿನ್ನದ ಹರಿವಾಣದಲ್ಲಿಟ್ಟು ಶ್ರೀವಾದಿರಾಜರು ತಲೆಯ ಮೇಲೆ ಇಟ್ಟು ಹಿಡಿದೊಡನೆ ಶ್ರೀಹಯಗ್ರೀವ ದೇವರು ಚಂದ್ರಸಂಥ ಬಿಳಿ ಕುದುರೆಯಾಗಿ ಬಂದು ಅವರ ಭುಜಗಳ ಮೇಲೆ ಬಂದು ಎರಡು ಕಾಲಿಟ್ಟು ಆ ಭಕ್ಷ್ಯವನು ತಿನ್ನುತ್ತಿದ್ದರು. ಆಮೇಲೆ ತುಸು ಆಟವಾಡಿ ಉಪಾಸನಾ ಮೂರ್ತಿಯಲ್ಲಿ ಕಣ್ಮರೆಯಾಗುತ್ತಿದ್ದರು. ವಿಜಯ ದಾಸರು ಈ ವಿಷಯವನ್ನು ಹೀಗೆ ಪ್ರಸ್ತಾಪಿಸಿದ್ದಾರೆ

ಒಡೆಯ ಹಯವಕ್ತ್ರನಿಗೆ ।
ಕಡಲೆ ಹೂರಣ ಮಾಡಿ ॥
ಅಡಿಗಡಿಗವನ ಪಾದ ।

ಬಿಡದಲಾರಾಧಿಸುವ ॥ ವಾದಿರಾಜಧೀರ ಶೂರ ॥ಪ॥

ಸ್ವತಃ ವಾದಿರಾಜರೇ ಈ ದಿವ್ಯಾನುಭವದಿಂದ ಪುಳಕಿತರಾಗಿ ಹಯಗ್ರೀವವನ್ನು ಹೊಗಳಿ ಕೊಂಡಾಡುವ ಒಂದು ಪದ್ಯ ಬರೆದಿದ್ದಾರೆ

ಅವಕಡೆಯಿಂದ ಬಂದೆ ವಾಜಿವದನನೆ ।
ಭಾವಿಸ ವ ವಾದಿರಾಜ ವ ಎನಿಯ ಕಾಣುತ ॥ಪ॥
ನೇವರಿಸೆ ಮೈಯುತಡವಿ ನೇಹದಿಂದಲಿ ಮೇಲು।
ನೈವೇದ್ಯವನ್ನು ಇತ್ತು ಭಜಿಸುವೆ ॥ಅ ಪ ॥

ಭಕ್ತಿಯೋ ಕಡಲೆ ಜ್ಞಾನವೈರಾಗ್ಯಗಳೇ ಬೆಲ್ಲ ಮುಕ್ತಿಯ ಆನಂದವೇ ಹಾಲು ಲಡ್ಡುಗೆಗಲು ಇವನು ನನಗಿತ್ತು ಸಂತತ ನಿನ್ನ ಧ್ಯಾನದ ಸಂತೋಷವನ್ನನುಗ್ರಹಿಸಲು ನೀನು ಬಂದಿರುವೆಯಾ ?

ಹೆತ್ತ ತುಪ್ಪ ಸಕ್ಕರೆಯು ಮಡ್ಡಿ ಮೆದ್ದೆಯು ।
ತುತ್ತು ಮಾಡಿಕೊಡಲು ಅವನು ಮೆಲುತ ಮೆಚ್ಚುತ ।
ಅತ್ಯಂತ ಸಂತೋಷ ನೀನು ಆಟಿ ತೋರುತ ।
ಭೃತ್ಯ ವಾದಿರಾಜ ಮುನಿಯ ಸಲಹ ಬಂದೆಯಾ ॥೨॥

ಜ್ಞಾನ ಭಕ್ತಿ ವೈರಾಗ್ಯಗಳನ್ನು ಕರುಣಿಸಿ ಶ್ರೀವಾದಿರಾಜರನು ಸಲುಹ ಬಂದ ಕರುಣಾಳು ನೀನು ಎಂದು ಸ್ತುತಿಸಿದ್ದಾರೆ ಡ ॥ ಎಚ್ ಕೆ ವೇದವ್ಯಾಸಾಚಾರ್ಯರು ಶ್ರೀವ ದಿರಾಜರ ವ್ಯಕ್ತಿತ್ವದ ವ ಹತಿಯನ್ನು ವಿವರಿಸುತ್ತ ಪರಮಾತ್ಮನನ್ನು ಎಲ್ಲ ಸಾಧಕರೂ ಭಜಿಸುವರು ಭಗವಂತನು ಸತ್ ಚಿತ್ ಆನಂದರೂಪಿಯೆಂದೂ ರಾಮಕೃಷ್ಣಾದಿ ಅವತ ರವೆಂದೂ ಭಜಿಸುವುದು ಸಾಮಾನ್ಯ ಸಾಧಕನಿಗೆ ಸಾಧ್ಯ ಹಯಗ್ರೀವ ದಿ ರೂಪಗಳನ್ನು ಉಪಾಸಿಸುವವರು ಉತ್ತಮಾದಿಕಾರಿಗಳು ತ್ರಿವಿಕ್ರಮ ರೂಪವು ವ್ಯಾಪ್ತರೂಪವಾದ್ದರಿಂದ ಇದರ ಉಪಾಸನೆಯು ವಾಯುದೇವರಿಗೆ ಮಾತ್ರ ಶಕ್ಯವು ಶ್ರೀವಾದಿರಾಜರು ಹಯಗ್ರೀವನ ಆರಾಧಕರಾಗಿದ್ದರಲ್ಲದೆ ತ್ರಿವಿಕ್ರಮನ ಉಪಾಸಕರೂ ಆಗಿದ್ದರು ಈ ಕಾರಣದಿಂದ ಇವರು ಮುಂದೆ ವಾಯು ಪದಕ್ಕೆ ಬರುವ ಋಜುಗಣಸ್ಥರ ದ ಲಾತವ್ಯರೆಂದು ಅನೇಕ ಜ್ಞಾನಿಗಳ ಮತವಾಗಿದೆ ಶ್ರೀವಿಜಯ ದಾಸರು ಇವರನ್ನು ಅಜಪದಕೆ ಅರ್ಹ ರೆಂದು ಕರೆದಿದ್ದಾರೆ ಶ್ರೀ ಗೋಪಾಲದಾಸರು

ಘನ್ನ ಖ ಜಗಣದೊಳಗೆ ಮಾನ್ಯನಾಗಿಹ ಸುಪ್ರ ।
ಸನ್ನ ದ್ವಿಜಕ ಲ ರನ್ನ ನಂಬಿದೆನೊ ನಿನ್ನ ॥

ಎಂದು ಹಾಡಿದ್ದಾರೆ

ಒಮ್ಮೆ ಶ್ರೀಗ ರುಗಳು ಸಂಚಾರ ಮಾಡುತ್ತ ಒಂದು ಊರಿನಲ್ಲಿ ತಂಗಿದ್ದಾಗ ಅಲ್ಲಿಯ ಶ್ರೀಮಂತರೊಬ್ಬರು ಬಹಳ ದುಃಖಿಸುತ್ತ ಹಾಹಾಕಾರ ಮಾಡುತ್ತ ಬಂದು

ತಮ್ಮ ಕಷ್ಟವನ್ನು ಪರಿಹರಿಸಬೇಕೆಂದು ಕೇಳಿದರು ಆ ಶ್ರೀಮಂತನ ಮಗನು ವಿವಾಹ ಮಂಟಪದಲ್ಲಿಯೇ ಹಾವು ಕಚ್ಚಿ ಮಡಿದಿದ್ದನು ಕರುಣಾಳುಗಳಾದ ಶ್ರೀವಾದಿರಾಜರು ಆ ಮದುಮಗನನ್ನು ಕರೆತರಿಸಿ ತಮಗೆ ಸ್ವಪ್ನದಲ್ಲಿ ಸೂಚಿತ ವಾದಂತೆ ಲಕ್ಷ್ಮೀಶೋಭನ ವೆಂಬ ಶ್ರೀ ಲಕ್ಷ್ಮೀಸ್ವಯಂವರದ ಪರಮ ಮಂಗಳಕರ ವಾದ ಕಾವ್ಯವನ್ನು ರಚಿಸಿ ಹಾಡಿದರು ಆಗ ಎಲ್ಲರಿಗೂ ಆಶ್ಚರ್ಯ ಆನಂದ ಗಳುಂಟಾಗ ವಂತೆ ವರ ಮಗನನು ಬದುಕಿ ವಧೂವರರಿಗೆ ಸೌಭಾಗ್ಯವನ್ನೂ ಆಯುಷ್ಯವನ್ನೂ ನೀಡಿದರು

ಪಾಲಿಸಲಿ ನಮ್ಮ ವಧೂವರರ । ಮನ್ನಿಯ ವಧೂವರರ ಸಲಹಲಿ ಎಂದು ನುಡಿನುಡಿಗೆ ಆಶೀರ್ವದಿಸುತ್ತ

> ಮದುವೆಯ ಮನೆಯಲ್ಲಿ ಈ ಪದವ ಪಾಡಿದರೆ ।
> ಮದುಮಕ್ಕಳಿಗೆ ಮಂದವಹ ದು ॥
> ವಧುಗಳಿಗೆ ಓಲೆ ಭಾಗ್ಯ ದಿನದಿನಕೆ ಹೆಚ್ಚುವದು ।
> ಮದನನಯ್ಯನ ಕೃಪೆಯಿಂದ ॥ ಶೋಭಾನೆ ॥

ಎಂದು ಅಭಯವಿತ್ತಿದ್ದಾರೆ ಇನ್ನೊಮ್ಮೆ ಶ್ರೀ ಗುರುಗಳು ಪ್ರತಿವಾದಿಗಳನ್ನು ಜಯಿಸುತ್ತ ಪಯಣ ಬೆಳಸಿ ಶ್ರೀನಿವಾಸನ ದರ್ಶನ ಪಡೆಯಬೇಕೆಂದು ತಿರುಪತಿಗೆ ತೆರಳಿದರು ಶೇಷಾಚಲದ ಬೆಟ್ಟದಲ್ಲಿ ದೀರ್ಘ ತಪಸ್ಸಿನಲ್ಲಿ ತೊಡಗಿದ ಅನೇಕ ಮಹರ್ಷಿಗಳನ್ನು ಕಂಡು, ಮೆಟ್ಟಲು ಹತ್ತಿ ಹೋಗುವದು ಅಯುಕ್ತವೆಂದು ತಿಳಿದು ಅಂಬೆಗಾಲಿಟ್ಟು ಬೆಟ್ಟವನ್ನು ಏರಿದರು ಇವರ ಅಸದೃಶ ಭಕ್ತಿಗೆ ಮೆಚ್ಚಿ ಶ್ರೀನಿವಾಸನು ತನ್ನ ದಿವ್ಯ ರೂಪ ತೋರಿದನು ಆಗ ಶ್ರೀ ವಾದಿರಾಜರು ತಮ್ಮೊಡನೆ ತಂದಿದ್ದ ಶಾಲಿಗ್ರಾಮದ ಮಾಲೆಯನ್ನು ವೇಂಕಟೇಶನಿಗೆ ಅರ್ಪಿಸಿದರು ಅದನ್ನು ಈಗಲೂ ತಿರುಪತಿಯಲ್ಲಿ ನೋಡಬಹುದು ಶ್ರೀಹರಿ ದರ್ಶನದಿಂದ ಸಂತುಷ್ಟರಾಗಿ

> ಅರಳಿದ ಕೆಂದಾವರೆಯ ಗರುವ ಧಿಕರಿಸುವ ।
> ಗಿರಿಯ ತಿಮ್ಮರಾಯನ ಚರಣವನು ಕಂಡೆ ನಾ ॥
> ಸಿರಿಮುಖವ ಕಂಡೆ ಹಯವದನ ವೇಂಕಟೇಶನ ।
> ಸಿರಿ ಕಿರೀಟವ ಕಂಡು ಕೃತ ರ್ಥನಾದೆನು ॥

ಎಂದು ಹಾಡಿದ್ದಾರೆ ಶ್ರೀಗುರುಗಳು ಕಾಶಿಯಿಂದ ಪ್ರಯಾಗಕ್ಕೆ ಪಯಣಿಸಿ ಅಲ್ಲಿದ್ದ ಬ್ರಹ್ಮದೇವರ ಸಂಧ್ಯಾ ವರದಲ್ಲಿ ಉಳಿದ ಕೊಂಡಿದ್ದರು ಆಗ ಅಲ್ಲಿ ತಪಸ್ವಿಯ ರೂಪದಿಂದ ಜಟಾಧಾರಿಗಳಾಗಿ ಬಂದ ಶ್ರೀ ಬಾದರಾಯಣರು ಶ್ರೀ ವಾದಿರಾಜರಿಗೆ ಅವರ ತಾಯಿ ಮಗನನ್ನು ಪಡೆದರೆ ಲಕ್ಷ ಭರಣಗಳನ್ನು ಅರ್ಪಿಸುವೆನೆಂದು ಹರಕೆ ಹೊತ್ತಿದ್ದನ್ನು ನೆನಪಿಸಿಕೊಟ್ಟರು ಮಹಾ ಭಾರತದ ಒಂದು ಲಕ್ಷ ಕ್ಲಿಷ್ಟ ಪದಗಳಿಗೆ ಅರ್ಥ ಬರೆದರೆ ಲಕ್ಷಾಭರಣ ಅರ್ಪಿಸಿದಂತಾಗುವುದೆಂದು ಅಪ್ಪಣೆ ಕೊಟ್ಟು

ಅದ್ಯತ್ಮರ ದರು ಶ್ರೀ ಗುರುಗಳು ಅದರಂತೆ ಲಕ್ಷ ಭರಣ ವೆಂಬ ಕ್ಲಿಷ್ಟ ಪದಗಳ ಅರ್ಥ ಎವರಿಸಿ ಗ್ರಂಥ ಬರೆದು ಶ್ರೀ ವೇದವ್ಯಾಸರಿಗೆ ಸಮರ್ಪಿಸಿದರು ಆ ಗ್ರಂಥದ ಆರಂಭದ ಶ್ಲೋಕದಲ್ಲಿ ಈ ಮಾತನು ಶ್ರೀ ಗುರುಗಳು ಸ್ಪಷ್ಟವಾಗಿ ಹೇಳಿದ್ದಾರೆ ಶ್ರೀ ವ್ಯಾಸರನ್ನು ಬಣ್ಣಿ ಒರೆದ ಈ ಪದ್ಯದಲ್ಲಿ ಅವರು ದರ್ಶನ ಪಡೆದು ರೋಮಾಂಚಿತರಾದದ್ದನ್ನು ವಣನಗಾಣಬಹ ದು

ವ ಧ್ಯಾಂತರ್ಗತ ವೇದವ್ಯಾಸ । ಕಾಯೊ ।
ಶುದ್ಧ ವಂಗರುತಿಯೆ ಸರ್ವೇಶ ॥ ಪ ॥
ಶ್ರದ್ಧೆಯಿಂದಲಿ ನಿನ್ನ ಭಜಿಸುವ ಜನರಿಗೆ ।
ಒದ್ದ್ಯಾದಿಗಳ ಕೊಟ್ಟುದ್ಧರಿಸೋ ದೇವರ ದೇವ ॥ಅ ಪ ॥

ಶ್ರೀ ಗುರುಗಳು ಪಂಢರಪುರದಲ್ಲಿದ್ದಾಗ ಅವರು ಇಳಿದುಕೊಂಡ ವ ರದ ಸವಿ ಣಪದಲ್ಲಿ ಒಂದು ಹೊಲವಿತ್ತು, ಅಲ್ಲಿ ಬೆಳೆದ ಕಡಲೆಯನು ಬಿಳಿಯ ಕುದುರೆಯೊಂದು ದಿನಾಲು ತಿನು ತ್ತಿತ್ತು, ಒಂದು ದಿನ ಹೊಲದೊಡೆಯನು ಕುದುರೆಯನು ಬೆನ ಟ್ಟಿ ಒರಲು ಆ ಭವ್ಯ ಕುದ ರೆ ಮಠದೊಳಗೆ ಹೊಕ್ಕು ಮಾಯವಾಯಿತು ಹೊಲದೊಡೆಯನು ಸಿಟ್ಟನಿಂದ ನಿಮ್ಮ ಕುದುರೆಯಿಂದ ನಮಗೆ ಬಹಳ ನಷ್ಟವಾಗಿದೆ ಎಂದು ಆಕ್ಷೇಪಿ ಸಿದನು ಆಗ ಶ್ರೀ ಗುರುಗಳು ನಾಳೆ ಮುಂಜಾವಿನಲ್ಲಿ ನಿನ ನಷ್ಟವನ್ನೆಲ್ಲ ನಮ್ಮ ಹಯಗ್ರೀವನು ತುಂಬಿಕೊಡುವನು ಎಂದು ಹೇಳಿ ಸಮಾಧಾನಪಡಿಸಿ ಕಳಿಸಿದರು ಮರುದಿನ ಕ ದುರೆ ತಿಂದಲ್ಲೆಲ್ಲ ಚಿನ ದ ಕಡಲೆಗಳಿದ್ದದ್ದನ್ನು ಕಂಡು ಹೊಲದೊಡೆ ಯನು ಓಡಿಬಂದು ತನ್ನ ಆಕ್ಷೇಪವನು ಕ್ಷಮಿಸಬೇಕೆಂದು ಕರ ಣಿಸಬೇಕೆಂದು ಬೇಡಿ ಕೊಂಡನು ಆ ಹೊಲವನ್ನು ಶ್ರೀಮಠಕ್ಕೆ ದಾನವಾಗಿ ಕೊಟ್ಟು ಧನ್ಯನಾದನು ಈ ಕುದ ರೆ ಬಂದದ್ದನ್ನು ಶ್ರೀ ಗುರುಗಳು ತಮ್ಮ ಪದ್ಯವೊಂದರಲ್ಲಿ ಬಣ್ಣಿಸಿದ್ದಾರೆ

ಕುದುರೆ ಬಂದಿದೆ । ಚೆಲುವ । ಕುದುರೆ ಬಂದಿದೆ ॥ಪ॥
ಕುದುರೆ ಬಂದು ವಾದಿರಾಜಗೆ । ಮುದದಿ ಜ್ಞಾನ ಭಕುತಿ ಕೊಡುವ ॥ಅ ಪ॥
ಹಲ್ಲಣವಿಲ್ಲದೆ ನಿಲ್ಲದು ಕುದುರೆ । ಒಲ್ಲದು ಕಡಿವಾಣ ಕುದ ರೆ ಕಡಲೆ ॥
ಬೆಲ್ಲವು ಮೆಲುವ ಕುದುರೆ । ಚೆಲ ವ ಹಯವದನನೆಂಬ ಕುದುರೆ ॥

ಶ್ರೀಗ ರುಗಳು ಹಂಪೆಯಲ್ಲಿದ್ದಾಗ ದೊರೆ ಅಚ್ಯುತರಾಯನು ಅಸಾಧ್ಯ ವ್ಯಾಧಿಯಿಂದ ನರಳುತ್ತಿರ ವದನ್ನು ಕೇಳಿ ಅವನಲ್ಲಿ ತುಂಬ ಕರುಣೆ ತಾಳಿದರು ಅವನಲ್ಲಿಗೆ ತಾವೇ ಹೋಗಿ ವ ಂತ್ರಿಸಿದ ನೀರನ್ನು ಕೊಡಲು ದೊರೆ ಕ್ರಮೇಣ ರೋಗ ಮುಕ್ತನಾಗಿ ಶ್ರೀ ಗುರ ಗಳ ಸೇವೆಯನು ಪರಿಪರಿಯಾಗಿ ಮಾಡಿದನು ಮೂಡ ಬಿದರೆಗೆ ಬಂದಾಗ ಅಲ್ಲಿಯ ಬಂಗವಂಶದ ದೊರೆಯು ತಮ್ಮ ದೇವಾಲಯಕ್ಕೆ ಬಂದು ನವರತ್ನದ ವಿಗ್ರಹ ಗಳನ್ನು ನೋಡಿ ಹೋಗಬೇಕೆಂದು ವಿನಂತಿಸಿದನು ಆಗ ಶ್ರೀ ಗುರುಗಳು ನಾವು

ಬಂದರೆ ನಿಮ್ಮ ದೆ ವರೂ ನಮ್ಮೊಡನೆ ಬಾರಾರು ಎಂದು ಹೇಳಿದರು ಆದರೂ ದೊರೆಯು ಅವರನ್ನು ಕರೆದೊಯ್ದನು ಅಲ್ಲಿಯ ನವರತ್ನ ದ ವಿಗ್ರಹಗಳಲ್ಲಿ ಒಂದು ಪಚ್ಚೆಯ ವಿಗ್ರಹವು ಸಲ್ಲಕ್ಷಣದಿಂದ ಶೋಭಿಸುವುದನು ಕಂಡು ಶ್ರೀ ವಾದಿರಾಜರು ಅದರಲ್ಲಿ ವಿಠಲಮೂರ್ತಿಯನು ಧ್ಯಾನಿಸಿದರು ಕೂಡಲೆ ಆ ವಿಗ್ರಹದ ಸ್ವರೂಪ ಬದಲಾಗಿ ಒಂದು ಕೈಯಲ್ಲಿ ಶಂಖವನ್ನು ಹಿಡಿದು ಇನೊಂದು ಕೈಯನ್ನು ಕಟಿ ಯಲ್ಲಿಟ್ಟು ಪಚ್ಚೆ ವಿಠಲನ ರೂಪ ತಾಳಿದನು ಆ ವಿಗ್ರಹದ ವಿಸ್ಮಯವನು ಕಂಡು ದೊರೆಯು ಅದನ್ನು ಶ್ರೀಗಳಿಗೇ ಸಮರ್ಪಿಸಿದನು ಈಗಲೂ ಅದು ಸೋದೆಯ ಮಠದಲ್ಲಿ ಇರುತ್ತದೆ ಶ್ರೀವಾದಿರಾಜರು ಒಂದು ದಿನ ಪೂಜೆಗೆ ಕುಳಿತಾಗ ಇಲಿ ಯೊಂದು ಅವರ ಪೀಠದ ಕೆಳಗೆ ಓಡಿಬಂದಿತು ಅದರ ಹಿಂದೆಯೇ ಹಾವೊಂದು ಬುಸುಗುಡುತ್ತ ಬಂದಿತು ಶ್ರೀ ಗುರುಗಳ ದೃಷ್ಟಿ ಅತ್ತ ಹರಿದೊಡನೆ ದೈನ್ಯದ ಆ ಇಲಿ ಮತ್ತು ರೊಚ್ಚಿನ ಆ ಹಾವುಗಳ ವೈರವೆಲ್ಲ ಅಡಗಿ ಹೋಗಿ ಅವು ಸ್ತಬ್ಧವಾಗಿ ಬಿಟ್ಟವು ಶ್ರೀ ಜಗನ್ನಾಥದಾಸರು ರಚಿಸಿದ ಕೀರ್ತನೆಯೊಂದರಲ್ಲಿ ಇವುಗಳನ್ನು ಪ್ರಸ್ತಾಪಿಸಿದ್ದಾರೆ

ವಾದಿರಾಜ । ವಾದಿರಾಜ ಪ್ರತಿವಾದಿ ಗಜೇಂದ್ರ ಮೃ ।
ಗಾಧಿರಾಜ ವಿಬುಧೋದಿತ ಚಂದ್ರ ॥ಪ॥

ನೀಗತಿಯೆಂದನು ರಾಗದಿ ನಂಬಿದ ।
ಭೋಗಿ ಪುರೀಶನ ರೋಗವ ಕಳೆದೆ ॥೧॥

ಎಲರುಣಿ ಭಯ ಕಂಜಿಲಿ ನಿಮ್ಮಾಸನ ।
ಕೆಳಗಿರೆ ಕಂಡದನುಳುಹಿದ ಕರುಣಿ ॥೨॥

ಹಯವದನನ ಪದದ್ವಯ ಭಜಕಾಗ್ರಣಿ ।
ದಯದಿ ವಿಪ್ರನಿಗೆ ನಯನವನಿತ್ತೆ ॥೩॥

ಒಬ್ಬ ಬ್ರಾಹ್ಮಣನು ಅಕಸ್ಮಾತ್ತಾಗಿ ಒದಗಿದ ಕುರುಡಿನಿಂದ ಕಳವಳಿಸುತ್ತ ಶ್ರೀಗುರು ಗಳನ್ನು ಮೊರೆಹೊಕ್ಕನು ಆಗ ಶ್ರೀವಾದಿರಾಜರು ಶ್ರೀ ಹಯಗ್ರೀವ ದೇವರ ತೀರ್ಥವನ್ನು ತಮ್ಮ ಮಂತ್ರಾಕ್ಷತೆಗಳನ್ನು ಅವನಿಗಿತ್ತು ಅವನ ಆ ಕುರುಡನ್ನು ನಿವಾರಿಸಿದರು ಇನ್ನೊಬ್ಬ ಬ್ರಾಹ್ಮಣನು ದಿನಾಲು ತಪ್ಪದೆ ಶ್ರೀ ಭಾಗವತದ ಹತ್ತನೆಯ ಸ್ಕಂದವನ್ನು ಪಾರಾಯಣ ಮಾಡುತ್ತಿದ್ದನು ಮುಪ್ಪಿನಿಂದ ಆ ನಿಯಮ ನಡೆಸುವದು ಅಸಾಧ್ಯವಾಗಿ ಶ್ರೀಗುರುಗಳಲ್ಲಿ ತನ್ನ ಅಳಲನ್ನು ತೋಡಿಕೊಳ್ಳಲು ಶ್ರೀ ವಾದಿರಾಜರು ಹತ್ತನೆಯ ಸ್ಕಂದದ ಸಾರರೂಪವಾದ ಕೀರ್ತನೆಯೊಂದನ್ನು ರಚಿಸಿ ಇದರ ಪಠನದಿಂದ ಪಾರಾಯಣದ ಫಲ ದೊರಕುವದೆಂದು ಅನುಗ್ರಹಿಸಿದರು

ನೆನೆವೆನನುದಿನ ನೀಲನೀರದ ವರ್ಣನಾ ಗುಣರನ ನಾ ।
ಮುನಿಜನಪ್ರಿಯಂ ಮ ದ್ವ ಉಡುಪಿಯ ರಂಗನಾ ದಯಾಪಾಂಗನಾ ॥

ಶ್ರೀ ವ್ಯಾಸರಾಯರು ಶ್ರೀ ವಿಜಯೀಂದ್ರರು ಪುರಂದರದ ಸರ ಸಮಕಾಲೀನರಾದ ಶ್ರೀ ವಾದಿರಾಜರು ಶ್ರೇಷ ವಿದ್ವಾಂಸರೂ ರಾಜನೀತಿಯಲ್ಲಿ ನ ರಿತವರೂ ಆಗಿದ್ದರು ಅಂತೆಯೆ ಅವರಿಗೆ ಆ ಕಾಲದ ರಾಜರುಗಳೊಡನೆ ನಿಕಟ ಸಂಪರ್ಕವಿದ್ದಿತು ವಿಜಯನಗರದ ದೊರೆಗಳು ತಿರುವಾಂಕೂರು ಕೊಚ್ಚಿಯ ಅರಸರು ಸೋದೆಯ ಅರಸಪ್ಪನಾಯಕನು ಮಹಾರಾಷ್ಟ್ರದ ಪೇಶ್ವೆಯರು ದಕ್ಷಿಣ ಕನ್ನಡದ ಬಂಗವಂಶದ ದೊರೆಗಳು ಶ್ರೀ ಗುರುಗಳಲ್ಲಿ ಪ್ರೀತಿ ಗೌರವವುಳ್ಳವರಾಗಿದ್ದರು ಅವರ ವ್ಯಕ್ತಿತ್ವವು ಅವರ ಪಾಂಡಿತ್ಯದಿಂದ ಪಟುತ್ವದಿಂದ ಕಾವ್ಯಶಕ್ತಿಯಿಂದ ತಪಸ್ಸಿನಿಂದ, ಮಂತ್ರ ಶಕ್ತಿಯಿಂದ ತಂತ್ರಶಕ್ತಿಯಿಂದ ಮಧುರಸಂಗೀತದಿಂದ ಮಾತುಗಳಿಂದ ತುಂಬ ಆಕರ್ಷಕವಾಗಿದ್ದಿತು ಶ್ರೀ ಆನಂದತೀರ್ಥರ ವಿಶೇಷ ಅನುಗ್ರಹ ಅವರಲ್ಲಿದ್ದುದರಿಂದ ಅವರು ಎಲ್ಲಿಯೇ ಇದ್ದರೂ ಜನ ಅವರನ್ನು ಅತ್ಯಂತ ಗೌರವದಿಂದ ಕಾಣುತ್ತಿದ್ದರು ಪ್ರೊ ಸಾಣೂರು ಭೀಮಭಟ್ಟರು ಬರೆದ ಲೇಖನವೊಂದರಲ್ಲಿ ಶ್ರೀ ವಾದಿರ ಜರ ವ್ಯಕ್ತಿತ್ವವನ್ನ ಪ್ರಸ್ತಾಪಿಸುತ್ತ ಶ್ರೀ ಗುರುಗಳ ಸಾಕ್ಷಾತ್ ಶಿಷ್ಯರಾಗಿದ್ದ ರಘುನಾಥಾಚಾರ್ಯರು ವರ್ಣಿಸಿದ ಅನೇಕ ವೈಖರಿಗಳನು ಉಲ್ಲೇಖಿಸಿದ್ದಾರೆ ಶ್ರೀವಾದಿರಾಜ ಗುರುಗಳ ಮಾತು ವಿನೋದಪೂರ್ಣವ ದುದು ಒಳ್ಳೆಯ ಹಾಸ್ಯಭರಿತವ ದುದು ಮೃದುಸ್ವರದಿಂದ ಕೂಡಿದುದು ಅವರ ಮಾತು ರಹಸ್ಯಾರ್ಥಗರ್ಭಿತ ಮತ್ತು ಸಪ್ರಮಾಣವಾಗಿರುತ್ತಿತ್ತು ಸಂಪ್ರದಾಯಶಾನುಸಾರಿಯಾಗಿ ತತ್ವ ನಿರ್ಣಯವನ್ನು ಉಂಟುಮಾಡಿ ಕೊಡುತ್ತಿತ್ತು ಅವರ ಮಾತಿನಲ್ಲಿ ಕೇಳುವವರಿಗೆ ಸಂಶಯವೇ ಉಂಟಾಗುತ್ತಿರಲಿಲ್ಲ ಅವರೂ ಸಂಶಯಾಸ್ಪದವಾಗದಂತೆಯೇ ಮಾತಾಡುತ್ತಿದ್ದರು ಪಂಡಿತ ಶ್ರೇಷ ರೂ ಅವರ ಮಾತನ್ನು ಖಂಡಿಸಲ ರರು ಪಂಡಿತರ ಪ್ರಶ್ನೆಗಳೆಲ್ಲವೂ ಗಾಳಿಯೆದುರು ಸಿಕ್ಕಿದ ಹುಲ್ಲುಕಡ್ಡಿಯಂತೆ ಆಗುತ್ತಿದ್ದವು ಅವರು ಮಾತಾಡುವಾಗ ಅವರ ಬಾಯಿ ಕಣ್ಣು ಸ ಂದರವಾಗಿ ಕಾಣಿಸುತ್ತಿತ್ತು ಅವರು ನಿಧಾನವಾಗಿ ತಲೆಯನ್ನು ಅಲಾ ಡಿಸುತ್ತಾ ಮಾತಾಡಿ ಸಭಾ ಜನರನ್ನು ಸಂತೋಷದಲ್ಲಿ ಮಗ್ನರನ್ನಾಗಿ ಮಾಡುತ್ತಿದ್ದರು ಕೇಳುವವರ ಕಿವಿಗಳೂ ಕಣ್ಣುಗಳೂ ವ ಖವೂ ಅರಳುತ್ತಿತ್ತು ಕೇಳುವವರಿಗೆ ರೋಮಾಂಚನವಾಗುತ್ತಿತ್ತು ಅವರು ಕಿವಿ ವ ನಸ್ಸುಗಳೆರಡನ್ನೂ ವ ದಿರಾಜರ ವಾಣಿಗೆ ಧ ರೆಯೆರೆದುಬಿಡುತ್ತಿದ್ದರು ಸು ಭವಾದ ಅರ್ಥ ಹೃದಯ ಂಗಮವಾದ ಅರ್ಥ, ಪುರ ಷಾರ್ಥ ಪ್ರದವಾದ ಅರ್ಥ ಇವೆಲ್ಲವೂ ಅಲ್ಲಿ ಸನ್ನಿಹಿತವಾಗಿರುತ್ತಿದ್ದವು

ವಾಣಿ ಪತಿಗೋಸ್ವಾಮಿ ಯಾದ ಹಯಗ್ರೀವನ ಕಾರುಣ್ಯ ಹೊರಬಂದ ಕೋಮಲ ನಿರ್ದೋಷ ರ ಪರಿಪೂರ್ಣ ಹಾಗೂ ಸ್ಪಷ್ಟವಾದ ಶ್ರೀವ ದಿರಾಜರ ವಾಣಿಯು ವೀಣೆಯ ಸ್ವರದಂತೆ ಎಲ್ಲರನ್ನೂ ಆನಂದಗೊಳಿಸುತ್ತಿತ್ತು

ಶ್ರೀವ ದಿರಾಜ ಗುರುಗಳು ಸ ಸ್ಕೃತದಲ್ಲಿಯೂ ಕನ್ನಡದಲ್ಲಿಯೂ ಅನೇಕ ಗ್ರಂಥಗಳನ್ನು ರಚಿಸಿ ಜ್ಞಾನದಾನ ಮಾಡಿರುವರು. ವೇದ ಉಪನಿಷತ್ತುಗಳು ಮಹಾಭಾರತ ಭಗವದ್ಗೀತೆ ಸ ದಾ ತತ್ತ್ವಪ್ರಕಾಶಿಕಾ ಪ್ರಕರಣ ಗ್ರಂಥಗಳು ಇವುಗಳನ್ನೆಲ್ಲ ವಿವರಿಸುವ ಉದ್ಗ್ರಂಥಗಳನ್ನು ಸಂಸ್ಕೃತದಲ್ಲಿ ರಚಿಸಿದ್ದಾರೆ. ಸಂಸ್ಕೃತದಲ್ಲಿ ಏಳು ಶಾಸ್ತ್ರ ಗ್ರಂಥಗಳನ್ನು ಆರು ಟೀಕೆ ಟಿಪ್ಪಣಿ ಳು ನಾಲ್ಕು ಕಾವ್ಯಗ್ರಂಥಗಳನ್ನು ಆರು ಐವರ್ಶಾಗ್ರಂಥಗಳನ್ನು ನ್ವಾರು ಐವತ್ತಕ್ಕೆ ಮೇಲ್ಪಟ್ಟು ಸ್ತುತಿಸ್ತೋತ್ರಗಳನ್ನು ರಚಿಸಿದ್ದಾರೆ. ಇವುಗಳಲ್ಲಿ ರುಕ್ಮಿಣೀಶವಿಜಯವು ರಸವಾದ ಕಾವ್ಯವಾಗಿದೆ. ಶ್ರೀಯತ್ಯಾವಳಿಕೆಯು ಇವರ ವೀರ ಕೃತಿಯಾಗಿದೆ. ಏಳು ಸಾವಿರಕ್ಕೆ ಮಿಕ್ಕಿದ ಶ್ಲೋಕಗಳುಳ್ಳ ಈ ಗ್ರಂಥವು ಜಟಿಲ ವೇದಾಂತ ಪ್ರಮೇಯಗಳನ್ನು ಸುಲಭ ಯುಕ್ತಿಗಳಿಂದ ಸ ವಿಸ್ತಾರವಾಗೂ ತಿಳಿಸುವಂತ ಬೋಧಿಸುತ್ತದೆ. ಅತ್ಯಂತ ಲಲಿತವಾದ ಪದಗಳಿಂದಲೂ ಪ್ರಾಸಾನುಪ್ರಾಸಗಳಿಂದಲೂ ಸಂತೋಷ ನೀಡುವ ಕೃತಿ ಅಷ್ಟದ ಟಿಯು ದಶಾವತಾರ ಸ್ತುತಿ ವಹಾಬ ರತ ತಾತ್ಪರ್ಯ ನಿರ್ಣಯ ಶ್ರೀ ಸ ಧಾ ಟಿಪ್ಪಣಿ ಸರಸ ರ ವಿ ಸ ತಿ ದರ್ಪಪ್ರಬಂಧ ನ್ಯಾಯ ರತ್ನಾವಳಿ ಪ್ರಮೇಯ ದೀಪಿಕಾ ಹರಿಭಕ್ತಿ ಲತಾ ವ ಂ ಐದ ಕೃತಿಗಳು ಇವರ ಸಾಹಿತ್ಯಶಕ್ತಿಗೆ ವೇದಾಂತ ಪ್ರಬುದ್ಧಿಗೆ ದೃಷ್ಟಾಂತಗಳಾಗಿವೆ. ಲಕ್ಷ್ಮೀಶ ಸ್ತುತಿ ಹಯಗ್ರೀವ ಸ್ತುತಿ ಕೃಷ್ಣಾಷ್ಟಕ ರವೀಶ ಸ್ತುತಿ ತ್ರಿವಿಕ್ರಮ ಸ್ತೋತ್ರ ಮಧ್ವಾಷ್ಟಕ ಹಿತೋಪದೇಶಗಳಲ್ಲಿ ಇವರ ಸರಸ ಮತ್ತು ಸಲಿತ ಕಾವ್ಯ ಶಕ್ತಿಯನ್ನೂ ದೈವಭಕ್ತಿಯನ್ನೂ ಕಾಣಬಹುದು. ಕನ್ನಡದಲ್ಲಿಯೂ ವೈಕುಂಠ ವರ್ಣನೆ ಗುಂಡಕ್ರಿಯೆ ಸುಳಾದಿಗಳು ಕೀರ್ತನೆಗಳು ಸ್ವಪ್ನಗದ್ಯ ಧ್ರುವ ರಗೀತೆ ವಂತ ದ ಕೃತಿಗಳನ್ನು ರಚಿಸಿದ್ದಾರೆ. ತಮ್ಮ ಉನ್ನಯ ಕೂಡ ದಶಾವತಾರದ ಪಾದ್ಯವನ್ನು ರಚಿಸಿ ಸಮಾಜದ ಕೆಳ ಹಿಂದುಳಿದ ದಲಿತರಿಗೂ ದೈವಭಕ್ತಿ ಎಚ್ಚರಿಸಗಳನ್ನು ತಲುಪಿಸಿದ್ದಾರೆ. ಪ್ರೊ. ಉಡುಪಿ ವೆಂಕಟಕೃಷ್ಣರಾಯರು ಸಂಸ್ಕೃತ ಕನ್ನಡ ಸಾಹಿತ್ಯಕ್ಕೆ ಶ್ರೀ ವಾದಿರಾಜರ ದೇಣಿಗೆ ಎಂಬ ಲೇಖನದಲ್ಲಿ ಶ್ರೀಗಳ ಸಾಹಿತ್ಯ ಸೇವೆಯನ್ನು ಪ್ರಸ್ತಾಪಿಸುತ್ತ ಹೀಗೆ ಬರೆದಿದ್ದಾರೆ. ವಚನ ಕೀರ್ತನೆ ತ್ರಿಪದಿ ಷಟ್ಪದಿ ಸಾಂಗತ್ಯಗಳಲ್ಲಿ ಜನ ಸಾಮಾನ್ಯರ ಸಾಹಿತ್ಯವನ್ನು ರಚಿಸಿದ ಕೀರ್ತಿ ಸಲ್ಲುತ್ತದೆ. ತಾತ್ವಿಕ ಗ್ರಂಥಗಳಲ್ಲಿ ಸಂಸ್ಕೃತದಷ್ಟೇ ಪ್ರೌಢ ಗ್ರಂಥಗಳನ್ನು ಕನ್ನಡದಲ್ಲಿಯೂ ರಚಿಸಿ ಜಗತ್ತಿನ ಭಂಡಾರಕ್ಕೆ ಉಜ್ವಲವಾದ ಕಾಣಿಕೆಗಳನ್ನು ನೀಡಿದ ಕೀರ್ತಿ ಮಾಧ್ವರಿಗೂ ಧಾರಾಳವಾಗಿ ಸಲ್ಲುತ್ತದೆ. ಇಂಥ ಮಾಧ್ವರಲ್ಲಿ ಕೆಲವರು ಸಂಸ್ಕೃತಕ್ಕೆ ಮಾತ್ರ ಸೇವೆಯನ್ನು ಸಲ್ಲಿಸಿದ್ದಾರು. ಅವರಲ್ಲಿ ತರ್ಕಶಾಸ್ತ್ರ ಮತ್ತು ಮಧ್ವಶಾಸ್ತ್ರವನ್ನು ಪ್ರತಿಪಾದಿಸುವ ಉದ್ದಾಮ ಗ್ರಂಥ ಬರೆದು ವ್ಯಾಸಕೂಟವನ್ನು ಸ್ಥಾಪಿಸಿದವರು ಶ್ರೀ ವ್ಯಾಸರಾಯರು. ಶ್ರೀ ವಾದಿರಾಜರು ಲೌಕಿಕರಲ್ಲಿಯೂ ವೈದಿಕರಲ್ಲಿಯೂ ಸಮರ್ಥರೆನಿಸಿ ಸಂಸ್ಕೃತದಲ್ಲಿಯೂ ಕನ್ನಡದಲ್ಲಿಯೂ ಅಮೋಘ ಗ್ರಂಥಗಳನ್ನು ರಚಿಸಿದ್ದಾರೆ. ಕೇವಲ ಗ್ರಂಥ

ರಚನೆಯಿಂದಷ್ಟರಿಂದಲೆ ತೃಪ್ತರಾಗದೆ ಶ್ರೀಗುರುಗಳು ದೈವಭಕ್ತಿಯನ್ನು ಸಮಾಜದ ಅನೇಕ ಕೆಳವರ್ಗದ ಜನರಲ್ಲಿಯೂ ಉಂಟುಮಾಡಿದ್ದಾರೆ ಕೇರಳ ಪ್ರಾಂತದ ದೇವ ಸ್ಥಾನಗಳಲ್ಲಿ ಪೂಜಿಸುವ ಪೊ ತ್ತಿಗಳನೇಕರು ಇವರ ಶಿಷ್ಯವರ್ಗಕ್ಕೆ ಸೇರಿದವರು ಅಂದಿನ ದಿನಗಳಲ್ಲಿ ಗುರುಗಳನ್ನೂ ಮಠವನ್ನೂ ಪಡೆದಿರುವುದು ಸಾಮಾಜಿಕ ಪ್ರತಿಷ್ಠೆಯ ಮಹತ್ವದ ಅಂಗವಾಗಿತ್ತು ಅಂತೆಯೆ ತಮ ಗೆ ಶ್ರೀಹಯಗ್ರೀವನ ಮೂರ್ತಿಯನ್ನು ಸಮರ್ಪಿಸಿ ತನ್ನನ್ನು ಉದ್ಧರಿಸಬೇಕೆಂದು ಅಕ್ಕಸಾಲಿಗನು ಕೇಳಿದಾಗ ಶ್ರೀ ಗುರುಗಳು ಸೊನಗಾರರೆಲ್ಲರನ್ನೂ ಶ್ರೀಮಠದ ಶಿಷ್ಯರೆಂದು ಸ್ವೀಕರಿಸಿ ಅವರಿಗೆ ಪರಮಾನುಗ್ರಹ ಮಾಡಿದರು ದಕ್ಷಿಣ ಕನ ಡದ ಉದ್ಯಾವರದ ದಕ್ಷಿಣ ಭಾಗದಲ್ಲಿ ಇದ್ದ ಮಟ್ಟಿಗ್ರಾಮ ದಲ್ಲಿ ಸ್ವಕರ್ಮ ಭ್ರಷ್ಟರೂ ಪತಿತರೂ ಆದವರಿಗೆ ಗುಳ್ಳದ ಬೀಜ ಗಳನ್ನು ಕೊಟ್ಟು ಅವನ್ನು ಅಲ್ಲಿಯ ಪ್ರದೇಶದಲ್ಲಿ ಬೆಳೆಸಲು ಹೇಳಿದರು ಆ ಗುಳ್ಳದ ಕಾಯಿಗಳನ್ನು ಹಯಗ್ರೀವನಿಗೆ ಸಮರ್ಪಿಸಿ ವಿಷವನ್ನು ಪರಿಹರಿಸಿದರು ಮೊಗೇರ ರಾಗಿದ್ದ ಮಟ್ಟು ಗ್ರಾಮದವರನ್ನು ಬ್ರಾಹ್ಮಣರೆಂದು ಸ್ವೀಕರಿಸಿ ತಮ್ಮ ಔದಾರ್ಯ ವನ್ನೂ ಸಾಮಾಜಿಕ ಸಾಹಸವನ್ನೂ ತೋರಿಸಿದರು ಶ್ರೀ ವಾದಿರಾಜ ಗುರುಗಳ ಸಾಮಾಜಿಕ ದೃಷ್ಟಿ ಮತ್ತು ಸಂಘಟನಾ ಸಾಮರ್ಥ್ಯಗಳು ಅವರ ವ್ಯಕ್ತಿತ್ವದ ಘನತೆಗೆ ಇನ್ನಷ್ಟು ಕಳೆಕೊಟ್ಟಿವೆ ಮೊದಮೊದಲು ಶ್ರೀಕೃಷ್ಣ ಮಠದ ಪರ್ಯಾಯ ಪೂಜೆ ಎರಡು ತಿಂಗಳಿದ್ದಿತೆಂದು ಅದನ್ನು ಶ್ರೀ ವಾದಿರಾಜರು ಒಂದೊಂದು ಮಠಕ್ಕೆ ಎರಡೆರಡು ವರ್ಷಗಳವರೆಗೆ ಇರಬೇಕೆಂದು ವಿಧಿಸಿದರೆಂದು ಹೇಳಲಾಗುತ್ತದೆ ಶ್ರೀ ಗುರುಗಳು ದ್ವಂದ್ವಮಠದ ಸಂಪ್ರದಾಯವನ್ನೂ ಸಂಘಟಿಸಿ ಒಬ್ಬರ ಪರ್ಯಾಯ ಕಾಲದಲ್ಲಿ ಉಳಿದ ಏಳು ಮಠಗಳು ಅವರಿಗೆ ನೆರವಾಗಬೇಕೆಂಬ ಏರ್ಪಾಡನ್ನೂ ಅಚ್ಚುಕಟ್ಟಾಗಿ ಮಾಡಿಕೊಟ್ಟರು ಎಲ್ಲ ಮಠದವರಿಗೂ ಪೂಜೆಯ ಅವಕಾಶ ದೊರೆತು ಎಲ್ಲರಲ್ಲೂ ಸಹಕಾರ ಏರ್ಪಡಬೇಕೆಂಬ ದೂರದೃಷ್ಟಿಯನ್ನು ಇಲ್ಲಿ ಗುರುತಿಸ ಬಹುದು ಶ್ರೀವಾದಿರಾಜರ ಇಂಥ ಒಂದು ಪರ್ಯಾಯ ಕಾಲದಲ್ಲ ಶ್ರೀವ್ಯಾಸರಾ ಯರು ದೊರೆ ಅಚ್ಯುತ ರಾಯ ಮತ್ತು ಬಂಗಾಲದ ಶ್ರೀಕೃಷ್ಣ ಚೈತನ್ಯರು ಉಡು ಪಿಗೆ ಬಂದು ಹೋದರು

ಯಾತ್ರಿಕರ ಕೈಪಿಡಿಯಂತಿರುವ ತೀರ್ಥಪ್ರಬಂಧದಲ್ಲಿ ಶ್ರೀವಾದಿರಾಜರ ಕಾವ್ಯ ಶಕ್ತಿಯ ಅಂಶಗಳನ್ನು ಗುರುತಿಸಿ ವಿಶೆ ಷವಾಗಿ ಸಂತೋಷ ಪಡುತ್ತೇವೆ ಅವರ ಕಲ್ಪನಾವಿಲಾಸ ಮತ್ತು ಉಪಮೆ ಉತ್ಪ್ರೇಕ್ಷೆಗಳ ಚಮತ್ಕೃತಿ ಮನೋಹರವಾದುದು ಅವರ ಲಲಿತವಾದ ಪ್ರಾಸ ಅನುಪ್ರಾಸಗಳು ಮಂಜುಳವಾದ ಪದ ಪುಂಜಗಳು ತಮ್ಮನ್ನು ವೀಣೆಯೊಂದಕ್ಕೆ ಹೋಲಿಸಿಕೊಂಡದ್ದನ್ನು ಸಮರ್ಥಿಸುತ್ತವೆ ಅವರ ಕಾವ್ಯವಲ್ಲಿಯು ವೈದಿಕ ಮತ್ತು ಪೌರಾಣಿಕ ಸಂಗತಿಗಳಲ್ಲಿ ನೆಲೆಗೊಂಡಿರುತ್ತದೆ ಇದಕ್ಕೆ ದೃಷ್ಟಾಂತವಾಗಿ ತೀರ್ಥಪ್ರಬಂಧದ ಕೆಲವು ಪದ್ಯಭಾಗಗಳನ್ನು ನೋಡ ಬಹುದು ಶ್ರೀ ಗುರುಗಳು ಇಲ್ಲ ಕಾಶಿಯ ಬಿಂದುಮಾಧವನನ್ನು ವರ್ಣಿಸುತ್ತಿ

ದ್ದಾರೆ ಅಪಾರವಾದಂಥ ಸಂಸಾರ ಸಮುದ್ರವು ಯಾರ ಕೃಪಾ ದೃಷ್ಟಿಯಿಂದ ನಿರಿನ ಒಂದು ಬಿಂದ ವಿನಷ್ಟು ಆಗುವದೋ ಅಂಥ ಬಿಂದು ಮಾಧವನು ನನ್ನನು ಸಂರಕ್ಷಿಸಲಿ ತಮಿಳ ನಾಡಿನ ತಿರುವಟ್ಟಾರಿನಿಂದ 18 ಮೈಲು ದೂರದಲ್ಲಿರುವ ಘೃತ ಮಾಲಾ ನದಿಯನ್ನು ಇಲ್ಲಿ ವರ್ಣಿಸುತ್ತಿದ್ದಾರೆ ಇದರ ದಂಡೆಯಲ್ಲಿ ಶ್ರೀಕೃಷ್ಣನ ಸುಂದರವಾದ ಗುಡಿಯಿದೆ ಜ್ಞಾನವೆಂಬ ಬೆಂಕಿಯನ್ನು ಹೆಚ್ಚಿಸಲು ಯಾವಾಗಲೂ ತೊಡಗಿರುವ ಮತ್ತು ದಟ್ಟವಾದ ಪಾಪಗಳೆಂಬ ಕಾಡನು ಸುಡುವದರಲ್ಲಿ ಸಮರ್ಥ ವಾದ ಈ ಘೃತಮಾಲಾ ನದಿಯು ತನ ಹೆಸರನ್ನು ಸಾರ್ಥಕಗೊಳಿಸಿ ಶೋಭಿಸುತ್ತದೆ ಕಾಂಚಿಯ ಕಾಮಾಕ್ಷಿಯನು ಇನೊಂದು ಪದ್ಯದಲ್ಲಿ ವರ್ಣಿಸಿದ್ದಾರೆ ಹೇ ಕಾಮಾಕ್ಷಿಯೆ ನಿನ ಪಾದಗಳನು ನಾನು ಯಾವಾಗಲೂ ಶರಣು ಹೊಂದುತ್ತೇನೆ ನಿನ ಅಲೌಕಿಕವಾದ ರೂಪ ಲಾವಣ್ಯವೆಂಬ ಸಮುದ್ರವನ್ನು ನೋಡಲು ಶಿವನಿಗೆ ಎರಡು ಕಣ್ಣುಗಳು ಸಾಲದ್ದರಿಂದ ಮುಕ್ಕಣ್ಣನಾದನು ಮುಂದಿನ ಪದ್ಯದಲ್ಲಿ ಕಾಂಚಿಯ ವರದರಾಜನನು ಪ್ರಾರ್ಥಿಸಿಕೊಳ್ಳುತ್ತಾರೆ ಹೇ ಕಾಂಚಿ ಪುರಾಧೀಶ ವರದರಾಜನೆ ನಿನ್ನಲ್ಲಿ ನಾನು ಹಣವೊದಲಾದ ಯಾವ ಐಹಿಕ ಸಂಪತ್ತನ್ನೂ ಬೇಡುವದಿಲ್ಲ ಆದರೆ ಚಿತನಾಚಿತನ ಪ್ರಪಂಚಕ್ಕಿಂತ ಉತ್ತಮವಾಗಿರುವ ನಿನ್ನನ್ನೇ ನೀನು ನನಗೆ ಕೊಟ್ಟುಬಿಡು ಕುಂಭಕೋಣದ ಶಾರ್ಙಪಾಣಿಯನು ಈ ಪದ್ಯದಲ್ಲಿ ಬಣ್ಣಿಸಿದ್ದಾರೆ ಹೆ ಸಮರ್ಥನಾದ ಲಕ್ಷ್ಮೀಪತಿ ಶಾರ್ಙಪಾಣಿಯೇ ಭಕ್ತರಿಗೆ ಗೊತ್ತಾಗದಂತೆ ಶಾರ್ಙವೆಂಬ ಬಿಲ್ಲನ್ನು ಕೆಳಗೆಹಾಕಿ ಕುಂಭದೊಳಗೆ ಪ್ರವೇಶಿಸಿ ನೀನು ಮಲಗಿದ್ದಿ ಆದರೂ ಅಸಾಧಾರಣ ಸೌಂದರ್ಯವುಳ್ಳ ನಿನ್ನನ್ನು ನಾರಾಯಣನೆಂದೇ ಜನರು ಗುರುತಿಸುತ್ತಾರೆ ನಿನ್ನ ಭಕ್ತರ ಕಣ್ಣು ತಪ್ಪಿಸಿ ನೀನು ಎಲ್ಲಿಗೂ ಹೋಗಲಾರೆ ತಿರುಪತಿಯಲ್ಲಿ ಶ್ರೀನಿವಾಸನನು ಕಂಡು ಇಷ್ಟು ಎತ್ತರದಲ್ಲಿ ಏಕೆ ನಿಂತಿದ್ದಾನೆ ? ಎಂಬ ಪ್ರಶ್ನೆಗೆ ಶ್ರೀ ಗುರುಗಳು ಉತ್ತರ ಕೊಡುತ್ತಿದ್ದಾರೆ ದಿಕ್ಕು ದಿಕ್ಕುಗಳಲ್ಲಿರುವ ತನ್ನವರನ್ನು ದಿಟ್ಟಿಸಿ ನೋಡುತ್ತ ದಯಾಪೂರ್ಣವಾಗಿ ಅವರನ್ನು ಪಾಲಿಸಬೇಕೆಂದೇ ವಿಶ್ವತಶ್ಚಕ್ಷು ವಾದ ವೆಂಕಟಪತಿಯು ವೆಂಕಟಾಚಲದಲ್ಲಿ ನಿಂತಿದ್ದಾನೆ ಹಂಪೆಯ ವಿಜಯವಿಠಲನನು ಇನ್ನೊಂದು ಪದ್ಯದಲ್ಲಿ ಬಣ್ಣಿಸಿದ್ದಾರೆ ಇಲ್ಲಿಯ ಕಲ್ಪನೆಯಂತೂ ವಾತ್ಸಲ್ಯರಸದಿಂದ ಕೂಡಿ ತುಂಬಾ ಮನೋಹರವಾಗಿದೆ ಹೇ ವಿಠಲಾ ನೀನು ಬೆಣ್ಣೆ ಹಾಲು ಮೊಸರನ್ನು ಕದ್ದಾಗ ಗೋಕುಲದಲ್ಲಿ ನಿನ್ನ ತಾಯಿ ನಿನ್ನ ಸುಂದರ ಕಾಲುಗಳನ್ನು ಕಟ್ಟಿಹಾಕಿದಳು ಆಗ ನೀನು ಬಂದು ಜ್ಞಾನಿಗಳ ಹೃದಯ ಗುಹೆಯಲ್ಲಿ ಸೇರಿಕೊಂಡೆ ಅಲ್ಲಿಯೂ ಸುಮ್ಮನಿರಲಾರದೆ ಅವರ ಪಾಪಗಳನ್ನೆಲ್ಲ ಕದ್ದುಬಿಟ್ಟೆ ಆಗ ಆ ಜ್ಞಾನಿಗಳು ತಮ್ಮ ನಿರ್ಮಲ ಹೃದಯದಲ್ಲಿ ಭಕ್ತಿ ಪಾಶದಿಂದ ನಿನ್ನನ್ನು ಕಟ್ಟಿದರು ಹೀಗೆ ಬಂಧನಗಳಿಂದ ಬೇಸತ್ತು ವಿಂಧ್ಯದ ದಕ್ಷಿಣಕ್ಕೆ ಬಂದು ನಿಂತಾಗ ಭೀಮಾತೀರದ ಪುಂಡರೀಕನು ನಿನನ್ನು ಗುರುತಿಸಿ ಗೋಪಿಕಾಜಾರ ಎಂದು ಕರೆದನು ಅಲ್ಲಿ ಅವನಿಗೆ ಅಭಿಪ್ರದಾನಮಾಡಿ

ಮತ್ತೆ ಗುರುತುಸಿಗದಂತೆ ವೇಷ ಮರೆಮಾಚಿ ಹೀಗೆ ಬಂದಿರುವಿ ಇಲ್ಲಿ ನಿನ ನ್ನು ಗುರುತಿಸಿದವರು ನಿನ ನ್ನು ಚೋರ ಜಾರ ಎಂದಾಗ ಬಯಸಿದ್ದನ್ನು ಕೊಟ್ಟು ತುಂಗಾ ತೀರದಲ್ಲಿ ನಿಂತಿರುವಿ ನನಗೂ ಒ ಕಾಗಿರುವ ಮೋಕ್ಷವನು ಕೊಡದಿದ್ದರೆ ನಿನ್ನ ಚರಿತ್ರೆ ಯನ್ನೆಲ್ಲ ಹೊರಗೆಡಹುತ್ತೇನೆ ಇನ್ನೊಂದು ಪದ್ಯದಲ್ಲಿ ಪುರಿಯ ಶ್ರೀ ಜಗನ್ನಾಥನನ್ನು ವರ್ಣಿಸುತ್ತಿದ್ದಾರೆ ಸಕಲ ಸಜ್ಜನರಿಂದ ಯಾವಾಗಲೂ ಪೂಜಿತನಾದ ಶ್ರಿ ಜಗನ್ನಾಥನು ಸರ್ವೋತ್ತಮನಾಗಿದ್ದಾನೆ ಜ್ಞಾನವೆಂಬ ಮನೊ ಹರವಾದ ಕೊಡಲಿಗೆ ಈ ಜಗನಾ ಥನು ಕಾವು ಆಗಿರುವನು ಎಂದು ವೇದಗಳ ಗಾನಮಾಡಿವೆ ಇನ್ನೊಂದು ಪದ್ಯದಲ್ಲಿ ಅಯೋಧ್ಯೆಯನ್ನು ಬಣ್ಣಿಸುತ್ತಿದ್ದಾರೆ ಅಯೋಧ್ಯಾನಗರಿಯ ೨ ಪತಿವ್ರತೆ ಯಾದ ಹೆಂಗಸಿನಂತೆ ಶೋಭಿಸುತ್ತದೆ ಅಯೋಧ್ಯಾಪತಿ ಶ್ರೀರಾಮನು ಕಾಡಿಗೆ ಹೋದರೂ ಅವನ ಪಾದುಕೆಗಳನ್ನೇ ತನ ಪತಿಯನ್ನೂ ರಕ್ಷಕನನ್ನೂ ಮಾಡಿಕೊಂಡು ಶೋಭಿಸುತ್ತದೆ ಇಲ್ಲಿ ಗದಾಧರನ ವರ್ಣನೆಯು ಎಷ್ಟು ಮನೊ ಹರವಾಗಿದೆ ಎಂಬು ದನ್ನು ಗಮನಿಸಬಹ ದು

> ಗದಾಧರ| ಸುಧಾಧರ ಸ್ಫುರಿತಚಾರು ಹಾಸೋಲ್ಲಸತ್
> ಸುಧಾಧರ ಮುದ ಧರಾಮರ ಕೃತ ಸ್ತುತೇ ಸುಂದರ।
> ಪದಾಧರ ಮದಾಧರ ಸ್ಖಲಿತ ಮೀಶ ಮಾಂ ಸದ್ವರ
> ಪ್ರದಾಧರ ಚಿದಾಧರ ಪ್ರಮುದಿತಾಂತರ ಶ್ರೀಧರ॥

ಸದಾ ತುಟಿಯಲ್ಲಿ ಸ್ಫುರಿಸುವ ಸುಂದರ ಮಂದಹಾಸವೆಂಬ ಅಮೃತವನ್ನು ಧರಿಸಿರುವ ಸಂತೋಷಪೂರ್ಣನಾಗಿರ ವ ದೇವತೆಗಳಿಂದ ಸ್ತುತಿಸಲ್ಪಟ್ಟ ಮನೋಹರನಾದ ಸಜ್ಜನರಿಗೆ ಇಷ್ಟಾರ್ಥ ಪೂರ್ಣನಾಗಿರುವ ದೇವತೆಗಳಿಂದ ಸ್ತುತಿಸಲ್ಪಟ್ಟ ವ ನೋಹರನಾದ ಸಜ್ಜನರಿಗೆ ಇಷ್ಟಾರ್ಥ ನಿ ಡುವ ನಾನು ಸೇವಕ ನೆಂಬ ಜ್ಞಾನವುಳ್ಳ ಭಕ್ತ ಜನರ ಭಕ್ತಿಯಿಂದ ಸಂತುಷ್ಟವಾದ ಹೃದಯ ವುಳ್ಳ ಲಕ್ಷ್ಮೀಪತಿಯಾದ ಸ್ವಾಮಿ ಯಾದ ಹೇ ಗದಾಧರನೆ ವಿದ್ಯಾದಿಮದದಿಂದ ದುಃಸ್ಥಿತಿ ಹೊಂದಿರುವ ಮತ್ತು ಕೆಳಕೆಳಕ್ಕೆ ಬಿದ್ದು ಹೋಗುತ್ತಿರುವ ನನ್ನನ್ನು ಎತ್ತಿ ಹಿಡಿದು ನಿನ್ನ ಪಾದಗಳಲ್ಲಿ ಆಶ್ರಯವಿತ್ತು ಸಲಹು ಈ ಪದ್ಯದಲ್ಲಿಯ ಲಲಿತ ಪ್ರಾಸವೂ ಭಕ್ತಿ ಮಾಧುರ್ಯವೂ ಗಮನಾರ್ಹವಾಗಿವೆ ಇನ್ನೊಂದು ಕಡೆ ಫಲ್ಗುನದಿಯನ್ನು ಸ್ತುತಿ ಸುತ್ತಿದ್ದಾರೆ ಈ ಫಲ್ಗುನದಿಯು ನೂರಾರು ಜನ್ಮಗಳ ಪಾಪವನ್ನು ಪರಿಹರಿಸುತ್ತಿ ದ್ದರೂ ಬಹುದೂರದಿಂದ ಬಳಿ ಬಂದವರಿಗೆ ತಾನು ಕೊಟ್ಟಿರುವ ಫಲವು ಅಲ್ಪವಾದುದು ಎಂದು ತಿಳಿಯುತ್ತದೆ ಅಂಥ ಫಲ್ಗುನದಿಯು ನನಗೆ ವಿನಯಾದಿ ಸದ್ಗುಣಗಳನ್ನು ಕರುಣಿಸಲಿ ಕೊಲ್ಹಾಪುರದ ಶ್ರೀ ಮಹಾಲಕ್ಷ್ಮಿಯನು ವರ್ಣಿಸುವಲ್ಲಿಯೂ ಶ್ರೀಗ ರು ಗಳು ಅಪೂರ್ವ ಕೌಶಲವನ್ನು ತೋರಿದ್ದಾರೆ ಚಿತ್ ಪ್ರಕೃತಿ ವ ತ್ತು ಜಡ ಪ್ರಕೃತಿಗೆ ಅಭಿಮಾನಿಯಾದ ಶ್ರೀ ರಮಾದೇವಿಯನು ಪಂಚ ಗಂಗಾ ತೀರ್ಥದ ಸುತ್ತಲಿನ ಸಮೃದ್ಧ ಕಮಲಪುಷ್ಪಗಳ ಪ್ರಕೃತಿ ಸೌಂದರ್ಯದ ಹಿನ್ನೆಲೆಯಲ್ಲಿ ವರ್ಣಿಸಿದ್ದಾರೆ

ಅಮಾನ ವನಜ ಸ್ನಾನ ಸರಸೀಕುಲ ಸಂಕುಲೇ!
ರಮಾ ಕೊಲ್ಲಾಪುರ ಕ್ಷೇತ್ರೇ ವಸತೀತಿ ಕಿಮದ್ಭುತಮ್‌॥

"ಅಸಂಖ್ಯಾತವಾದ ತಾವರೆಯ ಹೂವುಗಳಿಗೆ ಆಶ್ರಯವಾದ ಅನೇಕ ಕೊಳಗಳು ಈ ಕೊಲ್ಲಾಪುರದ ಕ್ಷೇತ್ರದಲ್ಲಿವೆ. ಇಂಥ ಸ್ಥಳದಲ್ಲಿ ಪದ್ಮಾಲಯಾ ಎಂದು ಹೆಸರು ಹೆಸರು ಪಡೆದ ಶ್ರೀರಮಾದೇವಿಯು ಎಂದೆಂದಿಗೂ ವಾಸಿಸುತ್ತಾಳೆ, ಎಂಬ ವಿಷಯವು ಏನು ಆಶ್ಚರ್ಯಕರ". ಇಂಥದೇ ಕೌಶಲವನ್ನು ಧರ್ಮಗಂಗೆಯನ್ನು ವರ್ಣಿಸುವಲ್ಲಿಯೂ ತೋರಿದ್ದಾರೆ. 'ಗಂಗಾ ಸಾನ್ನಿಧ್ಯವುಳ್ಳದ್ದರಿಂದ ಧರ್ಮಗಂಗಾ ಎಂಬ ಹೆಸರಿಗೆ ಪಾಪರಾಶಿ ನಾಶಗೊಳಿಸುವ ಎತ್ತರವಾದ ಅಲೆಗಳಿಂದ ಕೂಡಿದ ಧರ್ಮಾನದಿಯೇ, ನಿನ್ನ ಹೆಸರಿಗೆ ತಕ್ಕಂತೆ ಧರ್ಮಸಂಪಾದಿಸುವದರಲ್ಲಿಯೇ ನನ್ನ ಮನಸ್ಸು ಪ್ರವರ್ತಿಸುವಂತೆ ಮಾಡು.' ಕ್ರೋಡ ಶಂಕರ ನಾರಾಯಣನನ್ನು ವರ್ಣಿಸುವಾಗಲಂತೂ ಶ್ರೀವಾದಿರಾಜರು ವೇದಮಂತ್ರವೊಂದರ ಹಿನ್ನೆಲೆ ಇಟ್ಟುಕೊಂಡು ಅದಕ್ಕೊಂದು ಅಲೌಕಿಕವಾದ ಮೆರುಗನ್ನು ಕೊಟ್ಟಿದ್ದಾರೆ. 'ದ್ವಾಸುಪರ್ಣಾ ಸಯುಜಾ ಸಖಾಯಾ'—ಅಥರ್ವಣ. 'ಜೀವಪರಮಾತ್ಮರೆಂಬ ನಿತ್ಯ ಅವ್ಯಾಜ ಸಖರಾದ ಎರಡು ಪಕ್ಷಿಗಳು ದೇಹವೆಂಬ ವೃಕ್ಷವನ್ನು ಆಶ್ರಯಿಸಿವೆ. ಅವುಗಳಲ್ಲಿ ಒಂದು ಪಕ್ಷಿ ವೃಕ್ಷದ ಹಣ್ಣುಗಳನ್ನು ತಿನ್ನುತ್ತದೆ ಆದರೇನು, ಗೆಲುವಿಲ್ಲ. ಇನ್ನೊಂದು ಪಕ್ಷಿ ತಿನ್ನದೆ ಸುಮ್ಮನೆ ಕುಳಿತಿದೆ ಆದರೂ ಲವಲವಿಕೆಯಿಂದ ಇದೆ. ಇದರ ಹಿನ್ನೆಲೆಯಲ್ಲಿ ಶ್ರೀಗುರುಗಳು ಕ್ರೋಡ ಶಂಕರನಾರಾಯಣನನ್ನು ಸ್ತುತಿಸಿದ್ದಾರೆ. 'ಕ್ರೋಡನೆಂಬ ಋಷಿಶ್ರೇಷ್ಠನ ಕ್ಷೇತ್ರವು ಶುಕ್ತಿಮತಿಯೆಂಬ ನದೀತೀರದಲ್ಲಿ ಶೋಭಿಸುತ್ತಿದೆ. ಇಲ್ಲಿ ಸಜ್ಜನರಿಗೆ ಸಮ್ಮತವಾದಂಥ ರುದ್ರವಿಷ್ಣುಗಳ ಭೇದವು ಸ್ಪಷ್ಟವಾಗಿ ಕಂಡುಬರುತ್ತದೆ. ಕ್ರೋಡದಲ್ಲಿಯ ಶಂಕರ ಮತ್ತು ನಾರಾಯಣರು ನಿಶ್ಚಯವಾಗಿಯೂ ದ್ವಾಸುಪರ್ಣಾ ಎಂಬ ಶ್ರುತಿಯ ಸ್ಪಷ್ಟಾರ್ಥಸ್ವರೂಪರಾಗಿದ್ದಾರೆ. ಏಕೆಂದರೆ ಈ ಇಬ್ಬರು ದೇವತೆಗಳಲ್ಲಿ ಒಬ್ಬ ನಾದಶಂಕರನು ಹೆಚ್ಚು ಹೆಚ್ಚಾಗಿ ನೈವೇದ್ಯವನ್ನು ಸ್ವೀಕರಿಸುತ್ತಾನೆ, ಆದರೆ ಸಣ್ಣಗಿದ್ದಾನೆ ನಾರಾಯಣನು, ಅರ್ಚಕರ ಪಕ್ಷಪಾತದಿಂದಾಗಿ ನೈವೇದ್ಯವಿಲ್ಲದಿದ್ದರೂ ಚೆನ್ನಾಗಿ ಬೆಳೆದಿದ್ದಾನೆ ಶ್ರೀ ವಾದಿರಾಜರು ಈ ಪದ್ಯದಲ್ಲಿ ಮಾಡಿದ ಹಾಸ್ಯ ಮನೋಹರವಾಗಿದೆ.

ಕಾವ್ಯದಲ್ಲಿ ತೋರಿದ ಕೌಶಲವನ್ನೇ ಶ್ರೀಗುರುಗಳು ತಮ್ಮ ಟೀಕೆಟಿಪ್ಪಣಿಗಳಲ್ಲಿಯೂ ತೋರಿದ್ದಾರೆ. ಶ್ರೀಮಹಾಭಾರತ ತಾತ್ಪರ್ಯ ನಿರ್ಣಯಕ್ಕೆ ಶ್ರೀಗುರುಗಳು ಬರೆದ ವ್ಯಾಖ್ಯಾನದಲ್ಲಿಯೂ ಇಂಥ ಅನೇಕ ಸಂದರ್ಭಗಳನ್ನು ಗುರುತಿಸಬಹುದು. ವಿದುರನ ಘನತೆಯನ್ನು ಎತ್ತಿತೋರಿಸುವ ಒಂದು ಪ್ರಸಂಗ ಇದಕ್ಕೊಂದು ದೃಷ್ಟಾಂತ. ತುಂಬಿದ ಸಭೆಯಲ್ಲಿ ದುಶ್ಶಾಸನನು ನಡೆಸಿದ ಅಕೃತ್ಯದಿಂದ ನೊಂದು ದ್ರೌಪದಿಯು 'ಇದು ಧರ್ಮವೇ ?' ಎಂದು ಭೀಷ್ಮಾದಿಗಳನ್ನು ಕೇಳಿದಾಗ, ಕಲಿಯ ಆವೇಶದಿಂದ ಮೋಹಿತರಾಗಿ ಅವರೆಲ್ಲ 'ಧರ್ಮರಾಜನನ್ನು ಕೇಳು'' ಎಂದು ನುಡಿದು

ಸುಮ್ಮನಾದರು ಆಗ ವಿದುರನೊಬ್ಬನೇ ಇದು ಧರ್ಮವಲ್ಲ ಎಂದು ಸ್ಪಷ್ಟ ಹೇಳಿ ಕೌರವರನು ಖಂಡಿಸಿದನು ವಿದುರನು ಯಮಾಂಶನಾದುದರಿಂದ ಅವನಲ್ಲೂ ಕಲ್ಯಾವೇಶ ಇರಬಹುದಲ್ಲ ಎಂಬ ಸಂದೇಹವನೆತ್ತಿಕೊಂಡು ಶ್ರೀಗುರುಗಳು ಉತ್ತರಿಸುತ್ತಾರೆ ವಿದುರನು ಭೀಮಸೇನನ ಪಕ್ಷಪಾತಿಯು ಮತ್ತು ವಾಯುನಂದನನ ಅನುಗ್ರಹ ಪಾತ್ರನು ವಾಯುಸ್ತುತಿಯ ದೃಹ್ಯಂತೀವ್ ಎಂಬ ಶ್ಲೋಕ ಉದಾಹರಿಸಿ ಭೀಮಸೇನನ ಕೃಪೆಯಿದ್ದಲ್ಲಿ ಕಲಿ ಬರಲಾರನು ಎಂದು ವಿವರಿಸಿದ್ದಾರೆ ಇನ್ನೊಂದು ಪ್ರಸಂಗ ಕಾಲಯವನನ ಸಂಹಾರ ದ್ವಾರಕೆಯನ್ನು ನಿರ್ಮಿಸಿ ಶ್ರೀಕೃಷ್ಣ ತಾನೊಬ್ಬನೇ ಕಾಲಯವನನ್ನು ಎದುರಿಸಲು ಹೊರಟನು ಆಗ ಒಂದು ಗಡಿಗೆಯಲ್ಲಿ ಕೃಷ್ಣ ಸರ್ಪವನ್ನಿಟ್ಟು ಕಾಲಯವನನಿಗೆ ಕಳುಹಿಸಿಕೊಟ್ಟನು ಕಾಲಯವನನು ಅದರಲ್ಲಿ ಅಸಂಖ್ಯ ಇರುವೆಗಳನ್ನು ತುಂಬಿ ಮೃತವಾದ ಸರ್ಪವನ್ನು ಕೃಷ್ಣನಿಗೆ ಹಿಂತಿರುಗಿಸಿದನು ಸಂಖ್ಯಾ ಬಲದಿಂದ ಕೃಷ್ಣನನು ಜಯಿಸಬಲ್ಲೆ ಎಂಬುದು ಕಾಲಯವನನ ಅರ್ಥವಾಗಿತ್ತು ಹಿಂದೊಮ್ಮೆ ಗರ್ಗಾಚಾರ್ಯರು ಅಸುರಾವೇಶದಿಂದ ಕೃಷ್ಣನನ್ನು ನಾಶಮಾಡುವ ಮಗ ಬೇಕೆಂದು ಶಿವನಿಂದ ವರಪಡೆದಿದ್ದರು ಆ ಮಗನೇ ಕಾಲಯವನ ಕೃಷ್ಣನನು ನಾಶಮಾಡುವ ಸಾಮರ್ಥ್ಯ ರುದ್ರನ ವರಕ್ಕೆ ಸಾಧ್ಯವಿಲ್ಲ ಆದ್ದರಿಂದ ಕೃಷ್ಣ ಸರ್ಪಕ್ಕೂ ಕೃಷ್ಣ ಎಂಬ ಹೆಸರಿದ್ದ ಕಾರಣ ಅದರ ನಾಶ ಮಾತ್ರ ಸಾಧ್ಯವಾಯಿತು ಸರ್ವಜ್ಞನಾದ ಶ್ರೀಕೃಷ್ಣನು ತೋರಿದ ಈ ನೀತಿಯು ಲೋಕೋತ್ತರವಾದದ್ದು ಕೊನೆಗೂ ತನ್ನ ಭಕ್ತ ಮುಚುಕುಂದನ ಕಣ್ಣಿನ ಬೆಂಕಿಯಿಂದ ಕಾಲಯವನನ್ನು ಭಸ್ಮಗೊಳಿಸಿದನು ಎಂಬುದನ್ನು ಶ್ರೀವಾದಿರಾಜರು ತಮ್ಮ ವ್ಯಾಖ್ಯಾನದಲ್ಲಿ ಸರಸವಾಗಿ ವರ್ಣಿಸಿದ್ದಾರೆ

ಯುಕ್ತಿಮಲ್ಲಿಕೆಯಲ್ಲಿ ಶ್ರೀವಾದಿರಾಜರು ಯಾರಿಂದಲೂ ಹೇಳಲ್ಪಡದ ಯಾರಿಂದಲೂ ಆಕ್ಷೇಪಣೆ ಇರಲಾರದ ಎಲ್ಲರಿಂದಲೂ ಸುಲಭವಾಗಿ ಅಂಗೀಕರಿಸಬಹುದಾದ ಅಸಂಖ್ಯ ಯುಕ್ತಿಗಳನ್ನು ಬೇರೆ ಬೇರೆ ಪ್ರಮೇಯಗಳ ಸಿದ್ಧಿಗಾಗಿ ಹೇಳಿರುತ್ತಾರೆ ಕೆಲವೊಮ್ಮೆ ಶ್ರುತಿಯ ಮಂತ್ರಗಳನ್ನು ಆಧಾರವಾಗಿಟ್ಟುಕೊಂಡು ಅದಕ್ಕೆ ಸಂವಾದಿಯಾಗಿ ಅವರು ವಿವರಿಸಿದ ಯುಕ್ತಿಗಳು ಮನೋಹರವಾಗಿರುತ್ತವೆ ಅವುಗಳಲ್ಲಿ ಒಂದನೆಯ ಯುಕ್ತಿಯನ್ನು ಇಲ್ಲಿ ಪರಿಶೀಲಿಸಬಹುದು ಸೃಷ್ಟಿ ಎಂದರೆ ಹುಟ್ಟುವಿಕೆ ಸ್ಥಿತಿ ಎಂದರೆ ಇರುವಿಕೆ ಸಂಹಾರ ಎಂದರೆ ನಾಶಗೊಳ್ಳುವಿಕೆ ಇವು ಮೂರು ವ್ಯಾಪಾರಗಳು ಪ್ರಸಿದ್ಧವಾಗಿವೆ ಸೃಷ್ಟಿ ಹೊಂದುವ ವಸ್ತುಗಳಿಗೆ ಉದಾ—ಗಡಿಗೆ ವಸ್ತ್ರ — ಸೃಷ್ಟಿ ಉಂಟೇ ಹೊರತು ಸೃಷ್ಟಿ ಯೋಗ್ಯವಲ್ಲದ ವಸ್ತುಗಳಿಗೆ ಉದಾ-ಕಾಲ ಆಕಾಶ ಪ್ರಕೃತಿ-ಇವುಗಳಿಗೆ ಸೃಷ್ಟಿಯಿಲ್ಲ ಸೃಷ್ಟಿಕರ್ತನ ವಶದಲ್ಲಿರುವದು ಆದರೆ ಸೃಷ್ಟಿಯೋಗ್ಯವಲ್ಲದ ವಸ್ತುಗಳು ಅವನ ವಶದಲ್ಲಿ ಇರುವುದು ಸಾಧ್ಯವಿಲ್ಲ ಸೃಷ್ಟಿಕರ್ತ ಬ್ರಹ್ಮದೇವರ ವಶದಲ್ಲಿ ಸೃಷ್ಟಿಯೋಗ್ಯ ವಸ್ತುಗಳು ಮಾತ್ರ ಇರಬಲ್ಲವು ಸೃಷ್ಟಿಯೋಗ್ಯವಲ್ಲದವುಗಳು ಇರಲಾರವು

ಆದ್ದರಿಂದ ಬ್ರಹ್ಮನು ಸರ್ವೋತ್ತಮನಲ್ಲ ಹೀಗೆಯೇ ಸಂಹಾರ ಯೋಗ್ಯವಸ್ತು ಗಳು ರುದ್ರನ ವಶದಲ್ಲಿ ಇರಬಲ್ಲವು ಆದರೆ ಎಂದಿಗೂ ಸಂಹಾರವೇ ಇಲ್ಲದ ಕಾಲ ಆಕಾಶ ಮುಂತಾದವುಗಳು ರುದ್ರನ ವಶದಲ್ಲಿ ಬರಲಾರವು ಹೀಗಾಗಿ ರುದ್ರನ ಸರ್ವೋತ್ತಮನಲ್ಲ ಸೃಷ್ಟಿ ಯೋಗ್ಯ ಹಾಗೂ ಸೃಷ್ಟಿಯೋಗ್ಯವಲ್ಲದ ಸಂಹಾರ ಯೋಗ್ಯ ಹಾಗೂ ಸಂಹಾರಯೋಗ್ಯವಲ್ಲದ ಎಂದು ಪ್ರಪಂಚದ ವಸ್ತುಗಳನ್ನು ವಿಭಾಗಿಸಿದಂತೆ ಸ್ಥಿತಿಯೋಗ್ಯ ಮತ್ತು ಸ್ಥಿತಿಯೋಗ್ಯವಲ್ಲದವೆಂದು ವಿಭಾಗಿಸಲು ಸಾಧ್ಯವೇ ಇಲ್ಲ ವಸ್ತುವೆಂದ ಮೇಲೆ ಸ್ಥಿತಿ ಇರಲೇಬೇಕು ಎಲ್ಲ ಕಾಲದಲ್ಲೂ ವಸ್ತುಗಳು ಇದ್ದೇ ಇವೆ ಅವೆಲ್ಲವೂ ಸ್ಥಿತಿಕರ್ತನ ಅಧೀನವೇ ಇರುತ್ತವೆ ಪ್ರಪಂಚದಲ್ಲಿ ಸ್ಥಿತಿ ಕರ್ತ ವಿಷ್ಣುವಿನ ಅಧೀನದಲ್ಲಿಲ್ಲದಿರುವ ಯಾವ ವಸ್ತುವೂ ಯಾವ ಕಾಲದಲ್ಲೂ ಇರುವುದಿಲ್ಲ ಆದ್ದರಿಂದ ವಿಷ್ಣುವೆ ಸರ್ವೋತ್ತಮನು ಎರಡನೆಯ ಯುಕ್ತಿಯು ಇದಕ್ಕೂ ಸ್ವಾರಸ್ಯವಾಗಿದೆ ಬ್ರಹ್ಮನ ವಶದಲಿಲ್ಲದ ಸಂಹಾರಯೋಗ್ಯವಲ್ಲದ ವಸ್ತುಗಳು ರುದ್ರನ ವಶದಲಿಲ್ಲದ ಸಂಹಾರ ಯೋಗ್ಯವಲ್ಲದ ವಸ್ತುಗಳೂ ಮತ್ತು ಅವರಿಬ್ಬರ ವಶದಲ್ಲಿರುವ ವಸ್ತುಗಳೂ ವಿಷ್ಣುವಿನ ವಶದಲ್ಲಿವೆ ಆದ್ದರಿಂದ ಬ್ರಹ್ಮರುದ್ರಾದಿಗಳಿಗಿಂತ ಶ್ರೀವಿಷ್ಣುವೇ ಶ್ರೇಷ್ಠನು ಮೂರನೆಯ ಯುಕ್ತಿಯು ಇನ್ನೂ ಚಮತ್ಕಾರವಾಗಿದೆ ಇರುವಿಕೆಯೆಂದರೆ ಸ್ಥಿತಿ ಆದ್ದರಿಂದ ಸೃಷ್ಟಿಕರ್ತ ಬ್ರಹ್ಮನಿಗೆ ಸೃಷ್ಟಿಕಾಲದಲ್ಲಿಯೂ ಸಂಹಾರ ಕರ್ತ ರುದ್ರನಿಗೆ ಸಂಹಾರ ಕಾಲದಲ್ಲಿಯೂ ಸ್ಥಿತಿ ಇದ್ದೇ ಇರಬೇಕು ಈ ಸ್ಥಿತಿಯು ವಿಷ್ಣುವಿನ ಅಧೀನವಾದ್ದರಿಂದ ಬ್ರಹ್ಮರುದ್ರಾದಿಗಳು ವಿಷ್ಣುವಿನ ಅಧೀನರೆಂದೇ ಸಿದ್ಧವಾಯಿತು ಅವರ 22ನೆಯ ಯುಕ್ತಿಯೂ ಅಷ್ಟೇ ಮನೋಹರವಾಗಿದೆ ಶಾಶ್ವತಂ ನಾರಾಯಣಂ ಇಲ್ಲಿ ನಾರಾಯಣ ಪದಕ್ಕೆ ಶಾಶ್ವತವೆಂಬುದು ವಿಶೇಷವಾಗಿದೆ ಅಂದರೆ ವೃದ್ಧಿಹ್ರಾಸ ಮುಂತಾದ ದೋಷಗಳಿಲ್ಲದೆ ಯಾವಾಗಲೂ ಒಂದೇ ರೀತಿಯಲ್ಲಿ ಇರುವ ವಸ್ತು ಎಂದು ಅರ್ಥ ಇದು ಪರಬ್ರಹ್ಮನ ಲಕ್ಷಣ ಎಂದು ನ ಕರ್ಮಣಾ ವರ್ಧತೆ ನೋ ಕನೀಯಾನ್ ಇತ್ಯಾದಿ ಶ್ರುತಿಗಳಿಂದ ಸಿದ್ಧವಾಗಿದೆ ಶಾಶ್ವತತ್ವ ನಾರಾಯಣನಲ್ಲಿ ಇದೆಯೆಂದು ನಾರಾಯಣೋಪನಿಷತ್ತಿನಿಂದ ಸಿದ್ಧವಾಗಿದೆ ಯಾರು ಶಾಶ್ವತನೋ ಅವನು ಪರಬ್ರಹ್ಮನು ಯಾರು ಪರಬ್ರಹ್ಮನಲ್ಲವೋ ಅವನು ಶಾಶ್ವತನಲ್ಲ ಎಂಬುದು ಶ್ರುತಿಯಿಂದ ಸಿದ್ಧವಾಯಿತು ಈ ನಿಯಮದಂತೆ ಶಾಶ್ವತನಾದ ನಾರಾಯಣನು ಪರಬ್ರಹ್ಮನೆಂದು ಸಿದ್ಧವಾಯಿತು ಎಂದು ವಿವರಿಸಿದ್ದಾರೆ

ಶ್ರೀವಾದಿರಾಜಗುರುಗಳ ಕಾವ್ಯಶಕ್ತಿಯ ವಿಶಿಷ್ಟ ಸೌಂದರ್ಯವನೂ ಬಂಧ ಮಾಧುರ್ಯವನ್ನೂ ಅವರ ಅಶ್ವಧಾಟಿಯ ದಶಾವತಾರ ಸ್ತುತಿಯಲ್ಲಿ ಕಾಣಬಹುದು ಶ್ರೀ ಹಯಗ್ರೀವನ ಕರುಣೆಯಿಲ್ಲದೆ ಇಂಥ ಕಾವ್ಯ ಸೌಂದರ್ಯ ಪ್ರಕಟವಾಗುವದು ಅಸಾಧ್ಯವೆನ್ನಬೇಕು ಪ್ರಾಸ ಅನುಪ್ರಾಸಗಳು ಭಕ್ತಿ ರಸದಲ್ಲಿ ಮಿಂದ ಗೊಂಡು ಅಲೆ ಅಲೆಯಾಗಿ ಬರುವದನ್ನು ಅದರಲ್ಲಿ ಕಾಣಬಹುದು ಶ್ರೀಗುರುಗಳು ಇಲ್ಲಿ ಶ್ರೀರಮನನ್ನು ವರ್ಣಿಸುತ್ತಿದ್ದಾರೆ

ಶ್ರೀರಾಮ ಲಕ್ಷ್ಮಣ ಶುಕಾರಾಮ ಭೂರವತು ಗೌರಾಮಲಾಮಿತ ಮಹೋ
ಹಾರಾಮರಸ್ತುತ ಯಶೋರಾಮ ಕಾಂತಿಸುತನೋ ರಾಮಲಬ್ಧ ಕಲಹ ॥
ಸ್ವಾರಾಮ ವರ್ಯರಿಪು ವೀರಾಮಯರ್ಥಿಕರ ಚೀರಾಮಲಾವೃತ ಕಟೇ
ಸ್ವಾರಾಮ ದರ್ಶನಜ ಮಾರಾಮಯಾಗತ ಸುಘೋರಾಮನೋರಥ ಹರ ॥

'ಶ್ರೀರಾಮ, ನೀನು ಲಕ್ಷ್ಮಣನೆಂಬ ಗಿಣಿಗೆ ವಿಹಾರದ ಉಪವನದಂತೆ ಇದ್ದೀಯೇ (ಲಕ್ಷ್ಮಣನು ಶ್ರೀರಾಮನ ಸೇವೆಯಲ್ಲಿಯೇ ಅಮಿತಾನಂದವನ್ನು ಅನುಭವಿಸುತ್ತಿದ್ದನು), ನಿರ್ಮಲವಾದ ಬಿಳಿಯ, ಉತ್ತಮಕಾಂತಿಯಿಂದ ಕೂಡಿದ ಮುತ್ತಿನ ಹಾರವನ್ನು ಧರಿಸಿದ್ದೀ, ದೇವತೆಗಳು ನಿನ್ನ ಕೀರ್ತಿಯನ್ನು ನಿರಂತರವೂ ಕೊಂಡಾಡುತ್ತಾರೆ. ನಿನ್ನ ಶರೀರವು ಸುಂದರವಾಗಿದೆ. ಮನೋಹರವಾದ ಕಾಂತಿಯಿಂದ ಕೂಡಿದೆ. ನೀನು ಸೀತಾ ವಿವಾಹವನ್ನು ಮಾಡಿಕೊಂಡು ವಿಧಿಬೆಯಿಂದ ಹಿಂತಿರುಗುವಾಗ ನಿನ ಗಿಂತ ಸರ್ವಥಾ ಅಭಿನ್ನನಾದ ಪರಶುರಾಮನ ಜೊತೆಗೆ ಲೀಲೆಯಿಂದ ಕಲಹವನ್ನು ಮಾಡಿದೆ. ದೇವತೆಗಳ ರಾಜನಾದ ಇಂದ್ರನ ಶತ್ರುಗಳಾದ ದೈತ್ಯರನ್ನು ಸೋಲಿಸಿ ಅವರನ್ನು ಮನೋರೋಗಕ್ಕೆ ಈಡು ಮಾಡಿದೆ. ನಿರ್ಮಲವಾದ ನಾರುಬಟ್ಟೆ ಯನ್ನುಟ್ಟು ನೀನು ಪಂಚವಟಿಯಲ್ಲಿ ವಿಹಾರ ಮಾಡುವಾಗ ನಿನ್ನನ್ನು ನೋಡಿ ಕಾಮ ವಿಕಾರಕ್ಕೆ ಒಳಗಾದ ಶೂರ್ಪನಖಿಯ ಮೂಗು ಕಿವಿಗಳನ್ನು ಕೊಯ್ಸಿಸಿ ಅವಳ ಮನೋಭಿಲಾಷೆಯನ್ನು ನಾಶವಾಡಿದೆ. ಇಂತಹ ಶ್ರೀರಾಮನೇ ನೀನು ನನ್ನನ್ನು ಕಾಪಾಡು'. ಶ್ರೀವಾದಿರಾಜರ ಕಾವ್ಯಸತ್ವದ ಟಂಕಸಾಲೆಯಿಂದ ಹೊರಟ ಶ್ರೀರಾಮ ಟೆಂಕಿಯ ಸೊಬಗು ಒಂದು ವಿಧವಾದರೆ ಅದೇ ನಾಣ್ಯದ ಇನ್ನೊಂದು ಮೈಯಲ್ಲಿ ಶ್ರೀಕೃಷ್ಣನನ್ನು ಹೀಗೆ ಮೂಡಿಸಿದ್ದಾರೆ.

ವೃಂದಾವನಸ್ಥ ಪಶು ವೃಂದಾವನಂ ವಿನುತ ವೃಂದಾರ ಕೈಕಶರಣಂ
ನಂದಾತ್ಮಜಂ ನಿಹತನಿಂದಾಕೃದು ಸುರಜನಂದಾಮಬದ್ಧ ಜಠರಂ ॥
ವಂದಾಮಹೇ ವಯಮ ಮಂದಾರದಾತ ರುಚಿ ಮಂದಾಕ್ಷಕಾರಿ ವದನಂ
ಕುಂದಾಲಿ ದಂತ ಮುತ ಕಂದಾಸಿತ ಪ್ರಥತನುಂದಾವ ರಾಕ್ಷಸ ಹರಂ ॥

ಶ್ರೀಕೃಷ್ಣನು ವೃಂದಾವನದಲ್ಲಿದ್ದ ಹಸುಗಳ ಸಮೂಹವನ್ನು ಕಾಪಾಡು ತ್ತಿದ್ದನು. ತಮ್ಮ ಆಶ್ರಿತರಾದ ದೇವತೆಗಳಿಂದ ಸ್ತೋತ್ರ ಮಾಡಿಸಿಕೊಳ್ಳಲ್ಪಡುವ, ಇಂದ್ರಾದಿ ದೇವತೆಗಳಿಗೂ ಮುಖ್ಯ ಆಶ್ರಯನಾದವನು ಶ್ರೀಕೃಷ್ಣನು. ಅವನು ನಂದಗೋಪನ ಮಗನಾಗಿ ಅವತರಿಸಿದನು. ದೇವ ದ್ವಿಜರನ್ನು ದೂಷಿಸುವ ಅಸುರ ರನ್ನು ಸಂಹಾರ ಮಾಡಿದನು. ಅವನು ಬಾಲ್ಯದಲ್ಲಿ ಮೊಸರಿನ ಗಡಿಗೆಯನ್ನು ಒಡೆದು ಹಾಕಿದನೆಂದು ಅವನ ತಾಯಿಯು ಅವನನ್ನು ಸೊಂಟಕ್ಕೆ ಹಗ್ಗಹಾಕಿ ಒರಳಿಗೆ ಕಟ್ಟಿ ದಳು. ಆಗ ಅವನಿಗೆ ದಾಮೋದರ ಎಂದು ಹೆಸರಾಯಿತು. ಅವನ ಸುಂದರ ವದನವು ಷೋಡಶ ಕಲಾ ಪರಿಪೂರ್ಣನಾದ ಶುಭ್ರನಾದ ಚಂದ್ರನಿಗೂ ನಾಚಿಕೆ

ಯನು ಂಟು ಮಾಡುತ್ತಿತ್ತು. ಕೋಲು ವ ಲಿಗೆಯಂ ಮೊಗ್ಗುಗಳ ಸಾಲಿನಂತೆ ಆವನ ಹಲ್ಲ ಗಳು ಸುಂದರವಾಗಿ ಶೋಭಿಸುತಿ ದ್ದವು ಅವನ ಶರೀರ ಕ ಂತಿಯಂ ನೀರು ತುಂಬಿದ ಮೋಡದಂತೆ ಇತ್ತು. ಇಂತಹ ಶ್ರಿ ಕೃಷ್ಣನು ವೃಂದಾವನದ ಕಾಡಿನಲ್ಲಿ ರಾಕ್ಷಸರನು ಸಂಹಾರಮಾಡಿ ವಿಹರಿಸುತ್ತಿದ್ದನು ಇಂತಹ ಶ್ರೀಕೃಷ್ಣನನು ನಾವು ಪುನಃ ಪುನಃ ವಂದಿಸ ತ್ತೇವೆ। ಶ್ರೀವಾದಿರಾಜರ ಕಾವ್ಯ ಪ್ರೌಢಿಮೆ ಪದಲಾಲಿತ್ಯ ಅರ್ಥಗಾಂಭೀಯ ರ್ಗಳಿಗೆ ಇವೆರಡು ದೃಷ್ಟಾಂತಗಳೆ ಸಾಕು

ಸಂಸ್ಕೃತ ಬಾರದವರಿಗಾಗಿ ಸುಂ ಘನವಾದ ಪ್ರಮೆ ಯಗಳ ತತ್ವವು ತಿಳಿಯು ವಂತೆ ಕನ ಡದಲ್ಲಿಯೂ ಇವರು ಕೃತಿಗಳನು ರಚಿಸಿದ್ದಾರೆ ಇವರ ಕೃತಿಗಳಲ್ಲಿ ಯುಕ್ತಿಗಳ ಪಾಂಡಿತ್ಯ ಮತ್ತು ಶಾಸ್ತ್ರಾರ್ಥಗಳ ಗಾ ಭಿ ರ್ಯ ತ ಂಬ ಸರಳವಾಗಿ ನಿರೂಪಿತವಾಗಿವೆ ಇವರ ರಚಿಸಿದ ಸಾವಿರಾರು ಕೀರ್ತನೆಗಳಲ್ಲಿ ಭಕ್ತಿ ವೈರಾಗ್ಯಗಳು ಮ ಖ್ಯವಾಗಿದ್ದರೆ ಗ ಡಕ್ರಿಯೆ ಲಕ್ಷ್ಮೀಶೋ ವ ನೆ ವೈಕುಂಠ ವರ್ಣನೆ ಸ್ವಪ ಪದ ಮ ಂತಾದವುಗಳಲ್ಲಿ ಜ್ಞಾನ ಮತ್ತು ತತ್ವಗಳು ಪ್ರಧಾನವ ಗಿವೆ ಶ್ರಿ ವಾದಿರಾಜ ಗುರುಗಳ ಕೀರ್ತನೆಗಳನ ಸ್ಥೂಲವ ಗಿ 4 ಗುಂಪುಗಳಲ್ಲಿ ವಿಂಗಡಿಸಬಹುದು ಕೆಲವು ಪದ್ಯಗಳಲ್ಲಿ ಭಗವಂತನ ರಾಮ ಕೃಷ್ಣಾದಿ ಅವತ ರಗಳ ಸ್ತುತಿ ಇರ ತ್ತದೆ ಇನೊ ಂದು ಗುಂಪಿನ ಪದ್ಯಗಳಲ್ಲಿ ವೇದ ಪುರಾಣ ಇತಿಹಾಸಗಳನ್ನು ಆಧರಿಸಿ ಅವುಗಳ ಸಾರವನ್ನು ಸಂಕ್ಷಿಪ್ತವಾಗಿ ನಿರೂಪಿಸಲಾಗಿದೆ ಮೂರನೆಯ ಗುಂಪಿನ ಪದಗಳಲ್ಲಿ ಲೊ ಕಕ್ಕೆ ಹಿತ ವಚನಗಳನು ಬೋಧಿಸಲಾಗಿದೆ ಅಪರೂಪವಾದ ನಾಲ್ಕನೆಯ ಗು ಪಿನ ಕೆಲವು ಪದ್ಯಗಳಲ್ಲಿ ಸಮಾಜದಲ್ಲಿಯ ಡ ಂಭಿಕತೆ ಮತ್ತು ಅವ್ಯಾಪಾರಗಳನ್ನು ವ್ಯಂಗ್ಯವಾಗಿ ಚಿತ್ರಿಸಲಾಗಿದೆ

ನೂರೆಂಟು ನೆನೆದು ಫಲವೆ ನು ।
ಈರೇಳು ಜಗದೊಡೆಯ ಹರಿಯನ ಒಮ್ಮೆ ನೆನೆ ನಾಗವೆ ॥ ಪ ॥

ಎಂದು ಮನಸ್ಸಿಗೆ ಕರಕೊಟ್ಟಿದ್ದಾರೆ ಮನಸ್ಸ ಅತಿಚಂಚಲ ಅದು ಕಂಡಕಂಡಲ್ಲೆಲ್ಲ ವಿಷಯಗಳನ್ನು ಹಂಬಲಿಸಿ ಹರಿಹಾಯು ತ್ತದೆ ಮತ್ತೆ ಶ್ರೀಗ ರುಗಳು ಮೊರೆಯಿಡು ತ್ತಾರೆ

ಏನು ಹೇಳಲಿ ನರಹರಿ । ನಿನ ।
ಧ್ಯಾನ ಮಾಡೇನೆಂದರೆ ನಿಲ್ಲಗೊಡದು ಮನ ॥

ವ ನಸ್ಸು ವಿಷಯ ದಾಸೆ ಬಿಡಲೊಲ್ಲದು ಉದಯ ಕಾಲದಲ್ಲಿ ಹರಿಯ ನ್ನು ಸ್ಮರಿಸದು ಮಾಧವನನ್ನು ಪೂಜಿಸದು ವಿದ್ಯೆಗಳನು ಓದುವುದು ತುತ್ತು ಅನ ಗಳಿಸಲು ತರ್ಕವ್ಯಾಕರಣದ ಒಲವು ಬರಿದೆ ಕಾದಾಡ ವದಕೆ ಸಾಧು ಶಾಸ್ತ್ರಗಳನ್ನು ವ ರೆತು ಬಿಟ್ಟಾಯಿತು ವಾಸುದೇವನ ಭಕ್ತಿಯನ್ನು ಕಾಣದ ನನಗೆ ಯಾವ ಗತಿ ಕಾದಿದೆಯೋ ? ಎಂದ ಕಳವಳಿಸುತ್ತಾರೆ

ದೇವರ ಬಳಿಯು ಮಿಣಿಮಿಣಿ ದೀಪವಿಟ್ಟು ।
ಕೈವಲ್ಯದ ಸುಖ ಬೇಡುವೆನು ॥
ನಾವುಂಬಲ್ಲಿ ಸಣ್ಣದಿರಲಿ ನೋಡಿ ।
ಪಾವಕನಂತೆ ಕೋಪವ ತಾಳುವೆ ॥

ಮುಕ್ತಿಯ ಸಾಧನಕ್ಕೆ ಬಾರದಂಥ ಧನವು ಸಕಲ ಸಾಧನವು ನನ್ನ ಕೈ ಸೇರಿದೆ ತನ್ನ ಭಕ್ತಿ ಜ್ಞಾನ ವೈರಾಗ್ಯವೆಂಥದೆಂದು ಕಟುವಾಗಿ ನುಡಿದಿದ್ದಾರೆ

ಸಂಸಾರದಲ್ಲಿ ಜ್ಞಾನ ಸತಿಪುತ್ರರಲಿ ಭಕ್ತಿ ।
ಕಂಸಾರಿ ಪೂಜೆಯಲಿ ವೈರಾಗ್ಯವು ॥
ಸಂಶಯದ ಜನರಲ್ಲಿ ಸಖಿತನವ ಮಾಡುವೆನು ।
ಹಿಂಸೆ ಪಡಿಸುವೆ ಸುಜನ ಸಂಘವನು । ರಂಗಾ ॥

ಹೀಗಾಗಿ ಎನ್ನ ನೀ ಉದ್ಧರಿಸಲಾಗದೆ ? ಚೆನ್ನರಾಯಾ ॥ ಎಂದು ಭಿನ್ನಯಿಸಿದ್ದಾರೆ ಗುರುಗಳಾದ ಶ್ರೀಮಧ್ವರಲ್ಲಿ ಮೊರೆ ಹೋಗುತ್ತಾರೆ

ಅಂತರಂಗದ ಶುದ್ಧಿ ಮಾಡು ಮನತಿದ್ದಿ ।
ಸಂತಾಪಗಳ ಕೆಡಿಸು ಹರಿಭಕ್ತಿಕೊಡಿಸು ॥ ಶ್ರೀ ಗುರುಕೃಪೆಯಿಂದ

ಅವರಲ್ಲಿ ಅರಿವಾಗಿ ಶ್ರೀ ಹರಿಭಕ್ತಿ ಗುರುಭಕ್ತಿಗಳು ಮೂಡಿ ಅವರನ್ನು ಮುಕ್ತಿ ಮಾರ್ಗದಲ್ಲಿ ಮುನ್ನಡೆಸುತ್ತವೆ ಲೋಕ ಭರಿತ ರಂಗನು ಏಕಾಂತ ಭಕ್ತರ ಪೊರೆವ ಕರುಣೆಯೆಂದು ಅವರ ನಿಷೆ ಧೃಡವ ಗುತ್ತದೆ

ತನುಮನವ ಶ್ರೀಹರಿಯಧೀನ ಮಾಡಿ ।
ಅನುಸರಿಸಿ ಭಾಗ್ಯ ಬಡತನವೆನ್ನದೆ ॥
ಮನವರಿತು ಹರಿಕೊಟ್ಟ ಮಾತ್ರವಲ್ಲದೆ ಅಧಿಕ
ಅಣುಮಾತ್ರ ಬರದೆಂದು ಸಂತುಷ್ಟರಾಗಿ ||

ದಿನಗಳನು ಕಳೆವ ಜನರೇ ಸುಜನರು । ಹೀಗೆ ಅಹಲ್ಯೆಯನ್ನುದ್ಧರಿಸಿದ ಮೂರು ಲೋಕಗಳನ್ನಳೆದ ಚೆಲುವ ಗಂಗೆಯು ಪೆತ್ತ ಚಂಡ ಕಾಳಿಂಗನ ತುಳಿದ ಪಾವನ ಪಾದವನ್ನು ಆಶ್ರಯಿಸಿ ಹಾಡುತ್ತಾರೆ

ಸೇವಕನೆಲೊ ನಾನು ನಿನ್ನ ಪಾದ ।
ಸೇವೆಸೀಡೆಲೊ ನೀನು ॥ ಇಂಥ ಸ್ಥಿತಿಯಲ್ಲಿ ನುಡಿಯುತ್ತಾರೆ
ಹರಿಯ ನೆನೆ ಹರಿಯ ನೆನೆ ।
ಅನುದಿನವೂ ಶ್ರವಣ ಮನನಾದಿ ಸಾಧನ ಮಾಡು ||

ಇನ್ನು ಸಂಶಯವೇತಕೊ ॥ ಈ ಸಾಧನೆಯಲ್ಲಿ ಎಂಥ ಕಷ್ಟ ಬಂದರೂ ತಾಳಬೇಕೆಂದು ಬೋಧಿಸಿದ್ದಾರೆ

ತಾಳುವಿಕೆಗಿಂತ ತಪವಿಲ್ಲ ।
ತಾಳು ಬ ತ್ತಿಯನು ಉಣಬಹುದು ಮನುಜ ॥
ಕಷ್ಟ ಬಂದಲ್ಲಿ ಕಂಗೆಡದೆ ಧೈರ್ಯವ ತಾಳು ।
ನೆಟ್ಟ ಸಸಿ ಫಲ ಬಾಹೋ ತನಕ ತಾಳು ॥

ಗೋಪಿಯರ ಹ ಗೆ ಮಧುರ ಭಾವದಲ್ಲಿ ಶ್ರೀಕೃಷ್ಣನನ್ನು ಸ್ತುತಿಸುವುದೆಂದರೆ ಶ್ರೀವಾದಿರಾಜರಿಗೆ ತುಂಬಾ ಪ್ರಿಯವಾದ ದು ಇವುಗಳಲ್ಲಿ ಕಂಡು ಬರುವ ವಾತ್ಸಲ್ಯ ರಸವು ಬಹುರಮಣೀಯವ ಗಿರುತ್ತದೆ

ಏನು ಸುಕೃತವ ಮಾಡಿದಳು ಯ ಶೋದೆ ।
ಶ್ರೀನಿಧಿ ಯಾದವ ಕೃಷ್ಣನ್ನ ಕರೆದು ಮುದ್ದಿಸುವಳಂತೆ ॥
ಗಂಗಾಜನಕನಿಗೆ ಗಡಿಗೆ ನೀರೆರೆವಳಂತೆ ।
ಮಂಗಳಾಂಗನಿಗೆ ಶೃಂಗಾರಿಸುವಳಂತೆ ॥

ಇನ್ನೊಂದು ಪದ್ಯದಲ್ಲಿ ಕೃಷ್ಣನ ಬಾಲಲೀಲೆಗಳನ್ನು ಪ್ರಸ್ತಾಪಿಸ ತ್ತ ಇಡೀ ದಶಮಸ ಂದ ಭಾಗವತದ ಸಾರವನ್ನೇ ಬಣ್ಣಿಸಿದ್ದಾರೆ ತಂಗಿ ಮೊಸರ ಸುತ್ತ ಚೆಲ್ಲಿದಾ ಮುದ್ದು । ರಂಗ ಬೆಣ್ಣೆಯ ಮೆದ್ದು ಬಲ್ಲಿದ ॥ ಶ್ರೀಹರಿಯ ದಶಾವ ತಾರಗಳನು ಬಣ್ಣಿಸುವ ರೀತಿಯನ್ನು ನೊ ಡಿ

ಹೇಳೆ ಗೋಪಮ್ಮ ಬುದ್ಧಿ । ಕಾಳಿಂಗ ಮರ್ದನ ಕೃಷ್ಣ ।
ಕೇಳಬಲ್ಲನೆ ಎನ ಮಾತನು ॥ ಪ ॥
ಬಿಟ್ಟಕಣ್ಣನು ಮುಚ್ಚಲೊಲ್ಲನೆ । ದೊಡ್ಡ
ಬೆಟ್ಟಕ್ಕೆ ಬೆನ್ನಿತ್ತು ನಿಂತನೆ ಬಹು ॥
ಸಿಟ್ಟಲಿ ಕೋರೆಹಲ್ಲ ಕಿರಿದನೆ ।
ಗಟ್ಟಿ ಉಕ್ಕಿನಕಂಬ ಒಡೆದು ಬಂದನೆ । ರಂಗ ॥ ೧ ॥
ಮೂರಡಿ ಭೂಮಿಯ ಬೇಡಿ ಬಂದನೆ । ತಾಯ
ತಲೆಯ ಕಡಿಯ ಲಿಕೆ ಕೊಡಲಿಯ ತಂದನೆ ।
ನಾರ ಸೀರೆಯನುಟ್ಟು ಕೊಂಡನೆ । ಬಹು
ಚೋರತನದಿಂದ ಹರವಿ ಹಾಲ ಕುಡಿದನೆ । ಕೃಷ್ಣಾ ॥ ೨ ॥

ಶ್ರೀಕೃಷ್ಣನನ್ನು ಸ್ತುತಿಸುವಾಗಲಂತೂ ಶ್ರೀವಾದಿರಾಜರು ಭಕ್ತಿರಸದಲ್ಲಿ ಮೈಮರೆತು ಬಿಡುತ್ತಾರೆ ಸೋದೆಯ ಸುಂದರ ಬನಗಳಲ್ಲಿ ಕೋಗಿಲೆಗಳು ಕೂಗಿದಾಗೊಮ್ಮೆ ಹಾಡಿದ್ದಾರೆ

ಗೋಪ ಗೋಪನೆಂಬ ಕೋಗಿಲೆ । ನಮ್ಮ
ಶ್ರೀಪತಿ ಕಂಡರೆ ಬರಹೇಳು ॥ ಪ ॥

ಶ್ರೀಕೃಷ್ಣನನು ಪೂಜಿಸುತ್ತ ಅವನ ಪರಮ ಸುಂದರ ಮೂರ್ತಿಯ ನ್ನು ಧ್ಯಾನಿಸುತ್ತ ಕಣ್ಣಿಗೆ ಕಟ್ಟುವಂತೆ ಉಡ ಪಿಯ ಕೃಷ್ಣನ ಮೂರ್ತಿಯನು ಇಲ್ಲಿ ಚಿತ್ರಿಸಿದ್ದಾರೆ

ಈ ಮುದ್ದು ಕೃಷ್ಣ ಈ ಕ್ಷಣದ ಸುಖವೇ ಸಾಕು ।
ಗುರು ಮಧ್ವಮುನಿಯ ಮನದ ವ ಉಡುಪಿನಾ ॥
ಕಿರಿಗೆಜ್ಜೆ ಕಡಿಪೆಂಡೆ ಘಂಟಾಕಟಿ ಸೂತ್ರ ।
ವರಹಾರಪದಕ ಶ್ರೀವತ್ಸ ಕೌಸ್ತುಭ ರತ ॥
ಉರುಮುದ್ರೆ ಕಂಕಣಾಂಗದ ಕುಂಡಲ ಪ್ರಭೆಯು ।
ಶಿರನಾಮ ಮುಕುಟ ನಾಸಿಕದ ಮಣಿಯು ॥

ಶ್ರೀವಾದಿರಾಜರು ಪಡೆದ ದಿವ್ಯಾನುಭೂತಿಯನು ಈ ಪದ್ಯದಲ್ಲಿ ತುಂಬಾ ಸುಂದರ ವಾಗಿ ವರ್ಣಿಸಿದ್ದಾರೆ ಈ ಭಾಗ್ಯವನು ಈ ಪದ್ಯ ಓದಿದವರಿಗೂ ಕರುಣಿಸ ವದ ರಲ್ಲಿ ಸಂದೇಹವಿಲ್ಲ

ಶ್ರೀವಾದಿರಾಜ ಗುರುಗಳು ಸೋದೆಯ ಸಮೀಪ ಶಾಲ್ಮಲಾ ತೀರದಲ್ಲಿ ಬಹು ಕಾಲ ತಪಸ್ಸುಮಾಡಿ ತಪೋವನದಲ್ಲಿದ್ದರು ಅಲ್ಲಿ ಪ್ರಬಲನಾಗಿದ್ದ ಶೈವ ಮಾಂತ್ರಿಕ ನನು ವಾದದಲ್ಲಿ ಸೋಲಿಸಿದ್ದಲ್ಲದೆ ಸೋದೆಯ ಅರಸಪ್ಪನಾಯ ಕನಿಗೆ ಒದಗಿದ ಶತ್ರು ಸಂಕಟವನ್ನು ನಿವಾರಿಸಿದರು ಅರಸಪ್ಪನಾಯ ಕನ ಅಪೇಕ್ಷೆಯಂತೆ ಸೋದೆಯಲ್ಲಿ ನೆಲೆಸಿ ಬದರಿಯಿಂದ ಶ್ರೀತ್ರಿವಿಕ್ರಮ ದೇವರನ ತರಿಸಿ ಅಲ್ಲಿ ರಮಾ ತ್ರಿವಿಕ್ರಮ ರನ್ನು ಪ್ರತಿಷ್ಠಿ ಸಿದರು ಆ ಸುಂದರ ದೇವಾಲಯಕ್ಕೆ ಅರಸಪ್ಪ ನಾಯ ಕನು ಉಂಬಳಿ ಹಾಕಿಕೊಟ್ಟ ಶಾಸನವು ಇಂದಿಗೂ ಅಲ್ಲಿದೆ ಹೀಗೆ 120 ವರ್ಷ ತ ಂಬು ಜಿ ವನ ನಡೆಸಿ ಶ್ರೀವಾದಿರಾಜ ಗುರುಗಳು ವರ್ಷ ವರ್ಷವೂ ತ್ರಿವಿಕ್ರಮನ ರಥೋತ್ಸವವನು ನಡೆಸಿ ಲೋಕಕ್ಕೆ ಅನುಗ್ರಹಿಸಿದರು ಕ್ರಿ ಶ 1600ರಲ್ಲಿ ಫಾಲ್ಗುಣ ಕೃಷ್ಣ ತೃತೀಯಾ ಬುಧವಾರದಂದು ಸಶರೀರವಾಗಿ ವೃಂದಾವನ ಪ್ರವೇಶ ಮಾಡಿದರು ಕೈಯಿಂದ ಜಪಸರ ಕೆಳಗೆ ಬಿದ್ದೊಡನೆ ವೃಂದಾವನವನ್ನು ಮುಚ್ಚಿದರು

ಶ್ರೀವಾದಿರಾಜಗುರುಗಳು ವೃಂದಾವನಸ್ಥರಾದಂದಿನಿಂದಲೂ ಅಸಂಖ್ಯ ಭಕ್ತ ರಿಗೆ ಅನುಗ್ರಹ ಮಾಡುತ್ತಲೇ ಬಂದಿದ್ದಾರೆ ಅವರನ್ನು ಋಜುಗಣಸ್ಥರೆಂದೂ ಭ ವಿಸಮೀರರೆಂದೂ ಗುರ ತಿಸಲಾಗಿದೆ ಹೇಗೆ ಕ ಮಧೇನ ವು ಎಲ್ಲರ ಎಲ ಅಭೀಷ್ಟಗಳನ್ನೂ ಸಲ್ಲಿಸುತ್ತದೆಯೋ ಹಾಗೆಯೇ ಕಲಿಯ ಗದಲ್ಲಿ ಶ್ರೀವಾದಿರಾಜ ತೀರ್ಥರು ಆಶ್ರಯಿಸಿದವರ ಅಭೀಷ್ಟಗಳನ್ನು ಪೂರೈಸ ತ್ತಾರೆ ಶ್ರೀಗ ರುಗಳನು ನಮಸ್ಕರಿಸಿದರೆ ದೀರ್ಘದಾರಿದ್ರ್ಯವೆಲ್ಲ ನಾಶಹೊಂದುತ್ತದೆ ನಂಬಿದವರ ಲೌಕಿಕ ದಾರಿದ್ರ್ಯವೂ ಹೌದು ಅಂತರಂಗದ ದಾರಿದ್ರ್ಯವೂ ಹೌದು ಅವರು ಸಕಲ ರಾಜ ಭೋಗಗಳನ್ನು ಸಲ್ಲಿಸುವರಲ್ಲದೆ ಜಯವನ್ನೂ ಕರುಣಿಸುತ್ತಾರೆಂದು ಧ್ಯಾನ ಶ್ಲೋಕ ವೊಂದು ಹೇಳುತ್ತದೆ ಅವರು ತಮ್ಮ ಶಿಷ್ಯರಾದ ಶ್ರೀವೇದವೇದ್ಯ ತೀರ್ಥರಿಗೆ

ಅವರ ಸೇವೆಯನು ಮೆಚ್ಚಿಕೊಂಡು ದರ್ಶನಭಾಗ್ಯವನ್ನು ಕರುಣಿಸಿದರು ಇವರ ಶಿಷ್ಯರಾದ ಶ್ರೀವೇದನಿಧಿ ತೀರ್ಥರಿಗೂ ಶ್ರೀಗುರುಗಳು ಪರಮಾನುಗ್ರಹ ಮಾಡಿದರು ಪಂಚ ್ಯಂದಾವನದ ಬಳಿ ನಿತ್ಯವೂ ಸೇವೆ ಸಲ್ಲಿಸುತ್ತಿದ್ದ ಶ್ರೀವೇದನಿಧಿತೀರ್ಥರಿಗೂ ಶ್ರೀವಾದಿರ ಜ ಗುರುಗಳು ತಮ್ಮ ದಿವ್ಯ ಮಹಿಮೆಯನು ಪ್ರತ್ಯಕ್ಷವಾಗಿಯೇ ಪ್ರಕಟಿಸಿದರು ಆಗ ಮಠದಲ್ಲಿದ್ದ ಮೂಢ ಮೂಕ ಬ್ರಾಹ್ಮಣನಿಂದ ಶ್ರೀವಾದಿರಾಜರು ದಿನಕೊ ಂದು ಅಧ್ಯಾಯದಂತೆ 22 ಅಧ್ಯಾಯಗಳುಳ್ಳ ಪ ಚವೃಂದಾವನಾಖ್ಯಾನವನು ಹೇಳಿಸಿದರು ಈ ಮೂಕ ಬ್ರಾಹ್ಮಣರೇ ಮುಂದೆ ಶ್ರೀವಿಶ್ವಪ್ರಿಯ ತಿ ರ್ಥರೆಂದೂ ವೃಂದಾವನಾಚಾರ್ಯರೆಂದೂ ಕೀರ್ತಿಶಾಲಿಗಳಾದರು

ಶ್ರೀ ವಿಜಯ ದಾಸರು ತಮ್ಮ ಕೃತಿಯೊಂದರಲ್ಲಿ ರಂಗ ಮಂಗಳ ಉತ್ತುಂಗ ವಿಕ್ರಮ ಎನ ತ । ಶೃಂಗೇರಿ ಮಠದಿ ಜಯ ಕೇತನ ಹಾಕಿಸಿದ ಎಂದು ಶ್ರೀವಾದಿರ ಜರನ್ನು ವರ್ಣಿಸಿದ್ದಾರೆ ಶ್ರೀಗ ರುಗಳಿಗೆ ಜಯಪತ್ರಗಳನು ಸಂಗ್ರಹಿಸುವ ವ್ಯಾಮೋಹವೇನೂ ಇರಲಿಲ್ಲ ಆದರೆ ರಂಗಮಂಗಳ ಉತ್ತುಂಗ ವಿಕ್ರಮ ಎಂದು ಲೋಕಕ್ಕೆ ತಿಳಿಸುವ ಛಲಮಾತ್ರ ಅವರಲ್ಲಿತ್ತು ಪ್ರಪಂಚದ ಸತ್ಪುರ ಷರಲ್ಲಿ ಸ್ಥೂಲವಾಗಿ ಎರಡು ವರ್ಗಗಳನು ಮಾಡಬಹು ದು ಲೋಕಕ್ಕೆ ಸುಖವನು ಸುಖದ ಸಾಧನಗಳನ್ನು ಒದಗಿಸಿಕೊಡುವವರ ಒಂದು ಗುಂಪು ಲೋಕಕ್ಕೆ ಹಿತವ ್ನ ಹಿತದ ಸಾಧನಗಳನ್ನೂ ಒದಗಿಸಿಕೊಡುವವರದು ಇನ್ನೊಂದು ಗುಂಪು ಸುಖದ ದಾರಿ ತೋರಿಸುವವರು ಯಾವಾಗಲೂ ಹಿತದ ದಾರಿಯನು ತೊ ರಿಸುತ್ತಾರೆಂಬ ನಿಯ ಮವಿಲ್ಲ ಹಾಗೆಯೆ ಹಿತದ ದಾರಿಯನ್ನು ಹಿಡಿದವರಿಗೆ ಸುಖವೇ ಸಿಗುತ್ತದೆಂಬ ಭರವಸೆಯೂ ಇಲ್ಲ ಶ್ರೀವ ದಿರಾಜರಂಥ ಸತ್ಪುರುಷರು ಮಾತ್ರ ಸುಖ ಮತ್ತು ಹಿ ಗಳು ಸಂಗಮಿಸಿದ ದಾರಿಯನು ತೋರಿಸಿದ್ದಾರೆ ಅವರು ಕನ ಡದಲ್ಲಿ ಅಮೊ ಘ ಕೃತಿಗಳನ್ನು ರಚಿಸಿ ದಾಸಸಾಹಿತ್ಯವನ್ನು ಬೆಳೆಸಿದರು ಶಾಸ್ತ್ರಗಳ ಗಡುಚಾದ ಪ್ರಮೇಯಗಳನು ವಿವರಿಸಿ ಸಾಮಾನ್ಯರಿಗೂ ಜ್ಞಾನದಾನ ಮಾಡಿದರು ಸ್ವತಃ ವಿದ್ವಾಂಸರಾದ ಅವರು ತಮ್ಮ ಸಂಚಾರ ಕಾಲದಲ್ಲಿ ಅನೇಕ ವಿದ್ವಾಂಸರನು ಸಿದ್ಧಗೊಳಿಸಿ ಬೆಳಕಿಗೆ ತಂದರು ಪಾಂಡುರಂಗಿ ಆನಂದ ಭಟ್ಟರು ಮಿರ್ಜಿ ವೆಂಕಟಾಚಾರ್ಯರು ಮುಂತಾದ ಪಂಡಿತರ ಮನೆತನಗಳಿಗೆ ಶ್ರೀಗುರುರಾಜರು ವಿಶ ಷ ಅನುಗ್ರಹ ಮಾಡಿದ್ದಾರೆ ಭರತ ವರ್ಷವನ್ನೆಲ್ಲ ತೀರ್ಥಕ್ಷೇತ್ರಗಳ ಸಂದರ್ಶನದ ನಿಮಿತ್ತ ಸಂಚರಿಸಿ ಅಲ್ಲಲ್ಲಿ ಧಾರ್ಮಿಕ ಶ್ರದ್ಧೆಯನ್ನೂ ಆಧ್ಯಾತ್ಮಸತ್ವವನ್ನೂ ಸಾಮಾಜಿಕ ಮತ್ತು ಸಾಂಸ್ಕೃತಿಕವಾದ ನವ ಚೈತನ್ಯವನ್ನೂ ಶ್ರೀಗುರುಗಳು ಜನರಲ್ಲಿ ಮೂಡಿಸಿದರು ಹೋದಲ್ಲೆಲ್ಲಾ ದೇವತಾ ವಿಗ್ರಹಗಳನ್ನು ಸಂಗ್ರಹಿಸುವದರಲ್ಲಿ ಅವರಿಗೆ ವಿಶೇಷ ಪ್ರೀತಿಯಿದ್ದಿತು ಅವರ ಆಸಕ್ತಿ ಜಡಪ್ರತಿಮೆಗಳಲ್ಲಿ ಮಾತ್ರವೇ ಇರಲಿಲ್ಲ ಆದರೆ ಇಂಥ ಪ್ರತಿಮೆಗಳನ್ನು ಕಂಡು ಕೈಮುಗಿಯುವವರ ಅಸಂಖ್ಯ ಹೃದಯಗಳಲ್ಲಿ ನೆಲೆಸಿದ ಭಗವಂತನನ್ನು ಸಂತೋಷಪಡಿಸುವದು ಶ್ರೀಗ ರುಗಳಿಗೆ ಬಹಳ ಪ್ರಿಯ

ವಾಗಿತ್ತು ಆದ್ದರಿಂದಲೇ ಅವರು ವಿಶೇಷ ಪೂಜೆ ಉತ್ಸವಗಳನು ಪದೇ ಪದೇ ಏರ್ಪಡಿಸುತ್ತಿದ್ದರು ದೀನದಲಿತರಲ್ಲಿ ಅವರು ತೋರಿದ ಅನುಕಂಪವಂತೂ ಎಷ್ಟಿಷ್ಟು ವಾಗಿದೆ ಹೀಗೆ ಶ್ರೀವಾದಿರಾಜರು ತಮ್ಮ ಧಾರ್ಮಿಕ ದಿಗ್ವಿಜಯದಿಂದ ಗ್ರಂಥ ರಚನೆಯಿಂದ ಸಾಮಾಜಿಕ ಸಂಘಟನೆಯಿಂದ ಪೂಜೆ ಉತ್ಸವಗಳ ಏರ್ಪಾಡಿನಿಂದ ತಮ್ಮ ಕಾಲದ ಜನಮನವನ್ನು ಪಾವನಗೊಳಿಸಿದರು ತಮ್ಮ ತಪಸ್ಸು ಜ್ಞಾನ ಭಕ್ತಿ ಗಳಿಂದ ಈಗಲೂ ಕೂಡ ಜನರಿಗೆ ಅನುಗ್ರಹಿಸುತ್ತಿದ್ದಾರೆ ಶ್ರೀಗುರುಗಳು ಹಯ ವದನನ ಏಕಾಂತ ಭಕ್ತರಾದ್ದರಿಂದ ತಮಗೆ ದೇವರು ಮಾತ್ರವೇ ಬೇಕಲ್ಲದೆ ಮತ್ತಾವ ಪುರುಷಾರ್ಥವನ್ನೂ ತಾವು ಬಯಸುವುದಿಲ್ಲವೆಂದಿದ್ದಾರೆ ತಮಗೆ ತಮ್ಮ ಗುರು ಗಳಾದ ಶ್ರೀವಾಗೀಶತೀರ್ಥರು ಶ್ರೀವಾದಿರಾಜರೆಂದು ಹೆಸರಿಟ್ಟು ರಾಜತ್ವವನ್ನೇ ಕೊಟ್ಟಿದ್ದಾರೆ ಇದನ್ನು ಅಕ್ಷರಶಃ ಸಾರ್ಥಕಗೊಳಿಸಲು ಶ್ರೀಕೃಷ್ಣನು ತಮಗೆ ಪರಮಾನ ಗ್ರಹ ಮಾಡಲಿ ಎಂದು ರುಕ್ಮಿಣೀಶ ವಿಜಯದ ಕೊನೆಯಲ್ಲಿ ಕೃಷ್ಣಃ ಕಾವ್ಯಕೃತೇ ಎಂಬ ಪದ್ಯದಲ್ಲಿ ಸೊಗಸಾಗಿ ಹೇಳಿದ್ದಾರೆ ಶ್ರೀವಾದಿರಾಜರು ಹೇಳು ತ್ತಾರೆ ಶ್ರೀಕೃಷ್ಣನು ಈ ಕಾವ್ಯ ಮಾಡಿದ ತನಗೆ ಅವನ ಕರಕಮಲವೆಂಬ ಛತ್ರ ವನ್ನು ಕೊಡಲಿ ಶಾಸ್ತ್ರವೆಂಬ ರಾಜ್ಯವನ್ನು ಕೊಡಲಿ ಜ್ಞಾನವೆಂಬ ವಾಹನವನ್ನು ಕೊಡಲಿ ಹರಿಪಾದ ಪೂಜೆಯೆಂಬ ಕಂಕಣವನ್ನು ಕೊಡಲಿ ಹರಿದಾಸ್ಯವೆಂಬ ಹಾರವನ್ನು ಕೊಡಲಿ ಹೃದಯದಲ್ಲಿ ಹರಿಧ್ಯಾನವೆಂಬ ಐಶ್ವರ್ಯವನ್ನು ಕರುಣಿಸಲಿ ಇಂಥ ಭಾಗ್ಯಶಾಲಿಗಳಾದ ಶ್ರೀವಾದಿರಾಜರು ಭಕ್ತರಹೃದಯ ಸಿಂಹಾಸನದಲ್ಲಿ ಮಂಡಿ ಸಿದ್ದಲ್ಲಿ ವಿನಾಶ್ಚರ್ಯ !

ವ್ಯಾಲೇಸ ಸ್ಟೀವನ್ಸ ಎಂಬ ಕವಿ ಬರೆದ ಒಂದು ಪದ್ಯದಲ್ಲಿ ಹೇಳುತ್ತಾನೆ

> A gold feathered bird
> Sings in the palm
> The bird sings its feathers shine
> The palm stands on edge of space
> The Wind moves slowly in the branches
> The bird s fire-fangled feathers dangle down

ಬಂಗಾರದ ರೆಕ್ಕೆಗಳ ಹಕ್ಕಿಯೊಂದು ತಾಳೆಯ ಮರದಲ್ಲಿ ಹಾಡುತ್ತಿದೆ ಆ ಹಕ್ಕಿ ಹಾಡುತ್ತಿದೆ ಅದರ ಗರಿಗಳು ಹೊಳೆಯುತ್ತಿವೆ ಆ ತಾಳೆಯು ಆಕಾಶದ ಅಂಚಿ ನಲ್ಲಿ ನಿಂತಿದೆ ಗಾಳಿಯು ಅದರ ಟೊಂಗೆಗಳಲ್ಲಿ ಮೆಲ್ಲಗೆ ಸರಿಯುತ್ತಿದೆ ಆ ಹಕ್ಕಿಯ ಬೆಂಕಿಯಂತೆ ಪ್ರಜ್ವಲಿಸುವ ಗರಿಗಳು ಕೆಳಗೆ ಜೋತಾಡುತ್ತಿವೆ

ಶ್ರೀವಾದಿರಾಜಗುರುಗಳು ಆ ಹಕ್ಕಿಯ ಹಾಗೆ ಆಕಾಶದ ಅಂಚಿನಲ್ಲಿ ನಿಂತು ಹಾಡಿದ್ದಾರೆ ಅವರ ಸ್ವರ್ಣಗರಿಗಳ ಆಶ್ರಯದಲ್ಲಿ ನಮಗೆ ಸಂಖವೂ ಉಂಟು

ಹಿತವೂ ಉಂಟು ಅಂತೆಯೆ ಎಷ್ಟು ಶತಮಾನಗಳು ಕಳೆದರೂ ಹಯವದನ ಹಯವದನ ಎನ್ನುವ ಈ ಸ್ವರ್ಣಪಕ್ಷಿಯು ತನ್ನ ಆಶ್ರಯ ಬಯಸಿ ಬಂದವರಿಗೆಲ ಮಂಗಲವುಂಟು ಮಾಡುವುದರಲ್ಲಿ ಸಂದೇಹವಿಲ್ಲ

ಓಂ ನಮೋ ವಾದಿರಾಜಾಯ । ದೀರ್ಘದಾರಿದ್ರ್ಯಘಾತಿನೆ ॥
ರಾಜಭೋಗ ಪ್ರದಾತ್ರೇ ಚ । ನಮೋಸ್ತು ಜಯದಾಯಿನೆ ॥

# ಕವಿರಾಜ ವಾದಿರಾಜರು

ವಿ ಎನ್ ಭಟ್ಟ

ತಪೋವಿದ್ಯಾವಿರಕ್ತ್ಯಾದಿ ಸದ್ಗುಣೌಘಾಕರಾನಹಂ ।
ವಾದಿರಾಜಗುರೂನ್ವಂದೆ ಹಯಗ್ರೀವದಯಾಶ್ರಯಾನ್ ॥

ಬೆಳೆಯು ಸಿರಿ ಮೊಳಕೆಯಲ್ಲಿ ಎಂಬಂತೆ ಶ್ರೀ ವಾದಿರಾಜರು ಹುಟ್ಟುವ ಮೊದಲೇ ತಂದೆ ರಾಮಾಚಾರ್ಯರಿಗೆ ಆದ ಸ್ವಪ್ನ, ಅದೇ ವೇಳೆ ಗುರು ವಾಗೀಶ ತೀರ್ಥರಿಗೆ ಆದ ಕನಸುಗಳೂ ಅವರ ಅಲೌಕಿಕ ವ್ಯಕ್ತಿತ್ವವನ್ನು ಹೊರಹೊಮ್ಮಿಸುತ್ತವೆ. ಬರಲಿರುವ ಘಟನೆಗಳು ತಮ್ಮ ಛಾಯೆಯನ್ನು ಮುಂದಾಗಿಯೇ ಚೆಲ್ಲುವವು ಎಂಬುದಕ್ಕೆ ಅವರ ಜೀವನವೇ ಸಾಕ್ಷಿ.

ವಾದಿರಾಜರು ಗುರುರಾಜರಷ್ಟೇ ಅಲ್ಲ ಕವಿರಾಜರೂ ಹೌದು. ಅವರ ರುಕ್ಮಿಣೀಶವಿಜಯ ಮಹಾಕಾವ್ಯವು ಮಾಘಕಾವ್ಯವನ್ನೂ ಹಿಮ್ಮೆಟ್ಟಿಸಿದೆ.

ಉಪಮಾ ಕಾಳಿದಾಸಸ್ಯ ಭಾರವೇರರ್ಥ ಗೌರವಂ
ದಂಡಿನಃ ಪದಲಾಲಿತ್ಯಂ ಮಾಘೇ ಸಂತಿ ತ್ರಯೋಗುಣಾಃ ॥

ಎಂಬ ಮಾತು ಪ್ರಸಿದ್ಧವಾಗಿತ್ತು. ಆದರೆ ಉದಿತೆ ರುಕ್ಮಿಣೀಶಕಾವ್ಯೇ ಕ್ವ ಮಾಘಃ ಕ್ವ ಚ ಭಾರವಿ ಎಂಬಂತೆ ಇವರ ರುಕ್ಮಿಣೀಶವಿಜಯದ ಮುಂದೆ ಯಾವ ಕಾವ್ಯವೂ ನಿಲ್ಲದ ಯಿತು. ಪುಣೆಯ ಪೇಶ್ವೆಯ ಆಸ್ಥಾನದಲ್ಲಿ ಈ ಕಾವ್ಯ ವಿದ್ವನ್ಮನ್ನಣೆ ಹಾಗೂ ರಾಜಮನ್ನಣೆ ಗಳಿಸಿ ಇವರಿಗೆ ಕವಿಕುಲತಿಲಕ ನೆಂಬ ಪ್ರಶಸ್ತಿಯನ್ನು ತಂದುಕೊಟ್ಟಿತು. ವಾದಿರಾಜರ ಈ ರಾಜಕೃತಿಯನ್ನು ಮೆಚ್ಚಿದ ರಾಜನು ಗಜರಾಜನ ಮೇಲಿರಿಸಿ ರಾಜಬೀದಿಯಲ್ಲಿ ಮೆರವಣಿಗೆ ಮಾಡಿದನೆಂದರೆ ಅವರ ಹಿರಿಮೆ ಗರಿಮೆ ಮಹಿಮೆಗಳ ಅರಿವಾಗುವುದು.

ಸಂಸ್ಕೃತ ಭಾಷೆಯಲ್ಲಿ ಭೌಗೋಳಿಕ ವೃತ್ತಾಂತವನ್ನು ವರ್ಣಿಸುವ ಗ್ರಂಥಗಳು ಅತಿವಿರಳ. ಇವರ ತೀರ್ಥಪ್ರಬಂಧ ಆ ದೆಸೆಯಲ್ಲಿ ಕೈಮರವಷ್ಟೇ ಅಲ್ಲ ಪ್ರವಾಸಿಗಳ ಕೈಪಿಡಿಯೂ ಹೌದು. ಆಸೇತು-ಶೀತಾಚಲಪರ್ಯಂತ ಭಾರತದೇಶವನ್ನು ಕಾಲ್ನಡಿಗೆಯಿಂದ ಎರಡು ಬಾರಿ ಸಂಚರಿಸಿದಾಗ ಹೊರಹೊಮ್ಮಿದ ಅನುಭವದ ನವನೀತ ಇಲ್ಲಿದೆ. ಅವರ ಯುಕ್ತಿಮಲ್ಲಿಕೆ ಶಾಸ್ತ್ರೀಯ ಗ್ರಂಥವಾದರೂ ಶಾಸ್ತ್ರ ಮಾತ್ರ ಸಾಹಿತ್ಯ ಇವೆರಡರ ಮಧುರದಾಂಪತ್ಯ ರಸಾನುಬಂಧಗಳನ್ನು ಇಲ್ಲಿ ಕಾಣಬಹುದು. ಶಾಸ್ತ್ರೀಯ ವಾಙ್ಮಯದ ಶುಷ್ಕಾರಣ್ಯದಲ್ಲೂ ಸಾಹಿತ್ಯದ ಸಂಸ್ಕಾರ ಸಂಗೀತ ಕೇಳಿಬರುವಂತೆ ಮಾಡುವ ಕೈಚಳಕ ವಾದಿರಾಜರಿಗೆ ಮಾತ್ರ ವಿಲಾಸ. ಉಪನ್ಯಾಸಭಾರತಿ ಸರಸಭಾರತೀವಿಲಾಸ ದಶಾವತಾರಸ್ತೋತ್ರ ಮೊದಲಾದ ಒಂದೊಂದು ಗ್ರಂಥವೂ ವಾದಿರಾಜರ ವಾದಕೌಶಲ್ಯ ವಾಗ್ವೈಖರೀ

ವಿಷಯ ವಿನ್ಯಾಸ ಪಾಟವ ಮತ್ತು ನಿರೂಪಣಾ ನೈಪುಣ್ಯಗಳಿಗೆ ನಿತ್ಯನಿದರ್ಶನ ಗಳಾಗಿವೆ ವಾದಿರಾಜರ ಕೃತಿಗಳೆಂದರೆ ಆನಂದದ ಅವಿರತ ಬ ಗ್ಗೆ

ಬೆಲೆಯಿಂದಕ್ಕುಮೆಂ ಕೃತಿ । ಗಾವಿಲ । ಭುವನದ ಭಾಗ್ಯದಿಂದ
ಮುಕ್ಕುಂ ನೊಳ್ಪಂ
ಬೆಲೆಗೊಟ್ಟುಲಾರ ಮಧುವಂ । ಮಲಯಾನಿಲನಂ ಮನೋಜವಂ
ಚಂದ್ರಿಕೆಯಂ॥

ಎಂಬ ನೇಮಿಚ ದ್ರನ ಮಾತಿನಿಂದಲೇ ಸತ್ಕವಿಗಳ ಸತ್ಕೃತಿಗಳು ಭುವನದ ಭಾಗ್ಯ ದಿಂದ ಮಾತ್ರ ನಿರ್ಮಾಣವಾಗುತ್ತವೆ ಕಾಳಿದಾಸನಂತೆ ಕವಿರಾಜರು ಅನೇಕರಿರ ಬಹುದು ರಾಮಾನುಜರಂತೆ ದಾರ್ಶನಿಕ ತತ್ತ್ವವೇತ್ತೃಗಳು ಅನೇಕರಿರಬಹುದು ಆದರೆ ವಾದಿರಾಜರಂತೆ ಕವಿಯಾಗಿ, ದಾರ್ಶನಿಕರಾಗಿ ಪವಾಡ ಪುರುಷರಾಗಿ ಶಾಸ್ತ್ರಜ್ಞರಾಗಿ ಮಹಾಮಹಿಮ ರಾಗಿ ಲೌಕಿಕ ಪ್ರಜ್ಞೆಯುಳ್ಳವರಾಗಿ ಇರುವವರು ಅತಿವಿರಳ ಹಿತಮಿತವಚನರಚನಾ ಚತುರರಿವರು ಅಪಾರೇ ಕಾವ್ಯ ಸಂಸಾರೇ ಕವಿರೇವ ಪ್ರಜಾಪತಿಃ ಎಂಬಂತೆ ಕಾವ್ಯ ಪ್ರಪಂಚಕ್ಕೆ ಕವಿಯೇ ವಿನೂತನ ಬ್ರಹ್ಮ ನವನವೋನ್ಮೇಷಶಾಲಿನಿಯರಾದ ಕವಿಪ್ರತಿಭೆ ಅನೇಕ ರಸವತ್ಪ್ರದ ಕೃತಿಗಳನ್ನು ನೀಡ ವಲ್ಲಿ ಯಶಸ್ವಿಯಾಗಿದೆ ಇದನ್ನು ಓದಿದಾಗ ಇವನೊಬ್ಬ ವರಕವಿ ಯೆ ಹೊರತು ನರಕವಿ ಯಲ್ಲ ಎಂಬುದು ಸ್ಪಷ್ಟವ ಗುತ್ತದೆ ಅವರ ಒಂದೆರಡು ಗ್ರಂಥಗಳನ್ನು ಆಯ್ದುಕೊಂಡು ಸಾಧಾರವಾಗಿ ನನ್ನ ವ ದವನ್ನು ಪುಷ್ಟೀಕರಿಸಲು ಇಚ್ಛಿಸುತ್ತೇನೆ

**ರುಕ್ಮಿಣೀಶವಿಜಯ** —ಇದು ಮಾಘಕಾವ್ಯಕ್ಕೆ ಪ್ರತಿಸ್ಪರ್ಧಿ ಮಾಘದಂತೆ ಇದು 19 ಸರ್ಗಗಳು ಉಳ್ಳದ್ದೂ ಶ್ರೀ ಕೃಷ್ಣಚರಿತೆಯನ್ನು ಒಳಗೊಂಡದ್ದೂ ಆಗಿದೆ 19 ದಿನದಲ್ಲಿ ಈ ಕಾವ್ಯವನ್ನು ಕವಿರಾಜ ವಾದಿರಾಜರು ರಚಿಸಿದರೆಂದರೆ ನಂಬುವುದೂ ಕಷ್ಟವಾಗುತ್ತದೆ ಮಾಘದಂತೆ ಇಲ್ಲೂ ರಸರಾಜ ಶೃಂಗ ರಕ್ಕೆ ಅಗ್ರಪಟ್ಟ ಆದರೆ ಅಲ್ಲಿ ಕೇವಲ ನವರಸಗಳು ವರ್ಣಿತವಾದರೆ ಇಲ್ಲಿ ನವರಸಗ ಳೊಂದಿಗೆ ವಾತ್ಸಲ್ಯರಸ ಭಕ್ತಿರಸಗಳೂ ಮೇಳವಿಸಿವೆ ಅಡಿಯಿಂದ ಮುಡಿಯ ವರೆಗೂ ಪ್ರಧಾನರಸಕ್ಕೆ ಪೂರಕವಾಗಿ ಪೋಷಕವಾಗಿ ಇತರ ರಸಗಳು ಬಂದಿವೆ ಕವಿರಾಜರ ಕಲ್ಪನಾಸೌಂದರ್ಯ ಇಲ್ಲಿ ಗರಿಗೆದರಿದೆ ರಮಣೀಯಾರ್ಥ ಪ್ರತಿಪಾದಕಃ ಶಬ್ದಃ ಕಾವ್ಯಂ ಎಂಬ ಕಾವ್ಯ ಲಕ್ಷಣದಿಂದ ಕಂಗೊಳಿಸುವ ಈ ಗ್ರಂಥದಲ್ಲಿ ನಗರ ಅರ್ಣವ ಮುಂತಾದ ಅಷ್ಟಾದಶವರ್ಣನೆಗಳೂ ಬಂದಿವೆ

ಭಾಗವತದ ದಶಮಸ್ಕಂದವೇ ಈ ಗ್ರಂಥಕ್ಕೆ ಮೂಲ
ಯಸ್ಮಿನ್ ಮಂಗಲದೇವತಾಖಿಲ ಜಗನ್ಮಾತಾ ರಮಾ ನಾಯಿಕಾ ।
ಪದ್ಮಾಪದ್ಮಭವಾದಿ ಸೇವ್ಯ ಚರಣಸ್ತದ್ವಲ್ಲಭೋ ನಾಯಕಃ ॥

ಎಂಬ ವಾದಿರಾಜರ ವಾಕ್ಯದಂತೆ ಜಗನ್ಮಾತೆ ಲಕ್ಷ್ಮೀದೇವಿಯೇ ಈ ಕಾವ್ಯದ ನಾಯಿಕೆ ಚತುರ್ಮುಖ ಬ್ರಹ್ಮನಿಗೂ ತಂದೆಯಾದ ಶ್ರೀಮನ್ನಾರಾಯಣನೇ ನಾಯಕ ಶ್ರೀಕೃಷ್ಣ–ರುಕ್ಮಿಣಿಯರ ವಿವಾಹವೇ ಕಥಾವಸ್ತು ಕಥಾನಾಯಕನಾದ ಶ್ರೀಕೃಷ್ಣನಲ್ಲಿ ಇಷ್ಟ–ವಿಶಿಷ್ಟ–ಅಧಿಕೃತಿಗಳೆಂಬ ಗುಣತ್ರಯಗಳೂ ಇವೆ ಶ್ರೀಕೃಷ್ಣನ ಕಥೆಯನ್ನು ಸುಂದರವಾಗಿ ವರ್ಣಿಸುವುದರೊಂದಿಗೆ ಅನೇಕ ಆಧ್ಯಾತ್ಮಿಕ ಪ್ರಮೇಯಂಗಳನ್ನು ಕಾವ್ಯಶೈಲಿಯಲ್ಲಿ ಸುಲಲಿತವಾಗಿ ವಿವರಿಸಿದ್ದು ಕವಿರಾಜರ ವೈಶಿಷ್ಟ್ಯ ತ್ರಿಕಾಲದಲ್ಲೂ ಪರಮಾತ್ಮನಲ್ಲಿ ಅನುರಕ್ತಿ ಪ್ರಪಂಚದಲ್ಲಿ ವಿರಕ್ತಿ ಇವರ ವಿಶೇಷ

ಸಾಮಾನ್ಯವಾಗಿ ಸಂಸ್ಕೃತ ಕವಿಗಳು ಪ್ರತಿಸರ್ಗದಲ್ಲೂ ಒಂದೇ ಛಂದಸ್ಸನ್ನು ಬಳಸಿ ಸರ್ಗದ ಕೊನೆಯ ಒಂದೆರಡು ಪದ್ಯಗಳನ್ನು ಮಾತ್ರ ಬೇರೆ ಛಂದಸ್ಸಿನಲ್ಲಿ ಬರೆಯುವುದು ವಾಡಿಕೆ ಆದರೆ ಒಂದೇ ಛಂದಸ್ಸಿದ್ದರೆ ಸಹೃದಯರಿಗೆ ಬೇಸರ ವಾದೀತೆಂಬ ಭಾವನೆಯಿಂದಲೋ ಏನೋ ಕವಿರಾಜ ವಾದಿರಾಜರು ಆಗಾಗ ಸರ್ಗ ಮಧ್ಯದಲ್ಲೂ ಛಂದಸ್ಸನ್ನು ಬದಲಿಸಿದ್ದಾರೆ ಈ ಕಾವ್ಯದಲ್ಲಿ ಪ್ರಸಾದಮಾಧುರ್ಯ ಗುಣಗಳು ಅನುಪ್ರಾಸಾದಿ ಶಬ್ದಾಲಂಕಾರಗಳು ಉಪಮಾ ರೂಪಕ ದೀಪಕ ಉತ್ಪ್ರೇಕ್ಷೆ ಅರ್ಥಾಂತರನ್ಯಾಸಾದಿ ಅರ್ಥಾಲಂಕಾರಗಳು ಹೆಜ್ಜೆ ಹೆಜ್ಜೆಗೂ ಬರುತ್ತವೆ ವಾಚ್ಯಾರ್ಥಕ್ಕಿಂತ ಸೂಚ್ಯಾರ್ಥಕ್ಕೆ ಇಲ್ಲಿ ಪ್ರಾಧಾನ್ಯ ಶ್ಲೋಕದ ಪ್ರತಿಪಾದದಲ್ಲೂ ದ್ವಿತೀಯಾಕ್ಷರ ಅಂತ್ಯಾಕ್ಷರ ಪ್ರಾಸಗಳು ವಿಶೇಷವಾಗಿ ಕಂಡುಬರುತ್ತವೆ

ಮಾಘಕಾವ್ಯದಂತೆ ರುಕ್ಮಿಣೀಶವಿಜಯವು ಶ್ರೀಕಾರದಿಂದ ಪ್ರಾರಂಭವಾಗುತ್ತದೆ ಶ್ರೀ ವೇದಾಂತ ಮಹಾಚಲಂ ಎಂಬ ಶಾರ್ದೂಲವಿಕ್ರೀಡಿತ ವೃತ್ತವು ಆರಂಭದಲ್ಲಿ ಬಂದಿದೆ ತನ್ನವರಿಗೆ ಅಮೃತವನ್ನು ಉಣಬಡಿಸಿದ ಶ್ರೀಕೃಷ್ಣನೆಂಬ ಕ್ಷೀರಸಮುದ್ರ ನನ್ನನ್ನು ರಕ್ಷಿಸಲಿ ಎಂಬಲ್ಲಿ ಉಪಮಾ ಶ್ಲಿಷ್ಟಪರಂಪರಿತ ರೂಪಕಗಳನ್ನು ಕಾಣಬಹುದು ಮುಂದೆ ಉಪಾಸ್ಯ ದೇವತೆಯಾದ ಶಂಖ–ಅಕ್ಷ–ಪುಸ್ತಕ–ಜ್ಞಾನಮುದ್ರಾಯುಕ್ತನಾದ ಹಯವದನಮೂರ್ತಿಯ ವರ್ಣನೆಯಿದೆ ಒಟ್ಟು ಐದು ಪದ್ಯಗಳಲ್ಲಿ ಮಂಗಲಾಚರಣೆಯನ್ನು ಹೇಳಲಾಗಿದೆ

ಕಾಳಿದಾಸನು ಕ್ವ ಸೂರ್ಯ ಪ್ರಭವೋ ವಂಶಃ? ಕ್ವಚಾಲ ವಿಷಯಾಮತಿಃ ?

ತಿತೀರ್ಷುಃ ದುಸ್ತರಂ ಮೋಹಾತ್ ಉಡುಪೇನಾಸ್ಮಿ ಸಾಗರಂ

ಇತ್ಯಾದಿ ಪದ್ಯಗಳಲ್ಲಿ ಆತ್ಮಾಭಿಮಾನ ಖಂಡನೆ ಮಾಡಿಕೊಂಡಂತೆ ಗುರುರಾಜರೂ ಈ ಕೆಳಗಿನ ಪದ್ಯದಲ್ಲಿ ಆತ್ಮಾಭಿಮಾನ ಖಂಡನೆಮಾಡಿಕೊಂಡಿದ್ದು ಅವರ ವಿನಯ ಗುಣಕ್ಕೆ ಹಿಡಿದ ಕನ್ನಡಿಯಾಗಿದೆ

ಅಪಂಡಿತೇನಾಪಿ ಮಯಾರ್ಜಿತೇಯಂ
ಮುಕುಂದಲೀಲಾ ಕವಿಕಂಠಮಾಲಾ ।
ಅಕೌಶಲೇನ ಗ್ರಥಿತೇತಿ ಜಾತಿ—
ಪ್ರಸೂನಮಾಲಾಂ ಕಿಮು ಸಂತ್ಯಜಂತಿ ?

ಮೂಢನೆಂದಿಹನೆಂದುಜಾಜಿದಂಡೆಯು ಬಿಡುವರೆ? ಹಾಗೆ ತಾನು ಪ್ರಾಜ್ಞನಲ್ಲದಿದ್ದರೂ ಈ ಶ್ರೀ ಕೃಷ್ಣಚರಿತಾಮೃತವನ್ನು ಸಹೃದಯರು ಅನಾದರಿಸಲಾರರು ಇಲ್ಲಿ ಮಯಾ ಎಂದು ತಮ್ಮನ್ನು ಏಕವಚನದಲ್ಲಿ ಕರೆದುಕೊಂಡಿದ್ದು ಇವರ ವಿನೀತ ಸ್ವಭಾವಕ್ಕೆ ಸಾಕ್ಷಿಯಾಗಿದೆ

ಮೂರನೇ ಸರ್ಗದ ಶ್ರೀ ಕೃಷ್ಣಬಾಲಲೀಲಾವರ್ಣನೆ ಮೇಲ್ನೋಟಕ್ಕೆ ಸಂಭಾಷಣೆಯಂತೆ ಕಂಡರೂ ಗುಡಜಿಹ್ವಿಕಾನ್ಯಾಯ ದಿಂದ ಅಲ್ಲಿ ಆಧ್ಯಾತ್ಮಿಕ ರಹಸ್ಯ ಅಡಗಿರುವುದನ್ನು ಗುರುತಿಸಬಹುದು ಉದಾ ಶ್ರೀಕೃಷ್ಣ ಯಶೋದೆಯರ ಸಂಭಾಷಣೆ ಇಲ್ಲದೆ

> ಿದ್ರಾಮಾಶ್ರಯ ಕಿಂ ತದಾಶ್ರಯ ಫಲಂ ? ಭುಕ್ತಂ ವ್ರಜೇ ಜ್ಜೀರ್ಣತಾಂ ।
> ನಿದ್ರಾಕಾಂಬ ? ನಿಮೀಲಿತಾಕ್ಷಿಯುಗಲಃ ಪ್ರಾಜ್ಞಂ ಯದಾಲಿಂಗತಿ ।
> ಆಸ್ತ್ವೇವಂ ತ್ವಿತಿಮುಂದ್ರಿತಾತ್ಮನಯನಃ ಸ್ವಾಂಗಂ ಸಮಾಲಿಂಗ್ಯ ತ–
> ತ್ಸರ್ವಂ ಜೀರ್ಣಮಥೋ ದಿಶೇತಿ ಜನನೀಂ ಶಂಸನಿ ಜಂ ಸೋಏವತಾತ್ ॥

3–12

ತಾಯಿ—ಮಗು ನಿದ್ದೆ ಮಾಡು
ಬಾಲಕೃಷ್ಣ—ಅದರಿಂದೇನು ಪ್ರಯೋಜನ ?
ತಾಯಿ—ತಿಂದಿದ್ದೆಲ್ಲ ಜೀರ್ಣವಾಗುವುದು
ಕೃಷ್ಣ—ಅಮ್ಮ ನಿದ್ರೆಯೆಂದರೇನು ?
ತಾಯಿ— ಕಣ್ಣನ್ನು ಮುಚ್ಚಿಕೊಂಡು ಕುಳಿತಾಗ ಪ್ರಾಜ್ಞನನು ಆಲಂಗಿಸುವುದೇ ನಿದ್ದೆ

ಕೃಷ್ಣ—ಹಾಗೆಯೇ ಆಗಲಿ ಎಂದು ಕ್ಷಣಕಾಲ ಕಣ್ಣುಮುಚ್ಚಿ ಅಮ್ಮಾ ತಿಂದದ್ದೆಲ್ಲ ಜೀರ್ಣವಾಯಿತು ಬೇರೆ ತಿಂಡಿಯನ್ನು ಕೊಡು ಎಂದು ತಾಯಿಯನ್ನು ಕೇಳುತ್ತಿರುವ ಶ್ರೀಕೃಷ್ಣನು ಭಕ್ತರನು ಕಾಪಾಡಲಿ ಇಲ್ಲಿ ಮೇಲ್ನೋಟಕ್ಕೆ ಸಂಭಾಷಣೆ ಇದ್ದರೂ ನಿಮೀಲಿತ ಕ್ಷಿಯುಗಲಃ ಪ್ರಾಜ್ಞಂ ಯ ದಾಲಿಂಗತೆ ಇತ್ಯಾದಿ ಪದಗಳಲ್ಲಿ ಸಾಕಷ್ಟು ಧ್ವನ್ಯಾರ್ಥವಿದೆ ಶ್ರೀ ಕೃಷ್ಣನು ಹಿಂಡಿ ಯಾರ ಮೊಲೆಹಾಲನ್ನು ಕ ಡಿದವನಲ್ಲವಾದ್ದರಿಂದ ತಾಯಿಯು ಸ್ತನ್ಯಪಾನವಮಾಡಿದಷ್ಟು ತೃಪ್ತಿ ಇರಲಿಲ್ಲ ಹೊಸ ಹೊಸ ಇಷ್ಟ ವಿಷಯಗಳು ಒದಗಿದಾಗ ಯಾರಿಗಾದರೂ ತೃಪ್ತಿಯುಂಟೆ ? ಇಲ್ಲಿ ಅರ್ಥಂತರನ್ಯಾಸದ ಸೊಬಗನ್ನು ಕಾಣಬಹುದಾಗಿದೆ ಏಳನೇ ಸರ್ಗದಲ್ಲಂತೂ ವಿರಹವ್ಯಥೆಯಿಂದ ಕರಗಿ ಕೊರಗಿ ಸೊರಗಿಹೋದ ಗೋಪಿಕೆಯರ ಚಿತ್ರವು ಹೃದಯಂಗಮವಾಗಿದೆ

> ಅಶೋಕ ವೃಕ್ಷೋಽಪರವೇದನಾಜ್ಞಃ ಪದಾಹತೇರೇವ ಪರೋಪಕರ್ತಾ ।
> ನ ಕಾರ್ಯಕಾರೀ ಶಿಥಿಲಾತ್ಮನಾಂ ನಸ್ಸತೋಪರತ್ರ ಪ್ರತಿಯಾತ ಸಖ್ಯಃ ॥

7–24

ಅಶೋಕ ವೃಕ್ಷಕ್ಕೆ ಬೇರೆಯವರ ಶೋಕ ಹೇಗೆ ಅರ್ಥವಾದೀತು. ಹೆಂಗಸರು ಕಾಲಿನಿಂದ ಒದ್ದಾಗಲೇ ಹೂವನ್ನು ಬಿಟ್ಟು ಉಪಕರಿಸುವದು ಇದರ ಸ್ವಭಾವ ಶ್ರೀಕೃಷ್ಣನ ಅಗಲಿಕೆಯಿಂದ ಕಂದಿ ಕುಂದಿ ಬೆಂದುಹೋದ ನಮಗೆ ಒದೆಯುವ ಶಕ್ತಿಯೂ ಇಲ್ಲ. ಆದ್ದರಿಂದ ಸಖಿಯರೇ ನಾವು ಬೇರೆ ಕಡೆ ಹೋಗೋಣ ಇಲ್ಲಿಯ ಕವಿ ಕಲ್ಪನೆ ಶಕ್ತಿಕವಿಗಲ್ಲದೇ ಯುಕ್ತಿ ಕವಿಗೆ ಬರಲಾರದು

ಉತ್ಪ್ರೇಕ್ಷಾಲಂಕಾರದ ವೈಚಿತ್ರ್ಯವಂತೂ ಇಲ್ಲಿ ಸುಂದರವಾಗಿ ಮೂಡಿಬಂದಿದೆ ಕಾಳಿಮರ್ದನ ಸಂದರ್ಭದ ಒಂದು ವರ್ಣನೆಯನ್ನು ಇಲ್ಲಿ ಸ್ಮರಿಸಬಹುದು ಶ್ರೀಕೃಷ್ಣ ಕಾಳಿಯ ಹೆಡೆಯನ್ನು ತುಳಿದು ನರ್ತನ ಮಾಡ ತ್ತಿದ್ದರೂ ಬಾಲವನ್ನು ಮಾತ್ರ ಕೈಯಲ್ಲಿ ಎತ್ತಿ ಹಿಡಿದಿದ್ದಾನೆ ಇದರ ರಹಸ್ಯವೇನು ಗೊತ್ತೆ ! ಅಪರಾಧಿ ಯನ್ನು ರಕ್ಷಿಸುವ ಭಗವಂತ ನಿರಪರಾಧಿಯನ್ನು ಕರ ಣೆಯಿಂದ ಕೈಹಿಡಿದು ಕಾಪಾಡು ವನು ವಿಷಭರಿತವಾದ ಕಾಳಿಯ ಹೆಡೆ ಅಪರಾಧಿ ಬಾಲ ಏನೂ ಅಪರಾಧ ಮಾಡಿಲ್ಲವಾದ್ದರಿಂದ ಅದನ್ನು ಕೈಯಲ್ಲಿ ಹಿಡಿದಿದ್ದಾನೆ ಇದನ್ನು ಓದುತ್ತಿದ್ದರೆ ಕಾಳೀಮರ್ದನನ ಸುಂದರ ಮೂರ್ತಿಯೂ ನಮ್ಮ ಕಣ್ಮುಂದೆ ಬಂದು ನಿಲ್ಲುವದು ಇಂತಹ ಸುಂದರ ಸ್ವಾರಸ್ಯಪೂರ್ಣ ತತ್ವಾರ್ಥಯುಕ್ತ ಕಲ್ಪನೆಯನ್ನು ಕಾವ್ಯದಲ್ಲಿ ಅಡಿಯಿಂದ ಮುಡಿಯವರೆಗೂ ಅನೇಕ ಕಡೆ ಕಾಣಬಹ ದು ಈ ರೀತಿ ಭಾಷೆ ಭಾವದ ರಿಂಗಣಗುಣಿತಕ್ಕೆ ಅನುಗುಣವಾಗಿ ತಾಳಿಹಾಕಿ ರಸಮೇಳವನ್ನು ಉಂಟು ಮಾಡಿದ ಸಂದರ್ಭ ಸಂಸ್ಕೃತ ಸಾಹಿತ್ಯದಲ್ಲಿಯೇ ವಿರಳ

ಏಕಾಕ್ಷರ ದ್ವ್ಯಕ್ಷರ ಪಾದಾವೃತ್ತಿ ಖಡ್ಗಬಂಧ ಮುರಜಬಂಧ ಮುಂತಾದ ರಚನೆಗಳಲ್ಲೂ ರಾಜರು ಅಸದೃಶರಾಗಿದ್ದಾರೆ ಉದಾ

1) ಏಕಾಕ್ಷರಯಮಕಾಲಂಕಾರಕ್ಕೆ— ತತಾತತಾತೀತತತತ್ತ್ವತತಿತಾತೋಽತತೇ ತುತತ್ ।
ತತ್ತ್ವಾತೌತಾತಿತೇತಾತಾತೀತೇತತೋಽತ್ತಿ ತಾವಕ್ । 7–62

2) ದ್ವ್ಯಕ್ಷರಪಾದಯಮಕಕ್ಕೆ— ರಾಸಿಸಾರೋಽಸಿ ಸುರಸಿವೇಂಹಿ ಹೆ । ಮಹಿ ಮಹಾವಿಂಹ
ವಾಸೀಂ ಸಸಾವಾಂ ಸದಸಿ ವೇದವಾದವಿದೋ ವದ ॥ 7–57

3) ಪಾದಾವೃತ್ತಿಯಮಕಕ್ಕೆ— ರವಮಾನಯಹಾಹಂ ಕೃತಿದೂರವೃತ್ತಿರವಮಾನಯಾಃ ಹಂಕೃತಿದೂರವೃತ್ತಿಃ ।
ರವಮಾನ ಯಾಃಹಂ ಕೃತಿದೂರವೃತ್ತಿರವಮಾನಯಾ ಹಂಕೃತಿದೂರವೃತ್ತಿಃ ॥ 7–61

ಇಲ್ಲಿ ಏಕಾಕ್ಷರಯಮಕ ದಲ್ಲಿ ಒಂದೇ ಅಕ್ಷರದಲ್ಲಿ ಇಡೀ ಪದ್ಯ ರಚಿಸಿದ್ದನ್ನು ಕಾಣ ಬಹುದು ಹಾಗೆ ದ್ವ್ಯಕ್ಷರ ಪಾದಯಮಕ ದಲ್ಲಿ ಒಂದೊಂದು ಪಾದದಲ್ಲೂ ಎರಡಕ್ಷರ ಗಳನ್ನು ಮಾತ್ರ ಕಾಣುತ್ತೇವೆ ಪಾದಾವೃತ್ತಿ ಯಮಕ ದಲ್ಲಿ ಒಂದೇ ಪಾದವು ಪುನರಾವೃತ್ತಿಯಾದುದನ್ನು ಕಾಣಬಹುದು ಇಲ್ಲಿ ಅರ್ಥವು ಮಾತ್ರ ಪದವಿಭಾಗ ದಿಂದ ಭಿನ್ನವಾಗುತ್ತದೆ ಎಂಬುದು ಸ್ಮರಣೀಯ ಇದನ್ನೆಲ್ಲ ಕಂಡಾಗ ನೈಷಧಂ ವಿದ್ವದೌಷಧಂ ಎಂಬ ಮಾತು ಈ ಕಾವ್ಯಕ್ಕೂ ಅನ್ವಯಿಸುತ್ತದೆ ಇಲ್ಲೆಲ್ಲ ಪಂಡಿತ ರಿಗೂ ವ್ಯಾಖ್ಯಾನವಿಲ್ಲದೇ ಅರ್ಥವಾಗ ವುದು ಕಷ್ಟವೆಂದರೆ ಕಾವ್ಯದ ಪ್ರೌಢಿಮೆ ವ್ಯಕ್ತವಾಗುತ್ತದೆ ಇಲ್ಲೆಲ್ಲಾ ಕಾವ್ಯ ದ್ರಾಕ್ಷಾಪಾಕ ದಿಂದ ನಾಲಿಕೇರಪಾಕ ದತ್ತ ವಾಲಿದೆ

9ನೆ ಸರ್ಗದ ರಾಸಕ್ರೀಡಾವೈಭವ ವನ್ನು ಓದುತ್ತಿದ್ದಾಗ ಶೃಂಗಾರ ಚರಮ ಸೀಮಾವರ್ಣನೆಯಲ್ಲೂ ವೇದಾಂತತತ್ತ್ವ ಮರೆಯದಿರುವುದನು ಕಾಣಬಹುದು ಗೋಪಿಯ ರ ವಿರಹ ವರ್ಣನೆಯಲ್ಲಿ ವಿಪ್ರಲಂಭಶೃಂಗ ರವಿದೆ ಮಾಘ ಕಾವ್ಯದಲ್ಲೂ ಈ ವಿಪ್ರಲ ಭ ಶೃಂಗಾರವನೂ ಬಾಲಲೀಲಾ ವರ್ಣನೆಯನೂ ಕಾಣಲಾರೆವು

10 ನೇ ಸರ್ಗದ ಶ್ರೀ ಕೃಷ್ಣ-ಅಕ್ರೂರರ ಸಂಭಾಷಣಾ ಸನ್ನಿವೇಶ ತುಂಬಾ ಮನೋಹರವಾಗಿದೆ ಶ್ರೀಕೃಷ್ಣ ಕ್ಷೇಮವೇ ? ಎಂದು ಅಕ್ರೂರನನ್ನು ಕೇಳಿದರೆ ಆತ ಪರಮಾತ್ಮನೇ ! ನೀನು ನನ ಹೃದಯದಲ್ಲಿ ವಾಸವಾಗಿರುವ ತನಕ ಕ್ಷೇಮ ವಲ್ಲದೆ ಮತ್ತೇನು ? ಎನು ತ್ತಾನೆ ಕಂಸನ ಬಿಲ್ಲುಹಬ್ಬದ ಕರೆಯೋಲೆ ಕಂಡಾಕ್ಷಣ ಶ್ರೀಕೃಷ್ಣನು

ಸ ತತಃ ಸತತಧ್ಯಾನಶುದ್ಧ ವ ದ್ಧ ಜನಾಶ್ರಿತಾಂ ।
ವ ಥ ರಾಂ ಮಧುರಾಂ ಕರ್ತುಂ ಗಮನಾಯೋಪಚಕ್ರಮೇ ॥ 10–33

ಅಕ್ರೂರವಾಣಿ ಯನ್ನು ಕೇಳಿದ ಶ್ರೀಕೃಷ್ಣನು ತನ್ನನ್ನು ಸದಾ ಧ್ಯಾನಿಸುತ್ತಿರುವ ವರಿಗೆ ಆಶ್ರಯವಾ ದ ಮಧ ರೆಯನು ವ ಧುರವನಾ ಗಿ ಮಾಡಲು ಹೊರಡಲನು ವಾದನು ಇಲ್ಲಿ ಯಮಕಾಲಂಕಾರದ ಸೊಬಗು ಮನೋಹರವಾಗಿದೆ

13 ನೇ ಸರ್ಗದ ಯುದ್ಧವರ್ಣನೆಯ ಸಂದರ್ಭದಲ್ಲಿ ವಾದಿನಿಗ್ರಹ ಶತ್ರು ನಿಗ್ರಹಗಳೆರಡನ್ನೂ ಶ್ಲೇಷೆಯಿಂದ ಹೇಳಿದ್ದನ್ನು ಕಾಣಬಹುದು ರಣರಂಗದ ವೀರ ರಸ ಹಾಗೂ ವಾದಿನಿಗ್ರಹದಲ್ಲಿಯ ವೀರರಸದ ಸಾಮ್ಯವನ್ನು ಇಲ್ಲಿ ಕಾಣುತ್ತೇವೆ ಮಾಘದಲ್ಲೂ ಈ ರೀತಿಯ ವರ್ಣನೆ ದುರ್ಲಭ ಇಲ್ಲಿ ದ್ವೈತ ತತ್ತ್ವ ತುಂಬಿ ದ್ದಾರೆ ಮೇಲ್ನೋಟಕ್ಕೆ ಕಾವ್ಯ ಒಳನೋಟಕ್ಕೆ ದ್ವೈತತತ್ತ್ವ ಇಲ್ಲಿಯ ವೈಶಿಷ್ಟ್ಯ ಹಲವು ವಲ್ಲಭೆಯರು ಉಳ್ಳ ಭಗವಂತ ತನ ನ್ನು ಹೇಗೆ ನೋಡಬಹುದೆಂದು ಯೋಚಿಸಿದ ರುಕ್ಮಿಣಿ ವಿವಾಹದಲ್ಲಿ ತಾನೇ ಮೊದಲು ಜಿ ರಿಕಾಕ್ಷತ ಆರೋಪಣ ಮಾಡ ತ್ತಾಳೆ ವಧ ವರರಲ್ಲಿ ಯಾರು ಮೊದಲು ಅಕ್ಷತಾರೋಪಣ ಮಾಡುತ್ತಾರೋ ಅವರು ಜೀವನದಲ್ಲಿ ಗೆಲ್ಲುತ್ತಾರೆಂದು ಪ್ರತೀತಿ ಇಲ್ಲಿ ರುಕ್ಮಿಣಿಯೇ ಗೆಲ್ಲುತ್ತಾಳೆ

ಈ ರೀತಿ ಬಾಣನಂತೆ ಸೂಕ್ಷ್ಮಾತಿಸೂಕ್ಷ್ಮವರ್ಣನೆಯನು ವಾದಿರಾಜರಲ್ಲಿ ಕಾಣಬಹುದು

17 ನೇ ಸರ್ಗದ ಕೆಲವು ಪದ್ಯಗಳು ನೈಷಧ ಕಾವ್ಯದ ಪಂಚನಲೀ ಯಂಲ್ಲಿ ಹೇಗೋ ಹಾಗೆ ರಾಮನ ಪರವಾಗಿ-ಕೃಷ್ಣನ ಪರವಾಗಿ ರುಕ್ಮಿಣಿಪರವಾಗಿ-ಕೃಷ್ಣಪರವಾಗಿ ಯೇ ಮುಂತಾದ ದ್ವಂದ್ವಾರ್ಥದಿಂದ ಕೂಡಿದೆ ಇಲ್ಲಿ ಕೃಷ್ಣನ ಎಲ್ಲ ಅವತಾರಗಳು ಹಾಗೂ ಒಂದೊಂದು ಅವತಾರದಲ್ಲಿ ಮಾಡಿದ ಮಹಾತ್ಮೆಗಳು ಕಂಡು ಬರುತ್ತವೆ

ರುಕ್ಮಿಣಿ ಸತ್ಯಭಾಮೆಯ ರ ವಿವಾಹಕ್ಕೆ ಅನೇಕ ಸರ್ಗಗಳನ್ನು ಮೀಸಲಿಟ್ಟ ಕವಿರಾಜರು ಉಳಿದ ಆರು ಮಹಿಷಿಯರೊಂದಿಗೆ 16 ಸಾವಿರದ ನೂರು ಸ್ತ್ರೀಯರ ವಿವಾಹವನ್ನು ಒಂದೇ ಪದ್ಯದಲ್ಲಿ ಸಂಗ್ರಹಿಸಿದ್ದಾರೆ ಅವರು ಹಿತಮಿತವಚನ ರಚನಾ ಚತುರರೆಂಬುದಕ್ಕೆ ಈ ವರ್ಣನೆಯೇ ಸಾಕ್ಷಿ ಇವರ ಕಾವ್ಯದುದ್ದಕ್ಕೂ ಬಂದ ಪದಪುಂಜಗಳಲ್ಲಿ ಸ ವ ಧ ರ ಶಬ್ದಕ ಂಜಗಳಲ್ಲಿ ಪುಟಿಯುವ ರಸಕಾರಂಜಿಯನ್ನು ಕಂಡು ಮಾರುಹೋಗದವರಾರು ! ರಘುನ ಥಾಚಾರ್ಯರ ವೃತ್ತರತ್ನ ಸಂಗ್ರಹದಲ್ಲಿ ರ ಕ್ಮಿಣೀಶವಿಜಯದ ಸ್ವಾರಸ್ಯವನ್ನು ಕುರಿತು ಹೀಗೆ ಹೇಳಿದೆ

ವಿರಕ್ತಿವಿಜ್ಞಾನಸಂಭಕ್ತಿಯುಕ್ತಿ ಪ್ರೌಢ್ಯಾದಿಪೂರ್ಣಸ್ಯ ವ ನೋಹರಸ್ಯ ।
ಶ್ರೀ ವಾದಿರಾಜಃ ಸ್ವಕೃತಸ್ಯ ಕಾವ್ಯರಾಜಸ್ಯ ಸಾಮ್ಯಂ ಸ್ವಯಮೇವಧತ್ತೇ ॥

ಈ ಕಾವ್ಯದ ಕೆಲವೆಡೆ ವಿಷ್ಣುಸರ್ವೋತ್ತಮತ್ವ ವನ್ನು ಸಾರಿದ್ದು ಸಕಲರೂ ಆದರಿಸಬಹುದಾದ ವ್ಯಾಪಕ ಶಕ್ತಿಯಂಳ್ಳ ಕಾವ್ಯವನ್ನು ಸೀಮಿತವಲಯಕ್ಕೆ ಸೀಮಿತಗೊಳಿಸಿದಂತೇ ಆಯಿತೇನೋ ಎಂದು ತೋರುತ್ತದೆ ರಾಷ್ಟ್ರದ ಚಕ್ರವರ್ತಿ ಯಾಗಬೇಕಾದವನು ನಾಡದೊರೆ ಯಾದಂತೆ ಆಯಿತೇನೋ ಎಂದು ಅನ್ನಿಸುತ್ತದೆ ಏನೇ ಇದ್ದರೂ ವಾದಿರಾಜರ ಅಸಾಧಾರಣ ಕವಿತ್ವಶಕ್ತಿಗೆ ಮಾತ್ರ ಕೈಮುಗಿಯಲೇ ಬೇಕು

**ತೀರ್ಥಪ್ರಬಂಧ** —ಇದು ವಾದಿರಾಜರ ಖಂಡಕಾವ್ಯ ಶ್ರೀಗಂರು ರಾಜರು ಅಸೇತು-ಶೀತಾಚಲದವರೆಗೆ ಕಾಲ್ನಡಿಗೆಯಿ ಂದ ಎರಡಾವೃತ್ತಿ ಭಾರತದೇಶದ ತೀರ್ಥಕ್ಷೇತ್ರಗಳನ್ನು ಸಂದರ್ಶಿಸಿ ಅಲ್ಲಿಯ ವೈಶಿಷ್ಟ್ಯವನ್ನು ಕ್ಷೇತ್ರಪ್ರಭಿಮಾನಿ ದೇವತೆಗಳನ್ನು ವರ್ಣಿಸಿ ಸಾಧಕನು ಕ್ಷೇತ್ರಗಳಲ್ಲಿ ಮಾಡಬೇಕಾದ ಅನುಸಂಧಾನಗಳನ್ನು ರಸಮಯಶೈಲಿಯಲ್ಲಿ ವಿವರಿಸಿದ್ದಾರೆ ಭಿನ -ಭಿನ್ನ ವೃತ್ತ ರಚನೆಯಿಂದ ಕೂಡಿದ ಈ ಗ್ರಂಥದ ಒಂದೊಂದು ಪದ್ಯದಲ್ಲೂ ಒಂದೊಂದು ಕ್ಷೇತ್ರದ ವಿವರಣೆಯಿದೆ

ತಿರ್ಥೀಕುರ್ವಂತಿ ತೀರ್ಥಾನಿ ಮಹಾನುಭಾವರ ಸಂಚಾರ ಆ ಸ್ಥಳ ಪಾವಿತ್ರ್ಯವನ್ನು ಹೆಚ್ಚಿಸುತ್ತದೆ ಆಧ್ಯಾತ್ಮ ಸಂಚಾರಿಗಳಾದ ಸಾಧಕರಿಗೆ ಇದು ಕೈಗನ್ನಡಿಯಾಗಿದೆ ಸಂಸ್ಕೃತ ವಾಙ್ಮಯದಲ್ಲಿ ಇಂತಹ ಪ್ರವಾಸೀ ಸಾಹಿತ್ಯ ಅತಿವಿರಳ ಇಲ್ಲಿ

ಗುರುರಾಜರು ಪೌರಾಣಿಕ ಮತ್ತು ಐತಿಹಾಸಿಕ ದೃಷ್ಟಿಯಿಂದ ತೀರ್ಥಕ್ಷೇತ್ರಗಳ ಪರಿಚಯ ಕೊಟ್ಟಿದ್ದಾರೆ ಈ ಗ್ರಂಥವು ಆಧ್ಯಾತ್ಮ ಜಿಜ್ಞಾಸುಗಳಿಗೆ ಮಾತ್ರವೆ ಅಲ್ಲ ಇತಿಹಾಸ ಸಂಶೋಧಕರಿಗೂ ಆಕರಗ್ರಂಥ

ಅಟನ್ ಸ್ವಯಂ ತೀರ್ಥಸಮೂಹಪೂರ್ಣಾಂ ತೀರ್ಥಪ್ರಬಂಧಂ ಕೃತವಾನ್ ದಯಾಲುಃ

ಜನಾಂಸ್ತದಾವರ್ತನಶೀಲಿನಶ್ಚ ಚಕಾರ ತೀರ್ಥಾಟನ ಪುಣ್ಯಭಾಜಃ ॥

ರಘುನಾಥಾರ್ಯರ ವೃತ್ತರತ್ನಸಂಗ್ರಹದಲ್ಲಿ ತೀರ್ಥ ಪ್ರಬಂಧದ ಪ್ರಶಸ್ತಿರೂಪವಾದ ಪದ್ಯದೆ

ತೀರ್ಥ ಪ್ರಬಂಧವು ಪಶ್ಚಿಮ ಪ್ರಬಂಧ ಉತ್ತರ ಪ್ರಬಂಧ ಪೂರ್ವಪ್ರಬಂಧ, ದಕ್ಷಿಣ ಪ್ರಬಂಧಗಳೆಂಬ ನಾಲ್ಕು ಅಧ್ಯಾಯಗಳಲ್ಲಿ ವಿವರಿಸಲ್ಪಟ್ಟಿದೆ ಸ್ಮಾರ್ತ ಶೈವ ವೈಷ್ಣವ ಶ್ರೀವೈಷ್ಣವ ಭೇದವಿಲ್ಲದೆ ಉಡುಪಿ ಸೋದಾ ವಂಜಗುಣಿ ಯಾಣ ಗೋಕರ್ಣ ಬನವಾಸಿ ದ್ವಾರಕಾ ಕಾಶಿ ಕಾಂಚಿ ಪುರಿ ಬದರಿ ತಿರುಪತಿ ರಾಮೇಶ್ವರ ಮುಂತಾದ ಎಲ್ಲ ಕ್ಷೇತ್ರಗಳ ವರ್ಣನೆ ಇಲ್ಲಿದೆ ಭಾವಯಿತ್ರೀ ಕಾರಯಿತ್ರೀ ಪ್ರತಿಭಾ ಸಂಪನ್ನರಾದ ಇವರ ಕಲಾಕುಂಚದಲ್ಲಿ ಎಲ್ಲ ಮೂರ್ತಿಗಳ ಚಿತ್ರ ಸಜೀವವಾಗಿ ಮೂಡಿಬಂದಿದೆ ತಾವು ಕಂಡಂತೆ ಎಲ್ಲಾ ದೇವರುಗಳನು ಗುಣಪರಕವಾಗಿಯೇ ಸ್ತುತಿಸಿದ್ದಾರೆ ಕೃಷ್ಣಾ ಗೋದಾವರಿ ನೇತ್ರಾವತಿ ಪಯಸ್ವಿನಿ ವರದಾ ನರ್ಮದಾ ಮುಂತಾದ ನದೀವರ್ಣನೆಯಂತೂ ಕವಿರಾಜರ ಕಲ್ಪನಾಕಾರಂಜಿಯಿಂದ ಪುಟಿದ ಒಂದು ವಾಗ್ಝರಿಯಾಗಿದೆ

ಉಡುಪಿ ಕ್ಷೇತ್ರವನು ಈ ರೀತಿ ವಿವರಿಸಿದ್ದಾರೆ—

> ದ್ವಾರಾವತೀಂ ಸಕಲಭಾಗ್ಯವತೀಮುಪೇಕ್ಷ್ಯ
> ಗೋಪಾಲಬಾಲಲಲನಾಕರ ಪೂಜನಂ ಚ ॥
> ವಾರ್ಧಿಂ ಪಥೋಗ್ರಹವ ತೀತ್ಯ ಸ ಮಧ್ವನಾಥೋ
> ಯತ್ರಾಸ್ತಿ ತದ್ರಜತಪೀಠಪುರಂ ಗರೀಯಃ॥ ಪ 10

ಸಕಲ ಸಂಪತ್ತಿನಿಂದ ಕೂಡಿದ ದ್ವಾರಕೆಯಲ್ಲಿ ಸುಂದರಿಯರಾದ ಗೋಪಿಯರಿಂದ ಪೂಜೆಗೊಳ್ಳುತ್ತಿದ್ದರೂ ಅದನ್ನು ಬಿಟ್ಟು ಹೆಂಡತಿಯ ತವರಾದ ಸಮುದ್ರದಲ್ಲಿಯೂ ಇರಲೊಪ್ಪದೆ ಶ್ರೀಕೃಷ್ಣನು ಮಧ್ವಾಚಾರ್ಯರ ಭಕ್ತಿಗೊಲಿದು ಉಡುಪಿಯಲ್ಲಿ ಬಂದು ನೆಲೆಸಿದ್ದಾನೆ ಆದ್ದರಿಂದ ಈ ಕ್ಷೇತ್ರವು ಎಲ್ಲ ಉತ್ತಮವಾದದು ಇಲ್ಲಿ ಉಡುಪಿ ಕ್ಷೇತ್ರವು ಉತ್ತಮವಾಗಿರುವುದಕ್ಕೆ ಶ್ರೀಕೃಷ್ಣನ ನಿವಾಸವೇ ಕಾರಣವೆಂದು ಕಾವ್ಯಲಿಂಗಾಲಂಕಾರದಿಂದ ಸುಂದರವಾಗಿ ವರ್ಣಿಸಿದ್ದಾರೆ ಕೊನೆಯ ಫಲಶ್ರುತಿಯಲ್ಲಿ ಶ್ರೀ ವಾದಿರಾಜತೀರ್ಥರು ಗಂಗಾದಿ ನದಿಗಳ ಮತ್ತು ಶ್ರೀಮನ್ನಾರಾಯಣನ ಅಶ್ವಮೇಧಾದಿ ಯಜ್ಞಪುಣ್ಯಫಲದಾಯಕವಾದುದರಿಂದ ಯಾವನು ಇದನ್ನು ಓದು

ತ್ಮಾನೋ ಅಥವಾ ಕೇಳುತ್ತಾನೋ ಅವನಿಗೆ ಐಹಿಕ-ಆಮುಷ್ಮಿಕ ಸಕಲ ಸಂಪತ್ತುಗಳು ಕೈಗೂಡುತ್ತವೆ ಎಂದು ಅಭಿಪ್ರಾಯ ಸೂಚಿಸಿದ್ದಾರೆ

**ದಶಾವತಾರಸ್ತುತಿ** ---ಅಶ್ವಧಾಟಿಯ ಈ ಸ್ತೋತ್ರ-ಕಾವ್ಯದಲ್ಲಿ ಹೆಜ್ಜೆ ಹೆಜ್ಜೆಗೂ ಶಾರದೆಯು ಗೆಜ್ಜೆ ಕಟ್ಟಿಕೊಂಡು ಕುಣಿದಂತೆ ಪ್ರಸಾದಾಲಂಕಾರಗಳ ಕಿಂಕಿಣಿ ನಾದ ಕೇಳಿ ಬರ ವುದು ಶ್ರೀಗುರುರ ಜರು ತಮ್ಮ ಉಪಾಸ್ಯ ಮೂರ್ತಿಯಾದ ಹಯಗ್ರೀವ ದೇವರಿಗೆ ಕಡಲೇ ಹೂರಣದ ನೈವೇದ್ಯವನ್ನು ಸಮರ್ಪಿಸುವಾಗ ಈ ಸ್ತೋತ್ರವನ್ನು ಹೇಳುತ್ತಿದ್ದರಿಂದ ಕುದ ರೆಯ ರೂಪವನ್ನು ಧರಿಸಿ ಬರುತ್ತಿದ್ದ ದೇವರ ಹೆಜ್ಜೆಯ ಸದ್ದನ್ನು ಅನುಸರಿಸಿದ್ದರಂತೆ ಅಶ್ವಧಾಟೀ ಎಂಬ ಹೆಸರು ಇದಕ್ಕೆ ಅತ್ಯಂತ ಸೂಕ್ತವಾಗಿದೆ 34 ಪದ್ಯಗಳುಳ್ಳ ಈ ಗ್ರಂಥದಲ್ಲಿ ದಶಾವತಾರಗಳ ವರ್ಣನೆಯಿದ್ದರೂ ಶ್ರೀ ರಾಮ ಮತ್ತು ಶ್ರೀಕೃಷ್ಣಾವತಾರ ವರ್ಣನೆಗೇ ಹೆಚ್ಚು ಪದ್ಯಗಳು ಮೀಸಲಾಗಿವೆ ಈ ಸ್ತೋತ್ರದಲ್ಲಿ ಧಾಟಿ ಮತ್ತು ಭಾವಾಭಿರಾಮತೆ ಇದ್ದು ಜನಪ್ರಿಯತೆಯನು ಹೆಚ್ಚಿಸಿದೆ ಅಶ್ವಧಾಟಿಯನ್ನು ಶಂಕರಾಚಾರ್ಯರ ಅಂಬಾಷ್ಟಕದಲ್ಲೂ ವೇದಾಂತದೇಶಿಕರ ಯಾದವಾಭ್ಯುದಯ ದ ಒಂದು ಪದ್ಯದಲ್ಲೂ ಕಾಣಬಹುದಾಗಿದೆ ವ ತ್ರೀಭವ್ಯತ್ವಕ್ಕೆ ಪ್ರಾಸವನ್ನು ಜೋಡಿಸಿದಾಗ ಅಶ್ವಧಾಟಿ ಎನಿ ಸುತ್ತದೆ 2 9 16 ನೇ ಅಕ್ಷರಗಳ ಪ್ರಾಸ ಿಲ್ಲಿ ಚಾಚು ತಪ್ಪದೆ ಬಂದಿದೆ ಪದಗಳು ತಾ ಮುಂದೆ ತಾ ಮುಂದೆ ತನ್ನನ್ನು ಆಯ್ದುಕೊಳ್ಳಿರಿ ಎಂದು ಕವಿರಾಜನನ್ನು ಅಂಗಲ ಚ ಬೇಡುವಂತಿವೆ ಶಕ್ತಿ-ಸಂಪನ್ನ ಕವಿಗಳಿಂದ ಮಾತ್ರ ಇಂತಹ ರಚನೆ ಸಾಧ್ಯ ಸಂಗಿ ತಜ್ಞಾನ ಸಂಪನ್ನರು ಇದನ್ನು ಮಧುರ ಕಂಠದಿಂದ ಹಾಡಿದಾಗ ಉಂಟಾಗುವ ಆನಂದ ವರ್ಣನಾತೀತ ಉದಾ ರಾಮಾವತಾರದ ವರ್ಣನೆಯ ಒಂದು ಪದ್ಯವನ್ನು ಗಮನಿಸಬಹ ದು

> ರಾಮೆ ನೃಣಾಂ ಹೃದಭಿರಾಮೇ ನರಾಶಿಕುಲಭೀಮೇ ಮನೋಽದ್ಯರಮತಾಂ
> ಗೋಮೇದಿನೀಜಯಿತಪೋಽಮೇಯಗಾಧಿಸುತಕಾಮೇ ನಿವಿಷ್ಟವ ನಸಿ
> ಶ್ಯಾಮೇ ಸದಾ ತ್ವಯಿ ಜಿತಾಮೇಯತಾಪಸಜರಾಮೇ ಗತಾಧಿಕಸಮೆ
> ಭೀಮೇ ಶಚಾಪದಲ ನಾಮೇಯಶೌರ್ಯಜಿತವಾಮೇಕ್ಷಣೇ ವಿಜಯಿನಿ ॥
>
> ಪದ್ಯ ॥14॥

ಇಲ್ಲಿಯ ಪ್ರಾಸಜೋಡಣೆ ವೃತ್ತಗತಿತ್ವ ಅಸ್ಯಾಧೃಶವಾಗಿದೆ ಸಂಸ್ಕೃತ ಕವಿಗಳು ತಮ್ಮ ಚರಿತ್ರೆಯನ್ನು ಹೇಳಿಕೊಳ್ಳುವದಿಲ್ಲ ಎಂಬ ಮಾತಿಗೆ ಇವರು ಅಪವಾದವಾಗಿದ್ದಾರೆ ಕೊನೆಯ ಪದ್ಯದಲ್ಲಿ ಫಲಸ್ತುತಿ ಇಷ್ಟ ದೇವತಾವಂದನೆಯೊಂದಿಗೆ, ನಿಗೂಢವಾಗಿ ಕವಿ ಪರಿಚಯವನ್ನೂ ಹೇಳಿದ್ದಾರೆ

ಕವಿರಾಜ ವಾದಿರಾಜರು ಸಂಸ್ಕೃತದ ಶಾಸ್ತ್ರಸಾಹಿತ್ಯದಲ್ಲಿ ತಮ್ಮದೇ ಆದ ವಾದಿರಾಜನಿ ಧಿ ಯನ್ನು ನಿರ್ಮಿಸಿದಂತೆ ಕನ್ನಡಾಂಬೆಯು ಅಡಿದಾವರೆಗಳಿಗೂ

ಅನೇಕ ಭಕ್ತಿ ಕುಸುಮಗಳನ್ನು ಸಮರ್ಪಿಸಿದ್ದಾರೆ ಉಡುಪಿಯ ಶ್ರೀ ಕೃಷ್ಣ ಪೂಜಾಸಂದರ್ಭದಲ್ಲಿ ಕನ್ನಡದ ಕಿನ್ನರಿಯ ಮಂಜುಘೋಷ ಇಂದಿಗೂ ಕೇಳಿಬರುತ್ತಿದ್ದರೆ ಅದು ವಾದಿರಾಜರ ಕೊಡಗೆ ಲಕ್ಷ್ಮೀರಮಣ ನಾರಾಯಣ ಎಂಬ ಅವರ ಪದಕ್ಕೆ ಸನ್ಯಾಸಿಗಳ ಆಹ್ನಿಕದಲ್ಲೂ ಪುರುಷಸೂಕ್ತದ ಜೊತೆಗೇ ಸ್ಥಾನ ದೊರಕಿದ್ದು ಗಮನೀಯ ನಮನೀಯ, ಸ್ಮರಣೀಯ ಹಯವದನ ನಾಮಾಂಕಿತದಿಂದ ಹಲವಾರು ಕೀರ್ತನೆ ಮತ್ತು ಸುಳಾದಿ ಉಗಾ ಭೋಗಗಳನು ರಚಿಸಿ ಕನ್ನಡ ನುಡಿಯಲ್ಲೂ ತಮ್ಮ ಜಾಣ್ಮೆಯನ್ನು ಹೊರೆಗೆಡಹಿ ಉಭಯಭಾಷಾ ಕವಿ ಕೋವಿದರೆನಿಸಿದ್ದಾರೆ ಇವರ ಕನ್ನಡ ಪ್ರೌಢಿಮೆಗೆ ಒಂದೆರಡು ಉದಾಹರಣೆಗಳು

1 ಲೋಕಭರಿತನೊ। ರಂಗನೇಕ ಚರಿತನೋ। ಕಾತುಜನರ ತರಿದು ತನ್ನೇಕಾಂತ ಭಕ್ತರ ಪೊರೆವ ಕೃಷ್ಣ

2 ತಾಳುವಿಕೆಗಿಂತ ತಪವು ಇಲ್ಲ ಕೇಳಬಲ್ಲವರಿಗೆ ಹೇಳುವೆನು ಸೊಲ್ಲ

3 ಸಾರಿದೆನೋ ನಿನ ವೆಂಕಟರನ್ನು ನೀರಜನಯನನೇ ನಿರ್ಮಲಗುಣರನ

ಇವರ ಕೀರ್ತನೆಯಲ್ಲಿ ದಾಸ್ಯಭಾವಕ್ಕೆ ಪ್ರಾಧಾನ್ಯವಿದ್ದರೂ ಉಚ್ಚರಗ*ಯ ಮಧುರಭಾವವು ಸಖ್ಯವಾತ್ಸಲ್ಯಗಳ ವಿ ಂಚಿನೆಳೆಗಳು ಅಲ್ಲಲ್ಲಿ ಕಂಡುಬರುತ್ತವೆ

4 ಉದಾ ಸೇವಕನೋ ನಾನು। ನಿನ ಯ ಪಾದ। ಸೇವೆ ನೀಡೆಲೋ ನೀನು

ಅನಾದಿಕಾಲದಿಂದ ತಂದೆ ಮಕ್ಕಳನ್ನು ಅಣ್ಣ ತಮ್ಮಂದಿರನ್ನು ಕಲಹಕ್ಕೆ ಗುರಿ ಮಾಡುವ ಹಣದ ಮಹಾತ್ಮೆಯ ನ್ನು ಹೃದಯಂ ಸ್ಪರ್ಶಿಯಾಗಿ ಬಣ್ಣಿಸಿದ್ದಾರೆ

5 ಹಣವೆ ನಿನ ಯ ಗುಣವನಿತು ಬಣ್ಣಿಸಲಿ| ಹಣವಿಲ್ಲದವನೊಬ್ಬ ಹೆಣಕ್ಕಿಂತ ಕಡೆಯಯ್ಯ ಎನ್ನುತ್ತಾರೆ

ದುಷ್ಟನಿಗ್ರಹ ಶಿಷ್ಟಪರಿಪಾಲನೆಗಾಗಿ ವಿಷ್ಣುವು ತಾಳಿದ ದಶಾವತಾರಗಳನ್ನು ಹರಿದಾಸರಲ್ಲಿ ಹಲವರು ಬಣ್ಣಿಸಿದ್ದರೂ ವಾದಿರಾಜರ ದಶಾವತಾರ ವರ್ಣನೆ ವಿಶೇಷ ಬೆಡಗುಳ್ಳದ್ದು ಆಗಿದೆ ಉದಾ

6 ಬಾಲನೇನ। ನಿನ್ನ ಮಗನು ಗೋಪಾಲಕೃಷ್ಣ॥
ನೀರಪೊಕ್ಕು ವೇದತಂದ ಭಾರಪೊತ್ತು ಬೆನ್ನಲ್ಲಿಟ್ಟ।
ಕೋರೆಹಲ್ಲು ತೋರುತಿರುವ ಕ್ರೂರವದನಾಪಾರ ಮಹಿಮ॥
ಮೂರು ಪಾದ ಭೂಮಿ ಬೇಡಿದ ವಿಪ್ರರ ಕರೆ
ಧ ರುಣಿಯಂ ದಾನಮಾಡಿದ ಪರ್ವತಗಳ॥
ತರಿಸಿ ಶರಧಿಯನ್ನು ಕಟ್ಟಿದ ಶ್ರೀ ರಾಮಚಂದ್ರ।
ಜಾರ ಚೋರ ಮಾರನಯ್ಯ॥

ನಾರೇರಚ್ಚಿ ವ ರ ಳು ವಾಡಾ।
ವಾರಿಜಾಕ್ಷ ಹಯವದನ॥
ಏರಿ ಕ ದುರೆ ವೈಹಾಳಿವಾಡಿದ

ಇಲ್ಲೆಲ್ಲಾ ಅವರ ಸಂಗ್ರಹ ಚಾತರ್ಯ ಸ್ಪಷ್ಟವಾಗುತ್ತದೆ

ಹೀಗೆ ವಾದಿರಾಜರ ವೈಕುಂಠವರ್ಣ ೆ ಗ ಂಡಕ್ರಿಯೆ ಸ್ವಷ್ಟಪದ್ಯ ಛ್ರವಾರ ಗೀತೆ ಒಂದೊಂದಕ್ಕೂ ಅವರು ಅನನ್ವಯಾಲಂಕಾರದವರಿಗೆ ಅವರೇ ಹೋಲಿಕೆ ಸಂಗೀತಶಾಸ್ತ್ರಜ್ಞರೂ ಅದ ಇವರು ವಿರಕ್ತಿಗೀತಕ್ಕೆ ಅನಂದ ಭೈರವಿ ಯನಂ ಬಳಸಿ ದರೆ ಮಂಗಲಕ್ಕೆ ಮಧ್ಯಮಾವತಿ ಯನ್ನೂ ಪ ಲ ಪಸೂಚಿಯಾಗಿ ಕೇದಾರಗೌಳ ವನ್ನೂ ಬಳಸುತ್ತಾರೆ ಸಂಗೀತದ 72 ಮೇಳ ಕರ್ತರಾಗಗಳಲ್ಲಿ ಅವರಿಗೆ ಹಿಡಿತವಿದೆ ಅವರು ಮಹಾವಾಗ್ಗೇಯಕ ರರಷ್ಟೇ ಒಲ್ಲದೆ ಶಾಸ್ತ್ರೀಯ ಸಂಗೀತ ಪ್ರವರ್ತಕರೂ ಹೌದು

ವಾದಿರಾಜರ ೦ ಕ್ಷ್ಮೀಶೋಭಾನೆ ಹಾಡು ಸಕಲ ಕಾವ್ಯಗ ಣಗಳಿಂದ ತ ಂಬಿ ತುಳಕುತ್ತಿದ್ದು ಇಂದಿಗೂ ವಿವಾಹಾದಿ ಶ ಭಕಾರ್ಯಗಳಲ್ಲಿ ಅದನು ಹಾಡುವ ಸಂಪ್ರದಾಯ೦ಎದೆ ಇದನ್ನರಿಯ ದ ವೈಷ್ಣವರೇ ಇಲ್ಲ ವೆನ್ನಬಹುದು ಜಹಗೀರದಾ ರನ ಮಗನು ಸರ್ಪಕಚ್ಚಿ ವಿವಾಹದಲ್ಲಿ ಮಡಿದಾಗ ಲಕ್ಷ್ಮೀಶೋಭಾನೆ ಹಾಡಿ ವಾದಿರಾಜರು ಅವನನ್ನು ಬದುಕಿಸಿದರಂತೆ ಈ ರೀತಿ ಸಂಸ್ಕೃತದ ಮಂತ್ರಶಕ್ತಿ ಕನ ಡಕ್ಕೆ ಇದೆ ಎಂದು ತೋರಿಸಿಕೊಟ್ಟವರು ವಾದಿರಾಜರು ಅವ ಕಡೆಯಿಂದ ಬಂದೆ ವಾಜಿವದನನೇ ಎಂಬ ಪದ್ಯವನ್ನು ಅವರು ಭಕ್ತಿಪರವಶತೆಯಿಂದ ಹಾಡಿ ದಾಗ ಹಯವದನ ಮೂರ್ತಿ ಇವರ ಹೆಗಲಮೇಲೆ ಎರಡು ಕಾಲೂರಿ ಮುದ್ದಿಯನ್ನು ಮೆಲ್ಲುತಿದ್ದನಂತೆ

ಕನ್ನಡವರಿಯದ ಕೆಳವರ್ಗದ ಜನಕ್ಕೂ ಪರಮಾತ್ಮನ ಜ್ಞಾನದೊರೆಯಲೆಂಬ ಸದಿಚ್ಛೆಯಿಂದ ಅವರಿಗಾಗಿ ತುಳು ಭಾಷೆಯಲ್ಲಿ ಪಾಡ್ದನ ಗಳನ್ನು ರಚಿಸಿದ ಇವರು ಕವಿ ವೇದಾಂತಿಗಳಷ್ಟೇ ಅಲ್ಲದೆ ದೂರದೃಷ್ಟಿಯುಳ ಸಮಾಜಸ ಧಾರಕರ ೨ ಹೌದು ಪಂಡಿತಮಧ್ಯರಾದಂತೆ ಪಾಪ ರೋದ್ಧಾರಕರೂ ಹೌದು ಅಂತ್ಯಜರಿಗೂ ವಿಷ್ಣು ಭಕ್ತಿ ಇರ ವುದಾದರೆ ಅವರನ್ನ ದೂರವಿಡುವ ಸಂಕೋಚಭಾವನೆ ಇವರಲ್ಲರಲಿಲ್ಲ ಎಂಬುದಕ್ಕೆ ಇವರು ರಚಿಸಿದ ಅಂತ್ಯಜ ಭಾಷಾತ್ಮಕವಾದ ಲೇಲೇಗಾ ಮ ಂತಾದ ಹಾಡೇ ಸಾಕ್ಷಿ

ಹೀಗೆ ಯತಿರಾಜರೂ ಕವಿರಾಜರೂ ಆದ ವಾದಿರಾಜರಂತೆ ಮಹಾಕಾವ್ಯ ಖಂಡಕಾವ್ಯ ಸ್ತೋತ್ರಕಾವ್ಯ ಶಾಸ್ತ್ರಕಾವ್ಯ, ವಿಮರ್ಶೆ ಉಭಯ ಭಾಷಾಕವಿತ್ವ ಶಕ್ತಿ ವ ಎಂತಾದವುಗಳೆಲ್ಲ ಒಬ್ಬರಲ್ಲೆ ಇರುವದು ಅನ್ಯತ್ರದ ರ್ಲಭ ಸಹೃದಯ ರ ಚಿತ್ತ ಭಿತ್ತಿಯಮೇಲೆ ಅಚ್ಚೊತ್ತಿ ನಿಲ್ಲುವಂತೆ ಪ್ರಭಾವಿಯಾಗಿ ಕ ವ್ಯರಚಿಸಬಲ್ಲ

ಉಪದೇಶ ನೀಡಬಲ್ಲ ಧರ್ಮತತ್ವ ಬೀರಬಲ್ಲ ಆಳವಾದ ತಪೋಬಲ ಜ್ಞಾನಬಲ ವಾದಿರಾಜರಲ್ಲಿತ್ತು. ತಮ್ಮ ರಾಜಕೃತಿಗಳಿಂದ ಕವಿರಾಜರಾಗಿ ಮೆರೆದು! ಹೊರನಾಡಿನಲ್ಲಿ ಕನ್ನಡದೇಶದ ಕವಿಕುಂಜರನಾಗಿಮೆರೆದು ಮಾಘ ಭಾರವಿಗಳಿಗೆ ಹ್ಯೊ-ಕೈಯಾಗಿ ಹೆಗಲೆಣೆಯಾಗಿ ನಿಂತವರೆಂದರೆ ವಾದಿರಾಜರೊಬ್ಬರೇ ಸರಿ

## ಆಧಾರ ಗ್ರಂಥಗಳು

1 ರುಕ್ಮಿಣೀಶ ವಿಜಯ ಭಾಗ 1 2, 3, 4
2 ತೀರ್ಥಪ್ರಬಂಧ—ಸಂಸ್ಕೃತ ಮೂಲ ಮತ್ತು ವ್ಯಾಖ್ಯಾನ ಸಹಿತ
3 ದಶಾವತಾರ ಸ್ತುತಿ—ಅಶ್ವಧಾಟೀ (ಎಸ್ ವಿ ಭೀಮಭಟ್ಟ)
4 ದ್ವೈತ ವೇದಾಂತದ ಇತಿಹಾಸ—ಡಾ ಬಿ ಎನ್ ಕೆ ಶರ್ಮಾ
5 ವಾದಿರಾಜರ ಹಾಡುಗಳು-ಸಂ ಕಾವ್ಯಪ್ರೇಮಿ ಸಮಾಜ ಪುಸ್ತಕಾಲಯ ಧ ರವಾಡ
6 ವಾದಿರಾಜ ಗುರು ಸಾರ್ವಭೌಮರ ಕಿರುಪರಿಚಯ ಮತ್ತು ಕೀರ್ತನೆಗಳು—ವಾದಿರಾಜ ಸೇವಾ ಸಮಿತಿ ಕೋಟೇಶ್ವರ
7 ತತ್ವವಾದದ ಕೆಲವು ಸಂಪುಟಗಳು

# ಮಹಿಪತಿದಾಸರು

ಎಂ ಜಯಂತಿ ಬಾಯಿ

## ಪೀಠಿಕೆ

ಕ್ರಿ ಶ 13ನೆಯ ಶತಮಾನದಲ್ಲಿ ಶ್ರೀನರಹರಿ ತೀರ್ಥರಿಂದ ದಾಸಸಾಹಿತ್ಯದ ವ್ಯವಸ್ಥಿತ ಬೆಳವಣಿಗೆ ಆರಂಭವಾಯಿತು ಶ್ರೀಮಧ್ವಾಚಾರ್ಯರ ಅನಂತರ ಪೀಠಾರೋಹಣ ಮಾಡಿದ ಶ್ರೀನರಹರಿತೀರ್ಥರು ಮಧ್ವ ಸಿದ್ಧಾಂತವನ್ನು ಸಾರುವ ಅನೇಕ ಕೀರ್ತನೆಗಳನ್ನು ರಚಿಸಿದ್ದಾರೆ ಅವರ ಅನಂತರ ಬಂದ ವ್ಯಾಸರಾಯರು ಪುರಂದರದಾಸರು ಮುಂತಾದ ಕರ್ನಾಟಕದ ಇತರ ಹರಿದಾಸರೆಲ್ಲರೂ ಅವರ ಪರಂಪರೆ ಯನ್ನು ಮುಂದುವರಿಸಿಕೊಂಡು ಒಂದರು ತಮ್ಮ ಅಮೂಲ್ಯ ಕೀರ್ತನೆಗಳಿಂದ ಜನರ ಮನವನ್ನು ಸೂರೆಗೊಂಡರು ಆ ಕಾಲದಲ್ಲಿ ಪ್ರಚಲಿತವಿದ್ದ ಧಾರ್ಮಿಕ ಕ್ಷೋಭೆ ಸಾಮಾಜಿಕ ಅಶಾಂತಿ ಪರಸ್ಪರ ದ್ವೇಷಾಸೂಯೆ ವೈಷಮ್ಯಗಳಿಂದ ಹಾಳಾಗುತ್ತಿದ್ದ ಅಂದಿನ ಸಮಾಜವನ್ನು ಕಂಡು ಅವರು ವ್ಯಾಕುಲರಾಗಿದರು ಅದರ ಉದ್ಧಾರ ಕ್ಕಾಗಿ ಜನತೆಗೆ ಅರ್ಥವಾಗಬಲ್ಲ ಕೀರ್ತನೆಗಳನ್ನು ರಚಿಸಿದರು ಅವರ ಅನಂತರ ಆಗಿ ಹೋದ ಕನಕದಾಸರು ಬೋಧನಾಪ್ರದವಾದ ಕೀರ್ತನೆಗಳನ್ನು ರಚಿಸಿದರು ಅಲ್ಲದೆ ಮೋಹನ ತರಂಗಿಣಿ ರಾಮಧಾನ್ಯ ಚರಿತೆಗಳೆಂಬ ಕಾವ್ಯಗಳನ್ನು ರಚಿಸಿದರು

ಹರಿದಾಸ ಸಾಹಿತ್ಯದ ಅಭ್ಯಾಸದ ದೃಷ್ಟಿಯಿಂದ ಶ್ರೀನರಹರಿ ತೀರ್ಥರಿಂದ ಕನಕದಾಸರ ವರೆಗಿನ ಕಾಲವನ್ನು ದಾಸಸಾಹಿತ್ಯದ ಮೊದಲ ಘಟ್ಟವೆಂದು ಕರೆಯುವು ದುಂಟು ಅಲ್ಲಿಂದ ಮುಂದೆ ಶ್ರೀಮಹಿಪತಿದಾಸರಿಂದ ದ್ವಿತೀಯ ಘಟ್ಟ ಆರಂಭ ವಾಯಿತೆನ್ನಬಹುದು ಈ ದ್ವಿತೀಯ ಘಟ್ಟದಲ್ಲಿ ಶ್ರೀಮಹಿಪತಿದಾಸರಿಂದ ವಿಜಯ ದಾಸರ ವರೆಗೆ ಅನೇಕ ಮಂದಿ ದಾಸರು ಕೀರ್ತನೆಗಳನ್ನು ರಚಿಸಿದರು ಸಂಗೀತ ಸಾಹಿತ್ಯ ನೀತಿಬೋಧೆ ಮತ ಬೋಧೆ ಸಮಾಜರಚನೆ ಈ ವಿಷಯಗಳಲ್ಲಿ ಕರ್ನಾಟ ಕದ ಹರಿದಾಸರು ಅನುಪಮ ಸೇವೆ ಸಲ್ಲಿಸಿದ್ದಾರೆ ಸಮಾಜದಲ್ಲಿ ನೈತಿಕ ಉನ್ನತಿ ಯನು ಸಾಧಿಸುವುದೇ ಅವರ ಗುರಿಯಾಗಿತ್ತು ಹೀಗಾಗಿ ದಾಸರ ಕೀರ್ತನೆಗಳಲ್ಲಿ ಮತ ಪ್ರಚಾರ ಗೌಣವಾಗಿರುತಿತ್ತು ನೀತಿ ಬೋಧೆ ಶುದ್ಧಾಚರಣೆ ಹರಿಭಕ್ತಿಸಾಧನೆ ಗಳೇ ಪ್ರಮುಖವಾಗಿ ಕಾಣಸಿಕೊಳ್ಳುತ್ತವೆ

ಶ್ರೀ ಮಹಿಪತಿದಾಸರ ಕಾಲ ಹರದಾಸ ಸಾಹಿತ್ಯೇತಿಹಾಸದಲ್ಲಿಯೇ ತುಂಬ ಸಂದಿಗ್ಧವಾದ ಕಾಲವೆಂದು ಹೇಳಲಾಗುತ್ತದೆ ಪುರಂದರ ದಾಸರ ಕಾಲವು ಗಿದಿತ್ತು ವಿಜಯದಾಸರ ಕಾಲವಿನೂ ಆರಂಭವಾಗಿರಲಿಲ್ಲ ಅಂದರೆ ಕ್ರಿ ಶ 1564ರಿಂದ 1687ರ ವರೆಗೆ ಹರಿದಾಸ ಸಾಹಿತ್ಯದಲ್ಲಿ ಏನು ಕೃಷಿ ನಡೆಯಿತೆಂದು ತಿಳಿದಿರಲಿಲ್ಲ ಆದರೆ

ಮಹಿಪತಿದಾಸರು ಮತ್ತು ಅವರ ಮಕ್ಕಳು ಈ ಕಾಲದಲ್ಲಿ ವಿಪುಲ ಹರಿದ ಸ ಸಾಹಿತ್ಯ ನಿರ್ಮಾಣಮಾಡಿದ್ದಾರೆ ಎಂದೂ ಅದ್ದರಿಂದ ಅದು ತಟಸ್ಥ ಅವಧಿಯಲ್ಲ ವೆಂದು ಈಗ ತಿಳಿದಿದೆ

## ಶ್ರೀ ಮಹಿಪತಿರಾಯರ ಜೀವನ ಪರಿಚಯ

ಕ್ರಿ ಶ ಹದಿನೇಳನೆಯ ಶತಮಾನದಲ್ಲಿ ಬಿಜಾಪುರ ಜಿಲ್ಲೆಯಲ್ಲಿ ರುಕ್ಮಿಣೀ ಪಂಡಿತರು ಸಿಂದಗಿಯ ಜಕ್ಕಪ್ಪಯ್ಯನವರು ಯಳಗಿಯ ರಾಮಯ್ಯನವರು ಅಗರ ಖೇಡದ ಕೃಷ್ಣದ್ವೈಪಾಯನರು ಮತ್ತು ಕಾಖಂಡಕಿಯ ಮಹಿಪತಿರಾಯರು ಎಂಬ ಐವರು ಮಹಾಪುರುಷರಿದ್ದರು ಈ ಐವರು ಮಹಾ ಪುರುಷರೂ ಏಕಪ್ರಕಾರ ವಾಗಿ ಆಧ್ಯಾತ್ಮಿಕ ಪ್ರಭೆಯನ್ನು ಉಜ್ವಲವಾಗಿ ಬೆಳಗಿಸಿದ್ದರು ಈ ಐವರು ಮಹಾ ಪುರುಷರನ್ನು ಅವರವರ ಗುಣಕ್ಕನುಗುಣವಾಗಿ ಅನುಕ್ರಮವಾಗಿ ರೊ ಗಿ ಜೋಗಿ ಯೋಗಿ ಭೋಗಿ ಮತ್ತು ತ್ಯಾಗಿ ಎಂದು ಕರೆಯುವುದು ವಾಡಿಕೆಯಾಗಿತ್ತು ಆ ಕಾಲದಲ್ಲಿ ಸಾರವಾಡದ ಶಹಾನಂಗ–ಶಹಾನಂಗಿ ಎಂಬ ಅಣ್ಣತಂಗಿಯರು ಶ್ರೇಷ ಅನುಭಾವಿಗಳೆಂದು ಪ್ರಸಿದ್ಧರಾಗಿದ್ದರು ತ್ಯಾಗಿಗಳೆನ್ನಿಸಿದ ಶ್ರೀ ಮಹಿಪತಿರಾಯರ ವಿಚಾರ ರುಕ್ಮಿಣಿ ಪಂಡಿತರನ್ನು ಕುರಿತು ಮರಾಠಿಭಾಷೆಯಲ್ಲಿ ರಚಿತವಾದ ಗುರು ಮಾಲಿಕಾ ಎಂಬ ಗ್ರಂಥದಲ್ಲಿಯೂ ಅವರ ಮಗ ಶ್ರೀ ಕೃಷ್ಣರಾಯ ಮತ್ತು ಮರಿ ಮಕ್ಕಳ ದ ಶ್ರೀ ಕೃಷ್ಣಪ್ಪಯ್ಯನವರು ರಚಿಸಿದ ಇಪ್ಪತ್ತು ನುಡಿಗಳನ್ನೊಳಗೊಂಡ ಸ್ತೋತ್ರದಲ್ಲಿಯೂ ಸ್ವಲ್ಪ ತಿಳಿದು ಬರುತ್ತದೆ ಬಾಗಲಕೋಟೆಯ ಕಾಥವಟೆ ಮನೆತನಕ್ಕೆ ಸೇರಿದ ರಂಗಭಟ್ಟರು ಕಾಶೀಯಾತ್ರೆಯನ್ನು ಮುಗಿಸಿ ಬರುವಾಗ ದಾರಿ ಯಲ್ಲಿ ಅಥಣಿ ತಾಲ್ಲೂಕಿನ ಐಗಳಿಗ್ರಾಮದ ಕರಣಿಕರ ಒಬ್ಬಳೇ ಮಗಳನ್ನು ಮದುವೆ ಯಾದರು ಕರಣಿಕರಿಗೆ ಬೇರೆ ಮಕ್ಕಳಿಲ್ಲದಿರುವುದರಿಂದ ರಂಗಭಟ್ಟರು ಮಾವನ ಮನೆಯಲ್ಲಿಯೇ ನಿಂತರು ರಂಗಭಟ್ಟರ ಹಿರಿಯ ಮಗ ಶ್ರೀ ಕೋನೇರರಾಯರಿಗೆ ಇಬ್ಬರು ಗಂಡುಮಕ್ಕಳು ಮೊದಲನೆಯವರು ಗುರುರಾಯ ಎರಡನೆಯವರೇ ಶ್ರೀಮಹಿಪತಿರಾಯರು

ಶ್ರೀಮಹಿಪತಿರಾಯರು ಸು ಕ್ರಿ ಶ 1611ರಲ್ಲಿ ಹುಟ್ಟಿರಬಂತೆ ತೋರು ತ್ತದೆ ತಂದೆ ಕೊನೇರರಾಯರು ಸಂಸ್ಕೃತವನ್ನ ಆಳವಾಗಿ ಅಭ್ಯಾಸಮಾಡಿದ್ದರಿಂದ ಬಿಜಾಪುರದಲ್ಲಿ ವೈದಿಕವೃತ್ತಿಯಿಂದ ಜೀವನ ನಡೆಸುತ್ತಿದ್ದರು ಶ್ರೀಮಹಿಪತಿಯವರ ಮನೆತನದ ಆಚಾರ್ಯರಾದ ಕೊಲ್ಹಾರದ ಪ್ರಹ್ಲಾದಕೃಷ್ಣಾಚಾರ್ಯರು ಶ್ರೀಮಹಿ ಪತಿಯ ಉಪನಯನ ವಿಧಿಯನ್ನು ಮಾಡಿಸಲು ಆಗಮಿಸಿದ್ದರು ಬ್ರಹ್ಮೋಪದೇಶ ವಾದ ಅನಂತರ ಅವರು ಕುತೂಹಲದಿಂದ ಬಾಲಕ ಮ ಹಿಪತಿಯ ಜಾತಕವನ್ನು ನೋಡಿದರು ಈ ಬಾಲಕನ ಜನ್ಮಕುಂಡಲಿಯಂತೆ ಈತನಿಗೆ ಮುಂದೆ ಉತ್ತಮ ಭವಿಷ್ಯವಿದೆ ಮುಂದೆ ಬಹಳ ಪ್ರವರ್ಧಮಾನಕ್ಕೆ ಬರುತ್ತಾನೆ ಎಂದು ತಿಳಿದ ಅವರು

ಮಹಿಪತಿಯತಂದೆ ಕೊನೇರರಾಯರಿಗೆ ಸಂತೋಷದಿಂದ ಮಹಿಪತಿಯು ಮುಂದೆ ರಾಜಾಸ್ಥಾನದ ಗೌರವಕ್ಕೆ ಪಾತ್ರನಾಗುವನೆಂದೂ ಅನಂತರ ಶ್ರೇಷ್ಠ ಯೋಗಿಯಾಗುವನೆಂದೂ ತಿಳಿಸಿದರು. ಇದನ್ನು ಕೇಳಿ ತಂದೆ ಕೊನೇರರಾಯರಿಗೆ ತುಂಬ ಸಂತೋಷವಾಯಿತು. ಅವರು ಮಹಿಪತಿಗೆ ತಮ್ಮ ಶಕ್ತ್ಯನುಸಾರವಾಗಿ ಸಮಸ್ತ ವೈದಿಕ ವಿದ್ಯೆಯನ್ನು ಕಲಿಸಿದರು.

ಅನಂತರ ಕೊನೇರಿರಾಯರು ಬಿಜಾಪುರಕ್ಕೆ ಬಂದು ನೆಲಸಿದರು. ಆಗ ಅವರ ಕೀರ್ತಿ ಎಲ್ಲೆಡೆ ಹರಡಿತು. ತಂದೆಯ ಕೀರ್ತಿ ಪಸರಿಸುತ್ತ ಸ್ಥಾನಮಾನ ಏರಿದಂತೆ ಮಗ ಮಹಿಪತಿಯ ವಿದ್ಯೆ, ಸಾಮರ್ಥ್ಯಗಳು ಜನರಿಗೆ ಕಾಣಲಾರಂಭಿಸಿದವು. ಅಷ್ಟರಲ್ಲಿಯೇ ಸಂಸ್ಕೃತ ಕನ್ನಡ ಹೀಗೆ ಎರಡೂ ಭಾಷೆಗಳಲ್ಲಿ ಪಾರಂಗತರಾಗಿದ್ದ ಮಹಿಪತಿದಾಸರು ಬಿಜಾಪುರದಲ್ಲಿ ಮರಾಠಿ, ಉರ್ದು, ಫಾರಸೀ ಮುಂತಾದ ಭಾಷೆಗಳನ್ನು ಕಲಿತರು. ಆಗ ಬಿಜಾಪುರದಲ್ಲಿ ಆದಿಲ್ ಶಾ ನವಾಬನಾಗಿದ್ದ. ನವಾಬನ ದಿವಾನನಾಗಿದ್ದ ಖವಾಸಖಾನನ ದೃಷ್ಟಿಗೆ ಪ್ರತಿಭಾಶಾಲಿ ಯುವಕ ಮಹಿಪತಿದಾಸರು ಕಾಣಿಸಿದರು. ಅವರು ಕೂಡಲೇ ಮಹಿಪತಿದಾಸರನ್ನು ತನ್ನ ಕರಣಿಕರನ್ನಾಗಿ ನೇಮಿಸಿಕೊಂಡರು. ಇದರಿಂದ ಮಹಿಪತಿ ದಾಸರ ಮನೆಯಲ್ಲಿನ ಬಡತನ ಮಾಯವಾಯಿತು. ಸಾತ್ವಿಕ ಸ್ವಭಾವದ ಮಹಿಪತಿದಾಸರು ಹೀಗೆ ತಮಗೆ ದೊರೆತ ಹೊಸ ಹುದ್ದೆಯ ಕೆಲಸದ ಜೊತೆಗೆ ದೇವತಾರ್ಚನೆ ಮತ್ತು ತಂದೆತಾಯಿಯರ ಸೇವೆಯನ್ನು ಆನಂದದಿಂದ ಮಾಡತೊಡಗಿದರು. ಆಗ ಕಲ್ಬುರ್ಗಿಯ ದೇಶಮುಖರು ತಮ್ಮ ಒಬ್ಬಳೇ ಮಗಳಾದ ತಿಮ್ಮವ್ವನನ್ನು ಮಹಿಪತಿದಾಸರಿಗೆ ವೈಭವದಿಂದ ಮದುವೆ ಮಾಡಿಕೊಟ್ಟರು. ಒಳ್ಳೆಯ ಸ್ವಭಾವದ ತಿಮ್ಮವ್ವ ಮಹಿಪತಿಗೆ ತಂದೆತಾಯಿಯ ಸೇವೆಯಲ್ಲಿ ಹಾಗೂ ಅತಿಥಿ ಅಭ್ಯಾಗತರ ಸೇವೆಯಲ್ಲಿ ತುಂಬ ನೆರವು ನೀಡಿದರು. ಅವರಿಬ್ಬರ ಸಾತ್ವಿಕ ಜೀವನಕ್ಕೆ ಪರಮಾತ್ಮನ ಕೃಪೆಯೂ ದೊರೆಯಿತು. ಹಾಗಾಗಿ ಅವರ ಜೀವನವು ಚಿನಕ್ಕೆ ಮಿರಗ ಕೊಟ್ಟಂತಾಯಿತು. ಮಗನ ಖ್ಯಾತಿಯನ್ನು ವೈಭವವನ್ನು ಕಂಡ ಕೊನೇರಿದಂಪತಿಗಳು ಆನಂದ ತುಂದಿಲರಾಗಿ ಸಂತೃಪ್ತರಾಗಿ ಕೆಲಕಾಲಾನಂತರ ನಿಧನರಾದರು. ಕುಲಪುರೋಹಿತರಾದ ಪ್ರಹ್ಲಾದ ಕೃಷ್ಣಾಚಾರ್ಯರು ಆಗಮಿಸಿದರು. ಅಂತಿಮಕ್ರಿಯೆಗಳನ್ನೆಲ್ಲ ಯಥಾ ವಿಧಿಯಾಗಿ ನೆರವೇರಿಸಿದರು.

ಮಹಿಪತಿದಾಸರು ತಮ್ಮ ಕೆಲಸಕಾರ್ಯಗಳಿಂದ ದಾಕ್ಷಿಣ್ಯ ಚಾತುರ್ಯಗಳಿಂದ ಖವಾಸಖಾನರ ಪ್ರೀತ್ಯಾದರಗಳಿಗೆ ಪಾತ್ರರಾಗಿದ್ದರು. ಖವಾಸಖಾನರಿಗೆ ಮಹಿಪತಿ ದಾಸರ ಮೇಲೆ ಎಷ್ಟರ ಮಟ್ಟಿಗೆ ವಿಶ್ವಾಸ ಮೂಡಿತ್ತೆಂದರೆ ತಮ್ಮ ಮನೆಯ ಕಾರುಬಾರವನ್ನೆಲ್ಲ, ಅವರು ಮಹಿಪತಿದಾಸರಿಗೆ ವಹಿಸಿಕೊಟ್ಟು, ತಾವು ಬಾದಶಹರ ದರ್ಬಾರಿನ ಕೆಲಸವನ್ನು ಮಾತ್ರ ಮಾಡುತ್ತಿದ್ದರು. ಒಂದು ದಿನ ಆಸ್ಥಾನದಲ್ಲಿ ಯಾವುದೋ ಲೆಕ್ಕದ ತೊಡಕು ಉಂಟಾಯಿತು. ಬಾದಶಹರಿಗೆ ಆ ಪತ್ರದ ವ್ಯವಹಾರ ತಿಳಿಯಲಿಲ್ಲ. ಖವಾಸಖಾನರಿಗೂ ಅದನ್ನು ಬಾದಶಹರಿಗೆ ಸರಿಯಾಗಿ ಮನ

ವರಿಕೆ ಮಾಡಿಕೊಡಲು ಸಾಧ್ಯವಾಗಲಿಲ್ಲ ಆಗ ಖವಾಸಖಾನನು ಮಹಿಪತಿದಾಸರನ್ನು ಕರೆಸಿ ಆ ವಿಷಯ ತಿಳಿಸಿ ಬಾದಶಹರಿಗೆ ಆ ಲೆಕ್ಕವನ್ನು ಸರಿಯಾಗಿ ತಿಳಿಸಿಕೊಟ್ಟು ಬರಬೇಕೆಂದು ಆಜ್ಞೆ ಮಾಡಿದನು ಯಜಮಾನರ ಅಪ್ಪಣೆಯಂತೆ ಮಹಿಪತಿದಾಸರು ಭಗವಂತನನ್ನು ನೆನೆದು ಒಳಕೆ ಬಾದಶಹರಲ್ಲಿಗೆ ಹೋಗಿ ಅವರಿಗೆ ಆ ಲೆಕ್ಕದ ವ್ಯವಹಾರದಲ್ಲಿನ ತೊಡಕನ್ನು ಬಿಡಿಸಿಕೊಟ್ಟು ಸಮಾಧಾನಪಡಿಸಿದರು ಮಹಿಪತಿದಾಸರ ಗಾಂಭಿರ್ಯ ಬುದ್ಧಿ ಚಾತುರ್ಯ ಮಾತಿನ ರೀತಿ ಸೌಜನ್ಯಗಳನ್ನು ಕಂಡು ಬಾದಶಹರು ಅವರಿಗೆ ಮಾರು ಹೋಗಿ ಅವರನ್ನು ತಮ್ಮ ಬಳಿಯಲ್ಲಿಯೇ ಇಟ್ಟುಕೊಳ್ಳಬಯಸಿದರು ಕೂಡಲೇ ಬಾದಶಹರು ಮಹಿಪತಿದಾಸರ ಯಜಮಾನರಾಗಿದ್ದ ಖವಾಸಖಾನರನ್ನು ಕರೆಯಿಸಿ ಮಹಿಪತಿದಾಸರ ಗುಣವನು ಕೊಂಡಾಡಿದರು ಮತ್ತು ಮಹಿಪತಿಗೆ ತಮ್ಮ ಅರಮನೆಯಲ್ಲಿಯೇ ಕೆಲಸಕೊಡುವಂತೆ ಹೇಳಿದರು ಬಾದಶಹರ ನಿರ್ಣಯ ದಿಂದ ಖವಾಸಖಾನರಿಗೆ ಸಂತೋಷವಾಯಿತು ಬಾದಶಹರು ನೀಡಿದ ವಸ್ತ್ರಾಭರಣಗಳನ್ನು ತಂದು ಮಹಿಪತಿರಾಯರಿಗೆ ಒಪ್ಪಿಸಿದ ಖವಾಸಖಾನರು ತಮ್ಮ ದಿವಾನರಾಗುವ ಪೂರ್ವದ ಅರಸನ ಆಪ್ತಕಾರ್ಯದರ್ಶಿಯ ಹುದ್ದೆಯನ್ನು ಕೊಡಿಸಿದರು ಮಹಿಪತಿ ರಾಯರು ತಮಗೆ ನೀಡಿದ ಹುದ್ದೆಯ ಕೆಲಸವನ್ನು ಅತ್ಯಂತ ದಕ್ಷತೆಯಿಂದ ನಿರ್ವಹಿಸಿದರು ಅವರ ಕಾರ್ಯನಿರ್ವಹಣಾಕೌಶಲವನ್ನು ಕಣ್ಣಾರೆ ಕಂಡ ಬಾದಶಹರು ಸುಪ್ರೀತರಾದರು ಕೆಲವೇ ವರ್ಷಗಳಲ್ಲಿ ಬಾದಶಹರು ಮಹಿಪತಿರಾಯರಿಗೆ ದಿವಾನರ ಪದವಿಯನ್ನು ದಯಪಾಲಿಸಿದರು ಕುಲಗುರುಗಳ ಭವಿಷ್ಯಕಥನ ಸತ್ಯವಾಯಿತು ಕರಣಿಕ ಮಹಿಪತಿಯು ದಿವಾನಮಹಿಪತಿರಾಯರಾದರು ಮಹಿಪತಿರಾಯರು ದಿವಾನರಾದುದು ಹೇಗೆ ಎಂಬುದನ್ನು ಗುರುಮಾಲಿಕೆಯಲ್ಲಿ ಸುಂದರವಾಗಿ ಬಣ್ಣಿಸಲಾಗಿದೆ

ಹೀಗೆ ಮಹಿಪತಿರಾಯರ ಭಾಗ್ಯ ಅತ್ಯುನ್ನತ ಹಂತವನು ತಲುಪಿದರೂ ಇದರಿಂದ ಮಹಿಪತಿರಾಯರ ಸ್ವಭಾವದಲ್ಲಾಗಲಿ ನಡತೆಯಲ್ಲಾಗಲೀ ಯಾವ ವ್ಯತ್ಯಾಸವೂ ಆಗಲಿಲ್ಲ ಅದಕ್ಕೆ ಬದಲಾಗಿ ಅವರು ಮತ್ತಷ್ಟು ವಿನಮ್ರರಾದರು ಒಂದಿಷ್ಟೂ ಗರ್ವಪಡದೆ ಅಹಂಕಾರತೋರದೆ ತುಂಬ ನ್ಯಾಯದಿಂದ ತಮ್ಮ ಹಿರಿಯಹೊಣೆಯನ್ನು ನಿರ್ವಹಿಸಿದರು ತುಂಬ ಕರುಣೆತೋರಿ ಎಲ್ಲವರ್ಗದ ಪ್ರಜೆಗಳಿಗೆ ಸುಖ ಸಂತೋಷವನ್ನು ಉಂಟುಮಾಡಿದರು

ಮನೆಯಲ್ಲಿ ಎಂದಿನಂತೆ ಸಾಧುಸಂತರಿಗೆ ಅತಿಥಿ ಅಭ್ಯಾಗತರಿಗೆ ಮರ್ಯಾದೆ ಸಲ್ಲಿಸುತ್ತ ಯಾಚಿಸಿದವರಿಗೆ ಕೈತುಂಬ ನೀಡುತ್ತ ನಿತ್ಯನೈಮಿತ್ತಿಕ ಧಾರ್ಮಿಕ ಕಾರ್ಯಗಳ ಜೊತೆಗೆ ಸದಾಕಾಲ ಶ್ರೀ ಹರಿಯ ಧ್ಯಾನದಲ್ಲಿಯೇ ಕಾಲ ಕಳೆಯುತ್ತಿದ್ದ ಮಹಿಪತಿರಾಯರು ಹೀಗೆ ಹದಿನೈದು ವರ್ಷ ಕಳೆದರು ಇಷ್ಟೆಲ್ಲ ಭಾಗ್ಯ ಲಭಿಸಿದ್ದರೂ ಮಹಿಪತಿರಾಯರಿಗೆ ಸಂತಾನಭಾಗ್ಯ ಮಾತ್ರ ಲಭಿಸಿರಲಿಲ್ಲ ಈ ಬಗ್ಗೆ ಮಹಿಪತಿರಾಯರು ದುಃಖಪಡಲಿಲ್ಲ ಆದರೆ ಅವರ ಪತ್ನಿ ತಿಮ್ಮವ್ವನಿಗೆ ಮಾತ್ರ ಈ ಚಿಂತೆ ಒಳಗೆ ಕೊರೆಯತೊಡಗಿತು

ಅದೇ ಸಂದರ್ಭದಲ್ಲಿ ನೆರೆಯ ಸಾರವಾಡ ಗ್ರಾಮಕ್ಕೆ ಲೋಕಾಪುರದ ಭಾಸ್ಕರ ಸ್ವಾಮಿಗಳೆಂಬ ಯ ತಿವರ್ಯರು ಆಗಮಿಸಿದ್ದಾರೆ ಎಂಬ ಸುದ್ದಿ ಅವರಿಗೆ ತಿಳಿಯಿತು ಅವರ ಅವಧೂತ ಪಂಥದ ಮಹಾನ್‌ಯೋಗಿಗಳೆಂದೂ ಅನುಭಾವ ಮತ್ತು ಯೋಗ ಸಾಮರ್ಥ್ಯ ಹೊಂದಿದವರೆಂದೂ ಎಲ್ಲೆಡೆ ಖ್ಯಾತಿಹರಡಿತು ಅವರು ನಿಂತ ಸಾರವಾಡ ಒಂದು ಯಾತ್ರಾಸ್ಥಳವೇ ಆಗಿ ಪರಿಣಮಿಸಿತು ಸಾವಿರಾರು ಮಂದಿ ಭಕ್ತರು ಅವ ರಿಂದ ಅನುಗ್ರಹ ಪಡೆಯಲೆಂದು ಅವರತ್ತ ಹೋಗುತ್ತಿದ್ದಾರೆಂಬ ಸ ದ್ದಿ ಮಹಿಪತಿ ರಾಯರ ಪತ್ನಿಗೆ ತಿಳಿಯಿತು ಸಂತಾನಭಾಗ್ಯ ಲಭಿಸಿಲ್ಲವೆಂಬ ಚಿಂತೆಯಿಂದ ವ್ಯಾಕುಲ ಳಾಗಿದ್ದ ಆ ತಾಯಿ ತಿಮ್ಮವ್ವ ತಮ್ಮ ಚಿಂತೆಯನ್ನು ಪರಿಹರಿಸಿಕೊಳ್ಳ ಲೆಂದು ಭಾಸ್ಕರ ಸ್ವಾಮಿ ಗಳಿದ್ದ ಸಾರವಾಡಕ್ಕೆ ಹೋಗತೊಡಗಿದರು ಆದರೆ ಆರು ತಿಂಗಳಾದರೂ ತಿಮ್ಮವ್ವನಿಗೆ ಸಾಕ್ಷಾತ್ ಸ್ವಾಮಿಗಳ ದರ್ಶನವಾಗಲಿಲ್ಲ ಆದರೂ ಸ್ವಾಮಿಗಳ ದರ್ಶನ ಮಾಡಬೇಕೆಂಬ ಪ್ರಬಲ ನಿಷ್ಠೆ ಯಿ ಂದ ಆ ಸಾಧ್ವಿ ತಿಮ್ಮವ್ವ ಸ್ವಾಮಿಗಳ ಅನುಗ್ರಹ ಪಡೆಯುವವರೆಗೂ ಸಾರವಾಡಕ್ಕೆ ಹೋಗಿ ಬರಬೇಕೆಂಬ ಛಲತೊಟ್ಟರು ಆ ಸಾಧ್ವಿಯ ಛಲ ಸ್ವಾಮಿಗಳಿಗೆ ತಿಳಿಯಿತೋ ಎಂಬಂತೆ ಒಂದು ದಿನ ಸಮಾಧಿಯಿಂದ ಎದ್ದ ಸ್ವಾಮಿಗಳು ತಿಮ್ಮವ್ವನವರಿದ್ದೆಡೆಗೆ ಬಂದು ಆಕೆಯೆ ಡೆಗೆ ಕೃಪಾಕಟಾಕ್ಷ ಬೀರಿ ತಾಯಿ ನೀವು ಸತಿಪತಿಯರೀರ್ವರೂ ಕೂಡಿಕೊಂಡು ಇಲ್ಲಿಗೆ ಬನ್ನಿ ಭಗವಂತನು ನಿಮ್ಮ ಮನೋರಥವನ್ನು ಪೂರ್ಣವಾಡುವನು ಚಿಂತಿಸಬೇಡಿ ಎಂದರು ಅದೇ ಸಮಯಕ್ಕೆ ಸರಿಯಾಗಿ ಮಹಿಪತಿರಾಯರು ವಿಚಾರ ಮಗ್ನರಾಗಿ ಅರಮನೆಯ ಹೊರ ಮಗ್ಗುಲಿನ ಕಂದಕದಾಟುತ್ತಿದ್ದ ಹಾಗೆ ಶಹಾನಂಗಾ ಎಂಬ ಖ್ಯಾತಿವೆತ್ತ ಫಕೀರನ ಭೇಟಿಯಾಯಿತು ಆ ಫಕೀರನು ನೋಡಲು ಹುಚ್ಚನಂತಿದ್ದರೂ ಅವನು ಜ್ಞಾನಿ ಯೆಂದು ವಿಜಯಪುರದಲ್ಲಿ ಎಲ್ಲರಿಗೂ ತಿಳಿದಿತ್ತು ಮಹಿಪತಿರಾಯರು ಕುದುರೆ ಯಿಂದಿಳಿದು ವಿನಮ್ರರಾಗಿ ಶಹಾನಂಗಾ ತಮ್ಮನ ಕರೆಯುತ್ತಿರುವುದನ್ನು ಕಂಡು ಅದನ್ನು ಒಂದು ಶ ಭಶಕ ನನೆಂದು ಭಾವಿಸಿ ಅವರೆಡೆಗೆ ಹೋದರು ಶಹಾನಂಗಾ ತನ್ನ ಕೃಪಾದೃಷ್ಟಿಯಿಂದ ರತ್ನಪರೀಕ್ಷಕನು ರತ್ನಗಳನು ಪರೀಕ್ಷಿಸುವಂತೆ ಮಹಿಪತಿ ರಾಯ ರನ್ನು ನೋಡಿ ಇದು ದಿಟವಾದ ವಸ್ತು! ಸಟೆಯಾದುದಲ್ಲ ಎಂದು ತನ ಲ್ಲಿಯೇ ಹೇಳಿಕೊಂಡು ರಾಯ ರ ಕೈಯಲ್ಲಿ ಉಂಗುರವಿದ್ದುದನ್ನು ಕಂಡರು ರಾಯ ರನ್ನು ಪರೀಕ್ಷಿಸಲಿಕ್ಕಾಗಿಯೋ ಏನೋ ಫಕೀರನು ಮಹಿಪತಿರಾಯರಿಂದ ಆ ಉಂಗುರವನ್ನು ಕೆ ಳಿ ಪಡೆದು ಹಾಗೂ ಹೀಗೂ ತಿರುಗಿಸಿನೋಡಿ ಕಂದಕದಲ್ಲಿ ಎಸೆದು ಬಿಟ್ಟನು ರಾಯ ರ ಮುಖ ಕಳೆಗುಂದಿತು ದಿಕ್ಕುಗಾಣದಂತಾಯಿತು ರಾಯರು ಸ್ತಂಭೀ ಭೂತರಾಗಿ ನಿಂತುಬಿಟ್ಟರು ಆಗ ಶಹಾನಂಗನು ಇಂಥ ಹೇಸಿ ನಶ್ವರ ವಸ್ತುಗಳಿಗಾಗಿ ಇಷ್ಟು ವ್ಯಥೆಯೇ ? ಎಂದು ಕೇಳಿದನು ಆಗ ಮಹಿಪತಿರಾಯರು ಬಾದಶಹನು ಗುರುತಿಗಾಗಿ ಕೊಟ್ಟ ಮುದ್ರೆಯು ಂಗುರವನ್ನು ಕಳೆದುಕೊಂಡು ತಾವು ಇನ್ನು ಅವರ ಬಳಿಗೆ ಹೋಗುವುದು ಹೇಗೆ ಎನ್ನುವುದೇ ತಮ್ಮ ದ ಗಂಡಕ್ಕೆ ಕಾರಣ

ವೆಂದು ನಿಜಸಂಗತಿಯನ್ನು ಶಹ ನಂಗನಿಗೆ ತಿಳಿಸಿದರು ಕೂಡಲೇ ಶಹಾನಂಗನು ಕಂದಕದಲ್ಲಿಳಿದು ಒಂದೇ ಮಾದರಿಯ ನಾಲ್ಕಾರು ಮುಂದ್ರೆಯುಂಗುರಗಳನ್ನು ತಂದು ತಮ್ಮುದನ್ನು ಗುರ ತಿಸಿ ತೆಗೆದುಕೊಳ್ಳುವಂತೆ ಮಹಿಪತಿರಾಯರಿಗೆ ತಿಳಿಸಿದರು ಆದರೆ ಮಹಿಪತಿರಾಯರಿಗೆ ತಮ್ಮ ಮುದ್ರಿಕೆಯನ್ನು ಗುರುತಿಸಲಾಗಲಿಲ್ಲ ಆಗ ಫಕೀರನು ಮಹಿಪತಿರಾಯರ ಸಮಸ್ಯೆಯೇನೆಂಬ ದನ್ನು ಅರಿತ ಕೊಂಡು ಅವರ ವ ುದ್ರಿಕೆಯನ್ನು ಅವರಿಗೆ ಕೊಟ್ಟು ಉಳಿದವುಗಳನ್ನು ಮತ್ತೆ ಕಂದಕಕ್ಕೆ ಎಸೆದನು ಇದನ್ನು ಕಂಡ ಮಹಿಪತಿರಾಯ ರು ಬೆರಗಾದರು ಈತನ ಸಾಮರ್ಥ್ಯವು ಸಾಮ್ರಾಟನಿಗೂ ದೊರೆಯದು ಇವನ ವೈರಾಗ್ಯಸುಖವು ಸಾಮ್ರಾಜ್ಯ ಸುಖಕ್ಕಿಂತ ಮಿಗಿಲು! ಇದ್ದರಿರಬೇಕು ಇಂಥ ವೈರಾಗ್ಯ! ಇಂಥ ಸುಖ! ಇಂಥ ಸಾಮರ್ಥ್ಯ! ಆದರೆ ಇದನ್ನೆಲ್ಲ ಪಡೆಯುವುದೆಂತು? ಎಂದು ಭಾವಿಸಿದರು ಮಹಿಪತಿರಾಯರನ್ನು ಒಂದು ಪಕ್ವ ಫಲವೆಂದು ಅರಿತೂ ಫಕೀರನು ಅವರನ್ನು ತನ್ನ ಶಿಷ್ಯರನ್ನಾಗಿ ಮಾಡಲಿಲ್ಲ ಅಯ್ಯ ಇನ್ನೆಷ್ಟು ದಿನ ಈ ಅಜ್ಞಾನದಲ್ಲಿ ಕೊಳೆಯು ವುದು? ಇನ್ನು ಆತ್ಮ ಸೂರ್ಯನನ್ನು ಕಾಣಬೇಕಲ್ಲ! ಆತ್ಮಾನಂದವನ್ನು ಉಣಬೇ ಕಲ್ಲ! ಎಂದು ಮಹಿಪತಿರಾಯರನ್ನು ಕೇಳಿದನು ಬಳಿಕ ರಾಯರೆ ಇನ್ನೂ ಎಷ್ಟು ದಿನ ಈ ತಾಫೇದಾರಿಯಲ್ಲಿ ಸಿಕ್ಕಿ ನರಳುವಿರಿ ಇದೀಗ ಒಳ್ಳೆಯ ಕಾಲ ಸನಿ ಹಿತವಾಗಿದೆ ಸಾರವಾಡದಲ್ಲಿರುವ ಭಾಸ್ಕರ ಸ್ವಾಮಿಗಳನ್ನು ಕೂಡಲೇ ಕಂಡು ಆತ್ಮಜ್ಞಾನವನ್ನು ಪಡೆಯಿರಿ ಎಂದು ಹಿತೋಪದೇಶ ಮಾಡಿದನು ಶಹಾನಂಗನಿಗೆ ವಾಕ್ಸಿದ್ಧಿ ಇತ್ತು ಎಂದು ಹೇಳುತ್ತಾರೆ

ಈ ಮಾತುಗಳನು ಕೆ ಳುತ್ತಿದ್ದಂತೆ ಮಹಿಪತಿರಾಯರಲ್ಲಿ ಯಾವುದೋ ಒಂದು ಹೊಸ ಶಕ್ತಿ ಪ್ರವಹಿಸಿದಂತಾಯಿತು ಈಗಾಗಲೆ ತನ ಪಿತನಿಂದ ವೇದೋಪನಿಷತ್ತು ಮುಂತಾದ ವೈದಿಕ ಸಾಹಿತ್ಯವನೆ ಲ್ಲ ಚೆನ್ನಾಗಿ ವ್ಯಾಸಂಗ ಮಾಡಿದ್ದ ಮಹಿಪತಿರಾಯರು ಈ ಲೌಕಿಕ ಸಂಕೊ ಲೆಯಿ ಂದ ಪ ರಾಗಬೇಕು ಆಧ್ಯಾತ್ಮಿಕ ಜ್ಞಾನವನು ಸಂಪಾದಿಸಬೇಕು ಎಂದು ದೃಢಸಂಕಲ್ಪ ಮಾಡಿ ಮನೆಗೆ ಬಂದರು

ಮನೆಗೆ ಬಂದರೆ ನಿತ್ಯದಂತೆ ಪತ್ನಿ ತಿಮ್ಮವ್ವ ಮನೆಯಲ್ಲಿರಲಿಲ್ಲ ಆಕೆ ಭಾಸ್ಕರ ಸ್ವಾಮಿಯವರ ದರ್ಶನಕ್ಕಾಗಿ ಸಾರವಾಡಕ್ಕೆ ಹೋಗಿದ್ದಾಳೆ ಎಂಬ ಸಂಗತಿ ತಿಳಿದು ಆಕೆ ತನಗಿಂತಲೂ ಪುಣ್ಯವಂತೆ ಎಂದು ಭಾವಿಸಿ ಹೆಂಡತಿಯನ್ನು ಆಕ್ಷೆ ಪಿಸದೆ ತಾವಿಬ್ಬರೂ ಜೊತೆಗೂಡಿ ಸ್ವಾಮಿಗಳ ದರ್ಶನಕ್ಕೆ ಹೋಗಲು ನಿರ್ಧರಿಸಿದರು ಸ್ವಾಮಿಗಳ ಮಾತು ನಿಜವಾಯಿತೆಂದು ತಿಮ್ಮವ್ವನಿಗೆ ಸಂತೋಷವಾಯಿತು ಮಹಿಪತಿರಾಯರು ಪತ್ನೀ ಸಮೇತರಾಗಿ ಸಾರವಾಡಕ್ಕೆ ಹೋಗಿ ಭಾಸ್ಕರ ಸ್ವಾಮಿಗಳನ್ನು ಭೇಟಿಮಾಡಿದರು ದಿವ್ಯಜ್ಞಾನಿಗಳಾಗಿದ್ದ ಭಾಸ್ಕರ ಸ್ವಾಮಿಗಳನ್ನು ಭೇಟಿಮಾಡಲು ದಿವಾಣರು ಸಾರವಾಡಕ್ಕೆ ಬಂದಿದ್ದಾರೆಂದು ತಿಳಿದು ಊರ ಜನರೆಲ್ಲ ಮಹಿಪತಿಯವರನ್ನು ಮತ್ತು ಅವರ ಬಳಗದವರನ್ನು ಆತ್ಮೀಯವಾಗಿ ಸ್ವಾಗತಿಸಿ ಅವರಿಗೆ ಊಟ ವಸತಿಯ ವ್ಯವಸ್ಥೆ ಮಾಡಿದರು ಭೋಜನಮಾಡಿ ವಿಶ್ರಮಿಸಿದ ಬಳಿಕ ಗುರುಗಳನ್ನು

ದರ್ಶಿಸಲು ವ್ಯವಸ್ಥಾಪಕರು ಏರ್ಪಾಡು ಮಾಡಿದ್ದರು ಆದರೂ ಮಹಿಪತಿರಾಯರು ಸ್ವಾಮಿಯವರ ದರುಶನವಾಗದೆ ತಾವು ಏನನ್ನೂ ಸ್ವೀಕರಿಸಲಾರೆವೆಂದು ತಿಳಿಸಿ ನೇರ ವಾಗಿ ಪತಿ ಯೊಡನೆ ಭಾಸ್ಕರಸ್ವಾಮಿಗಳ ನಿವಾಸಕ್ಕೆ ಹೋದರು ಸ್ವಾಮಿಗಳು ಧ್ಯಾನ ನಿರತರಾಗಿದ್ದರು ಅವರ ಧ್ಯಾನ ಮುಗಿಯುವವರೆಗೂ ಗಂಡ ಹೆಂಡತಿ ಅಲ್ಲೇ ಕೂತರು ಅಂದು ನಿತ್ಯಕ್ಕಿಂತ ಸ್ವಲ್ಪ ಮುಂಚಿತವಾಗಿಯೇ ಸಮಾಧಿಯಿಂದೆದ್ದ ಸ್ವಾಮಿಗಳು ದಿವಾನ ದಂಪತಿಗಳನ್ನು ಕರೆದು ನಾವಿಲ್ಲಿ ತಮಗಾಗಿ ಬಂದು ಆರು ತಿಂಗಳಾಯಿತು ಇಂದು ಬರೋಣವಾಯಿ ತೇ ? ಶಹಾನಂಗಾವಲ್ಲಿಗಳು ತಮ್ಮನ್ನಿಲ್ಲಿ ಕಳುಹಿಸಿದರೆ ? ಎಂದು ಕೇಳಿದಾಗ ಮಹಿಪತಿರಾಯರ ಅಂತರಂಗಭಾವ ಅವರು ತಮ್ಮನು ಉದ್ಧರಿಸುವಂತೆ ಸ್ವಾಮಿಯನ್ನು ಪ್ರಾರ್ಥಿಸಿದರು ಶಹಾನಂಗರಂತೆ ಸ್ವಾಮಿಗಳಿಗೂ ರಾಯರೊಂದು ಪಕ್ಷಫಲವೆಂದು ಗೊತ್ತಿತ್ತು ಹೀಗಾಗಿ ವಿನೀತ ರಾಗಿ ಕೈಜೋಡಿಸಿ ನಿಂತ ದಂಪತಿಗಳನ್ನು ಅವರು ಕೃಪಾದೃಷ್ಟಿಯಿಂದ ವೀಕ್ಷಿಸಿದರು ಒಂದು ಬಟ್ಟಲು ಹಾಲು ತರಿಸಿ ರಾಯರಿಗೆ ಕೊಡಿಸಿದರು ಅದನ್ನು ಕುಡಿದೊಡನೆ ರಾಯರ ವ್ಯಕ್ತಿತ್ವ ದಲ್ಲಿ ವಿಶೇಷ ಮಾರ್ಪಾಡಾಯಿತು ಅಂತರಂಗದಲ್ಲಿನ ಭೇದಭಾವ ಗಳು ಅಳಿದವು ಎಲ್ಲೆಡೆ ಸ್ವಾಮಿಯೇ ಕಂಡಂತಾಯ್ತು ಎಲ್ಲೆಡೆ ಆತ್ಮಜ್ಯೋತಿ ಹೊಳೆದು ಗುರು ಶಿಷ್ಯರಿಬ್ಬರೂ ಅದರಲ್ಲಿ ಸಮರಸರಾದರು ನೂತನ ಶಿಷ್ಯನ ಈ ಒಗೆಯ ಪರಿವರ್ತನೆ ಸ್ವಾಮಿಗಳಿಗೆ ಆನಂದವನ್ನು ಉಂಟುಮಾಡಿತು ಅವರು ರಾಯರ ಮಸ್ತಕದ ಮೇಲೆ ಕೈಯಿರಿಸಿದರು ಮಹೀಪತಿಯವರೆ, ನಿಮ್ಮ ಪತ್ನಿ ಮಹಾ ಸಾತ್ವಿಕಳು ನಿಮಗೆ ಇಬ್ಬರುಗಂಡು ಮಕ್ಕಳಾಗುವರು ಮೊದಲನೆಯವನು ರಾಜಸಗುಣದಿಂದ ಪದವಿಗಳಿಸಿ ಪ್ರಸಿದ್ಧನಾಗುವನು ಎರಡನೆಯವನು ಸಾತ್ವಿಕ ಗುಣ ದಿಂದ ಎಲ್ಲರ ಆದರಕ್ಕೆ ಪಾತ್ರನಾಗಿ ಜ್ಞಾನಿಯೆನಿಸಿ ಕೀರ್ತನಕಾರನಾಗುವನು ನೀವಾ ದರೂ ಇನ್ನು ಲೌಕಿಕ ಜಂಜಡವನ್ನು ತೊರೆದು ಯೋಗಬಲದಿಂದ ಆತ್ಮಜ್ಞಾನಿಗಳಾಗಿರಿ ನಿಮ್ಮಿಂದ ಮಹತ್ವಪೂರ್ಣ ಕೆಲಸವಾಗಬೇಕಾಗಿದೆ ಎಂದು ಮಹಿಪತಿರಾಯರನ್ನು ಎಚ್ಚರಿಸಿದರು ಸದ್ಗುರುಗಳ ಶುಭಾಶೀರ್ವಾದ ಪಡೆದ ದಂಪತಿಗಳಿಗೆ ಅತ್ಯಾನಂದ ವಾಯಿತು ಈ ರೀತಿಯಲ್ಲಿ ಮಹಿಪತಿರಾಯರು ಭಾಸ್ಕರ ಗುರುಗಳ ಕರಕಮಲ ಸಂಜಾತರಾದರು ತಮ್ಮ ಅಧಿಕಾರ ಪದವಿಗಳನ್ನೆಲ್ಲ ಬಾದಶಹರಿಗೆ ಬಿಟ್ಟುಕೊಟ್ಟರು ಮಹೀಪತಿರಾಯರ ಈ ಪರಿವರ್ತನೆಯನ್ನು ಕಂಡು ಬಾದಶಹ ಕೋಪಗೊಳ್ಳಲಿಲ್ಲ ಮತ್ತೂ ಹೆಚ್ಚಿನ ಗೌರವಾದರಗಳನ್ನ ತೋರಿದರು

ಈ ಘಟನೆಯೊಂದಿಗೆ ಮಹಿಪತಿರಾಯರ ಲೌಕಿಕ ಜೀವನದಲ್ಲಿ ಒಂದು ಘಟ್ಟ ಮುಗಿದಂತಾಯಿತು ಸದ್ಗುರುಗಳ ಕೃಪೆಯಿಂದ ರಾಯರಲ್ಲಿ ವೈರಾಗ್ಯಭಾವ ಪ್ರಬಲ ವಾಯಿತು ಹೀಗಾಗಿ ರಾಯರು ತಮ್ಮ ಸಂಪತ್ತನ್ನೆಲ್ಲ ಬಡವರಿಗೆ ದಾನಮಾಡಿದರು ತಮ್ಮ ಆಸ್ತಿಯನ್ನೆಲ್ಲ ದಾನಮಾಡಿ ಬರುವಂತೆ ಹೆಂಡತಿ ತಿಮ್ಮವ್ವೆಯನ್ನು ವಿಜಯ ಪುರಕ್ಕೆ ಕಳಿಹಿಸಿದರು ಅಲ್ಲಿ ಆ ಸಾಧ್ವಿ ಪತಿಯ ಆಜ್ಞೆಯಂತೆ ತಮ್ಮೆಲ್ಲ ಸಂಪತ್ತನ್ನು ಬಡವರಿಗೆ ದಾನವಾಗಿತ್ತರು

ಸದ್ಗುರುವಿನ ಕೃಪಾಶ್ರಯದಲ್ಲಿ ರಾಯರ ಉತ್ಕಟಸಾಧನೆ ಮುಂದುವರಿಯಿತು ದಿನಾಲೂ ಸದ್ಗುರುಗಳಿಂದ ಆಧ್ಯಾತ್ಮ ಶ್ರವಣ ಪಾದಸೇವೆ ಯೋಗಸಾಧನೆಗಳನ್ನು ನಿರಂತರವಾಗಿ ನಡೆಸಲಾಯಿತು ಅನುಭವ ಭಾಸ್ಕರರಾದ ಸದ್ಗುರುಗಳ ಕೃಪೆ ಹಾಗೂ ರಾಯರ ತೀವ್ರ ಮವ ಎಚ್ಚೆತೆಗಳಿಂದ ರಾಯರ ಯೋಗಸಾಧನೆ ನಿರಂತರವಾಗಿ ನಡೆದು ದಢಗೊಂಡಿತು ಹಗಲಿರುಳೂ ಸಾಧನೆಮಾಡಿ ಷಟ್ ಚಕ್ರ ಭೇದಿಸಿದ ರಾಯರಿಗೆ ನಿತ್ಯ ನಿರ ಪಮ ನಿರಂಜನ ನ ಪ್ರಭೆ ಕಾಣಲಾರಂಭಿಸಿತಂತೆ ಹರಿಶತ ಕೋಟಿ ಪ್ರಕಾಶ ಹೊಳೆಯ ತೊಡಗಿತಂತೆ ಹನ್ನೆರಡು ವರ್ಷಗಳಲ್ಲಿ ಪಾ ಗಿಯುವಂಥ ಯೋಗವನ್ನು ಅವರು ಹನ್ನೊಂದು ತಿಂಗಳಲ್ಲಿಯೇ ವ ಗಿಸಿ ದಿವ್ಯಾನುಭವ ಪಡೆದು ಕೊಂಡರು

ಹೀಗೆ ಬಹುಬೇಗ ಯೋಗಸಿದ್ಧಿಯನು ಪಡೆದುದನ್ನು ಕಂಡ ಸದ್ಗುರುಗಳು ಮಹಿಪತಿರಾಯರಿಗೆ ಇನ್ನು ಊರಿಗೆ ಹೋಗಬೇಕೆಂದೂ ಸಾಧನೆ ಅನುಭವ ಅನು ಗ್ರಹಗಳಲ್ಲಿ ನಿರತರಾಗಬೇಕೆಂದೂ ಆಶೀರ್ವದಿಸಿ ವಿಜಯಪುರಕ್ಕೆ ತೆರಳುವಂತೆ ಅಪ್ಪಣೆ ಕೊಟ್ಟರು ವ ಹಿಪತಿದಾಸರು ಗುರುಗಳ ಅಪ್ಪಣೆಯಂತೆ ವಿಜಯಪುರಕ್ಕೆ ಬಂದು ತಮ್ಮ ಶಿಷ್ಯರಿಗೆ ಯೋಗಾಭ್ಯಾಸ ಮಾಡಿಸುತ್ತಿದ್ದರು ಅಲ್ಲಿ ಅವರು ಜನರಿಗೆ ಭಕ್ತಿ ಯನು ಕಲಿಸಿದರು ಅಲ್ಲಿರುವಾಗಲೇ ತಿಮ್ಮವ್ವನಿಗೆ ಮೊದಲನೆಯ ಗಂಡು ಮಗು ಜನಿಸಿತು ಅದಕ್ಕೆ ದೇವರಾಯನೆಂದು ಹೆಸರಿಡಲಾಯಿತು ಪುತ್ರಲಾಭದಿಂದ ತಿಮ್ಮವ್ವನಿಗೆ ಬಹಳ ಆನಂದವಾಯಿತು ಸದುರಗಳ ಬಗ್ಗೆ ಅವರ ಕೃತಜ್ಞತೆ ಆದರಗಳು ಇನ್ನಷ್ಟು ಹೆಚ್ಚಿದವು ಆದರೆ ಮಹಿಪತಿದಾಸರು ವಿಜಯಪುರದಲ್ಲಿ ಕೇವಲ ನಾಲ್ಕುವರ್ಷಗಳ ಕಾಲ ಮಾತ್ರ ನಿಂತರು ಆದರೂ ಆ ಅತ್ಯಲ್ಪ ಅವಧಿ ಯಲ್ಲಿಯೇ ಅವರ ಅನುಗ್ರಹೀತರ ಸಂಖ್ಯೆ ಬೆಳೆಯಿತು ತಮ್ಮ ಯೋಗಬಲದಿಂದ ಅವರು ಅನೇಕರ ಮನೋರಥಗಳನು ಪೂರೈಸಿದರು ಮತ್ತು ತಮ್ಮ ಅವಿರತ ಸಾಧನೆ ಯಿಂದ ಗಳಿಸಿದ ಅನುಭಾವವನ್ನು ಸ್ಥಿರಗೊಳಿಸಿದರು ಕೆಲಕಾಲಾನಂತರ ವಿಜಯ ಪುರದ ವೇಳೆ ಪರರಾಜರ ದಾಳಿಯಾಗಲಿದೆ ಎಂಬುದು ಅವರ ದಿವ್ಯದೃಷ್ಟಿಗೆ ತಿಳಿ ಯಿತು (ಕ್ರಿ ಶ 1655ರಲ್ಲಿ) ಹೀಗಾಗಿ ಅವರು ತಮ್ಮ ಪರಿವಾರ ಸಮೇತರಾಗಿ ನಿಜಾಮ ರಾಜ್ಯದಲ್ಲಿನ ಗಲಬರ್ಗಾದಲ್ಲಿರುವ ಕಾಖಂಡಕಿ ಎಂಬ ಹಳ್ಳಿಗೆ ತೆರಳಿದರು ಅಲ್ಲಿ ಒಂದು ಮಾರುತಿಯ ನ್ನು ಸ್ಥಾಪಿಸಿದರು ಅಲ್ಲಿಯೂ ಕೂಡ ಭಕ್ತಾದಿಗಳು ದಸರಿಗೆ ಬಹಳ ನೆರವು ನೀಡಿದರು ನಿತ್ಯಸಾಧನೆ ಭಕ್ತವೃಂದಕ್ಕೆ ಆಧ್ಯಾತ್ಮಿಕ ಬೋಧೆ ಅನುಗ್ರಹ ಮುಂತಾದ ದೈನಂದಿನ ಕಾರ್ಯಕ್ರಮದ ಜೊತೆಗೆ ಗುರುಕೃಪೆ ಯಿಂದ ರಾಯರಲ್ಲಿ ಕವಿತಾಶಕ್ತಿಯೂ ಅಂಕುರಿಸಿತ್ತು ಹೀಗಾಗಿ ಅವರು ಕೆಲವೊಮ್ಮೆ ದಿವ್ಯ ಅನುಭಾವ ಲೋಕದಲ್ಲಿ ವಿಹರಿಸುತ್ತಿದ್ದರು ಆಗಾಗ ಬ್ರಹ್ಮಾನಂದದಲ್ಲಿ ಮೈ ಮರೆಯುತ್ತಿದ್ದರು ಅವರ ಅಂತರಂಗದಲ್ಲಿ ಪುಟಿದೆದ್ದ ಭಾವತರಂಗಗಳು ಅದ್ಭುತ ವಾದ ಕವನಗಳ ರೂಪದಲ್ಲಿ ಹೊರಹೊಮ್ಮುತ್ತಿದ್ದುವು

ಶಾಪೂರದಲ್ಲಿ ಮೂರು ನಾಲ್ಕು ವರ್ಷ ಕಾಲ ತಂಗಿದ ಮೇಲೆ ವಿಜಯಪುರದ ನೆರೆಹೊರೆಯ ಭಕ್ತಾದಿಗಳ ಒತ್ತಾಯದ ಮೇರೆಗೆ ಮಹಿಪತಿದಾಸರು ಸಾರವಾಡದ ನೆರೆಯಲ್ಲಿದ್ದ ಕಾಖಂಡಿಕಿ ಎಂಬ ಗ್ರಾಮದಲ್ಲಿ ನೆಲೆ ನಿಂತರು ಅನೇಕ ಮಂದಿ ಶಿಷ್ಯರು ಭಕ್ತರು ಅವರ ಬಳಿಗೆ ಬಂದು ನೀವು ನಿಮ್ಮ ಯೋಗಕ್ಷೇಮ ಹೇಗೆ ನಡೆಸುತ್ತೀರಿ ಎಂದು ಕೇಳಿದರು ಆಗ ಮಹಿಪತಿದಾಸರು

ಸಂಸಾರ ಚಿಂತೆಯು ಸ್ವಾಮಿ ಶ್ರೀಹರಿಗುಂಟು  
ಕಂಸಾರಿ ಕೃಷ್ಣ ಕರುಣಿಸುವ ಇದರಿಟ್ಟು ॥  
ತುತ್ತಾಯ ತವ ಮಾಡಿ ಹೊತ್ತು ನಡೆಸುವ ಪಡೆಯು  
ಮತ್ತು ಚಿಂತಿಸಲೇಕೆ ಹತ್ತುಕಡೆಯು ?  
ಭಕ್ತವತ್ಸಲಸ್ವಾಮಿ ಚಿಂತಾಯಕೆನ್ನೋಡುವ  
ನಿತ್ಯ ನಡೆಸುವ ಗ್ರಾಸ ಭಕ್ತರೊಡೆಯ ॥ ೧ ॥

ಆನೆ ಮೊದಲಿರಿವೆ ಕಡೆಂತಾನಡಸುತಿರಲಿಕ್ಕೆ  
ಜನಕೊಡ್ಡಿ ಕೈಯ್ಯನಾ ದಣಿಯಲೇಕೆ  
ಅನುದಿನ ಹರಿವಾಕ್ಯ ಅನುಭವಿಸುತಿರಲಿಕ್ಕೆ  
ಅನುಮಾನವಿಡಿದು ನಾ ಹಣಗಲೇಕೆ ? ॥ ೨ ॥

ಭಾರವಹಿಸಿಕೊಂಡಿರಲು ನಾರವಿತ ಪರಿಪೂರ್ಣ  
ಸಾರಾಂಶವಿತ್ತು ವರಕೃಪೆಯು ಜ್ಞಾನ  
ಆರ ಹಗವನಗೇಕೆ ದೋರುತಿವ ನಿಧಾನ  
ತರಳ ಮಹಿಪತಿ ಪೊರೆವಗುರುಕರುಣ ॥ ೩ ॥

(ನನ್ನ ಸಂಸಾರದ ಚಿಂತೆ ಶ್ರೀಹರಿಗಿದೆ ಆತ ನನ್ನ ಮೇಲೆ ಕೃಪೆ ಮಾಡುತ್ತಾನೆ ಆತನೆ ತನ್ನ ಯೋಗಕ್ಷೇಮ ನಡೆಸುತ್ತಾನೆ ಎಂಬುದೇ ದಾಸರ ದೃಢ ನಂಬಿಕೆ)

ಆ ಗ್ರಾಮದ ಕರಣಿಕ ಭಕ್ತನೊಬ್ಬನು ಮಹಿಪತಿದಾಸರಿಗೆ ತನ್ನ ತೋಟದಲ್ಲಿಯೇ ಒಳ್ಳೆಯ ಆಶ್ರಯವನ್ನು ಮಾಡಿಕೊಟ್ಟಿದ್ದರಿಂದ ದಾಸರು ಅಲ್ಲಿಯೇ ತಂಗಿದರು ಅಲ್ಲಿ ಅವರು ನಿರಾತಂಕವಾಗಿ ಯೋಗಾನುಷ್ಠಾನಗಳನ್ನು ಮುಂದುವರಿಸಿದರು ಹೀಗಾಗಿ ಕಾಖಂಡಕಿಯೇ ಮಹಿಪತಿರಾಯರ ಕೊನೆಯವರೆಗಿನ ಸ್ಥಿರವಾದ ನಿವಾಸವಾಯಿತು ಆದ್ದರಿಂದಲೇ ಮಹಿಪತಿದಾಸರು ಬಿಜಾಪುರದ ಸುತ್ತ ಮುತ್ತ ಮತ್ತು ಉತ್ತರ ಕರ್ನಾಟಕದ ಬಹುಭಾಗಗಳಲ್ಲಿ ಕಾಖಂಡಕಿ ದಾಸರೆಂದೇ ಪ್ರಸಿದ್ಧರಾದರು

ಕಾಖಂಡಕಿಯಲ್ಲಿ ನೆಲೆನಿಂತ ಮೂರು ನಾಲ್ಕು ವರ್ಷಗಳಲ್ಲಿ ತಿಮ್ಮವ್ವಳಿಗೆ ಎರಡನೆಯ ಗಂಡುಮಗು ಜನಿಸಿತು ಆದಕ್ಕೆ ಕೃಷ್ಣನೆಂದು ನಾಮಕರಣ ಮಾಡಿದರು ಆದರೆ ಕೃಷ್ಣ ಜನಿಸಿದ ಎರಡು ವರ್ಷಗಳಲ್ಲಿಯೇ ದಾಸರ ಪತ್ನಿ ತಿಮ್ಮವ್ವ ಪರಂಧಾಮ

ವನೈದಿದರು ಮಗಳ ನಿಧನದ ವಾರ್ತೆಯನ್ನು ಕೇಳಿ ಕಲಬುರ್ಗಿಯಿಂದ ದೇಶ ಮುಖರು ಕಾಖಂಡಕಿಗೆ ಬಂದು ಮಗಳ ಅಂತ್ಯಕ್ರಿಯೆಗಳನ್ನು ವ ೧ಗಿಸಿ ಮೊಮ್ಮಗ ದೇವರಾಯನನ್ನು ತಮ್ಮೊಡನೆ ಕರೆದುಕೊಂಡು ಹೋದರು ಗುರುವಾಕ್ಯದಂತೆ ಈ ದೇವರಾಯನಲ್ಲಿ ಮೊದಲಿನಿಂದಲೂ ವೀರವೃತ್ತಿಯು ಬೆಳೆಯುತ್ತಲಿತ್ತು. ತಾರುಣ್ಯದಲ್ಲಿ ದೇವರಾಯನು ಬೀದರದ ಬಾದಶಹನ ದಂಡಿನಲ್ಲಿ ಸೇರಿ ಅನೇಕ ಅಸಾಮಾನ್ಯ ವಿಕ್ರಮಗಳನ್ನು ತೋರಿದನು ಈತನು ತೋರಿದ ಅಸಾಮಾನ್ಯ ಪರಾಕ್ರಮದಿಂದ ಜನ ಆತನಿಗೆ ದೋಣಿ ಶಿವಾಜಿ ಎಂಬ ಬಿರುದನ್ನಿತ್ತರು ಬಾದಶಹರು ಚಂದಿ-ಚಂದಾವರ ಎಂಬ ಹಳ್ಳಿಗಳನ್ನು ದೇವರಾಯನಿಗೆ ಇನಾಮಿನ ರೂಪದಲ್ಲಿ ನೀಡಿದರು ಇತ್ತ ಕಾಖಂಡಕಿಯಲ್ಲಿ ಮಾತೃವಿಹೀನನಾಗಿದ್ದ ಬಾಲಕ ಕೃಷ್ಣ ಸೋದರತ್ತೆ ತುಕ್ಕವ್ವನ ಮಡಿಲಿನಲ್ಲಿ ಬೆಳೆಯತೊಡಗಿದನು ವರ್ಷ ಒಂಭತ್ತಾ ದರೂ ಓದುಬರಹದ ಗಂಧವಿಲ್ಲದೆ ಕೃಷ್ಣ ಉಂಡಾಡಿಯಾಗಿ ತಿರುಗುವುದನು ಕಂಡ ತುಕ್ಕವ್ವ ಸಹೋದರ ಮಹಿಪತಿದಾಸರೊಡನೆ ತನ್ನ ದುಗುಡವನ್ನು ಹೇಳಿಕೊಂಡಳು ಮರುದಿನ ದಾಸರು ವ ಗ ಕೃಷ್ಣನಿಗೆ ಸ್ನಾನಮಾಡಿ ಹೊಸವಸ್ತ್ರಗಳನ್ನು ಧರಿಸಿ ಬರಲು ಹೇಳಿದರು ಬಳಿಕ ಅವನ ಕಡೆಗೆ ಕರುಣಾಪೂರ್ಣ ದೃಷ್ಟಿ ಬೀರಿ ಮಸ್ತಕದ ಮೇಲೆ ತಮ್ಮ ವರದ ಹಸ್ತವನ್ನಿಟ್ಟರು ಕೂಡಲೆ ಓ ಎನ್ನಬಾರದೆ ಹರಿಯೆ ಎಂಬ ಹನ್ನೊಂದು ನುಡಿಯ ಪದ್ಯ ರಚಿಸಿದ ಕೃಷ್ಣನನು ಕಂಡ ತುಕ್ಕವ್ವನಿಗೆ ಪರಮಾನಂದ ವಾಯಿತು ಅಂದಿನಿಂದ ಕೃಷ್ಣನ ಹುಂಬತನ ಮಾಯವಾಯಿತು ಆತನಲ್ಲಿ ಭಕ್ತಿ-ಭಾವ ಜನಿಸಿತು ಯ ಥಾಕಾಲದಲ್ಲಿ ಮಹಿಪತಿದಾಸರೇ ಮಗನಿಗೆ ಯೋಗರಹಸ್ಯವನ್ನು ಹೇಳಿಕೊಟ್ಟರು ಅಂದಿನಿಂದ ತಂದೆಗಿಂತ ಮಗ ಮಿಗಿಲೆನ್ನುವಂತೆ ಕೃಷ್ಣನ ಮುಖದಿಂದ ದಿವ್ಯಕಾವ್ಯದ ಸೆಲೆ ಪ್ರವಹಿಸಿ ಕನ್ನಡ ಅನುಭಾವ ಸಾಹಿತ್ಯವನು ಶ್ರೀಮಂತಗೊಳಿಸಿತು ಮಹಿಪತಿರಾಯರು ತಮ್ಮ ಸ್ವಾನಂದ ಸುಖವನ್ನು ಪರಿಪರಿಯಾದ ಕೀರ್ತನೆಗಳ ಮೂಲಕ ಸಾರಿ ಹೇಳಿದಂತೆ ಕೃಷ್ಣನೂ ಅನೇಕ ಕೀರ್ತನೆಗಳಿಂದ ಅನುಭಾವ ಸಾಹಿತ್ಯ ಕ್ಷೇತ್ರದ ವಿಸ್ತಾರವನು ಹೆಚ್ಚಿಸಿದನು ತಂದೆಯ ಸೇವೆಯ ಲ್ಲಿ ನಿರತನಾಗಿ ಅವರ ಆಧ್ಯಾತ್ಮಿಕ ಕಾರ್ಯಗಳಿಗೆ ನೆರವು ನೀಡಿದನು

ಮ ಹಿಪತಿರಾಯರಿಗೆ ವಯಸ್ಸಾಗುತ್ತ ಬಂತು ಮತ್ತೊಮ್ಮೆ ಶಹಾನಂಗನು ರಾಯ ರಲ್ಲಿಗೆ ಬಂದು ಹ್ಯಾಗಿದೆ ಎಂದರಂತೆ ಆಗ ರಾಯರು ಪರಮಾನಂದ ಎಲ್ಲವೂ ಚೆನ್ನಾಗಿದೆ ಎಂದರಂತೆ ಮತ್ತೆ ನಂಗಾ ಕೇಳಿಸಿತ್ತೇ ನೌಬತ್ತು (ಕೂಚಕಾನಗಾರಾ) ಎಂದು ಕೇಳಿದಾಗ ರಾಯರು ಹೌದು ಎಂದು ಉತ್ತರಿಸಿದರಂತೆ ಮಹಿಪತಿರಾಯರ ಹಿರಿಯ ಚೇತನದ ಮಹತ್ವವನ್ನು ಅರಿತು ನಂಗ ಮಾಯ ವಾದನಂತೆ ಕೆಲದಿನ ಗಳಲ್ಲಿಯೇ ರಾಯರು ಬಿಜಾಪುರ ಜಿಲ್ಲೆಯ ಕೊಲ್ಹಾರಕ್ಕೆ ಹೋಗಿ ತಮ್ಮ ಕುಲಗುರು ಗಳ ಬಳಿ ಕೆಲವು ದಿನಗಳಿದ್ದರು ಅವರ ಸಾನಿಧ್ಯದಲ್ಲಿಯೇ ಕ್ರಿ ಶ 1681 ರ ಮಾರ್ಗಶೀರ್ಷ ಶುದ್ಧ ಪ್ರತಿಪದೆಯ ದಿನ ತಮ್ಮ 70 ವರ್ಷಗಳ ತುಂಬು ಬಾಳನ್ನು

ಬಾಳಿದ ದಾಸರು ಮಹಾಸಮಾಧಿಯನ್ನು ಪಡೆದರು ಅವರ ಕುಟುಂಬದವರಿಗೂ ಭಕ್ತರಿಗೂ ಭರಿಸಲಾರದ ದುಃಖವಾಯಿತು ಕೊಲ್ಹಾರದ ಕೃಷ್ಣಾತೀರದಲ್ಲಿ ರಾಯರ ಅಂತ್ಯವಿಧಿಯನ್ನು ನೆರವೇರಿಸಿ ಅವರ ದಹನ ಭೂಮಿಯಲ್ಲಿ ಒಂದು ವೃಂದಾವನವನ್ನು ನಿರ್ಮಿಸಲಾಯಿತು

ಮಗ ಕೃಷ್ಣರಾಯ ತಂದೆ ಮಹಿಪತಿರಾಯರ ಅಂತ್ಯವಿಧಿಯ ನು ಮ ಗಿಸಿ ಕಾಖಂಡಕಿಗೆ ಹಿಂತಿರುಗಿದಂದೇ ರಾಯರು ಕ ಲಿತೆ ಕೊಳ್ಳುತ್ತಿದ್ದ ಕೋಣೆಗೆ ಬೆಂಕಿಹತ್ತಿ ಅದರಲ್ಲಿದ್ದ ರಾಯರ ಅಗಣಿತ ಕೈ ಬರಹದ ಪ್ರತಿಗಳು ಸುಟ್ಟು ಹೋದವಂತೆ ಆಗ ಕೃಷ್ಣರಾಯ ನು ದುಃಖದಿಂದ ಅನ್ನಾ ಹಾರಗಳನ್ನು ತೊರೆಯ ಲು ಆತನಿಗೆ ರಾಯ ರು ಕನಸಿನಲ್ಲಿ ಕಾಣಿಸಿಕೊ ಡು ದುಃಖಿಸಬೇಡ ಮಗು ತಿಳಿದವನಾದ ನೀನೇ ಹೀಗೆ ವ್ಯಥಿತನಾದರೆ ಉಳಿದ ಭಕ್ತರ ಗತಿಯೇನು ? ಅವರನ್ನು ಸಂತೈಸುವವರಾರು ? ನಾನು ಇಲ್ಲಿಯೆ ಇರುವೆ ನಿಮಗೆ ಬೇಕಾದಾಗ ಕಾಣಿಸಿಕೊಳ್ಳುವೆ ನನ ಕೋಣೆಯಲ್ಲಿಯ ಬೂದಿಯ ನ್ನು ಕೆದರು ಅದರಲ್ಲಿ ನಿನಗೆ ಕೆಲ ಹೊತ್ತಿಗೆಗಳು ಸಿಗುವುವು ಅವನು ಉಪಯೋಗಿಸು ಮತ್ತು ಭಕ್ತಿ ಪ್ರಸಾರದ ಪುಣ್ಯ ಕಾರ್ಯವನ್ನು ಮುಂದುವರಿಸು ! ಏಳು ಎಂದು ಹೇಳಿ ಅದೃಶ್ಯವಾದರಂತೆ ಅದರಂತೆ ರಾಯರು ನಿತ್ಯ ಪೂಜಿಸುತ್ತಿದ್ದ ಶಾಲಿಗ್ರಾಮ ದ ಮೇಲೆ ಮಹಿಪತಿರಾಯರ ಭಕ್ತಾದಿಗಳು ವೃಂದಾವನ ಕಟ್ಟಿಸಿದರು ಈಗಲೂ ಈ ವೃಂದಾವನವು ಅನೇಕ ಮಂದಿ ಶಿಷ್ಯರ ಮನೋರಥವನ್ನು ಪೂರೈಸು ತ್ತದೆ ಎಂದು ಪ್ರತೀತಿಯಿದೆ ಕಾಖಂಡಕಿಯಲ್ಲಿ ವರ್ಷಕ್ಕೊಮ್ಮೆ ಮಾರ್ಗಶೀರ್ಷ ಶ ದ ಪ್ರತಿಪದೆಯಂದು ರಾಯರ ಪುಣ್ಯತಿಥಿಯ ನ್ನು ಆಚರಿಸಲಾಗುತ್ತದೆ ಅವರ ವಂಶಸ್ಥರೂ ಇತರ ಭಕ್ತಾದಿಗಳೂ ಆ ದಿನ ಸೇರಿ ಬಹು ವೈಭವದಿಂದ ಈ ಉತ ವ ವನು ಆಚರಿಸುತ್ತಾರೆ

**ಮಹಿಪತಿರಾಯರ ಕಾಲ ವಿಚಾರ**

ಮಹೀಪತಿರಾಯರ ಜನ್ಮ ಹಾಗೂ ನಿರ್ಯಾಣಕಾಲ ನಿಶ್ಚಿತವಾಗಿ ಗೊತ್ತಿಲ್ಲ ಆದರೆ ಅವರು ನಿರ್ಯಾಣ ಹೊಂದಿದ ತಿಥಿ ಮಾರ್ಗಶಿ ರ್ಷ ಶುದ್ಧ ಪ್ರತಿಪದೆ ಎಂದು ತಿಳಿದುಬಂದಿದೆ ಆದರೆ ಅದು ಯಾವ ಶಕವರ್ಷ ಕ್ರಿಸ್ತಶಕವರ್ಷ-ವೆಂದು ತಿಳಿದಿಲ್ಲ ಪರಂಪರೆಯಂತೆ ಅವರು ಎಪ್ಪತ್ತು ವರ್ಷದ ತುಂಬು ಬಾಳನ್ನು ಬಾಳಿದ್ದರು ಎಂದು ತಿಳಿದಿರುವುದರಿಂದ ಅವರು 70 ವರ್ಷ ವಯಸ್ಸಿನಲ್ಲಿ ನಿರ್ಯಾಣ ಹೊಂದಿರಬೇಕೆಂದೆ ನ್ನಿಸುತ್ತದೆ ಜೊತೆಗೆ ಮಹಿಪತಿರಾಯರು ರ ಕ್ಮಿಣಿ ಪಂಡಿತರ ಸಮಕಾಲೀನರೆಂಬ ಸಂಗತಿ ಪರಂಪರೆಯಿಂದಲೂ ಪಂಡಿತರ ಶಿಷ್ಯ ಬರೆದ ಗುರುಮಾಲಿಕೆ ಯಿಂದಲೂ ತಿಳಿಯುತ್ತದೆ ಚರಿತ್ರಕಾರರು ಕ್ರಿ ಶ 1710 ರಲ್ಲಿ ಪಂಡಿತರು ನಿರ್ವಾಣ ಹೊಂದಿದ ರೆಂದು ಬರೆದಿರುವರು ಆಗ ಅವರಿಗೆ ನೂರು ವರ್ಷ ವಯಸ್ಸು ಆಗಿತ್ತಂತೆ ಮಹಿಪತಿರಾಯರ ಕಾಲ ವಿಚಾರಣೆ ಬಗ್ಗೆ ಖಚಿತವಾದ ಆಧಾರಗಳು ಲಭ್ಯವಾಗಿಲ್ಲ ಮಹಿಪತಿರಾಯರ ಬಗ್ಗೆ ಸಾಕಷ್ಟು ಪರಿಶ್ರಮ ವಹಿಸಿದ ಶ್ರೀ ದೇಶಪಾಂಡೆ ಮನೋ

ಹರರಾಯರು ಈ ಬಗ್ಗೆ ವಿಶ್ಲೇಷಿಸುತ್ತ ಮಹಿಪತಿರಾಯರ ಮಕ್ಕಳು ಕೃಷ್ಣರಾಯರು ಆನಂದಿಹರಿ ಎಂಬ ಖಂಡಕಾವ್ಯವನ್ನು ಬರೆದಿರುವರು ಅದನ ವರು ಸುಭಾನು ಸಂವತ್ಸರ ಭ ದ್ರಪದ ದಶಮಿ ಗುರುವಾರ ಮುಗಿಸಿದರೆಂದು ಹೇಳಿದ್ದಾರೆ ಪಂಚಾಂಗ ಗಳ ಜಂತ್ರಿಯ ಮೇಲಿಂದ ಮೇಲ್ಕಾಣಿಸಿದ ಸುಭಾನು ಸಂವತ್ಸರವು ಶಕೆ 1625 ರಲ್ಲಿ ಅಂದರೆ ಕ್ರಿ ಶ 1703 ರಲ್ಲಿ ಬರುವುದು ರಾಯರು ಕಾಲವಾದಾಗ ಕೃಷ್ಣರಾಯರು 18 ವರ ಷದವರಿದ್ದರೆಂದು ಪರಂಪರೆಯ ಹೇಳಿಕೆ ಈ ಖಂಡಕಾವ್ಯವನು ಬರೆದಾಗ ಅವರು ಸುಮಾರ 40 ವರುಷದವರಿದ್ದಿರಬಹುದೆಂದು ಊಹಿಸಿದರೆ ರಾಯರ ನಿರ್ಯಾಣದ ವರುಷವು ಸ ಮಾರು ಕ್ರಿ ಶ 1681 (1703–22) ಬರುವುದು ಅಂದರೆ ಅವರ ಜನ್ಮವರುಷ ಸುಮಾರು ಕ್ರಿ ಶ 1611 ಆಗುವುದು ಇದಕ್ಕೆ ಇತಿಹಾಸವೂ ಪುಷ್ಟಿ ನೀಡುತ್ತದೆ ಮಹಿಪತಿರಾಯ ರು ಖವಾಸಖಾನರೆಂಬ ಬಾದಶಹನ ಅಧಿಕಾರಿಯಲ್ಲಿ ಕರಣಿಕರಾಗಿ ಕೆಲಸ ಮಾಡುತ್ತಿದ್ದ ಸಂಗತಿ ಗುರುಮಾಲಿಕೆ ಯಲ್ಲಿ ಬಂದಿದೆ ಈ ಖವಾಸಖಾನರು ಕ್ರಿ ಶ 1626–56 ರ ವರೆಗೆ ವಿಜಾಪುರವನು ಆಳಿದ ಮಹಮ್ಮದ್‌ಶಹನ ದಿವಾಣರಾದ ಖವಾಸಖಾನರೇ ಆಗಿರಬೇಕು ಅವರನ್ನು ಶಹನು 1635 ರಲ್ಲಿ ಫಿತೂರಿ ನಡೆಸಿದಕ್ಕಾಗಿ ಕೊಲ್ಲಿಸಿದನೆಂದು ಚರಿತ್ರೆ ಹೇಳುತ್ತದೆ ಮುಂದೆ ರಾಯ ರು ವಿಜಯ ಪುರದಲ್ಲಿದ್ದಾಗ ಪರರಾಜನ ದಾಳಿಯಾಗಲಿದೆ ಎಂದು ಅಂತರ್ ಜ್ಞಾನದಿಂದ ತಿಳಿದು ಅಲ್ಲಿಂದ ಕಾಖಂಡಕ್ಕೆ ಹೊರಟುಹೋದರೆಂದು ತಿಳಿದಿದೆ ವಾಸ್ತವವಾಗಿ ಔರಂಗಜೇಬನು 1656 ರಲ್ಲಿ ವಿಜಯಪುರದ ಮೇಲೆ ದಂಡು ಕಳಿಸಿದ್ದ ನೆಂದು ಚರಿತ್ರೆಯಿಂದ ತಿಳಿಯುತ್ತದೆ ರಾಯ ರು ಅದಕ್ಕಿಂತ ಮುಂಚೆ 1655 ರಲ್ಲಿ ಕಾಖಂಡಕ್ಕೆ ಹೋಗಿರಬಹುದು ಅಂದರೆ ದಿವಾನರಾದಾಗ ರಾಯರ ವಯಸ್ಸು 25 ಮತ್ತು ಕಾಖಂಡಕ್ಕೆ ಹೋದಾಗ ಸುಮಾರು 45 ಇದ್ದಿರಬಹುದು

**ದೇಶಪಾಂಡೆ**ಯವರು ಮಹಿಪತಿರಾಯರ ಜೀವನದ ಪ ಹತ್ವದ ವರ್ಷಗಳಾ ವುವು ಎಂದು ಹೇಳುತ್ತ ರ ಯರ ಜನನವು ಸುಮಾರು 1611ರಲ್ಲಿ ಅವರು ದಿವಾನ ರಾದ ದು ಸುಮಾರು 1635 ರಲ್ಲಿ ಅವರಿಗೆ ಅನುಗ್ರಹವಾದದು ಸು 1651 ರಲ್ಲಿ ಅವರು ವಿಜಯಪುರವನು ಬಿಟ್ಟದು ಸು 1655 ರಲ್ಲಿ ಕಾಖಂಡಕಿಯ ಲ್ಲಿ ನೆಲಸಿದುದು ಸು 1659 ರಲ್ಲಿ ಕೃಷ್ಣರಾಯರ ಜನನ ಸು 1663 ರಲ್ಲಿ ರಾಯರು ಕಾಲವಾದುದು ಸು 1681 ರಲ್ಲಿ [1]

ಶ್ರೀಮಹಿಪತಿರಾಯ ರ ವಂಶಸ್ಥರಾದ ಶ್ರೀ ಶ್ರೀಪತಯ್ಯ ಸೋಮಯ ಹರಿದಾಸ ಅವರು ಹೇಳಿದ ಕೆಳಕಂಡ ಮಾತುಗಳು ಮೇಲ್ಕಂಡ ಅಭಿಪ್ರಾಯವನ್ನು ಪುಷ್ಟೀಕರಿಸುವಂತೆ ಕಾಣುತ್ತದೆ ಶ್ರೀ ರುಕ್ಮಿಣಿ ಪಂಡಿತರು ಕ್ರಿ ಶ 1610 ರಲ್ಲಿ ಜನಿಸಿ 1710 ರಲ್ಲಿ ದೇಹವಿಟ್ಟಿದ್ದರಿಂದ ಅವರ ಸಮಕಾಲೀನರಾದ ಮಹಿಪತಿದಾಸರು ಅದೇ ಅವಧಿಯಲ್ಲಿ ಇದ್ದರು ಎಂದು ತಿಳಿಯಬಹುದು ಬಿಜಾಪುರದ ಮಹಮ ದ್

1 ಸ್ವಾನಂದ ಸಾಮ್ರಾಜ್ಯ ಪೀಠಿಕೆ—ಪು 20 23

ಆದಿಲ್‌ಶಹನ ಕಾಲದಲ್ಲಿ ದರ್ಬಾರದಲ್ಲಿದ್ದ ಖವಾಸಖಾನನು ಮೊದಲು ಇವರನ್ನು ಲೆಕ ಪತ್ರ ನೋಡುವ ಕೆಲಸಕ್ಕೆ ನಿಯಮಿಸಿಕೊಂಡನು ಈ ಖವಾಸಖಾನನ ಮರಣ ಕ್ರಿ ಶ 1635 ರಲ್ಲಿ ಆದ್ದರಿಂದ ಆಗ ಮಹಿಪತಿದಾಸರು ಸುಮಾರು 24 25 ವರ್ಷ ದವರಿರಬಹುದ ಅಲ್ಲದೆ ಇವರು ಸಪ್ರಸಿದ್ಧ ಗೋಳಗುಮ್ಮಟವನ್ನು ಕಟ್ಟಿಸಿದ ಮಹಮ್ಮದ್ ಆದಿಲ್‌ಶಹನ ಖಾಸಗಿ ಕೋಶಾಧಿಕಾರಿಗಳಾಗಿಯೂ ತದನಂತರ ದಿವಾನ ರಾಗಿಯೂ ಕೆಲಸ ಮಾಡಿ ಕೆಲವು ವರ್ಷಗಳ ಅನಂತರ ದಿವಾಣ ಪದವಿಯನ್ನು ತ್ಯಜಿಸಿದರೆಂದು ತಿಳಿಯುತ್ತದೆ

ಮಹಮ್ಮದ್ ಆದಿಲ್‌ಶಹಾನು ರಾಜ್ಯವಾಳಿದ ಕಾಲ ಕ್ರಿ ಶ 1627–1655 ಅಂದ ಬಳಿಕ ಕ್ರಿ ಶ 1635 ರಿಂದ 1655 ರ ಮಧ್ಯದಲ್ಲಿ ಮಹಿಪತಿದಾಸರು ಉನ್ನತ ಪದದಲ್ಲಿ ಇದ್ದರು ಎಂಬಂತಾಯಿತು ಕ್ರಿ ಶ 1686–88 ರಲ್ಲಿ ಬಿಜಪುರದಲ್ಲಿ ಅತಿ ದೊಡ್ಡ ಪಿಡುಗು ಬಂದು ಸತ್ತವರ ಹೆಣಗಳನ್ನು ತಂಬಿ ಕಳಿಸಿದರಂತೆ ದಿಲ್ಲಿಯ ಔರಂಗಜೇಬ ಬಾದಶಹನ ಚಿಕ್ಕ ಹೆಂಡತಿ ಅಲ್ಲಿಯೇ ತೀರಿಕೊಂಡಳು ಲಕ್ಷಾಂತರ ಜನರು ಸತ್ತರು ಈ ಪಿಡುಗನ್ನು ನಿಲ್ಲಿಸಲು ರಕ್ಮಿಣಿ ಪಂಡಿತರು ಮಹಾಮಾರಿ ಅಷ್ಟಕವನು ರಚಿಸಿ ಸ್ತುತಿಸಿದರು ಆಮೇಲೆ ಪಿಡುಗು ನಿಂತಿತಂತೆ ಆ ಅಷ್ಟಕ ಉಪಲಬ್ಧವಿದೆ ಈ ಪಿಡುಗಿನ ಸಮಯದಲ್ಲಿ ಮಹಿಪತಿದಾಸರು ಕಾಲವಾಗಿ 4–6 ವರ್ಷಗಳಾಗಿದ್ದುವು

ಈ ಮೇಲಿನ ಸಂಗತಿಗಳಿಂದ ಮಹಿಪತಿದಾಸರು ಸು ಕ್ರಿ ಶ 1611 ರಲ್ಲಿ ಜನಿಸಿ ಕ್ರಿ ಶ 1634 ರಲ್ಲಿ ಖವಾಸಖಾನರಲ್ಲಿ ಕೆಲಸಕ್ಕೆ ನಿಂತು ಕ್ರಿ ಶ 1635 ರಿಂದ 1655ರ ವರೆಗೆ ಆದಿಲ್‌ಶಹನ ದರಬಾರದಲ್ಲಿ ಉಚ್ಚಸ್ಥಾನಕ್ಕೇರಿ ಕ್ರಿ ಶ 1665 ರಿಂದ 1681ರ ವರೆಗೆ ಯೋಗಿ (ತ್ಯಾಗಿ?) ಯಾಗಿ ಬಾಳಿ ಕ್ರಿ ಶ 1681 ರಲ್ಲಿ ಕಾಲವಾದರೆಂದು ನಿರ್ಧರಿಸಬಹುದು[2]

ಮೇಲ್ಕಂಡ ಈ ನಿರ್ಣಯಗಳು ಪರಸ್ಪರ ಪೂರಕವಾಗಿರುವುದರಿಂದ ಬೇರೆ ಪ್ರಮಾಣಗಳು ದೊರೆಯುವವರೆಗೆ ಕ್ರಿ ಶ 1611 1681 ನ್ನು ಮಹಿಪತಿರಾಯರ ಕಾಲವೆಂದು ಒಪ್ಪಬಹುದೆಂದು ತೋರುತ್ತದೆ

## ಮಹಿಪತಿರಾಯರ ಜೀವನದಲ್ಲಿ ಗುರುಸಂದರ್ಶನ

ಮಹಿಪತಿರಾಯರ ಜೀವನದಲ್ಲಿ ಶಹಾನಂಗಾ ಅವರ ದರ್ಶನ ಒಂದು ಆಕಸ್ಮಿಕ ಘಟನೆಯಾದರೂ ಅದು ಅವರ ಜೀವನದ ಒಂದು ಮಹತ್ವದ ಘಟನೆಯೆಂದು ಹೇಳಲೇಬೇಕು ಸೂಫೀಪಂಥದ ಅನುಭಾವಿಗಳ ದ ಶಹಾನಂಗಾ ಅವರು ತಮ್ಮ ಯೋಗಬಲದಿಂದ ಹಿಂದೂ ಮುಸ್ಲಿಂರಿಂದಲೂ ಪೂಜ್ಯತೆ ಪಡೆದಿದ್ದರು ಆದರೂ

2 ಸೇವಾತತ್ತ್ವ ಪ್ರಸ್ತಾವನೆ ಪುಟ 8–9

ಅವರ ವರ್ತನೆ ಮಾತ್ರ ವಿಚಿತ್ರ ಬಗೆಯ ದ್ದಾಗಿತ್ತು ಮಹಿಪತಿರಾಯರ ವಿಷಯ ದಲ್ಲಿಯೂ ಶಹಾನಂಗರ ವರ್ತನೆ ವಿಚಿತ್ರವೆನ್ನಿಸುತ್ತದೆ ಬಾದಶಹರು ನಿರ್ಮಿಸುತ್ತಿದ್ದ ಬೇಗಂ ತಲಾವ್ ಕೆರೆಯ ನಿರ್ಮಾಣ ಕಾರ್ಯವನ್ನು ವೀಕ್ಷಿಸಲು ಬಂದ ಬಾದಶಹರ ದಿವಾನರಾಗಿದ್ದ ಮಹಿಪತಿರಾಯರಿಗೆ ಶಹಾನಂಗರ ದರ್ಶನವಾದದ್ದು ಆಕಸ್ಮಿಕವೇ ಆದರೆ ಮಹಿಪತಿರಾಯ ರ ಉಂಗುರವನ್ನು ನೋಡುತ್ತ ಶಹಾನಂಗ ಅದನು ಕಂದಕಕ್ಕೆ ಎಸೆದುದು ವಿಚಿತ್ರವೇ ರಾಯರು ಖಿನ್ನರಾಗಲು ಅದೇ ಕಂದಕಕ್ಕೆ ಇಳಿದು ಅಂಥ ಹದ್ದೇ ನಾಲ್ಕಾರು ಮುದ್ರಿಕೆಗಳನ್ನು ತಂದದ್ದು ವಿಚಿತ್ರ ಮಹಿಪತಿರಾಯರಿಗೆ ಅವುಗಳಲ್ಲಿ ತಮ್ಮ ಮುದ್ರಿಕೆ ಯಾವುದೆಂದು ಗ ರುತಿಸಲು ಸಾಧ್ಯವ ಗದಿದ್ದಾಗ ರಾಯರ ಮುದ್ರಿಕೆಯನ್ನೇ ಆಯ್ದುಕೊಟ್ಟು ಉಳಿದ ಮುದ್ರಿಕೆಗಳನ್ನು ಮತ್ತೆ ಕಂದಕಕ್ಕೆ ಎಸೆದುದು ಮಹಿಪತಿರಾಯರಿಗೆ ಬೆರಗನ್ನುಂಟುಮಾಡಿತು ಇವನ ವೈರಾಗ್ಯ ಸುಖವು ಸಾಮ್ರಾಜ್ಯ ಸುಖಕ್ಕಿಂತ ಮಿಗಿಲು ! ಇದ್ದರಿರಬೇಕು ಇಂಥ ವೈರಾಗ್ಯ! ಇಂಥ ಸುಖ ಇಂಥ ಸಾಮರ್ಥ್ಯ! ಆದರೆ ಇದನೆ ಲ್ಲ ಪಡೆಯ ುವುದೆಂತು ? ಎಂದು ಆಲೋಚನೆಯಿದ್ದಾಗ ಸಾರವಾಡದ ಭಾಸ್ಕರಸ್ವಾಮಿಗಳನ್ನು ಕೂಡಲೇ ಕಂಡು ಆತ್ಮಜ್ಞಾನ ಪಡೆಯುವಂತೆ ಶಹಾನಂಗಾ ಉಪದೇಶ ಮಾಡಿದ್ದು ಮಹಿಪತಿರಾಯ ರ ಜೀವನದಲ್ಲಿ ಹೊಸ ಶಕ್ತಿಯನೆ ೀ ಪ್ರವಹಿಸಿತು ಈ ಲೌಕಿಕ ಸಂಕೋಲೆಯಿಂದ ಪಾರಾಗಿ ಆಧ್ಯಾತ್ಮಿಕ ಜ್ಞಾನವನ್ನು ಸಂಪಾದಿಸಬೇಕೆಂಬ ದೃಢಸಂಕಲ್ಪ ಕೈಗೊಳ್ಳುವಂತೆ ಪ್ರೇರೇಪಿಸಿತು ಆದರೆ ಹೀಗೆ ಮಹಿಪತಿರಾಯ ರು ತಮ್ಮ ಜೀವನದಲ್ಲಿನ ಮಹತ್ವ ಪೂರ್ಣವಾದ ಈ ಘಟನೆಯ ಬಗ್ಗೆ ತಮ್ಮ ಕೀರ್ತನೆಗಳಲ್ಲಿ ಎಲ್ಲೂ ಏನನ್ನೂ ಹೇಳಿಲ್ಲ ಲವರ ಮರಿಮಕ್ಕಳಾದ ಶ್ರೀಪತಿತನುಜ ರು ರಚಿಸಿದ ಕೃತಿಗಳಲ್ಲೂ ಇದು ಉಕ್ತ ವಾಗಿಲ್ಲ ಕೇವಲ ಪರಂಪರಾಗತ ಹೇಳಿಕೆಗಳು ಮಾತ್ರವೇ ಸದ್ಯಕ್ಕೆ ನಮ್ಮ ದೊರೆಯುವ ಆಧ ರವಷ್ಟೇ !

ಸಾರವಾಡದ ಭಾಸ್ಕರಸ್ವಾಮಿಗಳ ಸಂದರ್ಶನ ಸಂದರ್ಭವಂತೂ ರಾಯರ ಜೀವನದಲ್ಲಿಯೇ ಅತಿಶಯವಾದುದು ಭಾಸ್ಕರಸ್ವಾಮಿಗಳು ತಮ್ಮನ್ನು ಹೇಗೆ ಉದ್ಧರಿಸಿದರೆಂಬ ಬಗೆಗೆ ಮಹಿಪತಿರಾಯರು ಅನೇಕ ಕೃತಿಗಳಲ್ಲಿ ಹೇಳಿದ್ದಾರೆ ಸ್ವಭಾವತಃ ಅವಧೂತಪಂಥಕ್ಕೆ ಸೇರಿದ ಭ ಸ್ಕರಸ್ವಾಮಿಗಳು ರ ಯರಿಗೆ ಅನುಗ್ರಹಿಸಿದ ವಿಧಾನವೂ ತುಂಬ ಅದ್ಭುತವಾದ ದು ಭಾಸ್ಕರಸ್ವಾಮಿಯ ದರ್ಶನವಾಗಿ ನಾವಿಲ್ಲಿ ತಮಗಾಗಿ ಬಂದು ಆರು ತಿಂಗಳಾಯಿತು ಇಂದು ಬರೋಣವಾಯಿತೇ ? ಶಹಾನಂಗಾ ವಲ್ಲಿಗಳು ತಮ್ಮನಿ ಲ್ಲಿ ಕಳುಹಿದರೇ ? ಎಂದು ಸ್ವಾಮಿಗಳು ರಾಯರನ್ನು ಕೇಳಿದಾಗ ರಾಯರ ಅಂತರಂಗ ಭಾವಪೂರ್ಣವಾಯಿತಂತೆ ಸ್ವಾಮಿಗಳು ಕೃಪಾದೃಷ್ಟಿ ಬೀರಿ ನೀಡಿದ ಹಾಲು ಕುಡಿದಾಗ ರಾಯರ ವೃತ್ತಿಯಲ್ಲಿ ವಿಶೇಷ ಮಾರ್ಪಾಡಾಯಿತಂತೆ ಅವರ ಅಂತರಂಗದಲ್ಲಿನ ಭೇದಭಾವವಳಿದು ಎಲ್ಲೆಡೆ ಸ್ವಾಮಿ ಯೆ ೀ ಕಂಡರಂತೆ ಅಂತರಂಗದಲ್ಲಿಯೂ ಎಲ್ಲೆಡೆಯೂ ಆತ್ಮಜ್ಯೋತಿ ಹೊಳೆಯಿತಂತೆ ಅವರ ಮಾತಿ

ನಲ್ಲಿಯೇ ಹೇಳುವುದಾದರೆ ಅವರಿಗೆ ತಮ್ಮಲ್ಲಿರುವ ಸದ್ವಸ್ತುವಿನ ಅರಿವಾಯಿತಂತೆ ಈ ಆನಂದದ ವ ಹಿವಾತಿಶಯವನ್ನು ರ ಯ ರು ತಿಳಿಸಿರ ವುದು ಹೀಗೆ

ಇಂದೆನ್ನ ಜನ್ಮ ಪಾವನವಾಯಿತು
ತಂದೆ ಶ್ರೀಗುರು ನಿಮ್ಮ ಚರಣ ದರುಶನದಿ
ಅರ್ಕಮಂಡಲಗಳು ರವಿ ಶಶಿಕಿರಣವು
ಥಳಥಳಿಸುವ ಪ್ರಭೆ ನೋಡಿ ಅನಿಮಿಷದೃಷ್ಟಿಲೆನ್ನ
ಅಕ್ಷದೊಳು ಸಾಕ್ಷಾತ್ ವಸ್ತುಗತಿಯು ನಿಮ್ಮ
ಪ್ರಕಾಶವನು ತಳೆದು ಅಂಧತ್ವ ಕಳೆದಿನ
ಓಂಕಾರ ಮೊದಲ ದ ದ್ವಾದಶನಾದದಾ
ಭೇದದ ಘೋಷವ ಕೇಳಿ ಬಧಿರತ್ವಕಳೆದಿನ್ನ
ಇಪ್ಪತ್ತೊಂದು ಸಾವಿರ ಆರುನೂರರಾ
ಜಪವನ್ನು ತಿಳಿದು ಪ್ರಣವ್ಮಲಿನ
ಸುಷುಮ್ನದೊಳು ಪ್ರಾಣೇಶಮೂರ್ತಿ ನಿಮ್ಮ
ಮಂತ್ರವನು ತಿಳಿದು ಪಿಶಾಚತ್ವಕಳೆದಿನ್ನ
ಸ್ತುತಿಸ್ತೋತ್ರ ಸ್ಮರಿಸುವ ದಿವ್ಯ ನಾಮಾಮೃತವ
ನುಡಿದು ಪಯ ಸ್ವಿಸೀ ಜಿಹ್ವೆಲೆನ್ನ
ಸ್ಮರಣೆ ಚಿಂತನೆಯೊಳು ಸ್ಫುರಣಮೂರ್ತಿ ನಿಮ್ಮ
ಸ್ಮರಿತಗತಿವರಿತು ಮೂಕತ್ವ ಕಳೆದಿನ್ನು

ಕೀರ್ತನೆ 314

ಭಾಸ್ಕರಸ್ವಾಮಿಯೊಂದಿಗೆ ಮಹಿಪತಿರಾಯರ ನಿಕಟ ಸಂಬಂಧವನ್ನು ನಾವು ಈ ಕೀರ್ತನೆಯಿಂದ ತಿಳಿಯಬಹುದು ಭಾಸ್ಕರ ಗುರುಕರಕಮಲ ಸಂಜಾತರಾದ ರಾಯರು ತಮ್ಮ ಅಧಿಕಾರ ಪದವಿಗಳನೆಲ್ಲ ತ್ಯಾಗ ಮಾಡಿದ ರೀತಿ ಬೆರಗಗೊಳಿಸುತ್ತದೆ ಅನುಭಾವ ಭಾಸ್ಕರರಾದ ಭಾಸ್ಕರಸ್ವಾಮಿಗಳು ತಾವು ಯೋಗಬಲದಿಂದ ಸಾಧಿಸಿದ್ದ ಶಕ್ತಿಯನ್ನು ಶಿಷ್ಯರಾದ ರಿಗೆ ನಿರ್ವಾಚನೆಯಿಂದ ಧಾರೆಯೆರೆದರು ಹೀಗೆ ರಾಯರು ಹನೆರಡು ವರ ಷದಲ್ಲಿ ಮ ಗಿವಂಥ ಯೋಗವನ್ನು ಹನೊಂದು ತಿಂಗಳಲ್ಲಿ ಮುಗಿಸಿ ದಿವ್ಯಾನುಭವವನ್ನು ಪಡೆದರೆಂಬುದನು ಬಗೆ ಬಗೆಯಾಗಿ ಬಣ್ಣಿಸಿದ್ದಾರೆ

**ಅಂಕಿತ**

ಸಾಮಾನ್ಯವಾಗಿ ಶಿಷ್ಯನಿಗೆ ದೀಕ್ಷೆ ನೀಡ ವ ಗ ರುವೇ ಆತನಿಗೆ ಅಂಕಿತವನ್ನು ನೀಡುವುದು ನಡೆದುಕೊಂಡು ಬಂದ ಒಂದು ಸಂಪ್ರದ ಯ ಅಥವಾ ಕೆಲವರು

ತಂತಮ್ಮ ಇಷ್ಟದೇವತೆಯ ಹೆಸರಿನಲ್ಲಿಯೂ ಅಂಕಿತವನ್ನು ಎಳಿಸುವುದುಂಟು ಕೆಲವೊಮ್ಮೆ ಗುರುಗಳು ಶಿಷ್ಯರಿಗೆ ಕನಸಿನಲ್ಲಿ ಕಾಣಿಸಿಕೊಂಡು ಅಂಕಿತವನ್ನು ಅನು ಗ್ರಹಿಸುವುದೂ ಉಂಟು ಆದರೆ ಮಹಿಪತಿರಾಯರು ಅಂಕಿತದ ಬಗ್ಗೆ ಎಲ್ಲೂ ಯಾವುದೇ ಸುಳಿವು ನೀಡಿಲ್ಲ ಹೀಗಾಗಿ ಅವರ ಜನ್ಮನಾಮ ಮಹಿಪತಿ ಎಂದೂ ಕಾಲಾನ ಕ್ರಮದಲ್ಲಿ ಅದು ಮಹಪತಿರಾಯ ರೆಂದು ಮಹಿಪತಿದಾ"ರೆಂದು ಬಳಕೆಗೆ ಬಂದಿರಬಹುದು ಮಹಿಪತಿ ಎಂಬ ಹೆಸರಿನಲ್ಲಿ ಮಹಿಗೆ ಪತಿ ಎಂಬ ಭಗವನ್ನಾಮವೂ ಸೇರಿಕೊಂಡಿರುವುದರಿಂದ ತಮ್ಮ ಕಿ ರ್ತನೆಗಳಲ್ಲಿ ಮಹಿಪತಿರಾಯ ರು ತೆರಳಮಹಿಪತಿ ದಾಸಮಹಿಪತಿ ಮೂಢ ಮಹಿಪತಿ ಮಹಿಪತಿಗುರು —ಇವೇ ಮೊದಲಾದ ಅಂಕಿತ ಗಳನ್ನು ಬಳಸಿ ತಮ್ಮ ದಾಸ್ಯಭಾವವನು ಪ್ರಕಟಿಸಿದ್ದಾರೆ ಒಹುಶಃ ಅವರ ಮಗ ಕ ಷ್ಣ ರಾಯನು ತಂದೆಯಿಂದಲೇ ಸ್ಫೂರ್ತಿಪಡೆದು ಗುರುಮಹಿಪತಿ ತಂದೆ ಮಹಿಪತಿ ಮಹಿಪತಿಸುತ ಮಹಿಪತಿನಂದನ ಮಹಿಪತಿಕಂದ ಮಹಿಪತಿ ತನಯ ಮುಂತಾದ ಅಂಕಿತಗಳನ್ನು ಬಳಸಿರಬಹುದೆಂದು ತೋರುತ್ತದೆ ಆದರೆ ಹೀಗೆ ಪೂರ್ವಾಶ್ರಮ ದ ನಾಮವನ್ನು ಅಂಕಿತವೆಂದು ಬಳಸಿಕೊಂಡ ನಿದರ್ಶನ ಹರಿದಾಸಸಾಹಿತ್ಯದಲ್ಲಿ ವಿರಳ ಮಹಿಪತಿರಾಯರನು ಮಹಿಪತಿದಾಸರೆಂದೂ ಮಹಿಪತಿ ಸ್ವಾಮಿಗಳೆಂದೂ ಕರೆಯು ವ ರೂಢಿ ಇದೆ ಆ ಮಹಿಪತಿರಾಯ ರೆಂಬ ಹೆಸರಿನಲ್ಲಿ ವಿಶಿಷ್ಟವಾದ ಗ ಣವೊಂದು ಕಾಣುವು ದರಿಂದ ಈಗಲೂ ಕೆಲವೆಡೆ ಅವರನ್ನು ಈ ಹೆಸರಿನಿಂದಲೇ ಕರೆಯ ತ್ತಿರುವುದರಿಂದ ಪಂಡಿತರು ಅವರನ್ನು ಮಹಿಪತಿರಾಯರೆಂದೇ ಹೆಸರಿಸಿದ್ದಾರೆ

## ಆಧ್ಯಾತ್ಮಿಕದೃಷ್ಟಿ

ರಾಯ ರಲ್ಲಿ ಪರಮಾರ್ಥಪ್ರೀತಿಯು ಆನ ವಂಶಿಕವಾಗಿ ಬೆಳೆದು ಬಂದಿತ್ತು ಏಕೆಂದರೆ ಅವರ ಮನೆತನ ಪವಿತ್ರ ಆಚಾರ್ಯರದ್ದು ಅವರ ತಂದೆ ಸಾತ್ವಿಕ ಪುರ ಷರು ವೇದೋಪನಿಷತ್ತುಗಳ ಅಧ್ಯಯನ ಅಧ್ಯಾಪನವನ್ನು ಚೆನ್ನಾಗಿ ಮಾಡಿದವರು ರಾಮಾ ಯಣ ಮಹಾಭಾರತ ಭಾಗವತಾದಿ ಪುರಾಣಗಳ ಆಳವಾದ ಅಭ್ಯಾಸವುಳ್ಳವರು ಎಲ್ಲ ಶಾಸ್ತ್ರಪಾರಂಗತರು ಪರೋಕ್ಷಜ್ಞಾನಿಗಳು ಶುಕ್ಲವೃತ್ತಿಯಿಂದ ಜೀವನನಿರ್ವಹಣೆ ಪುರಾಣ ಪ್ರವಚನಗಳ ಮೂಲಕ ಶ್ರೀಹರಿಯ ಮ ಹಿಮೆಯನು ಕೊಂಡಾಡಿದವರು ರಾಯ ರ ತಾಯಿಯ ಬಗ್ಗೆ ಹೆಚ್ಚಿನ ಸಂಗತಿ ತಿಳಿದು ಬಂದಿಲ್ಲ ಆದರೆ ಹಿರಿಯ ರ ತಾಯಂದಿರೂ ಹಿರಿಯ ರೇ ಇರಬಹ ದು ಇಂಥ ಸಾತ್ವಿಕ ದಂಪತಿಗಳಿಂದ ಹುಟ್ಟಿ ಅಂಥವರ ಭಕ್ತಿಯುತ ಸನ್ನಿಧಿಯಲ್ಲಿ ಬೆಳೆದ ಮ ಗುವಿನಲ್ಲಿ ಭಕ್ತಿಭಾವ ತಾನಾಗಿ ಬೆಳೆ ದರೆ ಆಶ್ಚರ್ಯವಿಲ್ಲ ಶುದ್ಧ ಪಾರಮಾರ್ಥಿಕ ಜೀವನವನ್ನು ನಡೆಸಿ ಶ್ರೇಷ ಹರಿದಾಸ ರಾಗಿ ಉತ್ತಮ್ಮ ಅನುಭಾವಿಗಳಾಗಿ ಪರಮ ಯೋಗಿಗಳಾಗಿ ನಿಸ್ಸೀಮ ತ್ಯಾಗಿಗಳಾಗಿ ಬಾಳಿದರು ಇವರ ವ್ಯಕ್ತಿತ್ವ ವೈವಿಧ್ಯಪೂರ್ಣ ಅವರು ರಚಿಸಿದ ನೂರಾರು ಕೀರ್ತನೆ ಗಳಲ್ಲಿ ಅವರ ಆಧ್ಯಾತ್ಮಿಕ ದೃಷ್ಟಿಯ ಸ್ವರೂಪವೇನೆಂಬ ದನ್ನು ಕಾಣಬಹುದು

ದೇವರ ಪೂಜೆ ಅತಿಥಿಸತ್ಕಾರ ಸತ್ಪಾತ್ರದಾನ ಸತ್ ಶಾಸ್ತ್ರಶ್ರವಣ ಮನನ– ಇವುಗಳು ಯಥಾಸಾಂಗವಾಗಿ ನೆರವೇರಿ ಮಹಿಪತಿದಾಸರಲ್ಲಿ ಭಕ್ತಿ ಭಾವದ ಬೀಜವನ್ನು ಬೆಳೆಸಿರಬಹುದು ಎಂ ಎಸ್ ದೇಶಪಾಂಡೆಯವರು ಅವರ ಕೆಲವಾರು ಕೀರ್ತನೆಗಳನ್ನವಲಂಬಿಸಿ ಸಾಕಷ್ಟು ವಿಚಾರಮಾಡಿದ್ದಾರೆ ರಾಯರು ರಚಿಸಿದ ಇಷ್ಟ ದೈವಸ್ತುತಿ ಅನೇಕ ಪೌರಾಣಿಕ ಪ್ರಸಂಗಗಳ ಉಲ್ಲೇಖ ಜನರಿಗೆ ಆಗಿಂದಾಗ್ಗೆ ಹೇಳಿದ ನೀತಿಬೋಧೆಗಳು ಇವುಗಳಿಂದ ಅವರ ಆಧ್ಯಾತ್ಮಿಕ ದೃಷ್ಟಿಯ ಸ್ವರೂಪ ವನು ತಿಳಿಯಬಹುದು ಮಹೀಪತಿರಾಯರ ಪುತ್ರ ಕೃಷ್ಣರಾಯರು ರಚಿಸಿದ ನೆನೆದು ನಮಿಸುವೆ ನಾನು ವಾರಂವಾರ ಎಂಬ ಕೀರ್ತನೆಯಿಂದ ಅವರ ಮನೆತನದವರ ಪರಂಪರಾಗತವಾದ ಆಚಾರ ವಿಚಾರಗಳ ಸಂಪ್ರದಾಯ ವೇನೆಂಬುದನು ತಿಳಿಯ ಬಹುದು ಮೊದಲ ಎರಡು ಪಾದಗಳಲ್ಲಿ ಶ್ರೀ ಮನ್ಮಧ್ವಾಚಾರ್ಯರಿಂದಹಿಡಿದು ಅವರ ಪಟ್ಟ ಶಿಷ್ಯರಾದ ಪದ್ಮನಾಭತೀರ್ಥ ನರಹರಿತೀರ್ಥ ಮಾಧವತೀರ್ಥ ಮತ್ತು ಅಕ್ಷೋಭ್ಯ ತೀರ್ಥರ ಉಲ್ಲೇಖವಿದೆ ಮುಂದೆ ಅಕ್ಷೋಭ್ಯತೀರ್ಥರ ಪರಂಪರೆಯಲ್ಲಿ ಬೆಳೆದು ಬಂದ ಶ್ರೀಮದುತ್ತರಾದಿ ಮಠದ ಯತಿವರ್ಯರ ಪೀಳಿಗೆಯಲ್ಲಿ 24ನೆಯ ವರಾದ ಸತ್ಯಬೋಧರವರೆಗೆ ಸುತ್ತಿಸಿದ್ದಾರೆ ಇದರಿಂದ ಮಹಿಪತಿರಾಯರು ಮಾಧ್ವವ ತೀಯರಲ್ಲಿ ಯಾವ ಮಠಕ್ಕೆ ಸೇರಿದವರೆಂದು ತಿಳಿಯಬಹುದು ಅಲ್ಲದೆ ಶ್ರೀಮದುತ್ತರಾದಿ ಮಠದ ಗಣ್ಯಸ್ಥಾನಪಡೆದ ಶ್ರೀ ಪ್ರಹ್ಲಾದ ಕೃಷ್ಣಾಚಾರ್ಯ ಉಮರ್ಜಿಯವರು ಅವರ ಮನೆತನದ ಆಚಾರ್ಯರೆಂದೂ ಶ್ರೀ ಮಹಿಪತಿರಾಯರು ಮತ್ತು ಕೃಷ್ಣರಾಯರು ಆ ಆಚಾರ್ಯರ ಅನುಗ್ರಹಕ್ಕೆ ಪಾತ್ರರಾಗಿದ್ದರೆಂದೂ ಅವರ ಮನೆಯಿಂದ ತಿಳಿದುಬಂದಿದೆ ಇದೆ ಕೀರ್ತನೆಯ 3ನೇ ನುಡಿಯಲ್ಲಿ ಆದ್ಯರು ಮೊದಲ್ಗೊಂಡು ಹರಿದಾಸ ಪರಂಪರೆಯಲ್ಲಿ ಹೆಸರುವೆತ್ತ ಶ್ರೀಪಾದರಾಜರು ಶ್ರೀ ವ್ಯಾಸರಾಯರು ಶ್ರೀ ವಾದಿರಾಜರು ಪುರಂದರದಾಸರು ಮತ್ತು ಕನಕದಾಸರ ಸುತ್ತಿಯು ಇದೆ ಎಲ್ಲಿದ್ದ್ಯೋ ಹರಿ ಹೇಳಯ್ಯಾ ಎಂಬ ಪದ್ಯಗಳಲ್ಲಿ ರಾಯರ ದೇವ ಶೋಧನದ ರೀತಿಯನ್ನು ಕಾಣಬಹುದು

ಹೆಚ್ಚಾಗಿ ಹರಿದಾಸಸಾಹಿತ್ಯದಲ್ಲಿ ಹರಿಸರ್ವೋತ್ತಮತ್ವ ಹರಿನಾಮ ಮಹತ್ವ ಶೋಧನೆ ಹರಿದಾಸರ ಹಿರಿಮೆ ಕೀರ್ತನಕರರ ಆತ್ಮಲೋಕನೀತಿ ಇವುಗಳನ್ನು ಪ್ರತಿ ಪಾದಿಸುವಾಗ ಉಪಮಾನ ರೂಪಕ ಸರಳ ಶೈಲಿ ಮೊದಲಾದುವು ಮಹಿಪತಿದಾಸರ ರಚನೆಯಲ್ಲಿ ವಿದಿತವಾಗುತ್ತವೆ ಇತರ ದಾಸರಧಾಟಿ ದೃಷ್ಟಿಕೋನಗಳು ಮಹಿಪತಿ ದಾಸರ ಮೇಲೆ ಪ್ರಭಾವ ಬೀರಿರುವುದನ್ನು ಕೆಳಕಂಡ ಕೀರ್ತನೆಯಲ್ಲಿ ಕಾಣಬಹುದು

ಸಕಲವೆನಗೆ ನೀನೆ ಶ್ರೀಹರಿಯೆ
ತಂದೆ ತಾಯಿ ಸ್ವಹಿತಾತ್ಮನು ನೀನೆ
ಬಂಧು ಬಳಗ ಸರ್ವಾತ್ಮನು ನೀನೆ

ದೈವಗುರು ಕ ಲಗೊ ತ್ರನು ನೀನೆ
ಕಾವಕರುಣ ಸೂತ್ರಾಂತ್ರನು ನೀನೆ
ದ್ರವ್ಯ ಧನವು ಸಕಲಾಶ್ರಯು ನೀನೆ
ದಿವ್ಯಾಲಂಕೃತ ಭೂಷಣ ನೀನೆ

(ಕೀ 526)

ಇದರಲ್ಲಿ ಮಹಿಪತಿದಾಸರಲ್ಲಿನ ಉಜ್ವಲ ಹರಿಭಕ್ತಿ ಕಂಡುಬರುತ್ತದೆ ಹೀಗೆ ಮಹಿಪತಿದಾಸರೂ ಸಕಲವೆಲ್ಲವು ಹರಿ ಸೇವೆ ಎನ್ನುಯುಕುತಿವಂತರು ಹರಿಭಕುತಿ ಯೆನ್ನಿ ಎಂದು ಕೀರ್ತನೆಯನ್ನು ಹಾಡತೊಡಗಿದರೆಂದರೆ ಉದ್ದಕ್ಕೂ ಹರಿದಾಸರ ಧಾಟಿಯೇ ಕೇಳಿಸ ತ್ತದೆ

ಹುಟ್ಟಿ ಬಂದಿಹುದೆ ವಿರ ಲನ ಸುಸೇವೆಗನ್ನಿ
ಸೃಷ್ಟಿಯೊಳಿಹ್ಯವೆ ಶ್ರೀ ವಿಷ್ಣು ಸಹವಾಸವೆನ್ನಿ

ಮಹಿಪತಿ ದಾಸರಲ್ಲಿನ ದೈವನಿಷೆ ನಿಬ್ಬೆರಗನ್ನುಂಟ ವಾಡುವಂಥದು ಹಂಸ ನಾಮಕ ಭಗವಂತನನ್ನು 'ಸಕಲಾಗಮ ಪೂಜಿತ ಏಕೋ ದೇವನೀತ ಏಕಾಕ್ಷರ ಬ್ರಹ್ಮೀತ ಹಂಸನಾಥ ಯತಿ ಮ ನಿವಂದಿತ ಪಿತಾಮಹನ ಮತ ವಿಶ್ವವ್ಯಾಪಕನೀತ ವಿಶ್ವರೂಪ ನಿರ್ಮಿತ ವಿಶ್ವಾತ್ಮನಹುದೀತ ಹಂಸನಾಥ ಎಂದು ಸುತ್ತಿಸಿದ್ದಾರೆ

ಶ್ರೀ ಮಹಿಪತಿದಾಸರ ಮಗ ಕೃಷ್ಣರಾಯರಿಂದ ರಚಿತವಾದ ನೆನೆದು ನಮಿಸುವೆ ನಾನಂ ವಾರಂವಾರ ಎಂಬ ಕೀರ್ತನೆಯಿಂದ ಅವರ ಮನೆತನದ ಪರಂಪರಾಗತವಾದ ಆಚಾರ ವಿಚಾರಗಳು ಸಂಪ್ರದಾಯಗಳು ವಿನಂಬುದನು ಸ್ಪಷ್ಟವಾಗಿ ತಿಳಿಯ ಬಹುದು ಹರಿನಾವಂ ಉಳ್ಳವಗೆ ನಾಸ್ತಿಕವೆಲ್ಲಿಹ ದವಗೆ ಹರಿದಯವುಳ್ಳವಗೆ ದೈನ್ಯ ವೆಲ್ಲಿಹದವಗೆ, ಹರಿಯಾಭಾವಿಕಗೆ ಭವವುಂಟೆ ಅವಗೆ ಹರಿಭಕ್ತಿಯುಳ್ಳವಗೆ ತಾ ಭಯಂ ವೆಲ್ಲಿಹದವಗೆ ಎಂಬುದನ್ನು ಅವರು ದೃಢವಾಗಿ ನಂಬಿದ್ದರು

ಹೀಗೆ ಕೃಷ್ಣರಾಯರು ಹರಿದಾಸ ಸಾಹಿತ್ಯದ ಪ್ರಥಮ ಘಟ್ಟದ ಮುಖ್ಯರನ್ನು ಕೊಂಡಾಡಿರುವುದನ್ನು ನೋಡಿದಾಗ ಈ ವಂಶಿ ಯರಿಗೆ ಹರಿ ದಾಸರಲ್ಲಿ ಇರುವ ಭಾರೀಪ್ರೇಮಗಳು ವ್ಯಕ್ತವಾಗುತ್ತವೆ ತಿುಗಿನ ಕಿ ರ್ತನಕ್ಷೇತ್ರದಲ್ಲಿ ಪ್ರಸಿದ್ಧರಾಗಿರುವ ತಾಳ್ಳಪಾಕಂ ಅಣ್ಣಮಾಚಾರ್ಯರನು (ತಾಳಪಾಶ) ಅವರು ಈ ಪರಂಪರೆಯಲ್ಲಿ ಸುತ್ತಿಸಿದ್ದಾರೆ ಇದು ಅವರ ಹೃದಯವೈಶಾಲ್ಯವನ್ನು ತೋರಿಸು ತ್ತದೆ ಶ್ರೀ ಮನ್ಮಧ್ವಾಚಾರ್ಯರು ಪ್ರತಿಪಾದಿಸಿದ ಹರಿಸರ್ವೋತ್ತಮ ತ್ವವನ್ನು ನಂಬಿ ಅದರ ಮೂಲಕ ತಮ್ಮ ಆಧ್ಯಾತ್ಮಿಕ ಬಲವನ್ನು ಬೆಳೆಸಿಕೊಂಡರು ಎನ್ನುವು ದಕ್ಕೆ ಮಹೀಪತಿರಾಯರು ರಚಿಸಿದ ಕೆಳಕಂಡ ಕೀರ್ತನೆಯನ್ನು ಕಾಣಬಹುದು

ಹರಿರೇವ ಪರೋ ಹರಿರೇವ ಗುರೋ
ಹರಿಯೇ ಗುರುವೆಂದರವ್ವಿ ರೋ

ಗ ರು ಮಧ್ವ ಪರ್ದ್ಹೇಳಿದ ನಿಜಕೀಲು
ಅರಿತ ಕೊಂಡಿದಿದೆ ಮೊದಲಂ
ಪರಮ ಭಾಗವತರನುಭವದ ಬಾಗಿಲು
ಪರಗತಿಸಾಧನಕಿದೆ ಮಿಗಿಲು

ಕೀರ್ತನೆ 639

ಶ್ರೀ ಮಹಿಪತಿರಾಯರಕೃತಿಗಳು ಪು 430–431

ಶ್ರೀ ಹರಿಯ ಬಗ್ಗೆ ಮಹಿಪತಿದಾಸರು ಅನೆ ಕ ಕೀರ್ತನೆಗಳನ್ನು ರಚಿಸಿರು ವರು ಶ್ರೀ ಹರಿ ನಂಬಿದವರಿಗೆ ಸರಿಯೆ ಜಗದೊಳಗೇ। ಹರಿದಾಸಾದವಗೆ ಸಕಲ ಮಾನ್ಯವಾಗೆ ಎಂಬುದನ್ನು ಮನಗಂಡು ಹರಿಹರಿಯೆಂದು ನೆನೆಯೋ ಮರೆಯದೆ ಮನ ಜ ಎಂದು ಎಚ್ಚರಿಸಿ

ಏಳುತ ಕೂಡುತ ಮಲಗುತ ನೆನಿಯೋ
ಹಲವು ಪರಿಲಿ ಶ್ರೀಹರಿ ಸರ್ವೋತ್ತಮ
ನೆಲೆಗೊಂಡಿರೊ ಮಹಿಪತಿ ನಿಜನಾಮದ
ಸಲಹುತ ಸ್ವಾಮಿ ಶ್ರೀಗುರು ಶ್ರೀಪತಿಯು

ಕೀರ್ತ 641

ಪು 432

ಹರಿನಾಮಸ್ಮರಣೆಯ ಮಹತ್ವನ್ನು ಹೇಳುತ್ತ ಎಲ್ಲಿ ಶ್ರೀಹರಿನಾಮ ಘೋಷ ಅಲ್ಲಿ ಸಕಲ ಸುಖ ಸಂತೋಷ। ಸುಲಭಲಿಹುದು ಭವಭಯದ ನಾಶ। ಹರಿನಾಮ ಘೊ ಷ ಎಂದು ಹರಿನಾಮ ಘೋಷದ ಹಿರಿಮೆಯ ನ್ನು ಎತ್ತಿ ಹೇಳಿ ಹರಿಯ ನೆನೆಯ ದವನನು ಅಧಮನೆಂದು ತೀವ್ರವಾಗಿ ಖಂಡಿಸಿರುವುದು ಮಹಿಪತಿರಾಯರ ಸಾತ್ವಿಕ ಸಂತಾಪವನ್ನು ತೋರುತ್ತದೆ

ಹರಿಯ ನರಿಯದ ಜನುಮ ಧರೆಯೊಳಗಧಮಾಧಮ
ಹರಿಯ ನೆನೆಯದ ನರನು ಪಾಮರನಂ
ಹರಿಗೆ ನಮಿಸದ ಶಿರವು ತೋರುವ ಬೆಟ್ಟನ ತರವು
ಹರಿಗೆ ವಂದಿಸದ್ವಣೆಯು ಹುಳಕಮಣಿಯು
ಹರಿಗೆ ಮುಗಿಯದ ಕೈಯ ಎ ಮುರಕಕೀಲಿಯ ಕೈಯು
ಹರಿ [ಯ]ಕೊಂಡಾಡದ ನಾಲಿಗೆ ಒಡಕ ಸೊಲಿಗೆಯು

ಕೀರ್ತ್ನ 632

ಪು 426

ಇಷ್ಟೇ ಅಲ್ಲ ಹರಿನಾಮಸ್ಮರಣೆಯಿಂದ ಉದ್ಧಾರಗೊಂಡ ಭಕ್ತರಿಗೆ ಸಂಬಂಧಿಸಿ ದಂತೆ ಹರಿ ಎಂದು ಪಡೆದ ಪ್ರಹ್ಲಾದ ಪ್ರತ್ಯಕ್ಷ ಹರಿ ಎಂದು ಪಾಂಡವರಿಗಾದ ಸುಪಕ್ಷ

ಎಂದು ಹೇಳುತ್ತ ಕೊನೆಗೆ ಹರಿ ಹರಿ ಎಂದು ಕೊಂಡಾಡುವ ಬನ್ನಿ। ಹರಿ ಮಹಿಮತಿ ಗ ರುತ ಯಿತಂದ್ಯೆನ್ನಿ (ಕೀ 640) ಎಂದು ಸಂದರ್ಭೋಚಿತವಾಗಿ ಹೇಳಿರುವರು

ಮಹಿಪತಿದಾಸರಿಗೆ ಶ್ರೀಹರಿಯಭಕ್ತರನ್ನು ಕಂಡರೂ ತುಂಬು ಅಭಿಮಾನ ಅದನ್ನೇ ಅವರು ತಮ್ಮ ಕೀರ್ತನೆಯಲ್ಲಿ ಹೇಳಿದ್ದು ಹೀಗೆ

ಹರಿನಂಬಿದವಂಗೆ ಸರಿಯೆ ಜಗದೊಳಗೆ
ಹರಿದಾಸಾದವಗೆ ಸಕಲ ಮಾನ್ಯವಗೆ
ಹರಿಜ್ಞಾನವುಳ್ಳವಗೆ ದಣಿವಿಕಲ್ಲಿಹದವಗೆ
ಹರಿಧ್ಯಾನ ಉಳ್ಳವಗೆ ತಾಂ ದುರಿತವೆಲ್ಲಿಹದವಗೆ
ಹರಿದಯುಳ್ಳವಗೆ ದೈನ್ಯವೆಲ್ಲಿಹದವಗೆ
ಹರಿಯ ಭಾವಿಕಗೆ ಭವವುಂಟೆ ಅವಗೆ
ಹರಿಭಕ್ತಿಯುಳ್ಳವಗೆ ತಾ ಭಯ ವೆಲ್ಲಿಹದವಗೆ
ಹರಿದಾಸರದಾಸಾದ ಮ ಹಿಪತಿಗೆ ಸರಿಯುಂಟೆ
ಪೂರ್ವಪುಣ್ಯದ ಫಲಸ್ಫುತಿಗೆ ॥ಕಿ 628॥

ಹರಿಭಕ್ತರ ಮಹಿಮೆಯನ್ನೂ ದಾಸರು ಉಲ್ಲೇಖಿಸುತ್ತ ಹರಿಭಕುತರ ದರುಶನವು ಅತಿ ಹರುಷವು ಎಂಬ ಕೀರ್ತನೆಯಲ್ಲಿ

ಹರಿ ಭಕ್ತರ ಸಂಗ ಸ್ನಾನ ಗಂಗತುಂಗ
ಹರಿಮಹಿಮರ ಅಂಗ ಅಂತರಂಗ
ಹರಿಪರಮಾನಂದ ಗ ರು ಕರುಣಾಕ್ಷಪಾಂಗ
ತರಳ ಮಹಿಪತಿ ಭವಭಯವು ಭಂಗ ॥ಕೀ 63॥

ಮಹಿಪತಿ ರಾಯರಿಗೆ ಹರಿಯಲ್ಲಿ ಅಚಲಭಕ್ತಿ ಹಾಗೆಯೇ ಶ್ರಿ ರಾಮ ಮತ್ತು ಕೃಷ್ಣನ ಮೇಲೂ ಅಸೀಮ ಭಕ್ತಿ ಸಾರ್ವಭೌಮನಿ ರಾಮ ಶರಣ ರಕ್ಷಕನೇಮ ಎಂದು ಪ್ರಾರಂಭವಾಗಂವ ಕೀರ್ತನೆಯಲ್ಲಿ ಮಹಿಪತಿದಾಸರು

ಸೀತಾ ಮನೋಹರ ಸೇತ ಗಟ್ಟಿದ ಶೂರ
ಹತ್ತು ತಲಿಯವನ ಮಾಡಿದೋ ಸಂಹಾರ
ಖ್ಯಾತಿಗೆ ತಂದ್ಯೊ ವಿಭೀಷಣಗೆ ಸ್ಥಿರ
ಕುಡಂವೆ ನೀ ವರಪೂರ್ಣ ದೃಢ ಭಕ್ತರ ಪ್ರಾಣ
ಆಡುದೊಂದೇ ವಚನ ಹಿಡಿವದೊಂದೇ ಬಾಣ
ಜಡವಾಗಿದ್ದ ಶಿಲೆಯು ಮಾಡಿದ್ಯುದ್ಧರಣ

(ಕೀ 582)

ಮಹಿಪತಿರಾಯ ರು ಅನೇಕ ಕೀರ್ತನೆಗಳಲ್ಲಿ ಶ್ರೀರಾಮನ ಮಹಿಮೆಯನ್ನು ಉತ್ಸಾಹದುಂಬಿ ವರ್ಣಿಸಿದ್ದಾರೆ ಪರವಶತೆಯಿಂದ ಹಾಡಿದ್ದಾರೆ ರಾಮರಾಮೆನ್ನಿರೋ ಮುಖ್ಯತಾಕಾರಣ ಎಂದು ಆರಂಭವಾಗುವ ಕೀರ್ತನೆಯಲ್ಲಿ ಅವರು

ಒಮ್ಮೆ ಸ್ಮರಿಸಿರೋ ರಾಮರಾಮೆಂದು ತಾ
ಸುಮ್ಮನೆ ಬಾಹುದು ಸಾರಸ ಅಮೃತ
ತಮ್ಮನ ಜೀವ ಪಡೆದ ಸಂಜೀವ ತಾ
ಝುಮ್ಮನೆ ಹಾದಿ ಮಾಡಿತು ಸವ ಎದ್ರತಾ
ರಾಮನಾಮವೆ ತಾ ಪಾಪಕೆ ಯರ್ವತಾ (?)
ನಾಮ ತೇಲಿಸಿತು ನೀರೊಳು ಪರ್ವತ
ನೇಮದಿಂದಾದರ ಭಕ್ತರರಹ ತ
ಸೀಮಿಕ್ಕಿಗೊಟ್ಟತು ಭಕ್ತಗೆ ಶಾಶ್ವತ
ನಾಮವೆ ಕವಿಕುಲವ ತಾರಿಸಿತು
ಸೋವ ಶೇಖರಗೆ ತಾನೆ ಪ್ರಿಯವಾಯಿತು
ಗ್ರಾಮನಂದಿಯಲಿ ನೇಮ ಪೂರಿಸಿತು
ರೋಮರೋಮೆಲ್ಲ ಭರಿತಗ ಸುಖವಾಯಿತು (ಕೀ 483)

ಹೀಗೆ ಶ್ರೀ ರಾಮನಾಮ ಸ್ಮರಣೆ ಮಾತ್ರದಿಂದ ಪುಳಕಗೊಳ್ಳುವ ಶ್ರೀ ಮಹಿಪತಿರಾಯ ರು ಕೃಷ್ಣಾವತಾರವನ್ನೂ ಕೃಷ್ಣನ ಬಾಲಲೀಲೆ ಹಾಗೂ ಅವನ ಅನಂತ ಮಹಿಮೆಗಳನ್ನು ಕೆಲವು ಕೀರ್ತನೆಗಳಲ್ಲಿ ಸ್ತುತಿಸಿದ್ದಾರೆ ಕೃಷ್ಣ ಎಂಥಾದೊ ನಿನ್ನ ಕರುಣೆ ಎಂಬ ಕೀರ್ತನೆಯಲ್ಲಿ

ತುರುಗಳ ಕಾಯ್ದ್ಯೊ ನೀ ಗೋವಿಂದ
ಬೆರಳಲೆತ್ತಿದ್ಯೊ ಗಿರಿಯ ಮು ಕುಂದ
ಮರಳು ಮಾಡಿದ್ಯೊ ಗೋಪೀಕರ ವೃಂದ
ಹರುಷಗೈಸಿದೆ ಅನೇಕ ಪರಿಯಿಂದ
ಹಾಲು ಬೆಣ್ಣೆ ಕದ್ದು ತಿಂಬು ನಿನಾ ಟ
ಬಾಲಗೋಪಾಲನ ಕೂಡಿ ನಿನೂ ಟ
ಚಲುವ ನಾರೇರ ನೋಡುವ ನಿನ್ನೋಟ
ಒಲಿದು ಕ ಟ್ಟೆಯ ಬೆನ್ನ ಮಾಡಿದ್ಯೊ ನೀಟ ಕೀ 170

ಎಂದು ಕೀರ್ತಿಸ ತ್ತ ಶ್ರೀಕೃಷ್ಣನ ಅಪಾರ ಮಹಿಮೆಯನ್ನು ಮನದುಂಬಿ ಹೃದಯತುಂಬಿ ಸ್ತುತಿಸಿದ್ದಾರೆ ಶ್ರೀ ಕೃಷ್ಣನ ಮಹತ್ವವನ್ನು ಎರಡೆರಡೇ ಸಾಲುಗಳ ಲ್ಲಿಯೂ ಅಡಕವಾಗಿ ವರ್ಣಿಸಿದ್ದುಂಟು

ಅಸುವ ಪೂತನಿ ಹೀರಿದಾತ ಕಂಸನ ಮಡುಹಿದಾತ
ವಂಶ ಕೌರವರ ತಾನು ಸಂಹರಿಸಿದಾತ
ಬಾಲಕನಹುದೀತ ಮೂಲೋಕ ಪಾಲಕನಿ ತ
ಸಲಹುತಿಹ ಮಹಿಪತಿ ಮೂಲಾಗ್ರಜನೀತ

ಜೊತೆಗೆ ವಾಸ ದೇವನೊಬ್ಬನೇ ಸರ್ವೇಶ । ಭಾಸ್ಕರಕೋಟಿಪ್ರಕಾಶ । ಭಾಸ ತಲೀಹ್ಯ ವರಗ ರು ದೇವೇಶ। ದಾಸ ಮಹಿಪತಿಪ್ರಾಣೇಶ ಎಂದು ವಾಸು ದೇವನನ್ನು ಅನೇಕ ಕೀರ್ತನೆಗಳಲ್ಲಿ ಸುತ್ತಿಸಿದ್ದಾರೆ ಅಲ್ಲದೆ ಮಹಿಪತಿದಾಸರು ಶ್ರೀಲಕ್ಷ್ಮಿಯನ್ನೂ ಶಾರದೆಯನ್ನೂ ಸುತ್ತಿಸಿರುವುದು ಅತ್ಯಂತ ಮನೋಜ್ಞವಾಗಿದೆ ವ ಹಿಪತಿರಾಯ ರು ಲಕ್ಷ್ಮಿಯನ್ನು ಸ್ತುತಿಸಿದ್ದು ಹೀಗೆ

ನಮ್ಮಮ್ಮನಕಂಡೆ ಬೊಮ್ಮನ ಪಡೆದಿಹಳ
ಅಮ್ಮನಕಂಡನಗೆ ಸುಅಮೃತ ಪಾನವಾಯಿ ತು
ಸಂಭ್ರಮದಿಂದಲೆನಗೆ ಬ್ರಹ್ಮಾಂಡದೊಳು
ಆಹ್ಲಾದವಾಯಿತಿಂದು ಪುಲ್ಲಲೋಚನೆಯುಕಂಡು
ಉಲ್ಲಾಸ ತ ಂಬಿತೆನಗೆ ಮೂಲೋಕದೊಳು
ಮಾತೃಪಿತೃವೆಂಬುದು ಸೂತ್ರಧಾರಿತಾನೊಬ್ಬಳೆ
ಅಂತ್ರಬಾಹ್ಯದಲೆನಗೆ ಪುತ್ರ ಮಹಿಪತಿ (ಕೀ 337)

## ಮಹಿಪತಿರಾಯರ ವೈಶಿಷ್ಟ್ಯ

ಮಹಿಪತಿರಾಯ ರು ಕೀರ್ತನ ಮಾಧ್ವಮವನ್ನೇ ಅನುಸರಿಸಿದರೂ ತಮ್ಮ ಕೀರ್ತನೆಗಳಲ್ಲಿ ಅವರು ಈ ಕ್ಷೇತ್ರದಲ್ಲಿ ಶ್ರಮಿಸಿದ ಯಾವ ಕೀರ್ತನಕಾರರನ್ನೂ ಸ್ಮರಿಸಿಲ್ಲ ಉಳಿದ ದಾಸರಿಗಿಂತ ಈ ವಿಷಯದಲ್ಲಿ ಅವರು ಭಿನ ವ್ಯಕ್ತಿತ್ವವುಳ್ಳವ ರಾಗಿ ಕಾಣಿಸುತ್ತಾರೆ ಹರಿದಾಸರೆಲ್ಲರೂ ದಾಸ್ಯಭಕ್ತಿಯ ಪ್ರವಾಹವನ್ನೇ ಹರಿಸಿ ದ್ದಾರೆ ಹೀಗಾಗಿ ಸ್ವಾಭಾವಿಕವಾಗಿಯೇ ಅವರ ಸಾಹಿತ್ಯ ಏಕಮುಖವಾಗಿದೆ ಆದರೆ ವ ಹಿಪತಿರಾಯ ರು ದಾಸರ ಹರಿಭಕ್ತಿಯ ನ್ನೂ ಶರಣರ ಅನುಭಾವವನ್ನೂ ಯೋಗಿಗಳ ಅನುಭೂತಿಯನ್ನೂ ಮೈಗೂಡಿಸಿಕೊ ಡು ಇವುಗಳನ್ನೆಲ್ಲ ತಮ್ಮ ಕೃತಿ ಗಳಲ್ಲಿ ತತ್ವರೂಪವಾಗಿ ಹೊರಹೊಮ್ಮಿಸಿದ್ದಾರೆ ಹೀಗೆ ಎಲ್ಲ ರಿ ತಿಗಳ ಸಮನ್ವ ಯತೆ ಮಹಿಪತಿರಾಯರ ವೈಶಿಷ್ಟ್ಯವಾಗಿದೆ

ಇವರ ಯೊ ಗ ಸಿದ್ಧಿಯು ಇವರಲ್ಲಿ ವಿಶಾಲಮನೋಭಾವ ಬೆಳೆಯಲು ಆಸ್ಪದ ನೀಡಿತು ಎಲ್ಲ ಮತಗಳ ಜಾತಿಗಳ ಶಿಷ್ಯರು ಅವರಿಗಿದ್ದರು ಇವರ ವಿಶೇಷತೆ ಯೆಂದರೆ ಇವರು ಮಾಧ್ವಮತದವರಾಗಿದ್ದರು ಇತರರಂತೆ ಮಾಧ್ವಮತಗಳನ್ನು ವಿಸ್ತರಿಸಿ ಪದಗಳನು ಹಾಡಿಲ್ಲ ಇತರ ದಾಸರಂತೆ ತಮ್ಮ ಕೃತಿಗಳನ್ನು ಪೌರಾಣಿಕ

ವರ್ಣನೆಗಳಿಗೆ ಅವಕಾಶವಿಡಲಿಲ್ಲ ಈ ದೃಷ್ಟಿಯಿಂದ ನೋಡಿದಾಗ ಅವರು ಇತರ ಹರಿದಾಸರಿಗಿಂತ ಭಿನ್ನವಾಗಿ ಕಾಣುತ್ತಾರೆ ಪರಮತತ್ವಗಳಿಂದು ಪ್ರಸಿದ್ಧರಾಗಿರುವ ಮಹಿಪತಿರಾಯರು ಜನಸಾಮಾನ್ಯರಿಗೆ ಪರಮಾರ್ಥ ಬೋಧಿಸುವುದು ತಮ್ಮ ಕರ್ತವ್ಯವೆಂದು ತಿಳಿದುಕೊಂಡು ಅದನ್ನೇ ತಮ್ಮ ಜೀವನದ ಗುರಿಯನ್ನಾಗಿ ಮಾಡಿಕೊಂಡರು ಶ್ರೀಸಾಮಾನ್ಯರಿಗೆ ಕೊರವಂಜಿಪದ ಲಾವಣಿ ಕೋಲಾಟಪದ ಸುಗ್ಗಿಯ ಪದ ಮೊದಲಾದ ಜನಪದ ಮಟ್ಟುಗಳಲ್ಲಿ ಕೃತಿಗಳನು ರಚಿಸಿದ್ದಾರೆ ಇವುಗಳಲ್ಲಿ ಷಟ್ಪದಿ ಸಾಂಗತ್ಯ ರಗಳೆಗಳೂ ಕಂಡು ಬರುತ್ತವೆ ಅವರ ಸಾಹಿತ್ಯ ಕೃಷಿ ವೈವಿಧ್ಯಪೂರ್ಣ ಆದರಲ್ಲಿ ಸ್ತೋತ್ರಗಳಿಂದ ಹಿಡಿದು ಕಂಟ್ಟುವ ಪದಗಳು ಜೋಗುಳದ ಪದಗಳವರೆಗೆ ಬಗೆಬಗೆಯ ರಚನೆಗಳಿವೆ ಮಹಿಪತಿರಾಯರು ಹಿಂದಿ ಮರಾಠಿ ಭಾಷೆಗಳಲ್ಲಿಯೂ ಕೀರ್ತನೆಗಳನ್ನು ರಚಿಸಿದ್ದಾರೆ ಇವರ ಹೆಚ್ಚಿನ ಕೃತಿಗಳಲ್ಲಿ ಅವರ ಆಧ್ಯಾತ್ಮಿಕ ಅನುಭವ ಹಾಗೂ ಯೋಗಸಿದ್ಧಿಗಳ ಪ್ರತಿಬಿಂಬದಂತಿವೆ ಯಲ್ಲದೆ ಶಿವಶರಣರ ಹಾಡುಗಳನ್ನೂ ನೆನಪಿಗೆ ತರುತ್ತವೆ

ಇವರಿಗೆ ಬ್ರಾಹ್ಮಣರಲ್ಲದೆ ಮುಸಲ್ಮಾನ್ನ ಲಿಂಗಾಯತ ಶಿಷ್ಯರು ಅನೇಕರಿದ್ದರು ಇಂದಿಗೂ ಬಿಜಾಪುರದಲ್ಲಿ ನಡೆಯುವ ರಾಯರ ಆರಾಧನಾ ಮಹೋತ್ಸವದಲ್ಲಿ ಎಲ್ಲ ಜಾತಿಗಳ ಭಕ್ತರು ಸೇರುತ್ತಾರೆ ಭಕ್ತಿಯಿಂದ ರಾಯರನ್ನು ಆರಾಧಿಸುತ್ತಾರೆ ಪೂಜಿಸುತ್ತಾರೆ

## ಮಹೀಪತಿದಾಸರ ಪವಾಡಗಳು

ಭಾಸ್ಕರಸ್ವಾಮಿಗಳಲ್ಲಿ ವಜ್ರಯೋಗ ಅಂಬಿಕಾಯೋಗಗಳನ್ನು ಕಲಿತು ಪಾರಂಗತರಾದ ಮಹಿಪತಿದಾಸರು ಸಾಲೋಕ್ಯ ಸಾಮೀಪ್ಯ, ಸಾರೂಪ್ಯ ಮೊದಲಾದ ಅವಸ್ಥೆಗಳನ್ನು ದಾಟಿ ಸಾಯುಜ್ಯ ಪದವಿಯನ್ನು ಪಡೆಯುವ ಮಾರ್ಗವನ್ನು ಅನುಸರಿಸಿದರು ಶಿಷ್ಯನ ಸಾಮರ್ಥ್ಯವನ್ನು ಮನಗಂಡ ಭಾಸ್ಕರಸ್ವಾಮಿಗಳು ಮಹಿಪತಿದಾಸರನ್ನು ಆಶೀರ್ವದಿಸಿ ಲೋಕೋದ್ಧಾರಕಾರ್ಯವನ್ನು ಕೈಗೊಳ್ಳುವಂತೆ ಆದೇಶಿಸಿ ಕಳುಹಿಸಿದರು

ಮಹಿಪತಿದಾಸರಿಗೆ ಬ್ರಾಹ್ಮಣರಲ್ಲದೆ ಮುಸಲ್ಮಾನ ಲಿಂಗಾಯತ ಶಿಷ್ಯರೂ ಅನೇಕ ಮಂದಿ ಇದ್ದರು ದಾಸರ ಯೋಗಸಿದ್ಧಿ ಅವರಿಗೆ ವಿಶಾಲಮನೋಭಾವದ ಬೆಳವಣಿಗೆಗೆ ಆಸ್ಪದ ನೀಡಿತು ಇವರು ಪವಾಡಪುರುಷರೆಂದೂ ಖ್ಯಾತಿಗಳಿಸಿದರು ಸ್ವಾಮಿಗಳ ಆಶೀರ್ವಾದ ಪಡೆದು ಮಹಿಪತಿದಾಸರು ಬಿಜಾಪುರಕ್ಕೆ ಮರಳಿ ಅನಂತರ ಕಾಖಂಡಕಿ ಹೋಗಿ ಅಲ್ಲಿ ಕೆಲಕಾಲ ನಿಂತರು ಅಲ್ಲಿನ ಮಂದಾಕಿನಿ ಸರೋವರದ ಮೇಲೆ ಪ್ರಾಣದೇವರ ಪ್ರತಿಷ್ಠಾಪನೆ ಮಾಡಿದರು ಕೆಲವು ಮಂದಿ ಕುಚೋದ್ಯಗಾರರು ಮಹಿಪತಿದಾಸರ ಸಾಮರ್ಥ್ಯ ಪರೀಕ್ಷಿಸಲೆಂದು ಕೆಲವು ಮಾಂಸದತುಂಡುಗಳನ್ನು ಹರಿ

ಹಾಣದಲ್ಲಿ ಹಾಕಿ ನೈವೇದ್ಯಕ್ಕೆಂದು ನೀಡಿದರು ಅದನ್ನು ತಿಳಿದ ಮಹಿಪತಿದಾಸರು ತಮ್ಮ ಮಹಿಮೆಯಿಂದ ಅವುಗಳನ್ನು ಮಾವಿನಹಣ್ಣಿನ ಹೋಳುಗಳನ್ನಾಗಿ ಮಾರ್ಪಡಿಸಿ ಪವಾಡವನ್ನು ಮೆರೆದರು ಆದರೆ ಇಂಥ ಪವಾಡಗಳನು ಮಾಡಲೇಬೇಕಾದ ಪರಿಸ್ಥಿತಿಯೊದಗಿದಾಗ ದಾಸರು ಖಿನ್ನರಾಗಿದ್ದರು ಎರಡನೆಯದಾಗಿ ತಮ್ಮ ಇಬ್ಬರು ಮಕ್ಕಳ ಉಪನಯನ ಕಾಲದಲ್ಲಿ ಕೃಪಾಹಸ್ತವನ್ನಿರಿಸಿದ ದರಿಂದ ಅವರ ಭಾಗ್ಯ ದಿನದಿನಕ್ಕೆ ಹೆಚ್ಚುತ್ತ ಹೋಯಿತು ಹಿರಿಯವನಾದ ದೇವರಾಯ ಶಸ್ತ್ರ ವಿದ್ಯಾಪಾರಂಗತನಾಗಿ ಬಾದಷಹನ ಸೈನ್ಯವನ್ನು ಸೇರಿದ ಅಲ್ಲಿ ಅಪಾರ ಶೌರ್ಯ ಪ್ರದರ್ಶಿಸಿ ದೋಣಿ ಶಿವಾಜ ಎಂದು ಖ್ಯಾತನಾದ ಮಾತೃವಿಹೀನನಾದ ದಾಸರ ಎರಡನೆಯ ಮಗ ಕೃಷ್ಣ ಒಂಬತ್ತು ವರ್ಷಗಳವರೆಗೂ ಉಂಡಾಡಿಯಾಗಿ ಕಳೆದ ತುಕ್ಕವ್ವನಿಗೆ ಇದರಿಂದ ವ್ಯಥೆಯಾಯಿತು ಮಹಿಪತಿದಾಸರ ಸಾನಿಧ್ಯದಿಂದ ಅನೇಕರ ಉದ್ಧಾರವಾಗುತ್ತಿರುವಾಗ ಅವರ ದಿವ್ಯಬೋಧದಿಂದ ಕೋಣನಂಥವರಿಗೂ ಜ್ಞಾನ್ಯೆಯ ಲಾಭವಾಗುತ್ತಿರುವಾಗ ಕೃಷ್ಣನ ಮೇಲೆ ತಂದೆಯ ದೃಷ್ಟಿ ಏಕೆ ಬೀಳ ಬಾರದು ಎನಿಸಿ ಮಹಿಪತಿದಾಸರಿಗೆ ಮನತಡೆಯದೆ ಹೇಳಿದರು ಅದರಂತೆ ಮರು ದಿನ ಸಾನ ನಮಾಡಿಸಿ ಹೊಸ ವಸ್ತ್ರಧರಿಸಿ ಬಂದ ಕೃಷ್ಣನೆಡೆ ಮಹಿಪತಿದಾಸರು ಕರುಣಾ ಪೂರ್ಣದೃಷ್ಟಿ ಬೀರಿ ಅವನ ಮಸ್ತಕದ ಮೇಲೆ ತಮ್ಮ ವರದಹಸ್ತವನ್ನಿಟ್ಟ ಕೂಡಲೇ ಕೃಷ್ಣನ ಮುಖದಿಂದ ಓ ಎನ ಬಾರದೆ ಹರಿಯೆ ಎಂಬ ಹನೊಂದುನುಡಿಯ ಪದ ಹೊರಟಿತು ಮುಂದೆ ರಾಯ ರಿಂದ ಯಥಾಕಾಲ ಯೋಗ ಕಲಿತು ಕೃಷ್ಣ ತಂದೆಗಿಂತ ಮಗ ಮಿಗಿಲು ಅನ್ನುವಂತಾದ ಅವನ ಮುಖದಿಂದ ಹೊರಟ ದಿವ್ಯ ಕಾವ್ಯದಸೆಲೆ ಕನ್ನಡ ಅನುಭಾವ ಸಾಹಿತ್ಯವನು ಸಮೃದ್ಧಗೊಳಿಸಿತು ಒಮ್ಮೆ ದಾಸರ ಅಕ್ಕ ಅತ್ತಿಗೆ ಯರು ಸತ್ಪುರ ಷರು ಪವಾಡಗಳನು ಮಾಡಿತೋರಿಸುವರು ನಮ್ಮ ಮಹಿಪತಿ ಒಂದೂ ಮಾಡಲ್ಲಿಲ್ಲ ಮಾಡಿದರೆ ನೋಡಬೇಕು ಎಂದು ಆಸೆಪಟ್ಟರು ಆದರೆ ಅತಿಮಾನುಷ ಮಹಿಮೆಗಳೆಂದರೆ ಹಾವಾಡಿಗರ ಆಟ ಅಂಥ ಕಾರ್ಯಗಳನ್ನು ಮತಸ್ಥಾಪಕರು ಮಾಡಿ ಜನಗಳನು ಒಲಿಸಿಕೊಳ್ಳಬೇಕು ನಮಗೇಕೆ ಆ ವಿಚಾರ ಎಂದು ಮಹಿಪತಿದಾಸರು ಹೇಳುತ್ತಿದ್ದರು ಮಹಿಪತಿದಾಸರಿಗೆ ಅಕ್ಕನ ಮೇಲೆ ತ ಂಬ ಗೌರವ ಪತ್ನಿಯ ನಿಧನಾನಂತರ ಆಕೆಯೇ ರಾಯರ ಗೃಹಕೃತ್ಯದ ಒಡತಿ ಯಾಗಿ ಅತಿಥಿ ಅಭ್ಯಾಗತರ ಸೇವೆ ಮಹಿಪತಿದಾಸರ ಮಕ್ಕಳನ್ನು ಪ್ರೀತಿಯಿಂದ ನೋಡಿಕೊಳ್ಳುತ್ತಿದ್ದರು ಮಹಿಪತಿದಾಸರು ಹೀಗಾಗಿ ಅಕ್ಕನ ಆಸೆಯನ್ನು ನೆರ ವೇರಿಸಬೇಕಾಯಿತು ಲಿಂಗಾಯತ ಮುರುಡಪ್ಪ ಮಹಿಪತಿದಾಸರ ಶಿಷ್ಯ ಆತನ ಹೆಂಡತಿಗೆ ವಿಪರೀತ ಸನಿ ಪಾತಜ್ವರ ಮನೆ ತುಂಬ ಮಕ್ಕಳು ದಾಸರ ಅಕ್ಕ ಅತ್ತಿಗೆ ಚಡಪಡಿಸಿ ಮುರುಡಪ್ಪನ ಹೆಂಡತಿಗೆ ತೀವ್ರವಾಗಿರುವುದನ್ನು ಮಹಿಪತಿ ದಾಸರಿಗೆ ತಿಳಿಸಿದರು ಆಗ ದಾಸರು ಸತ್ತಾರೆ ಸಾಯಲಿ ಬಿಡು ಸತ್ತರೆ ಬದುಕು ತ್ತಾಳೆ ಒದುಕಿದರೆ ಸಾಯುತ್ತಾಳೆ ಎಂದು ಹೇಳಲು ಮಹೀ ಸಾಕು ಬಿಡು ನಿನ್ನ

ಮಗಟ ಸಟ್ಟೀತು ನಿನ ಯೋಗ ಮನೆ ಮಗನಿಗಿಂತ ಹೆಚ್ಚಾಗಿದ್ದ ಅವರಿಗಿ ನ್ಯಾರಿದ್ದಾರೆ ದಿಕ್ಕು ? ಇದಕ್ಕಿಂತ ವ್ಯಾಳ್ಯಸಿಗಬೇಕು ಹ್ಯಾಂಗ ? ನೋಡಂ ನಡಿ ಆಕೀನ ಬದುಕಿಸು ಎನ್ನಲು ಮಹಿಪತಿದಾಸರು ತಮ್ಮ ಆಯುಷ್ಯವನ್ನೇ ಆಕೆಗೆ ಹೋಗಲಿ ಎಂದು ದತ್ತರಾಜನನು ಸ್ಮರಿಸಿ ಮೃತಪ್ರಾಯಳಾದ ಸತ್ತಳೆಂದೇ ಜನ ತಿಳಿದಿದ್ದ ಮುರುಡಪ್ಪನ ಪತ್ನಿಯನ್ನು ಬದುಕಿಸಿ ಮಹಾನ್ ಪವಾಡವನ್ನೇ ಮಾಡಿ ತೊರಿಸಿದರು ಇದೊಂದು ರಾಯರ ಅತಿಮಾನುಷ ಮಹಿಮೆಯೆಂದು ಪ್ರಸಿದ್ಧವಾಯಿತು

## ಸಾಹಿತ್ಯವಿಪುಲತೆ

ಮಹಿಪತಿದಾಸರು ವರಕವಿಗಳು ಋಷಿಕವಿಗಳು ದೈವಕೃಪೆ ಸದ್ಗುರುಗಳ ಅನುಗ್ರಹ ಸತತ ಸಾಧನಗಳಿಂದ ಅದ್ಭುತ ಅನುಭಾವವನು ಪಡೆದ ಮಹಿಪತಿ ದಾಸರ ಜೀವನ ಒಂದು ಕಾವ್ಯ ಸಂಗೀತ ಸಾಹಿತ್ಯ ನೀತಿಬೋಧೆ ಮತಬೋಧೆ ಸಮಾಜರಚನೆ ಎಲ್ಲವೂ ಅವರ ಹಾಡುಗಳಲ್ಲಿವೆ ಅಗ್ನಿಗಾಹುತಿಯಾಗಿ ಉಳಿದ ಅವರ ಸಾಹಿತ್ಯರಾಶಿ ಕಡಿಮೆಯೇನಲ್ಲ ಮಹಿಪತಿದಾಸರ ಸಂದೇಶದಂತೆ ಮಗ ಕೃಷ್ಣರಾಯ ನಿಗೆ ಬೂದಿಯಲ್ಲಿ ದೊರೆತ ಗ್ರಂಥಗಳಲ್ಲಿ ಪದ್ಯಗಳು 300ಕ್ಕೂ ಮೀರಿವೆ ದೇಶ ಪಾಂಡೆ ಮನೋಹರರಾಯರ ಲೆಕ್ಕಾಚಾರದಂತೆ ದೊರೆತ ಮಹಿಪತಿದಾಸರ ಕೃತಿಗಳಲ್ಲಿ ಕನ್ನಡ ಪದಗಳು 620 ಮರಾಠಿ ಪದಗಳು 43 ಹಿಂದಿ ಪದಗಳು 18 ಬಹು ಭಾಷಾ ಪದಗಳು 25 ಮರಾಠಿ ಆರತಿಗಳು 3 ಅಂತೂ ಒಟ್ಟು ಪದಗಳು 110 ಈ ಪದ್ಯಗಳ ಒಟ್ಟು ಸಂಖ್ಯೆ 723 ಆಗುವುದುಂಟು [1] ಹೀಗೆ ದೊರೆತ ಮಹಿಪತಿ ದಾಸರ ಪದಗಳ ಸಂಖ್ಯೆಯಿಂದ ಅವರು ವಿಪುಲ ಸಾಹಿತ್ಯ ನಿರ್ಮಾಣ ಮಾಡಿರುವುದು ತಿಳಿದುಬರುತ್ತದೆ ಸರಳ ಶೈಲಿಯ ಇವರ ಕೀರ್ತನೆಗಳು ಪಂಡಿತ ಪಾಮರರ ಮೆಚ್ಚುಗೆಗೆ ಪಾತ್ರವಾಗಿವೆ

ಮಹಿಪತಿದಾಸರ ಶಿಷ್ಯ ಸಮೂಹ ದೊಡ್ಡದು ಅವರೆಲ್ಲ ವಿವಿಧ ಸಾಮಾ ಜಿಕ ವ್ಯವಸ್ಥೆಗಳಿಗೆ ಸೇರಿದವರು ಹೀಗೆ ಮರಾಠಿ ಸಂತ ಏಕನಾಥರಂತೆಯೇ ಮಹಿಪತಿದಾಸರು ವಿವಿಧ ಆಸಕ್ತಿ ಅಭಿರುಚಿಗಳ ವಿವಿಧ ಸಾಂಸ್ಕೃತಿಕ–ಮಟ್ಟಗಳ ಜನರಿಗಾಗಿ ಬಗೆ ಬಗೆಯ ಸಾಹಿತ್ಯ ನಿರ್ಮಾಣ ಮಾಡಿದರು ತಮ್ಮ ಶಿಷ್ಯರಿಗಾಗಿ ಅವರು ಕೀರ್ತನೆ ಸ್ತೋತ್ರ ಆರತಿ ಪ್ರಾತಃಸ್ಮರಣೆಗಳನ್ನು ರಚಿಸಿದರೆ ಸ್ತ್ರೀಯರಿ ಗಾಗಿ ಸಾಹಿತ್ಯ ಶೋಭನಪದ ಜೋಗುಳಪದ ಕುಟ್ಟುವಪದ ಕೊರವಂಜಿಪದ ತಾನಾ ತಂದಾನಗಳನು ರಚಿಸಿದರು ಚೌಪದಿ ಸಾಂಗತ್ಯ ವಾರ್ಧಿಕಷಟ್ಪದಿಗಳು ಲಾವಣಿಮೂಲವೃತ್ತಗಳ ವೈವಿಧ್ಯತೆಯಿಂದ ದಾಸರ ಸಾಹಿತ್ಯ ಸೃಷ್ಟಿ ಇತರ ಹರಿ ದಾಸರ ಕೃತಿಗಳಿಗಿಂತ ಭಿನ್ನವಾಗಿ ನಿಲ್ಲುತ್ತದೆ ಇವರ ಕೆಲವು ಚೌಪದಿಗಳ ಮೇಲೆ ಮರಾಠಿ ಛಂದಸ್ಸಿನ ಪ್ರಭಾವವಿರುವಂತೆ ತೋರುತ್ತದೆ

---

1 ಸಾನಂದ ಸಾಮ್ರಾಜ್ಯ—ದೇಶಪಾಂಡೆ ಮನೋಹರರಾಯರು, ಪುಟ 108 109

ಒಟ್ಟಿನಲ್ಲಿ ಹಿರಿಯ ರು ಕಿರಿಯರೆನ್ನದೆ ಎಲ್ಲರಲ್ಲಿ ಭಗವಂತನ ಭಕ್ತಿ ಬೆಳೆಯಬೇಕು ಅವರ ನಾಲಿಗೆಯ ಮೇಲೆ ಭಗವಂತನ ನಾಮಸ್ಮರಣೆಯಾಗಬೇಕು ಭಕ್ತಿಯ ಹಿರಿಮೆ ಏನೆಂಬುದನ್ನು ಅವರಿಗೆ ಕಾಣಿಸವೆ ಕು ಎಂಬುದು ಮಹಿಪತಿದಾಸರ ಅಂತರಂಗದ ಬಯ ಕೆಯಾಗಿತ್ತು ಹೀಗಾಗಿ ದಾಸರ ವಿಪುಲ ಸಾಹಿತ್ಯದಲ್ಲಿ ಅವರ ಅಂತರಂಗ ಪ್ರತಿ ಬಿಂಬಿತವಾಗಿದೆ ವ ಹಿಪತಿದಾಸರು ಸಂಸ್ಕೃತ ಕನ್ನಡ ಫಾರಸೀಭಾಷಾ ಪಂಡಿತ ರಾದುದರಿಂದ ಅವರ ಶೈಲಿ ಮನೋಹರ ಅದರಲ್ಲಿ ಸಂಸ್ಕೃತ ಮತ್ತು ಜಾನಪದ ನುಡಿ ಗಳ ಅಪೂರ್ವ ಮೇಳವನ್ನು ಕಾಣಬಹ ದು ಸಂಸ್ಕೃತದಲ್ಲಿ ಗಾಢವಾದ ವಿದ್ವತ್ತಿರು ವುದರಿಂದ ಮಹಿಪತಿದಾಸರ ಕನ ಡ ಭಾಷೆ ಸಂಸ್ಕೃತಭೂಯಿ ಷ ವಾಗಿದೆ ಗೀತೆ ಯೋಗವಾಸಿಷ ದಂಥ ಗ್ರಂಥಗಳಲಿನ ಕೆಲವು ಮೂಲ ಅವತರಣಗಳನ್ನು ಅಂದರೆ ಹರಿ ಓಂ ತತ್ಸತ್ । ಓಮಿತ್ಯೇಕಾಕ್ಷರಂ ಬ್ರಹ್ಮ । ಸರ್ವಂ ಖಲ್ವಿದಂ ಬ್ರಹ್ಮ । ಯದ್ಯಾದಿತ್ಯಗತಂ ತೇಜೊ 1 ಕೋಟಿ ಸೂರ್ಯಸಮ ಪ್ರಭ ಮುಂತಾದ ಇಂಥ ಸಂಸ್ಕೃತ ವಚನಗಳನ್ನು ತಮ್ಮ ಹಾಡುಗಳಲ್ಲಿ ಸೇರಿಸಿಕೊಂಡಿದ್ದಾರೆ ಹೀಗೆ ಪಾಂಡಿತ್ಯ ಪೂರ್ಣ ಸಂಸ್ಕೃತದ ಜೊತೆಯಲ್ಲಿ ವಿಜಯ ಪುರ ಪ್ರದೇಶದ ಅಂದಿನ ಶ್ರೀಸಾಮಾನ್ಯರು ಒಳಸುತ್ತಿದ್ದ ನಾಡು ನುಡಿಯ ನು ಉಪಯೋಗಿಸಿರುವುದರಿಂದ ರಾಯರ ಈ ರೀತಿ ಪಂಡಿತ ಪಾಮರರನ್ನು ರಂಜಿಸಿದೆ

ಮಹಿಪತಿರಾಯ ರು ಮಧ್ವವ ತಸ್ಥ ರಾದರೂ ಮಾಧ್ವತತ್ವಗಳನ್ನು ವಿಸ್ತರಿಸಿ ಪದಗಳನ್ನು ರಚಿಸಿಲ್ಲ ಪೌರಾಣಿಕ ವಿಚಾರಗಳನ್ನು ವರ್ಣಿಸಿಲ್ಲ ಆದರೆ ಇವರ ಪದ್ಯ ಗಳಲ್ಲಿ ಯೋಗದ ಅನುಭವಗಳೇ ತುಂಬಿವೆ ಯೋಗಾಭ್ಯಾಸಮಾಡುವವನೇ ನಿಜ ವಾದ ಯೋಗಿ ಆತ ತ್ಯಾಗಿಯಾಗಿರಬೇಕು ಮಂತ್ರೋಪಾಸಕನಾಗಿರಬೇಕು ಎಂದು ವ ಹಿಪತಿದಾಸರು ಒತ್ತಿ ಹೇಳುತ್ತಿದ್ದರು ಅವರ ವಾಸುದೇವನಾಶ್ರಯಿಸದ ಉಪಾಸನ್ಯಾತಕೆ । ಧ್ಯಾಸಬಲಿಯದಿಹ ಮಿಗಿಲಭ್ಯಾಸವಾತಕೆ ಎಂಬ ಪಲ್ಲವಿಯುಳ್ಳ ಐದು ನುಡಿಗಳಲ್ಲಿ ಅವರು

ಹೃದಯಶುದ್ಧವ ಗದೆ ಉದಯಸ್ನಾನವ್ಯಾತಕೆ
ಬದಿಯಲಿಹ ಸುವಸ್ತ ಕಾಣದ ಜ್ಞಾನವ್ಯಾತಕೆ
ಉದರಕಿವಿಯು ಶಾಂತಿಹೊಂದದ ಸಾಧನವ್ಯಾತಕೆ
ಬುಧರ ಸೇವೆಗೊದಗದಲಿಹ ಸ್ವಧನವ್ಯಾತಕೆ

ಎಂದು ಹೇಳಿ ಕೊನೆಯಲ್ಲಿ

ಮನವ ಸ್ಥಿರಗೊಳ್ಳದವನ ಶ್ರವಣವೇತಕೆ
ನೆನವು ನೆಲೆಗೊಳ್ಳದಿದ್ದರೆ ಮನನವೇತಕೆ
ತನುವಿನಲ್ಲಿ ಘನವ ಕಾಣದೆ ಅನುಭವ್ಯಾತಕೆ
ದಾನಿ ಮಹಿಪತಿಸ್ವಾಮಿಯ ಕಾಣದ ಜನ್ಮವೇತಕೆ

ಎಂದು ಹೇಳಿ ಶರಣರ ವಚನಶಾಸ್ತ್ರದ ಧೋರಣೆಯನು ತೊ ರಿಸಿದ್ದಾರೆ ದಾಸ ಸಾಹಿತ್ಯದಲ್ಲಿ ಈ ಧೋರಣೆ ಕಾಣುವುದು ಮಹಿಪತಿದಾಸರ ಕೃತಿಯಲ್ಲಿ ಮಾತ್ರ

ಮಹಿಪತಿರಾಯರು ಹವ್ಯಕವ್ಯಗಳಲ್ಲಿ ತಮಗೆ ಗೊತ್ತಿದ್ದ ಮತೀಯ ನಿಬಂಧನೆ ಗಳಿಗೊಳಪಟ್ಟು ನಡೆಯುತ್ತಿರಲಿಲ್ಲ ವೈದಿಕನೆಂದೆಗೆ ಹಿಂಜರೆಯುತ್ತಿರಲಿಲ್ಲ ರಾಯರು ರಚಿಸಿದ ಸಾವಿರಾರು ದೇವರ ನಾಮಗಳು ಕಾಖಂಡಿಕೆಯ ಅವರ ವಂಶೀ ಯರ ಬಳಿಯಲ್ಲಿವೆ ಅವರು ಉತ್ಸವದ ಸಹಾಯಕ್ಕೆಂದು ಬಿಜಾಪುರ ಜಮಖಂಡೀ ಪ್ರಾಂತಗಳಲ್ಲಿ ಸಂಚಾರ ಹೋದಾಗ ಮಹಿಪತಿರಾಯ ರ ಪುಣ್ಯಸ್ಮರಣೆಗಾಗಿ ಹಾಡುವ ರಾಯರ ಎರಡು ಹಾಡುಗಳು ಇವೆ

### 1 ಸೌರಾಷ್ಟ್ರ–ಝಂಪೆ ತಾಳ

ಆರ್ತಿಯಾಗಿದೆ ಬನ್ನಿ ಅರಿತು ನೋಡುವ ಗುರುಮೂರ್ತಿಯಿಂದ ಪ
ನಿರ ತವಾಗಿ ಪೂರ್ಣ ಬೆರೆತು ಕೊಡ ವ ಬನ್ನಿ ಗುರ್ತಿನಿಂದ

ಸೂರ್ಯನಿಲ್ಲದೆ ಸಪ್ರಕಾಶ ತುಂಬಿದೆ ಹೇಳತೀನಿ
ತುರಿಯಾವಸ್ಥೆಯ ಲ್ಲಿ ಬೆರೆದು ಕೂಡಿದ ಜ್ಞಾನಿಬಲ್ಲ ಖೂನ ।
ಬರಿಯ ಮಾತನಾಡಿ ಹೊರೆಯ ಹೇಳುವದಲ್ಲ ಅರಿವಸ್ಥಾನ
ಪರಿಯಾಯದಿಂದಲಿ ಪರಿಣಮಿಸಿನೋಡು ಪರಮ ಪ್ರಾಣ ॥೧॥

ಚಂದ್ರನಿಲ್ಲದೆ ಬೆಳದಿಂಗಳು ಬಿದ್ದಿದೆ ಬಲುಬಾಳಿ
ಇಂದ್ರಾದಿಗಳೆಲ್ಲ ಹರುಷದಿ ನೋಡುವಳು ಸರ್ವಕಾಲ
ಸುಂದರವಾದ ಸುವಸ್ತು ಒಳಗೊಂದಚಲ
ಸಾಂದ್ರವಾಗಿ ಸುಖತುಂಬಿ ಬೆಳಗುತಿದೆ ಥಳಥಳ ॥೨॥

ಮನದ ಕೊನೆಯಲ್ಲಿದ್ದ ಘನಸುಖನೋಡಿರಿ ನೆನೆದು ಬೇಗ
ನಾನೀನೆಂಬುವ ಮಾತು ಏನು ತಾಳುವ್ಯದಲ್ಲ ರಾಜಯೋಗ
ಅನುಭವಿಗಳಿಗಿದು ಅನುಕೂಲವಾಗುವುದು ಬ್ರಹ್ಮಯೋಗ
ಜ್ಞಾನಿಮ ಹಿಪತಿ ತಾನೆ ತಾನಾದ ಸದ್ಗುರುವಿನ ॥೩॥

### 2 ಭೀಮಪಲಾಸ

ಶೋಧಿಸಿ ನೋಡಿರೋ ಸದಾ | ಬೋಧವನಿಜಬೋಧ ಪ
ಶೋಧಿಸಿ ನೋಡಿ ಸದ್ಗುರು ಕೃಪೆಯಿಂದ । ಸಾಧನಕಿದು ಬಲು ಆನಂದ
ಭೇದಿಸಿ ನೊ ಡುವುದಿದೆ ತನ್ನಿಂದ । ಆದಿ ಅನಾದಿಸಹಜಾನಂದ ॥೧॥
ತಂತುವಿಡಿದು ಆದರಂತೆ ತಾನೋಡಿ । ಎಂತೆಂತಿಹ ನಿಜ ಅಂತೇ ಕೂಡಿ

ಆ ತರಾತ್ಮದಿ ಅನುಭವ ಬೆರೆದಾಡಿ । ಸಂತತ ಸಂಮುಖಿ ಸುಖಿಸೂರ್ಯಾದ
ವಿಹಿತಕೆ ವಿಹಿತಾಗುವ ಸ ಪಥ ದ್ವೈತಾದ್ವೈತಕಿದೇರಹಿತ ।
ಮಹಿಮ ಹಿಮರ ಆನಂದ ಭರಿತ । ಮಹೀಪತಿ ಪ ನೋಲ್ಮನದಸುವಸ್ತ ।[1]

ಈ ಎರಡೂ ಪದ್ಯಗಳಲ್ಲಿರುವ ಗೂಢಾರ್ಥವನ್ನು ತಿಳಿದರೆ ಯೋಗಾಭ್ಯಾಸಿಗಳಿಗೆ ವಿಶೇಷ ಸಹಾಯವಾಗುವುದರಲ್ಲಿ ಸಂದೇಹವಿಲ್ಲ

ಮಹಿಪತಿರಾಯರ ಮೇಲೆ ಕೇವಲ ಹಿಂದುಗಳಿಗಷ್ಟೇ ಅಲ್ಲ ಮುಸಲ್ಮಾನರಿಗೂ ಬಹಳ ಆದರವಿದೆ ಎಂಬುದಕ್ಕೆ ಬಿಜಾಪುರದ ಕೋಟೆಯ ಹೊರಭಾಗದಲ್ಲಿರುವ ಶಹಾನುಂಗನ ಸಮಾಧಿಯನ್ನು ಕಣ್ಣಿಟ್ಟಿಯೂ ನೋಡದ ಮುಸಲ್ಮಾನರು ಆ ಖಂಡಿಕೆಯಲ್ಲಿ ಮಾರ್ಗಶೀರ್ಷ ಪೌರ್ಣಿಮೆಯಲ್ಲಿ ನಡೆಯುವ ರಾಯರ ಆರಾಧನೆಗೆ ಮುಸಲ್ಮಾನರು ಸಾಲುಸಾಲಾಗಿ ಬರುತ್ತಾರೆ [2] ಎಂದು ಬೇಲೂರು ಕೇಶವದಾಸರು ಹೇಳಿರುವುದು ಮಹಿಪತಿರಾಯರ ವೈಶಿಷ್ಟ್ಯವನ್ನು ಎತ್ತಿ ತೋರಿಸುತ್ತದೆ ಹೀಗೆ ಮಹಿಪತಿರಾಯರಿಗೆ ಬ್ರಾಹ್ಮಣರಲ್ಲದೆ ಮುಸಲ್ಮಾನ, ಲಿಂಗಾಯತ ಶಿಷ್ಯರು ಅನೇಕರಿದ್ದಾರೆ

ಮಹಿಪತಿರಾಯರು ಶಬ್ದ ಸಮ್ರಾಟರು ಅವರ ಸಂಗ್ರಹ ಶ್ರೀಮಂತವಾದುದು ಅವರ ಪದಗಳಲ್ಲಿ ನಾದಮಾಧುರ್ಯವಿದೆ ಅವರ ಸತ್ಸಂಗ ಮಾಡೋಣ ನವೆ ಇದೆ ನೋಡಿರೋ ನಿಜ ಕೂಡಿರೋ' ಇತ್ಯಾದಿ ಲಾವಣಿಗಳಲ್ಲಿ ಅನುಪ್ರಾಸ ಯಮಕಗಳು ಹೇರಳವಾಗಿವೆ ಅವರ ಎತ್ತ ನೋಡಿದರತ್ತ ಸುತ್ತು ಸುತ್ತು ತಲೀಹ ನಿತ್ಯವಾಗಿಯು ಹೃತ್ಕಮಲದಲಿ ಜನವನದೊಳಗ ಜನಾರ್ದನ ತಾನು ತನ ಮನದೊಳು ಥಳಥಳಿಸುಲಿ ಇಂಥ ಸಾಲು ಕಿವಿಗಳನು ತಣಿಸುತ್ತವೆ ಮಹಿಪತಿದಾಸರು ತಮ್ಮ ದಿವ್ಯಾನ ಭವವನ್ನು ವರ್ಣಿಸುವಾಗ ಅರ್ಥವನು ಅನುಕರಿಸುವ ಧ್ವನಿಯುಳ್ಳ ಪದಗಳನು ಧಾರ ಳವಾಗಿ ಬಳಸಿ ಚಿತ್ರ ಚಮತ್ಕಾರವನ್ನು ನಾದ ಮಾಧುರ್ಯವನ್ನು ಸ ಧಿಸುವುದಕ್ಕೆ ಥಳಥಳ ಗುಡುವ ಕಮಲಗಳು ಭಳ ಭಳ ಭಾಸುವ ಬೆಳಗಿನ ಬೆಳಕು ಜ ಮುಜಮುಃ ಮಾಡುವ ರ್ಝೇಂಕಾರವ–ಹೀಗೆ ಪ್ರಯೋಗಗಳಿಂದ ಧ್ವನಿಯಲ್ಲಿಯೇ ತಮ್ಮ ಅನುಭವವನ್ನು ವ್ಯಕ್ತಪಡಿಸಿರುವರು

ಅನುಭವ ಪ್ರಧಾನರಾದ ಮಹಿಪತಿದಾಸರ ಕಾವ್ಯದಲ್ಲಿ ಕಲ್ಪನಾ ಪ್ರಪಂಚಕ್ಕೆ ಬಹಳ ಪ್ರಾಧಾನ್ಯವಿದೆ ನಮ್ಮೆಂಬ ಹಲ್ಲು ಮುರಿಯಲ್ಪಟ್ಟರೂ, ಸದ್ಬೋಧವನು ಪಡೆದುದರಿಂದ ಓಡಿ ಬಂದು ಮರುವಿನ ಪಾದರಕ್ಷೆ ಗಂಟುಹಾಕಿಕೊಂಡು ಹಗಲಿರುಳು ಅವರ ಗುಣವನ್ನು ಬೊಗುಳುತ್ತ ಬಾಗಿಲು ಕಾಯ್ದುಕೊಂಡು ಬಿದ್ದಿಹ ಶಿಷ್ಯ ಶ್ವಾನನ ಚಿತ್ರಣದಲ್ಲಿ ಇದನ್ನು ಕಾಣಬಹುದು ಮಹಿಪತಿರಾಯರು ತಮ್ಮ ಅಂತರಂಗದಲ್ಲಿನ ಭಾವವನ್ನು ತನ್ನ ಉನ್ನತ ಪ್ರತಿಭೆಗೆ ಕಾಣಿಸಿದ ದಿವ್ಯದರ್ಶನ

1 ಕರ್ನಾಟಕ ಭಕ್ತ ವಿಜಯ ಬೇಲೂರು ಕೇಶವದಾಸರು, ಪುಟ 566
2 ಕರ್ನಾಟಕ ಭಕ್ತ ವಿಜಯ ಬೇಲೂರು ಕೇಶವದಾಸರು, ಪುಟ 566

ವನು ನೇರವಾಗಿ ಸಹಜವಾಗಿ ಹೇಳುವ ಬಗೆ ಓದುಗರನ್ನು ಮುಗ್ಧಗೊಳಿಸುತ್ತದೆ ಚಿನ್ಮಯದ ರೂಪು ತೆ ಜಪುಂಜವು ವಸ್ತು ಹೀಗೆ ಉಜ್ವಲ ಮಾತುಗಳಲ್ಲಿ ಚಿತ್ರಣಶಕ್ತಿ ದಾಸರಿಗೆ ವೈಗೂಡಿಕೊಂಡಿತ್ತು

ಮಹಿಪತಿದಾಸರು ಕೃತಿಗಳಲ್ಲಿ ಉಪಮೆ ದೃಷ್ಟಾಂತವನ್ನು ಹೇರಳವಾಗಿ ಬಳಸಿರುವರು ನಾದುರ ಮಹಿಮೆ ಯ ತೆಂಗಿನ ಫಲದಂತೆ ಬಡೆಯಲ್ಲಿಯ ಜಲದಂತೆ ಕಡಲೊಳಗಿನ ರತ್ನದಂತೆ ಸಾಧಿಸದೆ ತಿಳಿಯದು ಭೇದಿಸದೆ ಹೊಳೆಯದು ಅದನ್ನರಿಯಲು ಅದರ ಲಾಭವನ್ನು ಪಡೆಯ ಲು ದುಡಿಯ ಬೇಕು ಯತ್ನಿಸಬೇಕು ಎಂದು ಕೆಲವೆಡೆ ಹೇಳದರೆ ವಿಷಯಲಂಪಟನೆಯ ರು ಗುರ ಕೃಪೆ ತಿಳಿಯಲಾರರು ಎಂದು ಹೇಳ ವಾಗ ವ ಹಿಪತಿದಾಸರು ವ ರ ಳಗುಂಟೇ ರಾಜಸನ್ಮಾನದ ಅರಿವು ? ತರಳ ಗ ಂಟೇ ಘಟಸರ್ಪದ ಭಯವು ? ಉರಳಗುಂಟೆ ಮೃಗಜಲದ ಖೂನ ? ಗಿಳಿಗುಂಟೆ ಮಾತಿನ ಚಾತುರ್ಯ ? ಎಂದು ಸ ಂದರವಾಗಿ ನಿರೂಪಿಸಿರುವರು ಕಣ್ಣಿಲ್ಲದವನ ಕೈಯ ಲ್ಲಿಯ ಕನ್ನಡಿ ಧೈರ್ಯವಿಲ್ಲದವನ ಕೈಯ ಲ್ಲಿಯ ಬಡಿಗೆ ಗಂಡನಿಲ್ಲದನಾರಿಯ ಸುಗುಣ—ಇವುಗಳೆಲ್ಲ ವ್ಯರ್ಥವೆಂದು ರ ಯರು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ

ಮಹಿಪತಿದಾಸರು ಸೃಷ್ಟಿಸಿರುವ ರೂಪಕಗಳ ಮತ್ತು ಉಪಯೋಗಿಸಿದ ಉಪಮಾನಗಳಿಂದ ಅವರ ಕಾಲ್ಪನಿಕ ಶಕ್ತಿಯ ಔನ ತ್ಯವನು ತಿಳಿಯಬಹುದು ರಾಯರು ಕಾಮಧೆ ನುಗರವು ತಲ್ಪದೆ ನಮ್ಮ ಮನಿಯಲಿ ನೋಡಿ ಬ್ರಹ್ಮಾನಂದ ದೋರುತದೆ ಪರಮಾಮೃತ ಸೂರ‍್ಯಾಡಿ ಎಂದು ಸಹಜ ರೀತಿಯ ಲ್ಲಿ ಕೊಂಡಾಡಿದ್ದಾರೆ ಕೊನೆಗೆ ಅವರದ್ದೆ ಆದ ವಿಶಿಷ್ಟ ರೀತಿಯ ಲ್ಲಿ ಶ್ರಯಧೇನು ಎಂಬ ಒಂದು ರೂಪಕವನ್ನು ಸೃಷ್ಟಿಸಿ ಶ್ರಯ ಧೆ ನು ಒಂತು ವಣಿಗೆ ದಯಕರುಣದಿಂದೊಲಿದು ಸರ್ವಾರ್ಥಗರೆವುತಲಿ ಎಂದು ಸಂತೋಷಗೊಂಡು ಅದು ತವ ಗೆ ನೀಡಿದ ಅಮೃತದ ಸುಖವನ್ನು ನಿರೂಪಿಸಿ ಎಳೆಗರುವ ಮಹಿಪತಿಗವ ತನುಣಿಸಿಕೊಳಲಾಗಿ ಎಂದು ಮುಕ್ತಾಯಗೊಳಿಸಿದ ರೀತಿ ಅಮೋಘ ದೈವಸಾಕ್ಷಾತ್ಕಾರವನ್ನು ಪಂಚಭಕ್ಷ್ಯ ಪರಮಾನ ಗಳ ಊಟಕ್ಕೆ ಹೋಲಿಸಿ ತತ್ವಸಾರದೊಂದೇ ತುತ್ತು ಅತಿ ಹರುಷಗೊಂಡಿತು ನಿತ್ಯತೃಪ್ತಿ ಹೊಂದಿತು ಹಿತ ಮಹಿಪತಿಗಾಯಿತು ಎಂದು ಆನಂದ ವ್ಯಕ್ತಪಡಿಸುವಾಗ ಊಟದ ಪ್ರಾಶಸ್ತ್ಯವನ್ನೂ ಹೇಳಿರುವುದನ್ನು ಕಾಣಬಹುದು ಗುರುವಿನ ಕಾರ್ಯವನ್ನು ಮಡಿವಾಳನ ರೂಪಕದಿಂದ ಚಿತ್ರಿಸಿ ಜ್ಞಾನಗುರು ಶುದ್ಧ ಮಡಿವಾಳ ಮನಮೈಲಿ ತೊಳೆವ ನಿರ್ವ ಳ ಎಂದು ಹೇಳುವುದರ ಮೂಲಕ ಲೌಕಿಕ ವ್ಯವಹಾರಕ್ಕೆ ಅಲೌಕಿಕ ಮಹತ್ವವನ್ನು ತಂದ ಕೊಟ್ಟಿದ್ದಾರೆ

ಉಪಮಾನಗಳ ಸುರಿವ ಳೆಯಿಂದ ರಾಯರು ಭಾವಭಕ್ತಿಯನ್ನು ವಿವರಿಸಿದ್ದು ಹೀಗೆ ಅನಂದವೆಂಬ ಅಭಿಷೇಕ ಮಾಡುವ ಮನೋ ಅಭೀಷ್ಟೇಯ ಸುವಸ್ತ್ರ ನೀಡ ತ ತ್ರಿವಿಧಗುಣವೆಂಬ ತಾಂಬೂಲ ನೀಡುವ ಪಂಚಭೂತವೆಂಬ ಆರತಿ

ಮಾಡುವ ಅನಾಹತವೆಂಬ ಧ್ವನಿವಾದ್ಯಮಾಡುವ ಎಂಬ ಹೇಳಿಕೆಗಳು ಮಹಿಪತಿ ರಾಯರ ಕೃತಿಗಳಲ್ಲಿ ಕಾಣುತ್ತವೆ

ಶೈಲಿ—ಸ್ವಾನುಭವ ಸಿದ್ಧಿಯನ್ನು ಸಾಧಿಸಿದ ಮಹಿಪತಿದಾಸರು ಕನ್ನಡ ನುಡಿಯಲ್ಲಿ ತಮ್ಮ ಅತಿಶಯ ಅನುಭವವನು ಯಶಸ್ವಿಯಾಗಿ ವ್ಯಕ್ತಪಡಿಸಿದ ಶೈಲಿ ವಿನೂತನ ಉದಾ

ಏನೋ ಎಂತೋ ತಿಳಿಯದು ತಿಳಿಯದು
ಸ್ವಾನಂದದ ಸುಖದಾಟ
ಒಳಗೂ ಹೊರಗೊ ಬೈಗೊ ಬೆಳಗೊ
ಕ ಳೊ ಬೆಳುದಿಂಗಳವೊ
ವ ಳೆಯೊ ಮಿಂಚೊ ಹೊಳೆವೊ ಸಳವೊ
ತಿಳಿಯದ ಕಳೆಕಾಂತಿಗಳು (ಕೀ 119)

ಭಾಷಾಪ್ರಯೋಗ—ಮಹಿಪತಿದಾಸರು ಶಿಷ್ಟ ಭಾಷೆಯನು ಎಷ್ಟು ಆಹ್ಲಾದಕರವಾಗಿ ಬಳಸಿದಂತೆಯೇ ವ್ಯಾವಹಾರಿಕ ಭಾಷೆಯನ್ನು ಅಷ್ಟೇ ಸಮರ್ಥವಾಗಿ ಬಳಸಿಕೊಂಡಿರವುದನ್ನು ಜ್ಞಾನಾಭ್ಯಾಸವಮಾಡಿ ಹಿ ಗೆ ಎಂಬ ಕೀರ್ತನೆಯಲ್ಲಿ

ಮನದಲ್ಲಿ ಬಾವ್ಯಾಂಗೆ ನೆನೆದಲ್ಲಿ ಕಾಂಬ್ಯಾಂಗೆ
ತನುವಿನಲಿ ನಿಜಗೂಡು ತಾನಲಿಯ ಂಗೊಂಬ್ಯಾಂಗೆ
ಆನಂದಿನದಲ್ಯನುಭವಿಸುವ್ಯಾಂಗೆ

ಕನಗ (ವ ?) ರಸದಲಿ ಮನೋಹರ ಮಾಡುವ್ಯಾಂಗೆ (ಕೀ 258)

ಜೊತೆಗೆ ಜಾನಪದ ಧಾಟಿಯ ತಾನಾ ತಂದ ನಾನಾ ತಾನಾ ತಂದನಾನಾ ಎಂಬ ಪಲ್ಲವಿಯಿಂದ ಕೆಲವು ಕೀರ್ತನೆಗಳನು ಆರಂಭಿಸಿರವುದು ಮಹಿಪತಿರಾಯರಿಗೆ ವ್ಯಾವಹಾರಿಕ ಭಾಷೆಯಂತೆಯೇ ಜಾನಪದದಲ್ಲಿಯೂ ಆಸಕ್ತಿಯಿರುವುದನ್ನು ಸೂಚಿಸ ತ್ತದೆ ಉದಾ

ತಾನಾ ತಂದ ನಾನಾ ತಾನಾ ತಂದನಾನಾ
ತಾನಾ ತಂದನಾನಾ ತಾನಾ ತಂದ ನಾನಾ
ತಾನೆ ತಾನಾದ ಖೂನ ತಾನ ದೋರ ದುಘನ
ತಾನೆ ತಾನಾಗಿ ತಾನೆಂಬುದು ಲೇಸು ನಾನಾ
ತಾನಾಗದೆ ಜ್ಞಾನನಾನಾ ಎಂಬುದೆ ಹೀನ
ಶ್ವಾನ ಸೂಕರ ನಾನಾ ಜನುಮ ತಾಳ್ದಿ ಖೂನ
ತಾನೆತಾನಾದ ಪೂರ್ಣಭಾನುಕೋಟಿ ಸುಘನ
ಖೂನ ವ ಹಿಪತಿಗಿದೆ ತಾನೆ ತಾನಾದ ತಾನ (260ನೆ ಕೀರ್ತನೆ)

ಹೀಗೆ 269–271ರ ಕೀರ್ತನೆಗಳಲ್ಲಿ ಇದನ್ನ ನೋಡಬಹುದು ಪು 182 184 ಇಂಥಶಕ್ತಿ ಇರ ವುದರಿಂದಲೇ ಮಹಿಪತಿರಾಯರ ಕೃತಿಗಳು ಕೋಲಾಟದ ಪದ ಸುವ್ವಿ ಪದ ಶೋಭಾನೆಯ ಪದ ಜೋಗುಳದ ಹಾಡು ಕೊರವಂಜಿಯ ಪದಗಳು ಆಕರ್ಷಕವಾಗಿ ಪಾಮರ ಪ್ರಿಯವಾಗಿವೆ

ಜನರ ಸಮಾಜದ ಬೂಟಾಟಿಕೆಯನ್ನು ಖಂಡಿಸುವಾಗ ರಾಯರ ಮಾತು ಮೊನಚಾಗುತ್ತದೆ ಸಾಧಿಸಿ ತಿಳಿಯದೆ ತನ್ನೊಳು ಖೂನ ಬೋಧಿಸಿ ಹೇಳುದು ಇನ್ನೊಬ್ಬರಿಗೇನ ಡಂಭ ಭಕ ತಿಗೆ ಇಂಬುವೋರನು ನಂಬಿ ನಡೆವ ಭಕ್ತ ಜನರ ಮನೆಯೊಳಿಹ್ಯನು ಕೋಟಿಮಾತಾಡೇನು ಕೋಟಲಿದ್ದಾವೇನು ನೋಟ ನೆಲೆಗೊಳದ ಶಾಸ್ತ್ರ ಪಾರ ಮಾಡಿನೇನು ಬಂಡದಲಿ ಫಲವಿರಲಿಕ್ಕೆ ಅಡರುವ್ಯದ್ಯಾಕೊ ತುದಿಗೆ ಎಂಬ ಅನೇಕ ನೀತಿಗಳನ್ನು ಹೇಳಿರುವರು ಇದರಿಂದ ಅವರ ಮೇಲೆ ಶರಣರ ಪ್ರಭಾವವಿರುವಂತೆ ತೋರುತ್ತದೆ ದೇವರನಿಂದಾಸ್ತುತಿ ಮಾಡುವಾಗ ಬಿತವರ ಭ ಕ್ಕಳ ಮಡಿವಿನೊಳು ಧುಮುಕಿಸಿ ಕಡಿಯಾಲಿದ್ದು ನೆಲೆ ನೋಡಲುವರೇನಯ್ಯಾ ಎಂಬಂಥ ಗಾದೆ ಮಾತ ಗಳನ್ನು ತ ಂಬ ಸೊಗಸಾಗಿ ಬಳಸಿದ್ದಾರೆ

ಮಹಿಪತಿದಾಸರ ಹಾಡುಗಳಲ್ಲಿ ಆದ್ಯಂತ ಪ್ರಾಸಗಳೂ ಹೇರಳವಾಗಿವೆ ಅವರ ಒಂದು ಕೀರ್ತನೆಯ ಲ್ಲಿ

> ಅಡ್ಡಾಗಡ್ಡೆಂಬುದೆ ಅನುಮಾನ
> ಗುಡ್ಡವೆಂಬ ದೆ ವಸ್ತು ತಾನಿಧಾನ
> ವೆಡ್ಡಗೊಂಡಿಹುದು ಕಾಣದೆ ಮನ
> ಅಡ್ಡ ಮಾರಿಬಿಡಿಸುವ ಗ ರುಜ್ಞಾನ[1] ಕೀ 278
>
> ಮಹಾವೆ ಹಿಮ ದೋರುವ ಇದೆ ದೇವದ್ವಾರ
> ಸೋಹ್ಯದೋರಿ ಕುಡುತಿಹ ಪುಣ್ಯ ಸಹಕ ರ
> ಬಾಹ್ಯಾಂತ್ರ ಭ ಸುತಿಹ ಸದ್ಗುರು ಸಹಕ ರ
> ದೇಹ ಅಭಿಮಾನ ಬಿಟ್ಟು ಮಾಡಿ ಜಯ ಜಯ ಕಾರ[2] ಕೀ 279

ಕೀರ್ತನಕಾರರ ಭಾವಾವೆ ಶವು ಸಾಮಾನ್ಯವಾಗಿ ಶಬ್ದಗಳ ಪುನರುಕ್ತಿಯಲ್ಲಿ ವ್ಯಕ್ತಪಡುವ ರೀತಿ ಮ ಹಿಪತಿದಾಸರ ಹಾಡ ಗಳಲ್ಲಿಯೂ ಕಂಡುಬರುತ್ತದೆ ಉದಾ

> ಎನ್ನೊಳಂ ಗ ರು ತನ್ನ ವೆವ ರವು ತೋರಿದ ಇನೆ ೀನಿನೆ ೀನು
> ಎನ್ನೊಳು ಘನಪ್ರಹ್ಮವಸ್ತು ತಾನಾಯಿತು ಇನ್ನೇನಿನೆ ೀನು

---
1 ಮಹಿಪತಿರಾಯರ ಕ ತಿಗಳು ಪುಟ 189
2 ಮಹಿಪತಿರಾಯರ ಕೃತಿಗಳು, ಪುಟ 190

ನಾನು ನಾನೆಂಬುದು ನಲಿಯ ಂತಾ ತಿಳಿಯಿತು ಇನ್ನೇನಿನ್ನೇನು
ಏನೆಂದು ತಿಳಿಯದ ಅನುಮಾನಗಳೆಯಿತು ಇನ್ನೇನಿನ್ನೇನು [3]

ಕೀ 5 ಪು 42

ಕನಕದಾಸರ ಮುಂಡಿಗೆ ಶರೀರ ಬೆಡಗಿನ ವಚನಗಳಂತಹ ಕೀರ್ತನೆಗಳ ರಚನೆ ಯಲ್ಲಿಯೂ ಮಹಿಪತಿರಾಯರು ನಿಪುಣರಾಗಿದ್ದರೆಂಬುದನ್ನು ಕೆಳಕಂಡ ಕೀರ್ತನೆಯಲ್ಲಿ ಕಾಣಬಹುದು

ತಾಯಿ ಇಲ್ಲದ ಶಿಶು ಕಾಯವಿಲ್ಲದೆ ಬಂದು
ಕೈ ಯು ಇಲ್ಲದೆ ಕೊಂಡು ಸೇವಿಸುವುದು
ಬಾಯಿ ಇಲ್ಲದೆ ನುಂಗುವುದು ಕಂಡು ಮಹಿಪತಿಯ
ಕೈಯ ಮುಗಿದನು ಗುರುವಿಗೆ ತಾಹಿಯೆಂದು ಕಿ 139

ಹೀಗೆ ಮಹಿಪತಿರಾಯರ ಕೃತಿಗಳಲ್ಲಿ ಅಪಾರವಾದ ತತ್ವಜ್ಞಾನ ಲೋಕಾನು ಭವ ಭಾಷಾ ಪ್ರಭುತ್ವಗಳನ್ನು ಕಾಣಬಹುದು ವೇದೋಪನಿಷತ್ತು ಮುಂತಾದ ಆಧ್ಯಾತ್ಮಿಕ ಗ್ರಂಥಗಳ ಅಧ್ಯಯನದಿಂದ ಶಬ್ದ ವಾಧುರ್ಯವನ್ನು ಉಕ್ತಿ ಚಾತುರ್ಯ ವನ್ನು ಸಂಪಾದಿಸಿದ್ದಾರೆಂದು ತಿಳಿಯುತ್ತದೆ

ಹೀಗೆ ಶ್ರೀಹರಿಸರ್ವೋತ್ತಮತ್ವವನ್ನು ಪ್ರತಿಪಾದಿಸುವ ದ ಸಕೋಟಿದ ಪರಂಪರೆಯಲ್ಲಿ ಕಾಖಂಡಿಕಿ ಮಹಿಪತಿರಾಯರು ಶ್ರೇಷ್ಠ ಅನುಭಾವಿಗಳ ಗಿರುವುದರಿಂದ ಕ್ರಿ ಶ 17ನೇ ಶತಮಾನದಿಂದ ಇಂದಿನವರೆಗೆ ಬಿಜಾಪುರದ ಮತ್ತು ಕರ್ನಾಟಕದ ಬಹ ಭಾಗದಲ್ಲಿ ಅವರ ಪಾವನ ನಾಮವು ಅನುರಣಿಸುತ್ತದೆ ಕರ್ನಾಟಕದಲ್ಲಿ ಕನ ಡಸಂತರಿಂದ ರೂಪುಗೊಂಡಿದ್ದ ಪರಮಾರ್ಥ ಪಥದಲ್ಲಿ ಮಹಿಪತಿರಾಯರು ಶ್ರೇಷ್ಠ ಸ್ಥಾನದಲ್ಲಿದ್ದಾರೆ ಆದ್ದರಿಂದ ಶ್ರೀ ಗುರುದೇವ ರಾನಡೆಯವರ Sri Mahipathi is one of the Greatest mysties of Karnatak nay of the world ಎಂಬ ಮಾತು ಮಹಿಪತಿದಾಸರ ಮಹತಿಯನ್ನು ಎತ್ತಿ ತೋರತ್ತದೆ

ನಾವು ಕೊನೆಯಲ್ಲಿ ದೇಶಪಾಂಡೆ ಮನೋಹರ ರಾಯರ ಕೆಳಕಂಡ ಮಾತು ಗಳೊಡನೆ ದನಿಗೂಡಿಸಿ ಮಹಾನ್ ದಾಸವರ್ಯರಾದ ಮಹಿಪತಿದಾಸರನ್ನು ಸ್ಮರಿಸು ವುದು ಉಚಿತವಾಗುತ್ತದೆ – ತಮ್ಮ ಪೂರ್ವ ಪುಣ್ಯದ ಬಲದಿಂದಲೂ ಹಿರಿಯ ಮಹಾತ್ಮರೀರ್ವರ ಪ್ರೇರಣೆ ಅನುಗ್ರಹ ಪ್ರಸಾದಗಳ ಬಲದಿಂದಲೂ ತಮ್ಮ

---

3 ಮಹಿಪತಿರಾಯರ ಕೃತಿಗಳು, ಪುಟ 42

ಅನವರತ ಅನನ್ಯ ಭಾವಪೂರ್ಣಸಾಧನದ ಬಲದಿಂದಲೂ "ದಿವ್ಯ ಸ್ವಾನಂದ ಸಾಮ್ರಾಜ್ಯ ದ ಸಾಮ್ರಾಟರಾದರ ಇಡೀ ಪ್ರಪಂಚದಲ್ಲಿಯ ಹಿರಿಯ ಮಹಾತ್ಮರ ಮಾಲಿಕೆಯ ಲ್ಲಿ ಮೇಲ್ಪರಗತಿಯ ಸ್ಥಾನವನ್ನು ಪಡೆದರು ಇಡೀ ಮಾನವತೆಗಾಗಿ ತಮ್ಮ ಉಜ್ವಲ ಜೀವನ ಸಾಹಿತ್ಯಗಳ ಮುಖಾಂತರವಾಗಿ ದಿವ್ಯ ಸಂದೇಶವನ್ನು ಸಲ್ಲಿಸಿದರು

## ಆಧಾರ ಗ್ರಂಥಗಳು

1 ಶ್ರೀ ಮಹಿಪತಿರಾಯರ ಕೃತಿಗಳು—ಸಂ ಡಾ। ಜಿ ವರದರಾಜರಾವ್ ಕನ್ನಡ ಅಧ್ಯಯನ ಸಂಸ್ಥೆ
2 ಮಹಿಪತಿದಾಸರ ಹಾಡುಗಳು—ಸಂ ಕಾವ್ಯಪ್ರೇಮಿ ದಾಸ ಸಾಹಿತ್ಯಮಾಲಿಕೆ–10 ಸಮಾಜ ಪುಸ್ತಕಾಲಯ ಧರವಾಡ
3 ಸ್ವಾನಂದ ಸಾಮ್ರಾಜ್ಯ—ದೇಶಪಾಂಡೆ ಮನೋಹರರಾಯರು
4 ಕರ್ನಾಟಕ ಭಕ್ತವಿಜಯ—ಬೇಲೂರು ಕೇಶವದಾಸರು
5 ಪುರಾಣನಾಮ ಚೂಡಾಮಣಿ—ಸಂ ಬೆನಗಲ್ ರಾಮರಾವ್, ಪಾನ್ಯಂ ಸುಂದರಶಾಸ್ತ್ರಿ
6 ಕರ್ನಾಟಕ ವಿಷಯ ವಿಶ್ವಕೋಶ ಪುಟ 1141
7 ಕರ್ನಾಟಕದ ಹರಿದಾಸ ಸಾಹಿತ್ಯ—ಆರ್ ಎಸ್ ಪಂಚಮುಖಿ
8 ಶ್ರೀ ಮಹಿಪತಿರಾಯರು—ದೇಶಪಾಂಡೆ
9 ಶ್ರೀವತ್ಸ ನಿಘಂಟು—ಡಾ॥ ಟಿ ವಿ ವೆಂಕಟಾಚಲಶಾಸ್ತ್ರಿ
10 Pathway to God in Kannada Literature R D Ranade 1960
11 A History of Dvaita School of Vedanta and its Literature Vol 1—ಡಾ। ಬಿ ಎನ್ ಕೃಷ್ಣಮೂರ್ತಿಶರ್ಮ
12 ಭಾರತೀಯ ಸಂಸ್ಕೃತಿ ಕೋಶ 7ನೆಯ ಖಂಡ ಪುಟ 258

# ವಿಜಯದಾಸರು

ಎಚ್ ಎಂ ನಾಗರಾಜರಾವ್

ಹರಿದಾಸ ಸಾಹಿತ್ಯ ಪ್ರಧಾನವಾಗಿ ಹರಿಭಕ್ತಿಯ ಹೊನಲು ವಿಶ್ವದ ಮೂಲ ಭೂತ ಸತ್ಯದ ಅರಿವಿಗೆ ಮತ್ತು ಬದುಕಿನ ಗುರಿಯಾದ ಮೋ ಕ್ಷಸಾಧನೆಗೆ ಭಕ್ತಿಮಾರ್ಗ ಜ್ಞಾನಮಾರ್ಗ ಅಥವಾ ಕರ್ಮಮಾರ್ಗಕ್ಕಿಂತ ಸುಲಭವೆಂಬುದು ಹರಿದಾಸರ ಸಾಮಾನ್ಯ ನಿಲುವು [1] ದಾಸವಾಙ್ಮಯ ದಲ್ಲಿ ಈ ಭಕ್ತಿಯು ಸಂಸಾರದಲ್ಲಿ ಕಾಣುವ ವಿವಿಧ ರೀತಿಯ ಉತ ಟ ಪ್ರೀತಿಯಾಗಿ ತುಂಬಿದೆ ಅನುಭಾವಮಾರ್ಗದಲ್ಲಿ ದೇವ ನನ್ನು ಕಾಣುವ ರೂಪವೈವಿಧ್ಯಕ್ಕನುಗುಣವಾಗಿ ಈ ಪ್ರಿತಿ ವ್ಯಿದೋರಿದೆ ಮಗು–ತಾಯಿತಂದೆ ಆಳು–ಒಡೆಯ ಸತಿ–ಪತಿ ಆಪ್ತ ಮಿತ್ರ ಈ ವಿವಿಧ ರೀತಿಯ ಭಕ್ತನು ಪರಮಾತ್ಮನಲ್ಲಿ ಕಾಣುವುದು ಸಾಧ್ಯ ದ ಸಸಾಹಿತ್ಯ ಈ ವಣಾದರಿಯ ಭಕ್ತಿ ಭಾವದ ಅಭಿವ್ಯಕ್ತಿಯಲ್ಲಿ ಯಾವ ಕೊರತೆಯನ್ನೂ ತೋರುವುದಿಲ್ಲ [1] ಭಕ್ತಿಯ ನಾನಾ ಮುಖಗಳಿಂದ ಇಷ್ಟದೈವದ ಆರಾಧನೆ ಲಾಕಿಕಸುಖದಲ್ಲಿ ನಿರಾಸಕ್ತಿ ಸಂಸಾರದ ನಿಸ್ಸಾರತೆ ನಶ್ವರತೆಗಳ ಅರಿವು ದೇವ ಲೀಲೆಗಳ ಹೃದಯಂಗಮ ವರ್ಣನೆ ನೀತಿಬೋಧ ಪ್ರಚಾರ ಮುಂತಾದವು ದಾಸರ ಪದಗಳಲ್ಲಿ ವಿಶೇ ಷವಾಗಿ ಕಂಡುಬರುವ ಲಕ್ಷಣಗಳು ಶಿವಶರಣರಿಗೆ ಶಿವ ಸರ್ವೋತ್ತಮನಾದಂತೆ ಹರಿದಾಸರಿಗೆ ಹರಿಯೇ ಸರ್ವೋತ್ತಮ ಅವರಂತೆ ಇವರಿಗೂ ಧರ್ಮ ಪ್ರಚಾರ ಮುಖ್ಯ ಉದ್ದೇಶವಾಗಿತ್ತು ಭಕ್ತಿ ಎರಡೂ ಪಂಥಗಳಿಗೆ ಸಮಾನವಾದ ತೀವ್ರ ಮನೋಭಾವ ತನ್ನ ಗೇಯಗುಣದಿಂದಾಗಿ ದಾಸ ಸಾಹಿತ್ಯ ಸಂಕೀರ್ತನ ಸಾಹಿತ್ಯವೆಂದು ಪ್ರಸಿದ್ಧವಾಗಿದೆ ಹರಿದಾಸರ ಹಾಡುಗಬ್ಬಗಳನ್ನು ಕೀರ್ತನೆ ಸ ಳಾದಿ ಉಗಾಭೋಗಗಳೆಂದು ವರ್ಗೀಕರಿಸಿದೆ

(_ ದಾಸಸಾಹಿತ್ಯ ಪರಂಪರೆಯ ಬೆಳವಣಿಗೆಯಲ್ಲಿ ಸಾಮಾನ್ಯವಾಗಿ ನಾಲ್ಕು ಘಟ್ಟಗಳನ್ನು ಪ್ರಸ್ತಾಪಿಸ ವುದುಂಟು (i) ಮಧ್ವಾಚಾರ್ಯರ ಕಾಲದಲ್ಲಿ ಅವರ ಶಿಷ್ಯ ಸಮುದಾಯವು ನರಹರಿತೀರ್ಥರ ನೇತೃತ್ವದಲ್ಲಿ ರಚಿಸಿದ ವಾಙ್ಮಯ (ii) ವ್ಯಾಸರಾಯರ ಗುರುತ್ವದಲ್ಲಿ ಪುರಂದರದಾಸ ಕನಕದಾಸ ಮುಂತಾದವರು ಹಾಡಿದ ಪದಗಳು (iii) ವಿಜಯದಾಸ ಮತ್ತು ಅವರ ಶಿಷ್ಯರು ಹಾಡಿದ ಸಾಹಿತ್ಯ ಮತ್ತು (iv) ಪ್ರಾಣೇಶ ಗುರುಪ್ರಾಣೇಶ ಮೊದಲಾದವರ ರಚನೆಗಳು ಈ ಘಟ್ಟಗಳನ್ನೇ ಕ್ರಮವಾಗಿ ಆರಂಭಕಾಲ ಉನ್ನತಿಯ ಕಾಲ ವಿಸ್ತಾರಕಾಲ ಹಾಗೂ ಅವನತಿಯ

---

1 ಹರಿದಾಸ ಸಾಹಿತ್ಯ ದ್ವಿತೀಯ ಘಟ್ಟದ ಸಾಧನೆ ಕರ್ನಾಟಕ ವಿಶ್ವವಿದ್ಯಾನಿಲಯ ಧಾರವಾಡ (೧೯೭೦) ಪುಟ ೧೨೨

ಕಾಲ ಎಂದು ಡಾ. ಎಚ್. ಕೆ ವೇದವ್ಯಾಸಾಚಾರ್ಯರು ಸೂಚಿಸಿದ್ದಾರೆ. "ವಿಭಾಗದ ದೃಷ್ಟಿಯಿಂದ ಹೀಗೆ ನಾಲ್ಕು ಮೆಟ್ಟಿಲುಗಳನ್ನು ಮಾಡಬಹುದಾದರೂ ವಿಶಿಷ್ಟಶಕ್ತಿ ಮತ್ತು ಸಾಂಸ್ಕೃತಿಕ ಪ್ರಭಾವದ ದೃಷ್ಟಿಯಿಂದ ನೋಡಬಹುದಾದುದು ಒಂದೇ ಘಟ್ಟ; ಅದೆಂದರೆ ಪುರಂದರದಾಸರ ಯುಗ" ಎನ್ನುವುದು ಡಾ. ಎಚ್. ತಿಪ್ಪೇರುದ್ರಸ್ವಾಮಿ ಅವರ ಅಭಿಪ್ರಾಯ.[2] "ಆದರೆ ದಾಸಸಾಹಿತ್ಯದ ಬೆಳವಣಿಗೆಯ ದೃಷ್ಟಿಯಿಂದ, ಹನ್ನೆರಡನೆಯ ಶತಮಾನದಿಂದ ಹತ್ತೊಂಬತ್ತನೆಯ ಶತಮಾನದವರೆಗೆ ಬೆಳೆದುಬಂದ ಆ ಸಾಹಿತ್ಯವನ್ನು, ನರಹರಿ ತೀರ್ಥರಿಂದ ಪುರಂದರ, ಕನಕದಾಸರ ಜೀವಿತ ಕಾಲದ ವರೆಗಿನ ಅವಧಿಯನ್ನು ಒಂದು ಘಟ್ಟವೆಂದೂ, ಮುಂದೆ ವಿಜಯದಾಸರ ಹಾಗೂ ತರುವಾಯದ ಅವಧಿಯನ್ನು ಇನ್ನೊಂದು ಘಟ್ಟವೆಂದೂ ಹೀಗೆ ಎರಡೇ ಪ್ರಧಾನ ಘಟ್ಟಗಳಾಗಿ ಎಣಿಸುವುದರಲ್ಲಿ ಸೌಲಭ್ಯವೂ ಔಚಿತ್ಯವೂ ಇದೆ. ಈ ಅವಧಿಗಳು ನರಹರಿತೀರ್ಥರ ಮತ್ತು ಶ್ರೀಪಾದರಾಯರ ನಡುವಿನ ಹಾಗೂ ಪುರಂದರ ಮತ್ತು ವಿಜಯದಾಸರ ನಡುವಿನ 'ಅಜ್ಞಾತ ಕಾಲ'ಗಳೆರಡನ್ನೂ ಒಳಗೊಳ್ಳುತ್ತವೆ."[3] ಅಪ ರೂಪವಾಗಿಯೊದರೂ ಇಪ್ಪತ್ತನೆಯ ಶತಮಾನದಲ್ಲಿ ಕಂಡುಬಂದಿರುವ ದಾಸಸಾಹಿತ್ಯ ವನ್ನು ಮೂರನೆಯ ಘಟ್ಟಕ್ಕೆ ಸೇರಿದುದೆಂದು ಗುರುತಿಸುವ ಪ್ರಯತ್ನ ಇತ್ತೀಚೆಗೆ ನಡೆದಿದೆ.[4]

ಪುರಂದರದಾಸರ ಅನಂತರ ಸುಮಾರು ಒಂದು ಶತಮಾನ ದಾಸಸಾಹಿತ್ಯದ ಅಜ್ಞಾತಪರ್ವ. ವಿಜಯನಗರ ಸಾಮ್ರಾಜ್ಯದ ಪತನಾಂತರ ವಿಶೇಷವಾಗಿ ಕರ್ನಾಟಕದ ರಾಜಕೀಯ-ಸಾಂಸ್ಕೃತಿಕ ಪರಿಸ್ಥಿತಿಯಲ್ಲಿ ಉಂಟಾದ ಕ್ಷೋಭೆ ಕೋಲಾಹಲಗಳು ದಾಸ ಸಾಹಿತ್ಯದ ಬೆಳವಣಿಗೆಗೆ ಮಾರಕವಾಗಿದ್ದಿರಬೇಕೆಂದು ತೋರುತ್ತದೆ. ದಾಸಸಾಹಿತ್ಯಕ್ಕೆ ಮತ್ತೆ ಚಾಲನೆ ಪ್ರೇರಣೆ ಲಭ್ಯವಾದುದು ವಿಜಯದಾಸರ ಕಾಲದಲ್ಲಿಯೇ. "ಆದ್ದರಿಂದ ವಿಜಯದಾಸರನ್ನು ದಾಸಸಂಪ್ರದಾಯವನ್ನು ಪುನರುಜ್ಜೀವನ ಮಾಡಿದ ಮಹಿಮ ರೆಂದು ಹೇಳಲು ಯಾವ ಅಡ್ಡಿಯೂ ಇಲ್ಲ."[5] ಪ್ರಸಿದ್ಧವಾದ 'ದಾಸಚತುಷ್ಟಯ' ರಲ್ಲಿ ಪುರಂದರದಾಸರೊಬ್ಬರನ್ನು ಬಿಟ್ಟು ಉಳಿದ ಮೂವರು-ವಿಜಯದಾಸರು ಅವರ ಶಿಷ್ಯರಾದ ಗೋಪಾಲದಾಸರು ಮತ್ತು ಗೋಪಾಲದಾಸರ ಶಿಷ್ಯರಾದ ಜಗನ್ನಾಥದಾಸರು-ಈ ದ್ವಿತೀಯಘಟ್ಟಕ್ಕೆ ಸೇರಿದವರೆಂಬ ಅಂಶ ಗಮನಾರ್ಹ.)

ಉತ್ತರ ಕರ್ನಾಟಕದ ರಾಯಚೂರು ಜಿಲ್ಲೆಯ ಮಾನವಿ ತಾಲ್ಲೂಕಿನ ಚೀಕಲ ಪರಿವಿ ಎಂಬ ತುಂಗಭದ್ರಾತೀರದ ಗ್ರಾಮದಲ್ಲಿನ ಬಡ ವೈಷ್ಣವ ಕುಟುಂಬವೊಂದರಲ್ಲಿ

2. ಡಾ. ಎಚ್. ತಿಪ್ಪೇರುದ್ರಸ್ವಾಮಿ, ಕರ್ನಾಟಕ ಸಂಸ್ಕೃತಿ ಸಮೀಕ್ಷೆ: ಪುಟ ೩೫೫
3, ದಾಸ ಸಾಹಿತ್ಯ, ದ್ವಿತೀಯ ಘಟ್ಟದ ಸಾಧನೆ, ಪುಟ ii
4. ಡಾ। ಕೆ. ಗೋಕುಲನಾಥ್ : ಶ್ರೀ ವಿಜಯದಾಸರು, ಜೀವನ ಮತ್ತು ಕೃತಿಗಳ ಸಮೀಕ್ಷೆ, (1978) ಪುಟ ೪೧

ವಿಜಯದಾಸರು ಜನಿಸಿದರು ತಂದೆ ಭಾರದ್ವಾಜಗೋತ್ರದ ಮತ್ತು ಋಕ್ ಶಾಖೆಯ ಶಾನಂಭೋಗ ಶ್ರೀನಿವಾಸಪ್ಪ ಮತ್ತು ತಾಯಿ ಕೂಸಮ್ಮ ಆಸ್ತಿಕರಾದ ಈ ದಂಪತಿಗಳು ಸ್ಥಳದ ಅಶ್ವತ್ಥನಾರಸಿಂಹದೇವರ ಕೃಪೆಯಿಂದ ಪಡೆದ ಹಿರಿಯ ಮಗನಿಗೆ ದಾಸಪ್ಪ ಎಂದು ಹೆಸರಿಟ್ಟರು ಇವರಿಗೆ ಇಬ್ಬರು ಸೋದರರಿದ್ದರೆಂದು ತಿಳಿದು ಬರುತ್ತದೆ ( ವಿಜಯ ದಾಸರು ಜನಿಸಿದಂದು ಶಾಲಿವಾಹನಶಕವರ್ಷ ೧೬೦೪ ರುಧಿರೋದ್ಗಾರಿ ಸಂವತ್ಸರವೆಂದು ಹೇಳಲಾಗಿದೆ ಇದು ಕಿ ಶ ೧೬೮೨ ಅಳಕ್ಕೆ ಸಮನಾಗುತ್ತದೆ ಆಂಧ್ರ ಪ್ರದೇಶದ ಗುಂತಕಲ್ಲಿನ ಬಳಿ ಇರುವ ಚಿಪ್ಪಗಿರಿ ಕ್ಷೆ ತ್ರದಲ್ಲಿ ಯುವ ಸಂವತ್ಸರದ ಕಾರ್ತೀಕ ಶುದ್ಧ ದಶಮಿ ಗುರುವಾರ ಪ್ರಥಮಯಾಮದಲ್ಲಿ ವೈಕುಂಠವಾಸಿಗಳಾದ ವಿಜಯ ಜಗನ್ನಾಥ ದಾಸರು ಮತ್ತು ಆನಂದದಾಸರ ಪದಗಳಿಂದ ತಿಳಿದುಬರುತ್ತದೆ ಈ ತೇದಿವಿವರಗಳು ಕ್ರಿ ಶ ೧೭೫೫ರ ನವೆಂಬರ್ ೧೩ ಗುರುವಾರಕ್ಕೆ ಸರಿ ಹೊಂದುತ್ತವೆ [6] ಆವರಿಗಾಗ ಎಪ್ಪತ್ತೆರಡನೆಯ ವರ್ಷತುಂಬಿ ಎಪ್ಪತ್ಮೂರನೆಯ ವರ್ಷ ನಡೆಯುತ್ತಿತ್ತು ಆದ್ದರಿಂದ ಅವರು ರುಧಿರೊ ದ್ಗಾರಿ ಸಂವತ್ಸರದಲ್ಲಿ ಕಾರ್ತೀಕಮಾಸಕ್ಕಿಂತ ಹಿಂದಿನ ಒಂದು ದಿನದಲ್ಲಿ ಜನಿಸಿದ್ದಿರಬೇಕೆಂಬ ಊಹೆಮಾಡಲು ಸಾಧ್ಯ ವಿಜಯದಾಸರ ಕಾಲಾವಧಿ ೧೬೮೨ ರಿಂದ ೧೭೫೫ ಎಂದು ನಿರ್ಣಯಿಸಬಹುದಾಗಿದೆ ಚಿಪ್ಪಗಿರಿಯ ಲ್ಲಿ ಪ್ರತಿವರ್ಷ ಕಾರ್ತೀಕ ಶುದ್ಧ ನವಮಿಯಿಂದ ದ್ವಾದಶಿಯ ವರೆಗೆ ವಿಜಯದಾಸ ಆರಾಧನಾ ಮಹೋತ್ಸವ ನಡೆಯುತ್ತದೆ

ವಿಜಯದಾಸರ ಬಾಲ್ಯವೆಲ್ಲ ಬಡತನದಲ್ಲಿ ಕೂಸಿಮಗದಾಸ ಎಂಬ ಜನರ ತಿರಸ್ಕಾರದಲ್ಲಿ ಕಳೆಯಿತು ಸಂಜೆತನಕವಿದ್ದು ಸಣ್ಣ ಸೌಟಿನ ತುಂಬ ಗಂಜಿ ಕಾಣದ ಬದ ಕಾದರೂ ಕಾಲಕಾಲಕ್ಕೆ ಚೌಲ ಉಪನಯನ ವಿವಾಹ ಇತ್ಯಾದಿ ಧಾರ್ಮಿಕ ವಿಧಿಗಳೆಲ್ಲ ನಡೆದವು ಅರಳಮ್ಮ ಎಂಬುದು ಇವರ ಪತ್ನಿಯ ಹೆಸರು ಪ್ರಾಯಶಃ ಲೌಕಿಕ ಜಗತ್ತಿನ ವಾಸ್ತವಿಕ ಕಠೋರತೆಯನ್ನು ಎದುರಿಸಲಾಗದೆ ಮನೆಬಿಟ್ಟು ದೇಶಾಟನ ಹೊರಟರು ದಾರಿಯ ಲ್ಲಿ ಇದ್ದ ಒಟ್ಟೆ ಬರೆ ಕೂಡ ಕಳ್ಳರ ಪಾಲಾಯಿತು

> ಲೋಕ ಜನರಂತೆ ಲೌಕಿಕದೊಳು ಸಂಚರಿಸಿ
> ಈ ಕಾಯ ಗೋಸುಗಾನೇಕ ಜನರ ಸೇವೆ
> ಕಾಕಪ್ಪಿಯಾಗಿ ವಸ್ತ್ರಾನ್ನ ಕಾಣದೆ ಮರುಗಿ
> ಸಾಕುವಾರಿಲ್ಲೆನುತಲಿ
> ಬೇಕಾದ ದೇಶವನು ಚರಿಸುತಿರೆ ಒಂದು ಕಡೆ
> ತಾಕಿ ಚೋರರು ವಸ್ತ್ರಾದಿಗಳ ಅಪಹರಿಸೆ ಇ
> ನ್ನ್ಯಾಕೆ ಬಳಗವೆಂದೆನುತ ಅಲ್ಲಿಂದ

6 L D Swami Kannu Pillai *An Indian Ephemeris* Vol VI p 313

ನಾಕನದಿ ಮಿಾವೆನೆಂದು
ಹಿರಿಯರಿಗೆ ಪೇಳದಲೆ ತೆರಳಿಯಾತ್ರೆಗೆ ಪೋಗಿ
ಎರಡೆಂಟು ವತ್ಸರದ ತರುಣ ಪ್ರಾಯದಲಿಂದ
ಸರುವ ತೀರ್ಥಕ್ಷೇತ್ರಮಿಂದು ವಿಂಶತಿ ವ
ತ್ಸರಕೆ ತಿರ ಗಿನ್ನು ಬಂದು

ವಿಜಯದಾಸರು ತಮ್ಮ ಹದಿನಾರನೆಯ ವಯಸ್ಸಿನಲ್ಲಿ ಮ ನೆ ಬಿಟ್ಟು ಹೊರಟು ನಾಲ್ಕು ವರ್ಷಕಾಲ ತೀರ್ಥಯಾತ್ರೆ ಮಾಡಿ ಇಪ್ಪತ್ತನೆಯ ವಯಸ್ಸಿನಲ್ಲಿ ಮನೆಗೆ ಹಿಂದಿರ ಗಿದರೆಂದು ಅವರ ಸೊ ದರರಾದ ಹಯವದನ ವಿಠಲರು ತಿಳಿಸುತ್ತಾರೆ. ರಾಮೇಶ್ವರಕ್ಕೆ ಹೋಗುವಾಗ ಮಾರ್ಗ ಮಧ್ಯೆ ಸ್ವಗ್ರಾಮಕ್ಕೆ ಬಂದ ವಿಷಯವನ್ನು ಕೇಶವ ವಿಠಲರು ತಿಳಿಸುತ್ತಾರೆ

ವಿಜಯರಾಯರ ಪಾದಕಮಲ ಭಜಿಸಲಾಕ್ಷಣ ದಿ
ಗ್ವಿಜಯ ಮಾಡಿಸಿ ಜನರನ್ನು ಪೊರೆವರನುದಿನ
ದಾಸಪ್ಪನೆಂಬ ನಾಮದಿಂದ ಕರೆಸುತ ಉದರ
ಗೋಸುಗದಿ ಪರರ ಬಳಿಯ ಅಶ್ಕ್ಯಸಂತ
ಏಸುಪರಿಯ ಬಡತನವು ಸೋಸಿ ದೇವೃತ
ಕ್ಲೇಶಗೊಂಡು ಸುಲಿಸಿಕೊಂಡು ಕಾಶಿಗ್ಹೋಗುತ
ವಾಸವಾಗಿ ಸನ್ಯಾಸಿವೇಷ ಧರಿಸುತ ನಿತ್ಯ
ಬ್ಯಾಸರದಲೆ ವ್ರತಗಳು ಉಪವಾಸ ಮಾಡುತ
ರಾಶಿರಾಶಿ ಜನರ ಕೂಡಿ ದೇಶ ಚರಿಸುತ ಮ್ಯಾಲೆ
ಕಾಶಿ ಬಿಟ್ಟು ಸೇತು ರಾಮೇಶನ್ನ ಹುಡುಕ ತ
ತಿರುಗಿ ತಿರ ಗಿ ಬೇಕಲ ಪರಿಗೆ ಬಂದನು ಕಂಡು
ಗುರ ತು ಹಿಡಿದು ಆ ಕ್ಷಣದಿ ಕರೆದು ಒಯ್ದರು
ಪರಮ ಸಂತೋಷದಿಂದ ಧರಿಶರಾದರು ಪ್ಮ್ಯ
ಸರೆದ ಶೋಭನಾದಿಗಳು ತ್ವರಿತ ಮಾಡ್ದರು

ಪ್ರಾಯಶಃ ಈ ಹೊತ್ತಿಗೆ ವಿಜಯ ದಾಸರ ತಂದೆ ಮೃತಿಹೊಂದಿದ್ದರು ಪರಂಪರಾಗತ ಶಾನ ಭೋಗಿಕೆ ವ ತ್ತಿ ವಿಜಯದಾಸರ ಪಾಲಿಗೆ ಸಂದಿತು ಆ ವೃತ್ತಿ ಯಲ್ಲಿ ಕೆಲವು ವರ್ಷಗಳ ಕಾಲ ಇದ್ದರು ಆದರೆ ವಿಧಿಯ ಆಟ ತಿಳಿಯ ುವಂಥದ್ದಲ್ಲ ಹಣದ ಲೆಕ್ಕಾಚ ರದಲ್ಲಿನ ದೋಷವೊಂದರ ಆರೋಪವನ್ನು ಅವರು ಹೊರಬೇಕಾಯಿ ತಂತೆ ಸಂಸಾರದ ಜವಾಬ್ದಾರಿ ಆರ್ಥಿಕ ತೊಂದರೆ ಮಾನಸಿಕ ಅಶಾಂತಿ ಮುಂತಾದ ಕಾರಣಗಳಿಂದಾಗಿ ಮತ್ತೊಮ್ಮೆ ಅವರು ವ್ಯಾವಹಾರಿಕ ಬದುಕಿಗೆ ಬೆನ್ನು ಮಾಡಿ ಓಡಿ ಹೋಗುವಂತಾಯಿತು ಸುಮಾರು ಕ್ರಿ ಶ ೧೭೦೫ರ ಸುಮಾರಿಗೆ ತಮ್ಮ

ಮೂವತ್ತೆರಡನೆಯ ವಯಸ್ಸಿನಲ್ಲಿ ಮತ್ತೆ ಉತ್ತರಭಾರತದತ್ತ ಹೊರಟರೆಂದು ಕೇಶವ ವಿಠಲರ ಹೇಳಿಕೆಯಿಂದ ವೇದ್ಯವಾಗುತ್ತದೆ ಸಾಂಪ್ರದಾಯಿಕ ಧಾರ್ಮಿಕ ವಿಧಿಗಳಲ್ಲಿ ಅವರ ನಿಷೆ ಸ್ವಲ್ಪವೂ ಸರಿದಿರಲಿಲ್ಲ ಗಯಾದಲ್ಲಿ ತಮ್ಮ ಪಿತೃಗಳಿಗೆ ಪಿಂಡ ಹಾಕಿದರು

**ಅಂಕಿತೋಪದೇಶ** ಕಾಶಿಯಲ್ಲಿ ವಿಜಯದಾಸರಿಗೆ ಪುರಂದರದಾಸರು ಕನಸಿನಲ್ಲಿ ಬಂದು ದರ್ಶನವಿತ್ತು ವಿಜಯವಿಠ್ಠಲ ಎಂಬ ಅ ಕಿತವನ್ನು ದಯ ಪಾಲಿಸಿದ ರೆಂತೆ ಅವರಿಗೆ ಪುರಂದರದಾಸರ ಬಗ್ಗೆ ಅಪಾರಗೌರವ ಅಡಿಗಳಿಗೊಂದಿಪೆ ಪುರಂದರ ಗ ರುವೆ ಕಡು ಜ್ಞಾನ ಭಕ್ತಿ ವೈರಾಗ್ಯದ ನಿಧಿಯೆ ಎಂದೂ ಗುರ ಪುರಂದರದಾಸರೇ ನಿಮ್ಮ ಚರಣ ಸರಸಿಜ ನಂಬಿದೆ ಎಂದೂ ಭಕ್ತಿಯಿಂದ ಸುತ್ತಿಸಿದ್ದಾರೆ ದಾಸ ಪುರಂದರನ ಪಾದವನ್ನು ಪೊಂದಿದೆನು ಜನ್ಮದ ಪುಣ್ಯರಾಶಿ ಫಲಿಸಿತೊ ಎನಗೆ ಎಂದು ಸಂತಸದಿಂದ ಹಾಡಿ ಕ ಸಿಗಾಗದವನು ಸಾಸಿರಕೆ ಬೆತಿಯಾದೆ ಎಂದು ತಮ್ಮನ್ನು ಕುರಿತು ಹೇಳಿಕೊಂಡಿದ್ದಾರೆ ಮೂಗುತಿಯ ಕಥೆಯೂ ಸೆ ರಿದಂತೆ ಪುರಂದರ ದಾಸರ ಜೀವನ ವೃತ್ತಾಂತ ವಿಜಯದಾಸರ ರಚನೆಗಳಲ್ಲಿ ಬಂದಿರುವುದು ಗವ ನಾರ್ಹ ಪುರಂದರದಾಸರ ಮಕ್ಕಳಲ್ಲಿ ಒಬ್ಬರಾದ ಮಧ್ವಪತಿಯೆ ೀ ವಿಜಯದಾಸರಾಗಿ ಬಂದರೆಂದೂ ಅವರು ಭೃಗುವಿನ ಅಂಶವೆಂದೂ ಸಾಂಪ್ರದಾಯಿಕರು ನಂಬುತ್ತಾರೆ ಪುರಂದರದಾಸರು ತಮ್ಮನು ತಂದೆ ಮಕ್ಕಳನು ಸಾಕಿದಂತೆ ಸಾಕಿದರು ಉಪದೇಶ ವಿತ್ತರು ಎಂಬ ದಾಗಿ ವಿಜಯದಾಸರೆ ತಮ್ಮ ದಾಸರೆ ಪುರಂದರ ದಾಸರು ಲೆ ಸಾಗಿ ಎನಗೆ ಸುಮಾರ್ಗವನು ತೋರಿದರು ಎಂಬ ಕೃತಿಯ ಲ್ಲಿ ತಿಳಿಸಿದ್ದಾರೆ ಅವರಿಗೂ ಪುರಂದರದಾಸರು ನಾರದರ ಅವತಾರವೆಂಬ ನಂಬುಗೆ ಇತ್ತೆಂಬುದು ಮಾರಜನಕನ ಸನಿಧಾನದಿ ಸಾರಗಾನವ ಮಾಡುವ ನಾರದರೆ ಈ ರೂಪದಿಂದಲಿ ಚಾರು ದರ್ಶನ ತೋರಿದ ಎಂಬ ಸಾಲುಗಳಲ್ಲಿ ವ್ಯಕ್ತವಾಗಿದೆ ಪುರಂದರದಾಸರು ರಚಿಸಿದರೆನ ಲಾದ ನಾಲ್ಕು ಲಕ್ಷದ ಎಪ್ಪತ್ತೈದು ಸಾವಿರ ಕೃತಿಗಳಿಗೆ ವಿಜಯ ದಾಸರು ತಮ್ಮ ಇಪ್ಪತ್ತೈದು ಸಾವಿರ ಕೃತಿಗಳನ್ನು ಸೇರಿಸಿ ಐದುಲಕ್ಷದ ಪೂರ್ಣಸಂಖ್ಯೆಗೆ ಕ ರಣರಾದರೆಂಬ ಪ್ರತೀತಿ ಇದೆ ಗ ರ ಶಿಷ್ಯರ ಮೇಲಣ ಅನನ್ಯ ಅಭಿಮಾನವೇ ಕಾರಣವೆನ್ನಬಹುದು ಹೀಗೆ ಅವನಿಯೊಳಗೆ ವ ಧ್ವಮತದಲ್ಲಿ ಬಂದು ಉದ್ಭವ ರಾದ ದಾಸಪ್ಪ ಪುರಂದರ ದಾಸರ ಅನುಗ್ರಹದಿಂದ ವಿಜಯದಾಸರೆನಿಸಿ ವಿಜಯ ವಿಠ ಲನ ದಿವ್ಯನಾಮವನು ಕೊಂಡಾಡುವ ಅಧಿಕಾರಿ ಯಾದರು

**ಸಾಧನೆ** ದಾಸರೆಲ್ಲರೂ ಅನುಭಾವಮಾರ್ಗದವರು ಅವರ ವ್ಯಕ್ತಿತ್ವಕ್ಕೆ ಎರಡು ರೇಖೆ ತಾವು-ಭಗವಂತ ಹಾಗೂ ತಾವು-ಸುತ್ತಣಲೋಕ ಒಂದರ ಗುರಿ ಭಕ್ತಿಸಾಧನೆಯಾದರೆ ಮತ್ತೊಂದರದು ಲೋಕಕಲ್ಯಾಣ ಭಕ್ತಿಯೇ ಎಲ್ಲಕ್ಕೂ ಸಾಧನ ಹರಿಸರ್ವೋತ್ತಮತ್ವ ಭಕ್ತಿಭಾವ ನಿರೂಪಣೆ ಆತ್ಮನಿವೇದನೆ, ನೀತಿಬೋಧೆ

ಮತ್ತು ಸಾಮಾಜಿಕ ಕಳಕಳಿ ದಾಸಸಾಹಿತ್ಯದ ಪ್ರಥಮಘಟ್ಟದ ಪ್ರಮುಖ ಗುಣಗಳು. ಆದರೆ ದ್ವಿತೀಯ ಘಟ್ಟದಲ್ಲಿ ಈ ಗುಣಗಳಿಗಿಂತ ಮಧ್ವಸಿದ್ಧಾಂತಗಳ ಮಂಡನೆ ಪ್ರಚಾರ ಪ್ರತಿಪಾದನೆಗಳಿಗೆ ಹೆಚ್ಚಿನ ಪ್ರಾಶಸ್ತ್ಯ ಲಭಿಸಿತು. ಪುರಂದರದಾಸರ ಕೃತಿಗಳಲ್ಲಿ ಪ್ರಸಾದ ಮಾಧುರ್ಯ ಲಾಲಿತ್ಯಾಂಶಗಳು ಹೆಚ್ಚಾಗಿ ಕಂಡು ಬಂದರೆ ವಿಜಯದಾಸರ ಕೃತಿಗಳಲ್ಲಿ ಶಾಸ್ತ್ರವಿಷಯ ಚಿಂತನಾಂಶಗಳು ಹೆಚ್ಚಾಗಿ ಕಾಣಿಸಿಕೊಳ್ಳುತ್ತವೆ. ದ್ವಿತೀಯ ಘಟ್ಟದ ದಾಸಸಾಹಿತ್ಯ ಹಿಂದಿನ ವೈಶಾಲ್ಯ, ಸಾರ್ವತ್ರಿಕತೆಗಳನ್ನು ಸ್ವಲ್ಪಮಟ್ಟಿಗೆ ಕಳೆದುಕೊಳ್ಳುತ್ತ ಒಂದು ವರ್ಗಕ್ಕಷ್ಟೇ ಸೀಮಿತವಾಗತೊಡಗುತ್ತದೆ. ಈ ಕಾಲದಲ್ಲಿಯೂ ವಿಜಯದಾಸ ಜಗನ್ನಾಥ ಗೋಪಾಲದಾಸರಂಥವರು ಸಾಹಿತ್ಯಿಕ ಮೌಲ್ಯವುಳ್ಳ ಕೆಲವು ಉತ್ತಮ ಕೃತಿಗಳನ್ನು ರಚಿಸಿದರೆಂದರೆ ಅದು ಅವರ ವೈಯಕ್ತಿಕ ಗುಣಾಂಶಗಳ ಮಹಾತಾಗುತ್ತದೆಯೇ ವಿನಾ ಒಂದು ಪರಂಪರೆಯ ಅಭಿನ್ನಗುಣಾತ್ಮಕ ಸೃಷ್ಟಿಯ ಮಾತಾಗುವುದಿಲ್ಲ[7] ಎನ್ನುವ ಮಾತನ್ನು ಮರೆಯುವಂತಿಲ್ಲ.

ಕೂಸಿ ಮಗ ದಾಸ ವಿಜಯದಾಸರಾದ ಮೇಲೆ ಕ್ರಮೇಣ ತಮ್ಮ ಹರಿಭಕ್ತಿ, ವಿದ್ವತ್ತು ಮತ್ತು ಪ್ರತಿಭೆಗಳಿಂದ ಜನಸಾಮಾನ್ಯ ಮತ್ತು ಶ್ರೀಮಂತವರ್ಗಗಳಲ್ಲಿ ವಿಶೇಷ ಗೌರವಾದರಗಳಿಗೆ ಪಾತ್ರರಾದರು. ಅವರ ಶಿಷ್ಯ ಸಮುದಾಯವೂ ಬೆಳೆಯಿತು. ಅವರಲ್ಲಿ ಹರಿಭಕ್ತಿ ಮತ್ತು ಲೋಕ ವಿರಕ್ತಿ ಪ್ರಜ್ಞೆ ಸದಾ ಇದ್ದುದರಿಂದ ಅಹಂಕಾರ ಅಂಕುರಿಸಲಿಲ್ಲ. ಎಲ್ಲವೂ ಹರಿಯ ಮಹಿಮೆ ಎಂದು ಭಾವಿಸಿ ತಮ್ಮ ಹಿಂದಿನ-ಅಂದಿನ ಸ್ಥಿತಿಗಳನ್ನು ಕುರಿತು ಹಾಡಿದರು.

ನಿನ್ನ ಒಲುಮೆಯಿಂದ ನಿಖಿಳ ಜನರು ಬಂದು
ಮನ್ನಿಸುವರೋ ಮಹರಾಯ
ಎನ್ನ ಪುಣ್ಯಗಳಿಂದ ಈ ಪರಿಯುಂಟೇನೊ
ನಿನ್ನದೆ ಸಕಲ ಸಂಪತ್ತು
ಒಬ್ಬ ಹೆಂಗಸಿಗೆ ಹೊಟ್ಟೆಗೆ ಹಾಕ ಪುದಕಿನ್ನು
ತಬ್ಬಿಬ್ಬುಗೊಂಡೆನೊ ಹಿಂದೆ
ನಿಬ್ಬರದಿಂದಲಿ ಸರ್ವರ ಕೂಡುಂಬೊ
ಹಬ್ಬವೆನುಣಿಸುವಿ ಹರಿಯೆ
ಗಂಜಿ ಕಾಣದೆ ಬಳಲಿದೆನೊ
ವ್ಯಂಜನ ಮೊದಲಾದ ನಾನಾರಸಂಗಳ
ಭುಂಜಿಸುವುದು ಮತ್ತೇನೊ
ಜೀರ್ಣ ಮಲಿನವಸ್ತ್ರ ಕಾಣದ ನರನಿಗೆ
ಊರ್ಣ ವಿಚಿತ್ರ ಸುವಸನ

7 ಎಚ್ ಎಸ್ ವೆಂಕಟೆ ಶಮೂರ್ತಿ ; ಕೀರ್ತನಕಾರರು (1971) ಪುಟ 108

ಮಂನೆ ಮನೆ ತಿರಿದರು ಕಾಸ ಪುಟ್ಟದೆ ಸು
ಮ್ಮನೆ ಚಾಲ್ವರಿದು ಬಳಲಿದನೊ
ಹಣ ಹೊನ್ನು ದ್ರವ್ಯಂಗಳಿದ್ದಲ್ಲಿಗೆ ತನಗೆ
ತಾನೆ ಪ್ರಾಪ್ತಿ ನೋಡೊ ಜಿ ಯಾ

ಸುಖದುಃಖಗಳೆರಡೂ ಹರಿಯು ಕೊಡುಗೆ ಎಂಬುದು ಹರಿದಾಸರ ನಂಬುಗೆ ಅವರು ಸುಖಕ್ಕೆ ಹಿಗ್ಗದ ದಃಖಕ್ಕೆ ಕುಗ್ಗದ ಸ್ಥಿತಪ್ರಜ್ಞತೆ ಸಾಧಿಸಿ ಹರಿನಾಮ ಸ್ಮರಣೆ ಯಲ್ಲಿಯೇ ತನ್ಮಯರಾದವರು

ವಿಜಯದಾಸರಲ್ಲಿ ಉದ್ದಕ್ಕೂ ಅವರ ಮಧ್ವಮತ ನಿಷೆ ನಿಚ್ಚಳವಾಗಿ ಗೋಚರಿಸುತ್ತದೆ ಅವರು ನಾನಾ ದೇವತೆಗಳನ್ನು ಸ್ತುತಿಸಿದ್ದರೂ ಯಾವ ದೇವತೆ ಯನ್ನು ಹರಿಗೆ ಸಮವೆಂದು ಪರಿಗಣಿಸುವುದಿಲ್ಲ ಅವರ ವಿಜಯವಿಠಲ ಜಾತಿ ಯಿಲ್ಲದ ಸತ್ಯ ಜಾತರಹಿತ ಮಹದ್ಭೂತ ಮ ತತ್ವ ಜಲಕಾಷ ಶೈಲಗಗನ ನೆಲಪಾವಕ ವಾಯು ತರುಫಲಪುಷ್ಪ ಬಳ್ಳಿ ಎಲ್ಲದರಲ್ಲಿಯ ೂ ವ್ಯಾಪ್ತ ಅಕಾರದಿಂದ ಕ್ಷಕಾರದ ವರೆಗಿನ ಮಹಾವರ್ಣಗಳೆಲ್ಲ ವಿಷ್ಣುನಾಮ ಹರಿ ದೊಡ್ಡವನೆ ಅಥವಾ ಹರ ದೊಡ್ಡವನೆ ಎಂಬುದು ನರರ ಸಂದೇಹ ಮಾತ್ರ ಎಂದು ಶಾಸನವೊಂದು ಸಾರುತ್ತದೆ ಭೇದ ಮೂರ್ತಿಯ ಲ್ಲೇ ಹೊರತು ಪರಮಾರ್ಥ ತತ್ವದಲ್ಲಿ ಭೇದವಿಲ್ಲ ಎಂದು ಇನ್ನೊಂದು ಶಾಸನ ತಿಳಿಸಿದರೂ ವಸ್ತುಸ್ಥಿತಿ ಹ ಗಿಲ್ಲವಷ್ಟೆ ! ಮಧ್ವ ಸಿದ್ಧಾಂತದಲ್ಲಿ ಹರಿಗೆ ಸರ್ವೋತ್ತಮ ಪಟ್ಟ ಆತನ ಸ್ಥಾನ ಮೇಲಣ ಮೊದಲ ಕಕ್ಷೆ ರುದ್ರನದು ಕೆಳಗಣ ಐದನೆಯ ಕಕ್ಷೆ ಹರಿಹರರಿಬ್ಬರನ್ನೂ ಸಮ ರೆಂದು ಪರಿಗಣಿಸಲು ಕಟ್ಟಾ ಮಧ್ವಮತಾನುಯಾಯಿ ಯಾದ ವಿಜಯದಾಸರು ಒಪ್ಪಲು ಸಿದ್ಧರಿಲ್ಲ ರ ದ್ರಗೆ ಹರಿರೂಪವಿಲ್ಲಾ ಇದು ಪುಸಿಯಲ್ಲಾ ಎಂದು ಹೇಳಿ ಅನೇಕ ಪುರಾಣ ಪ್ರಸಂಗ ಗಳನ್ನು ಉಲ್ಲೇಖಿಸುತ್ತಾರೆ

ಹರಿಹರರಿಬ್ಬರು ಒಂದೇ ರೂಪವ ಧರಿಸಿ
ದುರುಳ ಗುಹಾಸುರನ ಕೊಂದರೆ ದೂ
ಮರಳು ಮಾನವರು ತಿಳಿಯಾದೆ ನುಡಿವರು
ಹರಿಹರರಿಬ್ಬರು ಒಂದಾಹರೆ
ಹರಿಹರರಿ ರ್ವರು ಏಕವಾದರೆ ಅಂದು
ಹರನು ಮೈವ ರದು ನಿಂದನ್ಯಾತಕೆ
ಧಾರುಣಿಯೊಳಗೆ ಹಿರಣ್ಯಕಶಿಪು ದೈತ್ಯ
ಸುರರ ಓಡಿಸಿ ಪ್ರಬಲನಾಗಿರೆ

x x x

ಹರಗೆ ಈ ಪ್ರತಾಪ ಉಳ್ಳರೆ ಭಸುವಹಾ
ಸುರಗಂಜಿ ಹರಿಗೆ ಮೊರೆ ಇಡುವನೇನೋ

ಎಂದು ಶಶಿಧರ ಹರಿರೂಪದೊಳೂ ಕೊಡುವನೆ ಎಂದು ಪ್ರಶ್ನಿಸುತ್ತಾರೆ ಆದ್ದರಿಂದ ಅವರಿಗೆ ಶಿವ ರವೆ ಯರಸನ್ನ ವಿಜಯವಿರ ಲನ್ನ ಶವೆುದವೆುಯಿಂದ ಪೂಜಿಪಧೀರ ನಾದರೆ ಪಾರ್ವತಿ ರಮೆಯರಸನ ಪದಕಮಲ ವ ಧುಪೆ ಯಾಗುತ್ತಾಳೆ ನಾಡದೇವತೆ ಗಳ ಪೂಜೆ ಪುನಸ್ಕಾರಗಳನ್ನೂ ವಿಜಯದಾಸರು ಒಪ್ಪುವುದಿಲ್ಲ

ನಾಡದೈವಗಳ ಪೂಜೆಯನು ಮಾಡಿದರೆ
ಕೇಡಲ್ಲದೆ ಮತ್ತೆ ಕೈವಲ್ಯವುಂಟೇ

x x x

ಸಲ್ಲದೊ ಸಲ್ಲದೊ ಸರ್ವರು ಕೇಳಿ ನಮ್ಮ
ಫುಲ್ಲನಾಭನ ಬಿಟ್ಟು ಖುಲ್ಲ ದೇವರ ಪೂಜೆ

x x x

ಆದ್ದರಿಂದ—ಕೂಗೆಲೊ ಮನುಜ ಕೂಗೆಲೊ
ಸಾಗರಶಯನನೆ ಜಗಕೆ ದೈವವೆಂದು

ಈ ಪರಿ ಕೂಗಲು ಆಪತ್ತು ಪರಿಹಾರ ವಾಗ ತ್ತದೆ ಆದ್ದರಿಂದ ಕೊಂಡಾಡ ದಿರಿನ್ನು ಚಿಲ್ಲರೆ ದೆ ವತೆಗಳನು ಎಂದೂ ಊರದೇವತೆಗಳನಾರಾಧಿಸಲು ನಿತ್ಯ ನೀರೊಳು ಯಜ್ಞವ ಮಾಡಿದ ತೆರನಂತೆ ಎಂದೂ ಸಾರುತ್ತಾರೆ

ವಿಜಯದಾಸರಿಗೆ ಶಾಸ್ತ್ರಗ್ರಂಥಗಳಲ್ಲಿ ಮತ್ತು ಭಾಗವತ ಪುರಾಣಗಳಲ್ಲಿ ಪಾಂಡಿತ್ಯ ವಿದ್ದಿತು ಕಲ್ಲೂರು ಸುಬ್ಬಣ್ಣಾಚಾರ್ಯ ಎನ್ನುವವರ ಬಳಿ ಅವರು ಶಾಸ್ತ್ರೀಯವಾಗಿ ಆಧ್ಯಯನ ಮಾಡಿದರೆಂಬ ಒಂದು ಅಭಿಪ್ರಾಯವಿದೆ ಅವರ ಕೃತಿಗಳಲ್ಲಿ ವಿಷ್ಣುವಿನ ದಶಾವತಾರ ಹಲವು ಲೀಲಾ ವಿನೋದಗಳ ವರ್ಣನೆ ಸಮೃದ್ಧವಾಗಿ ಕಂಡುಬರುತ್ತದೆ ಕಾದನಾ ವತ್ಸವ ಹರಿ ಕಾದನಾ ಎಂಬ ಕೃತಿಯಲ್ಲಿ ಕೃಷ್ಣನು ಗೋವುಗಳನ್ನು ಕಾಯುವ ವರ್ಣನೆ ತುಂಬ ಮನೋಹರವಾಗಿದೆ ಎಳೆಯ ಗರಿಕೆ ಇರುವ ಸ್ಥಳದಿ ಗೋವು ಗಳನು ನಿಲ್ಲಿಸಿದ ಕೃಷ್ಣ ಕೊಳಲೂದುತ್ತ ತನ್ನ ಸೆರಗು ತೆಗೆದು ಕರುಗಳ ಬೆನ್ನೊ ರಿಸಿ ಹುಲ್ಲು ತಿನ್ನೆಂದು ಹೇಳಿ ಉಪಚಾರ ಮಾಡಿದಾಗ ತಿಂಗಳ ಕರು ವರ್ಷದ ಕರುವಂತೆ ಬೆಳೆಯಿತಂತೆ ಆಡಗಳ್ಗಾಂಗ ಇದ್ದ ಕರುಗಳು ಗಜಗಳ್ಗಾಂಗ ಆದವಂತೆ ಇಲ್ಲಿ ಗೋವುಗಳ ಮೇಲಿನ ಕೃಷ್ಣನ ಪ್ರೀತಿ ವಾತ್ಸಲ್ಯಗಳು ಹೃದಯಂಗಮವಾಗಿ ಚಿತ್ರತ ವಾಗಿದೆ ಉಕ್ಕುತಿಹ ಪಾಲ್ಗೊಡಗಳ ಉರುಳಿಸಿದಾ ಮೊಸರ ಸುರಿದಾ ಹರವಿಯ ಹಾಲು ಕುಡಿದಾ ಬಾಲಕೃಷ್ಣನ ತುಂಟಾಟ ಇಷ್ಟಕ್ಕೇ ನಿಲ್ಲದೆ ಮುಂದುವರಿದಾಗ ಗೋಪಸ್ತ್ರೀಯರು ತೋರವಾದ ಕಂಭಗಳ ಪಿಡಿದಾನೆ ಬಲಿದನೇನೆ? ಎಂಬ ಅನುಮಾನ

ವನ್ನು ಮತ್ತು ಚೆಂಡು ಅಂತ ಕುಚಗಳ ಪಿಡಿದಾನೆ ಇಂಥದುಂಟೇನೆ ? ಎಂಬ ವಿಸ್ಮಯ ಹುಸಿ ಕಳವಳಗಳನ್ನು ವ್ಯಕ್ತಪಡಿಸುತ್ತಾರೆ ಪಿಡಿ ತುಂಬ ಅವಲಿಗೆ ಕಡು ಮೆಚ್ಚಿದ ಪ್ರಥಮ ದೈವವಾದ ಪಂಢರಿರಾಯನೀಗ ಈ ಧರೆಯೊಳು ಭೀಮಾತೀರ ನಿವಾಸ ಇಹಪರಕ್ಕೆ ಸಾಧನವಾದ ಆತನ ಚರಣಗಳನ್ನು ಕಂಗಳಬ್ಬರ ತೀರುವಂತೆ ತೋರಲು ಪ್ರಾರ್ಥಿಸುತ್ತಾರೆ ಹದಿನಾಲ್ಕು ಲೋಕವನಾಳುವ ತಂದೆಗೆ ಮುದದಿಂದ ನಾನೊಬ್ಬ ಭಾರವಾದೆನೆ ಎಂದು ಕೊರಗುತ್ತಾರೆ ದೇವದರ್ಶನದ ಅತೀವ ಹಂಬಲ ಕೈಗೂಡಿ ದ ಗ ದಾಸರು ಕೆಲವೊಮ್ಮೆ ನಿಂದಾಸ್ತುತಿ ಗಳನ್ನು ರಚಿಸುತ್ತಿದ್ದುದುಂಟು ಸಾತ್ವಿಕ ಕ್ರೋಧದಿಂದ ರೂಪುಗೊಳ್ಳುತ್ತಿದ್ದ ಈ ನಿಂದಾಸ್ತುತಿ ಸಹ ದಾಸರ ಭಕ್ತಿಯ ತೀವ್ರತೆಯನು ಬಿಂಬಿಸ ವ ಕನ್ನಡಿಯಾಗಿದೆ ವಿಜಯದಾಸರೂ ಹೀಗೆ ಹಾಡಿದ್ದಾರೆ

ಪರದೇಶಿ ನೀನು ಸ್ವದೇಶಿ ನಾನು
ಪರಮ ಭಾಗವತರನು ಬಾ ಹೋಗಿ ಕೇಳುವ
ಎನಗೆ ಜನಕನು ನೀನು ನಿನಗಾವ ಜನಕನೊ
ಜನನಿ ಇಂದಿರೆ ಎನಗೆ ನಿನಗಾವಳೊ
ವನಜ ಪೀರನು ಭ್ರಾತ ನಿನ್ನ ಭ್ರಾತನಾರು
ಇನ ಸಮನು ಮಾತುಳನು ನಿನ್ನ ಮಾತುಳನೆಲ್ಲಿ

ಎಂದು ಹೇಳುತ್ತ ಕೊನೆಗೆ ನಿನ್ನ ಚರಣ ಸೇವಕ ನಾನು ನೀನಾರ ಸೇವಕನೊ ಎಂದು ಪ್ರಶ್ನಿಸುತ್ತಾರೆ ಆರಂಭದ ಪರದೇಶಿ ನೀನು ಎಂಬ ಮಾತುಗಳಲ್ಲಿನ ಧ್ವನಿರಮ್ಯತೆ ಯನ್ನು ಮತ್ತು ನಿ ನಾರ ಸೇವಕನೊ ಎಂದು ಪ್ರಶ್ನೆಯಲ್ಲಿನ ಹರಿಯ ಸಾರ್ವ ಭೌಮತ್ವವನು ಗಮನಿಸಬಹುದು ತಿರುಪತಿಯಲ್ಲಿ ವೆಂಕಟೇಶನ ದರ್ಶನವಾಗದಿದ್ದಾಗ

ನಿನ ದರ್ಶನಕೆ ಬಂದವನಲ್ಲವೊ
ಪುಣ್ಯವಂತರ ದಿವ್ಯ ಚರಣ ನೋಡಲಿ ಬಂದೆ
ಎಲ್ಲೆಲ್ಲು ನಿನ್ನ ವ್ಯಾಪ್ತತನವಿರಲಿಕ್ಕೆ
ಇಲ್ಲಿಗೆ ಒರುವ ಕಾರಣವಾವುದೊ

ಎನ್ನುತ್ತಾರೆ ಹರಿಗೆ ನೇರವಾಗಿ ಪೊರೆ ಇಲ್ಲದಿದ್ದರೆ ಭಕುತವತ್ಸಲನೆಂಬೊ ಬಿರಿದು ಬಿಡು ಎಂದು ಹೇಳುತ್ತಲೇ ಪಾವನ್ನ ಮಾಡಯ್ಯ ಅಲ್ಲದಿದ್ದರೆ ಎನ್ನ ಕೊಲ್ಲೋ" ಎಂಬು ದೀನರಾಗಿ ಬೇಡುತ್ತಾರೆ ಏನಿದ್ದ ಪ್ರಾರಬ್ಧ ಉಣಿಸಿ ಕಡೆಗೆ ಕಾಯೊ ಎಂದು ಕೇಳಿಕೊಳ್ಳುತ್ತಾರೆ ವಿಜಯದಾಸರ ಕೋರಿಕೆ ಇದು

ಹೊನ್ನ ಹಣವ ಕೊಡಿಸಲಿ ಬ್ಯಾಡ
ಮನ್ನಣೆಯ ಮಾಡಿಸಲಿ ಬ್ಯಾಡ
ಎನ ದೆಂಬೊ ಮಾತು ಎಂದಿಗನ್ನ ಅನಸಬ್ಯಾಡ
ನಿನ್ನವನೊ ನಿನ್ನವನೊ ನಿನ್ನವನೆಂಬೊ ದು

ಅನ್ನಂತ ಕಾಲದಲ್ಲಿ ಅನಿ ಸಿ ಪ್ರೀತಿಬಡಿಸೊ
ಕಣ್ಣಿಗೆ ಸ ಳಿದು ನಿತ್ಯಮೂರ್ತಿಯು ತೋರೊ
ಚನ್ನ ವಿಜಯವಿಠ ಲರೇಯ ಸಂ
ಪನ್ನ ಎನ್ನ ಸುಖದಲ್ಲಿಡೊ

**ಮಧ್ವಮತನಿಷೆ** ವಿಜಯದಾಸರಿಗೆ ಮಧ್ವಮತದಲ್ಲಿ ಅಪಾರನಿಷೆ ಈ ಮತದ ಸಿದ್ಧಾಂತಗಳಲ್ಲಿ ಪಾಂಡಿತ್ಯವಿದ್ದಿತು ಮಾನವನಿಗೆ ಅವರು ನೀಡುವ ಸಲಹೆ ಇದು

ಶ್ರುತಿಗೆ ಅಪ್ರವರ್ಣಾ್ಯ ಬಾರದಂತೆ ಮಧ್ವ
ಮತಕೆ ವಿರೋಧವ ಗದಂತೆ
ಕ್ಷಿತಿಯೊಳಗೆ ಸ ಜನರಿಗೆ ಹಿತವಾಗುವಂತೆ ಶ್ರೀ
ಪತಿಯಂ ಸೇವಿಸಿ ಸುಗತಿ ಪಡೆಯೊ — ಪ್ರಾಣಿ

ಮಧ್ವಮತವೇ ಮತವು ಎ ದು ಭಾವಿಸುವ ವಿಜಯದಾಸರು ಮಧ್ವಮತವ ಪೊಂದದವನ ಭಕುತಿ ಯಥಾತಕೆ ಎಂದು ಪ್ರಶಿ ಸುತ್ತಾರೆ ✓ಮಧ್ವರಾಯರ ಕರುಣ ಪಡೆಯದವ ಧರೆಯೊಳಗೆ ಇದ್ದರೇನು ಇಲ್ಲದಿದ್ದರೆ ನು ಎಂಬುದು ಅವರ ಮತ ಪರವಾದ ನಿಲುವು ಮಧ್ವಾಚಾರ್ಯರನ್ನು ಎನ್ನ ಹೃತ್ಕುಮುದಚಂದ್ರ ಅದ್ವೈತ ಮತಾರಣ್ಯದಹನ ಗುಣಸಾಂದ್ರ ಎಂದು ವರ್ಣಿಸಿ ವಿಜಯವಿಠ ಲನನ್ನು ಮಧ್ವ ಮುನಿ ಕರುಣ ಕವಚವನು ತೊಡಿಸೊ ಎಂದು ಬೇಡುತ್ತಾರೆ ಹರಿಯ ವೈಭವವನ್ನು ವಿವರಿಸುವ ಈ ಸುಳಾದಿ ಗಮನಾರ್ಹ

ನಿನಗೆ ನೀನೆ ಐಕ್ಯ ನಿನಗೆ ನೀನೆ ಭೆ ದ
ನಿನಗೆ ನೀನೆ ಮಾತ್ಯ ನಿನಗೆ ನೀನೆ ಸ್ತ್ರೀ
ನಿನಗೆ ನೀನೆ ಪುರುಷ ನಿನಗೆ ನೀನೆ ಕೂಟ
ನಿನಗೆ ನೀನೆ ರಮಣ ನಿನಗಲ್ಲದೀ ಲೀಲೆ
ಬಿನಂಗು ದೈವರಿಗುಂಟೆ ಅನಯ ವಿಜಯವಿಠ ಲ
ನಿನಗೆ ನೀನೆ ಆಳು ನಿನಗೆ ನೀನೆ ದೊರೆಯೊ

ಭಗವಂತನನ್ನು ಹೀಗೆ ಸರಳವಾಗಿ ವರ್ಣಿಸಿ ಆತ ಹೇಗೆ ದೇವದೇವತೆಗಳನ್ನೂ ತನ್ನ ಇಚ್ಛಾನುಸಾರ ನಡೆಸುವನೆಂಬ ದನು ಬೊಮ್ಮನೊಳಗೆ ಬೊಮ್ಮ ಶಿವನೊಳಗೆ ಶಿವ ರೂಪ ಎಂಬ ಕೃತಿಯಲ್ಲಿ ವಿವರಿಸಿದ್ದಾರೆ

ಸ್ವಮತ ಮಂಡನೆ ಮತ್ತು ಪರಮತ ಖಂಡನೆ ನಮ್ಮ ಧಾರ್ಮಿಕ ಇತಿಹಾಸದಲ್ಲಿ ಕಂಡುಬರುವ ಸಂಗತಿ ವಿಜಯದಾಸರು ಕೂಡ ನಮ್ಮ ಗ ರುಗಳ ಕವನ ಮಿಥ್ಯಾ ಮತವೆಂದವನು ಬ್ರಹ್ಮರಾಕ್ಷಸ ಕಾಣೊ ಎಂದು ಸಾರುತ್ತಾರೆ ಟೀಕಾಚಾರ್ಯರಾದ ಕಾಗಿಣಿ ತೀರದ ಮಳಖೆ ಡ ನಿವಾಸ ಶ್ರೀಗುರು ಜಯತೀರ್ಥರನ್ನು ಅದ್ವೈತಮತ

ತಮನಿಧಿ ನಿಶಿಕ ರಾರ ವಿದ್ಯಾರಣ್ಯನ ಗರುವಿಕೆ ಪರಿಹಾರ ಎಂದು ವರ್ಣಿಸುತ್ತಾರೆ ಹರಿ ಕೂಡ ಅವರ ಪಾಲಿಗೆ ಅದ್ವೈತಮತ ಕೋಲಾಹಲ ಅದ್ವೈತ ಸಿದ್ಧಾಂತದ ಮೂಲಮಂತ್ರವಾದ ಅಹಂಬ್ರಹ್ಮಾಸ್ಮಿ ಯನು ಕುರಿತು ವಿಜಯದಾಸರು ಸೂಚ್ಯವಾಗಿ ಹೀಗೆ ಟೀಕಿಸುತ್ತಾರೆ

ನಾನು ನೀನೆಂದು ಒಮ್ಮೆಗಾದರು ನರ
ಅನಂತ ಜನುಮದಲ್ಲಿ ನುಡಿದನಾಗೆ
ಶ್ವಾನಸೂಕರ ದುರ್ಯೋನಿಯಲಿ ಪುಟ್ಟಿ
ಮಾನವಾಧಮನಾಗಿ ಕಟ್ಟಕಡೆಗೆ
ನಾನಾ ಸಂಕಟಪಟ್ಟು ಹೀನ ಭೋಜನ ಮಾಡಿ
ತಾನಿಳಿವ ನಿತ್ಯ ನರಕದಲ್ಲಿ

ಮಾಯಾವಾದಿಯ ಮನೆಯಲ್ಲಿ ಆನೆಯಾಗಿ ಅನುದಿನ ಇರುವುದಕ್ಕಿಂತ ವೀರವೈಷ್ಣವರ ಮನೆಯಲ್ಲಿ ಕ್ಷಣಕಾಲ ನಾಯಿಯಾಗಿ ಇರುವುದು ಲೇಸೆಂಬುದು ಅವರ ಅಭಿಪ್ರಾಯ ಕೆಲವೊಮ್ಮೆ ಅದ್ವೈತ ಮತದ ಬಗ್ಗೆ ಅವರ ಟೀಕೆ ಗೇಲಿಯಾಗಿ ತುಂಬ ರೂಕ್ಷವಾಗುತ್ತದೆ

ಮಾಯಾವಾದಿಯೆ ನಿನ ಮತವು ದೊಡ್ಡದು ಎಂದು
ಬಾಯಿ ಕೊಬ್ಬಿನಿಂದ ಬಲು ಬಹು ಬಗೆಯಲ್ಲಿ
ಕುಯುಕ್ತಿಯ ಮಾಡಿಸಿ ಕುಚ್ಛಿತವಚನದಿಂದ
ಶ್ರೀಯರಸಗೆ ದೋಷಗಳ ಕಲ್ಪಿಸಿದರು
ನ್ಯಾಯವಾಗದು ಕಾಣೊ ದುರ ಳ ಮಿಥ್ಯಾವಾದಿ
ತಾಯಿ ಮಕ ಳು ಸೊಸೆ ಒಂದೆಯಾದರೆ ಮ ದುವೆ
ಬೀಯಾ ಬಿಜ್ಜದ ಗೋತ್ರ ಭೇದ ವ್ಯಾಕೋ
ನಾಯಿ ಮ ತ್ತ್ರ ಮಾತಂಗ ಒಂದೆಯಾಗುವುದೇನೊ

× × ×

ಲಿಂಗಾ ನೀನಾದರೆ ಲಿಂಗದ ನಿಜರಾಣಿ
ಶೃಂಗಾರ ಗಿರಿಸುತೆ ನಿನಗೇನಾದಳೊ

ಹೀಗೆ ಒಂದು ಆಧ್ಯಾತ್ಮಿಕ ನಿಲವನ್ನು ಪ್ರಾಪಂಚಿಕ ಇಲ್ಲವೇ ಮತೀಯ ಸ್ತರದ ಉಪಮೆಗಳಿಂದ ಟೀಕಿಸುತ್ತಾರೆ ಆದಿ ಪರಮಾತ್ಮಗೆ ದುಃಖದ ಜೀವಕ್ಕೆ ಭೇದವಿಲ್ಲಾ ಎಂದು ಕುಮತಿಯಿಂದ ಹೇಳುವುದನ್ನು ನಿಲ್ಲಿಸಿ ವಿಜಯವಿಠಲನ ದಾಸಾಂಗವಾಗಲು ಕರೆ ನೀಡುತ್ತಾರೆ

ವಿಜಯದಾಸರು ಮಧ್ವ ಪರಂಪರೆಗೆ ಸೇರಿದ ಆನಂದತಿ ರ್ಥಾದಿ ಅನೇಕ ಗುರುಗಳನ್ನು ಸ್ಮರಿಸಿ ಸ್ತುತಿಸಿದ್ದಾರೆ

**ಮನಸ್ಸು** ಮಾನವ ಮನಸ್ಸು ರಾಗದ್ವೇಷಗಳ ತವರು ಅಹಂಕಾರದ ಗೂಡು ಚಾಂಚಲ್ಯದ ನಿಲಯ ಮನೋಸ್ಥೈರ್ಯ ಬಲು ಕಠಿಣ ನಡೆಯುತ್ತಿರುವ ಯ ಎದ್ದ ವನು ನಿಲ್ಲಿಸಬಹುದು ಹರಿವ ನದಿಗಳನ್ನು ತಿರುಹಿ ನಿಲ್ಲಿಸಬಹುದು ಮದದಾನೆಯನ್ನು ತಡೆದು ನಿಲ್ಲಿಸಬಹುದು ಸುರಿವ ಬಿರುವ ಳೆಯನು ನಿಲ್ಲಿಸಬಹುದು ಅಥವಾ ಸಮುದ್ರದ ಅಬ್ಬರವನ್ನೂ ನಿಲ್ಲಿಸಬಹ ದು ಆದರೆ ಹರಿದೋಡುವ ದುರುಳ ಮನಸ ನ್ನು ನಿಲ್ಲಿಸ ವುದು ಕಷ್ಟವೆಂದು ವಿಜಯ ದಾಸರು ತಿಳಿಸುತ್ತಾರೆ ಮನಸಿನ ವ್ಯಾಪಾರ ನೋಡಲು ಬಲು ಕಠಿಣ ಅವರು ವ ನವೆಂಬ ತರಗೆಲೆ ದುರ್ವಾಸನೆ ಎಂಬ ಅನಿಲಾ ಬೀಸಲು ಹಾರಿ ಪೋಗುತಿದಕೊ ಎ~ಗೆ ಪಿಡಿವ ಶಕ್ತಿಯನು ಕಾಣೆ ಕಾಣೆನೊ ಎಂದು ಕೊರಗುತ್ತ ಆ ತರಗೆಲೆ ಹಾರಿ ಹೋಗದಂತೆ ಮಾಡೆಂದು ಹರಿಯಲ್ಲಿ ಕಳಕಳಿ ಯಿಂದ ಕೇಳಿಕೊಳ್ಳುತ್ತಾರೆ ಅಂತಶ್ಶುಚಿಯ ಮಹತ್ವವನ್ನು ಮನಗಂಡಿದ್ದ ವಿಜಯ ದಾಸರಿಗೆ ಮನಸ್ಸು ನಿರಹಂಕಾರದ ನಿ~ಯವಾಗಬೇ ಕೆಂಬ ಆಶಯ

ಅಹಂಕಾರವೆಂಬೊ ಪಾಪಿಯ ಬೆನ್ನುಬಿದ್ದರೆ<br>
ಅಹಂಕಾರವಲ್ಲದೆ ಒಂದಿಷ್ಟು ಸುಖವಿಲ್ಲ<br>
ಕಡಿಯಲು ಕೊನಿಯಿಂದ ಬುಡನಾಶವಿಲ್ಲ<br>
ಬುಡ ಕೊಯ್ದರೆ ಕೊನೆ ಒಡನೆ ಒಣಗುವುದು<br>
ದೃಢವಾದ ಅಹಂಕಾರ ಕಡಿದರೆ ಬಿಂಕದ<br>
ಬಿಡಿಪಾಪಗಳೆಲ್ಲ ಅಡಗಿ ದೂರಾಗುವುವು

ಅಹಂಕಾರ ಅಂಕುರಿಸಿದರೆ ಎಲ್ಲ ಭಕ್ತಿ ಎಲ್ಲ ಜ್ಞಾನ ಎಲ್ಲ ಕರ್ಮ ವ್ಯರ್ಥ ಅಹಂಕಾರ ನಿರಸನವೇ ಭಕ್ತಿಯ ತಳಹದಿ ಹರಿಗೆ ಪೂರ್ಣ ಶರಣಾಗುವುದರಲ್ಲೇ ಧನ್ಯತೆಯನ್ನು ಕಾಣುವ ದಾಸಭಕ್ತಿ ಶ್ರೀವೈಷ್ಣವ ಧರ್ಮದ ಪ್ರಪತ್ತಿಯನ್ನು ಹೋಲುತ್ತದೆ ನಾನು ನಾನೆಂದದರಿಂದ ಹೀನವೆ ಪ್ರಾಪ್ತಿ ನರಕ ನೀ ನ ಡಿಸಲು ನುಡಿವೆ ನಿ ನಡೆಸಲು ನಡೆವೆ ನಾನಲ್ಲ ನನ್ನದಲ್ಲ ನಾನಾ ಕ್ರಿಯ ಕರ್ಮಗಳು' ನಾನು ನನ್ನದು ಎಂಬುದಿಲ್ಲ ನಾನೆಂಬುದ ಬಿಡದೆ ಕೆಟ್ಟೆ ನಿನ್ನ ಚಿತ್ತಕೆ ಬಂದುದನು ಮಾಡು ಸರ್ವೇಶ ಎನ್ನ ಸಾತಂತ್ರ್ಯ ಲವ ಮಾತ್ರ ಉಂಟೆ ಸ್ವಾಮಿ ಮುಂತಾದ ಸಾಲುಗಳಲ್ಲಿ ವಿಜಯದಾಸರ ಪ್ರಾಮಾಣಿಕ ನಂಬುಗೆ ವ್ಯಕ್ತವಾಗಿದೆ ಅಹಂಕಾರಿಯನು ಕುರಿತು ಅವರು ಹೀಗೆ ಹೇಳಿದ್ದಾರೆ

ನಾನೆ ಪೋಗ ತಲಿಪ್ಪೆ ನಾನೆ ಬರುತಲಿಪ್ಪೆ<br>
ನಾನೆ ಕೊಡ ತಲಿಪ್ಪೆ ನಾನೆ ಕೊಳ್ಳುತಲಿಪ್ಪೆ<br>
ನಾನೆ ಭುಂಜಿಸುತಿಪ್ಪೆ ನಾನೆ ಬಲವಂತನಿಪ್ಪೆ

ನಾನೆ ಘನವಂತನಿಷ್ಟೆ ನಾನೆ ಶ್ರೇಷ ನಿಷ್ಟೆ
ನಾನೆ ನಾನೆ ಎಂದು ಪೇಳುವ ಮನುಜನು
ನಾನಾ ಯಾತನೆಗಳ ಬಡುವನು ಅನಂದಿನ
ದೀನ ಮಂದಾರ ಸಿರಿ ವಿಜಯವಿಠ ಲರೇಯ
ನೀನೆ ಪಾಳ್ವವನೆಂಬ ಭಕ್ತರ ಕೈಬಿಡ

ಭಕ್ತನಿಗೆ ದೇವರೇ ಗತಿ ಪತಿ ತನ್ನ ಪಾವನ ಮಾಡುವ ರಂಗಾ ಗತಿಯಿಲ್ಲದವರಿಗೆ ಗತಿಯೇ ನೀನೆ ಗತಿ ಎಂದು ವಿಜಯದಾಸರು ತಿಳಿಸ ತ್ತಾರೆ ಎಲ್ಲಿದ್ದರೇನು ಶ್ರೀ ಹರಿಗಲ್ಲದವನು ನಿಲ್ಲದೆ ಜಪಿಸಿದರೆ ಸಲ್ಲುವನೆ ಸದ್ಗತಿಗೆ ಎನ್ನುವುದನು ಕಪ್ಪೆ ಕಮಲ ತೊಣಸಿ ಹಸು ನೀರುಳ್ಳಿ ತುಳಸಿ ಮುಂತಾದ ಹೋಲಿಕೆಗಳೊಡನೆ ವಿವರಿಸುತ್ತಾರೆ

ನಿನ್ನ ಒಲಿಮೆಯಿಲ್ಲದ ಮಂತ್ರ
ನಿನ ಒಲಿಮೆಯಿಲ್ಲದ ಜ್ಞಾನ
ನಿನ ಒಲಿಮೆಯಿಲ್ಲದ ಭಕುತಿ
ನಿನ್ನ ಒಲಿಮೆ ಯಿಲ್ಲದ ಕ್ರೀಯಂ
ವನ್ನು ಎಲ್ಲ ಮಾಡಲೇನು
ಕುಸಿ ಯ ಮರಿಗೆ ರನ ದ ಉಡಿಗೆ
ಯನು ತೊಡಿಸಿದಂತೆ ಕಾಣಿರೊ

ಎಂದು ಹರಿಯ ಪ್ರೀತಿಗೆ ಪಾತ್ರವಾಗದ ಭಕ್ತಿ ಜ್ಞಾನ ಕ್ರಿಯೆಗಳೆಲ್ಲ ವಿಫಲವೆಂದಂ ಸಾರ ತ್ತಾರೆ ಅವರ ಪ್ರಕಾರ ಎಲ್ಲ ಚಿ ತೆ ವಿರಲನ ಚಿಂತೆಯಾಗಬೇಕು ಮತ್ತು ಎಲ್ಲ ಆಸೆ ವಿಠಲನ ಆಸೆಯಾಗಬೇಕು ಹರಿಯಂನು ಕುರಿತು ಧ್ಯಾನವಮಾಡ ವ ಕ್ರಮ ವನ್ನು ಧ್ಯಾನವನು ಮಾಡು ಬಿಂಬ ಮೂರುತಿಯ ಎಂಬ ಕೃತಿಯಲ್ಲಿ ಮನಮುಟ್ಟುವಂತೆ ವಿವರಿಸಿದ್ದಾರೆ

ಭಕ್ತಿ ಇಲ್ಲದ ಹೊರತು ಮುಕ್ತಿಯಿಲ್ಲವೆಂಬುದು ಅವರ ನಂಬುಗೆ ಆದರೆ ಆಡಂಬರದ ಭಕ್ತಿಗೆ ಬೆಲೆಯಿಲ್ಲ ಆದುದರಿಂದ ಹಾರಿಹಾರಿ ಪಾರಲಾರೆ ಚಿ ರಿ ಕೂಗಿ ಕರೆಯ ಲಾರೆ ಮೋರೆ ಮೇಲೆ ಎತ್ತಿಕೊಂಡು ಸಾರಿಸಾರಿಗೆನಲಾರೆ ಎಂದು ತಮ್ಮ ಭಕ್ತಿಯ ಸೌಮ್ಯ ಸ್ವರೂಪವನ್ನು ಪರಿಚಯಿಸ ತ್ತಾರೆ ವೈರಾಗ್ಯ ಜ್ಞಾನಭಕ್ತಿ ಮೂರು ಸಂಪಾದಿಸಿ ನಾರಾಯಣ ಮಂದಿರ ವನು ಸೇರುವುದು ಅವರ ಬದುಕಿನ ಗುರಿ

**ಸಂಸಾರ** ಲೌಕಿಕ ಜಗತ್ತು ಕ್ಷಣಿಕ ಮತ್ತು ಹರಿಚರಣ ಸನ್ನಿಧಿಯೇ ಶಾಶ್ವತವೆಂಬುದು ದಾಸರೆಲ್ಲರ ಸಾಮಾನ್ಯ ಅಭಿಪ್ರಾಯ ಯಾಕೆ ಪುಟ್ಟಿಸಿದಿ ಇನ್ನು ಎಲೊ ಹರಿಯೆ ಲೋಕದೊಳಗನುಗಾಲ ತಿರಿದು ತಿಂಬುವಂತೆ ಮಾಡಿ ಎಂದು ವ್ಯಥೆಪಡುವ ವಿಜಯ ದಾಸರು ಒಲ್ಲೆನೋ ಸಾಕು ಈ ನರಜನ್ಮವು ಎಂದೂ ಜನಿಸಲಾರೆನು ಜಗದೊಳಗೆ

ಹರಿಯೇ ಕನಸಿನೊಳು ನೆನೆಯೆ ಕಂಪನವಾಗುತಿದೆ ಮನಕೆ ಎಂದೂ ಹೇಳುತ್ತಾರೆ ಆದರೂ ನರಜನ್ಮ ಬರುವುದೇ ಕಷ ಆದ ದರಿಂದ ಹಾಳು ಹರಟೆಗೆ ಹೋಗದೆ ಕಂಡ ಕೂಳಿನಿಂದ ಒಡಲು ಹೊರೆಯದೆ ಕಾಲ ವ್ಯರ್ಥ ಕಳೆಯ ದೆ ಗೋವಿಪ್ರರ ಸೇವೆ ಮಾಡಿ ಒದುಕಬೆ ಕೆಂಬುದು ಅವರ ಉಪದೇಶ ಲೌಕಿಕ ಸಂಸಾರ ಒಂದು ಬೃಹತ್ ಸಾಗರ ಅದೊಂದು ಒಂಧನ ಅದೊಂದು ಅಂಧಕೂಪ ಮುಂತಾದ ವರ್ಣನೆಗಳು ದಾಸಸಾಹಿತ್ಯದಲ್ಲಿ ಕಾಣಸಿಗುತ್ತವೆ ವಿಜಯದಾಸರು ಈಸಲಾರೆನು ನಾನು ಈ ಸಂಸಾರದೊಳು ಸಿಕ್ಕಿದೆ ಸಂಸಾರ ಸಿಕ್ಕಿನೊಳಗೆ ನಾನು ಸಿಕ್ಕು ಬಿಡಿಪರಿಲ್ಲ ಬಂದನೊ ಭವರೋಗ ಬಂಧನದೊಳಗೆ ನೊಂದೆನೊ ಸಂಸಾರ ಸಿಂಧುವಿನೊಳಗೆ ಎಂದು ಮನುಂತಾಗಿ ಪರಿತಪಿಸ ತ್ತಾರೆ ಅಂಧ ಕೂಪದಲಿ ಬಿದ್ದವನ ನೋಡಿ ನಿನಗೆ ಚಕ್ಕಂದವಾಗಿದೆಯೊ ಎಂದು ಹರಿಯನು ಪ್ರಶ್ನಿ ಸಿದ ವಿಜಯ ದಾಸರು ಆತನ ಕೃಪೆ ದೊರೆಯದೆ ಹೋದಲ್ಲಿ ಬೋನಿನೊಳು ಕುರಿಯಿ ರಲು ಪುಲಿಪೊ ಗಿ ಸಿಕ್ಕಂತೆ ಹೀನ ಸಂಸಾರಕ್ಕೆ ಬಿಡದೆ ಪ್ರಾಣವನ್ನು ಒಪ್ಪಿಸುವೆ ಎಂದು ತಮ್ಮ ಅಂತಿಮ ನಿರ್ಧಾರ ವನ್ನೂ ತಿಳಿಸುತ್ತಾರೆ ಕಲ್ಲುಗಾಣದ ಸಂಸಾರವೆ ಅನಿತ್ಯ ವಾಗಿದ್ದು ಅದರಲ್ಲಿ ಒಂದು ಮಾತ್ರ ಸುಖವು ದುಃಖ ಪರ್ವತದಷ್ಟು ಬದ ಕಿನಲ್ಲಿ ಸಂಯಮ ಬಹು ಮುಖ್ಯವ ದ್ದರಿಂದ ವಿಷಯಾದಿಗಳಿಗೆರಗದಂತೆ ಒಳಗೆ ಕಾಯೊ ಎಂದು ಅವರು ಪ್ರಾರ್ಥಿಸುತ್ತಾರೆ ಲೋಕ ಮಾನವನನು ನಡೆಸಿಕೊಳ್ಳುವುದು ಹೀಗೆ

ಗಳಿಸಿ ಧನ ತರುವಾಗ ಸ ತ್ತ ನೆರೆದಿಹರೆಲ್ಲ  
ಭಳಿರೆ ಇವ ಮ ಹಾತ್ಮನೆಂದು  
ಘಳಿಗೆ ತೊಲಗಲು ಧನವು ಕರಗಿ ತಿಂದು ಪೋಗಿ  
ಹಳಿದು ಹಲ್ತೆರೆದು ಅಣಕಿಪರೊ – ಪ್ರಾಣಿ

ಆದ್ದರಿಂದ ನೀರ ಬೊಬ್ಬುಳಿಯ ಂತೆ ನಿಜವಲ್ಲ ದೇಹ ಈ ಶರೀರದ ಭ್ರಾಂತಿ ಇನ್ನಾಕೆ ಎಂದು ಕೇಳಿ ಮಾನವ ಕ್ಷಣಿಕ ಲೌಕಿಕ ಸುಖಸಂಪತ್ತಿನ ಕಡೆಗೆ ಗಮನ ಕೊಡದೆ ಶಾಶ್ವತ ಪಾರಮಾರ್ಥಿಕ ಸಂಪತ್ತನ್ನು ಸೂರೆಮಾಡಬೇಕೆಂದು ತಿಳಿಸುತ್ತಾರೆ ಶಾಶ್ವತ ವಲ್ಲದ ಸಂಪತ್ತನ್ನು ದಾನವಾಗಿ ಕೃಷ್ಣಾರ್ಪಿತವೆಂದು ಕೊಡಲು ಎಳ್ಳಷ್ಟಾದರೂ ಮೇರುಪರ್ವತ ಮೀರುವುದು ಎನ್ನುವುದು ಅವರ ಅಭಿಪ್ರಾಯ

ವಚನ ಸಾಹಿತ್ಯದ ಸಾಲುಗಳನ್ನು ನಮ್ಮ ನೆನಪಿಗೆ ತರುವ ಈ ಉಗಾಭೋಗದಲ್ಲಿ ಅಡಕವಾಗಿರುವ ವಾಸ್ತವತೆಯನ್ನು ಗಮನಿಸಿ

ಉಪವಾಸವಿದ್ದವನಿಗೆ ಊರು ತುಂಬಿದರೇನು  
ಅಪಹಾಸಗೊಳಿಸುವ ಗೆಳೆಯನಾದರೆ ಏನು  
ಕುಪಿತವ ಬಿಡದವನು ಕುಲಜನಾದರೇನು

ಕಪಟವ ಬಿಡದವನ ಕೂಡ ಉಂಡರೇನು
ಕೃಪೆ ಮಾಡಿದವನ ಕಾಲಿಗೆ ಬಿದ್ದರೇನು
ತಪಸಿಗಳೊಡೆಯ ನಮ್ಮ ವಿಜಯ ವಿಠಲರೆ ಯಾ

ಕಳ್ಳನಿಗೆ ಪರರ ಗಳಿಕೆಯ ಕಷ್ಟ, ಸುಳ್ಳನಿಗೆ ಮಿತಭಾಷೆ, ಕೊಲೆಗಾರನಿಗೆ ದಯಾದಾಕ್ಷಿಣ್ಯ, ಕೃಪಣನಿಗೆ ದಾನಧರ್ಮ ತಪಸಿಗೆ ಇಹದ ವ್ಯಾಕುಲ ಕಾಮಾತುರನಿಗೆ ನಾಚಿಕೆ ಗೊತ್ತಿರುವುದಿಲ್ಲವೆಂದು ಶೂರನಿಗೆ ಉಂಟೆ ವೈಕಂಠ ಎಂಬ ಕೃತಿಯಲ್ಲಿ ತಿಳಿಸಿದೆ

ಭೋಜನವೆನ್ನುವುದು ವಿಜಯದಾಸರ ಪಾಲಿಗೆ ಒಂದು ಆತ್ಮಯಜ್ಞ ಮಧ್ವಾಂತರ್ಯಾಮಿ ನಾರಾಯಣಕೃಷ್ಣನನು ನೆನೆಯುತ್ತ ವೈರಾಗ್ಯದಿಂದ ಊಟ ಮಾಡಬೇಕು ಒಂದೊಂದು ತುತ್ತು ಮೂವತ್ತೆರಡು ಕ್ಲೃಪ್ತಿ ತಾರತಮ್ಯದಿಂದ ಇತ್ತರಾದಡೆ ಒಬ್ಬೊಬ್ಬ ಭಗವಂತ ತೃಪ್ತನಾಗಿಹನು ಎನುವಲ್ಲಿ ಕೂಡ ವಿಜಯದಾಸರ ಮತನಿಷ್ಟೆ ಎದ್ದುಕಾಣುತ್ತದೆ ಹೊಟ್ಟೆ ನಿನ್ನಿಂದ ನಾ ಕೆಟ್ಟೆ ಎನ್ನುವ ಮಾತೊಂದಿದೆಯಷ್ಟೆ ವಿಜಯದಾಸರು ಹೊಟ್ಟೆಗೋಸುಗ ಭ್ರಷ್ಟರ ಸ್ತುತಿಸಿ ನೀ ಕೆಟ್ಟು ಹೋಗುವಿ ಯಾತಕೊ ಎಂದು ಜೀವನನ್ನು ಪ್ರಶ್ನಿಸುತ್ತಾರೆ ಹೆಣ್ಣು ಹೊನ್ನು ಮಣ್ಣು ನಿನಾಧೀನ ವೆಂದು ನಂಬಿರುವ ಜೀವವನ್ನು ಯಾಕೆ ಬಂದಿ ಜೀವಾ ಯಾಕೆ ಬಂದಿ ಎಂದು ಕನಿಕರದಿಂದ ಕೇಳುತ್ತಾರೆ ಸಂಯಮ ಸಾಧಿಸಲಾಗದಿದ್ದರೆ ಏನು ಪ್ರಯೋಜನವೆಂಬ ಭಾವ ದಶ ಇಂದ್ರಿಯಂಗಳ ಇದ್ದೇನು ಫಲವಯ್ಯಾ ವಶಮಾಡಿ ಮನಸು ನಿಲ್ಲಿಸದನಕ ಎಂಬ ಮಾತಿನಲ್ಲಿ ವ್ಯಕ್ತವಾಗಿದೆ ಅರಿಷಡ್ವರ್ಗ ಮತ್ತಿತರ ಭಾವಗಳು ತಮ್ಮಲ್ಲಿ ಈ ರೀತಿ ನೆಲೆಮಾಡಲೆಂಬುದು ವಿಜಯದಾಸರ ಪ್ರಾರ್ಥನೆ

ನಿನ ನೋಡುವಲ್ಲಿ ಕಾಮವೆ ಎನಗಿರಲಿ
ನಿನ್ನ ಬಿಡೆನೆಂಬೊ ಲೋಭವೆ ಎನಗಿರಲಿ
ನಿನ್ನ ಚರಣದಲ್ಲಿ ಮೋಹವೆ ಎನಗಿರಲಿ
ನಿನ್ನ ನೆನಸುವಲ್ಲಿ ಮದವೆ ಎನಗಿರಲಿ
ನಿನ್ನ ದ್ವೇಷರ ಕೂಡ ಕ್ರೋಧವೆ ಎನಗಿರಲಿ
ನಿನ್ನ ಕೊಂಡಾಡುವವರ ಸಂಗವೆ ಎನಗಿರಲಿ
ನಿನ್ನವನೆಂದೆಂಬೊ ಕೀರುತಿ ಒಂದಿರಲಿ
ನಿನ ಕೂಡಾಡುವ ಆಟವೆ ಎನಗಿರಲಿ
ನಿನ್ನ ಹಿತವಾದ ವಂಚನೆ ಎನಗಿರಲಿ
ನಿನ್ನ ಮೂರುತಿ ವಿಜಯ ವಿಠಲ ಸಂಪನ ಪ್ರಸನ್ನ

ವಿಠಲನ ನಾಮಸ್ಮರಣೆಯೇ ಎಲ್ಲಕ್ಕೂ ಸಾಧನ ಆದ್ದರಿಂದ ವಿಜಯದಾಸರು ಮಾನವನಿಗೆ ಮಂದಿಯ ಮಾತಿಗೆ ಎಂದೆಂದು ಮರುಗದೆ ಮುಂದಿನ ಗತಿ ನೋಡಲು

ತಿಳಿಸುತ್ತಾರೆ ಹರಿಯನ್ನು ಮರೆಯುವುದೇ ಮಹಾಪಾಪ ಹರಿಸ್ಮರಣೆಯೇ ಅತ್ಯಧಿಕ ಪುಣ್ಯ ಎನ್ನುವುದು ಅವರ ಖಚಿತ ಅಭಿಪ್ರಾಯ ಮಾನವ ಪರಿಶುದ್ಧ ಜೀವನ ನಡೆಸಿದಾಗ ಅವನಿಗೆ ವೈಕುಂಠವೆಂಬುದು ಅಲ್ಲಿ ಬರಿದೆ ಲೌಕಿಕ ತೊರೆದರೆ ಇಪ್ಪೋದು ಇಲ್ಲ ಎನ್ನುವುದರ ಅರಿವು ಮೂಡುತ್ತದೆ ಲೌಕಿಕ ಸುಖಗಳಿಗೆ ಆಸೆಪಡುತ್ತ ಹೋದರೆ ಕೊನೆ ಎಂಬುದೇ ಇರದು :

ಸಪ್ಪಡಿ ಮೆಲುವಾಗ ಉಪ್ಪಿನ ಯೋಚನೆ
ಉಪ್ಪು ದೊರೆತಾಗ ಸೊಪ್ಪಿನ ಯೋಚನೆ
ಸೊಪ್ಪು ದೊರಕಿದಾಗ ತ ಪ್ಪದ ಯೋಚನೆ
ತುಪ್ಪ ದೊರಕಿದಾಗ ಕುಪ್ಪೆಯ ಯೋಚನೆ
ಕ ಪ್ಪೆ ದೊರಕಿದಾಗ ಕೊಪ್ಪರಿಗೆ ಯೋಚನೆ
ಕೊಪ್ಪರಿಗೆ ಉಂಟಾಗೆ ಸಪ್ತದ್ವೀಪದ ಚಿಂತೆ

ಹೀಗೆ ಆಸೆ ಕೊನೆಯ ಕೊಂಡಿ ಇರದ ಸರಪಳಿಯಾಗುತ್ತದೆ !

ಸ್ತ್ರೀಯರನ್ನು ಕುರಿತ ದಾಸರ ಮಾತುಗಳು ಅವರ ಸಾಂಪ್ರದಾಯಿಕ ನಿಲುವನ್ನು ಪ್ರತಿನಿಧಿಸುತ್ತವೆ ಸ್ತ್ರೀಗೆ ಪತಿಯೇ ಪರದೈವ ಆಕೆ ಪತಿಗೆ ನಮಸ್ಕರಿಸದೆ ಗೃಹ ಕೃತ್ಯ ಮಾಡಬಾರದು ಮಸನವಿಲ್ಲದೆ ಸ್ನಾನ ಮಾಡಬಾರದು ಕದದ ಮುಂದೆ ಕ ಳಿತು ತಲೆ ಬಾಚಿಕೊಳ್ಳಬಾರದು ವಿಧವೆಯ ಬಗ್ಗೆ ಅನುಕಂಪ ಅಷ್ಟಾಗಿ ಕಂಡ ಬರುವುದಿಲ್ಲ ಆರೇನು ಮಾಡುವರು ಆವನಿಯೊಳಗೆ ಹೆಣ್ಣಿನ ಹರಟೆ ಹೆಚ್ಚಾದರೆ ಎಂದು ಉದ್ಗರಿಸುತ್ತಾರೆ ಅವರಲ್ಲಿ ಪತಿತ ನಾರಿಯರ ಬಗ್ಗೆ ಕನಿಕರಕ್ಕಿಂತ ಕ್ರೋಧ ಹೆಚ್ಚಾಗಿರುವಂತೆ ತೋರುತ್ತದೆ ಡಂಗುರ ಹೊಯಿಸಿದ ಯಮನು ಮ ಪಿ ಹೆಂಗಳೆಯರ ತಂದು ಭಂಗಪಡಿಸಿರೆಂದು ಎಂದು ಮತ್ತು ನೆಚ್ಚಬೇಡಿ ಪತಿತ ನಾರಿಯ ಕಚ್ಚುವ ಹಾವಿನ ಸಂಗವನ್ನು ಎಂದು ತಿಳಿಸ ತ್ತಾರೆ ಉಡಿಯಲ್ಲಿ ಕೆಂಡವೊ ಪರರ ಹೆಂಡರ ಸಂಗ ಹಾಗೂ ಪರನಾರೇರ ಮೋಹಿಸಿ ಪಾರಗಂಡವರುಂಟೆ ಎಂದು ವಿಜಯದಾಸರು ಚಪಲ ಪುರುಷರಿಗೆ ಉಪದೇಶಿಸುತ್ತಾರೆ

**ದಾಸ್ಯಭಾವ** ಭಕ್ತನೊಬ್ಬನು ತನ ನು ಹರಿದಾಸನೆಂದು ಕರೆದುಕೊಳ್ಳುವುದು ಮುಖ್ಯವಲ್ಲ ಭಗವಂತ ಭಕ್ತನನ್ನು ತನ್ನ ದಾಸನೆಂದು ಪರಿಗಣಿಸ ವುದು ಮುಖ್ಯ ಹರಿದಾಸನ ಲಕ್ಷಣಗಳೇನೆಂಬುದನ್ನು ವಿಜಯದಾಸರು ತಿಳಿಸ ತ್ತಾರೆ

ಹರಿದಾಸನಾದರೆ ಹ್ಯಾಗಿರಲಿಬೇಕು
ನರಲೋಕದ ಚಿಂತೆ ಬಿಟ್ಟುಕೊಡಬೇಕು
ಇಂದು ನಾಳೆಂಬ ಯೋಚನೆಯ ಬಿಡಬೇಕು
ಇಂದ್ರಿಯಗಳನೆಲ್ಲ ನಿಗ್ರಹಿಸಬೇಕು

ಬಂದದ್ದೆಲ್ಲ ಬರಲಿ ಈಗಲೇ ಎನಬೇಕು
ಅಂದವರು ಎನಗೆ ಬಂಧು ಗಳು ಎನಬೇಕು
ಸಾ ನವನು ಬಿಟ್ಟು ಹರಿಕಥೆಯ ಕೇಳಲಿಬೇಕು
ದಾನಕ್ಕೆ ಸನ್ಮಾರ್ಗನಾಗಬೇಕು
ಮಾನಾಭಿಮಾನಕ್ಕೆ ಹರಿತಾನೆ ಎನಬೇಕು
ಏನಾದರಾಗಲಿ ಸುಖ ಒಡಲಿಬೇಕು

× × ×

ಹರಿಯಲ್ಲದನ್ಯ ದೈವವಿಲ್ಲೆನಬೇಕು
ಮರುತನೆ ಜಗಕೆ ಗುರುವೆನಲಿಬೇಕು
ಪುರಂದರದಾಸರೆ ದಾಸರೆಂದೆನಬೇಕು
ಸಿರಿ ವಿಜಯವಿಠಲನ ಸ್ಮರಣೆ ಮಾಡಲಿಬೇಕು

ಡಾಂಭಿಕ ಭಕ್ತಿಗೆ ಆಸ್ಪದ ನೀಡದೆ ಜನರ ಕುಹಕದ ಮಾತಿಗೆ ಕಿವಿಗೊಡದೆ ವಾಸು ದೇವನ ಪಾದಸೇವೆಗೆ ಜೀವ ಜೀವನ ಮುಡುಪಾಗಿರಬೇಕು ಕ್ಷಣ ಒಂದು ಬದುಕಿದರೂ ನಿನ ದಾಸನೆನಿಸಿ ತನುವ ಧರಿಸುವೆನು ಎಂದು ವಿಜಯದಾಸರು ಹೇಳುತ್ತಾರೆ ಏಕೆಂದರೆ ದಾಸನಾಗುವುದು ಅಶೇಷ ಜನ್ಮದ ಪುಣ್ಯ ಬಾಳಿನ ಏಳು ಬೀಳುಗಳೆಲ್ಲ ದೈವದಾಟವೇ ಮಾನವ ದೈವದ ಕೈಗೊಂಬೆ ಮಾತ್ರ ದಾಸರ ಹರಿಭಕ್ತಿ ಯಾವುದರಿಂದಲೂ ಕುಂದುವುದಿಲ್ಲ ಬಾಳಿನೆಲ್ಲ ತಿರುವುಗಳೂ ದೈವೇಚ್ಛೆಯಂತೆ ರೂಪುಗೊಂಡಿರುತ್ತವೆ ಮಾನಾಭಿಮಾನ ಸಹ ಹರಿಗೇ ಅರ್ಪಿತ

ಅಂತರಂಗದಲ್ಲಿ ನಿರಂತರ ನಿನ್ನ ರೂಪ
ಸಂತೋಷದಲ್ಲಿ ತೋರಿ ಸಂತಾಪವನು ಬಿಡಿಸೊ
ಭ್ರಾಂತಿಗೊಳಿಸದೆ ವಿಶಿಷ್ಟ ವಿಜಯ ವಿಠಲ
ಅಂತಿಕಾಲಕ್ಕೆ ನಿನ್ನ ಚಿಂತೆ ಒಂದೆನೀಯೊ

ಎನ್ನುವುದು ಅವರ ಪ್ರಾರ್ಥನೆ ಕೊಡುವವನು ನೀನು ಕೊಂಬುವನು ನಾನು ಎಂದು ಭಾವಿಸಿ ಕೊಟ್ಟದ್ದನ್ನೆಲ್ಲ ಅನುಭವಿಸಲು ಮಾನಸಿಕವಾಗಿ ಸನ್ನದ್ಧರಾಗುತ್ತಾರೆ

ವಿಜಯದಾಸರಿಗೆ ಹರಿಪೂಜೆ ಮಾಡಲು ಒಂದು ಸಾಧನ ಸಹ ಇಲ್ಲ !

ಗಂಧ ಪರಿಮಳ ಪಚ್ಚೆಪೆನೆಂಬೆನೆ
ಗಂಧವಾಗಿ ನಿನ್ನಂಗ ಒಪ್ಪುತಲಿದೆ
ತಂದು ತುಲಸಿ ಪುಷ್ಪದಲ್ಲಿ ಪೂಜಿಪೆನೆನೆ
ಕುಂದ ಮಂದಾರ ಮಾಲೆ ಸದಾ ನಿನ್ನ ಕೊರಳಲಿ
ಒಂದೊಂದು ಪರಿ ಧೂಪಾರತಿ ಮಾಡುವೆನೆನೆ

ಇಂದು ಕೋಟಿಯ ರತಿ ನಿನ್ನ ಪ್ರಕಾಶವು
ಒಂದೆ ದೈವವೆ ಈಶ ವಿಜಯವಿಠಲರೇಯ
ಮಂದಮತಿ ಎನಗೊಂದು ಸಾಧನವಿಲ್ಲ

ಆದರೆ ಹರಿ ಒಲಿಯುವುದು ಯಾವುದಕ್ಕೆ ? ದಾನಧರ್ಮಕ್ಕೆ ಸಾ ನವರೌನಕ್ಕೆ ಗಾನ ಯಾಗಕ್ಕೆ ಧ್ಯಾನ ನರ್ತನಕ್ಕೆ ಕಾಣಿಕೆ ಜಪಕ್ಕೆ ವ್ರತಕರ್ಮಕ್ಕೆ ಸಿಕ್ಕದ ಹರಿಯು ದೃಢಭಕ್ತಿ ಮಾತುರವಿದ್ದರೆ ತಾನಾಗಿ ಕರೆಯದೆ ಬಳಿಯಲ್ಲಿ ಬಂದೀಗ ಕಾಣಿಸಿ ಕೊಂಬನು ಇಂಥ ಭಕ್ತನಿಗೆ ಕಂಡ ಕಂಡದ್ದೆಲ್ಲ ಕಮಲನಾಭನವ ಹರ್ತಿ ಉಂಡುಟ್ಟು ದೆಲ್ಲ ವಿಷ್ಣುಪೂಜೆ ಹರಿದಾಸರಿಗೆ ಭಕ್ತಿಯೇ ಉಸಿರು ಈ ಭಾವ ಶುದ್ಧಿಯಿಂದಾಗಿ ನಡೆ ನುಡಿ ನೋಟ ಮಾತು ಎಲ್ಲವೂ ಹರಿಯದೆಂಬ ಉನ್ನತ ಭಾವನೆ ಅವರಲ್ಲಿ ಮನೆಮಾಡಿರುತ್ತದೆ

ವಿಜಯದಾಸರಿಗೆ ಹರಿದಾಸರಲ್ಲಿ ತುಂಬ ಶ್ರದ್ಧೆ ತಮ್ಮನ್ನು ದಾಸಾನುದಾಸ ರೆಂದು ಕರೆದುಕೊಳ್ಳುವಷ್ಟು ಸೌಜನ್ಯ ಅವರದ್ದು

ನಿನ್ನ ದಾಸರು ಪೊದ್ದ ವಸನವೇ ಎನಗಾಗಲಿ
ನಿನ್ನ ದಾಸರು ಉಂಡ ಎಂಜಲು ಎನಗಾಗಲಿ
ನಿನ್ನ ದಾಸರ ಪಾದೋದಕವೆ ಎನಗಾಗಲಿ
ನಿನ್ನ ದಾಸರು ಇಟ್ಟಾಭರಣವೆ ಎನಗಾಗಲಿ
ನಿನ್ನ ದಾಸರು ಚರಿಸಿದ ಉತ್ತಮ ಭೂಮಿ
ಪುಣ್ಯನಿಧಿಗಳೆಲ್ಲ ಎನಗಾಗಲಿ ದೇವ

ಎಂದು ಪ್ರಾರ್ಥಿಸುತ್ತ ದಾಸ ದಾಸ ದಾಸರ ದಾಸ್ಯವ ಕೊಡೋದೋಷರಾಶಿಯಳಿದು ಎಂದು ಹರಿಯನ್ನು ಕೇಳಿಕೊಳ್ಳುತ್ತಾರೆ ಅವರು ತಮ್ಮನ್ನು ಕುರಿತು ಹೇಳಿಕೊಳ್ಳು ವುದು ಹೀಗೆ

ಎಂದಿಗಾದರು ನಿನ್ನ ಪೊಂದಿದ ಭಕುತರ
ವಂದಿಸುವರ ಬಾಯ ತೊಂಬಲನು ನಿತ್ಯ
ತಿಂದು ಕಾಲವ ಕಳೆವ ಕಂದ ಕಂದನೊ ನಾನು

ಗ್ರಾಸಕ್ಕಾಗಿ ಹಲವು ವೇಷ ಧರಿಸುವ ಕೊಟ್ಟರೆ ಹೊಗಳುವ ಕೊಡದಿದ್ದರೆ ನಿಂದಿಸುವ ಕಪಟದಾಸರನ್ನು ಕುರಿತು ಕಟಕಿಯಾಡುವ ವಿಜಯದಾಸರು ನಿಜವಾದ ಭಕ್ತರು ಬೂದಿ ಮುಚ್ಚಿದ ಕೆಂಡದಂತಿಪ್ಪರು ಎಂದು ತಿಳಿಸುತ್ತಾರೆ ಸಜ್ಜನರ ಸಂಗದಿಂದ ಎಲ್ಲ ಸಂಕಷ್ಟಗಳು ಕರಗಿಹೋಗುತ್ತವೆ ವಿಜಯದಾಸರು ತಮ್ಮ ಭಕ್ತಿ ಮಾರ್ಗದಲ್ಲಿ ಸಾಫಲ್ಯ ಗಳಿಸಿದಾಗ ಹರಿಕರುಣವೆಂಬಂಥ ಕೈ ದೊರಕಿತು ಗುರು ಕರುಣವೆಂಬಂಥ ಶಕ್ತಿಯಿಂದ ತಮ್ಮ ಅಂತರಂಗದ ಕದವು ತೆರೆಯಿತಿಂದು ಎಂದು ಪರವಶರಾಗಿ ಹಾಡಿದ್ದಾರೆ

**ತತ್ತ್ವವಾದ**

ಶ್ರೀಹರಿಗೆ ಸೃಷ್ಟಿ ಸ್ಥಿತಿ ಲಯ ಒಂದು ಲೀಲೆ ಎಂಬುದು ಮಧ್ವಮತಾನುಯಾಯಿಗಳ ನಂಬುಗೆ ವಿಜಯ ದಾಸರು ತಮ್ಮ ಒಂದು ಕೃತಿಯಲ್ಲಿ ಹೀಗೆ ಹೇಳುತ್ತಾರೆ

ನೀಲಮೇಘಶ್ಯಾಮ ವಿಜಯ ವಿಠಲರೇಯ
ಬಾಲಕ್ರೀಡೆಯಂತೆ ಬೊಮ್ಮಾಂಡ ಪುಟ್ಟಿಸುವ

ಸೃಷ್ಟಿ–ಸ್ಥಿತಿ ಲಯಗಳು ಕಾಲಾನುಸಾರಿಯಾಗಿ ನಡೆಯುತ್ತವೆ ಎಲ್ಲ ಜೀವರ ಸಾಧನೆಯು ಕಾಲದ ಮಿತಿಗೆ ಒಳಪಟ್ಟಿರುತ್ತದೆ ಬ್ರಹ್ಮದೇವರ ಸಾಧನೆ ಬ್ರಹ್ಮಕಾಲ ಮಾನದಂತೆ ನೂರು ವರ್ಷಗಳು ಬ್ರಹ್ಮನಿಗೆ ಒಂದು ದಿವಸವಾಗಬೇಕಾದರೆ ಮನುಷ್ಯರಿಗೆ ಆ ಕಾಲದಲ್ಲಿ ಎರಡು ಸಾವಿರ ಮಹಾಯುಗಗಳು ಕಳೆದಿರುತ್ತವೆ ಒಂದು ಮಹಾಯುಗವೆಂದರೆ ಹನೆರಡು ಸಾವಿರ ದೇವತಾಮಾನ ವರ್ಷಗಳು ಅಥವಾ ನಲವತ್ತೂರು ಲಕ್ಷದ ಇಪ್ಪತ್ತು ಸಾವಿರ ಮಾನುಷ ವರ್ಷಗಳು ಬ್ರಹ್ಮದೇವರ ಮೊದಲ ಐವತ್ತು ವರ್ಷಗಳನ್ನು ಪ್ರಥಮ ಪರಾರ್ಧವೆಂದೂ ಎರಡನೆಯ ಐವತ್ತು ವರ್ಷಗಳು ದ್ವಿತೀಯ ಪರಾರ್ಧವೆಂದು ಕರೆಯಲಾಗಿದೆ ಈಗ ದ್ವಿತೀಯ ಪರಾರ್ಧ ನಡೆಯುತ್ತಿದೆ ವಿಷ್ಣುರಹಸ್ಯದಲ್ಲಿ ಉಕ್ತವಾಗಿರುವ ಕಾಲದ ಈ ಸಂಕೀರ್ಣ ಲೆಕ್ಕಾಚಾರವನ್ನೆಲ್ಲ ವಿಜಯದಾಸರು ತಮ್ಮ ಸುಳಾದಿಯೊಂದರಲ್ಲಿ ಸಂಗ್ರಹಿಸಿ ಹೇಳಿದ್ದಾರೆ

ಹರಿಯು ಸರ್ವಶಕ್ತ ಅನಾದಿ ಅನಂತ ಎಂಬ ಶ್ರುತಿಸಾರವನ್ನು ವಿಜಯದಾಸರು ಹೀಗೆ ವಿವರಿಸುತ್ತಾರೆ

ನೀನು ಬಾಳುವುದಕ್ಕೆ ಕಡೆ ಮೊದಲು ಇಲ್ಲ
ಜ್ಞಾನ ಪೂರ್ಣೈಶ್ವರ್ಯ ನಿತ್ಯತೃಪ್ತ ವಿಮಲ
ಆನಂದ ಗುಣವನಧಿ ಅಂಚಿತ್ಯ ಘನಶಕ್ತ
ಶ್ರೀನಾರಿ ನಿನಗೆ ನಿತ್ಯ ಅವಿಯೋಗಿ
ನಾನಾ ವರ್ಣದ ಅಪ್ರಾಕೃತ ನಗರಿ
ಭಾನುಕೋಟಿ ತೇಜಾ ಸತತ ಯೋಗ ನಿದ್ರಾ
ದಾನವರ ಎದೆದಲ್ಲಣನೆಂಬೊ ಬಿರಿದು
ವೈನತೇಯ ದೇವಾ ವಾಹನನಾಗಿಹನೊ
ಮಾಣಿಕ ಫಣೆಯುಳ್ಳ ಭುಜಗನು ಹಾಸಿಗೆಯು
ಅನಂತ ಮುಕ್ತರು ವಾಲಗ ಮಾಡುವರು
ದೀನ ಉದ್ಧಾರ ವಿಜಯವಿಠಲರೇಯ
ನೀ ನಿರ್ದೋಷನೊ ನಾ ನುಡಿವದೇನು

ಹರಿಯು ಜೀವರ ಸರ್ವೇಂದ್ರಿಯಗಳಲ್ಲಿದ್ದು ಮಾಡಿಸಿದರೆ ಕರ್ಮಗಳನ್ನು ಮಾಡಲು ಜೀವರಿಗೆ ಸಾಧ್ಯವಾಗುತ್ತದೆ ಎಂಬ ತತ್ತ್ವವನ್ನು ಜ್ಞಾನೇಂದ್ರಿಯದಲ್ಲಿ ನೀನೆ ವಾಸವಾಗಿ ಎಂಬ ಕೃತಿಯಲ್ಲಿ ವಿಜಯದಾಸರು ತಿಳಿಸಿರುವರಲ್ಲದೆ ನೀನೆ ಕಾರಣ ಸರ್ವ ಜಗತತ್ತ್ವಕ್ಕೆ ಎಂಬ ಸತ್ಯವನ್ನು ತಿಳಿಸಿದ್ದಾರೆ ಜೀವರಿಂದ ಕರ್ಮವನ್ನು ಅವರ ಯೋಗ್ಯತಾನುಸಾರ ಮಾಡಿಸಿದರೂ ಹರಿಯು ಅದಕ್ಕೆ ಹೊಣೆಗಾರನಾಗಿರುವುದಿಲ್ಲ ಅವನ ಸಂಕಲ್ಪಕ್ಕೆ ಯಾವ ಅಡ್ಡಿಯೂ ಇರುವುದಿಲ್ಲ ಅವನು ಅಖಿಲಾಂಡಕೋಟಿ ಬ್ರಹ್ಮಾಂಡನಾಯಕನಾಗಿ ಸಕಲ ಜೀವರಂತರಂಗದೊಳಗೆ ವ್ಯಾಪಕನಾಗಿದ್ದರೂ ನೀರಿನಲ್ಲಿನ ಕಮಲದಂತೆ ಅಂಟಿಯೂ ಅಂಟದಂತೆ ಇರುತ್ತಾನೆ ಎಂದು ವಿಜಯದಾಸರು ಸಾರುತ್ತಾರೆ ಹರಿಯ ಸರ್ವವ್ಯಾಪಕತ್ವ ಈ ಕೃತಿಯಲ್ಲಿ ಚಿತ್ರಿತವಾಗಿದೆ

> ನಿನ್ನೊಳು ನೀನೆ ಎನ್ನೊಳು ನೀನೆ ಅನ್ಯರೊಳು ನೀನೆ
> ಅನ್ಯೋನ್ಯನು ನೀನೆ ಚಿನ್ಮಯನು ನೀನೆ
> ತನ್ಮಯನು ನೀನೆ ಘನಮಹಿಮನೆ ವಿಜಯವಿಠಲನೆ
> ಅಣುರೇಣು ನೀನೆ ಪರಮಾಣು ನೀನೆ

ಎಲ್ಲೆಡೆ ಇರುವ ಹರಿಯು ಸರ್ವಶಬ್ದವಾಚ್ಯಕ ಹರಿಯ ಸ್ವತಂತ್ರ ಚಾಲಕ ಶಕ್ತಿಯನ್ನು ವಿಜಯದಾಸರು ನಂಬುತ್ತಾರೆ ದೇವ ದೇವತೆಗಳೂ ಗ್ರಹಗಳೂ ಹರಿಯು ಹೇಳಿದಂತೇ ನಡೆಯುವವರು ಆತನ ಗುಣಗಣಗಳನ್ನು ಶರಣಾಗತ ವಜ್ರಪಂಜರ ಜರಾಮರಣ ವಿರಹಿತ ಇತ್ಯಾದಿ ಸಾಲುಗಳಲ್ಲಿ ವಿವರಿಸಿದೆ

ಜನನ ಮರಣ ವಿದೂರರಾಗಲು ಪ್ರಯತ್ನಿಸಬೇಕಾದುದು ಮಾನವರ ಕರ್ತವ್ಯ ಜೀವರು ಸ್ವತಂತ್ರರಲ್ಲ ಇದ್ದಿರಬಹುದಾದ ಸ್ವಾತಂತ್ರ್ಯವನು ವಿಜಯದಾಸರು ಹೀಗೆ ವರ್ಣಿಸುತ್ತಾರೆ

> ನೂರಾರು ಕೋಟಿ ಮಂದಿಗೆ ಉಣಿಸುವಗೊಂದು
> ಚೂರು ತುಂಡಲ ಹಾಕಿ ಇದ್ದಂತೆವೊ
> ಈರೀತಿ ಎನ್ನಯ ಸ್ವಾಂತತ್ರ್ಯವೆಂಬುದು
> x x x
> ಹರಿ ಕೊಡಲು ಉಂಟು ಕೊಡದಿದ್ದರೆ ಇಲ್ಲ
> ಹರಿಯೆ ಪರಮ ಮುಖ್ಯ ಹರಿವ್ಯಾಪಾರದ
> ವಿರಹತಿ ತೃಣ ಒಂದು ಚಲಿಸಲಾಪದೆ

ಕರ್ಮಬಂಧನ ಹಾಗೂ ಅದರಿಂದ ಬಿಡುಗಡೆ ಹೊಂದುವವರಿಗೊ ಜನ್ಮಚಕ್ರ ಮುಂತಾದುದನು ವಿಜಯದಾಸರು ನಂಬುತ್ತಾರೆ ಎನ್ನುವುದು ನಾನಾಯೋನಿಗಳಲ್ಲಿ ಬಂದು ದುಃಖಿಪನೇ ಮತ್ತು ಯೋನಿಯೋನಿಯಲಿ ಪೊಗಿಸಿ ಬಳಲಿಪುದುಚಿತವೆ ಎಂಬ ಮಾತುಗಳಿಂದ ವೇದ್ಯವಾಗುತ್ತದೆ

ಮುಕ್ತಜೀವರೂ ಹರಿಯ ಅಧೀನರಾಗಿರುತ್ತಾರೆ. ಅಸಂಖ್ಯಾತ ಜೀವರು ಏಕಸ್ವರೂಪವನ್ನು ಹೊಂದಿಲ್ಲ. ಜೀವರನ್ನು ಸಾತ್ವಿಕ, ರಾಜಸ ಮತ್ತು ತಾಮಸ ರೆಂದು ಮೂರು ವರ್ಗಗಳಾಗಿ ವಿಂಗಡಿಸಲಾಗಿದೆ. ಜೀವರ ತ್ರಿವರ್ಗವನ್ನು ವಿಜಯ ದಾಸರು ಉಲ್ಲೇಖಿಸುತ್ತಾರೆ.

ಕರ್ಮದಲ್ಲಿ ಎರಡು ವಿಧ: ಸತ್ಕರ್ಮ ಮತ್ತು ದುಷ್ಕರ್ಮ. ಜೀವರಲ್ಲಿ ಸತ್ಕರ್ಮಾಚರಣೆಗೆ ದೇವತೆಗಳು ಪ್ರೇರಕರಾದರೆ ದುಷ್ಕರ್ಮಾಚರಣೆಗೆ ದೈತ್ಯರು ಪ್ರೇರಕರಾಗಿರುತ್ತಾರೆ. ಆದರೆ ಮೂಲ ಪ್ರೇರಕ ಹರಿಯೇ. ದೇವತೆಗಳ ಕಕ್ಷೆ ತಾರತಮ್ಯ ಗುಣತಾರತಮ್ಯಗಳಿದ್ದಂತೆ ದೈತ್ಯರಲ್ಲಿಯೂ ತಾರತಮ್ಯವುಂಟು. ದೈತ್ಯರು ಸಜ್ಜನರ ಕೈಯಿಂದ ಪಾಪವನ್ನು ವತ್ತು ಕುಜನರ ಕೈಯಿಂದ ಸತ್ಕರ್ಮ ವನ್ನು ಮಾಡಿಸಬಲ್ಲರು. ಈ ಕರ್ಮಗಳಿಂದ ಲಭಿಸುವ ಪಾಪಪುಣ್ಯಗಳಿಗೆ ಆಯಾ ದೇವ ದೈತ್ಯರ ಭಾಗಿಗಳಾಗುವುದರಿಂದ ಜೀವರ ಪಾಲು ಅತ್ಯಲ್ಪ.

> ಸೇರು ಸಕ್ಕರೆ ತಂದು ಕೋಟಿ ಜನಕೆ
> ತಾರತಮ್ಯದಿಂದ ಹಂಚಿದೋಪಾದಿಯಲ್ಲಿ
> ವರವ ರ ಎನ್ನ ಪುಣ್ಯಪಾಪಗಳೆರಡು
> ಆರರ ಭಾಗಂಗಳು ಅವರಿಗೆ ಕೊಡಲಾಗಿ
> ಭಾರ ಎನ್ನ ಪಾಲಿಗೆ ಪ್ರಾಪ್ತವಾಗುವುದೆಷ್ಟು

ಎಂದು ದಾಸರು ಕೇಳುತ್ತಾರೆ. ಜೀವರು ಗಳಿಸುವ ಪುಣ್ಯವು ಹೇಗೆ ವಿತರಣೆಯಾಗು ವುದು. ದೇಹದಲ್ಲಿನ ದೈತ್ಯರು ಪುಣ್ಯವನ್ನು ಅಪಹರಿಸುವ ಶಕ್ತಿಯನ್ನು ಹೊಂದಿರು ವುದರಿಂದ ಅಂಥ ದೈತ್ಯರ ಪಾಪ ಪುರುಷನನ್ನು ವಿಸರ್ಜಿಸುವ ಕ್ರಮ ಶಾಸ್ತ್ರಗಳಲ್ಲಿ ವಿವರಿಸಲ್ಪಟ್ಟಿದೆ. ಈ ವಿಷಯವನ್ನು ಮೂರು ಹುರಿಯಾನಿಟ್ಟು ಪಾಶದಲ್ಲಿ ಎಂಬ ಸುಳಾದಿಯಲ್ಲಿ ವರ್ಣಿಸಿದ್ದಾರೆ. ಪಾಪ ಪುರುಷನ ವಿಸರ್ಜನೆಯಾದ ಮೇಲೆ ಮಾಡ ಬೇಕಾದ ಪ್ರಾಣಾಯಾಮ ಧ್ಯಾನವನ್ನು ವಿವರವಾಗಿ ಅವರು ತಿಳಿಸಿದ್ದಾರೆ. ಈ ಬಗೆಗೆ ಪ್ರಣವಪೂರ್ವಕದಿಂದ ಆಸನವಿಟ್ಟು ಮತ್ತು ಅರೆಗಣ್ಣ ಮಾಡಿ ಪಲ್ಲು ಕೂಡಿಸದಲೆ ಇತ್ಯಾದಿ ಕೃತಿಗಳನ್ನು ಗಮನಿಸಬಹುದು. ಜ್ಞಾನಭಕ್ತಿ ಪೂರ್ವಕವಾದ ಧ್ಯಾನವೇ ವಮುಕ್ತಿಯ ಸಾಧನ. ಧ್ಯಾನದೊಳಗೆ ಸ್ನಾನ ಮೌನ ದಾನಗಳು ಅಡಕ ವಾಗಿರುತ್ತವೆ. ಧ್ಯಾನದಿಂದಲೇ ಜ್ಞಾನ.

ಮೂರ್ತಿಗಳಲ್ಲಿ ಹರಿಯನ್ನು ಕಾಣುವ ಪ್ರಯತ್ನ ಮಾಡುವವನು ಸಾಮಾನ್ಯ ಭಕ್ತನಾದರೆ ಎಲ್ಲೆಡೆ ಹರಿಯನ್ನು ಕಾಣುವವನು ಜ್ಞಾನಿಯಾಗುತ್ತಾನೆ. ಧ್ಯಾನಕ್ಕೆ ಹರಿನಾಮ ಸ್ಮರಣೆಯೇ ಉತ್ತಮ ಸಾಧ್ಯಮ. ಕರ್ಮಗಳನ್ನು ಜ್ಞಾನಪೂರ್ವಕವಾಗಿ ಮಾಡಬೇಕು. ಏಕೆಂದರೆ ಹರಿನಾಮವ ತೊರೆದು ಕರ್ಮವಮಾಡಲು ದೋಷ ಕಳೆಗದು.

ಕರಗದು ಹಿಮ್ಮೆಟ್ಟ ಪ್ಲೆ ಗದು ಹರಿನಾವ ದಲಿ ಪ್ರೀತಿಯಿಟ್ಟು ಕರ್ವವ ತೊರೆದರೆ ಪಾಪಲೇಶವಿಲ್ಲ ಫಲವಕ್ಕು ಎನ್ನುವುದು ವಿಜಯ ದಾಸರ ಸಂದೇಶ

ಹರಿನಾಮ ಸ್ಮರಿಸಿದ ಮನುಜಂಗೆ ಸ್ಥಿರವೆನು ಜ್ಞಾನಭಕ್ತಿ ಭಕ್ತಿ ಹರಿ ಯೋಲುವ ಗೆ ಸುಲಭ ಸಾಧನ ಅದು ಕಳೆವದಲ್ಲ ತಿರುಗಿ ಕೊಡುವುದಲ್ಲ ವೆಲೆಗೆ ತರುವುದಲ್ಲ ಭಯಕ್ಕೆ ಹೂಳುವುದಲ್ಲ ಎಳಲಿಕೆಯಾಗಿ ಸಾಕೆಂಬೊದಲ್ಲ ಅದು ಹಲವು ಜನ್ಮದ ಪಾಪ ಪರ್ವತಕೆ ಕ ಲಿಶವಾಗಿಪ್ಪದು ಹರಿಯ ಶಕ್ತಿಯ ಅರಿ ಯಲು ಶ್ರವಣವೆ ಮುಖ್ಯ ಕರ್ಮ ಜ್ಞಾನಿಗಳಿಗೆ ಶ್ರವಣವಿಲ್ಲದ ತನಕ ಆಗದು ದೊರಕದು

ವಿಜಯದಾಸರು ಭಗವದ್ರೂಪಗಳನು ಪ್ರಾತಃಕಾಲದಲ್ಲಿ ನಾರಾಯ ಣನೆನ್ನಿ ಎಂಬ ಕೃತಿಯಲ್ಲಿ ವಿವರವಾಗಿ ವರ್ಣಿಸಿದ್ದಾರೆ ವೇದೋಪನಿಷತ್ತುಗಳಲ್ಲಿ ಭೋಜ್ಯ ಪದಾರ್ಥಗಳಲ್ಲಿರುವ ಭಗವದ್ರೂಪಗಳನ್ನು ಮತ್ತು ತತ್ತ್ವಾಭಿಮಾನಿ ದೇವತೆಗಳನ್ನು ಅವರು ವಿವರಿಸಿರುವುದು ಗಮನ ರ್ಹ ಈ ವಿಷಯ ದಲ್ಲ ಪಾಂಚರಾತ್ರಾಗಮ ಅವರಿಗೆ ಆಕರ ಗ್ರಂಥವಾಗಿದೆ

ಆನಂದತೀರ್ಥರು ಪ್ರತಿಪಾದಿಸಿರುವ ತತ್ತ್ವವಾದ ದಲ್ಲಿ ತಾರತಮ್ಯ ಪ್ರಮುಖವಾದ ತತ್ತ್ವಗಳಲ್ಲೊಂದು ಜೀವ ಜೀವರ ಜ್ಞಾನ ಸಾಧನೆ ಆನಂದಗಳಲ್ಲಿ ತಾರತಮ್ಯವನು ಈ ತತ್ತ್ವ ತಿಳಿಸುತ್ತದೆ ಮಾನುಷೋತ್ತಮರಿಂದ ಪರಮಾತ್ಮನ ವರೆಗೆ ಮೂವತ್ತೈದು ಕಕ್ಷಗಳಲ್ಲಿರ ವ ಚಿ ತ ರ ಗುಣತಾರತಮ್ಯವನು ವಿಜಯ ದಾಸರು ಹರಿಗೆ ಸಿರಿದೇವಿ ಅನಂತ ಗುಣಕೆ ನೀಚಳು ಎಂಬ ದಿ ರ್ಘಸುಳಾದಿಯ ಲ್ಲಿ ಸವಿವರವಾಗಿ ತಿಳಿಸಿದ್ದಾರೆ

ಈಶ–ಜೀವ ಜಡ ತತ್ತ್ವಗಳಲ್ಲಿ ಪರಸ್ಪರ ಪಂಚ ಭೇದಗಳಿವೆ ಎಂಬುದು ಆನಂದತೀರ್ಥರ ಸಿದ್ಧಾಂತ ಈ ಭೇದವನ್ನರಿಯದೆ ಎಲ್ಲವೂ ಒಂದೇ ಎಂದ ಹೇಳು ವವರನು ದ್ವೈತ ಸಿದ್ಧಾಂತಿಗಳು ಖಂಡಿಸ ತ್ತಾರೆ ವಿಜಯ ದಾಸರು ತಮ್ಮ ಪರ ಮಾತ್ಮಗೆ ನೀ ಸರಿ ಎಂದು ಕರಗದ ತಮದಲ್ಲಿ ಸೇರುವುದೆ ಎನ್ನುವ ಕೃತಿಯಲ್ಲಿ ಭೇದವಾದವನ್ನು ಪ್ರತಿಪಾದಿಸುತ್ತಾರೆ

ಜಡ ಪರಮಾತ್ಮನಿಗೆ ಜಡಜಡಕೆ
ಜಡ ಜೀವಕೆ ಅಭೇದವೆಂದು
ಕಡುವರ್ಗದಿಲಿ ಉಚ್ಚರಿಸಿ
ಮಡಿದು ನರಕಕ್ಕೆ ಉರುಳುವರೆ

ವಿಜಯದಾಸರ ಕೃತಿಗಳಲ್ಲಿ ಧರ್ಮಸೂಕ್ಷ್ಮದ ವಿಷಯಗಳು ಹಾಸುಹೊಕ್ಕಿವೆ ಅಸೂಯೆಯಿಂದ ಸಂಚಿತ ಪುಣ್ಯವೂ ಹೋಗುವುದು ಉತ್ತಮರಿಗೆ ತುತ್ತನ್ನ

ದಾಸದಿಂದ ಪುಣ್ಯಪ್ರಾಪ್ತಿ ಎಲ್ಲ ದಾನಕ್ಕಿಂತ ಅನ್ನದಾನ ಶ್ರೇಷ್ಠ ಯಾವ ಕಾರಣದಿಂದಲೂ ಭಕ್ತರನ್ನು ದ್ವೇಷಿಸಬಾರದು ಎಲ್ಲ ಕ್ರಿಯೆಗಳೂ ಹರಿಗೆ ಅರ್ಪಿತನಾಗಬೇಕು ನಿಷ್ಕಾಮ ಕರ್ಮಗಳಿಂದ ಹರಿಯೊಲಿದ ಆನಂದ ಪ್ರಾಪ್ತವಾಗುತ್ತದೆ ಮತ್ತು ಸಂಚಿತ ಗಾಮಿ ಕರ್ಮಗಳು ನಾಶಹೊಂದುತ್ತವೆ ಜೀವರು ಮಾಡಿದ ಕರ್ಮಗಳಿಗನುಣವಾಗಿ ಹರಿಯು ಫಲ ನೀಡುವವನು ಮೊದಲಾದ ಅಭಿಪ್ರಾಯಗಳು ಅವರ ಕೃತಿಗಳಲ್ಲಿ ಉದಾಹರಣೆ ಉಪಮೆಗಳೊಡನೆ ವ್ಯಕ್ತವಾಗಿವೆ

ಜ್ಞಾನಪೂರ್ವಕ ಭಕ್ತಿ ತೋರುತ್ತ ಜೀವರು ಮಾಡುವ ಬಿಂಬೋಪಾಸನೆಗೆ ಪರಮಾತ್ಮ ದರ್ಶನ ನೀಡುತ್ತಾನೆ ಅದ ಒಂದರ್ಶನ ಜಡ ಚೇತನಗಳಲ್ಲಿ ಹರಿಯ ವ್ಯಾಪಕತ್ವವನ್ನು ಕಂಡು ತದಂತರ್ಗತ ಬಿಂಬಮೂರ್ತಿಯನು ಧ್ಯಾನಿಸಿ ಸ್ವಬಿಂಬ ಮೂರ್ತಿಯಲ್ಲಿ ಐಕ್ಯಗೊಳಿಸಿ ಉಪಾಸಿಸುವುದೇ ಬಿಂಬಪೂಜೆ ವಿಜಯ ದಾಸರು ತಾವು ಬಿಂಬಪೂಜೆಯನ್ನು ಮಾಡುತ್ತಿದ್ದ ಕ್ರಮವನ್ನು ಕರಿತಂ ಕೊಡುವ ಜಲಾಭಿಷೇಕ ಇಡುವ ಗಂಧವೆ ಎನ್ನಡಿಗೇರಿಸ ವ ಗಂಧ ಎಂಬ ಕೃತಿಯಲ್ಲಿ ವಿವರಿಸಿದ್ದಾರೆ ಹರಿಯ ಪ್ರತಿಮೆಗಳಲ್ಲಿ ಚಲ ಮತ್ತು ಅಚಲಗಳೆಂಬ ಎರಡು ವಿಧಗಳುಂಟು ಹರಿಯ ಚಲಾಚಲ ಪ್ರತಿಮೆಗಳಲ್ಲಿ ಬಿಂಬಮೂರ್ತಿ ಕ್ರಿಯೆಗಳನ್ನು ಚಿಂತಿಸಿ ಸ್ವಬಿಂಬ ಮೂರ್ತಿಯಲ್ಲಿ ಐಕ್ಯಗೊಳಿಸಿ ಧ್ಯಾನಿಸುವುದು ಸವನ್ಯಯಪೂಜೆ ಎಂದೆನಿಸುತ್ತದೆ ಇಂಥ ಪೂಜಾಕ್ರಮವನು ವಿಜಯ ದಾಸರು ವಿವರಿಸುವುದು ಹೀಗೆ

ನಿನ್ನ ಬಿಂಬವ ಸ್ಮರಿಸಿ ಇದೆ ಇದೆ ಅನಂತ
ಚಿನ್ಮಯ ರೂಪಗಳು ಸಿದ್ಧವೆಂದು
ಭಿನ್ನದೇವರೊಳು ಇದ್ದ ಮೂರ್ತಿಗಳಲ್ಲಿ
ಚೆನ್ನಾಗಿ ನಿನ್ನ ಬಿಂಬವ ಅಂಶವ
ಮುನ್ನೀಗ ಪೋಗಿಸಿ ಏಕೀಭೂತವ ನೆನೆದು
ಸನ್ನುತಿಸಿ ತಿರಿಗಿ ಭಿನ್ನ ರವ ಧ್ಯಾದಲ್ಲಿ
ಮುನಿ ಣಿ ಗೊಳುತಿಪ್ಪ ಅಗ್ರೇಶರೊಳಗೆ ಸಂ
ಪೂರ್ಣವಾಗಿದ್ದ ಅಂಶಗಳ ತೆಗೆದು
ನಿನ್ನ ಬಿಂಬನ ಕೂಡ ಕೂಡಿಸಿಕೊಂಡು ಸಂ
ಪನ್ನ ಭಕುತಿಯಿಂದ ಪೂಜೆಮಾಡೋ

ಒಬ್ಬ ಭಗವದ್ಭಕ್ತನನ್ನು ಮನೆಗೆ ಕರೆದು ಅವನಲ್ಲಿರುವ ಎಪ್ಪತ್ತೆರಡು ಸಾವಿರ ನಾಡಿಗಳಲ್ಲಿನ ಶ್ರೀಹರಿಯ ಪುಂ ಸ್ತ್ರೀರೂಪಗಳನ್ನು ನೆನೆದು ಪೂಜಿಸಿದಾಗ ಒಬ್ಬನನ್ನು ತೃಪ್ತಿಪಡಿಸುವುದರ ಮೂಲಕ ಮೂವತ್ತಾರು ಸಹಸ್ರ ದಂಪತಿಗಳ ಪೂಜೆಯನ್ನು ಮಾಡಿದಂತಾಗುವುದು ಶ್ರೀ ಹರಿಯೇ ಎಪ್ಪತ್ತೆರಡು ಸಾವಿರ ನಾಡಿಗಳಲ್ಲಿದ್ದು ಸ್ವರಮಣನಾಗಿ ಮೂವತ್ತಾರು ಸಾವಿರ ಪುರುಷರೂಪಗಳಿಂದ ಮೂವತ್ತಾರು ಸ್ತ್ರೀರೂಪಗಳಲ್ಲಿ ರಮಿಸುವನೆಂದು ಚಿಂತಿಸುವರಿಗೆ ಪುಣ್ಯಪ್ರದನಾಗುತ್ತಾನೆ ಪ್ರತಿಯೊಬ್ಬ

ಲ್ಲಿಯೂ ಪ್ರಾಣದ ವರು ಇಪ್ಪತ್ತೊಂದು ಸಾವಿರದ ಆರುನೂರ ಶ್ವಾಸಗಳನು ಪ್ರತಿದಿನವೂ ಮಾಡ ತ್ತಾ, ತತ್ತ್ವಾಭಿಮಾನಿಗಳೊಡನೆ ಸಕಲ ಕಾರ್ಯಗಳನ್ನು ಮಾಡಿಸು ತ್ತಾರೆ ಎಂದು ವಿಜಯದಾಸರು ತಿಳಿಸ ತ್ತಾರೆ

ಈಶ ಬಿಂಬವಾದರೆ ಜೀವ ಪ್ರತಿಬಿಂಬ ಬಿಂಬರೂಪಿ ಪರಮಾತ್ಮನ ದರ್ಶನ ಜೀವರ ಗುರಿ ಜೀವರು ತಮ್ಮ ಹೃದಯದಲ್ಲಿನ ಚಕ್ರಾಬ್ಜ ಮಂಡಲದಲ್ಲಿರುವ ಪರಮಾತ್ಮನ ರೂಪಗಳು ಮತ್ತು ಆಯಾ ಅಕ್ಷರ ಮಂತ್ರಗಳಲ್ಲಿರುವ ಅಭಿಮಾನಿ ದೇವತೆಗಳ ಸ್ಮರಣೆಯನು ಪ್ರತಿನಿತ್ಯವೂ ಮಾಡ ವುದರಿಂದ ಬಿಂಬಾಪರೋಕ್ಷವಾಗು ವುದು ಈ ಚಕ್ರಾಬ್ಜ ಮಂಡಲವನು ವಿಜಯದಾಸರು ಕಂಕಣಕಾರಸುಳಾದಿ ಎ ದಂ ಕರೆಯ ಲಾದ ಪ್ರತ್ಯೇಕ ಸ ಳಾದಿಗಳಲ್ಲಿ ವಿವರಿಸಿದ್ದಾರೆ ಈ ಮಂಡಲದಲ್ಲಿ ಏಳು ಕೋಟಿ ಮಂತ್ರಾರ್ಥವೆ ಉಂಟು ಎಂದು ಅವರು ಹೇಳಿ ಸಾ ನಾದಿ ಪ್ರತಿಯೊಂದು ಕರ್ಮಾಚರಣೆಯ ಕಾಲದಲ್ಲಿಯೂ ಹೃದಯ ಕಮಲದಲ್ಲಿರುವ ಪರಮಾತ್ಮನ ರೂಪ ಗಳನ್ನು ಚಿಂತಿಸಬೇಕೆಂದು ತಿಳಿಸುತ್ತಾರೆ

ಹರಿಯನ್ನು ಕಾಣ ವುದೇ ಅಪರೋಕ್ಷ ಹೊರಗಣ್ಣಿಗೆ ಆಗುವ ಹರಿಯ ದರ್ಶನ ಸ್ಥೂಲಾಪರೋಕ್ಷವಾದರೆ ಹೃದಯದಲ್ಲಿಯೇ ಹರಿಯನ್ನು ಕಾಣ ವುದು ಬಿಂಬಾಪರೋಕ್ಷವನಿ ಸಿಕೊಳ್ಳುತ್ತದೆ ಬಿಂಬಮೂರ್ತಿಯ ದರ್ಶನವಾದ ಕೂಡಲೇ ಸಂಚಿತ ಗಾಮಿ ಕರ್ಮಗಳು ನಾಶವಾದರೂ ಪ್ರಾರಬ್ಧ ಕರ್ಮ ನಾಶವಾಗುವುದಿಲ್ಲ

ಜೀವಾಂತರ್ಗತವಾದ ಮೂರ್ತಿಯೇ ಕಾಣಾಗಿ
ಆವಾಗ ಪೋಳೆಯಲು ಸಂಚಿತ ಗಾಮಿ ಕರ್ಮ
ಬೆ ವೋದು ಅನುಭವಿಪ ಪ್ರಾರಬ್ಧ ಕರ್ಮಂಗಳಲ್ಲ
ನೋವು ಸ ಖವಾದರು ಉಂಡು ತೀರಿಸಬೇಕು
ಆ ವಿರಜಾ ನದಿಯ ಲ್ಲಿ ಮುಳುಗುವ ಪರಿಯಂತ
ತ್ರಿವಿಧ ಎನಿಸುವ ದೇಹನಾಶವಿಲ್ಲ

ಜೀವನ ಸ್ವರೂಪ ಯೋಗ್ಯತೆಗೆ ಅನುಗುಣವಾಗಿ ಅವರು ಧ್ಯಾನಿಸಿದ ಕಾಲದಲ್ಲಿ ಕೆಲ ಕಾಲದವರೆಗೆ ಮಾತ್ರ ಹರಿದರ್ಶನ ಲಭಿಸುವುದು ಇದರಲ್ಲಿ ತಾರತಮ್ಯಉಂಟು ತೃಣಜೀವರಿಂದ ಮಾನುಷಗಂಧರ್ವರವರೆಗೆ ಎಲ್ಲ ಜೀವರೂ ನಿರಂತರನಿಸಿ ಜನ್ಮಾಂತರ ಗಳಲ್ಲಿ ಸಾಧನ ಮಾಡಿ ಅಪರೋಕ್ಷ ಹೊಂದುತ್ತಾರೆ ಈ ಸಾಧನೆಯ ವಿವರಗಳನ್ನು ವಿಜಯದಾಸರು ತಿಳಿಸಿದ್ದಾರೆ ಮುಕ್ತಿ ಜೀವರ ಅಂತಿಮ ಗುರಿ ಅದು ಸಿದ್ಧಿಸಿ ದಾಗ ಜನನ ಮ ರಣಚಕ್ರದಿಂದ ಸಂಪೂರ್ಣ ಬಿಡುಗಡೆ ದೊರೆಯುವುದು

ವಿಜಯದಾಸರ ಸುಳಾದಿಗಳು ಆನಂದತೀರ್ಥರ ತತ್ತ್ವಶಾಸ್ತ್ರದ ಕನ ಡ ಸಂಗ್ರಹರೂಪವೆನ್ನಬಹುದು ದ್ವೈತಸಿದ್ಧಾಂತದ ಅನೇಕ ಪ್ರಮೇಯಗಳನ್ನು

ಅವರು ವ್ಯಾಖ್ಯಾನಿಸಿದ್ದಾರೆ ತಾತ್ತ್ವಿಕ ಮೌಲ್ಯಗಳುಳ್ಳ ಅವರ ರಚನೆಗಳಲ್ಲಿ ಪ್ರಪಂಚದ ಸೃಷ್ಟಿಯಿಂದಾರಂಭಿಸಿ ಲಯಕಾಲದವರೆಗೆ ಪರಮಾತ್ಮನು ಮಾಡುವ ಕಾರ್ಯಗಳನು ವಿವರಿಸಲಾಗಿದೆ ಮತ ಸಿದ್ಧಾಂತಗಳಲ್ಲಿ ಅವರು ಹೊಂದಿದ್ದ ಆಳವಾದ ಪಾಂಡಿತ್ಯ ಈ ಸ ಳಾದಿಗಳಲ್ಲಿ ನಿಚ್ಚಳವಾಗಿ ಬಿಂಬಿತವಾಗಿದೆ ಜಗನ್ನಾಥದಾಸರ ಶ್ರೀಹರಿಕಥಾಮೃತಸಾರ ಪ್ರೇರಣೆ ಪ್ರಭಾವ ಬೀರಿದಂತೆ ಕಂಡುಬರ ತ್ತದೆ

**ಕ್ಷೇತ್ರದರ್ಶನ** ವಿಜಯ ದಾಸರು ಭ ರತದಲ್ಲೆಡೆ ವ್ಯಾಪಕವಾಗಿ ಸಂಚರಿಸಿ ಹಲವು ಪುಣ್ಯಕ್ಷೇತ್ರಗಳನ್ನು ಸಂದರ್ಶಿಸಿದವರು ಅವರು ನೋಡಿದ ಪುಣ್ಯಕ್ಷೇತ್ರಗಳ ಸ್ಥಳಮಹಾತ್ಮೆ ಐತಿಹ್ಯಗಳನು ತಮ್ಮ ಕೃತಿಗಳಲ್ಲಿ ಸೇರಿಸಿರುವುದು ಗಮನಾರ್ಹ ಸಂಗತಿ ಅಂದು ನೀ ಪೇಳದಂದದಿ ತೀರ್ಥಯಾತ್ರೆ ನಿಂದಿರದೆ ಸಂಚರಿಸಿ ಪುಣ್ಯವೆಲ್ಲಾ ತಂದು ನಿನಗರ್ಪಿಸಿದೆ ಎಂದು ಒಂದು ಕ ತಿಯ ಲ್ಲಿ ಹೇಳಿಕೊಂಡಿದ್ದಾರೆ ಪುಣ್ಯಕ್ಷೇತ್ರವ ಸ್ಮರಿಸಿರೋ ಪುಣ್ಯಕ್ಷೇತ್ರವ ಸ್ಮರಿಸಿ ಧನ್ಯರಾಗಿರೊ ಎನ್ನುವುದು ಅವರ ಸಂದೇಶ ತಿರ ಪತಿಯ ಲ್ಲಿ ವೆಂಕಟೇಶನ ದರ್ಶನವಾಗದಿದ್ದಾಗ ನಿನ ದರ್ಶನಕೆ ಬಂದವನಲ್ಲವೊ ಎಂದು ನಿಂದಾಸ್ತುತಿ ರಚಿಸಿದ ಅವರು ದರ್ಶನಲಾಭವಾದಾಗ ನಿನ್ನ ನೋಡಲಿ ಬಂದೆ ಎಂದು ಹಲವು ಬಗೆಯಲ್ಲಿ ಸ್ತುತಿಸಿದರು ರೌದ್ರಿ ಸಂವತ ರದ ಪುಷ್ಯ ಬಹುಳ ಚತುರ್ದಶಿ ಶನಿವಾರ ರಾತ್ರಿಯ ಲ್ಲಿ ತಿರ ಪತಿಯ ವೆಂಕಟೇಶ ಅವರಿಗೆ ಪ್ರತ್ಯಕ್ಷ ನಾದನಂತೆ ಈ ತೇದಿ ವಿವರಗಳಂ ಕ್ರಿ ಶ 1740 ರ ಡಿಸೆಂಬರ್ 30 ಶನಿವಾರಕ್ಕೆ ಹೊಂದುತ್ತವೆ ಆದರೆ ಪಕ್ಷ ಬಹ ಳವಾಗಿರದೆ ಶ ದ್ಧವಾಗಿತ್ತು ವೆಂಕಟೇಶನನ್ನು ಕುರಿತು ಅವರು ಸುಮಾರು ತೊಂಭತ್ತು ಕೃತಿಗಳನು ರಚಿಸಿದ್ದಾರೆ ಎನ ಲಾಗಿದೆ ಉಡುಪಿಯ ಯಾತ್ರೆ ವೈಕುಂಠದ ಯಾತ್ರೆ ಕ್ಷಿತಿಯೊಳಗೆ ಮಂಚಾಲೆಗ್ರಾಮಕೆ ಪ್ರತಿಯು ಇಲ್ಲ ಎಂದು ಹಾಡುವ ವಿಜಯದಾಸರು ವ ನಾ ರ್ಕೃಷ್ಣನನ್ನು ಮಾತ ನಾಡ್ಯೆ ಮನಾ ರಿಕೃಷ್ಣ ಎಂದು ಪರವಶರಾಗಿ ಸ್ತುತಿಸ ತ್ತಾರೆ ಕನ್ಯಾಕ ಮಾರಿ ಮಹಾ ನದಿ ಕನಕಗಿರಿ ಹಂಪೆ ವ ಧ್ಯಾ ರ್ಜ ನ ಪಂಢರಪುರ ಶ್ರೀಮುಷ್ಣ ತೋತಾದ್ರಿ ಅನಂತಗಿರಿ ಅಹೋಬಲ ಕಂಚಿ ಅರುಣಾಚಲ ಪಂಚತಿರ ಪತಿ ದರ್ಭಶಯ ನ ನವತಿರ ಪತಿ ಶುಚೀಂದ್ರ ಘಟಿಕಾಚಲ ಶ್ರೀಶೈಲ ಪ್ರಭಾಸಕ್ಷೇತ್ರ ಮಧುರ ಕಾಶಿ ಗಯ ನಾಸಿಕ ಕುಂಭಕೋಣ ಚಿದಂಬರ ಘನಗಿರಿ ಶ್ರೀರಂಗ ದ್ವಾರಕ ಕೇದಾರ ಯದುಗಿರಿ ರಾಮನಾಥಪುರ ಬೇಲೂರು ಮಂಗಳಗಿರಿ ತಿರವೆ ಹರಿಹರ ಭದ್ರಾಚಲ ಶಂಕರನಾರ ಯಣ ಉಮ್ಮತ್ತೂರು ಗೋಕರ್ಣ ಗೋರಂಟ್ಲ ವ ಳೂರು ಕೋಲ ರ ಕದ್ರಿ ಕೋಟೇಶ್ವರ ವ ಐಂತಾದ ಪ್ರಸಿದ್ಧ ಅಪ್ರಸಿದ್ಧ ಕ್ಷೇತ್ರಗಳೆಗೆಲ್ಲ ಹೋ ಗಿ ದೇವದರ್ಶನ ಮಾಡಿದ ಪುಣ್ಯ ಅವರದು ಶ್ರೀಶೈಲವನು ಕುರಿತ ಕೃತಿಯಲ್ಲಿ ಚ ದ್ರಗ ಪ್ತನೃಪ ನ ಮತ್ತು ಪಂಢರಪುರವನ್ನು ಕುರಿತ ಕೃತಿಯ ಲ್ಲಿ ಹೂಣಪುಳಿಂದ ಪುಲ್ಕಸ ಕುಂಕ ಕಿರ ತ ಕಾಣ ಆಭೀರ ಯವನ ರ

ಉಲ್ಲೇಖಗಳು ಗವ ನಾರ್ಹ ವಿಜಯದಾಸರು ತಮ್ಮೊಂದು ಕೃತಿಯಲ್ಲಿ ದೇಶದ ಬಹುಪಾಲು ನದಿಗಳನು ಹೆಸರಿಸಿದ್ದಾರೆ

**ಶಿಷ್ಯಸಮುದಾಯ** ವಿಜಯದಾಸರ ಶಿಷ್ಯಸಮುದಾಯ ಸಾಕಷ್ಟು ದೊಡ್ಡದಿದ್ದಿತ ವಿಜಯದಾಸರಿಂದ ಅಂಕಿತ ಪಡೆದ ಶಿಷ್ಯರ ಸಂಖ್ಯೆ ಅರವತ್ತಕ್ಕಿಂತ ಹೆಚ್ಚಾಗಿತ್ತೆಂಬ ಅಭಿಪ್ರಾಯವಿದೆ ಗೋಪಾಲವಿಠಲರು ಅವರಿಗೆ ಹತ್ತಿಪ್ಪತ್ತು ಮಂದಿ ಶಿಷ್ಯರಿದ್ದರೆಂದು ಹೇಳಿದ್ದಾರೆ ಆದರೆ ಇವರೆಲ್ಲರ ಹೆಸರಾಗಲಿ ಅಂಕಿತ ಕೃತಿಗಳಾಗಲಿ ತಿಳಿದು ಬದಿಲ್ಲ ವಿಜಯದಾಸರ ಪ್ರತ್ಯಕ್ಷ ಶಿಷ್ಯರ ಸಂಖ್ಯೆ ಕೇವಲ ಹನ್ನೊಂದು ಮಾತ್ರ ಎಂದು ಡಾ ಗೋಕುಲನಾಥ್ ಅಭಿಪ್ರಾಯಪಡುತ್ತಾರೆ ಅವರೆಂದರೆ ಗೋಪಾಲದಾಸ (ಗೋಪಾಲವಿಠಲ) ಆನಂದದಾಸ (ಹಯವದನವಿಠಲ) ಹೊನ್ನಾಳಿದಾಸ (ವೆಂಕಟವಿಠಲ) ಕೊಂಡಲಿ ಮಧ್ವಾಚಾರ್ಯ (ಗುರುಮಧ್ವೇಶವಿಠಲ) ಮೋಹನದಾಸ (ಮೋಹನವಿಠಲ) ಆದವಾನಿಯ ತಿಮ್ಮಣ್ಣದಾಸ (ವೇಣುಗೋಪಾಲವಿಠಲ) ಶೇಷಗಿರಿದಾಸ (ಹಯಗ್ರೀವವಿಠಲ) ವೆಂಕಟೇಶವಿಠಲ ಮಾನಪ್ಪದಾಸ (ಮಧ್ವವಿಠಲ) ರಾಮದಾಸ (ರಾಮಚಂದ್ರವಿಠಲ) ಹಾಗೂ ವೆಂಕಟರಾಮಾಚಾರ್ಯ (ವಾಸುದೇವವಿಠಲ) ಇವರಲ್ಲಿ ಗೋಪಾಲದಾಸ ಮೋಹನದಾಸ ವೇಣುಗೋಪಾಲದಾಸ ಮತ್ತು ಆನಂದದಾಸರು ದಾಸಸಾಹಿತ್ಯವನ್ನು ರಚಿಸಿ ಪ್ರಸಿದ್ಧರಾಗಿದ್ದಾರೆ ಆದವಾನಿಯ ತಿಮ್ಮಣ್ಣನವರು ಆದವಾನಿ-ರಾಯಚೂರು ಪ್ರದೇಶವನ್ನಾಳುತ್ತಿದ್ದ ಬಸಾಲತ್ ಜಂಗನ ದಿವಾನರಾಗಿದ್ದರು ಆನಂದದಾಸರ ವಿಜಯದಾಸರ ಸ್ವಂತ ಸೋದರರು ವಿಜಯದಾಸರ ಮಗ ಶೇಷಗಿರಿದಾಸ ಮತ್ತು ಸಾಕುಮಗ ಮೋಹನದಾಸ ಪ್ರಸಿದ್ಧರಾದ ಜಗನ್ನಾಥದಾಸರು ವಿಜಯದಾಸರ ಶಿಷ್ಯರಾದ ಗೋಪಾಲದಾಸರ ಶಿಷ್ಯರು ಇವರೆಲ್ಲರಿಗೂ ವಿಜಯದಾಸರ ಬಗ್ಗೆ ಅಪಾರ ಪ್ರೀತಿಗೌರವವಿತ್ತು ಗೋಪಾಲದಾಸರು ಯಾದಗಿರಿ ಕ್ಷೇತ್ರದಲ್ಲಿ ವಿಜಯದಾಸರಿಂದ ಕ್ಷಯ ಸಂವತ್ಸರದ ಮಾರ್ಗಶಿರ ಶುದ್ಧ ತ್ರಯೋದಶಿ ಶುಕ್ರವಾರ, ಅಶ್ವಿನಿನಕ್ಷತ್ರವಿದ್ದಾಗ ಅಂಕಿತೋಪದೇಶವನ್ನು ಪಡೆದರೆಂದು ತಿಳಿದು ಬರುವುದು ಈ ತೇದಿವಿವರಗಳು ಕ್ರಿ ಶ 1746ರ ನವೆಂಬರ್ 14, ಶುಕ್ರವಾರ ಅಶ್ವಿನಿ ನಕ್ಷತ್ರಕ್ಕೆ ಸರಿಯಾಗಿ ಹೊಂದಿಕೆಯಾಗುತ್ತವೆ[1] ವಿಜಯದಾಸರ ಮಗ ಶೇಷಗಿರಿದಾಸರು ವಿಧಿ ಸಂವತ್ಸರದ ಭಾದ್ರಪದ ಶುಕ್ಲ ಬಿದಿಗೆ ಭಾನುವಾರದಂದು ವೈಕುಂಠವಾಸಿಗಳಾದರೆಂದು ತಿಳಿದು ಬರುತ್ತದೆ ಈ ವಿವರಗಳು ಕ್ರಿ ಶ 1751ರ ಆಗಸ್ಟ್ 11 ಭಾನುವಾರಕ್ಕೆ ಸಮನಾಗುತ್ತವೆ[2]

ವಿಜಯದಾಸ ಶಿಷ್ಯ ಪ್ರಶಿಷ್ಯರ ಕೃತಿಗಳಲ್ಲಿ ಅವರನ್ನು ಕುರಿತ ಸ್ತುತಿ ಕಂಡು

---

1 L D Swami Kannu Pillai *An Indian Ephimeris* p 295

2 ಅದೇ p 305

ಬರುತ್ತದೆ ಅವರ ಶಿಷ್ಯ ಸಮುದಾಯ ದ ಭಕ್ತಿಯ ನ್ನ ಗೋಪಾಲದಾಸರ ಈ ವಾಣಿ ಪ್ರತಿನಿಧಿಸುತ್ತದೆ

ವಿ ಎಂದು ಜಪಿಸಲು ವಿರಕುತಿ ದೊರಕ ವುದು
ಜ ಎನ್ನೆ ಜನನ ವ ರಣ ನಾಶವು
ಯ ಎನೆ ಎಲ್ಲದಕ್ಕಂತ ಭಕುತ್ಯಧಿಕತ್ವ
ದ ಯ ಎನ್ನ ರಾಯರಾಯ ನ ತೋರ್ಪವುದು

**ಭಾಷೆ ಮತ್ತು ಶೈಲಿ** ವಿಜಯ ದಾಸರು ಉಭಯ ಭಾಷಾವಿಶಾರದರು ಮಾತ್ರವಲ್ಲ ಇತರ ಕೆಲವು ಭಾಷೆಗಳ ಪರಿಚಯವೂ ಇದ್ದಿತು ಅವರ ರಚನೆಗಳಲ್ಲಿ ಕೆಲವು ತೀರ ಸಂಸ್ಕೃತಭೂಯಿಷ ವಾಗಿವೆ ಉದಾಹರಣೆಗೆ

ಶ್ರುತಿತತಿನುತೆ ಸರ್ವದ ಸಂಚರಣೆ ನಿ
ರುತ ಕನ್ಯೆ ಉದಯಾರ್ಕಶತಕೋಟಿ ಸನ್ನಿಭೆ ಆ
ಪ್ರತಿಹತ ಹರಿಯಂಕ ಸಂಸ್ಥೆ ಚತ ರೆ
ಚತ ರ ಕಪರ್ದಿಯ ಂಭ್ರಣಿ ಹ್ರೀ ಉತ್ಪತ್ತಿ
ಸ್ಥಿತಿಲಯ ಕರ್ತೇ ಶ ಭ್ರಶೋಭನ ಗಾತ್ರೆ

ಇತ್ಯಾದಿ ಕಾಶೀವಿಶ್ವೇಶ್ವರ ಶಂಕರನಾರಾಯಣ ಮುಂತಾದ ಸ್ತುತಿಗಳು ಸಹ ಸಂಸ್ಕೃತಮಯವಾಗಿವೆ ಅಷ್ಟೇ ಸರಳ ಕನ್ನಡದಲ್ಲಿಯೂ ಅವರು ರಚನೆ ಮಾಡಬಲ್ಲ ವರಾಗಿದ್ದರು ಉದಾಹರಣೆಗೆ

ಮನಸ ಿಲ್ಲಿಸುವುದು ಬಹಳಕಷ್ಟ
ಗುಣಿಸುವುದು ನಿಮ್ಮೊಳಗೆ ನೀವೆ ನೆಲೆಬಲ್ಲವರು

ಮುಂತಾದ ಕೃತಿಗಳನ್ನು ನೋಡಬಹುದು ಸಿಂಹ ಗಜ ವೃಷಭ ಶರಬ ಹಯ ಮತ್ತು ಅಂತ್ಯಪ್ರಾಸಗಳಿಗೆ ಚಿತ್ರಕವಿತೆಗೆ ಶಬ್ದಾಲಂಕಾರಕ್ಕೆ ಅವರ ರಚನೆಗಳಲ್ಲಿ ನಿದರ್ಶನಗಳು ಲಭಿಸುತ್ತವೆ ಅವರ ಭಾಷೆಯಲ್ಲಿ ಆಡುಮಾತುಗಳೂ ಸಾಕಷ್ಟು ದೊರೆತಿವೆಯಲ್ಲದೆ ತೆತ್ತೀಸ ಮುಂತಾದ ಇತರ ಭಾಷಾ ಶಬ್ದಪ್ರಯೋಗಗಳೂ ಕಾಣ ಸಿಗುತ್ತವೆ ಅವರ ರಚನೆಗಳಲ್ಲಿ ಆಳವಾದ ಶಾಸ್ತ್ರಾಧ್ಯಯನ ಸೂಕ್ಷ್ಮಜೀವನದೃಷ್ಟಿ ವರ್ಣನಾ ಸೌ ದರ್ಯ ಉಪಮೆಗಳ ಸ್ವಾರಸ್ಯ ಮತನಿಗೆ ಕಂಡುಬರುವಂತೆಯೇ ವಚನ ಸಾಹಿತ್ಯ ವ ತ್ತು ಪುರಂದರ ಕ ತಿಗಳ ಪ್ರಭಾವ ಸಹ ಗೋಚರಿಸುತ್ತದೆ ಅವರ ಶೈಲಿಯ ಮ ಲೆ ಜನಪದ ಸಾಹಿತ್ಯದ ಪ್ರಭಾವವಿರುವ ಸಾಧ್ಯತೆಯೂ ಉಂಟು

ಅವರ ರಚನೆಗಳಲ್ಲಿ ಇಂಥ ಕೆಲವು ಸಾಲುಗಳು ಮನಸ್ಸಿನಲ್ಲಿ ಸ್ಥಿರವಾಗಿ ನಿಲ್ಲುತ್ತವೆ

ದುರ್ಜನ ಸಂಗವೆಂಬುದು ಎಂದಿಗೂ ನೊಣ ಬೆರೆಸಿದ ಊಟ
ಈ ಶರೀರ ಗಾಳಿಗೊಡ್ಡಿದ ದೀಪ
ಸಾಲವ ಮಾಡಲಿಬೇಡ ಸಾಲದೆಂದೆನಬೇಡ
ಹರಿಗರ್ಪಿಸಿದ ಕರ್ಮ ಸೂಳೆಗೆ ನೀಡಿದ ವಿತ್ತ
ಹರಿಯು ಡೊಂಕಾದರೆ ಹರಿವ ನೀರು ಡೊಂಕೆ ?
ಮಣ್ಣು ಕೂಡಿಸಿ ಧಾನ್ಯ ಮಾರುವವನೆ ಹೊಲೆಯ
ಓದು ಕಲಿತ ಪಂಡಿತ ಏಕಾದಶಿಲಿ ಉಂಡಂತೆ !
ಒಣ್ಣೆಯೊಳಗಿನ ಕೂದಲು ತೆಗೆದಂತೆ
ರತುನ ಬೆಲೆಯು ಹಾಕಿ ಪತ್ತ್ಯವ ಕೊಂಡಂತೆ
ಎತಿಗೆ ಛತ್ರದ ಚಿಂತೆ ಯಾತಕ್ಕೆ ?
ಅಂಗಣದೊಳು ಪಕ್ಕಿ ಕುಳಿತು ಹಾರಿದಂತೆ
ಕಾಮಕ್ರೋಧದಲ್ಲಿ ತಿರುಗಲು ಮಡಿಯಿಲ್ಲ

ಈ ಪಟ್ಟಿಯನ್ನು ಇನ್ನು ಬೆಳೆಸುತ್ತ ಹೋಗಬಹುದು. ಮಣ್ಣುಕೂಡಿಸಿ ಧಾನ್ಯ ಮಾರುವವನೆ ಹೊಲೆಯ ಎಂಬುದು ಅವರ ಸಾಮಾಜಿಕ ದೃಷ್ಟಿಯ ಅಭಿವ್ಯಕ್ತಿಯಾಗಿದ್ದರೆ ತುಳಸಿ ಇಲ್ಲದ ಸದನ ಹೊಲೆಮಾದಿಗರ ಸದನ ಎನುವುದು ಅವರ ಸಾಂಪ್ರದಾಯಿಕ ಧಾರ್ಮಿಕ ನಿಲುವಿನ ಪ್ರತೀಕವಾಗುತ್ತದೆ. ವಿಜಯರ ದಾಸರ ಜೀವನದಲ್ಲಿ ಹಲವು ಪವಾಡಗಳೂ ಸಂಭವಿಸಿದವಂತೆ. ಸಾಕುಮಗ ಮೋಹನದಾಸರಿಗೆ ಅಪಮೃತ್ಯುವಾದಾಗ ಇವರು ಬದುಕಿಸಿದರಂತೆ. ಮನ್ನಾರಿನ ಕೃಷ್ಣ ಬಾಲಕನ ವೇಷದಲ್ಲಿ ಬಂದು ಇವರನು ಆಟ ಆಡಿಸಿದನಂತೆ. ಇಂಥ ಪವಾಡಗಳು ಅನೇಕ ಹರಿದಾಸರ ಬಗೆಗೂ ಅನ್ವಯಿಸುವುದುಂಟು.

ವಿಜಯ ದಾಸರ ಸುಮಾರು ಸಾವಿರದ ಇನ್ನೂರು ಕೃತಿಗಳು ಉಪಲಬ್ಧವಾಗಿವೆ. ಇವುಗಳಲ್ಲಿ ಕೀರ್ತನೆಗಳು 550 ಮತ್ತು ಉಗಾಭೋಗಗಳು 71. ಸುಳಾದಿಗಳ ಸಂಖ್ಯೆ ಹೆಚ್ಚು (580). ಅವರನು ಸುಳಾದಿದಾಸರೆಂದೇ ಕರೆಯಬಹುದು. ಆನಂದತೀರ್ಥರ ಮತವನ್ನು ವಿಶದಗೊಳಿಸುವ ಸುಳಾದಿಗಳು ಶಾಸ್ತ್ರಜ್ಞಾನ ನಿಬಿಡವಾದ ಅಕ್ಷಯ ನಿಧಿಗಳಾಗಿವೆ. ಅವರ ಕೀರ್ತನೆಗಳು ದ್ರಾಕ್ಷಾಪಾಕವಾದರೆ ಸುಳಾದಿಗಳು ನಾರಿಕೇಳಪಾಕವೆನಿಸಿವೆ. ಇವರ ಕೃತಿಗಳಲ್ಲಿ ಲಾಲಿತ್ಯದ ಅಂಶ ಕಡಿಮೆ. ಇತರ ದಾಸರಲ್ಲಿ ಕಂಡುಬರುವಷ್ಟು ವೈವಿಧ್ಯ ಇಲ್ಲ.[1] ಹಾಗಿದ್ದರೂ ವಾದಿರಾಜರ

1 ಕರ್ನಾಟಕ ವಿಷಯ ವಿಶ್ವಕೋಶ ಪುಟ ೧೧೪

ವೈದುಷ್ಯ ಪುರಂದರದಾಸರ ಪ್ರಸನ್ನತೆ ಕನಕದಾಸರ ಖಂಡಿತೋಕ್ತಿಗಳಿಂದ ಹರಿದಾಸಸಾಹಿತ್ಯದ ವೈಶಿಷ್ಟ್ಯ ವೈವಿಧ್ಯಗಳು ಹೆಚ್ಚಿರುವಂತೆಯೇ ವಿಜಯದಾಸರ ವಿಚಾರಧಾರೆಯಿಂದ ಅದು ಅತ್ಯಮೂಲ್ಯವೆನಿಸಿದೆ [1] ಕಾರಣಾಂತರಗಳಿಂದ ನಿಂತು ಹೋಗಿದ್ದ ದಾಸವಾಙ್ಮಯಕ್ಕೆ ಪುನಶ್ಚೇತನ ನೀಡಿದ ವಿಜಯದಾಸರ ಸ್ಥಾನ ಪ್ರಮುಖವೂ ವಿಶಿಷ್ಟವೂ ಆಗಿದೆ ಎನ್ನುವುದರಲ್ಲಿ ಯಾವ ಸಂದೇಹವೂ ಇಲ್ಲ

## ಆಧಾರ ಗ್ರಂಥಗಳು


೧ ಡಾ॥ ಕೆ ಗೋಕುಲನಾಥ್ ಶ್ರೀ ವಿಜಯದಾಸರು ಜೀವನ ವ ತು ಸಮೀಕ್ಷೆ (೧೯೭೮)
೨ ಪಾವಂಜೆ ಗ ರ ರಾವ (ಸಂ) ಶ್ರಿ ವಿಜಯದಾಸ ಸುಳಾದಿಗಳು ಭಾಗ ೧ ೨ (೧ ೩೯)
3 ದಾಸಸಾಹಿತ್ಯ ದ್ವಿತೀಯ ಘಟ ದ ಸಾಧನೆ (೧ ೭೦)
೪ ಜ ವರದರಾಜರಾವ ಹರಿದಾ ಹೃದಯ (೧೯೬೭)
೫ ಗೋರಬಾಳ ಹನಮಂತಶ ವ್ ವಿಜಯ ದಾಸರ ಪ್ರಾರ್ಥನಾಭಾಗ ಸುಳಾದಿಗಳು (೧೯೪೬)
೬ ತೀರ್ಥಕ್ಷೇತ ಮಹಿಮಾ ಸುಳಾದಿಗಳು (೧೯೪೯)
೭ ಸಾಧನಭಾಗ ಸ ಳಾದಿಗಳು ಭಾಗ-೨ (೧೯೫೦)
೮ ಪ್ರಮೇಯ ಭಾಗ ಸುಳಾದಿಗಳು (೧೯೫೦)
೯ ಸ್ತೋತ್ರ ಭಾ ಗ ಸುಳಾದಿಗಳು (೧ ೫೨)
೧೦ ಉಪಾ ನಾಭಾಗ ಸುಳಾದಿಗಳು (೧೯೫೨)
೧೧ ವಿಜಯ ದಾಸರ ಪದಗಳು ಭಾಗ ೧ (೧೯೫೫)
೧೨ ವಿಜಯದಾಸರ ಪದಗಳು ಭಾಗ ೨ (೧ ೫೫)
೧೩ ವಿಜಯದಾ ರ ಸಂಕ್ಷಿಪ ಜೀವನ ಚರಿತ್ರ (೧೯೫೫)
೧೪ ಸುಬೋಧ ಎಂ ರಾಮರಾವ್ ಶ್ರೀ ವಿಜಯದಾಸರ ಕ ತಿಗಳು (ದ್ವಿ ಮು )
೧೫ ಕಾವ್ಯಪ್ರೇಮಿ (ಸಂ) ವಿಜಯದಾಸರ ಹ ಡುಗಳು (೧ ೭೬)
೧೬ ಎಚ ಎಸ ವೆಂಕಟೇಶಮೂರ್ತಿ ಕೀರ್ತನಕಾರರು (೧೯೭೫)
೧೭ ಆರ್ ಎಸ ಪಂಚಮುಖಿ ಹರಿದಾಸ ಸಾಹಿತ್ಯ
೧೨ ಪ್ರಬುದ ಕರ್ನಾಟಕ ಸಂಪುಟ ೭೪ ಸಂಚಿಕೆ ೨ ಪುಟ ೮೧ ೯೮
೧೯ ಬೇಲೂರ ಕೆ ಶವದಾಸ ಕರ್ನಾಟಕ ಭಕ ವಿಜಯ ಇತ್ಯಾದಿ


1 ಡಾ॥ ಜಿ ವರದರಾಜರಾವ್ ; ಹರಿದಾಸಹ ದಯ ಪುಟ ೧೭೫

# ಪ್ರಸನ್ನ ವೆಂಕಟದಾಸರು

ವೈ ಸಿ ಭಾನುಮತಿ

ಕನ ಡ ಸಾಹಿತ್ಯದಲ್ಲಿ ಹೆಚ್ಚಿನ ಆಂದೂ ಎಗ ಪ್ರವೃತ್ತಿಯನ್ನು ತೋರಿದವರಲ್ಲಿ ವಚನಕಾರರು ಮತ್ತು ಹರಿದಾಸರು ಪ್ರಮುಖರು ಹರಿದಾಸರು ರಚಿಸಿದ ಸಾಹಿತ್ಯ ಭಕ್ತಿಪ್ರಚಾರ ಮತ್ತು ವ ತಪ್ರಚಾರಕ್ಕಾಗಿ ಹುಟ್ಟಿಕೊಂಡದ್ದಾದರೂ ವಸ್ತು, ಭಾಷೆ ಛಂದಸ್ಸುಗಳಿಂದಾಗಿ ಅದು ವಿಶಿ ಷವಾದ ಕಾವ್ಯವೆನಿಸಿಕೊಂಡಿದೆ ವಿದ್ವಾಂಸರು ದಾಸ ವಾಜ ಯವನ್ನು ನಾಲ್ಕು ಘಟ್ಟಗಳಲ್ಲಿ ಗ ರುತಿಸ ತ್ತಾರೆ ಮಧ್ವಾಚಾರ್ಯರ ಶಿಷ್ಯ ರಾದ ನರಹರಿತೀರ್ಥರ ನೇತೃತ್ವದಲ್ಲಿ ಹದಿನೂರನೆಯ ಶತಮಾನದಲ್ಲಿ ನಡೆದ ಸಾಹಿತ್ಯ ಸೃಷ್ಟಿ ದಾಸಸಾಹಿತ್ಯದ ಪ್ರಥಮಘಟ್ಟ ವ್ಯಾಸರಾ ಯ ರ ಗ ರ ತ್ವದಲ್ಲಿ ಹದಿನಾರನೆಯ ಶತಮಾನದಲ್ಲಿ ಪುರಂದರದಾಸರು ಕನಕದಾಸರು ಪ್ರಕಟಮಾಡಿದಂತಹ ಸಾಹಿತ್ಯ ರಚನೆ ದ್ವಿತೀಯಘಟ್ಟ ವಿಜಯ ದಾಸರ ಮುಂದಾಳತ್ವದಲ್ಲಿ ಹೊರಬಂದ ದಾಸರದು ವ ೂರನೆಯಘಟ್ಟ ಪ್ರಾಣೇಶ ಗುರ ಪ್ರಾಣೆ ಶ ಮೊದಲ ದ ದಾಸರು ದಾಸಸಾಹಿತ್ಯ ವನು ಸಂರಕ್ಷಿಸಲು ಪ್ರಯತ್ನಿಸಿ ರಚನೆಮಾಡಿದ ಘಟ್ಟ ನಾಲ್ಕನೆಯದು ಪ್ರಸನ್ನ ವೆಂಕಟದಾಸರು ದಾಸಸಾಹಿತ್ಯದ ಬೆಳವಣಿಗೆಯ ಮೂರನೆಯ ಹಂತದಲ್ಲಿ ಬಂದವರು ಇವರು ವಿಜಯ ದಾಸರ ಸಮಕಾಲೀನರು

ಪ್ರಸನ ವೆಂಕಟದಾಸರ ಇತಿವೃತ್ತಗಳ ಅವರ ಕೃತಿಗಳಿಂದ ತಿಳಿದು ಬರುವುದಿಲ್ಲ ಬಾಗಲಕೋಟೆಯ ಭಾಗದಲ್ಲಿ ಪ್ರಚಲಿ ವಿರುವ ಸಂಗತಿಗಳಿಂದ ವ ತ್ತು ದ ನಪತ್ರಗಳ ಆಧಾರದಿ ದ ಪ್ರಸನ ವೆಂಕಟದಾಸರ ಜೀವಿತದ ಬಗೆಗೆ ಕೆಲವು ಮಾಹಿತಿಗಳು ದೊರೆ ತಿವೆ ಅವನು ಹೀಗೆ ಸಂಗ್ರಹಿಸಬಹ ದು-ಪ್ರಸನ್ನವೆಂಕಟದಾಸರ ಪೂರ್ವಜರು ಬಿಜಾಪುರ ಜಿಲ್ಲೆಗೆ ಸೆ ರಿದ ಬಾಗಲಕೊ ಟೆ ತಾಲ್ಲೂಕಿನ ಕಾಖಂಡಕಿ ಎಂಬ ಗ್ರಾಮದ ವರು ಇವರ ತಂದೆ ಕಾಖಂಡಕಿಯನು ಬಿಟ್ಟು ಬಾಗಲಕೋಟೆಗೆ ಬಂದು ನೆಲಸಿದ ರೆಂದು ತೋರುತ್ತದೆ ಕಾಖಂಡಕಿ ಗ್ರಾವ ಕ್ಕೆ ಸೆ ರಿದವರಾಗಿದ್ದರಿಂದ ಪ್ರಸನ ವೆಂಕಟದಾ ರ ತಂದೆ ಕಾಖಂಡಕಿ ನರ ಸ್ಪಯ್ಯನೆಂದು ಪ್ರಸಿದ್ಧರಾಗಿದ್ದರು ನರಸಪ್ಪಯ ನವರ ಪತಿ ಲಕ್ಷ್ಮಿಬಾಯಿ ಈ ದಂಪತಿಗಳಿಗೆ ಇಬ್ಬರು ಪುತ್ರರು ಇವರಲ್ಲಿ ಕಿರಿಯವನೆ ಮುಂದೆ ಪ್ರಸನ ವೆಂಕಟದಾಸರೆಂದು ಪ್ರಸಿದ್ಧನಾದ ವೆಂಕಟೆ ಶ ಮನೆಯಲ್ಲಿ ವೆಂಕಟೆ ಶನನ್ನು ವೆಂಕಪ್ಪಯ್ಯ ಎಂದು ಕರೆಯುತ್ತಿದ್ದರು ವೆಂಕಪ್ಪಯ್ಯನ ಜನನ ಯಾವಾಗ ಆಯಿತೆಂಬುದಕ್ಕೆ ಖಚಿತವಾದ ಆಧಾರಗಳಿಲ್ಲ ಡಾ|| ಎ ಟಿ ಪ ಟಿ ಲರು ಇವರ ಜನನದ ಕ ಲವನ್ನು ಕ್ರಿ ಶ ೧೬೮೦ ಇರಬಹುದೆಂದು ಊಹಿಸಿ ದ್ದಾರೆ ಸದ್ಯದಲ್ಲಿ ಇದೇ ಅಭಿಪ್ರಾಯವನ್ನು ಅಂಗೀಕರಿಸಬಹುದು

ವೆಂಕಪ ಯ್ಯನ ಬಾಲ್ಯದದಿನಗಳು ಸುಖಕರವಾಗಿರಲಿಲ್ಲ ಎಳೆಯ ಬಾಲಕ ನ ಗಿದ್ದಾಗಲೆ ತಂದೆತಾಯಿಗಳನ್ನು ಕಳೆದುಕೊಂಡನು ಆದ್ದರಿಂದ ಇವನ ಪಾಲನೆ ಪೋ ಷಣೆಗಳ ಹೊಣೆ ಅಣ್ಣನ ಮೇಲೆ ಬಿದ್ದಿತು ಅಣ್ಣನಿಗೆ ವಿವಾಹವಾಗಿತ್ತು, ಅತ್ತಿಗೆಗೆ ವೆಂಕಪ್ಪಯ್ಯನಲ್ಲಿ ಹೇಳಿಕೊಳ್ಳುವಂಥ ಅಕ್ಕರೆ ಇರಲಿಲ್ಲ ಆಕೆ ಹೊತ್ತು ಹೊತ್ತಿಗೆ ಊಟವನು ಹಾಕುತ್ತಿರಲಿಲ್ಲ ಹೀಗೆ ಹಿರಿಯರ ಉಪೇಕ್ಷೆಗೊಳಗಾಗಿ ಬೆಳೆದ ವೆಂಕಪ್ಪಯ್ಯನಿಗೆ ಬಾಲ್ಯದಲ್ಲಿ ವಿದ್ಯಾಭ್ಯಾಸ ಕೂಡ ಆಗಲಿಲ್ಲ ಅಣ್ಣ ಪುರಾಣ ವಾಚನ ಮಾಡುತ್ತಿದ್ದ ಪುರಾ ಣ ವಾಚನದಿಂದಾಗಿ ಆತ ಬಾಗಲಕೋಟೆಯ ಆಸುಪಾಸಿನ ಹಳ್ಳಿಗಳಲ್ಲೆಲ್ಲ ಜನಪ್ರಿಯನಾಗಿದ್ದನು ವೆಂಕಪ್ಪಯ್ಯನ ಮನೆಯ ಆರಾಧ್ಯದೈವ ತಿರುಪತಿ ವೆಂಕಟೇಶ ಆದ್ದರಿಂದ ಮನೆಯಲ್ಲಿ ಪ್ರತಿನಿತ್ಯ ವೆಂಕಟೇಶ್ವರನಸ್ತುತಿ ನಡೆಯುತ್ತಿತ್ತು. ಹುಡುಗ ವೆಂಕಪ್ಪಯ್ಯನ ದಿನಚರಿ ದನಗಳನು ಮೇಯಿಸ ವುದ ರಲ್ಲಿ ಅತ್ತಿಗೆಗೆ ಮನೆಗೆಲಸಗಳನು ಮಾಡಿಕೊಡುವುದರಲ್ಲಿ ಸಾಗುತ್ತಿತ್ತು,

ವೆಂಕಪ್ಪಯ್ಯನು ಕಷ್ಟದಿಂದ ಬದ ಕ ನೂಕುತ್ತಿರುವಲ್ಲಿ ಒಂದು ಘಟನೆ ನಡೆಯಿ ತೆಂದು ಹೇಳುತ್ತಾರೆ-ಒಂದ ದಿನ ಎಂದಿನಂತೆ ಈತ ದನಗಳನು ಮೇಯ ಲು ಅಟ್ಟಿ ಬಂದು ಮ ನೆಗೆಲಸ ಮಾಡುತ್ತಿದ್ದನು ಬೇಸಗೆಯ ಕಾಲ ವೆಂಕಪ್ಪಯ್ಯನಿಗೆ ಹೊಟ್ಟೆ ತ ಿಬ ಊಟವಿಲ್ಲ ಬೇಸಗೆಯ ತಾಪ ಆತನನ್ನು ಮ ತ್ತಷ್ಟು ಬಳಲುವಂತೆ ಮಾಡಿತ್ತು ಆತ ಬಾಯಾರಿಕೆಯನು ತ ಳಲಾರದೆ ಅತ್ತಿಗೆಯ ಲ್ಲ ಕುಡಿಯಲು ಮ ಜ್ಜಿಗೆಯನ್ನು ಬೇಡಿದ ವೆಂಕಪ್ಪಯ್ಯ ಮಜ್ಜಿಗೆ ಕೇಳಿದ್ದು ಅತ್ತಿಗೆಗೆ ಪ್ರಮಾದವಾಯಿತು ಆಕೆ ಮ ಜ್ಜಿಗೆಯ ನು ನಿ ಡದೆ ಆತ ಗೆ ನಿಷು ರದ ನುಡಿಗಳನ್ನಾಡಿ ಮೂದಲಿಸಿದಳು ಇದರಿಂದ ವೆ ಕಪ್ಪಯ್ಯನ ಮ ನಸ್ಸಿಗೆ ಆಘಾತವಾಯಿ ತು ಆತನಿಗೆ ಅಣ್ಣ ಅತ್ತಿಗೆ ಯರ ಆಶ್ರಯದಲ್ಲಿರ ವುದು ಬೇಡವೆನಿಸಿತು ಆದರೆ ಮ ಂದೆ ನು ? ವೆಂಕಪ್ಪಯ್ಯ ನಿಗೆ ತನ್ನ ನೆಚ್ಚಿನ ದೈವ ವೆಂಕಟರಮಣನ ತಿರುಪತಿಯನು ಸಂದರ್ಶಿಸಬೇಕೆಂಬ ಅಪೇಕ್ಷೆ ಉಂಟಾಯಿತು ಆತ ಅತ್ತಿಗೆಗೆ ನಾನು ತಿರ ಪತಿಗೆ ಹೋದೆನೆಂದು ಅಣ್ಣನಿಗೆ ಹೇಳಿ ಎಂದು ನ ಡಿದು ತಿರುಪತಿಯತ್ತ ಪ್ರಯಾಣಬೆಳಸಿದ ಇದು ವೆಂಕಪ್ಪಯ್ಯನ ಜೀವನದ ಮುಖ್ಯ ತಿರುವು

ತಿರುಪತಿಯಲ್ಲಿ ವೆಂಕಪ್ಪಯ್ಯನು ಶ್ರೀನಿವಾಸನ ದರ್ಶನ ಪಡೆದು ತಂಗಿದ್ದನು ಹರಿದಾಸರು ಪ್ರತಿವರ್ಷ ಬ್ರಹ್ಮೋತ್ಸವಕ್ಕೆಂದು ತಿರ ಪತಿಗೆ ಹೋಗಿ ಬರುವುದು ಸಂಪ್ರದ ಯ ಅಂತೆಯೆ ಹರಿದಾಸರ ಅಂಥ ತಂಡವೊಂದು ತಿರ ಪತಿಗೆ ಬಂದಿತು ಗೆಜ್ಜೆ ಕಟ್ಟಿಕೊಂಡು ಕ ಣಿಯುತ್ತ ಹಾಡು ನೃತ್ಯ ಗೀತೆಗಳಿಂದ ಪರಮಾತ್ಮ ಸೇವೆಗೈ ಯುತ್ತಿದ್ದ ಹರಿದಾಸರನು ನೋಡಿ ವೆಂಕಪ್ಪಯ್ಯನಿಗೂ ಸ್ಫೂರ್ತಿ ಉಂಟಾ ಯಿತು ಹರಿದಾಸನಾಗಬೇಕೆಂಬ ಹೊಸ ಒಸೆ ಅಂಕ ರವ ಯಿತು ಇದು ಅವನ ಬದುಕಿನ ಧ್ಯೇಯವಾಯಿತು ಹರಿದಾಸನಾಗುವ ಹಂಬಲದಿ ದ ಆತ ವೆಂಕಟೇಶನನ್ನು ಧ್ಯಾನಿಸುತ್ತ ಭಾವಸಮಾಧಿಗೆ ಏರಿದನು ಸ್ಮೃತಿ-ವಿಸ್ಮೃತಿಯಂ

ನಡುವೆ ಆತನಿಗೆ ಭಗವಂತನ ಸಾಕ್ಷಾತ್ಕಾರವಾಯಿತು ಸ್ವತಃ ಶ್ರೀನಿವಾಸ ಆತನ ನಾಲಗೆಯಲ್ಲಿ ವೆಂಕಟೇಶ ಎಂದು ಬರೆದಂತೆ ಭಾಸವಾಯಿತು ಎಚ್ಚರವಾದಾಗ ವೆಂಕಪ್ಪಯ್ಯ ಹರಿದಾಸನಾಗಿ ಪರಿವರ್ತಿತನಾಗಿದ್ದನು ಸುಪ್ತವಾಗಿದ್ದ ಅವರ ಕವಿ ಚೇತನಕೆ ವಿದ್ಯುತ್‌ಸ್ಪರ್ಶವಾದಂತಾಯಿತು ಪ್ರಸನ ವೆಂಕಟ ಎಂಬ ಅಂಕಿತವನು ಇಟ್ಟುಕೊಂಡು ಭಾವತೀವ್ರತೆಯಿಂದ ಹಾಡಲು ಪ್ರಾರಂಭಿಸಿದರು ಅದು ಕಾವ್ಯವಾಗಿ ಹೊರಬಂದಿತು ಪ್ರಸನ್ನವೆಂಕಟರು ಕೆಲವು ಕಾಲ ತಿರುಪತಿಯಲ್ಲಿ ನೆಲಸಿದರು ಅವರ ಬಾಳಿನ ಕತ್ತಲೆ ಸರಿಯಿತು ಅವರಿಗೆ ವಿದ್ಯಾಭ್ಯಾಸ ಮಾಡಬೇಕೆನಿಸಿತು ಅದಕ್ಕಾಗಿ ಸೂಕ್ತ ಗುರುವಿಗಾಗಿ ಅನ್ವೇಷಿಸಿದರು ಮುದ್ಗಲ ಜನಾರ್ದನಾಚಾರ್ಯ ಎಂಬುವರ ಶಿಷ್ಯರಾಗಿ ಸಂಸ್ಕೃತವನು ಕಲಿತರು ರಾಮಾಯಣ ಮಹಾಭಾರತ ಭಾಗವತಗಳನ್ನು ಅಧ್ಯಯನ ಮಾಡಿದರು ಇದರಿಂದಾಗಿ ಅವರ ಕಾವ್ಯಶಕ್ತಿಗೆ ಖಚಿತತೆ ಉಂಟಾಯಿತು ಪಾಂಡಿತ್ಯ ಭಗವದ್ದರ್ಶನಗಳು ಲಭ್ಯವಾದ ಬಳಿಕ ಪ್ರಸನ್ನ ವೆಂಕಟದಾಸರು ಬಾಗಲಕೋಟೆಗೆ ವಾಪಸು ಬಂದರು ಬಾಗಲಕೋಟೆಯಲ್ಲಿ ಅವರು ವಾಸಿಸುತ್ತಿದ್ದರೆಂದು ಹೇಳುವ ಮನೆ ಮತ್ತು ಅವರು ಉಪಯೋಗಿಸುತ್ತಿದ್ದರೆಂದು ತೋರಿಸುವ ತಂಬೂರಿ ಗೆಜ್ಜೆಯ ಸರ ಕೈಕೋಲು ಗೋಪಾಳ ಬುಟ್ಟಿಯನ್ನು ಈಗಲೂ ಸಂರಕ್ಷಿಸಲಾಗಿದೆ

ಪ್ರಸನ ವೆಂಕಟದಾಸರು ತಿರುಪತಿಯಿಂದ ಹಿಂದಿರುಗಿದ ಬಳಿಕ ಹರಿಭಕ್ತಿ ಪ್ರಸಾರವನ್ನು ಕೈಗೊಂಡರು ಇತರ ಹರಿದಾಸರಂತೆ ಇವರು ತೀರ್ಥಕ್ಷೇತ್ರ ಸಂಚಾರವನು ಅಷ್ಟಾಗಿ ಮಾಡಲಿಲ್ಲವೆಂದು ತೋರುತ್ತದೆ ಉತ್ತರ ಕರ್ನಾಟಕದ ಹುಬ್ಬಳ್ಳಿ ಕುಷ್ಟಗಿ ಬಂಕಾಪುರ ವಿಜಯಪುರ ಎಾಶ್ರೀಕೋಟಿ ತಡಸ ಶಿರೂರು ಮೊದಲಾದ ಭಾಗಗಳಲ್ಲಿ ಸಂಚರಿಸಿದ್ದರೆಂದು ತಿಳಿದು ಬರುತ್ತದೆ ಬಹುಶಃ ಈ ಕಾರಣದಿಂದಾಗಿ ಪ್ರಸನ ವೆಂಕಟದಾಸರ ಕೃತಿಗಳು ಉತ್ತರ ಕರ್ನಾಟಕದಲ್ಲಿ ಜನಪ್ರಿಯವಾದಷ್ಟು ಪ್ರಮಾಣದಲ್ಲಿ ಉಳಿದೆಡೆಗಳಲ್ಲಿ ಆಗಲಿಲ್ಲವೆಂದು ಹೇಳಬಹುದು ಇಂದಿಗೂ ಧಾರವಾಡ ಬಿಜಾಪುರ ಜಿಲ್ಲೆಗಳಲ್ಲಿ ಸಾಂಪ್ರದಾಯಿಕ ವೈದಿಕ ಮನೆತನದ ಸ್ತ್ರೀಯರು ಇವರ ಕೃತಿಗಳನ್ನು ಭಕ್ತಿಯಿಂದ ಹಾಡುತ್ತಾರೆ ಇವರ ಅನೇಕ ಕೀರ್ತನೆಗಳನ್ನು ಮುದವೀಡು ಕೃಷ್ಣರಾಯರು ಹಾಡುತ್ತಿದ್ದರಂತೆ

ಪ್ರಸನ ವೆಂಕಟದಾಸರು ತಮ್ಮ ವ್ಯಕ್ತಿತ್ವ ಮತ್ತು ಕೃತಿಗಳಿಂದಾಗಿ ಬಹಳ ಬೇಗ ಶಿಖರ ತಲುಪಿದರು ಇವರ ಬಗೆಗೆ ಜನರಲ್ಲಿ ಪ್ರೀತಿ ವಿಶ್ವಾಸಗಳ ಮೂಡಿದುವು ಶ್ರೀಮಂತರು ಸಬೇದಾರರು ಊರಿನ ಪ್ರಮುಖರು ಇವರಿಗೆ ದಾನ ದಕ್ಷಿಣೆಗಳನ್ನು ನೀಡಿ ಗೌರವಿಸಿದರು ಡಾ ಎ ಟಿ ಪಾಟೀಲರು ತಮ್ಮ ಕೃತಿಯಲ್ಲಿ ಪ್ರಸನ್ನ ವೆಂಕಟದಾಸರಿಗೆ ದೊರೆತ ದಾನದತ್ತಿಗಳ ವಿವರ‍್ಯನ್ನು ನೀಡಿದ್ದಾರೆ— ಕ್ರಿ ಸ ೧೭೨೩ರಲ್ಲಿ ಇಮ್ಮಡಿ ಹಣಮನಾಯಕನು ಪ್ರಸನ್ನ ವೆಂಕಟದಾಸರಿಗೆ ಹೊಲವನ್ನು ದತ್ತಿ ನೀಡಿದ್ದನು ಇದೇ ಅವಧಿಯಲ್ಲಿ ನಾನಾ ಮೇಲಗಿರಿ ದೇಸಾಯಿ ಮತ್ತು

ಸರ್ದೇಸಾಯಿ ಎಂಬುವರು ವ ಚಗಂಡಿ ಊರಿನಲ್ಲಿ ನಾಲ್ಕುಗಿದ್ದದ ಭೂಮಿಯನು ಕೊಟ್ಟು ಅದಕ್ಕೆ ಜೂಡಿ ಪಟ್ಟಿ ವಿಧಿಸ ವುದನ್ನು ರದ್ದುಮಾಡಿದ್ದರು

ಬಾದಾಮಿಯ ಕಿಲ್ಲೇದಾರನಾಗಿದ್ದ ಭೋಪರ್ಡೆ ಎಂಬಾತ ಪ್ರಸನ್ನ ವೆ ಕಟ ದಾಸರಿಗೆ ಬಾದಾಮಿಯಲ್ಲಿ ಎರಡು ಮನೆಗಳನು ದಾನವಾಗಿ ಕೊಟ್ಟಿದ್ದನು ಇದಲ್ಲದೆ ಹುಬ್ಬಳ್ಳಿ ಬಾಗಲಕೊ ಟೆ ತಡಸ ಕುಷ್ಟಗಿ ಮೊದಲಾದ ಊರುಗಳಿಂದ ಇವರಿಗೆ ವರ್ಷಾಶನ ದೊರೆಯುತ್ತಿತ್ತು ಈ ದಾನ ದತ್ತಿಗಳಿಂದ ಇವರ ಆರ್ಥಿಕಸ್ಥಿತಿ ಸುಧಾರಿಸಿತೆನ್ನಬಹುದು

ತಿರುಪತಿಯಿಂದ ಹಿಂದಿರುಗಿದ ಬಳಿಕ ಪ್ರಸನ್ನವೆಂಕಟದಾಸರಿಗೆ ವಿವಾಹವಾಯಿತೆಂದು ತೋರ ತ್ತದೆ ಇವರಿಗೆ ವೆಂಕಟಕೃಷ್ಣಾಚಾರ್ಯ ಎಂಬ ಮಗ ಜನಿಸಿದನೆಂದು ಹೇಳಿಕೆಯಿದೆ ವೆಂಕಟದಾಸರ ವಂಶಜರು ಬಿಜಾಪುರ ಜಿಲ್ಲೆಯ ಲ್ಲಿ ಈಗಲೂ ಇದ್ದಾರೆಂದು ತಿಳಿದು ಬರುತ್ತದೆ

ಒಬ್ಬ ವ್ಯಕ್ತಿ ಪ್ರಖ್ಯಾತನಾದರೆ ಅತನ ಸ ತ್ತ ದಂತಕಥೆಗಳು ಪವಾಡಗಳು ಹೆಣೆದು ಕೊಳ್ಳುವುದು ಸಾಮಾನ್ಯ ಇದಕ್ಕೆ ಪ್ರಸನ್ನ ವೆಂಕಟದಾಸರ ಕೂಡ ಹೊರತಾಗಿಲ್ಲ ಇವರ ಬಗೆಗೆ ಪ್ರಚಲಿತವಿರುವ ದಂತಕಥೆಗಳ ಇಂತಿವೆ ವೆಂಕಟದಾಸರು ಶಿಷ್ಯರೊಡನೆ ಊರಿಂದ ಊರಿಗೆ ಪ್ರಯಾಣ ಮಾಡ ವಾಗ ಕುದುರೆ ಏರಿ ಹೋಗುತ್ತಿದ್ದರು ಮೊದಲು ಶಿಷ್ಯರನ್ನು ಮು ಂದೆ ಕಳಿಸಿ ಅನಂತರ ದೇವರ ಸಾಮಾನುಗಳನ್ನು ಒಂದು ಕುದುರೆಯಮೇಲೆ ಹೇರಿ ತಾವು ಬೇರೊಂದು ಕುದುರೆಯಲ್ಲಿ ಹೋಗುತ್ತಿದ್ದರು ಕಾಡಿನ ಮಾರ್ಗದಲ್ಲಿ ಸಂಚರಿಸುವಾಗ ಅನೇಕ ವೇಳೆ ಹುಲಿ ಎದುರಾಗುತ್ತಿತ್ತ ಆಗ ಪ್ರಸನ್ನ ವೆಂಕಟದಾಸರು ಅದರ ಮೈದಡಿಹಿ ಅದಕ್ಕೆ ದೇವರಕಂಡಿಲೆ ಹೇರಿ ಕಾಡಿನ ಹಾದಿ ಸವೆಯುವವರೆಗೆ ತಮ್ಮೊಡನೆ ಕರೆದುಕೊಂಡು ಪ್ರಯಾಣ ಮಾಡುತ್ತಿದ್ದರು ಊರು ಸಮೀಪಿಸಿದ ಕೂಡಲೆ ಹುಲಿಗೆ ಗೋವುಗಳನ್ನು ಬಾಧಿಸಬೇಡವೆಂದು ಹೇಳಿ ಅಂಗಾರ ಹಚ್ಚಿ ಕಳಿಸಿಬಿಡುತ್ತಿದ್ದರಂತೆ ದಾಸರ ಮುದ್ರೆ ಬಿದ್ದ ಹುಲಿಗಳು ಗೋವುಗಳನ್ನು ಹಿಂಸಿಸುತ್ತಿರಲಿಲ್ಲ ಇದರಿಂದಾಗಿ ಪ್ರಸನ್ನ ವೆಂಕಟದಾಸರು ಅಡಿಯಿಟ್ಟ ನೆಲದಲ್ಲಿ ಗೋವುಗಳಿಗೆ ಹುಲಿಯಿಂ ಬ ಧೆ ಇಲ್ಲವೆಂದು ಹಳ್ಳಿಯ ಜನರ ನಂಬಿಕೆಯಾಗಿತ್ತು ಆದ್ದರಿಂದ ವೆಂಕಟದಾಸರು ಅಂಗ ರದ ಆಚಾರ್ಯರು ಎಂದು ಖ್ಯಾತರಾಗಿದ್ದರು

ಇಮ್ಮಡಿ ಹಣಮಿನಾಯಕನು ಪ್ರಸನ್ನ ವೆಂಕಟದಾಸರಿಗೆ ಕೊಟ್ಟ ಹೊಲವನ್ನು ಒಬ್ಬ ರೈತ ಗೇಣಿಮಾಡುತ್ತಿದ್ದನು ಒಮ್ಮೆ ಆ ರೈತ ಬೆಳೆಯನ್ನು ಸಂಪೂರ್ಣ ತಾನೆ ಅನುಭವಿಸುವ ದುರಾಸೆಯಿಂದ ಹೊಲದಲ್ಲಿ ಬೆಳೆಯಾದರೂ ಏನೂ ಬೆಳೆಯಲಿಲ್ಲವೆಂದು ಸುಳ್ಳುನುಡಿದ ಆಗ ವೆಂಕಟದಾಸರು ಹೊಲ ಬೆಳೆಯ ಲಿಲ್ಲವೆ ? ಹಾಗಿದ್ದರೆ ಹಾಗೇ ಆಗಲಿ ಎಂದರು ಅಂದಿನಿಂದ 3 4 ವರ್ಷಗಳವರೆಗೆ ಆ ಹೊಲದಲ್ಲಿ ಬೆಳೆಯಾಗ ಲಿಲ್ಲ ಪಕ್ಕದ ಹೊಲಗಳಲ್ಲಿ ಬೆಳೆ ಬಂದರೂ ಈ ಹೊಲ ಮಾತ್ರ ಬರಿದಾಗಿರುತ್ತಿತ್ತು ರೈತ ಸಾಕಷ್ಟು ನಷ್ಟ ಅನುಭವಿಸಿದ ಕಡೆಗೆ ಆತನಿಗೆ ತನ್ನ ತಪ್ಪಿನ ಅರಿವಾಯಿತು

ವೆಂಕಟದಾಸರ ಒಳಿಗೆ ಬಂದು ಕ್ಷಮೆ ಯಾಚಿಸಿದ ದಾಸರು ಆತನನು ಕ್ಷಮಿಸಿ ಬೆಳಿಯಾಗಲೆ ದು ಹರಿಸಿದರು ಅನಂತರ ಎ ದಿನಂತೆ ಓಲದಲ್ಲಿ ಬೆಳೆಯಾಯಿತು

ಒಂದು ದಿನ ಬಾಗಲಕೋಟೆಯ ಬಾಜಿ ರಾಯನು ಪ್ರಸನ ವೆ ಕಟದಾಸರನ್ನು ಭೆ ಟಿಯಾಗುವ ಇಚ್ಛೆಯಿಂದ ಕರಣಿಕನ ಮೂಲಕ ದ ಸರಿಗೆ ಹೇಳಿ ಕಳುಹಿಸಿದನು ದಾಸರನ್ನು ಕರೆಯಲು ಹೋದ ಕರ ಣಿಕನು ಕಿವಿಯಲ್ಲಿ ಲೇಖನಿಯನ್ನು ಇಟ್ಟುಕೊಂಡಿದ್ದನು ಇದನ್ನು ನೊ ಡಿದ ದಾಸರು ಆತನನು ಇದು ನಿಮ್ಮ ಕರ್ಣಭೂಷಣವೆ ನು ? ಎಂದು ಕೇಳಿದರು ಕರಣಿಕನು ಗರ್ವದಿಂದ ನನ ತಿ ಪ್ರಬರಹದ ಕುರುಹಾಗಿ ಪೆ ಶ್ಯೆಯುವರು ಇದನು ಉಡುಗೊರೆಯಾಗಿ ಕೊಟ್ಟಿದ್ದಾರೆ ಎಂದನು ಹಾಗಾದರೆ ನಿಮ್ಮನು ಆಧುನಿಕ ಗಣಪತಿ ಎಂದು ಕರೆಯ ಬಹುದಲ್ಲವೆ ಎ ದು ದಾಸರು ಕೇಳದರು ಕರಣಿಕ ಅದಕ್ಕೆ ಸವ ್ಮತಿಸಿದನು ದಾಸರು ಕರಣಿಕನ ಗರ್ವಭಂಗ ಮಾಡಬೇಂದು ಆತನಿಗೆ ಆಧುನಿಕ ಗಣಪತಿ ಎಂಬುದನ್ನು ಸಾಬಿ ತು ಪಡಿಸುವಂತೆ ಸವಾಲಂ ಹಾಕಿದರು ದಾಸರು ಎಂಥಾ ಶ್ರೀಮಂತಾನಂತಾನು ಎಂಬ ಕೀರ್ತನೆಯನು ಹಾಡಿದರು ಕರಣಿಕನಿಗೆ ಈ ಪದದ ಕೆಲವು ಪಂಕ್ತಿಗಳನಾ ದರೂ ಪೂರ್ಣವಾಗಿ ಬರೆಯಲಂ ಸಾಧ್ಯವ ಗಲಿಲ್ಲ

ಪ್ರಸನ ವೆಂಕಟದಾಸರು ಬಾಗಲಕೋಟೆಯಲ್ಲಿದ್ದಾಗ ಒಂದು ಘಟನೆ ನಡೆಯಿತ ದಾಸರು ಧ್ಯಾನಾಸಕ್ತರಾಗಿ ಕ ಳತ್ತಿದ್ದರು ಆಗ ಒಬ್ಬ ಭಕ್ತರು ಎಂದಂ ನಾಳಿ ನಮ್ಮ ಪ ನೆಗೆ ಬಂದು ಪ್ರಸ ದವನ್ನು ಸ್ವೀಕರಿಸಬೇಕು ಎಂದು ಕೇಳಿಕೊ ಡರು ದಾಸರು ಆತನ ಆಮಂತ್ರಣವನ್ನು ಒಪ್ಪಿಕೊಂಡರು ಕೆಲವು ಗಂಟೆಗಳ ಬಳಿಕ ವ ತ್ತೊಬ್ಬರು ಬಂದು ನಾಳೆ ಪ್ರಸಾದಕ್ಕೆ ನಮ್ಮ ಮನೆಗೆ ಬರಬೇಕು ಎಂದು ಕೇಳಿಕೊಂಡರು ದಾಸರು ಇವರಿಗೂ ಸಮ್ಮತಿ ಸೂಚಿಸಿದರು ಧ್ಯಾನದಿಂದ ಎಚ್ಚೆತ್ತ ಮೇಲೆ ದಾಸರಿಗೆ ಇಬ್ಬರಿಗೂ ಒಟ್ಟಿಗೆ ಕೊಟ್ಟಿದ್ದು ಅರಿವಾಯಿತು ಮರುದಿನ ಇಬ್ಬರು ಭಕ್ತರೂ ಬೇರೆ ಬೇರೆ ಸಮಯ ದಲ್ಲಿ ಬಂದು ದಾಸರನು ಮನೆಗೆ ಕರೆದರು ದಾಸರು ಮೊದಲು ಆಮಂತ್ರಿಸಿದ ಭಕ್ತರ ಮನೆಗೆ ಹೋಗ ವುದಕ್ಕೆ ಮುನ ಮತ್ತೊಬ್ಬರ ಮನೆಯ ಲ್ಲಿ ಪ್ರಸಾದ ಸ್ವೀಕರಿಸಿದ್ದರು ಆದರೆ ಕೊಟ್ಟ ವಚನವನು ಪೂರ್ಣಗೊಳಿಸಲು ಬೇರೊಂದು ರೂಪತಾಳಿ ಮೊದಲನೆಯ ಭಕ್ತನ ಮನೆಗೂ ಹೋಗಿ ಬಂದರು ಅಂದು ಸಂಜೆ ದಾಸರನ್ನು ಮನೆಗೆ ಕರೆದ ಬ್ರಾಹ್ಮಣರು ಮಾಮೂಲಿನಂತೆ ಮಾತನಾಡುತ್ತ ಕುಳಿತಿದ್ದಾಗ ದಾಸರು ಇಬ್ಬರ ಮನೆಯಲ್ಲಿಯೂ ಪ್ರಸಾದ ಸ್ವೀಕರಿಸಿದ ವಿಷಯ ತಿಳಿದು ವಿಸ್ಮಿತರಾದರು ಅವರಿಬ್ಬರೂ ದಾಸರ ಮನೆಗೆ ಹೋಗಿ ಕೇಳಿದಾಗ ಅವರು ಇಬ್ಬರ ಮನೆಗೂ ಹೋಗಿದ್ದ ವಿಚಾರ ತಿಳಿಸಿದರು ಅಂದಿನಿಂದ ರಾಯರ ಪ್ರಭಾವ ಅಧಿಕವಾಯಿತು ಆ ಬಳಿಕ ಪ್ರಸನ ವೆಂಕಟದಾಸರು ಇನು ಬಾಗಲಕೋಟೆಯಲ್ಲಿರುವುದು ಸರಿಯಲ್ಲವೆಂದು ಭಾವಿಸಿ ಬಾದಾಮಿಗೆ ಹೋಗಿ ನೆಲೆಸಿದರು

ಮೇಲಿನ ಘಟನೆಗಳಿಗೆ ಸತ್ಯದ ಒರೆಗಲ್ಲಿಗೆ ಹಚ್ಚಲು ಖಚಿತವಾದ ಸಾಕ್ಷಿಗಳ ದೊರೆಯುವುದಿಲ್ಲ ಆದರೆ ಪ್ರಸನ್ನ ವೆಂಕಟದಾಸರು ಉತ್ತರ ಕರ್ನಾಟಕದ ಪ್ರದೇಶದಲ್ಲಿ ಸಾಕಷ್ಟು ಪ್ರಭಾವ ಬೀರಿದ್ದರೆಂಬ ಅಂಶ ಇವುಗಳಿಂದ ಹೊರಹೊಮ್ಮುತ್ತದೆ ದಾಸರು ಭಾವುಕ ಜನರ ಹೃದಯದಲ್ಲಿ ಅಚ್ಚೊತ್ತಿ ತುಂಬ ಬಾಳನ್ನು ನಡೆಸಿ ಬಾದಾಮಿಯಲ್ಲಿ ಕೊನೆಯುಸಿರೆಳೆದರು ಇವರು ವೈಕುಂಠವಾಸಿಗಳಾದ ಕಾಲ ಕ್ರಿ ಶ ೧೬೮–೯ ೧೭೫೨ ಎಂಬ ಊಹೆ ಇದೆ ಬಾದಾಮಿ ಪಟ್ಟಣದ ಪೂರ್ವಕ್ಕೆ ಇರುವ ಗುಡ್ಡದ ಕೆಳಗೆ ಒಂದು ಕಲ್ಯಾಣಿಯಿದೆ ಇದರ ದಡದಲ್ಲಿ ಪ್ರಸನ್ನ ವೆಂಕಟದಾಸರು ಇಹಲೋಕ ತ್ಯಜಿಸಿದರು ಇವರ ಸ್ಮಾರಕವಾಗಿ ಇಲ್ಲಿ ಒಂದು ಕಟ್ಟೆಯನ್ನು ಕಟ್ಟಲಾಗಿದೆ ದಾಸರ ವಂಶದವರಾದ ಅಣ್ಣಯ್ಯಾಚಾರ್ಯರು ಈ ಕಟ್ಟೆಯನ್ನು ನಿರ್ಮಿಸಿದರೆಂದು ಹೇಳಿಕೆಯಿದೆ ಪ್ರತಿವರ್ಷ ಭಾದ್ರಪದ ಶುದ್ಧ ದ್ವಾದಶಿಯಂದು ದಿನ ಪ್ರಸನ್ನ ವೆಂಕಟದಾಸರ ಆರಾಧನೆಯನ್ನು ನಡೆಸುತ್ತಾರೆ

ಪ್ರಸನ್ನ ವೆಂಕಟದಾಸರು ಕನ್ನಡ ಸಾಹಿತ್ಯದಲ್ಲಿ ಎಡೆಪಡೆದಿರುವುದು ತಮ್ಮ ಕೃತಿಗಳಿಂದ ಪ್ರಸನ್ನ ವೆಂಕಟ ಎಂಬ ಅಂಕಿತದಲ್ಲಿ 400 ಕ್ಕೂ ಮೇಲ್ಪಟ್ಟು ಇವರ ಪದಗಳು ದೊರಕಿವೆ ಇವುಗಳಲ್ಲಿ ಮೂರು ಸುಳಾದಿ ಆರು ಉಗಾಭೋಗಗಳು ಸೇರಿವೆ ಇವರ ಉಪಲಬ್ಧ ಕೃತಿಗಳು ಹೀಗಿವೆ—

1 ಸಮಸ್ತನಾಮ ವಣಿಗಣ ಷಟ್ಚರಣ ಪದ್ಯಮಾಲಾ
2 ನಾರದರು ಕೊರವಂಜಿಯ ವೇಷ ತಾಳ್ದ ಚರಿತ್ರ
3 ಶ್ರೀಕೃಷ್ಣ ಪಾರಿಜಾತ
4 ಪ್ರಸನ್ನ ವೆಂಕಟದಾಸರ ಭಾಗವತ
5 ನಾರಾಯಣ ಪಂಜರ

ಭ್ರಮರಗೀತೆ ಎಂಬ ಕೃತಿ ಪ್ರಸನ್ನ ವೆಂಕಟದಾಸರಿಂದ ರಚಿತವಾಗಿದೆಯೆಂದು ಡಾ ಪಾಟೀಲರು ಭಾವಿಸಿ ಪ್ರಸನ್ನ ವೆಂಕಟದಾಸರ ಕೃತಿಗಳಿಗೆ ಸೇರಿಸಿದ್ದಾರೆ ಆದರೆ ಭ್ರಮರಗೀತ ಶ್ರೀಪಾದರಾಜಕೃತವೆಂದು ಡಾ ವರದರಾಜರಾಯರು ನಿರ್ಣಯಿಸಿದ್ದಾರೆ[1] ಪ್ರಸನ್ನವೆಂಕಟದಾಸರು ಇನ್ನೂ ಕೆಲವು ಕೃತಿಗಳನ್ನು ರಚಿಸಿರುವ ಸಾಧ್ಯತೆ

---

1 ನಾವು ಪರಿಶೀಲಿಸಿರುವ ಆಕರಗಳಲ್ಲಿ ಎಲ್ಲಿಯೂ ರಂಗವಿಠಲ ಎಂಬ ಅಂಕಿತವಲ್ಲದೆ ಬೇರೊಂದಿಲ್ಲ ಶ್ರೀವಾದಿರಾಜರು ದಶಮಸ್ಕಂದ ಭಾಗವತವನ್ನು ಇಡಿಯಾಗಿ ಬರೆದಿದ್ದರೂ ಅಲ್ಲಿನ ಹಲವಾರು ಪ್ರಸಂಗಗಳನ್ನು ಬಿಡಿಯಾಗಿ ಆರಿಸಿಕೊಂಡಿದ್ದಾರೆ ಅದರಲ್ಲಿಯೂ ವೃತ್ತನಾಮದಲ್ಲಿ ರಚಿತವಾಗಿರುವ ಅವರ ಶೃಂಗಾರ ಪಾರಿಜಾತವೆಂಬ ಕೃತಿಯನ್ನೂ ಇತರ ಸುಳಾದಿಗಳು ಕೀರ್ತನೆಗಳ ಬಾಹುಳ್ಯವನ್ನು ಕಂಡಾಗ ಶ್ರೀಪಾದರಾಜರು ಭ್ರಮರಗೀತೆಯನ್ನು ರಚಿಸಿದ್ದಾರೆಂದು ಹೇಳಲು ಹಿಂತೆಗೆಯಬೇಕಾಗಿಲ್ಲ

ಶ್ರೀಪಾದರಾಜ ಕೃತಿಗಳು ಪುಟ vii

ಇದೆ ಪ್ರಥಮ ಸ್ಕಂದ ಭಾಗವತ ಟಿಪ್ಪಣಿ ಭಾಗವತ ಚತುರ್ಥಸ್ಕಂದ ಷಷ್ಠ ಸ್ಕಂದ ಮಹಾಭಾರತ ಸಾರನಿರ್ಣಯ ಟೀಕಾ, ಬ್ರಹ್ಮಸೂತ್ರಭಾಷ್ಯ ಅಥರ್ವಣ ಟೀಕಾ ತರ್ಕಭಾಷಾ ತರ್ಕಸ ಗ್ರಹದಿ ಟೀಕಾ ಮೊದಲಾದ ಕೃತಿಗಳು ಇವರದಿರಬಹುದೆಂದು ಪಾಟೀಲರು ಊಹಿಸಿದ್ದಾರೆ ಇದಲ್ಲದೆ ಹಳ್ಳಿಜನರು ಹೇಳುವ ರಾಗದಲ್ಲಿ ಪ್ರಸನ್ನವೆಂಕಟ ಪ್ರಸನ್ನ ಕೃಷ್ಣ ಎಂಬ ಮುದ್ರಿಕೆ ಹಾಕಿ ಸುವ್ವಾಲೆ ಜೋಗುಳಗಳನ್ನು ಬರೆದಿದ್ದಾರೆ ಆದರಲ್ಲಿ ಹಳ್ಳಿಗರ ಜೀವನವನ್ನು ತಿಳಿಸಿದ್ದಾರೆ ಮತ್ತೆ ತಮ್ಮ ಬಾಲ್ಯದ ಅನುಭವ ಅತ್ತಿಗೆಯ ಅಧಿಕಾರದರ್ಪ ತಾವು ತಿರುಪತಿಗೆ ಹೋದ ಕಥೆ ಇವೆಲ್ಲವನ್ನೂ ಮನಮುಟ್ಟುವ ರೀತಿಯಲ್ಲಿ ಹಾಡಿದ್ದಾರೆ [2] ಎಂಬ ಅಭಿಪ್ರಾಯವಿದೆ ಪ್ರಸನ್ನ ವೆಂಕಟದಾಸರಿಗೆ ಸೇರಿದ್ದ ತಾಳೆಗರಿ ಗ್ರಂಥಗಳು ನದಿಯ ಪಾಲಾದುವೆಂದು ತಿಳಿಯುತ್ತದೆ ಆದ್ದರಿಂದ ವೆಂಕಟದಾಸರು ಇನ್ನೂ ಕೆಲವು ಕೃತಿಗಳನ್ನು ಬರೆದಿರಬಹುದೆಂಬ ಊಹೆಯನು ತಳ್ಳಿ ಹಾಕುವಂತಿಲ್ಲ

1 ಸಮಸ್ತನಾಮ ವರ್ಣಗಣ ಷಟ್ಚರಣ ಪದ್ಯಮಾಲಾ —

ಇದು ಸಂಸ್ಕೃತ ವರ್ಣಮಾಲೆಯನ್ನು ಆಧರಿಸಿ ರಚಿತವಾಗಿದೆ ಈ ಕೃತಿಯಲ್ಲಿ ೬೧ ನುಡಿಗಳಿವೆ ಆರಂಭದ ೧೩ ನುಡಿಗಳಲ್ಲಿ ದೇವತಾಸ್ತುತಿ ಇದೆ ೧೪ ನೆಯ ನುಡಿಯಲ್ಲಿ ಸ್ವರ ಅನುಸ್ವಾರ ವಿಸರ್ಗಗಳನೂ ೧೫ ಮತ್ತು ೧೬ ನೆಯ ನುಡಿಯಲ್ಲಿ ವ್ಯಂಜನಗಳನ್ನು ಕುರಿತು ಹೇಳಿದೆ ೧೭ ೪೨ ರ ವರೆಗಿನ ನುಡಿಗಳಲ್ಲಿ ಕಾಗುಣಿತ ೪೨ ೫೨ ರ ವರೆಗೆ ಅಂಕಿಗಳ ಎಣಿಕೆ ವಿವರಿಸಲಾಗಿದೆ ೫೮ ೬೨ ರ ವರೆಗೆ ರಾಶಿ ನಕ್ಷತ್ರಗಳ ವಿಷಯವನ್ನು ಹೇಳಿದೆ ೬೨ ೬೮ ೬೯ ನೆಯ ನುಡಿಗಳಲ್ಲಿ ದಶಾವತಾರದ ವರ್ಣನೆಯಿದೆ ಸಮಸ್ತನಾಮವರ್ಣಗಣ ಷಟ್ಚರಣ ಪದ್ಯಮಾಲಾ ಸಂಸ್ಕೃತ ಭೂಯಿಷ್ಠವಾಗಿದ್ದರೂ ವಸ್ತುವಿನಿಂದಾಗಿ ಗಮನ ಸೆಳೆಯುತ್ತದೆ ಪೊನ್ನನ ಜಿನಾಕ್ಷರ ಮಾಲೆಯ ಗುಂಪಿಗೆ ಸೇರಬಹುದಾದ ಕೃತಿ ಇದು ಇಂತಹವನ್ನು ಪ್ರಬಂಧ ಮಾತೃಕಾನಾಮ ಎಂದು ಮಾನಸೋಲ್ಲಾಸಕಾರನು ಹೇಳಿದ್ದಾನೆ

2 ನಾರದರು ಕೊರವಂಜಿ ವೇಷ ತಾಳ್ದ ಚರಿತ್ರೆ —

ಇದರಲ್ಲಿ ವಿವಿಧ ರಾಗಗಳಲ್ಲಿರುವ ೩೪ ಪದಗಳಿವೆ ರುಕ್ಮಿಣಿಗೆ ಶ್ರೀಕೃಷ್ಣನನ್ನು ಮದುವೆಯಾಗಬೇಕೆಂಬ ಅಪೇಕ್ಷೆಯಿರುತ್ತದೆ ಆದರೆ ರುಕ್ಮಿಣಿಯ ಅಣ್ಣ ತಂಗಿಯನು ಶಿಶುಪಾಲನಿಗೆ ಕೊಡುವ ಹವಣಿಕೆಯಲ್ಲಿರುತ್ತಾನೆ ಆಗ ನಾರದನು ಕೊರವಂಜಿ ವೇಷ ಧರಿಸಿ ರುಕ್ಮಿಣಿಗೆ ಮನೋರಥ ಸಿದ್ಧಿಯಾಗುವುದೆಂದು ಹೇಳುವ ಸನ್ನಿವೇಶ ಈ ಕೃತಿಯ ವಸ್ತು ಆರಂಭದ ಎರಡು ಪದಗಳಲ್ಲಿ ವಿಷ್ಣು ಸ್ತೋತ್ರವಿದೆ ಆ ಬಳಿಕ ಕಥೆ ಸರಾಗವಾಗಿ ವೇಗಗತಿಯಲ್ಲಿ ಸಾಗುತ್ತದೆ ದಾಸರು ರುಕ್ಮಿಣಿಯ ಜನನ ಬೆಳವಣಿಗೆ ವಿವಾಹದ ಪ್ರಸ್ತಾಪ ಎಲ್ಲವನ್ನೂ ಸಂಕ್ಷಿಪ್ತವಾಗಿ

2 ಕರ್ನಾಟಕ ಭಕ್ತವಿಜಯ ಬೇಲೂರು ಕೇಶವದಾಸರು

ಮೂರನೆಯ ಪದದಲ್ಲಿ ಅಡಕಮಾಡಿದ್ದಾರೆ ಆ ಬಳಿಕ ನಾರದರು ಕೊರವಂಜಿ ವೇಷ ಧರಿಸಿ ಬರುತ್ತಾರೆ—

ಮಂಜುಗಾವಿಯ ಸೀರಿ ನಿರಿ ತೆಗೆದುಟ್ಟು
ಕೆಂಜಡೆಸ ಬಿಟ್ಟೋರೆ ದುರ ಬೀ ಕಟ್ಟು
ಪಂಜಿನೊಲೆಯು ಮೂಗೂತಿ ಬಾಲೆ ಇಟ್ಟುಗುಲ
ಗಂಜಿ ಹೊಂದಾಳಿ ಸರಗಳ ಅಳವಟ್ಟು
ಚಂಚಲನೇತ್ರಕುಜನ ಬಾವುಲಿಟ್ಟು
ಮಿಂಚುವ ಆಭರಣಗಳನ್ನು ತೊಟ್ಟು

ಎಂದು ಮಾಡಿರುವ ವರ್ಣನೆ ಉತ್ತಮ ಶಬ್ದ ಒಕ್ಕದಿಂದ ಕೂಡಿದೆ ಕೊರವಂಜಿಯು ರಾಜಬೀದಿ ಬ್ರಾಹ್ಮಣರ ಕೇರಿಗಳನ್ನೆಲ್ಲ ಸುತ್ತಿ ರುಕ್ಮಿಣಿಯ ಮನೆಗೆ ಬಂದು ಆಕೆಯನ್ನು ಷಡದಿಯರ ಸುಪ್ರಾಣೆ ಕೀರವಾಣಿ ಕಿಸಲಯಪಾಣಿ ಕಂಜಜ ಬಿಂಬ ಸದನೆ ಕುಲಿಶಮಣಿರದನೆ ಮದನಕಾಮುಕಕೋಪವು ಭ್ರೂಲತೆಯುಳಿ ಮಹಾಲಕುಮಿಯುಳಿ ಅರುಣವಿದ್ರುಮಾಧರೆ ಮೊದಲಾಗಿ ಕರೆಯುವಲ್ಲಿ ಪ್ರಸನ್ನ ವೆಂಕಟರ ಶಬ್ದಸಂಪತ್ತು ಬೆರಗು ಹುಟ್ಟಿಸುತ್ತದೆ ಹಾಗೆಯೇ ರುಕ್ಮಿಣಿಯನ್ನು ಕೈ ತೋರಿಸು ಎಂದು ಕೇಳುವ ಭಾಗ ಕೂಡ ಸಹಜವಾಗಿ ಬಂದಿದೆ

ಈ ನಾಡ ಚರಿಸಿ ನಿನ ರಸಂತ ಒಂದೆನೆ
ಜಾಣೆ ಬಂಗಾರವ್ವೆ ಕೈತೋರೆ ನಿನ
ಕಾಣುತ ಹಸಿವೆ ನೀರಡಿಕೆಲ್ಲ ಹೋಯಿತು
ಜಾಣೆ ಬಂಗಾರವ್ವೆ ಕೈತೋರೆ
ಸಂಧಾನಕ್ಕಾರುವನ ಅಟ್ಟಿದ್ದಿ ಮೊದಲೇನೆ
ಮಂಗಳದೇವಿ ಕೈತೋರೆ

ಎಂಬ ಪದ ಜಾನಪದ ಗೀತೆಯನ್ನು ಓದಿದ ಅನುಭವವನ್ನು ತಂದ ಕೊಡುತ್ತದೆ ಹೀಗೆ ಈ ಕೃತಿ ಚಿಕ್ಕದಾದರೂ ತನ್ನ ರಂಜಕ ಮನೋಭಾವದಿಂದಾಗಿ ಓದುಗರನ್ನು ಸೆರೆಹಿಡಿಯುತ್ತದೆ

3 ಶ್ರೀಕೃಷ್ಣ ಪಾರಿಜಾತ —

ಇದಕ್ಕೆ ಸತ್ಯಭಾಮಾವಿಲಾಸ ಎಂಬ ಮತ್ತೊಂದು ಹೆಸರಿದೆ ಇದರಲ್ಲಿ ೨೯ ನುಡಿಗಳಿವೆ ಪ್ರತಿಯೊಂದ ನುಡಿಗೂ ಮುನ್ನುಡಿಯಂತೆ ಒಂದೊಂದು ಶ್ಲೋಕ ವಿದೆ ನಾರದನು ಕೊಟ್ಟ ಪಾರಿಜಾತ ಪುಷ್ಪವನು ಕೃಷ್ಣನು ರುಕ್ಮಿಣಿಗೆ ನೀಡುತ್ತಾನೆ ಇದರಿಂದ ಸತ್ಯಭಾಮೆಗೆ ಮತ್ಸರ ಉಂಟಾಗಿ ಕೃಷ್ಣನ ಮೇಲೆ ಕೋಪಿಸಿ ಕೊಳ್ಳುವಳು ಕೃಷ್ಣನು ಸತ್ಯಭಾಮೆಯನ್ನು ಸುಪ್ರೀತಗೊಳಿಸಲು ಪಾರಿಜಾತ ವೃಕ್ಷ

ವನ್ನು ತಂದು ಸತ್ಯಭಾಮೆಯ ಅಂಗಳದಲ್ಲಿ ನೆಡುವನು ಇದು ಈ ಕ ತಿಯ ವಸ್ತು ಕೃಷ್ಣನು ಲೆತ್ತವಾಡಿ ಎಲ್ಲರನ್ನೂ ಪರಾ ಭವಗೊಳಿಸ ವುದರೊಂದಿಗೆ ಕೃತಿ ಮುಕ್ತಾಯ ವಾಗ ತ್ತದೆ

4 ಪ್ರಸನ್ನ ವೆಂಕಟದಾಸರ ಭಾಗವತ —

ಶ್ರೀಕೃಷ್ಣನ ಬಾಲಲೀಲೆಯನ್ನು ವರ್ಣಿಸುವುದೆಂದರೆ ದಾಸರಿಗೆ ಪ್ರಿಯವಾದ ವಾದ ಕಾರ್ಯ ಆದ್ದರಿಂದ ಸಂಸ್ಕೃತ ಭಾಗವತ ದಶಮ ಸ್ಕಂಧವನ್ನು ಆಧರಿಸಿ ಕನ್ನಡದಲ್ಲಿ ಭಾಗವತವನ್ನು ರಚಿಸಿದಾ ರೆ ಇದು ವೃತ್ತ ದ್ವಿಪದಿಗಳಿಂದ ಕೂಡಿದೆ ಮೂಲ ಭಾಗವತದಲ್ಲಿ ೪೮ ಅಧ್ಯಾಯಗಳಿವೆ ಪ್ರಸನ್ನ ವೆಂಕಟದಾಸರು ೪೩ ಅಧ್ಯಾಯಗಳನ್ನು ಮಾತ್ರ ಕನ್ನಡದಲ್ಲಿ ತಂದಿದ್ದಾರೆ ದಾಸರ ಭಾಗವತ ಮೂಲದ ಪಡಿಯಚ್ಚಲ್ಲ ಮೂಲದಲ್ಲಿಲ್ಲದ ಎಷ್ಟೋ ಅಂಶಗಳು ಇಲ್ಲಿ ಹೊಸತಾಗಿ ಸೇರ್ಪಡೆ ಯಾಗಿವೆ ಮೂಲದ ಕೆಲವು ವಿವರವಾದ ಭಾಗಗಳು ಕನ್ನಡ ಕೃತಿಯಲ್ಲಿ ಸಂಕ್ಷಿಪ್ತ ರೂಪದಲ್ಲಿ ಪ್ರಕಟವಾಗಿವೆ ಆದ್ದರಿಂದ ಇದು ಸಂಸ್ಕೃತ ಭಾಗವತದ ರೂಪಾಂತರ ವೆಂದು ಹೆ ಳಬಹುದು

5 ನಾರಾಯ ಣರ ಪಂಜರ !—

ಇದರಲ್ಲಿ ನಾರಾಯಣನನ್ನು ಸ್ತುತಿಸುವ ೪೧ ನುಡಿಗಳಿವೆ ನಾರಾಯಣನು ಮೆರೆದ ಮಹಿಮೆ ಯನ್ನು ಒಂದೊಂದು ನುಡಿಯಲ್ಲಿ ಹೇಳಿದೆ ಈ ಕೃತಿಯ ಆರಂಭ ದಲ್ಲ ಬರುವ ನಾರಾಯಣಾಯ ನಮೋ ನಾರಾಯಣ ಎಂಬ ಪಂಕ್ತಿಗಳು ಪ್ರತಿ ಯೊಂದು ನುಡಿಯ ಅಂತ್ಯದಲ್ಲೂ ಮರುಕೊಳಿಸಿವೆ

> ನಿನ್ನ ಮೈ ಬೆವರಿನ್ನೊಳೆಯಲ್ಲೆನ್ನ ಮುಳುಗಿಸೊ
> ನಾರಾಯಣಾಯ ನಮೋ ನಾರಾಯ ಣ
> ನಿನ್ನವ ನಾ ನಿನ್ನವರ ಕೈಯಲ್ಲಿ ಕೊಡಬೇಗ
> ನಾರಾಯಣಾ ನಮೋ ನಾರಾಯಣ

ಎಂಬುದು ಇಲ್ಲಿಯ ಭಕ್ತನ ಆಶಯ

6 ಕೀರ್ತನೆಗಳು —

ಇವರ ಕೀರ್ತನೆಗಳ ವಸ್ತು ಪೂರ್ವದ ಹರಿದಾಸರ ಕೀರ್ತನೆಗಳಲ್ಲಿ ನಿರೂಪಿತ ವಾಗಿರ ವಂಥದೆ ಆಗಿದೆ ಹರಿನಾಮಮಹಿಮೆ ದೈತಮತಸಿದ್ಧಾಂತ ಶ್ರೀಕೃಷ್ಣನ ಬಾಲಲೀಲೆಗಳು ಭಗವಂತನ ಆರಾಧನೆ ಮೊದಲಾದ ವಿವಿಧ ವಿಷಯಗಳನ್ನು ಇವರ ಕೀರ್ತನೆಗಳಲ್ಲಿ ಕಾಣಬಹುದು ನವವಿಧ ಭಕ್ತಿಯನ್ನು ಕುರಿತು ಒಂದು ಪದವನ್ನು ರಚಿಸಿದ್ದಾರೆ ಹರಿಯನ್ನು ಪೂಜಿಸದ ತಮ್ಮ ಜೀವನ ಹೇಗೆ ವ್ಯರ್ಥವಾಯಿತೆಂಬು ದನ್ನು ಹೀಗೆ ವಿವರಿಸಿದ್ದಾರೆ

ತುಲಸೀಮಂಜರಿ ರ ಪುಷ್ಪ
ಅಎಸಾದೆ ತಂದು ಶ್ರೀ
ನಳಿನನೇತ್ರನ ನಾಮಾವಳಿಗಳಿಂದಾ
ಸಲೆ ಅವನಂಘ್ರಿಕವ ಲವರ್ಚಿಸದ ಸದಾ
ಒಎನೆ ಸಂಪದಾಬ್ಧಿಯಲಿ
ಮುಳುಗಿದ್ಮಹೋರಾತ್ರಿಯಲ್ಲಿ

ಎಂದು ಹೀಗೆ ನಿವೇದಿಸಿಕೊಳುವ ಪ್ರಸನ ವೆಂಕಟದಾಸರ ಪದ್ಯ ಭಾಗ ಶ್ರಿ ಪಾದ ರಾಜರ ಹಾಡ ಗಳಲ್ಲಿನ

ಹರಿ ನಾರಾಯಣನೆಂದು ಕರವೆತ್ತಿ ಮು ಗಿದೊಮ್ಮೆ ಮೈ
ವ ರೆದು ನಟಿಸಲಿಲ್ಲ ಕೃಷ್ಣ
ಹರಿಸ್ಮರಣೆ ಸ್ಮರಿಸಿ ಸಿರಿ ತುಳಸಿ ಪುಷ್ಪವನು
ಕರವೆತ್ತಿ ನೀಡಲಿಲ ಕ ಷ್ಣ

ಎಂಬ ಸಾಲುಗಳನ್ನು ನೆನಪಿಗೆ ಬರ ತ್ತವೆ

ಪ್ರಸನ ವೆಂಕಟದಾಸರು ಆನೆಯನ್ನು ಕೃಷ್ಣನಿಗೆ ಸಂಕೇತವಾಗಿಟ್ಟುಕೊಂಡು

ಆನೆ ಬಂತಾನೆ ಬಂತಾನೆ ಬಂತಮ್ಮ
ದಾನವಕದಳಿಯಂ ಕ ನನ ಮುರಿವ
ಉಂಗುರಗೊರಳ ನೀಲಾಗಚಲ್ವಾನೆ
ಕಂಗಳಿಹ್ವೊಳಿವ ವ್ಯಾಘ್ರಾಂಗುಳಿಯಾನೆ
ಬಂಗಾರದಗ ಘಂಟೆ ಶೃಂಗ ರದಾನೆ
ಮಂಗಳತಿಲಕದ ರಂಗನೆಂಬಾನೆ

ಎಂದು ನಿರೂಪಿಸಿರುವಲ್ಲಿ ವಾದಿರಾಜರು–

ಕುದುರೆ ಬಂದಿದೆ ವಾದಿರಾಜಗೊಲಿದು
ಬಂದು ಸ್ವಾದಿಪುರದಲ್ಲ ನಿಂದು
ಮುಂಗಾಲಿ ಕೆದರಿ ಕುಣಿವ ಕುದುರೆ
ಹಿಂಗಾಲಲಸುರರ ಒದೆವ ಕುದುರೆ
ರಂಗನೆಂದರೆ ಸಲಹೋ ಕುದುರೆ
ತುಂಗಹಯವದನ್ನ ಕ ದುರೆ

ಎಂಬ ಪದದ ಛಾಯೆಯಿರುವಂತೆ ತೋರುತ್ತದೆ

ಪ್ರಸನ್ನ ವೇಂಕಟದಾಸಪರಂಪರೆಗೆ ಅನುಗುಣವಾಗಿ ಮಾಧ್ವ ಸಂತತಿಯ ಗುರು ಗಳನ್ನು ವ ತ್ತು ಹನುಮಂತ ಮಾಧವ ವೆಂಕಟೇ ಶ್ವರ ಸೀತಾರಾಮ ಮೊದಲಾದ ದೇವತೆಗಳ ಸ್ತುತಿಗಳನ್ನು ರಚಿಸಿದ್ದಾರೆ ಅವರು ಒಂದು ಪದದಲ್ಲಿ

ಹನುಮನೆ ನಮ್ಮ ತಾಯಿತಂದೆ
ಭೀಮ ನಮ್ಮ ಬಂಧುಬಳಗಾ
ಆನಂದತೀರ್ಥರೆ ನಮ್ಮ ಗತಿಗೋತ್ರರು

ಎಂದು ಭಕ್ತಿಪೂರ್ವಕವಾಗಿ ಹಾಡಿದ್ದಾರೆ ಮುಂದಿನ ಚರಣಗಳಲ್ಲಿ ಮೇಲಿನ ನುಡಿಗಳನ್ನು ದೃಷ್ಟಾಂತಗಳ ಮೂಲಕ ಸ್ಪಷ್ಟಪಡಿಸಿದ್ದಾರೆ ಈ ಬಗೆಯಾದ ಹಲವಾರು ಉಪಾಸನಾ ಪದಗಳು ಮಂಗಳಾರತಿ ಪದಗಳು ಜೋಗುಳಪದಗಳು ಇವರ ಕೀರ್ತನ ಸಮುದಾಯದಲ್ಲಿ ಸೇರಿವೆ

ಗುರುಪರಂಪರೆಯಲ್ಲಿ ಪುರಂದರದಾಸರು ಸತ್ಯಾಭಿನವತೀರ್ಥ ಸತ್ಯಾಧಿರಾಜ ಗುರುಗಳನ್ನು ವಿಶೇಷವಾಗಿ ಸ್ತುತಿಸಿದ್ದಾರೆ ಪ್ರಸನ ವೆಂಕಟದಾಸರಿಗೆ ಪುರಂದರ ದಾಸರ ಒಗಗೆ ವಿಶೇಷಗೌರವ ಅವರನ್ನು ಕುರಿತ ಕೀರ್ತನೆ ಪುರಂದರರ ವ್ಯಕ್ತಿತ್ವ ಮತ್ತು ಕೃತಿಗಳಿಗೆ ಕನ ಡಿ ಹಿಡಿಯುವಂತಿದೆ

ಕವನೋಕ್ತಿ ಮಳೆಗರೆದು ಹರಿದಾಸ
ಪವರ್ಗಗಳಿಗೆ ವಿರಳಾನಂದವಿತ್ತರ್ತಿಸುವರಾ
ನವಭಕುತಿ ವನಗಂಡು ಸವೆಯದಾನಂದ ಪುರಪ
ಥವನು ತೋರಿಸಿದಂಥ ಬಹುಕೃಪಾಕರನಾ

ಗೀತರಾಯಿ ಸುಳಾದ್ಯುಗಾಭೋಗ ಪದ್ಯ ಪದ
ವ್ರಾತ ಪ್ರಬಂಧ ರಚಿಸಿ ವಿರ ಲನ
ಪ್ರೀತಿಬಡಿಸಿ ಪ್ರತ್ಯಕ್ಷ ಕಂಡು ನಲಿವ ವೈಷ್ಣವಾಗ್ರ
ನಾಥ ಪ್ರಸನ್ನವೆಂಕಟಕೃಷ್ಣಪ್ರಿಯನ

ಎಂದು ಪುರಂದರರನ್ನು ಸೊಗಸಾಗಿ ಸ್ತುತಿಸಿದ್ದಾರೆ ಪ್ರಸನ್ನ ವೆಂಕಟದಾಸರ ಸಾಹಿತ್ಯದ ಮೇಲೆ ಆಗಿರುವ ಪುರಂದರದಾಸರ ಪ್ರಭಾವವನು ಸುಲಭವಾಗಿ ಗುರುತಿಸ ಬಹುದು

ಹರಿಭಕ್ತನಾದವನಿಗೆ ಸದಾಚಾರವಿರಬೇಕು ಇಲ್ಲದಿದ್ದರೆ ಮುಕ್ತಿಯಿಲ್ಲ ವೆಂದು ಭಾವಿಸುವ ಹರಿದಾಸರು ತಮ್ಮ ಕೃತಿಗಳಲ್ಲಿ ಸದಾಚಾರಗಳನು ನಿರೂಪಿಸುವುದು ರೂಢಿಯಲ್ಲಿದೆ ಅಂತೆಯೆ ಪ್ರಸನ್ನವೆಂಕಟದಾಸರು

ಹೇಳಿದ ಯಮಧರ್ಮ ತನ್ನಾಳಿಗೆ
ಹೇಳಿದ ಯಮ ತನ್ನೊಳಗದವರಿಗೆ

ಖೂಳ ದುರಾತ್ಮರಾಗಿ ಬಾಳುವರನು ತರ
ಹರಿಸಂಕೀರ್ತನೆಯ ನರನಾರಿಯರು ಆ
ದರದಲಿ ಮಾಡಿದವರ ನಿಂದಿಪರ ತರ

ಎಂದು ಹೇಳಿರುವ ಕೀರ್ತನೆಯಲ್ಲಿ ಪುರಂದರದಾಸರ ಛಾಯೆಯನ್ನು ಕಾಣಬಹುದು ಈ ಅರ್ಥದಲ್ಲಿ ಪ್ರಸನ್ನವೆಂಕಟದಾಸರನು ಪುಟ್ಟಪುರಂದರದಾಸರು ಎಂದು ಕರೆದದ್ದು ಔಚಿತ್ಯಪೂರ್ಣವಾಗಿದೆ

ಪ್ರಸನ ವೆಂಕಟದಾಸರು ವೈರಾಗ್ಯ ಪರವಾದ ಪದಗಳಲ್ಲಿ ಸಂಸಾರದ ನಶ್ವರತೆಯನ್ನು ದೃಷ್ಟಾಂತಗಳ ಮೂಲಕ ಎತ್ತಿತೋರಿಸಿದ್ದಾರೆ ಸ್ಥಿರವಲ್ಲೀಕಾಯಾ ಈ ದೇಹ ಮನವೆ ಗಾಳಿದೀಪಾ ಎಂದು ಬೋಧಿಸುವ ಪ್ರಸನ್ನ ವೆಂಕಟದಾಸರು ಸಂಸಾರ ಹೇಗಿರಬೇಕೆಂಬುದನ್ನು ನಿರ್ದೇಶಿಸಿದ್ದಾರೆ—

ಹೀಗಿದ್ದರೆ ಲೇಸು ಜ್ಞಾನಿಗೆ
ಹೀಗಿದ್ದರೆ ಲೇಸು
ಸತಿ ಇದ್ದರೆ ಸಮಹಿತದವಳಾಗಿ
ಸುತನಿದ್ದರೆ ನಿಜಮತದವನಾಗಿ
ಧನವಿದ್ದರೆ ಸಜ್ಜನಕೆ ವಿಭಾಗ
ಮನೆ ಇದ್ದರೆ ಮಧ್ಯಾಹ್ನ ಕನ ತ್ಯಾಗ

ಎಂದ ಮೊದಲಾಗಿ ಹೇಳಿ ಸನ್ಮಾರ್ಗವನ್ನು ತೋರಿದ್ದಾರೆ

ಪ್ರಸನ ವೆಂಕಟದಾಸರಿಗೆ ಹರಿನಾಮದಲ್ಲಿ ಅಚಲವಾದ ಶ್ರದ್ಧೆ ವಿಶ್ವಾಸಗಳಿದ್ದವು ಹರಿನಾಮಕ್ಕೆ ಅದ್ಭುತವಾದ ಶಕ್ತಿಯಿದೆಯೆ ಂಬುದನು ಮನಗಂಡು—

ಮಹತಿಗೆ ಮಹತು ಶ್ರೀಹರಿಯನಾಮಾ
ಹಿಂದೊದಗಿದಘರಾಶಿ ಬೇಯ್ಸಿ ಬಿಸುಟುವ ನಾಮ
ಮುಂದೆ ಬಹ ದ ರಿತಕಡ್ಡಾದ ನಾಮ
ಮದಮತಿ ಕತ್ತಲೆಗೆ ಬಾಲಾರ್ಕಸಮನಾಮ
ದಂದುಗದ ಬಳ್ಳಿಯನು ಹರಿವ ನಾಮಾ

ಎಂದು ಹೇಳಿದ್ದಾರೆ ಇಂಥ ಹರಿನಾಮ ಎನ ನಾಲಿಗೆಗೆ ಒದಗಲಿ ಎಂಬುದು ಈ ಭಕ್ತನ ಬೇಡಿಕೆ ಹರಿನಾಮಸ್ಮರಣೆಯಿಂದ ದುರಿತಗಳು ನಾಶವಾಗುತ್ತವೆಯೆಂದು ಬಗೆಯುವ ಪ್ರಸನ್ನ ವೆಂಕಟದಾಸರು

ಶ್ರೀವಿಷ್ಣು ಸ್ಮರಣೆಯಿಂ ಸಾಧುಸಂಸರ್ಗ
ಶ್ರೀವಿಷ್ಣು ಸ್ಮರಣೆಯೆಂಬುದೆ ಅಪವರ್ಗ
ಶ್ರೀವಿಷ್ಣು ಸ್ಮರಣೇಲಿ ಸದ್ಬುದ್ಧಿ ದೀರ್ಘ
ಶ್ರೀವಿಷ್ಣುಸ್ಮರಣೆಗೆಚ್ಚರ ಬುಧವರ್ಗ

ಎಂದು ವಿಷ್ಣುಸ್ಮರಣೆಯ ಮಹತ್ವವನ್ನು ನಿರೂಪಿಸಿದ್ದಾರೆ. ಶಿವನಿಗೆ ಹಾಲಾಹಲ ಶೀತಲವಾಗಿದ್ದು, ದ್ರೌಪದಿಯ ಶೀಲ ಕಾಪಾಡಿದ್ದು, ಅಜಾಮಿಳನ ಪಾಪನಾಶವಾಗಿದ್ದು ಇವೆಲ್ಲ ವಿಷ್ಣುಸ್ಮರಣೆಯಿಂದ ಎಂದು ತಿಳಿಸಿದ್ದಾರೆ.

ಹರಿಯೇ ಸರ್ವೋತ್ತಮನೆಂದು ಸಾರುವ ಪ್ರಸನ್ನ ವೆಂಕಟದಾಸರು ಸೃಷ್ಟಿಯ ಪ್ರತಿಯೊಂದು ಕ್ರಿಯೆಯ ಹಿನ್ನೆಲೆಯಲ್ಲಿ ಶ್ರೀಹರಿಯ ಕಾರುಣ್ಯವನ್ನು ಕಂಡುಕೊಳ್ಳುತ್ತಾರೆ. ಈ ಕಾಣ್ಕೆಯನ್ನು 'ಯಾತಕೆಲೆ ಮನವೆ ನೀ ಭೀತಿಗೊಳ್ಳುವಿ' ಎಂಬ ಕೀರ್ತನೆಯಲ್ಲಿ ಪ್ರತಿಪಾದಿಸಿದ್ದಾರೆ. ಇವರಿಗೆ ಶ್ರೀಹರಿಯನ್ನು ಎಷ್ಟು ಕೊಂಡಾಡಿದರೂ ತೃಪ್ತಿಯಿಲ್ಲ. ಆತನನ್ನು ತ್ರಿದಶರದೊರೆ, ಭಕುತರಸಿರಿ, ದಿತಿಜರರಿ, ದಾನವಾರಿ, ಹಿತಕಾರಿ, ವಾರಿಜಾಸನವಂದ್ಯ, ಸುರವೀರ ಇತ್ಯಾದಿ ನಾನಾ ಹೆಸರುಗಳಿಂದ ವಿಧವಿಧವಾಗಿ ಕರೆದಿದ್ದಾರೆ. ಇಂಥ ಹರಿಯನ್ನು ಕಾಣುವ ಹಂಬಲ ತೀವ್ರಗೊಳ್ಳುತ್ತದೆ.

> ಎಂದು ಕಾಂಬೆನು ಎನ್ನ ಸಲಹುವ
> ತಂದೆ ಉಡುಪಿಯ ಜ್ಞಾನ
> ಮಂದಹಾಸಪ್ರವೀಣನಾ
> ಇಂದಿರಾ ಭೂರಮಣನಾ

ಎಂದು ಭಕ್ತಿಯಿಂದ ಹಾತೊರೆದಿದ್ದಾರೆ. ಭಗವಂತನ ಸಾಕ್ಷಾತ್ಕಾರಕ್ಕಾಗಿ ಹೊರಟ ಸಾಧಕನಿಗೆ ನೂರೆಂಟು ಅಡ್ಡಿಗಳು. ಅವುಗಳನ್ನು ಒಂದು ಪದದಲ್ಲಿ ಸಮರ್ಥವಾಗಿ ಹೇಳಿದ್ದಾರೆ—

> ಒಲಿಯುಯ್ಯಾ ರಂಗ ಒಲಿಯಯ್ಯಾ
> ನೆಲೆಗಾಣದ ಭವಜಲದೊಳು ಮುಳುಗುವೆ
> ಮಾಯದ ಕೈಯಲಿ ಮೇಲೆ ಮೇಲೆ ಸುತ್ತಿ
> ಆಯಾಸಬಡುತಿದೆ ಪ್ರಾಣದಾತಾ
> ಬಾಯೆ ತ್ರಿ ಗೋವಿಂದ ಹರಿಯೆನಲೀಸದು
> ಕಾಯೊ ದಯಾಳು ಕರಿವರದ ಕೃಷ್ಣಾ
> ಮನ ನೀರಾನೆಯ ಕಡ್ಡಿನೊಳಗೆ ಸಿಕ್ಕಿ
> ಕ್ಷಣಕ್ಷಣ ದೈನ್ಯದಿ ಒರಲುತಿದೆ
> ತನತನಗೆಳೆದು ದಣಿಸುವ ಇಂದ್ರಿಯಜಂತು
> ಮುನಿಸೇವ್ಯ ನಿನ್ನೊಳಿಗಕ್ಕೆ ದೂರಾದೆ ಕೃಷ್ಣಾ

ಎಂಬ ಆತ್ಮಶೋಧನೆ ಮಾಡಿಕೊಂಡಿದ್ದಾರೆ. ಮನಸ್ಸು ಮರ್ಕಟ. ಚಲಿಸುವ ಮನಸ್ಸನ್ನು ಸಮತೋಲನದಲ್ಲಿಡಲು

> ಚಂಚಲಿಸದೆ ನೀನು ಚತುರನಾಗು
> ವಂಚಿಸದೆ ಸಕಲನೊಪ್ಪಿಸು ಹರಿಗೆ ಮನವೆ

ಎಂದು ಮನಕ್ಕೆ ಮಾರ್ಗದರ್ಶನ ನೀಡಿದ್ದಾರೆ. ಆದರೆ ಭಗವಂತನ ಕೃಪೆ ಬಹಳ ಬೇಗ ದೊರೆಯುವಂತದ್ದಲ್ಲ. ನೀ ಕರುಣಿಸೋ ಸಿರಿವರಲಾ ಇನ್ನಾಕಾಲಸ್ಯವು ಎಂದು ಪರಿಪರಿಯಾಗಿ ಮೊರೆಯಿಡುವ ಪ್ರಸನ್ನ ವೆಂಕಟದಾಸರಿಗೆ ತಾನು ಶ್ರೇಷ್ಠನೆಂಬ ಭಾವನೆಯಿಲ್ಲ.

> ದೋಷಿಗಳೊಳಗೆ ಹಿರಿಯನು ನಾ
> ನಿರ್ದೋಷಿಗಳರಸು ನೀ ರಂಗಯ್ಯಾ

ಎಂಬ ನುಡಿಗಳಲ್ಲಿ ಬಸವಣ್ಣನವರ ಎನಗಿಂತ ಕಿರಿಯರಿಲ್ಲ ಶಿವಭಕ್ತರಿಗಿಂತ ಹಿರಿಯರಿಲ್ಲ ಎನ್ನುವ ವಿನೀತಭಾವ ಪ್ರಕಟವಾಗಿದೆ. ಅಂತೆಯೇ ಮತ್ತೊಂದು ಪದದಲ್ಲಿ ನಿನ್ನ ಭೃತ್ಯರ ಭೃತ್ಯ ನಾನು ಎಂದು ಪ್ರಸನ್ನವೆಂಕಟದಾಸರು ಹೇಳಿಕೊಳ್ಳುವಲ್ಲಿ ದಾಸ್ಯ ಭಾವ ವ್ಯಕ್ತವಾಗಿದೆ. ಭಗವಂತನ ದರ್ಶನಕ್ಕಾಗಿ ಹಂಬಲಿಸಿ ಆದಕ್ಕಾಗಿ ಕಠಿಣತರ ಸಾಧನೆಯನ್ನು ಕೈಕೊಂಡ ಪ್ರಸನ್ನ ವೆಂಕಟದಾಸರಿಗೆ ಒಂದು ದಿನ ಭಗವಂತನ ಸಾಕ್ಷಾತ್ಕಾರವಾಗುತ್ತದೆ.

> ಕೋಮಲತಿ ಶುಭಗಾತ್ರನ
> ಮಹತಾಮರಸದಳ ನೇತ್ರನ
> ಸ್ವಾಮಿ ಶ್ರೀನಿವಾಸನ ಕಂಡೆ
> ಹೇಮಗಿರಿ ವರದೀಶನ

ಎಂದು ಕರ್ಣಕುಂಡಲಧಾರಿಯಾದ ಸಣ್ಣನಾಮದ ನೊಸಲಿನ ಚಿನ್ಮಯಕಾಯನಾದ ಶ್ರೀನಿವಾಸನನು ಕಣ್ಣಿಗೆ ಕಟ್ಟುವಂತೆ ವರ್ಣಿಸಿದ್ದಾರೆ.

ಪ್ರಸನ್ನ ವೆಂಕಟದಾಸರು ಶ್ರೀ ವೆಂಕಟೇಶನ ಬಿಡಬ್ಯಾಡಿ ಹಲವು ದೈವಕೆ ಹಲ್ಲು ತೆರೆಯದೆ ಹೊಗಳದೆ ಎಂದು ಹೇಳಿದ್ದರೂ ಅನ್ಯದೈವಗಳ ನಿಂದನೆಗೆ ತೊಡಗುವುದಿಲ್ಲ. ಶಿವನನು ಕೂಡ ಭಕ್ತಿಯಿಂದ ಸ್ತುತಿಸಿರುವ ಹಾಡುಗಳು ದೊರೆಯುತ್ತವೆ. ಶಿವನನ್ನು ಸರ್ಪಭೂಷಣ ತ್ರಿಯಂಬಕ ಕರುಣಾಂಕ ನೀಲಕಂಧರ ತ್ರಿಪುರಾಂತಕ ಎಂದು ನಾನಾ ಹೆಸರುಗಳಲ್ಲಿ ಸ್ತುತಿಸಿ ಹಾಡಿದ್ದಾರೆ.

ಮೋಕ್ಷಾಪೇಕ್ಷಿಯಾದ ಜೀವಕ್ಕೆ ಸಜ್ಜನರ ಸಂಗ ಕೂಡ ಅನಿವಾರ್ಯ. ಸಾಧುಸೇವೆ ಸಾಧುಸಂಗಗಳ ಆವಶ್ಯಕತೆಯನ್ನು ಪ್ರಸನ್ನ ವೆಂಕಟದಾಸರು ತಮ್ಮ ಕೃತಿಗಳಲ್ಲಿ ಒತ್ತಿ ಹೇಳಿದ್ದಾರೆ.

ಸಂತರೆ ಭವದೂರರು ಹಿತಕಾಯರು
ಸಂ‍ೌರ ಸೇವೆ ಶ್ರೀಹರಿಸೇವೆ
ಸಂತರಮುೌವೆ ಹರಿಸಮ್ಮತವು
ಸಂತರ ಮತಿಯೇ ಮುಕುತಿಯು ಗತಿಯು
ಸಂತರ ಪಾದಾ ಚಿಂತನಿಗಾಲ್ವಾದಾ

ಎಂದು ವಿಧವಿಧವಾಗಿ ಬಣ್ಣಿಸಿದಾ ರೆ

ಪ್ರಸನ್ನ ವೆಂಕಟದಾಸರ ಕೃತಿಗಳಲ್ಲಿ ಆಕರ್ಷಣೆ ಯ ಭಾಗಗಳೆಂದರೆ ಕೃಷ್ಣನನು ಕ ರಿತ ಪದಗಳು ಕೃಷ್ಣಲೀಲಿಯನು ಶೃಂಗಾರ ವಾತ್ಸಲ್ಯ ಹಾಸ್ಯ ಇಂತಹ ರಸ ಗಳಲ್ಲಿ ವರ್ಣಿಸಿದ್ದಾರೆ ಭಾಗವತದ ಅನೆ ಕ ಸನಿ ವೇಶಗಳು ಇಲ್ಲಿ ಸುಂದರವಾಗಿ ಪಡಿಮೂಡಿವೆ ಈ ಪದಗಳಲ್ಲಿ ದಾಸರು ಯಶೋದೆಯ ಸ್ಥಾನದಲ್ಲಿ ನಿಂತು ತಾಯಿ ಯಾಗಿ ತೊದಲುನುಡಿವ ಮುದ್ದುಕ ಷ್ಣನಾಗಿ ಕೃಷ್ಣನಿಗಾಗಿ ಹಾತೊರೆಯುವ ಗೋಪಿಕೆಯರಾಗಿ ವಿವಿಧ ಪಾತ್ರಗಳಲ್ಲಿ ನಿಂತು ಬಿಡಿಬಿಡಿಯಾಗಿ ಬಣ್ಣಿಸಿದ್ದಾರೆ ಕೃಷ್ಣನು ನೆರೆಮನೆಗೆ ಹೋಗಿ ಬೆಣ್ಣೆಕದ್ದು ತಿಂದಿದ್ದಾನೆ ಸ್ತ್ರೀಯರ ಸೆರಗು ಎಳೆದಿ ದ್ದಾನೆ ನಿದ್ರೆಯಲ್ಲಿದ್ದವರನ್ನು ಚ ಟಿಸಿದ್ದಾನೆ ಇಂಥ ಕೃಷ್ಣನ ಉಪಟಳವನ್ನು ಕಂಡು ಅವರು ನಡೆಯೋ ನಿಮ ಮ್ಮನೆಡೆಗೆ ಹೋಗುವ ನಿನ್ನ ತುಡುಗ ಒಬ್ದಿಯ ನೆ ಲ್ಲ ಒಡಿಸುವೆ ಕಳ್ಳಾ ಎನು ತ್ತ ಬಂದು ಯ ಶೋದೆಗೆ ದೂರು ನೀಡುತ್ತಾರೆ ನೀನು ಬುದ್ಧಿ ಹೇಳ ತಿದ್ದಬಾರದೆ ಎಂದು ಯ ಶೋದೆಯನ್ನು ಕೇಳುತ್ತಾರೆ ಕೃಷ್ಣನು ಆ ದೂರುಗಳನ್ನೆಲ್ಲ ನಿರಾ ಕರಿಸುತ್ತ ಗೋಪಿಯರು ನನ ನ್ನು ಸುಮ್ಮನೆ ದೂರುತಿದ್ದಾರೆ ಎನು ವ ಭಾಗ ಸಹಜವಾಗಿ ಬಂದಿದೆ

ನಾನೊಲ್ಲೆನೆಂದರೂ ಗೋಪಮ್ಮಾವರೆತ್ತಿಕೊಂಬರು
ಆನಿಯಾಡಬಾರೊ ರಂಗಯೆಂದೆನ್ನ ನೋಯಿದು
ಸಾಸಿರಬಿಸಳಿಗೆ ಬೆಣ್ಣೆ ಕೂಸುಗಳು ಮೇಲ್ಗೋದುಂಟೆ
ಹೇಸಿಕೆ ಒರುತಿವೆ ಅವರು ಮೊಸರು ಕಡವುದು
ವಿಶಾಸಲಾ ವ ಎರಿದಾರೆ ಅವರು ಚಟ್ಟಿಗೆ ಕೊರಳಿಗೆ ಕಟ್ಟಿ
ಹಾಸ್ಯದೊಳು ಮಾತನ ಡಿ ಮೋಸಮಾಡುತಿಹರವ್ವಾ

ಎಂದು ಕೃಷ್ಣನು ಸುಳ್ಳು ನುಡಿದು ತಾಯಿ ನಂಬುವಂತೆ ಮಾಡುತ್ತಾನೆ ಆಗ ಯ ಶೋದೆ

ಆವಳಂಜಿಸಿದಳವಳು ಪೇಳು ರಂಗವ್ವಾ ನಾ
ನವಳ ಗಾರುವಾಡುವೆ ನಡೆ ಕೃಷ್ಣವ್ವಾ

ಎಂದು ವಂಗನ ಪಕ್ಷ ವಹಿಸುತ್ತಾಳೆ ಬಾಲಕ ಷ್ಣ ಯ ಶೋದೆಗೆ ಎತ್ತಿಕೊಳ್ಳಲು ಕೇಳುವ ಸಂದರ್ಭದಲ್ಲಿ ದಾಸರು ತಾವೆ ಕೃಷ್ಣನ ಹಾಗೆ ಆಡುತ್ತಾರೆ—

> ಎತ್ಕೋದೆಯಮ್ಮ ನಂಗನೆ ತ್ತಿಕೋ ಅಮ್ಮಾ ಬಲು
> ವತ್ತು ಅತ್ತು ಬಂದೀನೆ ಇತ್ತ ಅಮ್ಮಿ ತಿಂದೀನೆ

ಎಂಬ ನುಡಿಯಂತು ಶಿಶುಸಹಜ ಭಾವ ಭಾಷೆಗಳಿಂದ ಪರಾಕಾಷ್ಠೆ ತಲುಪಿದೆ ಪ್ರಸನ್ನವೆಂಕಟದಾಸರು ಈ ಪದವನ್ನು ಸ ಪೂರ್ಣವಾಗಿ ಬಾಲರ ಮಾತುಗಳಲ್ಲೆ ನಿರ್ವಹಿಸಿದ್ದಾರೆ ದೇವರ ಬಗ್ಗೆ ಆತ್ಮೀಯ ತೆಯನ್ನು ಉಂಟುಮಾಡುವುದಕ್ಕಾಗಿ ಕೃಷ್ಣನ ಬಾಲಲೀಲೆಯ ಥ ಸನ್ನಿವೇಶಗಳನ್ನು ಕಲ್ಪಿಸಿಕೊಂಡಿದ್ದಾರೆ

ಪ್ರಸನ ವೆಂಕಟದಾಸರ ಕೀರ್ತನೆಗಳಲ್ಲಿ ಸಮಾಜದ ಡೊಂಕನ್ನು ತಿದು ವ ಅಥವಾ ಸಮಾಜದ ನಡೆನುಡಿಗಳ ವಿಮರ್ಶೆ ಅಷ್ಟಾಗಿ ಕಂಡುಬರುವುದಿಲ್ಲ ಸಮ ಕಾಲೀನ ಸಮಾಜಜೀವನದ ಹೊಳಹುಗಳು ಅಲ್ಲಲ್ಲಿ ಸಂದರ್ಭೋಚಿತವಾಗಿ ಎಡೆಪಡೆ ದಿವೆ ಒಟ್ಟಿನಲ್ಲಿ ಪ್ರಸನ ವೆಂಕಟದಾಸರ ಕಿ ರ್ತನೆಗಳು ವೈವಿಧ್ಯಮಯವಾಗಿದ್ದು ತಮ್ಮ ಉದ್ದೇಶವನ್ನು ಸಫಲಗೊಳಿಸಿವೆ ಇವುಗಳನ್ನು ಪ್ರಸನ್ನ ವೆಂಕಟದಾಸರು ನಿರ್ವಹಿಸಿದ ರೀತಿ ಕೂಡ ಸೊಗಸಾಗಿದೆ ಪ್ರಸನ ವೆಂಕಟದಾಸರ ಶೈಲಿಯಲ್ಲಿ ಪಾಂಡಿತ್ಯಪೂರ್ಣತೆ ಹಾಗೂ ಸರಳತೆ ಎರಡನ್ನೂ ಗುರುತಿಸಬಹುದು ಇವರಿಗೆ ಸಂಸ್ಕೃತ ಭಾಷೆಯಲ್ಲಿ ಕೂಡ ಪರಿಣತಿಯಿತ್ತೆಂಬುದನ್ನು ತಮ್ಮ ಕೃತಿಗಳಲ್ಲಿ ತೋರಿದ್ದಾರೆ ಇವರ ಕೃತಿಗಳಲ್ಲಿ ಪ್ರಾಸ ಅನ ಪ್ರಾಸ ಶಬ್ದಾಲಂಕಾರಗಳನು ವಿಶೇಷ ವಾಗಿ ಕಾಣಬಹುದು ಕೆಲವೊಮ್ಮೆ ಉಪಮೆಗಳನ್ನು ಸಾಲು ಸಾಲಾಗಿ ಬಳಸಿದ್ದಾರೆ—

ಉದಾ ಸಾಲಂಕೃತ ಬಾಲನೊಯ್ದುಡವಿಲಿ ಕೊಲ್ವ
ಆಲಯದ ಕಳ್ಳನಂತೆ ಬಾಲೆಯಂ
ನಾ ಳದೆ ಷಂಡ ಘನಕೊಪದೋಳು ನೂಕಿಸುವಂತೆ
ಬೇಳಲೇನು ದುರ್ಬಲರನು ಆರಸು ತಾ ಶೂಲಕ್ಕೆಳಿಸ ವಂತೆ

ಎಂದು ಒಂದೇ ಚರಣದಲ್ಲಿ ಉಪಮೆಗಳನ್ನು ಅಳವಡಿಸಿ ಗಹನವಾದ ವಿಷಯವನ್ನು ಹೇಳಿದ್ದಾರೆ

ಉದಾ ಎಂಟು ಕಾಡಾನೆ ಎಂಟು ಕಡೆಯಲಿ ನಿಂತಿವೆ
ಗಂಟನಿಕ್ಕಿವೆ ಮೂರು ದಲ್ಲುರಿಯ
ಸುಂಟರಗಾಳಿ ಬ್ಬರಿಸಲು ಗಿಡ
ಗಂಟು ಬಿದ್ದೆ ನೀನಲ್ಲದೆನ್ನಾ

ಎಂಬಲ್ಲಿ ಶ್ಲೇಷೆ ಮತ್ತು ಪಾರಿಭಾಷಿಕ ಪರಿಭಾಷೆಗಳನ್ನು ತಂದಿದ್ದಾರೆ ನಾಟಕೀಯತೆ ಚಮತ್ಕಾರಗಳು ಕೂಡ ಇವರ ಶೈಲಿಯ ಗುಣ ಸತ್ಯಭಾಮೆ ಶ್ರೀಕೃಷ್ಣರ ಸಂವಾದದಲ್ಲಿ ದಶಾವತಾರವನು ಚಮತ್ಕಾರವಾಗಿ ಒಳಸಿಕೊಂಡಿರುವ ಸಂದರ್ಭಗಳಿವೆ—

ಉದಾ ಕೃಷ್ಣ ಬಂದೆ ಕೇಳೆ ಗೋವಿಂದನಾ
ಇಂದುಮುಖಿ ನಿದ್ರೆಬಿಟ್ಟು
ಎಂದು ನೀ ಬಾಗಿಲ ತೆರೆಯೆ

ಸತ್ಯಭಾಮೆ ಗೋವಿಂದ ನೀ ಗೋವೃಂದ ಕಾಯಲು ಹೋಗು

ಕೃಷ್ಣ ಸೋಮಕಖಳನ ಕೊಂದು ನೇಮದಿ ವೇದವ ತಂದ
ಶ್ರೀಮತ್ಸ್ಯಾವತಾರ ಬಂದೆನೆ

ಸತ್ಯಭಾಮೆ ಮತ್ಸ್ಯವಾದರೆ ಆ ಮಹಾಂಬುಧಿಗೆ ಹೋಗು

ಎಂದು ಸಾಗುವ ಈ ಪದದಲ್ಲಿ ದಶಾವತಾರದ ಜೋಡಣೆ ಹೃದಯಂಗಮವಾಗಿ ಸೇರಿದೆ ಪ್ರಸಂಗಕ್ಕೆ ಅನುಗುಣವಾಗಿ ಭಾಷೆಯನು ಪ್ರಯೋಗಿಸುವುದರಲ್ಲಿ ಕೂಡ ಪ್ರಸನ್ನ ವೆಂಕಟದಾಸರು ನಿಪುಣರು

ಉದಾ ಓ ರುಕ್ಮೀಣಿ ತಾಯಾರೆ ಎನ ಮನಸಿಲ್ಕನ್ನ ನಚ್ಚಿ ಕಾರ್ಯಂ
ಕೈಗೊಡೆ ನಾಲು ಎನಕೆ ಎನ್ನ ಸಂತೋಷ ಪಣ್ಣೆರಾಯಿ

ಎಂದು ಆರಂಭವಾಗುವ ಪದದಲ್ಲಿ ಕೊರವಂಜಿಯ ಬಾಯಿಂದ ತಮಿಳು ಮಾತುಗಳನ್ನು ಹೇಳಿಸಿದ್ದಾರೆ ಪ್ರಸನ್ನವೆಂಕಟದಾಸರ ಕೃತಿಗಳಲ್ಲಿ ತೀರಾ ಕ್ವಚಿತ್ತಾಗಿ ಮರಾಠಿಭಾಷೆಯ ಪ್ರಭಾವವನು ಗುರುತಿಸಬಹುದು ಇವರು ಪೌರಾಣಿಕ ಅಂಶಗಳಿಗೆ ಜಾನಪದ ಸ್ಪರ್ಶಕೊಟ್ಟು ಜಾನಪದ ಶೈಲಿಯಲ್ಲಿ ಕೂಡ ಬರೆಯಬಲ್ಲರು—

ಉದಾ ಕೋಲು ಕಾಮನ ಗೆದ್ದ ಕೋಲು ಮಾಯಾಯ ಳನೊದ್ದ
ಕೋಲು ಆನಂದಮುನಿ ಪಿಡಿದೀಹ ಕೋಲೆ
ತಮನೆಂಬವನ ಕೊಂದು ಕಮಲಜನಿಗೆ ವೇದ
ಕ್ರಮದಿಂದ ಕೊಟ್ಟು ಜಗವ ಸಂರಕ್ಷಿಸಿದ
ವಿಮಲಾ ಶ್ರೀಮತ್ಸ್ಯಮಾನದೈವ ಕೋಲೆ

ಎಂಬ ಪದದಲ್ಲಿ ೧೧ ನುಡಿಗಳಿದ್ದು ದಶಾವತಾರಗಳನು ಜಾನಪದ ಧಾಟಿಯಲ್ಲಿ ಹೇಳಿರುವುದರಿಂದ ಸೊಗಸಾಗಿ ಮೂಡಿಬಂದಿದೆ

ಸತ್ವದ ದೃಷ್ಟಿಯಿಂದ ಪ್ರಸನ್ನವೆಂಕಟದಾಸರ ಸಾಹಿತ್ಯ ಪುರಂದರ ಮತ್ತು ಕನಕ ದಾಸರಿಗೆ ಎಣೆಯಾಗುವಂತಿಲ್ಲದಿದ್ದರೂ ಇವರು ಹರಿದಾಸ ಚರಿತ್ರೆಯ ತೃತೀಯ ಹಂತದಲ್ಲಿ ಬಂದ ಗವ ನಾರ್ಹ ದಾಸರ ಗಿದ್ದಾರೆ

## ಆಕರ ಗ್ರಂಥಗಳು

1 ಶ್ರೀ ಪ್ರಸನ್ನ ವೆಂಕಟದಾಸರು ಮತ್ತು ಅದರ ಕೃತಿಗಳು ಡಾ॥ ಎ ಟಿ ಪಾಟೀಲ

2 ಕರ್ನಾಟಕ ಭಕ್ತ ವಿಜಯ ಬೇಲೂರು ಕೇಶವದಾಸರು

# ಗೋಪಾಲದಾಸರು

—ಕೃಷ್ಣವೇಣಿ

## ಜೀವನ ಪರಿಚಯ

ಭಕ್ತಿಯಲಿ ಭಾಗಣ್ಣ ಎಂದು ಪ್ರಸಿದ್ಧರಾದ ಗೋಪಾಲದಾಸರು ದಾಸ ಸಾಹಿತ್ಯದ ದ್ವಿತೀಯ ಘಟ್ಟದ ದಾಸ ಚತುಷ್ಟಯ ರೆಂದು ಪ್ರಖ್ಯಾತರಾದ ದಾಸರು ಗಳಲ್ಲಿ ಒಬ್ಬರು ವಿಜಯನಗರ ಪತನಾನಂತರ ದಾಸಕೂಟವು ಆದವಾನಿ ರಾಯ ಚೂರು ಪ್ರದೇಶಗಳಿಗೆ ಸ್ಥಳಾಂತರಿಸಲ್ಪಟ್ಟಿತು ಅದಕ್ಕೆ ಒದಗಿದ ನೇತೃತ್ವ ಮಂತ್ರಾಲಯದ ರಾಯ ರೆಂದು ಪ್ರಸಿದ್ಧರಾದ ಶ್ರೀ ರಾಘವೇಂದ್ರಸ್ವಾಮಿಗಳದು [1] ಹಿಂದೆ ಪ್ರಹ್ಲಾದಾವತಾರಿ ವ್ಯಾಸರಾಯರು ಪುರಂದರದಾಸರ ಮೂಲಕ ೧೬ನೆಯ ಶತ ಮಾನದ ದಾಸ ಸಾಹಿತ್ಯದಲ್ಲಿ ಯಾವ ಕಾರ್ಯವನ್ನು ಮಾಡಿದರೋ ಅದರ ಪುನಶ್ಚೇತನ ಅದೇ ಪ್ರಹ್ಲಾದಾವತಾರಿ ರಾಘವೇಂದ್ರರಿಂದ ವಿಜಯದಾಸರ ವ ಮಾಂತರ ೧೮ನೆಯ ಶತಮಾನದಲ್ಲಿ ನಡೆಯಿತು ವಿಜಯ ದಾಸರು ಮಧ್ವಸಿದ್ಧಾಂತ ಪ್ರತಿಪಾದಕ ಹರಿ ದಾಸ ಸಾಹಿತ್ಯವನ್ನು ಪುನಃ ಬೆಳಗಿಸಿದುದಲ್ಲದೆ ಗೋಪಾಲದಾಸ ಜಗನ್ನಾಥದಾಸ ಮೊದಲಾದ ಮತ್ತಿತರು ಶಿಷ್ಯರನು ಪ್ರೇರಿಸಿದ ದ ಸಪರಂಪರೆ ಯ ನೇತಾರರು

ವ್ಯಾಸರಾಯ ರಿಂದ ಸ್ಥಾಪಿತವಾದ ವ್ಯಾಸಕೂಟ ಹಾಗೂ ಪುರಂದರರಿಂದ ಸ್ಥಾಪಿತ ವ ದ ದಾಸಕೂಟಗಳ ಗ ರಿ ಒಂದೇ ಅದೆಂದರೆ ವೇದ ವಿಹಿತವಾದ ತತ್ವಗಳನ್ನು ದ್ವೈತ ಮಾರ್ಗಾನುಸಾರಿಯಾಗಿ ವಿವರಿಸುವುದು ವ್ಯಾಸರ ಅನುಯಾಯಿಗಳು ಪಂಡಿತಮಾನ್ಯರಿಗೆ ಸಂಸ್ಕೃತ ಮೂಲಕವಾಗಿ ವ್ಯಾಸಕೃತ ಮೂಲಗಳನು ವಿವರಿಸಿದರೆ ಪುರಂದರರ ಅನುಯಾಯಿಗಳು ಕನ್ನಡದ ಮೂಲಕವಾಗಿ ಆ ತತ್ವಗಳನ್ನು ಕೀರ್ತನಗಳ ಮೂಲಕ ಪ್ರಚಾರಮಾಡಿದರು ವ್ಯಾಸಕೂಟದವರಿಂದಲೇ ದಾಸಕೂಟದವರು ಪ್ರೇರಣೆಯನ್ನು ಪಡೆದು ದ್ವೈತಭಕ್ತಿಯ ಆಚರಣೆ ಸೂತ್ರಗಳನ್ನು ಆತ್ಮೋದ್ಧಾರದ ಮಾರ್ಗವನ್ನು ತಿಳಿಯಾದ ಕನ್ನಡದಲ್ಲಿ ಜನಸಾಮಾನ್ಯರಿಗೆ ತಿಳಿಯಪಡಿಸಿದರು

ಹೀಗೆ ರಾಯರ ಪ್ರಭಾವದಿಂದ ಪ್ರಸಿದಿ ಗೆ ಬಂದ ವಿಜಯದಾಸರ ಪ್ರಮುಖ ಶಿಷ್ಯರು ಗೋಪಾಲದಾಸರು ಹರಿದಾಸ ಪರಂಪರೆಯ ಅಪರೋಕ್ಷ ಜ್ಞಾನಿಗಳಲ್ಲಿ ಒಬ್ಬ ರಾದ ಇವರು ಗಣೇಶಾಂಶರೆಂಬ ಅಭಿಪ್ರಾಯವಿದೆ ಇವರ ಜೀವನದ ಬಗ್ಗೆ ತಿಳಿದು ಕೊಳ್ಳಲು ಸಾಕಷ್ಟು ಪ್ರಮಾಣಭೂತವಾದ ಆಕರಗಳಿಲ್ಲ ಗೋಪಾಲದಾಸರ ತಮ್ಮ ರಂಗದಾಸರು ರಚಿಸಿರುವ ಉಳ ನ ಡಿಗಳುಳ್ಳ ಗೋಪಾಲ ವಿಠಲರ ಚರಿತ್ರೆ ಪದ ವು ನಂಬಲರ್ಹವಾದ ಆಕರವಾಗಿರುವುದು ಅದನ್ನು ಬಿಟ್ಟರೆ ಗೋಪಾಲದಾಸರ ಅನೇಕ

1 ದಾಸ ಸಾಹಿತ್ಯ ದ್ವಿತೀಯ ಘಟ್ಟ ಸಾಧನೆ ಪುಟ XIX

ಪದ-ಸುಳಾದಿಗಳಲ್ಲಿ ಪ್ರಸ್ತಾಪವಾಗಿರುವ ವಿವರಗಳು ಹಾಗೂ ಪರಂಪರಾಗತವಾಗಿ ಬಂದಿರುವ ಪ್ರತೀತಿಗಳಿಂದ ತಿಳಿದು ಬರುವ ಕೆಲವು ವಿಚಾರಗಳು ಇವುಗಳ ಆಧಾರದ ಮೇಲೆ ಇವರ ಜೀವನ ಚರಿತ್ರೆಯನ್ನು ಹೀಗೆ ನಿರೂಪಿಸಬಹುದು

ಗೋ ಪಾಲದಾಸರು ಕ್ರಿ ಶ ೧೭೨೧ರಲ್ಲಿ ರಾಯಚೂರು ಜಿಲ್ಲೆಯ ದೇವದುರ್ಗ ತಾಲ್ಲೂಕಿನ ಮೊಸರ ಕಲ್ಲು[1] (ದಧಿಪಾಷಾಣ) ಗ್ರಾಮದಲ್ಲಿ ಸಾಮಾನ್ಯ ರೈತ ಕುಟುಂಬ ವೊಂದರಲ್ಲಿ ಜನಿಸಿದರು ಇವರ ತಾತ ಮುದ್ಗಲ್ಲಪ್ಪ ತಂದೆ ಮು ರಾರಿ ತಾಯಿ ವೆಂಕಮ್ಮ ಇವರಿಗೆ ಭಾಗಣ್ಣ ಸೀನಪ್ಪ ದಾಸಪ್ಪ ರ ಗಪ್ಪ ಎಂಬ ನಾಲ್ವರು ಮಕ್ಕಳು ನಾಲ್ವರಲ್ಲಿ ಹಿರಿಯ ರಾದ ಭಾಗಣ್ಣನೇ ಮುಂದೆ ಗೋಪಾಲದಾಸರೆಂದು ಪ್ರಸಿದ್ಧರಾದುದು ತಂದೆ ಮುರಾರಿಯು ಮರಣಾನಂತರ ಇದ್ದ ಆಸ್ತಿಯೆಲ್ಲಾ ಕರ ಗುತ್ತಾ ಬಂತು ಅಲ್ಲದೆ ಮುರಾರಿ ಸಹೋದರರು ಸಹಕಾರ ನೀಡಲಿಲ್ಲ ಹಾಗಾಗಿ ತಾಯಿ ವೆಂಕಮ್ಮ ಮಕ್ಕಳೊಡನೆ ಗದ್ವಾಲ ಸಂಸ್ಥಾನಕ್ಕೆ ಸೇರಿದ ಸಂಕಾಪುರಕ್ಕೆ ಬಂದು ಆ ಊರಿನ ಮಾರುತಿ ಗುಡಿಯ ಲ್ಲಿ ವಾಸಿಸಲಾರಂಭಿಸಿದಳು ಮನೆ ಮನೆ ತಿರುಗಿ ತಿರಿದು ಕಾಲಯಾಪನೆ ಮಾಡುತ್ತಿದ್ದಳು ಆ ಗ್ರಾಮದ ಉಪಾಧ್ಯಾಯರ ಬಳಿ ತನ್ನ ನಾಲ್ವರು ಮಕ್ಕಳಿಗೂ ವಿದ್ಯಾಭ್ಯಾಸ ಮಾಡಿಸಿದಳು ಸಂಕಾಪುರದ ಶ್ಯಾನುಭೋಗ ಗುಂಡಪ್ಪ ತಮ್ಮ ಮಗನ ಜೊತೆಯಲ್ಲಿಯೇ ಭಾಗಣ್ಣನಿಗೂ ಧರ್ಮೋಪನಯನ ಮಾಡಿ ಅಗ್ನಿ ಕಾರ್ಯಾಚರಣೆ ಮತ್ತು ಇತರ ಮ ಂತ್ರಗಳನ್ನು ಕಲಿಸಿದರು ನೋಡು ವುದಕ್ಕೆ ಪೆದ್ದನಂತೆ ಕಾಣುತ್ತಿದ್ದ ಭಾಗಣ್ಣ ಮೌನಿಯಾಗಿ ಧ್ಯಾನಪರವಶನಾಗ ತ್ತಿದ್ದ ಭಕ್ತಿಯಿಂದ ಗಾಯಿತ್ರಿ ಮಂತ್ರದ ಸಾಧನೆಯಲ್ಲಿ ತೊಡಗಿದ

ಹೀಗೆ ಧ್ಯಾನ ಪರವಶನಾಗಿ ವಟವೃಕ್ಷದ ಕೆಳಗೆ ಭಾಗಣ್ಣ ಮಲಗಿದ್ದಾಗ ಘಟ ಸರ್ಪವೊಂದು ಸುತ್ತಿಕೊಂಡು ತಲೆಯಮೇಲೆ ಹೆಡೆಯಾಡಿಸುತ್ತಿದ್ದ ವಿಷಯವನ್ನು

ವಟವೃಕ್ಷದಾ
ಮೂಲದಲಿ ಮಲಗಿರಲು ದೇಹದ
ಮ್ಯಾಲೆ ಸರ್ಪನಂದದಿ
ಆಡುತಿರಲದ ಕಂಡು ಮಕ್ಕಳು
ಓಡಿ ಪೇಳ್ದರು ಜನನಿಗೆ
ನೋಡಬಂದ ಜನನಿ ಜನರು ಕೊಂ
ಡಾಡಿದರು ಮಹಿಮೆಗೆ

---

1 ಈಗ ಇದು ಆಂಧ್ರ ಪ್ರದೇಶಕೆ ಸೇರಿದ ಗದಾ ಲಿಗೆ ಸಮೀಪದಲ್ಲಿದೆ ವಿಶಯ ವಿಶ್ವಕೋಶ (ಕರ್ನಾಟಕ) ಪುಟ ೫೭೩

2 ಬೇಲೂರು ಕೇಶವದಾಸರು; ಶಾ ಶ ೧೬೪೦ ಅಂದರೆ ಕ್ರಿ ಶ ೧೭೧೮ರಲ್ಲಿ ಜನಿಸಿದರೆಂದು ಹೇಳಿದ್ದಾರೆ (ಕರ್ನಾಟಕ ಭಕ್ತ ವಿಜಯ ಭಾಗ ೨ ಪುಟ ೭೮)

ಎಂದು ರಂಗಪ್ಪದ ಸರು ತಮ್ಮ ಕ ತಿಯಲ್ಲಿ ಪ್ರಸ್ತಾಪಿಸಿದ್ದಾರೆ [1] ಎರಡು ವರ್ಗಗಳ ಸತತ ಸಾಧನೆಯ ಐದ ಜನರಿಗೆ ಭವಿಷ್ಯ ಹೇಳಬಲ್ಲನೆಂಬ ಆತ್ಮ ವಿಶ್ವಾಸ ಭಾಗಣ್ಣನಲ್ಲಿ ಉಂಟಾಯಿತು ಈ ಸಮಯದಲ್ಲಿಯೇ ತ್ರಿಲಿಂಗದೇಶದ ಕವಿಯೊಬ್ಬನು ಐಜಿಗೆ ಬಂದು ತನ ವಿದ್ವತ್ ಪ್ರದರ್ಶನವಮಾಡಿ ತನಗೆ ಒಂದು ವಿಜಯಪತ್ರವನ್ನು ಕೊಡ ಬೇಕೆಂದು ಕೇಳಿದನು ಆಗ ಅವರು ಅವನನ್ನು ಭಾಗಣ್ಣನ ಬಳಿಗೆ ಕರೆತಂದರು ಭಾಗಣ್ಣ ಅವನಿಗೆ ನರಸ್ತುತಿಯಿಂದ ಸರಸ್ವತಿಯನ್ನು ವಿಕ್ರಯಿಸಬಾರದೆಂದೂ ಭಗ ವಂತನನ್ನು ಕುರಿತು ಕಾವ್ಯಸಾಧನೆ ಮಾಡಬೇಕೆಂದೂ ಹೇಳಿ ಕಳುಹಿಸಿದನಂತೆ ಅನಂತರ ಭಾಗಣ್ಣ ಸಂಕಾಪುರವನ್ನು ಬಿಟ್ಟು ತನ್ನ ತಾಯಿ ತಮ್ಮಂದಿರೊಂದಿಗೆ ಉತ್ತ ನೂರಿಗೆ ಬಂದು ನೆಲಸಿದ

ಉತ್ತನೂರಿನಲ್ಲಿ ಭಾಗಣ್ಣ ಜನರಿಗೆ ಅವರ ಅದೃಷ್ಟವನ್ನು ಹೇಳಲು ಆರಂಭಿ ಸಿದ ಜೊತೆಗೆ ಭಾಗಣ್ಣನ ಅದೃಷ್ಟವೂ ತೆರೆದಂತಾಯ್ತು ಭವಿಷ್ಯ ಕೇಳಲು ಬರುವವರ ಸಂಖ್ಯೆ ದಿನದಿನಕ್ಕೂ ಹೆಚ್ಚಿ ಆದಾಯವೂ ಅಗಣಿತವಾಯಿತು ಕಣ ಭಿಕ್ಷದಿಂದ ಜೀವಿಸುತ್ತಿದ್ದ ಭಾಗಣ್ಣ ಸ್ವತಃ ದುಡಿದು ಜೀವಿಸುವ ಭರವಸೆ ಹೊಂದಿದ ಆದಾಯ ಹೆಚ್ಚುತ್ತಾ ಹೋದಂತೆ ದೀನ ಹೀನರ ಸೇವೆ ಸತ್ಕಾರದಲ್ಲಿ ಅದನ್ನು ಸದುಪ ಯೋಗ ಪಡಿಸಿದ ತಮ್ಮಂದಿರ ಸುಖವನ್ನು ಬಯಸಿ ಅವರನ್ನು ಗದ್ವಾಲಿನ ರಾಜನ ಬಳಿಗೆ ಕಳುಹಿಸಿದ ಆದರೆ ಅಲ್ಲಿ ಅವರು ಕಳ್ಳತನದ ಆಪಾದನೆಯಿಂದ ಹಿಂಸೆಗೊಳ ಗಾಗಿರುವುದನ್ನು ತಿಳಿದು ಅವರನ್ನು ಪುನಃ ಉತ್ತನೂರಿಗೇ ಕರೆಸಿಕೊಂಡ

ಭಾಗಣ್ಣನ ಸತ್ವವನ್ನೂ ಸತ್ಕಾರ್ಯಗಳನ್ನೂ ಕೇಳಿದ ಅಂದಿನ ಗದ್ವಾಲಿನ ದೊರೆ ರಾಮಭೂಪಾಲ ಭಾಗಣ್ಣನ ದರ್ಶನಾಕಾಂಕ್ಷಿಯಾಗಿ ಉತ್ತನೂರಿಗೆ ಬಂದು ಭವಿಷ್ಯಕೇಳಿ ಭೂಮಿಕಾಣಿಗಳನ್ನೂ ಕುದುರೆಗಳನ್ನೂ ಕೊಟ್ಟು ಗೌರವಿಸಿ ಹೋದ ನಂತೆ ಅನಂತರ ಭಾಗಣ್ಣ ಆದವಾನಿಯ ದಿವಾನರಾಗಿದ್ದ ವಂಗನಾಮದ ತಿಮ್ಮಣ್ಣ ಎಂಬುವರ ಬಳಿ ಕೆಲಕಾಲ ಇದ್ದ ಆಗ ದೇಶ ದೇಶಗಳಿಂದ ಜನರು ಅವನ ಬಳಿ ಬಂದು ಭವಿಷ್ಯ ಕೇಳಿಕೊಂಡು ಹೋಗುತ್ತಿದ್ದರು ಅದೇ ಕಾಲದಲ್ಲಿ ಆತ ವೆಂಕಟ ಕೃಷ್ಣ ಎಂಬ ಅಂಕಿತದಿಂದ ಪದಗಳನ್ನು ರಚಿಸಿ ಹಾಡುತ್ತಿದ್ದನಂತೆ

ಹೀಗಿರುವಾಗ ವೆಂಕಟೇಶನ ಭಕ್ತರೂ ಪುರಂದರದಾಸರ ಶಿಷ್ಯರೂ ಆಗಿದ್ದ ವಿಜಯದಾಸರ ಸಂದರ್ಶನ ನರಸಿಂಹಸ್ವಾಮಿಯ ಕ್ಷೇತ್ರಸ್ಥಳವಾದ ಯಾದಗಿರಿಯಲ್ಲಿ ಆಯಿತೆಂದು ಡಾ ಕೆ ಗೋಕುಲನಾಥ್‌ರವರು ತಿಳಿಸುತ್ತಾರೆ ಈ ಯಾದವಗಿರಿ ಯನ್ನು ಈಗಿನ ಆಂಧ್ರಪ್ರದೇಶದಲ್ಲಿರುವ ನೆಲಗೊಂಡ ಜಿಲ್ಲೆಯ ಯಾದಗಿರಿ ಎಂದು

---

1 ಸಂಕಾಪುರದಲ್ಲಿ ಈಗಲೂ ಭಾಗಣ ನಿಗೆ ಅಪರೋಕ್ಷವಾದ ಸ ಳವೆಂದು ವಟವೃಕ್ಷವಿದ್ದ ಗುರುತನೂ ಭಾವಿಯನೂ ತೋರಿಸುತ್ತಾರೆ ಎಂದಿದಾ ರೆ ಬೇಲೂರ ಕೇಶವದಾಸರು (ಕರ್ನಾಟಕ ಭಕ ವಿಜಯ ಪುಟ ೮೨)

ಗುರುತಿಸಬಹುದು ವಿಜಯದಾಸರಿಂದ ಗೋಪಾಲವಿಠಲ ಎಂಬ ಅಂಕಿತವನ್ನು ಪಡೆದ ಭಾಗಣ್ಣ ಅಂದಿನಿಂದ ಗೋಪಾಲದಾಸನೆಂಬ ಹೆಸರಿನಿಂದ ಖ್ಯಾತನಾದನು

ಸಾಮಾನ್ಯವಾಗಿ ಗುರುಗಳ ತಮ್ಮ ಶಿಷ್ಯನಿಗೆ ಅಂಕಿತವನ್ನು ಕೊಡುವಾಗ ಅಂಕಿತಪದವೊಂದನ್ನು ಮಾಡುತ್ತಾರೆ ಅದು ಹೊಸ ಶಿಷ್ಯನ ಅಂಕಿತದಿಂದ ಪ್ರಾರಂಭವಾಗಿ ಗುರುಗಳ ಅಂಕಿತದೊಂದಿಗೆ ಕೊನೆಗೊಳ್ಳುವುದು ರೂಢಿ ಗೋಪಾಲದಾಸರಿಗೆ ಸಂಬಂಧಿಸಿದ ಈ ದಾಸ ದೀಕ್ಷಾಪದವು ಇಂತಿದೆ

ಗೋಪಾಲ ವಿಠಲ ನಿನ್ನ ಪೂಜೆ ಮಾಡುವೆನು
ಕಾಪಾಡೋ ಈ ಮಾತನು
ಅಪಾರ ಜನುಮದಲಿಡಿವನ ಪ್ಯಾಲೆ
ನೀ ಪ್ರೀತಿಯನು ಮಾಡಿ ನಿಜದಾಸರೊಳಿಡು

x x x x x

ಅಂಕಿತವ ನಾನಿತ್ತ ನಿನ್ನ ಪ್ರೇರಣೆಯಿಂದ
ಕಿಂಕರಗೆ ಲೌಕಿಕದ ಡೊಂಕು ನಡತೆಯ ಬಿಡಿಸಿ
ಮಂಕುಜನುಮ ಜನುಮದಲಿದ್ದ
ಪಂಕಪಾರವ ತೋರಿಸಿ
ಶಂಕೆ ಪುಟ್ಟದಂತೆ ಕಾವ್ಯಗಳ ಪೇಳಿದರು
ಸಂಕಟಗಳಟ್ಟಿದಾರಿಗೆ ವೆಂಕಟಕೃಷ್ಣನು ನೀನೆ ವಿಜಯ ವಿಠಲಯೆಂದು
ಅಂಕುರವು ಪಲ್ಲೈಸಿ ಫಲಪ್ರಾಪ್ತಿಯಾಗಲೀ

ಇದರಲ್ಲಿ ಬರುವ ವೆಂಕಟಕೃಷ್ಣನು ನೀನೆ ವಿಜಯ ವಿಠಲ ಎಂಬ ಮಾತಿಗೆ ವೆಂಕಟಕೃಷ್ಣೆಂದು ಪದಗಳಿಗಂಕಿತವು ನೀಡುತಿರೆ ಎಂಬ ರಂಗಪ್ಪದಾಸರ ಮಾತು ಪೂರಕವಾಗಿದ್ದು ಭಾಗಣ್ಣ ವೆಂಕಟಕೃಷ್ಣ ಎಂಬ ಮುದ್ರಿಕೆಯಿಂದ ಕವಿತ್ವ ಮಾಡುತ್ತಿದ್ದ ಎಂಬ ಮಾತಿಗೆ ಪುಷ್ಟಿ ದೊರೆಯುತ್ತದೆ ಆದರೆ ನಮಗೆ ಈ ಅಂಕಿತದಲ್ಲಿ ಸಿಕ್ಕಿರುವುದು ಒಂದೇ ಸುಳಾದಿ ಅದೂ ಒಂದೇ ಆಕರದಲ್ಲಿ[1] ಆ ಸುಳಾದಿಯು ಹೆಚ್ಚು ಆಕರಗಳನ್ನು ಆಧರಿಸಿ ಗೋಪಾಲ ವಿಠಲ ಎಂಬ ಅಂಕಿತದಲ್ಲಿಯೇ ಸ್ವೀಕರಿಸಲಾಗಿದೆ ಎಂದೂ ಹೇಳಿದ್ದಾರೆ[2] ಅಂಕಿತ ಪ್ರದಾನವಾದ ದಿನಾಂಕದ ಬಗ್ಗೆ ಕ್ಷಯನಾಮ ಸಂವತ್ಸರದ ಮಾರ್ಗಶಿರ ಶುದ್ಧ ತ್ರಯೋದಶಿ ಶುಕ್ರವಾರ ಅಶ್ವಿನಿ ನಕ್ಷತ್ರ ಹನುಮಂತ ಕಾಲವು ಎಂದು ಬರೆದು ಈ ಶುಭ ದಿನದಲ್ಲಿ ವಿಜಯದಾಸರು ಗೋಪಾಲದಾಸರಿಗೆ ಅಂಕಿತ ಪ್ರದಾನ ಮಾಡಿದರೆಂದು ಚಿಪ್ಪಗಿರಿಯ ಹಳೆಯ ವಹಿಯೊಂದರಲ್ಲಿ ಅಂಕಿತ ಪದದ

1 ಶ್ರೀ ಗೋಪಾಲದಾಸರ ಕೃತಿಗಳು ಸಂ ಡಾ॥ ಟಿ ಎನ್ ನಾಗರತ್ನ (ಪೀಠಿಕೆ) ಪುಟ iv
2 ಅದೇ ಅಡಿ ಟಿಪ್ಪಣಿ

ಅಡಿಯ ಲ್ಲಿ ಬರದಿರುವ ದಾಖಲೆ ಇದೆ ಈ ವಿವರಗಳು ಕ್ರಿ ಶ ೧೭೪೬ ನವೆಂಬರ್ ೧೪ ಶುಕ್ರವಾರ ಅಶ್ವಿನಿ ನಕ್ಷತ್ರಕ್ಕೆ ಸರಿಹೊಂದುತ್ತವೆ ಆದವಾನಿಯಲ್ಲಿ ಶ್ರೀವ್ಯಾಸ ರಾಜರಿಂದ ಪ್ರತಿಷ್ಠಿತವಾದ ಮಂಗರಾಯ ಎಂದರೆ ಪ್ರಾಣದೇವರ ಸನ್ನಿಧಿಯಲ್ಲಿ ಅಂಕಿತ ಪ್ರದಾನವಾಯಿತೆಂಬ ಪ್ರತೀತಿ ಇದೆ [1]

ಗೋಪಾಲದಾಸರು ಬ್ರಹ್ಮಚಾರಿಗಳಾಗಿದ್ದರೆಂಬುದು ವಿದ್ವಾಂಸರ ಅಭಿಪ್ರಾಯ ಆದರೆ ಗೋಪಾಲದಾಸರ ಎರಡು ಸುಳಾದಿಗಳಲ್ಲಿ ಪ್ರಸ್ತಾಪವಾಗಿರುವ ವಿಷಯ ಇಂತಿದೆ

ಸುತನಾದೆ ನಾ ಮಾತಾಪಿತರಿಗೆ ಗತಿಯನು
ಪತಿಯಾದೆ ನಾ ನೋಡು ಸತಿಯಳಿಗೆ ಇನು
ಪಿತನ ದೆ ನಾ ಎನ್ನ ಸ ರಿಗೆಲ್ಲ ಇನ್ನೂ
ಇತರ ಜನರಿಗೆ ಬಂಧು ಬಳಗವಾದೆ
ಕಡೆ ಹಾಯಿಸು ಭವದ ಕಡಲ ಎನ್ನನು
ಬೇಗ ಮಡದಿಯ ರು ಮಕ್ಕಳು
ಒಡವೆಗಳಲಿ ಮನವು ಕಡಕವಿಲ್ಲದೆ ಎಳೆದು

ಈ ಎರಡು ಸುಳಾದಿಗಳೂ ಏಕೈಕ ಆಕರದಲ್ಲಿ ಮಾತ್ರ ಬಂದಿವೆ ಇಲ್ಲಿ ಸಂತ ಹಾಗೂ ಮಕ್ಕಳು ಎಂಬ ದಕ್ಕೆ ಶಿಷ್ಯರು ಎಂದು ಅರ್ಥೈಸಬಹುದಾದರೂ ಸತಿ ಮಡದಿ ಎಂಬ ಪದಗಳಿಗೆ ಬೇರೆ ರೀತಿಯ ಅರ್ಥ ಕೊಡಲು ಸಾಧ್ಯವಿಲ್ಲ ಭಕ್ತನೊಬ್ಬನು ಹಿಂದಿನ ಭವಗಳನ್ನು ನೆನಸಿಕೊಂಡು ಭಗವಂತನಲ್ಲಿ ಮಾಡಿರುವ ಕಳಕಳಿಯ ಪ್ರಾರ್ಥನೆಯೂ ಆಗಿರಬಹುದಾದ ಸಾಧ್ಯತೆ ಇದೆ ಹೆಚ್ಚಿನ ಆಧಾರಗಳು ದೊರೆಯದೆ ಖಚಿತವಾಗಿ ಏನನ್ನೂ ಹೇಳಲು ಸಾಧ್ಯವಿಲ್ಲ

ಗೋಪಾಲದಾಸರು ಗೋಪಾಲ ವಿಠಲ ಎಂಬ ಅಂಕಿತದಿಂದ ಕೃತಿ ರಚನೆಗೆ ಮೊದಲು ಮಾಡಿದರು ಕ್ರಮೇಣ ತಾವೇ ತಮ್ಮ ತಮ್ಮಂದಿರಿಗೂ ಕ್ರಮವಾಗಿ ವರದ ಗೋಪಾಲ ವಿಠಲ (ಸೀನಪ್ಪ) ಗುರುಗೋಪಾಲ ವಿಠಲ (ದಾಸಪ್ಪ) ತಂದೆ ಗೋಪಾಲ ವಿಠಲ (ರಂಗಪ್ಪ) ಎಂಬ ಅಂಕಿತಗಳನ್ನು ಅನುಗ್ರಹಿಸಿದರು [2] ರಂಗಪ್ಪನ ಹೊರತು ಉಳಿದಿಬ್ಬರೂ ಅಣ್ಣನಂತೆಯೇ ಅಪರೋಕ್ಷ ಜ್ಞಾನಿಗಳಾಗಿ ಹರಿ ಪರವಾದ ಕೀರ್ತನೆಗಳನ್ನು ರಚಿಸಿದ್ದಾರೆ ಹೀಗಿರಲು ಒಮ್ಮೆ ಗೋಪಾಲದಾಸರು ಹಾಗೂ ಅವರ ಇಬ್ಬರು ಸಹೋದರರು ರಾಯಚೂರಿನಲ್ಲಿ ಉತ್ತರಾದಿಮಠದ ಮಠಾಧಿಪತಿ ಗಳಾಗಿದ್ದ ಶ್ರೀ ಸತ್ಯಬೋಧರನ್ನು ಸಂದರ್ಶಿಸಿದರು ಆ ಸತ್ಯಬೋಧರು ಅವರ

1 ಶ್ರೀ ವಿಜಯದಾಸರ ಸಂಕ್ಷಿಪ್ತ ಜೀವನ ಚರಿತ್ರೆ, ಪುಟ ೧೨೪ ೨೫

2 ಕರ್ನಾಟಕ ಭಕ್ತ ವಿಜಯ ಭಾಗ ೨ ಪುಟ ೮೨

ಅಪರೋಕ್ಷ ಜ್ಞಾನವನ್ನು ಪರಿ ಕ್ಷಿಸಲು ಮೂವರನ್ನು ಪ್ರತ್ಯೇಕ ಕೊಠಡಿಗಳಲ್ಲಿ ಕೂಡಿಸಿ ಮೂವರೂ ಕೂಡಿ ಒಂದೇ ಪದವನ್ನು ರಚಿಸುವಂತೆ ಆಜ್ಞಾಪಿಸಿದರು ಆಗ ಮಾರ ಮದಘನನ್ಮಮಾರ ಎಂದಾರಂಭವಾಗುವ ಮೂರು ನುಡಿಯ ಕೀರ್ತನೆಯು ಪಲ್ಲವಿ ಅನುಪಲ್ಲವಿ ಹಾಗೂ ಮೂರನೆಯ ನುಡಿಯನ್ನು ಗೋಪಾಲದಾಸರೂ ಒಂದು ಮತ್ತು ಎರಡನೆಯ ನುಡಿಗಳನು ಕ್ರಮ ವಾಗಿ ಸೀನಪ್ಪದಾಸರೂ ದಾಸಪ್ಪ ದಾಸರೂ ಮಾಡಿದರಂತೆ ಸತ್ಯಬೋ ಧರ ಯೋ ಗಸಾಧನೆಯ ಶಕ್ತಿಯ ವಿಷಯವೇ ಈ ಕೀ ರ್ತನೆಯ ವಸ್ತು ಆ ಸೋ ದರರ ಅಪರೋಕ್ಷ ಜ್ಞಾನವನು ಕಂಡ ವ ರಾಧಿ ಪತಿಗಳು ನೀವು ಮೂವರೂ ನಮ್ಮ ವ ರಕ್ಕೆ ಕಾವ ಧೆ ನು ಕಲ್ಪವೃಕ್ಷ ಚಿಂತಾಮಣಿ ಗಳಂತೆ ಇರುವಿರಿ ಎಂದು ಕೊಂಡಾಡಿದರಂತೆ

ಗೋಪಾಲದಾಸರು ಪ್ರತಿವರ್ಷವೂ ತಿರುಪತಿಯ ಬ್ರಹ್ಮೋತ್ಸವಕ್ಕೆ ಹೋಗ ವ ಪದ್ಧತಿಯನ್ನಿಟ್ಟುಕೊಂಡಿದ್ದರು ಒಮ್ಮೆ ಶ್ರೀನಿವಾಸಚಾರ್ಯರೂ (ಭಾವಿ ಜಗನ್ನಾಥ ದಾಸರು) ಅವರೊಂದಿಗೆ ಬ್ರಹ್ಮೋತ್ಸವಕ್ಕೆ ಹೊರಟರು ಕಾಲು ನಡಿಗೆಯಲ್ಲಿಯೇ ಬೆಟ್ಟವನ್ನು ಹತ್ತಿದರು ಅದರ ಪರಿಣಾಮವಾಗಿ ಶ್ರೀನಿವಾಸಚಾರ್ಯರು ಸಾಯುವ ಸ್ಥಿತಿಗೆ ಬಂದರು ಆಗ ಗೋಪಾಲದಾಸರು ಗುರುಗಳ ದ ವಿಜಯದಾಸರನ್ನು ಸ್ಮರಿಸಿ ಅವರ ಆದೇಶದ ಮೇರೆಗೆ

> ಎನ್ನ ಬಿನ್ನಪ ಕೇಳೊ ಧನ್ವಂತ್ರಿ ದಯಮಾಡೊ
> ಸಣ್ಣವನು ಇವ ಕೇವಲ
> ಒನ್ನ ಬಡಿಸುವ ರೋಗವನ್ನು ಮೊ ಚನ ಮಾಡಿ
> ಚೆನ್ನಾಗಿ ಪಾಲಿಸುವುದೊ ವಿಭುವೆ

ಎಂದು ಧನ್ವಂತ್ರಿಯ ಸ್ತೋತ್ರಮಾಡಿ ತಮ್ಮ ಆಯುಸ್ಸಿನಲ್ಲಿ ನಲ್ವತ್ತು ವರ್ಷಗಳನ್ನು ಶ್ರೀನಿವಾಸಚಾರ್ಯರಿಗೆ ದಾನ ಮಾಡಿದರೆಂದು ಪ್ರತಿ ತಿ ಇದೆ ಈ ಪ್ರಸಂಗವನ್ನು ರಂಗಪ್ಪದಾಸರು

> ಕುಂಡಲಾಗಿರಿಯಲ್ಲಿ ವಿಪ್ರನು ಕಂಡು ವಿಜಯರಾಯ ರ ದಂಡ ನಮನವ ಮಾಡಿ ಕೇಳ್ದನುದ್ದಂಡ ಕ್ಷಯರೋಗ ಕಳಿತ್ತರಾ ಹರುಷದಿಂದುತ್ತುನೂರು ಸೆ ರಲು ಪರಿ ಹರಾಗುವದೆಂದನು ಬರಲು ಭಕ್ತಿಯವೊಳಗೆ ನಾಲ್ವತ್ತೊ ರ ಷ ಆಯುವನಿತ್ತನು

ಎಂಬ ಮಾತುಗಳಲ್ಲಿ ನಿರ್ದೇಶಿಸಿದ್ದಾರೆ ಈ ವೇಳೆಗೆ ಗೋಪಾಲದಾಸರು ಕೇವಲ ೩೩ ವರ್ಷ ಪ್ರಾಯದವರು ಶ್ರೀನಿವಾಸಾಚಾರ್ಯರು ೨೭ ವರ್ಷದವರು ಅಂದರೆ ಕ್ರಿ ಶ ೧೭೫೫ ಭಾವ ಸಂವತ್ಸರ ಆಶ್ವಯುಜ ಮಾಸದಲ್ಲಿ ನವರಾತ್ರಿ ಉತ್ಸವ

ಸಮಯದಲ್ಲಿ ತಿರುಪತಿಯಲ್ಲಿ ಗೋಪಾಲದಾಸರಿಂದ ಆಯುರ್ದಾನವಾಯಿತು.[1] ಈ ವಿವರಗಳು ಕ್ರಿ. ಶ. ೧೭೫೪ರ ಸೆಪ್ಟೆಂಬರ್ ೩ ಗಳ ಉತ್ತರ ಧರ್ಕ್ಕೆ ಸರಿಹೊಂದುತ್ತವೆ. ತಮ್ಮ ರೋಗ ವಾಸಿಯಾದದ್ದು, ಅಪಮೃತ್ಯು ಪರಿಹಾರವಾದದ್ದು ಗೋಪಾಲದಾಸರ ಅನುಗ್ರಹದಿಂದಲೇ ಎಂಬ ಅಚಲ ವಿಶ್ವಾಸವನ್ನು ಜಗನ್ನಾಥದಾಸರು ಹೊಂದಿದ್ದು ಅದನ್ನು ತಮ್ಮ ಕೀರ್ತನೆಯೊಂದರಲ್ಲಿ ಹೀಗೆ ವ್ಯಕ್ತಪಡಿಸಿದ್ದಾರೆ.

---

1 ಶ್ರೀಗೋಪಾಲದಾಸರ ಕೃತಿಗಳು (ಸಂ) ಟಿ. ಎನ್. ನಾಗರತ್ನ, ಪೀಠಿಕೆ ಪುಟ v ಕ. ಭ. ವಿ. ಭಾಗ ೨ ಪುಟ ೧೬೭ರಲ್ಲಿ ಕೇಶವದಾಸರು ಶಾ. ಶ. ೧೬೭೮ರ ವಿರೋಧಿ ಸಂವತ್ಸರದ ಭಾದ್ರಪದ ಶುಕ್ಲ ನವಮಿಯ ದಿವಸ ತಮ್ಮ ಆಯುಸ್ಸಿನಲ್ಲಿ ನಲವತ್ತು ವರುಷ ಧಾರೆ ಎರೆದರು ಎಂದು ಹೇಳಿದ್ದಾರೆ. ಈ ವಿವರಗಳು ಕ್ರಿ. ಶ. ೧೭೫೬ ಸೆಪ್ಟೆಂಬರ್ ೪ ಶನಿವಾರಕ್ಕೆ ಹೊಂದುತ್ತವೆ (An Indian Ephemeris Vol VI by L D Swami Kannu Pillai)

ಕೇಶವದಾಸರು ಗೋಪಾಲದಾಸರ ಜನನ ಶಾ. ಶ. ೧೬೪೪ ಅಂದರೆ ಕ್ರಿ. ಶ. ೧೭೨೨ ಎಂದು ಹೇಳಿದ್ದಾರೆ. ಈ ತೇದಿ ಗೋಪಾಲದಾಸರ ಜನನವನ್ನು ೪ ವರ್ಷಗಳ ಕಾಲ ಹಿಂದಕ್ಕೆ ಒಯ್ಯುತ್ತದೆ. ಮುಂದೆ ಕೇಶವದಾಸರು ಜಗನ್ನಾಥದಾಸರಿಗೆ ಆಯುರ್ದಾನ ಮಾಡಿದ ತೇದಿಯನ್ನು ಕೂಡ ತಪ್ಪಾಗಿ ಶಾ. ಶ. ೧೬೭೮ ಎಂದು ಹೇಳುತ್ತಾರೆ. ಇದು ಕ್ರಿ. ಶ. ೧೭೫೬ಕ್ಕೆ ಹೊಂದಿಕೆಯಾಗುತ್ತಿದ್ದು ಗೋಪಾಲದಾಸರ ಜೀವಿತ ಕಾಲಾವಧಿಯನ್ನೂ ಮುಂದಕ್ಕೆ ತಳ್ಳಿದೆ. ಗೋಪಾಲದಾಸರು ೨೨ ವರ್ಷದವರಿದ್ದಾಗ ಆಯುರ್ದಾನ ಮಾಡಿದರೆಂಬ ಹೇಳಿಕೆ ಇರುವುದರಿಂದ ಆಯುರ್ದಾನವು ಶಾ. ಶ. ೧೬೭೭ ರಲ್ಲಿ ಆಯಿತೆಂದು ಭಾವಿಸಬೇಕಾಗುತ್ತದೆ. ಆದರೆ ಆಗ ವಿರೋಧಿ ಸಂವತ್ಸರ ಆಗಿರಲಿಲ್ಲ. ಈ ತೇದಿ ವಿವರಗಳಲ್ಲಿ ಸ್ವಲ್ಪ ಗೊಂದಲವಿದೆ. ಆದರೆ ಗೋಪಾಲದಾಸರ ನಿರ್ಯಾಣವನ್ನು ಖಚಿತವಾಗಿ ತಿಳಿಸುವ ಅವರ ಸೋದರನ ಕೃತಿಯಲ್ಲಿ ಹೀಗೆ ಬರೆದಿದೆ

> ಎರಡು ವಿಂಶತಿ ವರ್ಷಕೆ ಈ ಪರಿಯ ಚರಿಯ ಮಾಡಿದ
> ಪರಮ ಹರುಷದಿ ಶಾಸ ಬಂಧಿ ಶಿರವ ಭೇದಿಸಿ ತೆರಳಿದ ॥
> ಸರ್ವಜ್ಞಿಯನು ಚಿತ್ರಭಾನು ಪುಷ್ಯ ಕೃಷ್ಣಾಷ್ಟಮಿ ರವಿವಾರದಿ
> ಬಿಟ್ಟು ಪೋದರು ತಂದೆ ಗೋಪಾಲವಿಠಲನ ನಿಜಧ್ಯಾನದಿ ॥
>
> (ಶ್ರೀ ಜಗನ್ನಾಥದಾಸರು ಪುಟ ೧೯೪)

ಈ ಕೃತಿಯಿಂದ ಗೋಪಾಲದಾಸರು ೪೦ ವರ್ಷಗಳ ಕಾಲ ಬದುಕಿದರೆಂಬುದು ತಿಳಿದು ಬರುತ್ತದೆ. ಅಲ್ಲದೆ ಅಲ್ಲೇ ಉಕ್ತವಾಗಿರುವ ತೇದಿ ವಿವರ ಕ್ರಿ. ಶ. ೧೭೬೩ ಜನವರಿ ೭ಕ್ಕೆ ಸರಿಹೊಂದುತ್ತದೆ [An Indian Ephemeris Vol VI by L D Swami Kannu Pillai) ಆದ್ದರಿಂದ ಗೋಪಾಲದಾಸರ ಜನನ ಕ್ರಿ. ಶ. ೧೭೨೩ ಅಂದರೆ ಶಾ. ಶ. ೧೬೪೫ ಶೋಭಕೃತು ಸಂವತ್ಸರದಲ್ಲಿ ಆಯಿತೆಂದು ತಿಳಿಯಬೇಕಾಗುತ್ತದೆ. ಅವರು ತಮ್ಮ ೩೩ನೆಯ ವಯಸ್ಸಿನಲ್ಲಿ ಆಯುರ್ದಾನ ಮಾಡಿದರೆಂಬ ಹೇಳಿಕೆ ಇರುವುದರಿಂದ ಅದು ಕ್ರಿ. ಶ. ೧೭೫೬ ಅಂದರೆ ಶಾ. ಶ. ೧೬೭೮ರ ಧಾತು ಸಂವತ್ಸರವಾಗುತ್ತದೆ.

ಗೋಪಾಲದಾಸರಾಯ ನಿನ ಯ ಪಾದ
ನಾ ಪೊಂದಿದೆನು ನಿಶ್ಚಯ
x x x x x
ಘೋರ ವ್ಯಾಧಿಗಳ ನೋಡಿ ವಿಜಯರಾಯ
ಭೂರಿ ಕರುಣವ ಮಾಡಿ
ತೋರಿದರೆ ಉದ್ಧಾರಕರೆಂದಂದಿ
ನ ರಭ್ಯತವ ಪಾದ ಸೇರಿದೆ ಸಲಹೆಂದು
ಉಪಮೃತ್ಯುವನ್ನು ಪರಿದೆ ಎನ್ನೊಳಗಿದ್ದ
ಅಪರಾಧಗಳ ಮರೆದೆ
ಚಪಲ ಚಿತ್ತನಿಗೊಲಿದು ವಿಪುಲ ಮತಿಯ ನಿತ್ತು
ಜಿಪ್ಪರ್ಣನೆಂದೆನಿಸಿದೆ ತಪಸಿಗಳಿಂದ

ಅಲ್ಲಿಂದ ಉತ್ತನೂರಿಗೆ ಹಿಂತಿರುಗಿದ ಬಳಿಕ ಶ್ರೀನಿವಾಸಚಾರ್ಯರು ಗೋಪಾಲ ದಾಸರ ಸೂಚನೆಯಂತೆ ಪಂಡರ ಪುರಕ್ಕೆ ಹೋಗಿ ಭೀಮರಥಿ ನದಿಯಲ್ಲಿ ವಿಂದಂ ಜಗನಾ ಥವಿಠಲ ನೆಂಬ ಅಂಕಿತವನ್ನು ಪಡೆದರು ಗೋಪಾಲದಾಸರ ಶಿಷ್ಯ ವಂದ ದಲ್ಲಿ ಪ್ರಮುಖರಾದವರು ಐಜಿ ಸ್ವಾಮಿಗಳೆಂದು ಪ್ರಸಿದ್ಧರಾಗಿರುವ ವ್ಯಾಸ ತತ್ವಜ್ಞರು ಜಗನಾ ಥದಾಸರು ಹೆಳವನಕಟ್ಟೆ ಗಿರಿಯಮ್ಮ ದಾಸರ ತಮ್ಮಂದಿರೂ ಅಪರೋಕ್ಷ ಜ್ಞಾನಿಗಳೂ ಆದ ಸೀನಪ್ಪದಾಸ ಹಾಗೂ ದಾಸಪ್ಪದಾಸರು ಒಮ್ಮೆ ಗೋಪಾಲ ದಾಸರು ಅವರ ತಮ್ಮಂದಿರಾದ ಸಿ ನಪ್ಪದಾಸ ದಾಸಪ್ಪದಾಸ ಹಾಗೂ ಐಜಿ ಸ್ವಾಮಿ ಗಳು ಕೃಷ್ಣಾವತಾರದ ಮಹಿಮೆಯ ನು ಕುರಿತು ಮಾತನಾಡುತ್ತ ಿದ್ದಾಗ ದಾಸಪ್ಪ ದಾಸರು ಭಕ್ತಿಪಾರವಶ್ಯರಾಗಿ

ಅಗಲಿ ಸೆ ರಿಸಲಾರೆವೋ । ವೇಣುಗೋಪಾಲ
ಅಗಲಿ ೈರಿಸಲ ರೆವೊ । ನಗಧರ ಪನ್ನಗ ನಗಾಧಿ ಶ ।
ಮೃಗಮದತಿಗರಿತ । ನಗೆಮೊಗ ಚನಿ ಗ
ನಿಗಮಗಳಿಗೆ ಸಿಗ । ದಗಣಿತಸುಗಣ ನಿನ್ನಗಲಿ

ಎಂಬ ಕೀರ್ತನೆಯನ್ನು ರಚಿಸಿ ಹಾಡುತ್ತಾ ಭಾವ ಸಮಾಧಿಗೊಳಗಾದರು ಆಗ ಗೋಪಾಲದಾಸರು ಐಜಿ ಸ್ವಾಮಿಗಳು ಕ ಷ್ಣನ ವೇಣುಗಾನವನ್ನು ತಲ್ಲೀನರಾಗಿ ಆಲಿಸಿದರೆಂದು ಪ್ರತೀತಿ ಹೆಳವನಕಟ್ಟೆ ಗಿರಿಯಮ್ಮನಿಗೆ ಗೋಪಾಲದಾಸರು ಅವಳಿಟ್ಟ ರಂಗೋಲಿಯಲ್ಲಿ ಕೃಷ್ಣಮೂರ್ತಿಯನ್ನು ಸಾಕ್ಷಾತ್ಕರಿಸಿ ಕೊಟ್ಟರೆಂಬ ಮಾತೂ ಇದೆ ವಾಸುದೇವ ವಿಠಲಾಂಕಿತರಾದ ವ್ಯಾಸ ತತ್ವಜ್ಞರು ಬಾಲ್ಯದಲ್ಲಿ ರಾಮಾಚಾರ್ಯನೆಂಬ ಹೆಸರಿನಿಂದ ಶುದ್ಧ ಶುಂಠರಾಗಿ ವರ್ತಿಸಿದವರು ಅವರನ್ನು ಸನ್ಮಾರ್ಗಕ್ಕೆ ಹಚ್ಚುವಲ್ಲಿ ಗೋಪಾಲದಾಸರ ಕಳಕಳಿಯ ಪ್ರಯತ್ನ ಸಾರ್ಥಕ್ಯವನ್ನು ಪಡೆಯಿತು ಹೀಗೆ ಈ ಘಟನೆಗಳು ಗೋಪಾಲದಾಸರು ಶ್ರೀನಿವಾಸಾಚಾರ್ಯರ ಬಗೆಗೆ ತೋರಿದ ಕರುಣೆ

ಗಿರಿಯ ವ್ಯಾನ ಮೇಲಿಟ್ಟಿದ್ದ ವ ಮತೆ ಹಾಗೂ ರಾಮಾಚಾರ್ಯರಲ್ಲಿಟ್ಟಿದ್ದ ಅನುಕಂಪ ಗಳನ್ನು ಸಶಕ್ತವಾಗಿ ಪ್ರತಿಬಿಂಬಿಸುತ್ತವೆ ಅಲ್ಲದೆ ದಾಸರ ಸಾತ್ವಿಕ ವ್ಯಕ್ತಿತ್ವಕ್ಕೆ ಹಿಡಿದ ಕನ ಡಿಯಾಗಿದೆ

ವ್ಯಾಸ ತತ್ವಜ್ಞರು ಮಂತ್ರಾಲಯದ ಭುವನೇಂದ್ರಸ್ವಾಮಿಗಳಿಂದ ಸಂನ್ಯಾಸ ಸ್ವೀಕಾರ ಮಾಡಿ ಪುನಃ ಗೋಪಾಲದಾಸರ ಬಳಿಗೆ ಬಂದು ವಾಸುದೇವ ವಿಠಲ ಎಂಬ ಅಂಕಿತದಲ್ಲಿ ಪದಗಳನ್ನು ರಚಿಸಲಾರಂಭಿಸಿದರು ಬಳಿಕ ಗೋಪಾಲದಾಸರು ವ್ಯಾಸ ತತ್ವಜ್ಞರಿಬ್ಬರೂ ತುಂಗಭದ್ರಾ ತೀರದ ವೇಣಿಸೋಮಪುರದಲ್ಲಿ ವಾಸಿಸುತ್ತಿದ್ದರು ಭಗವದಾರಾಧನೆಯಲ್ಲಿ ತಲ್ಲೀನರಾಗಿ ಇಬ್ಬರೂ ಅನೇಕ ಪದ-ಸುಳಾದಿಗಳನ್ನು ರಚಿಸಿದರು ವ್ಯಾಸ ತತ್ವಜ್ಞರು ವಿರಾಗಿಯಾಗಿ ಯೋಗಿಯಂತಿದ್ದರೆ ಗೋಪಾಲ ದಾಸರು ಮಹಾ ಭೋ ಗಿಗಳಾಗಿ ಕಾಣುತ್ತಿದ್ದರಂತೆ ಕುದುರೆ ಸವಾರಿ ಮೃಷ್ಟಾನ್ನ ಭೋಜನ ಗಂಧ ಕಸ್ತೂರಿಗಳ ಲೇಪನ ಇತ್ಯಾದಿಗಳು ಗೋಪಾಲದಾಸರ ವೈಯಕ್ತಿಕಾ ಚರಣೆಗಳು ಇದರಿಂದಾಗಿ ಅವರು ಹಲವರ ಟಿ ಕೆಗೆ ಒಳಗಾದರೆಂದೂ ಆ ಟೀಕೆಗೆ ಉತ್ತರವಾಗಿ,

> ವೈರಾಗ್ಯ ವಾರ್ಗ ಕೇಳು ದಾರಿದ್ರ್ಯ ವಾರ್ಗ ಕೇಳು
> ವಾರವಣನ ಪಾದ ಆರಾಧಿಸುವುದಕ್ಕೆ
> ನಾರಿಯ ಧರಣಿಯ ಧನವ ಬಿಟ್ಟರಾಯಿತೆ
> ವೈರಾಗ್ಯವಲ್ಲ ಕಂಡ್ಯ ಧ ರರಿಗೆ
> ಶರೀರಕ್ಕೆ ಪಾದ ಭಸ್ಮ ಧರಿಸಿಕೊಂಡು
> ಚೀರವಸ್ತ್ರವನುಟ್ಟು ತಿರುಗಾಡ ತ್ತಿರಲಾಗ
> ಆರಾದರೂ ಅವನ ಅವಧೂತನೆಂತೆಂದು
> ಸಾರಿ ಸಾರಿಗೆ ಇನ್ನು ಕರೆವರಯ್ಯ

ಎಂಬ ವೈರಾಗ್ಯ ಸುಳ ದಿ ಯನ್ನು ರಚಿಸಿದರೆಂದು ಪ್ರತೀತಿ ಇದೆ ಇಂತಹ ವೈರಾಗ್ಯ ನಾರಾಯಣಗೆ ಪ್ರಿಯವಲ್ಲ ವೆಂಬುದನ್ನು ಸ್ಪಷ್ಟಪಡಿಸಿ ಆರಿಯದ ವೈರಾಗ್ಯವನ್ನು ಹರಹಿಕೊಂಬುದಕ್ಕಿಂತ ಹರಿಯನ್ನು ಮೊರೆ ಹೊ ಗಿರಿ ಎಂದಿದ್ದಾರೆ ಈ ಸ ಳಾದಿಯ ಲ್ಲಿ ನಿಜವಾದ ವೈರಾಗ್ಯವನ್ನು ತೋರಿಕೊಟ್ಟಿರುವುದಲ್ಲದೆ ಶಾಸ್ತ್ರ ಶುದ್ಧವಾದ ವ್ಯಾಖ್ಯಾನ ನೀಡಿದ್ದಾರೆ ಗೋಪಾಲದಾಸರ ೮೯ ಕೀರ್ತನೆಗಳು ೭೦ ಸುಳಾದಿಗಳು, ೩೦ ಉಗಾಭೋಗಗಳು ಪ್ರಕಟವಾಗಿವೆ ಎನ್ನುತ್ತಾರೆ ಡಾ॥ ಕೆ ಗೋಕುಲನಾಥ್‌ರವರು

ದಾಸರು ಅನೇಕ ತೀರ್ಥಕ್ಷೇತ್ರಗಳನ್ನು ಸಂದರ್ಶಿಸಿದ್ದಾರೆ ಹಾಗೆ ಸಂದರ್ಶಿಸಿದ ಕೆಲವು ಕ್ಷೇತ್ರಗಳ ವರ್ಣನೆ ಅವರ ಕೃತಿಗಳಲ್ಲಿ ಮೂಡಿ ಬಂದಿವೆ ಶ್ರೀಮುಷ್ಣದಲ್ಲಿ ಶ್ರೀಶವರಾಹಸ್ವಾಮಿಯ ದರ್ಶನವನ್ನು ಮಾಡಿದುದನ್ನು

ದೇವಿ ಅಂಬ ಜವಲ್ಲಿ ರಮಣನೆ ಭೂವರಾಹ ದಯಾನಿಧೆ

x x x x x x

ಅವನಿಯೊಳು ಶ್ರೀ ಮು ಷ್ಣ ಕ್ಷೇತ್ರದಿ ನೀ ವಿಹಾರವ ಮಾಡುವಿ
ಭವ ವಿಮೋಚಕ ಭಕ್ತವತ್ಸಲ ಕವಿಗಳಿಗೆ ಕರುಣಾಕರ

x x x x x x

ಕಂಗಳೆರಡನು ಕಟಿಯೊಳಿಟ್ಟು ಕೋರೆ ಹಲ್ಲನೆ ತೋರುತ
ಧರಿಸಿ ಚಿನ್ಮಯ ಸಾಲಿಗ್ರಾಮದ ಸರವು ಈ ಪರಿ ಬೆಳಗುತ
ಘನ್ನ ಶ್ವೇತ ವರಾಹ ವ ೂರುತಿ ಎನ್ನ ಪೂರ್ವದ ಪುಣ್ಯದಿ
ನಿನ್ನ ಶುಭಕರ ಪಾದ ಪಂಕಜವನ್ನು ಕಂಡೆನು ಇಂದು ನಾ

— ಎಂದು ವರ್ಣಿಸಿದ್ದಾರೆ

ಮಂತ್ರಾಲಯ ಕ್ಷೇತ್ರವನು ಕುರಿತಂತೆ ಇರುವ ಸುಳಾದಿಯಲ್ಲಿ

ಧರೆಯೊಳಗೆ ನಮ್ಮ ಗುರು ರಾಘವೇಂದ್ರರಿನ್ನು
ಇರುತಿಪ್ಪ ಎವರವ ಅರಿತಷ್ಟು ವರ್ಣಿಸುವೆ
ಸ್ಥಿರವಾಗಿ ಮಂತ್ರಾಲಯಪುರ ತುಂಗಾತೀರದಿ
ಹರಿಭಕ್ತ ಪ್ರಹ್ಲಾದ ವರಯೋಗ ಇಲ್ಲಿ ಮಾಡಿ
ಸುರರಿಗಮೃತ ಉಣಿಸಿ ಪರಿಪರಿ ಕ್ರಿಯೆ ಮಾಡಿ

ಎಂದು ಹೇಳಿ ಮಂತ್ರಾಲಯ ಮಹಾತ್ಮೆಯನ್ನು ವಿವರಿಸುವುದಲ್ಲದೆ ಮಂತ್ರಸಿದ್ಧಿಯ ಕ್ಷೇತ್ರ ಇದ ನೋಡಿ ಕೋವಿದರು ಎಂದಿದ್ದಾರೆ

ದಾಸರ ಆರಾಧ್ಯದೈವ ಶ್ರೀಕೃಷ್ಣನ ನಿವಾಸಸ್ಥಳವೆನಿಸಿರುವ ಉಡುಪಿ ಕ್ಷೇತ್ರವನ್ನು ಕುರಿತಂತೆ

ಇದೇ ಶ್ವೇತ ದ್ವೀಪ ಇದೇ ಅನಂತಾಸನ
ಇದೇ ಶ್ರೀ ವೈಕುಂಠ ಇದೇ ಮುಕ್ತಭಾಗ
ಇದೇ ಮಧ್ವ ಸರೋವರ ವಿಧಿಯಿಂದ ಮಾಡಿದ್ದು
ವಿಧಿ ಕಾಣಿಸೊ ವಿರಜಾನದಿಯ ಸ್ನಾನಕೆ ಮು ಂದೆ
ಮದ ಮೆ ಯಿಂದರ್ಧಿಲಿ ಪೂಜಿತ ಮೂರ್ತಿಯು
ವಿಧಿಯಿಂದ ನಿರ್ಮಿತವಾದ ಮ ೂರ್ತಿಯು ನೋಡಾ
ಅಧಿಕಧಿಕವಾಹ ಮೂರ್ತಿ ಅಪ್ರತಿ ಈ ಕ್ಷೇತ್ರ

ಎಂದು ವರ್ಣಿಸಿ ಸದಾ ನಮ್ಮ ಸಲಹೊ ಶ್ರೀ ಉಡುಪಿಯ ಕೃಷ್ಣ ಎಂದು ಮೊರೆ ಇಟ್ಟಿದ್ದಾರೆ

ಪಂಡರಪುರದ ವಿಠಲನನ್ನು ದರ್ಶಿಸುದುದಕ್ಕೆ ಒಂದು ವಿಶೆ ಷ ಪ್ರಸಂಗವೇ ಇದೆ ಅನೇಕ ಕ್ಷೆ ತ್ರಗಳ ಯಾತ್ರೆ ಮಾಡಿದ್ದರೂ ಪಂ್‌ರಪುರಕ್ಕೆ ಹೊ ಗಿರಲಿಲ್ಲವಂತೆ ಆಗ ವಿಠಲನೇ ಮಾರು ವೇಷದಲ್ಲಿ ಬಂದು ಅಲೇನಾಹಿ ಎಂದು ಎಚ್ಚರಿಸಿದನಂತೆ ಅದನ್ನು ತಮ್ಮ ಸುಳಾದಿಯ ಲ್ಲಿ ಹೀಗೆ ವಿವರಿಸಿದ್ದಾರೆ

> ನೀಲ ಕುದ ರೆಯ ನೇರಿ ಶಾಲು ಟೊಂಕಕ್ಕೆ ಸುತ್ತಿ
> ಕಾಂ ಕುಪ್ಪಸ ತೊಟ್ಟು ಮೇಲೆ ಮೋಹನ ಹಾಕಿ
> ತೋಳು ತಾಯಿತ ಶಿರಕೆ ಮೇಲಾದ ವಸ್ತ್ರ ಸುತ್ತಿ
> ಪಾಲಕಸ್ತೂರಿನಿಟ್ಟು ಮೈಗೆ ಗಂಧವ ಪೂಸಿ
> ಪಲಾಯನದಿ ಅಶ್ವವೇರಿ ಹಾರಾಡಿಸ ತ್ತಾ
> ಅಲೇನಾಹೀ ಎಂದು ಕೇಳಿದನಾರವ್ವ ?

ಈ ಇಡೀ ಸ ಳಾದಿಯೇ ಒಂದು ಶಬ್ದ ಚಿತ್ರದಂತಿದೆ ಹೀಗೆ ಈ ಕೆಲವು ವರ್ಣನೆಗಳು ಅವರ ಕ್ಷೇತ್ರ ಪರ್ಯ ಟನೆಗೆ ಸಾಕ್ಷಿ ಭೂತಗಳಾಗಿವೆ ಈ ಮೇಲೆ ಹೇಳಿದ ಕ್ಷೇತ್ರಗಳೇ ಅಲ್ಲದೆ ತಿರುಪತಿ ಕೊಲ್ಲಾಪುರ ಕಾ ಶಿ ರಾಮೇಶ್ವರ ಅಹೋಬಲ ಹಂಪೆ ಮುಂತಾದ ತಿ ರ್ಥಯಾತ್ರೆಗಳನ್ನು ಮಾಡಿರ ವುದಕ್ಕೆ ಅವರ ಕೃತಿಗಳಲ್ಲಿ ಕುರುಹುಗಳು ದೊರೆಯ ತ್ತವೆ

ಕೇವಲ ನಂವತ್ತು ವರ್ಷಗಳ ಜೀವಿತಕಾಲದಲ್ಲಿ ಇಷ್ಟೆಲ್ಲವನ್ನೂ ಮಾಡಿದ ಗೋಪಾಲದಾಸರು ಚಿತ್ರಭಾನುಸಂವತ್ಸರದ ಪುಷ್ಯ ಕೃಷ್ಣಾಷ್ಟಮಿ (ಬಹ ಳ ಅಷ್ಟಮಿ) ರವಿವಾರದಂದು ಉತ್ತನೂರಿನಲ್ಲಿ ದೈವ ಧೀನರಾದರು ಈ ವಿವರಗಳು ಕ್ರಿ ಶ ೧೭೬೩ ್ನವರಿ ೭ ಶುಕ್ರವಾರಕ್ಕೆ ಸರಿಹೊಂದ ತ್ತವೆ ಇಲ್ಲಿ ವಾರಬೇಧವಿದೆ ಅಂತ್ಯ ಕಾ ಲದಲ್ಲಿ ತಮ್ಮ ಹಿಂದಿನ ಹಾಗೂ ಮುಂದಿನ ಜನ್ಮವೃತ್ತಾಂತವನ್ನು ತಮ್ಮ ತಮ್ಮಂದಿರಿಗೆ ತಿಳಿಸುದುದಲ್ಲದೆ ಮುಂದೆ ತಾವು ಮಾಡುವ ಕಾರ್ಯಗಳನ್ನೂ ತಿಳಿಸಿದ ರೆಂಬ ಹೇಳಿಕೆ ಇದೆ

ಗೋಪಾಲದಾಸರ ಸಾವನ್ನು ಕು ರಿತು ಅವರ ತಮ್ಮ ಗೊ ಪಾಲದಾಸರು ಅಣ್ಣ ಭಾಗಣ್ಣ ನೀ ಕಣ್ಣಿಗೆ ಮರೆಯಾಗಿ ಪುಣ್ಯಲೋಕವ ಸೇರಿದ್ಯಾ ಎಂದಾರಂಭ ವಾಗುವ ಕೀರ್ತನೆಯನ್ನು ರಚಿಸಿ ಚಿಕ್ಕಂದಿನಿಂದಲೂ ತಮಗೆ ದಿಕ್ಕಾಗಿ ಪೋಷಿಸಿದ ಆ ಅಣ್ಣನನ್ನು ಸ್ಮರಿಸಿದ್ದಾರೆ ಲೇಸಾಗಿ ಭಜಿಸುವೆ ಗೊ ಪ ಲದಾಸರ ಎನ್ನುವ ಇನ್ನೊಂದ ಕೀರ್ತನೆಯಲ್ಲಿ ಗೋಪಾಲದಾಸರ ಜನನ ವಿಜಯದಾಸರಲ್ಲಿ ಅವರ ಶಿಷ್ಯತ್ವ ತೀರ್ಥಯಾತ್ರೆಯ ವೈಭವ ಪದಗಳ ರಚನೆ ಮತ್ತು ಮ ಧ್ವಮತ ತತ್ತ್ವ ಭೋಧನೆಗಳನ್ನು ನಿರೂಪಿಸಿ ಅವರ ಜೀವನದ ಪ್ರಮುಖ ಘಟನೆಗಳ ಪರಿಚಯವನ್ನು ಮಾಡಿಕೊಟ್ಟಿದ್ದಾರೆ ಕೊನೆಯ ಲ್ಲಿ ಭಾಗಣ್ಣ ಪದದ ಮಹತ್ವವನು ವಿವರಿಸುವ

ದರ ಮೂಲಕ ಆ ಪದದ ಉಚ್ಚಾರಣೆಯಿಂದಾಗುವ ಫಲಪ್ರಾಪ್ತಿಯನ್ನು ಕುರಿತು ಹೀಗೆ ಹೇಳಿದ್ದಾರೆ

> ಭಾಯೆಂದೊಲಿಸಲು ಭಕುತಿ ಪುಟ್ಟಿಸುವನು
> ಶ್ರೀಯರಸನ ಪಾದದಲ್ಲಿ
> ಗಯೆಂದುಚ್ಚರಿಸಲು ಗಂಗಾಜನಕಭವನ
> ತೋಯದಿ ತಡಿಗೊತ್ತುವ
> ಣಾಯೆಂದುಪಾಸನೆ ಮಾಡುವ ಸುಜನರ
> ಕಾಯಕ್ಲೇಶವ ಕಳೆದು
> ಮಾಯಾರಮಣನ ಒಲಿಸ ವಂಥ ದಿವ್ಯವು
> ಪಾಯವ ತೋರಿಪರೊ

ಈಗಲೂ ವೇಣೀಸೋಮಪುರ ಮತ್ತು ಉತ್ತನೂರುಗಳಲ್ಲಿ ಗೋಪಾಲದಾಸರು ವಾಸಮಾಡಿದ್ದ ಮನೆಗಳಿವೆ ಉತ್ತನೂರಿನ ಮನೆಯಲ್ಲಿ ಗೋಪಾಲದಾಸರು ಇಟ್ಟುಕೊಂಡಿದ್ದ ಶಿಥಿಲವಾದ ತಂಬೂರಿ ವಿಠಲಪ್ರತಿಮೆ ಮತ್ತು ದೇವರ ಪೆಟ್ಟಿಗೆಗಳಿವೆ ಎಂದು ಬೇಲೂರು ಕೇಶವದಾಸರು ತಿಳಿಸುತ್ತಾರೆ ಆದರೆ ಈಗ ಅಲ್ಲಿ ಏನೂ ಇಲ್ಲ ಸದ್ಯದಲ್ಲಿ ಆ ತಂಬೂರಿ ಹಾಗೂ ವಿಠಲಪ್ರತಿಮೆಗಳು ಗದ್ವಾಲಿನ ವೆಂಕೋಬಾದಾಸರೆಂಬುವರ ಮನೆಯಲ್ಲಿವೆ [1] ಎಂದಿದ್ದಾರೆ ಡಾ ಟಿ ಎನ್ ನಾಗರತ್ನ ಅವರು ಅವರು ರಚಿಸಿದ ಬ್ರಹ್ಮಾಂಡದ ಚಿತ್ರಪಟವೂ ಅವರ ವಂಶೀಕರಲ್ಲಿದೆ ಎಂದು ಹೇಳುತ್ತಾರಂತೆ

## ಕೃತಿಗಳ ಅವಲೋಕನ

ಗೋಪಾಲದಾಸರು ಬಿಂಬಾಪರೋಕ್ಷಿಗಳಾಗಿ ಸಿದ್ಧಿ ಪಡೆದು ಜೀವನ್ಮುಕ್ತರಾದರೂ ಅವರು ನೀಡಿರುವ ಸಾಹಿತ್ಯದಲ್ಲಿ ಅವರ ಸಾಧನೆ ಬೋಧನೆಗಳೆರಡೂ ಪಡಿಮೂಡಿವೆ ಜ್ಞಾನ ಭಕ್ತಿ ವೈರಾಗ ಗಳನ್ನು ಅರಿತು ಅಡಗಿಸಿಕೊಂಡ ಇವರ ವ್ಯಕ್ತಿತ್ವ ಇವರ ಕೃತಿಗಳಲ್ಲಿ ಮೂಡಿಬಂದಿವೆ[2] ಇವರು ತ್ರಿಕಾಲಜ್ಞಾನಿಯಾಗಿ ಆಗಮಾರ್ಥವಿಶಾರದರಾಗಿ ತ್ಯಾಗ ಭೋಗಗಳನ್ನು ಸಮನ್ವಯ ಮಾಡಿಕೊಂಡು ಶುದ್ಧ ಜೀವನ ನಡಿಸಿದವರು

> ಆಗತಾದಿ ತ್ರಿಕಾಲಜ್ಞಂ ಆಗಮಾರ್ಥವಿಶ ರದಂ ।
> ತ್ಯಾಗಭೋಗ ಸಮಾಯುಕ್ತಂ ಭಾಗಣ್ಣಾರ್ಯಂ ಗುರುಂ ಭಜೇ॥

---

1 ಶ್ರೀ ಗೋಪಾಲದಾಸರ ಕೃತಿಗಳು ಪುಟ vii

2 ಕನ ಡ ವಿಷಯ ವಿಶ್ವಕೋಶ (ಕರ್ನಾಟಕ ಪುಟ ೫೧೨)

ಗೋಪಾಲದಾಸರು ಇತರ ಹರಿದಾಸರುಗಳಂತೆ ಕೀರ್ತನೆ ಸುಳಾದಿ ಉಗಾಭೋಗ–ಈ ಪ್ರಕಾರಗಳ ಮೂಲಕ ತಮ್ಮ ಭಕ್ತಿಭಾವವನ್ನು ಹರಿಯಬಿಟ್ಟಿದ್ದಾರೆ ಆ ಮೂಲಕ ಮಧ್ವಮತತತ್ತ್ವಗಳನು ಪ್ರಸಾರಮಾಡಿದ್ದಾರೆ ಮಧ್ವಮತತತ್ತ್ವ ಪ್ರತಿಪಾದನೆಗೇ ಅವರ ಹೆಚ್ಚಿನ ಕೃತಿಗಳು ಮೀಸಲಾಗಿವೆ ಮಧ್ವಮತಾನುಸಾರವಾದ ಪ್ರವೃತ್ತಿ ನಿವೃತ್ತಿಗಳ ಸಮನ್ವಯವನ್ನು ತಿಳಿಗನ್ನಡದಲ್ಲಿ ತಿಳಿಸಿದ್ದಾರೆ ಎಲ್ಲ ಹರಿದಾಸರ ಕೃತಿಗಳಲ್ಲೂ ಕಂಡುಬರುವಂತೆ ಇವರ ಕೃತಿಗಳಲ್ಲೂ ಆತ್ಮಶೋಧನೆ ಗುರುಸ್ಮರಣೆ ಭಗವಂತನ ಆರಾಧನೆ ಸಂಸಾರ ಅನಿತ್ಯತ್ವ ದ್ವೈತಮತ ಪ್ರತಿಪಾದನೆ ಹಾಗೂ ಉಪದೇಶವಾಣಿಗಳು ಕಂಡುಬರುತ್ತವೆ

ಭಕ್ತಿ ಮಾರ್ಗದ ಪ್ರತಿಯೊಬ್ಬ ಸಾಧಕನಲ್ಲಿಯೂ ಭಕ್ತಜೀವನಕ್ಕೆ ಕಾಲಿಟ್ಟಾಗಿನಿಂದ ಅಪರೋಕ್ಷಾನುಭವವನ್ನು ಪಡೆಯುವವರೆಗಿನ ಅವಧಿಯಲ್ಲಿ ಉಂಟಾಗುವ ಮನಸ್ಸಿನ ಆಂತರಿಕ ತೊಳಲಾಟವನು ಹಲವು ಹಂತಗಳಲ್ಲಿ ಗುರುತಿಸಬಹುದು ಲೌಕಿಕ ವಿಷಯ ಲಾಲಸೆಗಳಲ್ಲಿ ಮಗ್ನವಾಗಿದ್ದ ತನ್ನ ಮನಸಿನ ಮನಸ್ಥಿತಿಗೆ ತಾನೇ ಮರುಗುವುದುಂಟು ಕೊರಗುವುದುಂಟು ಆ ಮೂಲಕ ತನ್ನ ಚಂಚಲ ಮನಸ್ಸನ್ನು ಹದಗೊಳಿಸುವುದುಂಟು ಹಾಗೆ ಮಾಡುವಾಗಿನ ಅವರ ಪಾಡು ಹಾಡಾಗಿ ಹರಿದಿರುವುದುಂಟು ಆಗ ತಮ್ಮ ಮನೋದೌರ್ಬಲ್ಯಗಳನ್ನು ಹಳಿದುಕೊಂಡು ಅನ್ಯಥಾ ಶರಣಂ ನಾಸ್ತಿ ಎಂದು ಶ್ರೀಹರಿಯನ್ನು ಮೊರೆಹೋಗಿ ಸಂಪೂರ್ಣವಾಗಿ ಆತನನ್ನೇ ಆಶ್ರಯಿಸುತ್ತಾರೆ

ಇಂದು ಎನ್ನೊಳಗೆ ನೀ ಬಂದು ನಿಂದೆಯೊ ದೇವ
ಅಂದು ನಾ ನಿನಗೆ ಇಂದು ನಿನ್ನವನೆ

ಎಂದು ಪ್ರಾರ್ಥಿಸಿ

ಅನಂತ ಅಪರಾಧ ಎನ್ನಲ್ಲಿ ಉಂಟೊ ದೇವ
ಇನ್ನು ಮುಂದೆ ಆ ಗೋವು ಅನಂತವಿದ್ದರನ್ನ
ಮುನ್ನ ನಿನ್ನ ಆ ನಾಮವನು ನೆನೆಯದೆ
ಅನಂತ ಅಪರಾಧಕಧಿಕಾ ಆನಾದೆನೊ

ಎಂದು ಭಗವಂತನಲ್ಲಿ ತಮ್ಮ ಮುನ್ನಿನ ಅಪರಾಧಗಳನ್ನು ಬಿನ್ನೈಸಿದ್ದಾರೆ ಅಲ್ಲದೆ ಕರ್ಕಶ ಭವದೊಳು ರಕ್ಕಸಿ ಸಿಗಹಾಕಿ ಸಿಕ್ಕುಬಿಡಿಸದೆ ನೀ ನಕ್ಕು ಸುಮ್ಮನಿರಲು ದಿಕ್ಕಾರೊ ನನಗೆ ಎಂದು ಭಗವಂತನನು ಮೊರೆಹೊಕ್ಕಿದ್ದಾರೆ ಮುಂದುವರಿದು ಹರಿಮೂರ್ತಿಯನ್ನು ನೋಡಲಾಗದ ಅವರ ದೃಷ್ಟಿಮಾಂದ್ಯ ಹರಿಕೀರ್ತನೆ ಕೇಳಲಾಗದ ಅವರ ಕಿವುಡುತನ ಹರಿಮಂತ್ರ ಸ್ತೋತ್ರಗಳನ್ನು ಹೇಳಲಾಗದ ಅವರ ನಾಲಗೆಯ ದೌರ್ಬಲ್ಯ ಹರಿನಿರ್ಮಾಲ್ಯವನ್ನು ಆಘ್ರಾಣಿಸದ ಅವರ ನಾಸಿಕದ

ದೋಷ ಹರಿಪ್ರಸಾದ ಆಸ್ವಾದಿಸದ ರುಚಿಗೆಟ್ಟನಾಲಗೆ ಹೀಗೆ ತಮ್ಮ ಪಂಚೇಂದ್ರಿಯ ಹಾಗೂ ಉಳಿದ ಅಂಗಗಳ ಕಾಯಿಲೆಯ ನ್ನು ದೇವಧನ್ವಂತ್ರಿ ಗೆ ನಿವೇದಿಸುತ್ತ

ಆವರೋಗವೊ ಎನಗೆ ದೇವ ಧನ್ವಂತ್ರಿ
ಸಾವಧಾನದಿ ಕೈಯು ಪಿಡಿದು ನೀ ನೋಡಯ್ಯ

ಎಂದು ಪ್ರಾರ್ಥಿಸಿರುವುದಲ್ಲದೆ ಎನ ಭಾಗದ ವೈದ್ಯ ನೀನೆಯಾದೆ ಅನಾದಿ ಕಾಲದ ಭವರೋಗ ಕಳಿಯ ಯ್ಯ ನಾನೆಂದಿಗೂ ಮರೆಯೆ ನೀ ಮಾಡಿದುಪಕಾರ ಎಂದು ಕಳಕಳಿಯಿಂದ ಕೇಳಿಕೊಂಡಿದ್ದಾರೆ

ಇಷ್ಟಾದರೂ ಅವರ ಚಂಚಲ ಮ ನದ ಆಸೆ ಹಿಂಗಲಿಲ್ಲವೆಂಬ ವ್ಯಥೆ ಅವರನ್ನು ಕಾಡಿದೆ ಆದ್ದರಿಂದಲೇ

ಏಸೇಸು ಜನುಮಂಗಳು ಎನಗೆ ಬಂದು ಪೋದುವು
ನ ಶವಾಗಲಿಲ್ಲ ಮ ನದ ಆಸೆ
ಬೇಸರವಾಗಲಿಲ್ಲ ವಿಷಯಂಗಳಲ್ಲಿ ಬುದ್ಧಿ
ಸಾಸಿರದೊಳಗೊಂದು ಪಾಲಾದರೂ

ಎಂದಿದ್ದಾರೆ ಎಷ್ಟು ಮಾತಾಡಿ ಏನು ತಾನೇ ಪ್ರಯೋಜನ ನಿನ್ನ ದಾಸರ ದಾಸತನ ಉಂಟಾಗಲಿಲ್ಲವೆಂದು ಹಂಬಲಿಸಿದ್ದಾರೆ ಭಗವಂತನನು ಕಾಣಬೇಕೆಂಬ ಅವರ ಸಾಧನೆಯಲ್ಲಿ ಗೇಣುಮುಂದಕೆ ಸಾಗೆ ಮೊಳವು ಹಿಂದಾಗುವುದು ಎಂದು ವ್ಯಥೆ ಪಟ್ಟಿದ್ದಾರೆ ಅಲ್ಲದೆ ಹರಿಕೊಟ್ಟಿರುವ ಪಂಚೇಂದ್ರಿಯ ಗಳು ಹರಿಯ ವಿಷಯಕ್ಕೆ ಪ್ರೇರಿತವಾಗದೆ ಅವುಗಳ ವಿಪರೀತ ವ್ಯಾಪಾರವನ್ನು ಲಕ್ಷಿಸಿದ ದಾಸರು

ಇಂದ್ರಿಯಂಗಳನಿತ್ತೆ ಅದಕೆ ವಿಷಯಂಗಳಿತ್ತೆ,
ಒಂದರ ಸಾಧನಗಳೊಂದಕ್ಕಾಗಿವೆ ಅಯ್ಯ
ಚೆಂದದಿ ನಿನ್ನಯ ಕಥೆಯ ಕೇಳುವ ಕರ್ಣ
ಮಂದಿ ವಾರ್ತೆಯ ಕೇಳಿ ಮರುಳಾದವೋ

ಎ ದು ಹಳಹಳಿಸಿ ಇಂದ್ರಿಯಗಳು ಎಲ್ಲ ಈ ಪರಿ ಒಟ್ಟಾಗೆ ಮುಂದಿನ ಗತಿಯೆನೊ ಮುಕುಂದನೆ ಎಂದು ಹಲುಬಿ ವಿಷಯದಾಸಕುಕಿಯ ಬಿಡಿಸೊ ಎಂದು ಭಗವಂತ ನನ್ನು ಬೇಡಿದ್ದಾರೆ ತಮ್ಮ ಚಿತ್ತ ಚಾಂಚಲ್ಯಕ್ಕೆ ಭಗವಂತನ ವಿಸ್ಮರಣೆಯೇ ಕಾರಣ ವೆಂದು ಅರಿತು ಅವರು ತಂದೆ ನಿಮ್ಮ ವಿಸ್ಮೃತಿ ಎನಗೆ ಮುಖ್ಯಾಪರಾಧ ಎಂದು ಹೇಳಿ ಇನ್ನು ನನಗೆ ನಿನ್ನ ಸ್ಮೃತಿಯೆ ವಿಧಿ ಎಂದು ವಿಧಿಸಿಕೊಂಡು ಚಂಚಲ ಮನಸ್ಸಿಗೆ ಕಡಿವಾಣ ಹಾಕಲು ಪ್ರಯತ್ನಿಸಿದ್ದಾರೆ ಹರಿ ನಿನ ಚರಣಸ್ಮರಣೆ ದೀಪ ನಿಲ್ಲಿಸೆ ಇರಬಲ್ಲಂದೆ ತಮವು ಹರಿದು ಪೋಗುವುದಯ್ಯ ಹರಿ ನಿನ್ನ ಸ್ಮರಣೆಗೆ ಇನ್ನೊಂದು ಕಾಣೆ ಎಂದು ಹೇಳಿ ಹರಿನಾಮಸ್ಮರಣೆಯ ಮಹತ್ವವನ್ನು ಮನವರಿಕೆ

ಮಾಡಿದಾರೆ ಕೊನೆಗೆ ಅಪಾರ ಕರುಣಿ ಗೋಪಾಲವಿಠಲ ಕಾಯೊ ಎಂದು ಹರಿಯನ್ನು ಮೊರೆ ಹೊಕ್ಕಿದ್ದಾರೆ ಅಲ್ಲದೆ ವಿಷಯಾಸಕ್ತಿಯನ್ನು ನುಚ್ಚು ಮಾಡಯ್ಯ ಕಾಮಕ್ರೋಧಗಳುಬವು ಬೇಗ ಎಂದು ಪ್ರಾರ್ಥಿಸಿದ್ದಾರೆ

ಹರಿದಾಸರೆಲ್ಲರೂ ನಶ್ವರದೇಹ ಹಾಗೂ ಮೋಹಕಸಂಸಾರದ ಬಗೆಗೆ ವಿರಾಗವನು ತಾಳಿ ಪರಮಾತ್ಮನ ಭಕ್ತಿ ಜೀವನ್ಮುಕ್ತಿಗಳ ಕಡೆಗೆ ಒಲವು ತೋರಿದರು ಬೇಡ ಬೇಡವೆಂದರೂ ಒದಗಿ ಬರುವ ಈ ಸಂಸಾರಸುಖವನ್ನು ದೃಷ್ಟಿಯಲ್ಲಿಟ್ಟುಕೊಂಡು ಒಗತನದೊಳು ಸುಖವಿಲ್ಲ ಒಲ್ಲೆಂದರೆ ನೀ ಬಿಡೆಯಲ್ಲ ಎಂದು ನವದ್ವಾರಯುಕ್ತ ವಾದ ಈ ಶರೀರವನು ಮತ್ತವ ಅರಿಷಡ್ವರ್ಗಗಳು ಅಷ್ಟಮದಗಳು ಸಪ್ತ ವ್ಯಸನಗಳು ಬಾಲ್ಯ ಯೌವನಾದಿ ಅವಸ್ಥೆ ಮುಂತಾದವುಗಳನು ವರ್ಣಿಸಿ ನೃಪನ ಭೃತ್ಯರು ಎಳೆದೊಯ್ವಾಗ ಹೆತ್ತಾಕ್ಕೆ ನೀ ಒಡಿಸದಿರಲು ಮತ್ತಾರು ಗತಿ ಪೇಳೊ ಎಂದು ಹರಿಯನ್ನೇ ಆಶ್ರಯಿಸಿದ್ದಾರೆ ಇದೇ ಭಾವವನ್ನು ಒಂಬಿಸುವ ಇನ್ನೊಂದು ಕೃತಿ ಈ ಪರಿಯ ಅಧಿಕಾರ ಒಲ್ಲೆ ನಾನು ಶ್ರೀಪತಿಯೆ ನೀನೊಲಿದು ಏನು ಕೊಟ್ಟುದೆ ಸಾಕು ಎಂಬ ಕೀರ್ತನೆ ಇದರಲ್ಲಿ ಆಯವನು ಕೋಟೆಗೆ ಹೋಲಿಸಿ ಅರಿಷಡ್ವರ್ಗ ಗಳನ್ನು ವೈರಿಗಳಿಗೆ ಹೋಲಿಸಿ ಸೊಗಸಾದ ರೂಪಕವನು ನೀಡಿದ್ದಾರೆ

> ಕ್ಷಣಕೆ ನೂರುಪಟಳ ಈ ಕೊಟೆಗೆಲೊ ರಾಯ
> ಅನುವಾದ ದಿವಸ ಒಂದ ದರ್ಸಿಲ್ಲ
> ಮೊನೆಗಾರ ಬಲವಿಲ್ಲ ಇದ್ದವರು ವಶವಲ್ಲ
> ಕೊನೆಗೊಂಡು ಗ್ರಾಮ ಕಾಪಾಡ ಮಬಗೆ ಎಂತೊ
> ಇನಿತನಾಯಕದ ಕೊಂಪೆ ಒಳಗಿನ ವಾಸ
> ವನು ಒಡಿಸಿ ನಿನ್ನ ನಿಜ ಪಟ್ಟಣದೊಳು
> ಮನೆ ಮಾಡಿಕೊಡಲು ನಿನ್ನ ಹೊಂದಿಕೊಂಡು
> ಅನಗಲ ಒದುಕುವೆನೊ ಗೋಪಾಲ ವಿಠಲ

ಎಂದಿದ್ದಾರೆ

ಸಂಸಾರದ ಅನಿತ್ಯತೆಯನು ಸಾರುತ್ತ ಮೂರು ದಿನದ ಭಾಗ್ಯ ಸ್ಥಿರವೆಂದು ನಂಬಿ ನೀ ಕಾರಣ ಕರ್ತನ ಮರೆಯದಿರು ಎಂದು ಎಚ್ಚರಿಸಿ ಶ್ರೀಹರಿಯನ್ನು ಮರೆತ ರಾವಣ ಹಿರಣ್ಯಕ ಕಂಸ ದುರ್ಯೋಧನರಿಗೊದಗಿದ ಸ್ಥಿತಿಯನ್ನು ಬಣ್ಣಿಸಿದ್ದಾರೆ ಎಂದಿಗಿದ್ದರೂ ಈ ಕರೆಕರೆ ಸಂಸಾರ ಉರಗನ ಹೆಡೆನೆರಳು ಗಾಣದ ಒರಳವೆ ಸಂಸಾರವೊ ಎಂದು ಎಚ್ಚರಿಸಿ ಸಂಸಾರ ಸುಖದಲ್ಲಿ ಮೈಮರೆತು ಈ ನಶ್ವರ ಶರೀರ ವನು ನೆಚ್ಚದಿರು ಎಂಬುದನ್ನು ಡೊಂಬನ ಗೂಡಿನಂತೆ ನಂಬದಿರೀ ದೇಹ ನಂಬಿ ನೀ ಕೆಡದಿರು ಇಹಲೋಕ ಸುಖವೆಂಬ ಕಂಬಳಯೊಳಬುತ್ತಿ ನಿಂಬೆಲೆಯಾಗಿನೂಟ ಪರಲೋಕ ಸುಖಸಾರವೆಂಬೋದೆ ನಿಜಭಕುತಿ ಎಂದು ಸಾರಿದ್ದಾರೆ

ಭಕ್ತ ;ಗೆ ಭಗವಂತನಂತೆಯೇ ಅವನ ದಾಸರೂ ಪೂಜ್ಯರು ಏನು ಸುಖವೊ ಎಂಥಾ ಸುಖವೊ ! ಹರಿಯಧ್ಯಾನ ಮಾಡುವವರ ಸಂಗ ಎಂದು ಹೇಳಿರುವುದಲ್ಲದೆ ಕೋವಿದರ ಮನೆ ದ್ವಾರವು ಕಾವಂತೆ ಆ ಊಳಿಗನ ಮಾಡಿ ಆವಲ್ಲಾದರೂ ಇಡಿಸು ಎಂದು ಪ್ರಾರ್ಥಿಸಿರುವಲ್ಲಿ ಭಗವದ್ಭಕ್ತರಲ್ಲಿ ಅವರಿಗಿರುವ ಅಚಲ ವಿಶ್ವಾಸ ವ್ಯಕ್ತವಾಗಿದೆ

ಸಾಮಾನ್ಯವಾಗಿ ಭಕ್ತನ ಭಕ್ತಿಮಾರ್ಗ ನವವಿಧವಾದದ್ದು ಎಂದು ಹೇಳುವುದುಂಟು ಆದರೆ ದಾಸ್ಯ ಸಖ್ಯ ಮಧುರ ವಾತ್ಸಲ್ಯ ಶಾಂತ ಎಂಬ ಪಂಚವಿಧ ಭಾವಗಳಲ್ಲಿ ಭಗವಂತನನು ಸ್ತುತಿಸಿರುವುದು ಕಂಡ ಬರ ತ್ತದೆ ವ ಧ್ವಮತ ತತ್ತ್ವ ಪ್ರತಿಪಾದನೆಯೇ ಗೋಪಾಲದಾಸರ ಮುಖ್ಯ ಉದ್ದೇಶವಾಗಿದ್ದುದರಿಂದ ಮೇಲೆ ಹೇಳಿದ ಪಂಚವಿಧ ಭಾಗಗಳ ನಿರೂಪಣೆ ಹೆಚ್ಚಾಗಿ ಕಂಡ ಬರದಿದ್ದರೂ ಅಲ್ಲಲ್ಲಿ ಅವುಗಳ ಹೊಳಹನ್ನು ಕಾಣಬಹುದು ಹರಿ ಪಾಲಿಸಿರುವ ಸೌಭಾಗ್ಯ ನಿಬಿಡವಾಗಿರುವುದರಿಂದ ಪರರ ಬೇಡದಂತೆ ಎನ್ನ ಮಾಡಯ್ಯ ಹರಿಯೆ ಎಂದು ಆತ್ಮಾಭಿಮಾನವನ್ನು ವ ಕ್ತಪಡಿಸಿರ ವ ಅವರು ಹರಿಯ ದಾಸರ ದಾಸನಾಗಲು ಹಿ ಜರಿಯರು ಹಾಗೆಯೇ ಹರಿಯನ್ನು ಬೇಡಲು ಅಂಜಿಕೆ ಇಲ್ಲ ಆದ್ದರಿಂದಲೇ ನಿನ್ನ ಬಿ ಡ ವೆ ನಲ್ಲದೆ ಅನ್ಯರಿಗೆ ಅಲ್ಪರಿಯೆ ಎಂದಿದ್ದಾರೆ ಎನ್ನ ಸ್ವಾಮಿಯೆ ನೀನು ನಿನ್ನ ಭೃತ್ಯನು ನಾನು ಎಂದೂ ದಾಸತ್ವವಹಿಸದೆ ಕಾಶಿರಾಮೇಶ್ವರ ದೇಶತಿರ ಗಲಾಭಾಸ ಎಂದಿರುವ ಅವರು ದಾಸ ದಾಸ ದಾಸರ ಪೊರೆವ ಭಾರ ನಿನ್ನದೊ ದೇವ ಎಂದು ಹರಿಯನ್ನು ಮೊರೆ ಹೋಗಿದ್ದಾರೆ ಏಕೆಂದರೆ ಹರಿಯೇ ಸರ್ವೋತ್ತಮ ಎಂಬ ತತ್ತ್ವವನ್ನು ಒಪ್ಪಿ ಕೊಂಡಿರುವ ಅವರು ನಾಹಂ ಕರ್ತಾ ಹರಿಃ ಕರ್ತಾ ಎಂಬುದರಲ್ಲಿ ಅಚಲವಾದ ನಂಬಿಕೆ ಉಳ್ಳವರು ಆದ್ದರಿಂದಲೇ ಹರಿಯೆ ಸರ್ವೋತ್ತಮನೆಂದು ನಿಶ್ಚಯದಿಪ್ಪ ನರಗೆ ನಿರಯವಿಲ್ಲ ವೆಂದೂ ಕಪಟರಹಿತವ ದ ಕೋವಿದರು ಶಪಥ ಮಾಡಲಿಬೇಕು ಸರ್ವೋತ್ತಮ ಹರಿಯೆಂದು ಎಂದೂ ಹೆ ೞರ ವುದಲ್ಲದೆ ಸಕಲಸಾಧನ ಹರಿಯಾಧೀನ ವೆಂಬ ನಿಷ ಯ ನ್ನು ಹೊಂದಿ

ಹರಿಯ ಕರ್ತೃತ್ವವು ಅರಿದ ಹಾಗೆಲ್ಲ ಭವ
ಶರಧಿ ಬತ್ತುವುದಿನು ಅರಿದವರಿಗೆ

ಎಂದು ದೃಢ ವಿಶ್ವಾಸ ಹೊಂದಿರುವುದು ಕಂಡುಬರುತ್ತದೆ

ಇಷ್ಟೆಲ್ಲಾ ನಂಬಿಕೆ ಇಟ್ಟು ಭಗವಂತನನು ಧ್ಯಾನಿಸಿದರೂ ಹಾಡಿ ಹೊಗಳಿದರೂ ಅವರ ಕರಗೆ ಓಗೊಡದಿರುವುದನ್ನು ಕಂಡು ಸೃಷ್ಟಿಗೊಡೆಯ ಕೇಳೆಂದಪ್ಪ ನಾ ತುತಿಸಲು ದೃಷ್ಟಿಯಿಂದಲಿ ಎನ ಕಡೆಯ ನೋಡಲೊಲ್ಲೆ ಎಂದು ಭಗವಂತನ ಮೇಲೆ ಕೋಪಗೊಂಡಿದ್ದಾರೆ ಅವನಲ್ಲಿರುವ ಸಲುಗೆಯಿಂದ ನಿಂದಿಸುವುದರ ಮೂಲಕ ಹರಿಯ ನು ಅನೇಕ ಕೃತಿ (ಉಗಾಭೋಗ ಸ ಳಾದಿ)ಗಳಲ್ಲಿ ಸ್ತುತಿಸಿದ್ದಾರೆ ಅವುಗಳಲ್ಲಿ ಒಂದನ್ನು ಉದಾಹರಣೆಗಾಗಿ ಗಮನಿಸಬಹುದು

ನೀರೊಳಗೆ ನಿಂತು ನಿಡ ಗುಷ್ಕ್ಕು ನಾರುವಗೆ
ಚಾರು ಕಸ್ತೂರಿ ಲೇಪನದ ವ ದವೊ
ಭಾರಬೆನ ಲಿ ಪೊತ್ತು ಕೈಕಾಲು ಮುದ ರಿದಗೆ
ಧೀರಶೇಷಶಾಯಿಯಾದ ಮದವೊ
ವೂರೆಯಲಿ ನೆಲ ಕೆದರಿ ಬೆ ರಮೆಲುವವಗೆ
ಸಾರಷಡ್ರಸ ಭೋಜನದ ಮದವೊ

* * * *

ವುೂರ ದಿನದರಸುತನ ಸ್ಥಿರವೇದು ನೀನೆಚ್ಚಿ
ಸೆ ರಿದವರನು ಬಿಡುವುದು ಧರ್ಮವೇನೊ

ಎಂದು ಭಗವಂತನನ್ನು ಪ್ರಶ್ನಿಸ ವ ಸ ೇಹದ ಸಲುಗೆಯನ್ನು ತೋರಿದ್ದಾರೆ ಮೇಲಿನ ಈ ಉಗಾಭೋಗದಲ್ಲಿ ಅತಿಚಮತ್ಕಾರವಾಗಿ ಹರಿಯ ದಶಾವತಾರ ಸ್ತುತಿ ಮಾಡಿದ್ದಾರೆ ಇನೂ ನನ್ನ ಕರ ಪಿಡಿಯದಿದ್ದರೆ ಪಿಡಿಯ ದೆ ಎನ ಕರವ ಸಡಿಲ ಬಿಟ್ಟರೆ ನನ್ನು ಪೊಡವಿಯೊಳಗೆ ನಿನ ಒಬ್ಬರು ನೆಚ್ಚರು ಎಂದು ಭಗವಂತನನ್ನು ಎಚ್ಚರಿಸಿದ್ದಾರೆ ಇವರ ಸಖ್ಯಭಾವದ ನಿರೂಪಣಾ ವಿಶೇಷವೆ ದರೆ ಹರಿಯನ್ನು ಆಕ್ಷೇಪಿಸುವುದರ ಮೂಲಕ ಅವನ ದಶಾವತ ರದ ಚಿತ್ರಣವನ್ನು ಕಣ್ಣಿಗೆ ಕಟ್ಟುವಂತೆ ಬಿಡಿಸಿರುವುದು

ಮಧ ರಭಾವದ ನಿರೂಪಣೆ ಗೋಪಾಲದಾಸರ ಕೃತಿಗಳಲ್ಲಿ ಅಷ್ಟಾಗಿ ಕಂಡು ಒರ ವುದಿಲ್ಲ ನಾಳೆ ಬರುವೆನೆಂದು ಹೇಳಿ ಮಧ ರೆಗೆ ಪೋದ ಬಹಳದಿನ ವಾಯಿ ತಲ್ಲೊ ಉದ್ಧವ ಎಂದಾರಂಭವ ಗುವ ಕೀರ್ತನೆಯಲ್ಲಿ ಗೋಪಿಯ ರೊಡನೆ ತ ವೂ ಒಬ್ಬರಾಗಿ ತಮ್ಮ ಅಸಹಾಯಕತೆ ದೌರ್ಬಲ್ಯ ವಿರಹಯಾತನೆಗಳನ್ನು ಪ್ರಕಟಿ ಸಿಂತ್ತಾ ಕೃಷ್ಣನ ಗುಣಾತಿಶಯಗಳನ್ನು ವರ್ಣಿಸಿದ್ದಾರೆ

ವಾತ್ಸಲ್ಯಭಾವವೂ ಅವರ ಕ ತಿಗಳಲ್ಲಿ ಅಪರೂಪ ಕೃಷ್ಣನ ಬಾಲಲೀಲೆ ಗಳನ್ನು ವರ್ಣಿಸುವ ಒಂದೆರೆಡು ಕೃತಿಗಳಲ್ಲಿ ವಾತ್ಸಲ್ಯದ ಹೊನಲು ಹರಿದಿದೆ ವ ಗ ವಾಗಿ ಮಗನ ಗಿ ಮವ ತೆ ಪುಟ್ಟಿಸಿ ನಿನ್ನ ಮಗುವ ರೂಪವು ತೋರಿ ಮರಳಿ ಎನ ಕಣ್ಣಿಗೆ ಸಿಗದಂತೆ ಎನ್ನ ವ ಗನೆಂದು ಪ ಳಿಕೊಂಡ ಒಗೆ ಆವ ಲೀಲೆಯೊ ಚೆಸಿ ಗನೆ ಎಂದ ರಂಭವಾಗುವ ಸ ಳಾದಿಯಲ್ಲಿ ಸ್ವಪ ದಲ್ಲಿ ಬಾಲಕೃಷ್ಣನ ಲೀಲೆಗಳನ್ನು ಕಂಡರೂ ಅರಿಯದವರಾಗಿ ಸುಳಿದು ಆಡಿದರು ತಿಳಿಯದೆ ನಾ ಪೋದೆ ತಳ ಕು ಹಾಕಿ ಕಾಲು ತೊಡರಿಸಿಕೊಂಡರು ಎಳೆದು ಎಳೆದು ನಿನ್ನ ಎಬ್ಬಿಟ್ಟಿದೆನಲ್ಲ ಎಂದು ವ್ಯಥಿತ ರಾಗಿದ್ದಾರೆ ಅಕಳ ಕಾಯ್ದ ಗೊ ಕುಲವಾಸನನೇಕ ಗ ಣನಿಧಿ ನಾಕೇಶ ವಿನುತ ಎಂದು ಮೊದಲಾಗುವ ಇನೊ ಂದು ಕೀರ್ತನೆಯಲ್ಲಿ ಕೃಷ್ಣನ ಬಾಲಲೀಲೆಗಳನ್ನು ಎಳೆ

ಎಳೆಯಾಗಿ ಬಿಡಿಸಿ ತೋರಿಸಿದ್ದಾರೆ ಆಕಳು ಕಾಯ ಲು ಹೊರಟ ಬಾಲಕೃಷ್ಣನ ರೂಪು ಅವರ ಮನಸ್ಸನ್ನು ಸೆರೆಹಿಡಿದಿದೆ ಅದನ್ನು

ಕೊಳಲನೂದುತ್ತ ಕಿಲಿಕಿಲಿನಗುತ್ತ ಗಿಳಿತಕೊ ರವು ಆಳಿವುಯುರಾ
ವಳಬಳಿಯಲ್ಲಿ ಸುಳಿಯಲು ಕೃಷ್ಣನಲಿವನಂದವ ಪೆ ಳಲಳವಲ್ಲ

ಎಂದು ವರ್ಣಿಸಿದ್ದಾರೆ

ಗೋಪಾಲದಾಸರು ತಮ್ಮ ಕೃತಿಗಳಲ್ಲಿ ಗಣಪತಿ ನರಸಿಂಹ ಶ್ರೀನಿವಾಸ ವ ಂತ್ರಾಲಯದ ಮೂಲರಾಮ ಯಂತ್ರೋದ್ಧಾರಕ ಹನುಮಂತ ಶ್ವೇತವರಾಹ ಸ್ವಾಮಿ ಕೊಲ್ಲಾಪುರದ ಲಕ್ಷ್ಮೀದೇವಿ ((ರಮಾದೇವಿಯವರನ್ನು ಸ್ತುತಿಸಿದ್ದಾರೆ ಇದರೊಂದಿಗೆ ವ್ಯಾಸರಾಯ ರು ವಾದಿರಾಜರು ರಾಘವೆ ಂದ್ರರು ಪುರಂದರ ದಾಸರು ವಿಜಯ ದಾಸರು ಹಾಗೂ ರಾಮಾಚಾರ್ಯರನ್ನು ಕುರಿತು ರಚಿಸಿದ ಕೃತಿ ಗಳೂ ಇವೆ ಹರಿದಾಸರೆಲ್ಲರೂ ಹರಿಯ ಅಂದರೆ ಕೃಷ್ಣನ ವಿಶೇಷವಾಗಿ ವಿಠಲನ ಭಕ್ತರು ಆದರೆ ಗೋಪಾಲದಾಸರಲ್ಲಿ ಕೃಷ್ಣನ ಕುರಿತಂತೆ ವಿಠಲನ ಕುರಿತಂತೆ ಹೆಚ್ಚಿನ ರಚನೆಗಳ ಕಂಡು ಬರುವುದಿಲ್ಲ ತಿರುಪತಿಯ ಶ್ರೀನಿವಾಸನನ್ನು ಕುರಿತಾದ ಕೃತಿರಚನೆ ಮತ್ತೆ ಮತ್ತೆ ಕಂಡುಬರುತ್ತದೆ ಪ್ರತಿವರ್ಷವೂ ಬ್ರಹ್ಮೋತ್ಸವದ ದರ್ಶನಕ್ಕೆ ಹೋಗುತ್ತಿದ್ದುದೂ ಇದಕ್ಕೆ ಕಾರಣವಾಗಿರಬಹುದು

ಪ್ರಬಲೋತ್ತಮನೆನಿಸಿ ಅಬಲರ ಕಾಯ ದಿರೆ ಸಬಲರು ಕಂಡು ಮೆಚ್ಚುವರೆ ಎಂದು ಗಣಪತಿಯನ್ನು ಸ್ತುತಿಸಿದ್ದರೆ ಕ ಯೋ ಶ್ರೀ ನರಸಿಂಹ ಕಾಯೋ ಎಂದು ನಾರಸಿಂಹನನ್ನೂ ಸ್ತುತಿಸಿದ್ದಾರೆ ಇದು ಏನೇ ಚರಿತಯಂತ್ರೋದ್ಧಾರ ಎಂದಾ ರಂಭವಾಗುವ ಕೀರ್ತನೆಯಲ್ಲಿ ಜಪಮಾಲೆ ಹಿಡಿದು ಧ್ಯಾನ ಮುದ್ರೆಯಲ್ಲಿ ಕುಳಿತಿರುವ ಹಂಪೆಯ ಹನುಮಂತನನು ಸ್ತುತಿಸಿದ್ದಾರೆ ಶ್ರೀನಿವಾಸನನ್ನು ಕುರಿತಾದ ಹಲವು ಕೃತಿಗಳಲ್ಲಿ ನಡೆದು ಬಾರಯ್ಯ ಭವ ಕಡಲಿಗೆ ಕುಂಭಸಂಭವ ಎಂದು ಆರಂಭ ವಾಗುವ ಕೀರ್ತನೆಯಲ್ಲಿ ಶ್ರೀನಿವಾಸನ ರಥೋತ್ಸವದ ವೈಭವವನ್ನು ವಣಿ ಸಿದ್ದಾರೆ ಮುಂದುವರಿದು ಆತನನ್ನು ತನ್ನ ಮನಕೆ ಬರುವಂತೆ ಪ್ರಾರ್ಥಿಸಿ

ಪರಿಪರಿಯಿಂದಲಿ ಕರವ ಮುಗಿದು ಸ್ತುತಿಸಿ
ಕರೆದರೆ ಬಾರದ ಗರ್ವತನವು ಯಾಕೋ
ಕರಿಯ ಮೊರೆಯ ಕೇಳಿ ಸಿರಿಗೆ ಹೇಳದೆ ಬಂದೆ
ಕರಿರಾಜ ಅವನಿನ್ನ ಕಿರಿಯಪ್ಪನ ಮಗನೇನೊ
ಶರಣಾಗತ ರಕ್ಷವರವಣ ಎಂಬೊ
ಬಿರುದುಬೇಕಾದರೆ ಸರ್ರನೆ ಬಾರಯ್ಯ

ಗುರ ಡಗವ ನ ಗೋಪಾ೦ವಿಠಲರೇಯ
ಕರುವಿಗ ಮೊರೆಗಾವು ನೆರೆದಂತೆ ಪೊರೆಯುತ

ಎಂದು ಕರೆಯಬವಲ್ಲಿ ತಿಮ್ಮಪ್ಪನ ಒಗೆಗಿರುವ ಆತ್ಮೀಯತೆ ವ್ಯಕ್ತವಾಗಿದೆ

ಗೋಪಾಲದಾ"ರಲ್ಲಿ ತಮ್ಮ ಗ ರುಪರಂಪರೆಯ ಬಗೆಗೆ ಭಕ್ತಿ ಗೌರವಗಳು ಮನೆಮಾಡಿದ್ದವು ಆ ಭಾವಗಳು ಅವರ ಅನೇಕ ಕೃತಿಗಳಲ್ಲಿ ಒಡಮೂಡಿವೆ ಗುರುವಿನ ಗುಲಾಮನಾಗುವ ತನಕ ದೊರೆಯದಣ್ಣ ಮುಕುತಿ ಎನ್ನುವ ಪುರಂದರರ ವಾಣಿನಲ್ಲಿ ಅಚಲವಿಶ್ವಾಸವನ್ನು ತಳೆದರು ಆದ್ದರಿಂದಲೇ ಗೋಪಾಲದಾಸರು ಗುರು ಉಪದೆ ಶವು ಸಂಸಾರ ಶರಧಿಯ ದಾಟಲು ಹರಿಗೊ ಲ ಎಂದು ಹೆ ಳಿದ್ದಾರೆ ಅವರು ತಮ್ಮ ಕೃತಿಗಳಲ್ಲಿ ಗ ರ ಗಳ ಸಾಧನೆ ಸಾಮರ್ಥ್ಯಗಳನ್ನು ಪಡಿಮೂಡಿಸಿದ್ದಾರೆ ಅವರ ನಾಮೋಚ್ಚಾರಣೆಯಿಂದಾಗು" ಪ್ರಯೊ ಜನವನ್ನು ಹೆ ಳಿದ್ದಾರೆ ವ್ಯಾಸರಾಯ ರ ದಿವ್ಯ ಪಾದ ಕಮಲವನ್ನು ಸೇವಿಸುವ ಭಕುತರಿಗೆ ಏಸುಜನ್ಮದ ಸುಕೃತ ಒದಗಿ ಬಂದಿದ್ದವಗೆ ಈ ಸೇವೆ ದೂರಕ ವುದು ಎಂದು ಮೊದಲಾಗುವ ಈ ಕೀರ್ತನೆಯ ಲ್ಲಿ ವ್ಯಾಸರಾಯ ರ ಜೀವನ ಸಾಧನೆಗಳನ್ನು ಚಿತ್ರಿಸಿದ್ದಾರೆ ವಾದಿರಾಜ ಮುನಿಪ ಹಯ ಮುಖ ಪಾದಕಮಲ ಮುನುಪ ಎಂದಾರಂಭವಾಗುವ ವಾದಿರಾಜರ ಸ್ತುತಿಯ ಲ್ಲಿ ವಾದಿರ ಜರು ಸಾಧಿಸಿ ತೋರಿಸಿದ ಕೆಲವು ವಿಶಿಷ್ಟ ಮಹಿಮೆಗಳ ಪರಿಚಯ ವನ್ನು ಮಾಡಿಕೊಟ್ಟಿದ್ದಾರೆ ರಾಘವೇಂದ್ರ ಗುರುಗಳ ಕುರಿತಾದ ಕೃತಿಯ ಲ್ಲಿ ಗ ರು ರಾಘವೇಂದ್ರರ ಚರಣ ಕಮಲವನ್ನು ಸ್ಮರಿಸುವ ಮನುಜರಿಗೆ ಕರೆಕರೆಗೊಳಿಸುವ ದುರಿತ ದ ಭೃತವಿಲ್ಲ ವೆಂದು ಹೇಳಿ ಅವರು ಮಾಡಿದ ಕ ರ್ಯಗಳನ್ನು ಕುರಿತು ಹೇಳುತ್ತಾ ರಾಘವೇಂದ್ರ ಪದದ ಮಹಿಮೆ ಯನು

ರಾ ಎನ್ನೆ ದುರಿತ ರಾಶಿ'ಗಳ ದಹಿಸುವ
ಘ ಎನ್ನೆ ಘನಜ್ಞಾನ ಭಕುತಿ ಈವ
ವೇಂ ಎನ್ನೆ ವೇಗದಿ ಜನನ ಮರಣ ದೂರ
ದ್ರ ಎನೆ ದ್ರವಿಣಾರ್ಥ ಶ್ರುತಿ ಪ್ರತಿಪಾದ್ಯನಕಾಂಬ

ಎಂದು ವರ್ಣಿಸಿದ್ದಾರೆ

ಜಟಿಲವಾದ ಸಂಸ್ಕೃತ ತತ್ತ್ವಗಳನ್ನು ಮೊತ್ತಮೊದಲಿಗೆ ಕನ ಡಿಸಿಕೊಟ್ಟವರು ಪುರಂದರರು ಹಾಗಾಗಿ ಪುರಂದರ ಬಗೆಗೆ ಗೋಪಾ೦ದಾಸರಿಗೆ ಅಪಾರ ಗೌರವ ಆ ಗೌರವವನ್ನ ತಮ್ಮ ಪುರ ದರರಾಯ ರ ಪುಣ ನಾಮಸ್ಮರಣೆ ಇನ್ನು ಜಪಿಸಿರೊ ಸುಜನರು ಎಂಬ ಕ ತಿಯಲ್ಲಿ ವ್ಯಕ್ತಪಡಿಸಿದ್ದಾರೆ ಕೊನೆಯ ಲ್ಲಿ

ಪುಯೆಂದು ಉಚ್ಚರಿಸೆ ಪುಣ್ಯ ಕವ ರ್ಕೆ ಧರ್ಮಸಹಾಯವಾಗಿ ಒದಗುವುದು
ರಾ ಯನ್ನೆ ಜ್ಞಾನಾಖ್ಯವೆಂಬರತ ನ ರ್ಥಗಳು ಆಯಾಸಿಲ್ಲದೆ ಬಪ್ಪವು

ದಾ ಯೆಂದು ಉಚ್ಚರಿಸೆ ಸರ್ವಕಾರ್ಯಗಳು ದದಾತಿ ಎಂದಾಗ ಪುವು
ರ ಯನ್ನೆ ರಾಜಗೋಪಾಲ ವಿಠಲ ತನ ಸಾಯುಜ್ಯವನು ಇತ್ತು ಸ ಹುವನು
ಸರ್ವದಾ

ಎಂದು ಹೇಳಿದ್ದಾರೆ ಇಲ್ಲಿ ಪುರಂದರ ಎಂ ಎ ಪದ ಪೂರ ದ ರಾ ಎಂದಾಗಿದೆ

ಇನ್ನು ತಮ್ಮ ನೇರ ಗ ರುಗಳಾದ ವಿಜಯದಾಸರ ಬಗೆಗೆ ಅನೇಕ ಕೃತಿಗಳನ್ನು ರಚಿಸಿ ಗ ರುಭಕ್ತಿಯ ಕಾಣಿಕೆಯನ್ನು ಸಲ್ಲಿಸಿದ್ದಾರೆ ಅವರನ್ನು ಕೆ ರಿತಾದ ಕೃತಿಗಳಲ್ಲಿ ಅವರ ಜಿ ವನ ಸಾಧನೆಗಳ ಹೆಚ್ಚಗಳನು ಗ ರುತಿಸಿದ್ದಾರೆ ಅವರ ಮಹಿಮೆ ಯ ನ್ನು ಎಷ್ಟು ಕೊಂಡಾಡಿದರೂ ಸಾಲದೆನಿಸಿದೆ ಸ್ಮರಿಸುವೆ ನಾ ನಿಮ್ಮ ಚರಣಕಮ ಲ ಗುರು ವಿಜಯ ರಾಯ ಎಂದಾರಂಭವಾಗುವ ೨೧ ನ ಡಿಗಳ ಈ ಕಿ ರ್ತನೆಯಲ್ಲಿ ವಿಜಯದಾಸರ ಸಂಕ್ಷಿಪ್ತ ಜಿ ವನ ಚರಿತ್ರೆಯನ್ನೇ ನಿರೂಪಿಸಿದ್ದಾರೆ ವಿಜಯ ರಾಯರ ನೆನೆದು ದಿಗ್ವಿಜಯ ಮಾಡಿರೊ ರುಜುಮಾರ್ಗ ಹಿಡಿಸಿನ್ನು ನಿಜಪುರಕೆ ಸೆ ರಿಪರೊ ಎಂಬ ಕೀರ್ತನೆಯ ಲ್ಲಿ ವಿಜಯದಾಸರ ನಾಮಸ್ಮರಣೆಗಿರುವ ಶಕ್ತಿಯನು ವಿವರಿಸುತ್ತಾ

ವಿ ಎಂದು ಜಪಿಸಲು ವಿರಕುತಿ ದೊರಕ ವುದು
ಜ ಎನೆ ಜನನ ಮ ರಣ ನಾಶವು
ಯ ಎನ್ನೆ ಎಲ್ಲದಕ್ಕಿಂತ ಭಕುತ್ಯಧಿಕಿತ್ತು
ರಾ ಎನ್ನೆ ರಾಯ ರಾಯರನ ತೋರುವುದು

ಎಂದು ಹೇಳಿದ್ದಾರೆ

ಪಂಡಿತ ರಾಮಾಚಾ ರ್ಯರ ಕುರಿತಾದ ಕೀರ್ತನೆಯ ಲ್ಲಿ ಕಂಡೆ ಕರುಣೆಗಳೊಳು ಅಗ್ರೇಸರರಾದ ಪಂಡಿತ ರಾಮಾರ್ಯರ ! ಕೊಂಡಾಡ ಅವರನು ಎಷ್ಟರವ ನಾನು ಕಂಡೆ ಎನ್ನ ಮನಕುತ್ಸಾಹವಾಗಿ ಎಂದು ಹೇಳಿ ಅವರ ಪಾಂಡಿತ್ಯಕ್ಕೆ ತಲೆಬಾಗಿದ್ದಾರೆ ಈ ಕೃತಿಯಲ್ಲಿ ರಾಮಾಚಾರ್ಯರ ಕಾರ್ಯಗಳನ್ನು ಮನಸಾರೆ ಕೊಂಡಾಡಿದ್ದಾರೆ

ಗೋಪಾಲದಾಸರ ಮಧ್ವಮತನಿಷೆ ಅಪಾರವಾದದ್ದು ಮಧ್ವಮತದ ಸಿದ್ಧಾಂತ ಪ್ರಮೇಯ ಗಳನು ಸರಳವಾಗಿ ನಿರೂಪಿಸುವುದೇ ಅವರ ಉದ್ದೇಶ ಹಾಗೂ ಪರಮಗುರಿ ಹಾಗಾಗಿ ತತ್ತ್ವನಿರೂಪಣೆಗೆ ಹೆಚ್ಚಿನ ಪ್ರಾಧಾನ್ಯ ಸಂದಿದ್ದು ತತ್ವ ಗಳನ್ನು ತಿಳಿಸುವ ಕೃತಿಗಳಿಗೆ ಹೆಚ್ಚಿನ ಪಾಲು ಸಂದಿದೆ ಸ್ವಮತ ಪ್ರತಿಷಾ ಪನೆಯ ವೀರನಿಷೆ ಯಲ್ಲಿ ಪರಮತ ಖಂಡನೆಯನ್ನು ಮಾಡಲೂ ಹಿಂಜರಿದಿಲ್ಲ

ಪದ್ಧತಿ ತಿಳಿಸಿನು ಮಧ್ವಮತಾನುಸಾರ
ಶುದ್ಧ ಜ್ಞಾನವ ಕೊಟ್ಟ ಪದ್ಧಮತಗಳಿನಿ
ವೇದ್ದವೆನಿಸಿ ಪೊದ್ದಿ ಸದಂತಘ ಒದ್ದು ಕಡೆಗೆ ನೂಕಿ
ತಿದ್ದಿಸಿ ಎನ್ನನು ಉದ್ಧರಿಸು

ಎಂದು ಹೇಳುವಲ್ಲಿ ಮಧ್ವಮತದ ಬಗೆಗೆ ಅವರಿಗಿದ್ದ ಅಭಿಪ್ರಾಯ ವ್ಯಕ್ತವಾಗಿದೆ ಸಿರಿಮಧ್ವಮತದವನು ಪೊಂದದ ಎಪ್ಪನು ದುರುಳ ನೀಭ್ರಾಂತ್ಯಜ ಎಂಬುದನ್ನು ನಂಬಿದ್ದವರು ಆದ್ದರಿಂದಲೇ ಮುನಿಜನನ್ನವು ಮೇಲೆ ವೈಷ್ಣವನಾಗಿ ಶ್ರೀನಾಥ ಸೃಜಿಸಿದೆಯೊ ಅವನಿಯೊಳಗೆ ಎನ್ನುವಲ್ಲಿ ವೈಷ್ಣವನಾಗಿ ಹುಟ್ಟಿಸಿದ ಹರಿಯ ಬಗೆಗೆ ಕೃತಜ್ಞತಾಭಾವವನ್ನು ವ್ಯಕ್ತಪಡಿಸಿದ್ದಾರೆ ಹರಿ ಕರ್ತೃತ್ವ ತಿಳಿದು ತಾರತಮ್ಯ ಪಂಚಭೆ ದ ಅರಿತವರಿಗೆ ಒಲಿದ ಗೊ ಪಾಲವಿಠಲ ಎಂದೂ ಹೆ ಳಿದ್ದಾರೆ ಅಲ್ಲದೆ ಮಾರಸಮತ ಪೊಂದಿದವರನು ಪೊರೆಯೆಂದು ಕರವ ಮ ಗಿದು ಮುಖ್ಯಪ್ರಾಣನನ್ನು ಪ್ರಾರ್ಥಿಸಿದ್ದಾರೆ ಶ್ರೀಹರಿ ಸರ್ವಸ್ವತಂತ್ರ ಸರ್ವಜ್ಞ ಸರ್ವವ್ಯಾಪ್ತ ಆದ್ದರಿಂದಲೇ

> ಎಲ್ಲಿ ನೋಡಲು ನೀನಿಲ್ಲದ ಸ್ಥಳವಿಲ್ಲ
> ಎಲ್ಲರಂತರ್ಯಾಮಿ ಎಲ್ಲಿಯು ನೀನೆ
> ವಿಶ್ವತೋಮುಖ ನಿ ನೆ ವಿಶ್ವತೋಚಕ್ಷು ನೀನೆ
> ವಿಶ್ವತೋಬಾಹು ನೀನೆ ವಿಶ್ವತೋಹಸ್ತ ನೀನೆ
> ವಿಶ್ವತೋ ಶ್ರವಣನೆ ವಿಶ್ವಾಧಾರಕ ನೀನೆ
> ವಿಶ್ವವ್ಯಾಪಕ ಸರ್ವ ವಿಶ್ವವ ಯನು ನೀನೆ
> ವಿಶ್ವನ ಮಕ ಹರಿ ಗೋಪಾಲವಿಠಲ
> ವಿಶ್ವಾಸಕೊಡು ನಿನ ವಿಶ್ವಚರಣದಲ್ಲಿ

ಎಂದು ವಿಶ್ವಾಧ ರಕನಾದ ಶ್ರೀಹರಿಯನ್ನು ಸ್ತುತಿಸುವುದರ ಮ ಊಲಕ ತಾವು ನಂಬಿದ್ದ ತತ್ವವನ್ನು ವಿವರಿಸಿದ್ದಾರೆ

ಹರಿ ಸರ್ವೋತ್ತಮನಾದರೆ ಸಿರಿ ಆತನ ರಾಣಿ ಆದ್ದರಿಂದ ಶ್ರೀಹರಿಗೆ ಪ್ರಾಧಾನ್ಯವಿದ್ದಷ್ಟು ಲಕ್ಷ್ಮೀದೇವಿಗೂ ಇದೆ ಕ್ಷರ ಕ್ಷರಗಳಲ್ಲಿ ವ್ಯಾಪ್ತಳಾದ ಲಕ್ಷ್ಮಿಯೂ ಶ್ರೀಹರಿಯ ಇಚ್ಛಾನುಸಾರ ಎಲ್ಲ ಸೃಷ್ಟಿ ಕಾರ್ಯಗಳನ್ನೂ ನಡೆಸುತ್ತಾಳೆ ಅವಳೇ ಪ್ರಕೃತಿ ನಿಯಾಮಕಳು

> ಹರಿಯಾಜ್ಞೆಯಿಂದಲಿ ಜಡಪ್ರಕೃತಿದೆಸೆಯಿಂದ
> ವರತ್ರಿಗುಣಾತ್ಮಕವಾದಂಥ ಮಹತತ್ವ ಅ
> ದರಿಂದ ವೈಕಾರಿಕ ತೈಜಸ ತಾಮಸವನ್ನು
> ಭರಿತವಾದಂಥ ಅಹಂಕಾರ ತತ್ವ
> ಪರಿಪರಿ ಸೃಷ್ಟಿಸಿದೆ

ಎಂದು ಅವಳನ್ನು ಸ್ತೋತ್ರಮಾಡುವಲ್ಲಿ ಅವರು ಈ ವಿಚಾರವನು ವಿವರಿಸುತ್ತಾರೆ ಬ್ರಹ್ಮ ಮೊದಲಾಗಿ ಇಂದ್ರಿಯಾಭಿಮಾನಿದೇವತೆಗಳ ಇಂದ್ರಿಯಗಳ ಪಂಚಮಹಾ ಭೂತಗಳ ಮತ್ತು ಸಕಲ ತತ್ತ್ವೇಶರುಗಳ ಸೃಷ್ಟಿಯೂ ಅವಳಿಂದಲೇ ಎಂದು ಹೇಳಿದ್ದಾರೆ

ನಾವಸ್ವತಂತ್ರರು ನೀ ಸರ್ವಸ್ವತಂತ್ರ ಎಂಬ ದು ಅವರ ಧೋರಣೆ ಕಾವ ಕೊಲ್ಲುವನು ಅವನೆ ಎಲ್ಲವೂ ಶ್ರೀಹರಿಯು ಆದೆ ಶದಂತೆ ಮಾತ್ರ ನಡೆಯಬಲ್ಲುದು ಎಲ್ಲಾ ಅವನ ಅಧಿ ನವಾದ್ದರಿ ದ ಚೇತನನಹುನೋ ನಿ ಚಲಿಸಿ ಚಿವಿಸುವೆನು ಎಂಬುದನು ಒಪ್ಪಿಕೊಂಡಿದ್ದಾರ

ಶ್ರೀಹರಿ ತನ ಭಕ ನಿಗೆ ಏನೇ ಕೊಡುವುದಾದರೂ ಅದು ಪ್ರಾಣದೇವರ ಮ ಖ ಂತರವೇ ಆದ್ದರಿಂದ ಭಕ್ತ ತನ್ನ ಪೂಜಾದಿಗಳನ್ನು ಮುಖ್ಯ ಪ ಣಾಂತರ್ಗತ ನಾದ ಶ್ರಿ ಹರಿಗೆ ಸಲ್ಲಿ ವೇಕು ಇಂತಹ ಗುರು ಸ್ಥಾನವನ್ನು ಪಡೆದಿರ ವ ಪ್ರಾಣ ದೆ ವರ ಸ್ತುತಿ ಹರಿದಾಸರಲ್ಲಿ ಒಂದು ಪರಂಪರೆಯಾಗಿ ಬಂದಿದೆ ಒದರೊಂದಿಗೆ ಹನುಮ ಭೀಮ ಈ ಎರಡೂ ಶ್ರೀ ವ ನ್ಮಧ್ವಾಚಾರ್ಯರ ಮೊದಲಿನ ಎರಡು ಅವತಾರಗಳೆಂಬ ನಂಬಿಕೆ ಮಧ್ವಮತಾನ ಯಾಯಿಗಳಲ್ಲಿದೆ ಆದ್ದರಿಂದಲೇ ಗೋಪಾ ದ ಸರ ಕೃತಿಗಳಲ್ಲೂ ಹನುಮ ಭೀವ ಮಧ್ವ ರ ಸ್ತೋತ್ರಗಳು ವಿಪುಲ ವಾಗಿ ಒಂದಿವೆ ಈ ಅವತಾರತ್ರಯವನ್ನು ಕ ರಿತಂತೆ ಸಂಕ್ಷಿಪ್ತವಾದ ಹಾಗೂ ದಿ ರ್ಘ ವಾದ ವಿವರಣೆಗಳನೊ ಂಡ ಕ ತಿಗಳೂ ಇವೆ

ಗೊ ಪಾಲದಾಸರು ಒಬ ಪರೋಕ್ಷಿಗಳ ಗಿದ್ದು ಒಂಬ ರಾಧನೆಯ ನ್ನು ಸ್ವತ ಸಾಧಿಸಿದ್ದರೆನು ವುದಕ್ಕೆ ಅನೇಕ ನಿದರ್ಶನಗಳು ಅವರ ಕೃತಿಗಳಲ್ಲಿ ದೊರೆಯುತ್ತವೆ ಉದಾಹರಣೆಗೆ ಈ ಕೆಳಗಿ ಸ ಲಾದಿಯು ಗವಾನಿಸಬಹ ದು

ಗಟ್ಟಿ ಭಕ ತಿ ಪಾಶದಿ ಕಟ್ಟಿ ಎನು ದರದೊಳು
ಇಟ್ಟುಕೊಂಬೆನೋ ಏ ಜಿಷ್ಣುಸಖನೆ ಕೃಷ್ಣ
x x x x
ಸ್ಪಷ್ಟರೂಪವ ತೋರೊ ಮುಟ್ಟಿ ಪೂಜಿಸಲು
x x x x
ಶೃಂಗ ರ ಗದ್ದಿಗೆ ಭಂಗಾರಭರಣವುಟ್ಟು
ರಂಗ ಒಲಿಯೊ ಎಂದು ಅಂಗೀಕರಿಸುರಿಯೆ
ಮಂಗಳ ಮೂರುತಿ ಮನವೆ ಕ ಳ್ಳಿಹ ಪಿ ರ
ಗಂಗಾಜನಕನೆಂದನಿಸಿ ಕೊಂಬುದೆ ಸಾ ನ
ಅಂಗನೆ ದೌಪದಿ ಅಭಿಮಾನ ರಕ್ಷಕ
ಶೃಂಗ ರ ಒರುದು ವಸನಂಗಳು ನಿನಗೆ
ಅಂಗವ ಕೊರಡು ಶ್ರೀಗಂಧ ತೇಯ್ದು ಡುವನೊ
ಕಂಗಳೆರಡು ದೀಪಕರ ಉಭಯ ಚಾಮರ
ಂಗದೊಳಿದ್ದ ಅಷ್ಟಕಮಲವೆ ಕುಸುಮವು
ಹಿಂಗದೆನ ಯ ಕಿಂಚಿದ್ಭಕುತಿಯೆ ನೈವೇದ್ಯ
ರಂಗ ದಿನ ದಿನ ಮಾಡುವ ಕರ್ಮವೆ ಕಪ್ಪ

ತುಂಗ ವಿಕ್ರಮ ಜರರಾಗಿ ಆರತಿ ತು
ರಂಗ ವದನ ಸರ್ವಾಂಗ ಸಮರ್ಪಿಸಿ ಕ
ರಂಗಳ ಮುಗಿವೆ ಎನ ಂತರಂಗದಿ ನಿಲ್ಲೊ ಶ್ರೀ

ಎಂದು ಪ್ರಾರ್ಥಿಸಿರುವುದಲ್ಲದೆ ಎಂದಿಗಾದರೂ ನಿನ್ನ ಬಳಿಗೆ ಬಾ ಹೋದೆ ಸತ್ಯ ಇಂದೆ ಮುಂದಕೆ ಕರೆಯೋ ಎಂದು ಮೊರೆಯಿಟ್ಟಿದ್ದಾರೆ

ಹರಿದಾಸರೆಲ್ಲರೂ ಸ್ವಮತ ಪ್ರತಿಷ್ಠಾ ಪನೆಗಾಗಿ ಪರಮತಗಳನ್ನು ಟೀಕಿಸು ವುದು ತೆಗಳ ವುದು ಉಂಟು ಗೋಪಾಲದಾಸರು ಸ್ವಮತ ಪ್ರಚಾರದ ಭರದಲ್ಲಿ ಪರಮತಗಳನು ಕಟುವಾಗಿಯೇ ಟೀಕಿಸಿರುವುದು ಕಂಡುಬರುತ್ತದೆ ಮಧ್ವಮತ ವೊಂದನ್ನು ಬಿಟ್ಟರೆ ಉಳಿದೆಲ್ಲ ಮತಗಳೂ ಖೂಳ ಮತಗಳೇ ಆದ್ದರಿಂದ ಖೂಳ ಮತವ ಬಿಡೆ ಬಾಳಲಾರೆಯೋ ನಿ ನು ಎಂದಿರುವ ಅವರು ಮುಂದುವರಿದು

ಸೀಳೋರು ಜಿಹ್ವೆಯ ಕೀಳೋರು ಕಣ್ಣನಂ
ಹೋಳು ಮಾಡೋರ ತಲೆ ಆಳಾಗದಂತೆ ನಿನ್ನ
ಹೂಳೋರು ಕ್ರಿಮಿಕೊಂಡದೊಳಃ ನಿನ್ನೊಯಿದು

ಎಂದು ಹೇಳುತ್ತಾರೆ ಅಲ್ಲದೆ ಅದ್ವೈತಮತವನ್ನು ಖಂಡಿಸುತ್ತಾ ಇಲ್ಲಿ ಮಾತ್ರವು ಭೇದ ಅಲ್ಲಿ ಒಂದೆ ಎಂಬೊ । ಕ್ಷುಲ್ಲಕರ ಹಿಡಿದ್ದಲ್ಲು ಮುರಿಯೆಂದು ಟೀಕಿಸಿದ್ದಾರೆ

ಅ‍ಂತ ಒಂದೆ ದೈವ ಎಂದು ನಂಬಿರ ವ ಅವರು ಇತರ ದೇವ‍ದೆ ವತೆ ಗಳನ್ನು ಒಪ್ಪುವುದಿಲ್ಲ ಆದ್ದರಿಂದಲೇ ಬಣಗು ದೈವಂಗಳ ಭಕ್ತಿಲರ್ಚಿಸುವುದೆ ಹೆಣಕೆ ಮಾಡಿದ ಅರ್ಥ ಎಂದು ಹೇಳಿರುವುದಲ್ಲದೆ ಇತರ ದೈವರಗಂಡ ಚಿಲ್ಲರೆ ದೈವರಗಂಡ ಗೋಪಾ‍ವಿಠಲ ಎಂದೂ ಹೇಳಿದ್ದಾರೆ ಭಾರತಿ ಲಕ್ಷ್ಮೀದೇವಿ ಯರನ್ನು ಬಿಟ್ಟು ಉಳಿದ ದೇವತೆಯ ರೆಲ್ಲ ಅವರಿಗೆ ತೃಣ ಸಮಾನ ಆದ್ದರಿಂದಲೇ

ಕಟ್ಟಿನ ಗಡಿಗೆಮ್ಮೆ ಹುಚ್ಚು ಮೋರೆಯ ಮರಿಗಿ
ಗಟ್ಟಿನ ಪೋತರಾಜ ರಚ್ಚೆಕಟ್ಟೆಯ ಎಲ್ಲಿ
ಬಿಚ್ಚಾಳಿಪೆಲ್ಲಿ ಶಡವಿ ಬನದ ಶಂಕರಿಯು
ಕಚ್ಚಿತದೇವತೆಗಳ ಇಚ್ಚೈಸಲಿಲ್ಲವಯ

ಎಂದಿದ್ದಾರೆ

ಪತಿವ್ರತಾಸ್ತ್ರೀಯ ಬಗೆಗೆ ಗೋಪಾಲದಾಸರಿಗೆ ಗೌರವವಿರುವುದು ಗರತಿಯ ಲಕ್ಷಣ ದೊರಕಿಸು ಎನಗೆ ಎಂದು ಹೇಳುವಲ್ಲಿ ವ್ಯಕ್ತವಾಗಿದೆ ಪತಿಯಾಜ್ಞೆಯೊಂದೇ ಅವಳ ಪರಮ ಪುರುಷಾರ್ಥವಾಗಬೇಕೆಂಬುದನ್ನು ಪತಿವ್ರತಾಸ್ತ್ರೀಗೆ ಆವ ವ್ರತವು ಇಲ್ಲ ಪತಿ ಆಜ್ಞವು ಒಂದೇ ಗೋಪಾಲವಿಠಲ ಎಂಬ ಮಾತುಗಳಲ್ಲಿ ಪ್ರಕಟಪಡಿಸಿ ದ್ದಾರೆ ದಿಟ್ಟ ಸ್ತ್ರೀಯಳ ಬಗೆಗೆ ಇರುವ ಅಭಿಪ್ರಾಯವನ್ನು ಇಟ್ಟು ತೊಟ್ಟು

ಬಹಳ ದಿಟ್ಟ ಸ್ತ್ರೀಯಳು ಸ್ಪಷ್ಟ ಕುಪಿ ಯ ಶೃಂಗಾರ ಎಂಬ ಮಾತ ಗಳಲ್ಲಿ ವ್ಯಕ್ತಪಡಿಸಿದ್ದಾರೆ ಪತಿ ಆಜ್ಞಾನುಸಾರ ಪರಪುರ ಷನನು ಅನುಸರಿಸಿದರೂ ಕೂಡ ಆಕೆ ಪಾತಕಳೆನಿಸಿಕೊಳ್ಳುವುದಿಲ್ಲ ಎಂದೂ ಹೇಳಿದ್ದಾರೆ ।

ಪಾಪಿ ಪುರುಷನನ್ನು ಕುರಿತು ಪೂಜೆಯ ನು ಮಾಡಿರೊ ಪಾಪಿ ಪುರ ಷನಿಗೆ ಎಂದಾರಂಭವಾಗುವ ಕೀರ್ತನೆ ಅವರ ರಚನೆಗಳಲ್ಲೇ ವಿಶಿಷ್ಟ ರಿ ತಿಯದಾದದ್ದು ಪಾಪಿಪುರ ಷನ ಬಗೆಗೆ ಅವರಿಗಿರುವ ಅಸಮಾಧಾನ ಅದರಲ್ಲಿ ವ ಕ್ತವಾಗಿದೆ ಪ್ರಸ್ತುತ ಕೃತಿಯಲ್ಲಿ ಅವರು ಶಾಸ್ತ್ರೋಕ್ತ ಪೂಜಾವಿಧಿಯನು ಬಾತೂತಪ್ಪದೆ ಪಾಪವನ್ನು ವ್ಯಕ್ತೀಕರಿಸಿ ಪಾಪಿಪುರ ಷನಿಗೆ ಪೂಜೆಮಾಡ ವ ಒಗೆಯನು ವಿವರಿಸಿದ್ದಾರೆ ಆದರೆ ಆ ಪೂಜೆಗೆ ಬಳಸುವ ಪರಿಕರಗಳು ಮಾತ್ರ ದೇವಪೂಜೆಗೆ ಬಳಸುವ ಪರಿಕರಗಳಿಗಿಂತ ಭಿನ ವಾದದ್ದು ತದ್ವಿರುದ್ಧವಾದದ್ದು

ಸಮಾಜದ ಲೋಪ–ದೋಷಗಳನ್ನು ತಿದ್ದುವ–ನೇರ್ಪುಗೊಳಿಸುವ ಕಡೆಗೆ ಗಮನ ಅಷ್ಟಾಗಿ ಹರಿದಿಲ್ಲ ಬಹುಶಃ ತತ್ತ್ವಪ್ರಚಾರದ ಕಡೆಗೆ ಇವರ ದೃಷ್ಟಿ ಕೇಂದ್ರೀಕೃತವಾಗಿದ್ದುದೂ ಇದಕ್ಕೆ ಕಾರಣವಾಗಿರಬಹುದು ಆದರೆ ಡಂಭ ಚ ರ ಗಳನ್ನು ಕಂಡಾಗ ಮಾತ್ರ ಅದಕ್ಕೆ ಪ್ರತಿಸ್ಪಂದಿಸಿದ್ದಾರೆ ಅವರ ಮಂಡಿಸುಳಾದಿ ಹಾಗೂ ವೈರಾಗ್ಯ ಸುಳಾದಿ ಗಳು ಇದಕ್ಕೆ ನಿದರ್ಶನವನ್ನೊದಗಿಸುತ್ತವೆ

ಗೋಪಾಲದಾಸರು ತಮ್ಮ ಜೀವಿತ ಕಾಲದಲ್ಲಿ ಹಲವು ಪವಾಡಗಳನ್ನು ಮಾಡಿದ ಪವಾಡಪುರುಷರೆಂಬ ಪ್ರತೀತಿ ಇದೆ ಉಡುಪಿಗೆ ಹೋಗ ವಾಗ ದಾರಿ ಯ ಲ್ಲಿ ಶಿವಮೊಗ್ಗ ಜಿಲ್ಲೆಯ ಮಂಡಗದ್ದೆಯ ಕುಖ್ಯಾತ ದರೋಡೆಕೋರ ಭೀಮನನ್ನು ಸನ್ಮಾರ್ಗಕ್ಕೆ ಹಚ್ಚಿದ ಮಂತ್ರಾಲಯ ದಿ ದ ಹಿಂದಿರುಗುವಾಗ ಹರಕೆ ಹೊತ್ತ ಗೌಡನಲ್ಲಿ ಸಹೋದರರೊಡನೆ ಉಂಡು ತೃಪ್ತರಾದ ಪಂಡರಪುರಕ್ಕೆ ಹೋದಾಗ ಚಂದ್ರಭಾಗೆಯಲ್ಲಿ ಇಳಿದು ಗಂಗೆಯನ್ನು ತ ಳ ಕಿಸಿದ ಐಜಿ ಆಚಾಯ ರ್ಯರು ರಾತ್ರಿ ವೇಳೆ ಅರ್ಘ್ಯಕೊಡ ವಾಗ ಅವರಿಗೆ ಸೂರ್ಯನನ್ನು ತೋರಿಸಿದ ಹಾಗೂ ಐಜಿ ಆಚಾರ್ಯರ ತಂದೆಗೆ ಕೀರ್ತನ ಮಣೆಯ ಮೇಲೆ ಪ್ರಾಣದೇವರ ದರ್ಶನ ಮಾಡಿಸಿ ಪವಾಡಗಳನು ತೋರಿಸಿದ ಬಗೆಗಿನ ಕತೆಗಳು ಕರ್ಣಾಕರ್ಣಿ ಯಾಗಿ ಹರಿದು ಬಂದಿವೆ ಬೇಲೂರು ಕೇಶವದಾಸರು ಈ ಎಲ್ಲ ಕತೆಗಳನ್ನೂ ತಮ್ಮ ಕೃತಿಯ ಲ್ಲಿ ಪ್ರಸ್ತಾಪ ಮಾಡಿದ್ದಾರೆ ಆದರೆ ಈ ಕತೆಗಳ ಬಗೆಗೆ ಖಚಿತವಾದ ಆಧಾರಗಳು ದೊರೆಯುವುದಿಲ್ಲ

ಗೋಪಾಲದಾಸರು ಸಾಹಿತ್ಯದಂತೆ ಸಂಗೀತ–ನೃತ್ಯಗಳನ್ನು ಹರಿಭಕ್ತಿ ಸಾಧನೆಗೆ ಬಳಸಿಕೊಂಡಿದ್ದಂತೆ ತಿಳಿದು ಒರುತ್ತದೆ ತಮ್ಮ ಸೋದರರೊಡಗೂಡಿ ತಾಳ–ತಂಬೂರಿ ಗಳನ್ನು ಹಿಡಿದು ದೇವರ ನಾಮಗಳನು ಹಾಡುತ್ತಾ ಉಪನ್ಯಾಸಗಳನ್ನು ಮಾಡುತ್ತಾ ಜನರಲ್ಲಿ ಹರಿಭಕ್ತಿಯನ್ನು ಪ್ರೇರಿಸುತ್ತಿದ್ದರಂತೆ ಇದಲ್ಲದೆ ಗೋಪಾಲದಾಸರು

ಚಿತ್ರಕಲಾ ಕುಶಲರೂ ಆಗಿದ್ದರೆಂದು ತಿಳಿದು ಬರುವ ಸಂಗತಿ ಗಮನಾರ್ಹ ಭವಿಷ್ಯ ಕೇಳಲು ಬರುತ್ತಿದ್ದ ಜನರಿಗೆ ಅವರು ಅಭಿಮಂತ್ರಿಸಿದ ಚಿತ್ರಗಳನ್ನು ಯಂತ್ರವಾಗಿ ಕೊಡುತ್ತಿದ್ದರೆಂಬ ಸಂಗತಿ ತಿಳಿದು ಬರುತ್ತದೆ ಗಿರಿಯಮ್ಮನಿಗಂತೂ ಅವಳಿಟ್ಟ ರಂಗೋಲಿಯಲ್ಲೇ ಕೃಷ್ಣನ ಮೂರ್ತಿಯನ್ನು ಸಾಕ್ಷಾತ ರಿಸಿ ಕೊಟ್ಟರೆಂಬ ಮಾತಿದೆ ಅವರು ಚಿತ್ರಿಸಿದ ದ್ವಾದಶಕಮಲ ವೈಕ ಂರಸ್ಥ ಶ್ವೇತವರಣ ವಾಸುದೇವಮೂರ್ತಿ ವಿಜಯದಾಸರ ಕಂಕಣಾಕಾರ ಸುಳ ದಿಗ ಒರೆದ ಚಕ್ರಾಬ್ಜ ಹಾಗೂ ಬ್ರಹ್ಮಾಂಡಪಟ ಮೊದಲ ದ ವುಗಳು ದಾಸರ ಚಿತ್ರಕಲಾ ಕುಶಲತೆಗೆ ಸಾಕ್ಷಿಯನ್ನೊದಗಿಸುತ್ತವೆ

ಹರಿಭಕ್ತಿ ತರಂಗಿಣಿಯನ್ನು ಪದ ಸ ಳಾದಿಗಳ ಮೂಲಕ ಮುನ್ನಡಿಸಿಕೊಂಡು ಬಂದ ಹಿರಿಯ ದಾಸರಲ್ಲಿ ಗೋಪಾಲದಾಸರೂ ಒಬ್ಬರು ವಿಜಯದಾಸರಿಂದ ಮೊದಲಾದ ವ ಧ್ವಸಿದ್ಧಾಂತ ಪ್ರಮೇಯ ನಿರೂಪಣೆಗೆ ಗೋಪಾಲದಾಸರು ವಿಶೆ ಷ ಪ್ರಾಶಸ್ತ್ಯವಿತ್ತುದು ತತ್ತ್ವಸಾರ ದಂತಹ ಪದ-ಸ ಳಾದಿಗಳಿಂದ ಸ್ಪಷ್ಟವಾಗುತ್ತದೆ ಅವರ ಕೃತಿಗಳಲ್ಲಿ ಆಳವಾದ ಆಲೋಚನೆ ವಿಷಯಗಳ ಅಡಕವ ದ ಜೆ ಾಡಣೆಯ ಜಾಣ್ಮೆ ಹಾಗೂ ಸರಳ ರೀತಿಯ ನಿರೂಪಣಾ ವೈಖರಿಯ ನು ಗುರುತಿಸಬಹ ದು ಇದಕ್ಕೆ ದಶಾವತಾರಸ್ತುತಿ ಹಾಗೂ ಅವತಾರತ್ರಯರ ಸ್ತುತಿಗಳು ನಿದರ್ಶನವಾಗಿವೆ ಗೋಪಾಲದ ಸರ ಕೃತಿಗಳಲ್ಲಿ ಭಕ್ತಿಭಾವನೆ ನಿರರ್ಗಳವಾದ ಓಟ ಪ್ರಾಸಾನುಪ್ರಾಸ ಗಳ ಸಂಯೊ ಜನೆ ಭ ಷಾಸೌಂದರ್ಯಗಳನ್ನೂ ಕಾಣಬಹುದು ಇವರ ಉಗಾ ಭೊ ಗ ಹಾಗೂ ಸುಳ ದಿಗಳು ಅರ್ಥಗರ್ಭಿತವೂ ಪ್ರಮೇಯ ಪುಂಜವೂ ಆಗಿವೆ ಈ ಕೃತಿಗಳಿಂದ ಅವರ ಅಗಾಧವಾದ ಪಾಂಡಿತ್ಯ ಹಾಗೂ ಜ್ಞಾನದ ನಿಖರತೆ ವ್ಯಕ್ತವಾಗು ತ್ತದೆ ಕೀರ್ತನೆಗಳು ದಾಸರ ನಿರೂಪಣಾ ಕೌಶಲಕ್ಕೂ ಪ್ರತಿಭಾಶಕ್ತಿಗೂ ದ್ಯೋತಕವಾಗಿವೆ ಇದಕ್ಕೆ ಉದಾಹರಣೆಯಾಗಿ ಒಗೆತನದೊಳು ಸುಖವಿಲ್ಲ ಇದ ಒಲ್ಲೆನೆಂದರೆ ನೀಬಿಡೆಯಲ್ಲ ಎಂಬ ಕೃತಿಯನ್ನು ಗಮ ನಿಸಬಹುದು

ಗೋಪಾಲದಾಸರ ವರ್ಣನಾ ಸೊಬಗು ಆಕರ್ಷಕವಾದುದು ಕೊಲ್ಹಾಪುರದ ಲಕ್ಷ್ಮೀದೇವಿಯನ್ನು ಕುರಿತು ರಚಿಸಿರುವ ಕಾಪಾಡಲೆ ಸಕಲಾಪದ್ಬಾರಿಣೀ ಕೊಲ್ಹಾಪುರ ಗತೆ ಕಮಲೆ ಎಂಬ ಕೃತಿಯಲ್ಲಿ ಲಕ್ಷ್ಮೀದೇವಿಯ ರೂಪವೈಭವವನ್ನು ಕಣ್ಣಿಗೆ ಕಟ್ಟು ವಂತೆ ಚಿತ್ರಿಸಿದ್ದಾರೆ ಪ್ರಹ್ಲಾದಚರಿತ್ರೆಯನ್ನೊ ಳಗೊಂಡ ದೀರ್ಘ ಕೀರ್ತನೆಯಲ್ಲಿ ಯಲ್ಲಿ ಬಂದಿರುವ ನರಸಿಂಹಾವತಾರದ ವರ್ಣನೆಯ ಸೊಗಸನ್ನು ಪರಿಭಾವಿಸಿ

ಭು ಗಿ ಭುಂಗಿಗೆ ಬ್ರಹ್ಮಾಂಡವೆಲ್ಲ ಗದ್ದರಿಸಿನ್ನು
ಧಗ ಧಗಾಯಮಾನವಾಗಿ ಜಗಕ್ಕೆಲ್ಲ ಇದೆ
ಯುಗ ಮಹಾಪ್ರಳಯ ವೋ ಎಂದು ತೋರುತ್ತಿರಲು
ಧಿಗಿ ಧಿಗಿನೆ ಕಂಬದಿಂದ
ಝಗ ಝಗಾ ಎಂದು ಜನಿಸಿ ಮೃಗನರರೂಪ

ಸೊಗಸಾಗಿ ಧರಿಸಿ ಶ್ರೀವತ್ಸ ಶಂಖಚಕ್ರ
ಯುಗ ಛ ಜಗಳಲ್ಲಿ ಬಪ್ಪೆ ಈಶ ಸರ್ವ ಶ

ರೌದ್ರರೂಪಿ ನರಸಿಂಹ ಕಂಬದಿಂದ ಮೂಡಿಬಂದ ಪರಿಯ ನ್ನು ಧಗ ಧಗಾ ಧಿಗಿ ಧಿಗಿ ಝ ಗ ರ ಠಗಾ ಎಂಬ ಪದಗಳು ಪ್ರತಿಬಿಂಬಿಸಿವೆ ರೌದ್ರರೂಪದಲೂ ಒಂದು ರೀತಿಯ ಸೌಮ್ಯಭಾವವೂ ಇದೆ ಎಂಬ ದನ್ನು ಕೊನೆಯ ಎರಡು ಪಂಕ್ತಿಗಳಲ್ಲಿ ವ್ಯಕ್ತಪಡಿಸಿದ್ದಾರೆ

ಪರಿಣಾ ಮ ಕಾರಿಯಾದ ಪ್ರತಿಪಾದನೆಗೆ ಗೋಪಾಲದಾಸರು ಬಳಸುವ ಅಲಂಕ ರಗಳು ಶ್ರುತಿಸ ಭಗ ಉರ್ಧ್ವ ಪಕವಾದವು ಕವ ಲಯುಖಿಯ ಕವ ಲಾಯೆ ಕವ ಲೆ ಪಾಲಿಸಯ್ಯ ಪವನನಯ್ಯ ಪಾಲವಾರಿಧಿಶಯ್ಯ ! ಮಂಗಳವರ್ಮರುತಿ ಪೊಂಗಳಿಂದ ತ ತಿ ಗಳನಂದದಿ ಕಂಗಳು ಪೊಳೆಯೆ ಎಂಬಲ್ಲಿನ ಶಬ್ದಾಲಂಕಾರಗಳೂ ಕೆಸರಿಂದ ಕೆಸರ ತೊಳೆದಂತೆ ಕರ್ಮದ ಫಥವು ಹರಿ ಉರ್ಪಣರಿಯ ದೆ ಆವ ಕರ್ಮವು ಮಾಡೆ ಹುರಿದು ಬಿತ್ತಿದ ಬೀಜ ಹಳ್ಳೀಗವಿಲ್ಲದೆ ಕ ದ ರೆ ಹತ್ತಿ ಓಡಿಸಿದಂತೆ ಬೆಲ್ಲಹಾಕದ ಪರಮಾನ್ನದಂತೆ ಎಂಬಲ್ಲಿನ ರೂಪಕ ದೃಷ್ಟಾ ತಾದಿ ಅಲಂಕಾರಗಳೂ ಗವ ನಾರ್ಹ ಶ್ವೇತವರಾಹಸ್ವಾಮಿಯ ಕುರಿತಾದ ಕರಗಳೆರಡನು ಕಟಿಯಲಿಟ್ಟು ಕೋರೆಹಲ್ಲನೆ ತೋರುತ ಎಂಬ ವರ್ಣನೆ ಸ್ವಭಾ ವೋಕ್ತಿ ಆಲಂಕಾರಕ್ಕೆ ಉತ್ತಮ ಉದ ಹರಣೆ ಎನಿಸಿದೆ ಪಾಪಿಪುರುಷನ ಕುರಿತಾದ ಕೃತಿ ಒಳೆ ಯ ರೂಪಕವೆನಿಸಿರುವುದನ್ನು ಈಗಾಗಲೇ ಗಮನಿಸಿದೆ

ಇವರ ಕೃತಿಗಳಲ್ಲಿ ಆದಿಪ್ರಾಸ ಅನುಪ್ರಾಸ ಹಾಗೂ ಅಂತ್ಯಪ್ರಾಸಗಳಂ ಸಮುಯೋಚಿತವಾಗಿ ಬಳಕೆಯಾಗಿವೆ ಉದಾಹರಣೆಗೆ ಈ ಕೃತಿಗಳನ್ನು ಗಮನಿಸ ಬಹುದು

ಮಡದಿ ಇದ್ದರೆ ಮನೆ ಕಡ ಶ ಭ ಎಂಬೋರು
ಹ ಡುಗರಿದ್ದರೆ ವ ನೆ ಕೆಡುಶ ಭ ಎಂಬೊ ರು
ಒಡವೆ ಇದ್ದರೆ ಮನೆ ಕೆಡುಶುಭ ಎಂಬೋರು
ಪಡೆದರಿದ್ದರೆ ವ ನೆ ಕಡ ಶ ಭ ಎಂಬೋರು
ಅಜಮಿಳನ ಸಲಹಿದಾತ
ವಜ್ರದಗೋವು ಕ ಯ ದಾತ
ಭಜಸುವವರ ಒಡನು ಪ್ರೀತ
ತ್ರಿಜಗದೊಳಗೆ ವೆ ರೆವ ದಾತ

ಇತ್ಯಾದಿ

ತತ್ತ್ವಗಳನು ಪ್ರತಿಪಾದಿಸುವೆಡೆ ಭಾಷೆಯು ಬಂಧ ಬಿಗಿಯಾಗಿದ್ದು ರಕ್ಷಶಿಕ್ಷಕ ಮೋಕ್ಷದಾಯ ಕ । ಸೂಕ್ಷ್ಮ ಘನಮಹಾವ್ಯಾಪಕ ಎಂಬಂತಹ ಸಂಸ್ಕೃತ ಪ್ರಯೋಗ

ಕಂಡುಬಂದಲೂ ಕನ್ನಡ ದೇಸಿಯ ಬಳಕೆಯೇ ಹೆಚ್ಚಾಗಿ ಕಂಡುಬರುತ್ತದೆ ಮಡುವಿನೊಳಗೆ ಗಜವೊರೆಯಿಡಲಾಕ್ಷಣ ವಡದಿಗೆ ಹೇಳದೆ ದುಡು ದುಡುನೆ ಬಂದು ಪರನಾರಿಯರೊಡನಾಟ ನರಕದೊಳಾಟ ಇತ್ಯಾದಿಗಳನ್ನು ಗಮನಿಸಬಹುದು ಕ್ಷೀರ ಉಕ್ಕಿದವರು ನೀರು ಎರೆವರಯ್ಯ 'ಕೋಡಗನ ಕೊರವ ಆಡಿಸಿದಂತೆ ವ್ಯಾಘ್ರನ ನೋಡಿ ನರಿಸ ಟ್ಟುಕೊಂಡಂತೆ ಎಂಬ ಪ್ರಸಿದ್ಧ ಮಾತುಗಳ ಬಳಕೆಯೂ ಅಲ್ಲಲ್ಲಿ ಕಂಡ ಬರುತ್ತದೆ ಇವರ ಕೃತಿಗಳಲ್ಲಿ ಬೇರೆ ಭಾಷೆಯ ಪದಗಳ ಬಳಕೆ ಅಷ್ಟಾಗಿ ಕಂಡ ಬರುವುದಿಲ್ಲ

ಇವರ ಕೀರ್ತನೆಗಳಲ್ಲಿ ೩ ನುಡಿಗಳ ಚಿಕ್ಕ ಕೀರ್ತನೆಗಳಿಂದ ಹಿಡಿದು ೩೦ ನುಡಿಗಳನ್ನೊಳಗೊಂಡ ದೀರ್ಘಕೀರ್ತನೆಯನ್ನೂ ಕಾಣಬಹುದು ಇವರ ಕೃತಿಗಳಲ್ಲಿ ಉಗಾಭೋಗಗಳ ಸಂಖ್ಯೆ ಬಹಳ ಕಡಿಮೆ ತತ್ತ್ವಪ್ರತಿಪಾದನೆಗೆ ಕೀರ್ತನೆ ಉಗಾಭೋಗಗಳಿಗಿಂತ ಸುಳಾದಿಗಳನ್ನು ಹೆಚ್ಚಾಗಿ ಬಳಸಿರುವುದು ಕಂಡುಬರುತ್ತದೆ ಒಟ್ಟಿನಲ್ಲಿ ಹರಿದಾಸ ಸಾಹಿತ್ಯದ ದ್ವಿತೀಯ ಘಟ್ಟವು ದ್ವೈತಸಿದ್ಧಾಂತವನ್ನು ವಿಶೇಷವಾಗಿ ಕನ್ನಡಿಸಿದ್ದು ಅದರಲ್ಲಿ ಗೋಪಾಲದಾಸರ ಸೇವೆಯೂ ಗಣನೀಯವಾದದ್ದು

## ಆಧಾರ ಗ್ರಂಥಗಳು


1 ಕರ್ನಾಟಕ ಭಕ್ತ ವಿಜಯ (ಭಾಗ ೨)—ಬೇಲೂರು ಕೇಶವದಾಸ

2 ಕರ್ನಾಟಕದ ಹರಿದಾಸರು—ಹೆಚ್ ಕೆ ವೇದವ್ಯಾಸಚಾರ್ಯ

3 ಕರ್ನಾಟಕದ ಹರಿದಾಸ ಸಾಹಿತ್ಯ—ಆರ್ ಎಸ್ ಪಂಚಮುಖಿ

4 ದಾಸ ಸಾಹಿತ್ಯ, ದ್ವಿತೀಯ ಘಟ್ಟದ ಸಾಧನೆ

5 ಹರಿಭಕ್ತಸುಧೆ—ರ ರಾ ದಿವಾಕರ

6 ಶ್ರೀ ಗೋಪಾಲದಾಸರ ಕೃತಿಗಳು—(ಸಂ ) ಡಾ॥ ಟಿ ಎಸ ನಾಗರತ್ನ

7 ಕನ್ನಡ ವಿಷಯ ವಿಶ್ವಕೋಶ (ಕರ್ನಾಟಕ)

8 ಶ್ರೀ ವಿಜಯದಾಸರು ಜೀವನ ಮತ್ತು ಕೃತಿಗಳ ಸಮೀಕ್ಷೆ—ಡಾ॥ ಕೆ ಗೋಕುಲನಾಥ್

# ಜಗನ್ನಾಥದಾಸರು

—ಕೆ ಆರ್ ಶೇಷಗಿರಿ

## 1

ಕನ ಡ ಸಾಹಿತ್ಯದಲ್ಲಿ ವೀರಶೈವ ವಚನ ಸಾಹಿತ್ಯದಷ್ಟೇ ಪ್ರಭಾವ ಬೀರಿರುವ ಮತ್ತೊಂದು ಪ್ರಕಾರವೆಂದರೆ ದಾಸ ಸಾಹಿತ್ಯ ಅಥವಾ ದಾಸ ವಾಙ್ಮಯ ಮುಕ್ತಿಯನ್ನು ಹೊಂದಬೇಕಾದರೆ ಭಕ್ತಿ ವೈರಾಗ್ಯಗಳು ಅವಶ್ಯಕ ಇದನ್ನು ಸ್ಫೂರ್ತಿಯಿಂದ ಸರಳವಾಗಿ ಕೀ ರ್ತನೆಗಳಿಂದ ನಿರೂಪಿಸಿರುವುದೇ ಈ ದಾಸ ಸಾಹಿತ್ಯ ಇದು ನಾಡಿನ ಜನತೆಯ ಗಮನವನು ಸೆಳೆದಿದೆ ದಾಸ ಎಂದರೆ ಯಾರು ಅವನು ಯಾರ ದಾಸ ಎಂಬ ಪ್ರಶ್ನೆಗಳಿಗೆ ಅನುವು ಮಾಡಿಕೊಡುತ್ತದೆ ದಾಸ ಎಂದರೆ ಭಕ್ತ ಹರಿಭಕ್ತ ಹರಿ ಎಂದರೆ ಕ ಷ್ಣ ಗೋಪಾಲ ಜಗನ್ನಾಥ ಪುರಂದರವಿಠಲ ರಘುಕುಲ ತಿಲಕ ರಘುಪತಿ ಹಯವದನ ರಂಗವಿಠಲ ಆದಿಕೇಶವ ವಿಜಯವಿಠಲ ಪ್ರಸನ ವೆಂಕಟ ಕಾಗಿನೆಲೆಯಾದಿ ಕೇಶವ ಶ್ರೀದವಿಠಲ ಮೊದಲಾಗಿ ತಮ್ಮ ತಮ್ಮ ಕೀರ್ತನೆಗಳಿಗೆ ಇರಿಸಿಕೊಂಡಿರುವ ಅಂಕಿತಗಳೇ ಆಗಿದ್ದು ಇವೆಲ್ಲವು ಜಗದ್ರಕ್ಷಕನಾದ ವಿಷ್ಣುವಿಗೆ ಅನ್ವಯ ವಾಗುವ ಇತರ ಹೆಸರುಗಳು ಹದಿಮೂರನೆಯ ಶತಮಾನದ ಉತ್ತರಾರ್ಧ ದಲ್ಲಿ ಆರಂಭವಾದ ಈ ದಾಸಸಾಹಿತ್ಯ ಹೆಚ್ಚಾಗಿ ಕೀರ್ತನೆ ಸುಳಾದಿ ಉಗಾಭೋಗ ಗಳಿಂದ ಕೂಡಿದೆ ಕನಕದಾಸರು ಈ ಕೀರ್ತನೆಗಳ ಜತೆಗೆ ನಳಚರಿತೆ ರಾಮಧಾನ್ಯ ಚರಿತೆ ಮೋಹನ ತರಂಗಿಣಿ ಹರಿಭಕ್ತಿಸಾರಗಳೆಂಬ ಕಾವ್ಯಗಳನ್ನು ರಚಿಸಿದರು ದಾಸರಲ್ಲಿ ಇಂತಹ ಕಾವ್ಯರಚನೆಗೈದ ಇನ್ನೊಬ್ಬ ದಾಸರೆಂದರೆ ಸುಮಾರು ಸಾವಿರ ಭ ಮಿನೀ ಷಟ್ಪದಿಯಲ್ಲಿರುವ ಹರಿಕಥಾಮೃತಸಾರವನು ಬರೆದ ಜಗನಾ ಥದಾಸರು ನರಹರಿತೀರ್ಥ ಶ್ರೀಪಾದರಾಯ ವ್ಯಾಸರಾಯ ಪುರಂದರದಾಸ ಕನಕದಾಸ ಮೊದಲಾದವರು ಪ್ರಥಮ ಘಟ್ಟದ ದಾಸರೆಂದೂ ವಿಜಯದಾಸ ಪ್ರಸನ್ನ ವೆಂಕಟ ದಾಸ ಗೋಪಾಲದಾಸ ಜಗನಾ ಥದಾಸ ಹೆಳವನಕಟ್ಟೆ ಗಿರಿಯಮ್ಮ ಮೊದಲಾದ ವರು ದ್ವಿತೀಯ ಘಟ್ಟದ ದಾಸರೆಂದು ವರ್ಗೀಕರಿಸಲಾಗಿದೆ ಜನರಲ್ಲಿರುವ ಮೌಢ್ಯತೆ ಅಜ್ಞಾನ ಗೊಡ್ಡು ಸಂಪ್ರದಾಯ ಅಪನಂಬಿಕೆ ಸಜ್ಜನ ದುರ್ಜನರ ಲಕ್ಷಣ ಭಕ್ತಿ ಸೇವೆ ಸ್ವಾತಂತ್ರ್ಯ ದಾಸ್ಯ ಮುಂತಾದ ವಿಷಯಗಳ ಮೇಲೆ ಕೀರ್ತನೆಗಳನ್ನು ರಚಿಸುತ್ತಾ ಇಡೀ ನಾಡಿನಲ್ಲೆಲ್ಲಾ ಸುತ್ತಾಡಿದರು ಹಾಗೆ ಸ ತ್ತಾಡಿದಾಗ ಆದ ಅನುಭವ ಗಳನ್ನು ಜನರಿಗೆ ಕೀರ್ತನೆಗಳ ಮ ಲಕ ಉಪದೇಶಿಸಿದರು ಯಾರ ಹಂಗಿಗೂ ಅಂಕೆಗೂ ಒಳಗಾಗದೆ ಧೈರ್ಯದಿಂದ ತಮ್ಮ ಕಾಯಕದಲ್ಲಿ ನಿರತರಾಗಿದ್ದರು ಹರಿದಾಸರೆಂದರೆ ಭಗವದ್ಭಕ್ತರು ಇವರ ಇರುವಿಕೆಯು ನಮ್ಮ ನಿಮ್ಮಂತೆ ಕಂಡರೂ ಜನರ

ಜೀವನಕ್ಕಿಂತ ಬೇರೆಯಾದದು. ಅವರಲ್ಲಿ ಕೆಲವರು ದೆವ್ವೋನ್ಮಾದಿಗಳಾಗಿ ಜಡಭರತರಂತೆ ಇರುತ್ತಾರೆ. ಮತ್ತೆ ಕೆಲವರು ಪರ್ವಕಾಲ ಬಂದಾಗ ಒಮ್ಮಿಂದೊಮ್ಮೆಲೆ ಜಿಗಿದೇಳುತ್ತಾರೆ. ಕೆಲವರು ತಮ್ಮ ಮೊದಲಿನ ಜೀವನಕ್ರಮದಲ್ಲಿ ಪುರಂದರದಾಸರಂತೆ ಜಿಪುಣರೂ ಶ್ರೀಮಂತರೂ ಆಗಿರಬಹುದು. ವಿಜಯದಾಸರು, ಗೋಪಾಲದಾಸರಂತೆ ಕಡುಬಡವರಾಗಿರಬಹುದು. ಮೋಹನದಾಸರಂತೆ ಕಡು ರೋಗಿಗಳಾಗಿರಬಹುದು. ಜಗನ್ನಾಥದಾಸರಂತೆ ಉದ್ದಾಮ ಪಂಡಿತರೂ, ಪ್ರಸನ್ನ ವೆಂಕಟದಾಸರಂತೆ ಶತದಡ್ಡರೂ ಆಗಿರಬಹುದು. ಆದರೆ ಈ ಎಲ್ಲ ಬಗೆಯ ಭಕ್ತ ಹೃದಯ ಶತದಳವು ನಳನಳಿಸಬೇಕೆಂದರೆ ಪಕ್ವಕಾಲ ಅಥವಾ ಪರ್ವಕಾಲ ಬಂದು ಅಪರೋಕ್ಷಿಗಳಾದಾಗ ಎಲ್ಲ ದಾಸರ ಜೀವನವೂ ಒಂದೇ ಆಗುತ್ತದೆ.[1] ಪ್ರತಿಯೊಬ್ಬ ದಾಸರ ಗುರಿ ದೈವೋಪಾಸನೆಯಿಂದ ಮುಮುಕ್ಷುತ್ವವನ್ನು ಪಡೆಯುವುದೇ ಆಗಿದೆ.

ಹರಿದಾಸರೆಲ್ಲರೂ ಹರಿಯನ್ನೇ ನಂಬಿ ಬದುಕುತ್ತಾ ಕೀರ್ತನೆಗಳನು ಹಾಡುತ್ತಾ ಜೀವನವನ್ನು ಸವೆಸಿದವರು. ಅನೇಕ ಮತಗಳ ಧರ್ಮಗಳ ಈ ನಾಡಿನಲ್ಲಿ ದ್ವೈತ ಮತವನ್ನು ಪ್ರಚಾರ ಮಾಡಿದ ಕೀರ್ತಿ ದಾಸರದೆ. ದ್ವೈತಮತ ಸ್ಥಾಪಕರಾದ ಮಧ್ವಾಚಾರ್ಯರೇ ಇವರೆಲ್ಲರಿಗೂ ಗುರು. ವಿರಾಭಕ್ತಿ ಸಂಪ್ರದಾಯಕ್ಕೂ ಶ್ರೀ ಮಧ್ವಾಚಾರ್ಯರೇ ಕಾರಣೀಭೂತರು. ಈಗ ಮರಾಠಿಗನಾದ ವಿಠಲನು ಇವರ ಕಾಲಕ್ಕೆ ಕನ್ನಡಿಗನಾಗಿದ್ದ. ಮಹಾರಾಷ್ಟ್ರದ ಸಂತರಂತೆ ಕರ್ನಾಟಕದ ಹರಿದಾಸರೂ ಭಕ್ತಿ ಪಂಥಕ್ಕೆ ಸೇರಿದವರಾಗಿದ್ದಾರೆ. ರಾಮನಾಮ ಪಾಯಸಕೆ ಕೃಷ್ಣನಾಮ ಸಕ್ಕರೆ ಬೆರಸಿದಂತೆ ದ್ವೈತವಕ್ಕೆ ಭಕ್ತಿಯೆಂಬ ಸಕ್ಕರೆಯನು ಬೆರಸಿ ಇನಮ್ಮು ಆ ಮತವನು ಕಂಪುಗೊಳಿಸಿದರು. ಬರಿ ತತ್ತ್ವವನು ಬೋಧಿಸುವುದಕ್ಕಿಂತ ತಾವು ಕಂಡುಂಡ ಅನುಭವಗಳನು ವಿಶ್ರಮಾಡಿ ಜನರ ನುಡಿಯಲ್ಲಿಯೇ ಹಾಡುಗಳ ಮೂಲಕ ಬೋಧಿಸಿದರು. ದಾಸರ ಎಲ್ಲಾ ಕೀರ್ತನೆಗಳು ಸುಲಭ ಗ್ರಾಹಿಯಲ್ಲ. ಆದರೂ ಭಕ್ತಿ ಮಾರ್ಗದಲ್ಲಿಯೇ ಮತ ಪ್ರಚಾರ ನಡೆದು ಬಹು ಬೇಗ ಆಕರ್ಷಿತವಾಯಿತು.

2

ನಮಃ ಶ್ರೀಪಾದರಾಜಾಯ ನಮಸ್ತೇ ವ್ಯಾಸಯೋಗಿನೇ
ನಮಃ ಪುರಂದರಾರ್ಯಾಯ ವಿಜಯಾರ್ಯಾಯ ತೇ ನಮಃ

ಇಲ್ಲಿ ಶ್ರೀಪಾದರಾಯ, ವ್ಯಾಸರಾಯ, ಪುರಂದರಾಯ, ವಿಜಯರಾಯರನ್ನು ದಾಸಕೂಟ ಸಂಪ್ರದಾಯದವರು ಸ್ತುತಿಸಿದ್ದಾರೆ. ವಿಜಯದಾಸರ ಅನಂತರ ಅವರ ಪಟ್ಟ

---

1 ದಾಸಸಾಹಿತ್ಯ ದ್ವಿತೀಯ ಘಟ್ಟದ ಸಾಧನೆ. ಕರ್ನಾಟಕ ವಿಶ್ವವಿದ್ಯಾನಿಲಯ, ಧಾರವಾಡ ಪುಟ ೯೮

2 ಜಗನ್ನಾಥದಾಸರ ಹಾಡುಗಳು ಆರ್ ಎಸ್ ಸಂಕದ ವಿ ಆರ್ ಬೇಗೂರ ಪುಟ 6

ಶಿಷ್ಯರಾದ ಗೋಪಾಲದಾಸರು ಅವರ ಶಿಷ್ಯರಾದ ಜಗನ್ನಾಥದಾಸರು ಬಹು ಪ್ರಸಿದ್ಧಿ ಪಡೆದವರು ವಿರಕ್ತರವರಲ್ಲಿ ರೇಣ ಕಾಚಾರ್ಯ ವರ ಳಸಿದ್ಧಾಚಾರ್ಯ ಏಕೋರಾಮ ಪಂಡಿತಾರಾಧ್ಯರೆಂಬ ಚತುರಾಚಾರ್ಯರಿದ್ದಂತೆ ಹರಿದಾಸರಲ್ಲಿಯೂ ಪುರಂದರದಾಸ ವಿಜಯದಾಸ ಗೋಪಾಲದಾಸ ಜಗನ್ನಾಥದಾಸರು ಗಣ್ಯರೆನಿಸಿದ್ದಾರೆ ರಾಯಚೂರು ಜಿಲ್ಲೆ ಕೃಷ್ಣಾ ತುಂಗಭದ್ರಾ ನದಿಗಳ ನಡುವೆ ಇರುವ ಮಾನ್ವಿ (ಮಾನವಿ) ತಾಲ್ಲೂಕಿಗೆ ಸೇರಿದ ಬ್ಯಾಗವಟ್ಟಿ ಗ್ರಾಮದಲ್ಲಿ ಶಾನುಬೋಗರಾಗಿ ಸೇವೆಸಲ್ಲಿಸುತ್ತಿದ್ದ ನರಸಿಂಹಾಚಾರ್ಯರ (ನರಸಿಂಹದಾಸರು) ಅವರ ಧರ್ಮಪತ್ನಿ ಲಕ್ಷ್ಮೀಬಾಯಿ (ಲಕ್ಷ್ಮಮ್ಮ) ಯೊಡನೆ ವಾಸಿಸುತ್ತಿದ್ದರು ಅವರ ಮನೆದೇವರು ತಿರುಪತಿ ವೆಂಕಟೇಶ ಆ ದೇವರನು ಅತಿಭಕ್ತಿಯಿಂದ ಪೂಜಿಸುತ್ತಿದ್ದರು ಅನೇಕ ಬಾರಿ ತಿರುಪತಿಗೆ ಹೋಗಿ ಭಕ್ತಿಯನ್ನು ಸಲ್ಲಿಸಿದ್ದರು ಒಮ್ಮೆ ಆ ದೇವರ ಸಾನ್ನಿಧಿಯಲ್ಲಿ ತಮಗೆ ಮಗನಾದರೆ ಆತನ ಹೆಸರನಿಡುವುದಾಗಿ ಹರಕೆ ಹೊತ್ತರು ಕೊನೆಗೆ ಶಾಲಿವಾಹನ ಶಕ ೧೬೫೦ ಕೀಲಕ ಸಂವತ್ಸರದ ಶ್ರಾವಣ ಒದಿಗೆ ರವಿವಾರದಂದು (ಅಂದರೆ ಕ್ರಿ ಶ 27 7 1728) ಒಂದು ಗಂಡು ಸಂತಾನವಾದಾಗ ಅವರ ಸಂತೋಷಕ್ಕೆ ಪಾರವಿಲ್ಲವಾಯಿತು ಮಗುವಿಗೆ ಶ್ರೀನಿವಾಸನೆಂದೆ ನಾಮಕರಣ ಮಾಡಿದರು ಅನಂತರ ಮಗನ ವಿದ್ಯಾಭ್ಯಾಸ ಮಂತ್ರಾಲಯದ ಪೀಠಾಧಿಪತಿಗಳಾದ ಶ್ರೀ ವರದೇಂದ್ರತೀರ್ಥರ ಬಳಿ ಆಯಿತು ಅಲ್ಲಿ ಸಂಸ್ಕೃತ ಭಾಷೆಯನ್ನು ಅಭ್ಯಸಿಸಿದ ಶ್ರೀನಿವಾಸನು ವೇದ ಪುರಾಣೇತಿಹಾಸ ಶಾಸ್ತ್ರ ಧರ್ಮಗ್ರಂಥಗಳನು ಲೀಲಾಜಾಲವಾಗಿ ಕರಗತ ಮಾಡಿಕೊಂಡನು ಇಷ್ಟು ಚಿಕ್ಕ ವಯಸಿನಲ್ಲಿಯೇ ಮಹಾಪಂಡಿತನೆಂಬ ಹೆಸರುಗಳಿಸಿ ಗುರುವಿನ ಕೃಪಾಕಟಾಕ್ಷಕ್ಕೆ ಪಾತ್ರನಾದನು ಪಂಡಿತರಾಜನೆಂಬ ಅನ್ವರ್ಥನಾಮವು ಅವನಿಗೆ ಲಭಿಸಿತು ನಿಂತಕಡೆಯೇ ಸಂಸ್ಕೃತ ಶ್ಲೋಕಗಳನು ರಚಿಸಿಬಿಡುತ್ತಿದ್ದ ಆಶುಕವಿ ಎಂದು ಹೆಸರು ಗಳಿಸಿದನು ಅವನ ಪಾಂಡಿತ್ಯಕ್ಕೆ ವಿಸ್ಮಯಪಟ್ಟು ಮೆಚ್ಚಿ ಆತನಿಗೆ ಆಚಾರ್ಯ ಎಂಬ ಪದವಿಯನ್ನು ಗುರುಗಳು ನೀಡಿದರು

ಸಂಸ್ಕೃತ ಭಾಷೆಯನು ಕಲಿತ ಹೆಮ್ಮೆ ಜತೆಗೆ ಆಚಾರ್ಯನೆಂಬ ಬಿರುದು ಬೇರೆ ಹೀಗಾಗಿ ಅಹಂಕಾರ ಶ್ರೀನಿವಾಸರ ಹೃದಯದಲ್ಲಿ ಹೆಡೆಯೆತ್ತಿತು (ಶ್ರೀನಿವಾಸಾಚಾರ್ಯರಿಗೆ ಪಾಂಡಿತ್ಯದ ಮದವಿರಲಿಲ್ಲವೆಂಬದು ಕೆಲವರ ಅಭಿಪ್ರಾಯವಾಗಿದೆ ) ತನ್ನ ವ್ಯಾಸಂಗವೆಲ್ಲಾ ಮುಗಿದ ಮೇಲೆ ಮಂತ್ರಾಲಯವನ್ನು ಬಿಟ್ಟು ಬರುವಾಗ ಗುರುವಿನ ಆಶೀರ್ವಾದವನ್ನು ಪಡೆದು ಊರಿಗೆ ಮರಳಿದರು ತಮ್ಮ ಗುರುವಿನಂತೆಯೇ ಒಂದು ಗುರುಕುಲವನ್ನು ಆರಂಭಿಸಿದರು ಇವರ ಪಾಂಡಿತ್ಯವನ್ನು ತಿಳಿದಿದ್ದ ಜನರು ತಮ್ಮ ಮಕ್ಕಳನ್ನು ವಿದ್ಯಾಭ್ಯಾಸಕ್ಕಾಗಿ ಇವರಲ್ಲಿಗೇ ಕಳಹಿಸಿದರು

---

1 ಹರಿಕಥಾಮೃತಸಾರಟೀಕಾ ಪಂಚರತ್ನ ಪ್ರಕಾಶಿಕಾ ಪುಟ xxvi

ಅನೇಕರು ಇವರ ಪ್ರಭಾವಕ್ಕೊಳಗಾಗಿ ಶಿಷ್ಯರಾದರು. ಮಾನವಿಗೆ ಎಂಟು ಮೈಲಿ ದೂರದಲ್ಲಿದ್ದ ಚೀಕಲಪರವಿಯಲ್ಲಿ ವಿಜಯದಾಸರೆಂಬ ಪ್ರಸಿದ್ಧ ಹರಿದಾಸರಿದ್ದರು. ಅವರಿಗೆ ಗೋಪಾಲದಾಸ ಮೋಹನದಾಸ ತಿಮ್ಮಣ್ಣದಾಸರೇ ಮೊದಲಾದ ಶಿಷ್ಯರಿದ್ದರು. ಆ ವಿಜಯ ದಾಸರು ಕೂಸಮ್ಮಳ ಮಗನಾದುದರಿಂದ ಕೂಸಿ ಮಗದಾಸ ಎಂದು ಹಾಸ್ಯ ಮಾಡಿದುದರಲ್ಲಿ ಶ್ರೀನಿವಾಸಾಚಾರ್ಯರೂ ಒಬ್ಬರು. ಅವರನ್ನು ಕಂಡರೆ ಶ್ರೀನಿವಾಸಾಚಾರ್ಯರಿಗೆ ಆಗುತ್ತಿರಲಿಲ್ಲ. ಹಾಗೂ ಕಟುವಾಗಿ ಟೀಕಿಸುತ್ತಿದ್ದರು. ಆದರೆ ವಿಜಯ ದಾಸರು ಕ್ಷಮಾಭಾವನೆಯಿಂದಲೇ ಶ್ರೀನಿವಾಸಾಚಾರ್ಯರನು ಕಾಣುತ್ತಿದ್ದರು. ಸಂಸ್ಕೃತ ಪಾಂಡಿತ್ಯವಿದೆಯೆಂಬ ಅಹಂಕಾರ ಅವರಲ್ಲಿ ಹುದುಗಿರುವುದು ಬಹಳ ಅನಿಷ್ಟಕರವೆಂದೂ ಅದನ್ನು ಬಿಡಿಸಿದರೆ ಒಬ್ಬ ಶ್ರೇಷ್ಠ ಜ್ಞಾನಿಯಾಗಬಹುದೆಂದು ಆಲೋಚಿಸಿ ಒಮ್ಮೆ ಮಾನವಿಗೆ ಬೇಟಿ ನೀಡಲು ನಿರ್ಧರಿಸಿದರು. ಅವರ ಬರವಿಕೆ ಅಲ್ಲಿಯ ಜನರಿಗೆ ಅಪಾರ ಆನಂದವನುಂಟು ಮಾಡಿತು. ಊರನೆಲ್ಲ ತಳಿರು ತೋರಣಗಳಿಂದ ಅಲಂಕರಿಸಿದರು. ಅವರು ಬಂದಾಗ ಅನ ಸಂತರ್ಪಣೆಗಳನ್ನು ಮಾಡಲು ತೀರ್ಮಾನಿಸಿದರು. ಇದೆಲ್ಲವೂ ವಿಜಯ ದಾಸರ ಹೆಸರಿನಲ್ಲಿಯೇ ಪದ್ಧತಿಯಂತೆ ಸ್ವಯಂ ವಿಜಯ ದಾಸರೇ ಆ ಊರಿಗೆ ಆಗಮಿಸಿ ಎಲ್ಲರನ್ನೂ ಆಮಂತ್ರಿಸಿದರು. ತೀರ್ಥಪ್ರಸಾದಗಳನ್ನು ಸ್ವೀಕರಿಸಲು ಆಹ್ವಾನಿಸಿದರು. ಎಲ್ಲರಿಗೂ ತಿಳಿಸಿದಂತೆ ಶ್ರೀನಿವಾಸಾಚಾರ್ಯರಿಗೂ ಹೇಳಿದಾಗ ಗರ್ವದಿಂದ ಆಗಲಿ" ಎಂದರು. ಇನ್ನೇನು ಎಲ್ಲರೂ ಭೋಜನ ಕೂಟದಲ್ಲಿ ಭಾಗಿಯಾಗುವ ವೇಳೆಗೆ ಪುನಃ ವಿಜಯದಾಸರು ಒಬ್ಬ ಆಳಿನ ಮೂಲಕ ಹೇಳಿ ಕಳಿಸಿದರು. ಶ್ರೀನಿವಾಸಾಚಾರ್ಯರಿಗೆ ಆ ಕೂಟದಲ್ಲಿ ಭುಜಿಸುವುದೆಂದರೆ ಹಿಡಿಸದಾಗಿತ್ತು. ತಮಗೆ ಹೊತ್ತಾದ ಮೇಲೆ ಊಟ ಮಾಡುವುದು ಅಭ್ಯಾಸವಿಲ್ಲವೆಂದೂ ಹೊತ್ತಾಗಿ ಊಟಮಾಡಿದರೆ ಉದರ ಶೂಲೆಯಾಗುವುದೆಂದೂ ಹಾಗಾಗಿ ಆಗಲೇ ಊಟ ಮುಗಿಸಿರುವುದಾಗಿ ಕರೆಯಲು ಬಂದ ಆಳಿಗೆ ಉತ್ತರಿಸಿದರು. ವಿಜಯದಾಸರು ಶ್ರೀನಿವಾಸಾಚಾರ್ಯರು ಏಕೆ ಬರಲಿಲ್ಲ ಎಂಬುದರ ಒಳಾರ್ಥ ತಿಳಿದಿದ್ದು ಅವರು ಅದಂತೆಯೇ ಆಗಲಿ ಎಂದು ಹೇಳಿ ತಮ್ಮ ಕಾರ್ಯಗಳನ್ನು ಮುಗಿಸಿದರು. ಕೂಡಲೇ ಶ್ರೀನಿವಾಸಾಚಾರ್ಯರಿಗೆ ಹೊಟ್ಟೆನೋವು ಆರಂಭವಾಯಿತು. ದಿನ ಕಳೆದಂತೆಲ್ಲಾ ಅಧಿಕವಾಯಿತು. ಕಾಲಕ್ರಮೇಣ ಕ್ಷಯರೋಗವೂ ಸೇರಿಕೊಂಡಿತು. ವೈದ್ಯರನೇಕರಿಂದ ಔಷಧೋಪಚಾರಗಳಾದುವು. ಅವರ ಆರೋಗ್ಯ ಕಿಂಚಿತ್ತೂ ಗುಣವಾಗಲಿಲ್ಲ. ಇನ್ನೇನು ಅವರ ಜೀವನ ಕೊನೆಯಾದಂತೆಯೇ ಎಂದು ಎಲ್ಲರೂ ತಪ್ಪಗಾದರು. ತಾಯಿಗೆ ಗಾಬರಿಯಾಯಿತು. ಮಗನ ನೆನಹಿನಲ್ಲಿಯೇ ಮಲಗಿರಲು ಕನಸಿನಲ್ಲಿ ಮಂತ್ರಾಲಯದ ರಾಘವೇಂದ್ರರು ಕಾಣಿಸಿಕೊಂಡು ತಿರುಪತಿ ಶ್ರೀನಿವಾಸನನ್ನು ಪೂಜಿಸಿ ವಿಜಯ ದಾಸರಲ್ಲಿ ಕ್ಷಮೆ ಯಾಚಿಸಲು ಆದೇಶವಿತ್ತಂತಾಯಿತು. ಮಾರನೇ ದಿನ ತಾಯಿ ಮಗ ಇಬ್ಬರೂ ತಿರುಪತಿಗೆ ಹೋಗಿ ಪೂಜೆಯನ್ನೂ ಸಲ್ಲಿಸಿ ದೇಗುಲದಿಂದ ಹೊರಬರುತ್ತಿದ್ದಂತೆಯೇ ಆ ಸ್ಥಳಕ್ಕೆ

ವಿಜಯ ದಾಸರ ಆಗವ ನವ ಗಿಸ್ತು [1] ಅವರಲ್ಲಿಗೆ ಹೋಗಿ ಶ್ರೀನಿವಾಸಾಚಾರ್ಯರು ಕ್ಷಮೆ ಕೋರಿದರು ನಿಜವಾಗಿಯೂ ಆಚಾರ್ಯರ ಮನಸ್ಸು ಪರಿವರ್ತನೆಯಾಗಿದ್ದುದನ್ನು ವಿಜಯದಾಸರು ಗಮನಿಸಿ ಕ್ಷಮಿಸಿ ಅಭಯ ಪ್ರದಾನ ಮಾಡಿ ಆಶೀರ್ವದಿಸಿದರು ಗುರುವಿನ ಕೃಪೆ ಅವರ ಮೇಲೆ ಸಂಪೂರ್ಣವಾಗಿ ನೆಲಸಿತು ತಾವೇ ಅವರಿಗೆ ಅಂಟಿದ್ದ ರೋಗವನ್ನು ನಿವಾರಿಸುವ ಸಾಮರ್ಥ್ಯವಿದ್ದರೂ ಗಣಪತಿಯ ಅಂಶ ಸಂಭೂತರಾದ ತಮ್ಮ ಪ್ರಿಯ ಶಿಷ್ಯ ಗೋಪಾಲದಾಸರ ಬಳಿಗೆ ಅವರನ್ನು ಕಳುಹಿದರು ಅವರ ಆದೇಶದಂತೆ ಗೋಪಾಲದಾಸರನ್ನು ಕಂಡು ನಮಸ್ಕರಿಸಿದರು ಗೋಪಾಲದಾಸರು ಅವರನ್ನು ಕುರಿತು ಪೂಜ್ಯರಾದ ವಿಜಯದಾಸರನ್ನು ಕೀಳಾಗಿ ಕಂಡದ್ದರಿಂದ ನಿನಗೆ ಈ ಅವಸ್ಥೆ ಬಂದಿದೆ ಆದರೆ ನಿನಗೆ ಪಶ್ಚಾತ್ತಾಪವಾಗುತ್ತಿರುವುದರಿಂದ ಅವರ ಕರುಣೆಯಿಂದಲೇ ಸರ್ವವೂ ಸುಗಮವಾಗುತ್ತದೆ ಎಂದು ಅಭಯವಿತ್ತು ಒಂದು ಜೋಳದ ರೊಟ್ಟಿಯನ್ನು ಧನ್ವಂತರೀ ಮಂತ್ರದಿಂದ ಅಭಿಮಂತ್ರಿಸಿ ಅವರ ಕೈಯಲ್ಲಿ ಇಟ್ಟು ತಿನ್ನಲು ಸೂಚಿಸಿದರು ದಾಸರ ಇಚ್ಛಾನುಸಾರ ಭಕ್ತಿಯಿಂದ ರೊಟ್ಟಿಯನ್ನು ತಿಂದರು ಕ್ರಮೇಣ ರೋಗವು ಕಡಮೆಯಾಗುತ್ತ ಮೊದಲಿನಂತೆ ಆರೋಗ್ಯವಂತರಾದರು ಪುನಃ ತಮ್ಮ ಗುರುಕುಲವನ್ನೂ ನಡೆಸತೊಡಗಿದರು ವಿಜಯದಾಸರ ಬಗ್ಗೆ ಭಕ್ತಿ ಗೌರವಗಳು ಮೂಡಿದುವು

ಗೋಪಾಲದಾಸರು ಪ್ರತಿವರ್ಷವೂ ತಮ್ಮ ಶಿಷ್ಯರೊಂದಿಗೆ ತಿರುಪತಿಗೆ ಹೋಗುತ್ತಿದ್ದರು ಈ ಸಾರಿ ಶ್ರೀನಿವಾಸಾಚಾರ್ಯರೂ ಜತೆಗೂಡಿದರು ಆಚಾರ್ಯರು ಬೆಟ್ಟವನ್ನು ಹತ್ತುತ್ತಿರುವಾಗ ಆಯಾಸವಾಗಿ ಪ್ರಜ್ಞೆ ತಪ್ಪಿದರು ಗೋಪಾಲದಾಸರು ಧೈರ್ಯಗೆಡದೆ ವಿಜಯದಾಸ ಗುರುವರ್ಯರನ್ನು ಸ್ಮರಿಸಿದಾಗ ತಮ್ಮ ಆಯುಷ್ಯದಲ್ಲಿ ನಲವತ್ತು ವರ್ಷಗಳನ್ನು ದಾನಮಾಡೆಂದು ಪ್ರೇರಣೆಯಾಗಲಾಗಿ ಅದರಂತೆ ಆಯುರ್ದಾನ ಮಾಡಿದರು ಈ ರೀತಿಯಲ್ಲಿ ದಾಸರು ಗುರುಭಕ್ತಿಯನ್ನು ತೋರಿಸಿಕೊಂಡರು ಅಂದಿನಿಂದ ಅವರಿಗೆ ಭಕ್ತಿಯಲಿ ಭಾಗಣ್ಣ (ಗೋಪಾಲದಾಸರ ಮೊದಲ ಹೆಸರು) ಎಂಬ ಅನ್ವರ್ಥನಾಮವುಂಟಾಯಿತು ಶ್ರೀನಿವಾಸಾಚಾರ್ಯರು ಪುನಃ ಚೇತರಿಸಿಕೊಂಡು ತಿರುಪತಿ ಯಾತ್ರೆಯನ್ನು ಸುಗಮವಾಗಿ ಮುಗಿಸಿದರು ಅಪಮೃತ್ಯುಗೊಳಗಾಗಿದ್ದ ಆಚಾರ್ಯರು ಪಾರಾದರು ಗೋಪಾಲದಾಸರು ಅವರಿಗೆ ಗುರುವಾದರು ಪಾಂಡಿತ್ಯದ ಸೊಕ್ಕು ಇಳಿದು ಅವರಲ್ಲಿ ಭಕ್ತಿ ಮೂಡಿತು ಆಗಲೇ ಹರಿದಾಸರಾಗುವ ಹಂಬಲವೂ ಮೊಳಕೆದೋರಿತು ಆದರೆ ಅದಕ್ಕಿನ್ನೂ ಕಾಲ ಒದಗಿರಲಿಲ್ಲ ಅದಕ್ಕಾಗಿಯೇ ಇನ್ನೊಂದು ಮಹತ್ವದ ಘಟನೆ ಕಾದಿತ್ತು ಕೆಲವು ದಿನಗಳ ಅನಂತರ ದಾಸನಲ್ಲಿ ದಾಸ ದೀಕ್ಷೆಯನ್ನು ನೀಡಬೇಕೆಂದು ಕೋರಿದಾಗ ಪಂಡರಾಪುರಕ್ಕೆ

1 ರೋಗದಿಂದ ನರಳುತ್ತಿದ್ದ ಆಚಾರ್ಯರು ವಿಜಯದಾಸರ ಕಾಲು ಚೀಲವನ್ನು ಸೆರಗಿನಲ್ಲಿ ... ಬಂದು ಕ್ಷಮಾಯಾಚನೆಗೈದಾಗ ಅವರು ತಮ್ಮ ಶಿಷ್ಯ ಭಾಗಣ್ಣನವರಲ್ಲಿಗೆ ಕಳುಹಿಸಿದರು ಎಂದು ಮಾತ್ರೊಂದು ಅಭಿಪ್ರಾಯವಿದೆ —ಪೂರ್ವೋಕ್ತ ಕೆ ಎಂ ಕೃಷ್ಣರಾವ್

ಹೋಗಿ ವಿಠಲನನು ಧ್ಯಾನಿಸು ಚಂದ್ರಭಾಗೆಯಲ್ಲಿ ಸ್ನಾನ ಮಾಡುವಾಗ ನಿನ್ನ ಇಷ್ಟ ಸಿದ್ಧಿಸುವುದು ಎಂದು ಆಶೀರ್ವದಿಸಿ ಕಳಿಹಿದರು ಆಚಾರ್ಯರು ಭೀಮಾ ನದಿಯಲ್ಲಿ ಮುಳುಗು ಹಾಕಿದರು ಮೂರನೆಯ ಸಲ ಮುಳುಗಿದಾಗ ಒಂದು ಶಿಲೆಯು ಅವರಿಗೆ ದೊರಕಿತು ಅದರಲ್ಲಿ ಜಗನ್ನಾಥ ವಿಠಲ ಎಂಬ ಅಂಕಿತವಿದ್ದಿತು ಅದನ್ನು ಓದಿದಾಗ ಅವರಿಗೆ ಅಸದಳ ಆನಂದವಾಯಿತು ಮೈ ಪುಳಕಿತಗೊಂಡಿತು ಅಂದಿನಿಂದ ಶ್ರೀನಿವಾಸಾಚಾರ್ಯರು ಜಗನ್ನಾಥದಾಸರೆಂಬ ನಾಮವನ್ನು ಪಡೆದು ತಮ್ಮ ಕೃತಿಗಳನ್ನು ಜಗನ್ನಾಥ ವಿಠಲ ಎಂಬ ಅಂಕಿತದಲ್ಲಿ ರಚಿಸಲಾರಂಭಿಸಿದರು ಅವರಲ್ಲಿದ್ದ ಪಾಂಡಿತ್ಯ ನಿಧಾನವಾಗಿ ಕರಗಿ ಜನಸಾಮಾನ್ಯರಿಗೆ ರುಚಿಸುವಂತಹ ಕವಿತೆ ಕೀರ್ತನೆಗಳ ರೂಪದಲ್ಲಿ ಹೊರಹೊಮ್ಮಿತು ಅಂದೇ ಪಾಂಡುರಂಗನನ್ನು ಸ್ತುತಿಸುತ್ತಾ ಹಾಡಿದರು ಆಗ ಹಾಡಿದ ಮೊದಲ ಕೀರ್ತನೆ ಇದು —

ತಟಿತ್ಕೋಟಿ ನಿಭಕಾಯ ಜಗನ್ನಾಥ
ವಿಠಲಯ್ಯ ವಿಠಲಯ್ಯ ॥ಪಲ್ಲ॥

ಭಜಿಸುವೆ ನಿನ್ನನು ಅಜಭವ ಸುರನುತ
ಭಜಕಾಮರತರು ಕುಜನಕುಠಾರೀ ೧

ನೀ ಕರುಣಿಸದೆ ನಿರಾಕರಿಸಿದರೆನ
ಗ್ಯಾರು ಗತಿಯೊ ದಯಾಕರ ಮೂರುತಿ ೨

ಶರಣಾಗತರನು ಪೊರೆವೆನೆಂಬ ತವ
ಬಿರುದು ಕಣಾ ಸಿರಿವರ ಜಗನ್ನಾಥ ೩

ಈ ಜಗನ್ನಾಥ ವಿಠಲ ಅಂಕಿತವಿದ್ದ ಶಿಲೆ ಬಹು ಕಾಲದವರೆಗೂ ಮಾನ್ವಿಯಲ್ಲಿಯೇ ಇತ್ತೆಂದೂ ಅನಂತರ ಅದು ಅಪಹೃತವಾಯಿತೆಂದೂ ದಾಸರ ಭಕ್ತಾದಿಗಳು ಅಭಿಪ್ರಾಯಪಟ್ಟಿದ್ದಾರೆ ಶ್ರೀನಿವಾಸಾಚಾರ್ಯರಿಗೆ ಅಂಕಿತ ದೊರೆತು ಜಗನ್ನಾಥ ದಾಸರಾದ ವಿಷಯ ತಿಳಿದ ವಿಜಯದಾಸರು ಗೋಪಾಲದಾಸರು ಮಹದಾನಂದಪಟ್ಟರು

ಶ್ರೀನಿವಾಸರು ದಾಸರಾದ ಮೇಲೆ ದೇಶ ಸಂಚಾರ ಅನಿವಾರ್ಯವಾಯಿತು ಅನೇಕಾನೇಕ ಶಿಷ್ಯರು ಲಭಿಸಿದರು ಹಲವಾರು ತೀರ್ಥಕ್ಷೇತ್ರಗಳನ್ನು ಸಂದರ್ಶಿಸಿದರು ಈ ಸಂಚಾರ ಕಾಲದಲ್ಲಿ ಸವಣೂರಿಗೆ ಬಂದಾಗ ಶ್ರೀ ಸತ್ಯಬೋಧಸ್ವಾಮಿಗಳ ಕೃಪೆಗೆ ಪಾತ್ರರಾದಾಗ ಭಕ್ತಿಯ ಕಾಣಿಕೆಯಾಗಿ ಒಂದು ತಟ್ಟೆಯನು ದಾಸರು ಅರ್ಪಿಸಿದರು ಹಾಗೆಯೇ ದಾಸರಿಗೆ ತಮ್ಮ ಪಾದುಕೆಗಳನ್ನು ಉಡುಗೊರೆಯಾಗಿ ನೀಡಿದರೆಂದು ಹೇಳಲಾಗುತ್ತಿದೆ ಅವರನ್ನು ಕುರಿತು ಹೀಗೆ ಹಾಡಿದ್ದಾರೆ

ವಾದಿ ವಾರಣ ಪಂಚವದನ ಸತ್ಯ
ಬೋಧ ಸದ್ಗುರು ಜಿತಮದನ ॥ಪ॥

ಸತ್ಯಪ್ರಿಯರ ಕರಕಮಲ ಜಾತ
ನಿತ್ಯನಿರ್ಜಿತ ಘೋರ ಶಮಲ
ಚಿತ್ತ ಜಪಿತ ಜಗನ್ನಾಥ ವಿಠಲನ
ಚಿತ್ತಾನುವರ್ತಿಗಳಾಗಿ ಸಂಚರಿಸುತ

ಅನಂತರ ಸವಣೂರಿನ ಅಕ್ಕಪಕ್ಕದ ಗ್ರಾಮಗಳಿಗೆ ಭೇಟಿಕೊಟ್ಟರು ಕರಜಗಿಯಲ್ಲಿ ವಿಷಯಲಂಪಟನ ಗಿದ್ದ ದಾಸಪ್ಪನನ್ನು ತಮ್ಮ ಉಪದೇ ಶಾಮೃತದಿಂದ ಆತನ ಮನಃ ಪರಿವರ್ತನೆ ಮಾಡಿದರು ಜಗನ್ನಾಥದಾಸರ ಶಿಷ್ಯರಲ್ಲೊಬ್ಬರಾದ ಪ್ರಾಣೇಶದಾಸರು ಅವನಿಗೆ ವಿವೇಕ ಹೇಳಿದರು

ಆದದ್ದಾಯಿತು ಇನ್ನಾದರೂ ಒಳ್ಳೆ
ಹಾದಿ ಹಿಡಿಯೋ ಪ್ರಾಣೀ ॥ಪ॥

ಈ ದುರ್ನಡತೆ ತಿಂದ್ಯೋದರಿಹಪರದಿ
ಮೋದೆಂದಿಗೂ ಕಾಣಿ ಪ್ರಾಣೀ
ನೆಂಟ ಸತಿ ಧನದೊಳಾನವರತ
ಹುಳುವಾಗಿರುವೆ ಯಲ್ಲೋ
ಸ್ಥಳಾಸ್ಥಳರಿಯ ದೆ ಕಲಾಪ ಮಾಡ್ಯಘ
ಕೊಳಲಾಗುವುದು ಸಲ್ಲೋ
ಹಲ ಪಿಡಿದು ವಿಧಿ ಕಲಾಚರಣೆ ಬಿಡೆ
ಫಲಾತಿಗ ವರೆಲ್ಲೋ
ಎಲಾ ಕೇಳು ಒಂದು ತಿಲಾವಮಾತ್ರ ನೀ
ಗೆಲಾಹ ಬಗೆಯ ಲ್ಲೋ ಪ್ರಾಣೀ ೧

ಅನಂತರ ದಾಸಪ್ಪನು ಜಗನ್ನಾಥದಾಸರ ಶಿಷ್ಯನಾದನು ಅವನಿಗೆ ಹರಿದಾಸ ದೀಕ್ಷೆ ಯನಿತ್ತು ಶ್ರೀದವಿಠಲ ಎಂಬ ಅಂಕಿತವನ್ನೂ ಕರುಣಿಸಿದರು ದಾಸಪ್ಪ ಹರಿ ದಾಸರು ತಮ್ಮ ಗುರುವಿಗೆ ಸಲ್ಲಿಸುವ ಕಾಣಿಕೆಯೊ ಎಂಬಂತೆ ಮುಂದೆ ಗುರುವಿಂದ ರಚಿತವಾದ ಹರಿಕಥಾಮೃತಸಾರ ಎಂಬ ಗ್ರಂಥಕ್ಕೆ ೨೪ ಪದ್ಯಗಳನ್ನು ಬರೆದು ಆ ಗ್ರಂಥಕ್ಕೆ ಇತಿನೆಯ ಫಲಶ್ರುತಿ ಸಂಧಿಯಾಗಿ ಸೇರ್ಪಡೆಯಾಗಿಸಿದ್ದಾರೆ ಈ ಪದ್ಯ ಗಳು ಆ ಗ್ರಂಥಕ್ಕೆ ಪ್ರಶಸ್ತಿ ಪದ್ಯಗಳಂತಿವೆ

ಕರ್ಜಗೆಯಿಂದ ಹುಬ್ಬಳ್ಳಿ ಗದಗ ಅಣ್ಣಿಗೆರೆ ಕೋಣನತಂಬಿಗೆ ಒಳಗಾವಿ ಚಿಕ್ಕೋಡಿ ಹುಕ್ಕೇರಿ ಮೊದಲಾದ ಸ್ಥಳಗಳಲ್ಲಿ ಸ ಚರಿಸಿದ್ದಲ್ಲದೆ ಮೈಸೂರು ಸೀಮೆ ಯ ಲ್ಲಿಯೂ ಪಾದಯಾತ್ರೆ ಬೆಳಸಿದರು ಅಂದಿನ ಮೈಸೂರು ದಿವಾನರಾಗಿದ್ದ ಪೂರ್ಣಯ್ಯನವರು ಗದ್ದಲ ಮಹಾರಾಜರು ಆಮಂತ್ರಿಸಿ ಸತ್ಕರಿಸಿದರು ರಂಗೋಲೆ ಬಿಡುವುದರಲ್ಲಿ ನಿಷ್ಣಾತರಾದ ದಾಸರಿಗೆ ಶ್ರೀರಂಗಪಟ್ಟಣದ ಶ್ರಿ ರಂಗನಾಥಸ್ವಾಮಿ ಯ ಚಿತ್ರವನು ಬಿಡಿಸಲು ಪ್ರಾರ್ಥಿಸಿದರು ಅದರಂತೆ ಸ್ವಾಮಿಯ (ಕಿರೀಟರಹಿತ) ಚಿತ್ರವನ್ನು ಬರೆದರು ಕಿರಿ ಟವಿಲ್ಲದಿರುವುದನ್ನು ಕಂಡು ದಿವಾನರು ಸ್ವಲ್ಪ ಅಸಮಾ ಧಾನಗೊಂಡರು ಆದರೆ ಆ ವೇಳೆಯ ಲ್ಲಿ ದೇವರಿಗೆ ಕಿರೀಟವನ್ನು ಧರಿಸಿರಲಿಲ್ಲ ಎಂಬುದನ್ನು ಪರಿಚಾರಕರಿಂದ ತಿಳಿದು ಏಕ ಕಾಲದಲ್ಲಿ ಆಶ್ಚರ್ಯ ವ ತ್ತು ಪಶ್ಚಾತ್ತಾಪ ಗಳುಂಟಾದುವು ಅನಂತರ ದಾಸರಲ್ಲಿ ಕ್ಷಮೆ ಯಾಚಿಸಿದರು ಅವರ ಸಂಚಾರ ಕೆ ೦ದು ಪಲ್ಲಕಿ ಯನ್ನೂ ಉಡುಗೊರೆಯಾಗಿ ಕೊಟ್ಟರು ಇಂತಹ ಘಟನೆಗಳು ಅನೇಕವಿವೆ ಮೂಕರಾದವರು ಮಾತನಾಡಿದ್ದು ಸೋದೆಯಲ್ಲಿದ್ದ ಒಬ್ಬ ಮಹಿಳೆ ಯನ್ನು ಬ್ರಹ್ಮರಾಕ್ಷಸಿಯ ಪೀಡೆಯಿ ೦ದ ಕಾಪಾಡಿದ್ದು ಹಾವಿನಿಂದ ಕಚ್ಚಲ್ಪಟ್ಟು ಮ ತನಾದವನನ್ನು ಬದುಕಿಸಿದ್ದು ಮೊದಲಾದುವು

ನಾಡಿನಾದ್ಯಂತ ಸುತ್ತಾಡಿದ ಜಗನ್ನಾಥದಾಸರು ಕೀರ್ತನೆಗಳನ್ನು ಹಾಡಿ ಜನರ ವ ನಸ್ಸನು ಭಕ್ತಿಯತ್ತ ತಿರುಗಿಸಿದರು ಸನ್ಮಾರ್ಗದಲ್ಲಿ ನಡೆಯಲು ಉಪದೇಶಿಸಿದರು ಅನೇಕ ಶಿಷ್ಯರಿಗೆ ದಾಸ ದಿ ಕ್ಷೆಯನಿ ತ್ತರು ಜನೋಪಕಾರ್ಯಗಳಲ್ಲಿ ಭಾಗಿಯಾದರು ಇವರು ವಾಸಿಸುತ್ತಿದ್ದ ವ ನೆಯಲ್ಲದೆ ಇನ ಷ್ಟು ಆಸ್ತಿಪಾಸ್ತಿಗಳು ಧಾರವಾಡ ಜಿಲ್ಲೆಯ ಹಾವೇರಿಯ ಲ್ಲಿದೆ ಆದರೆ ದಾಸರಿಗೆ ಇವಾವುದರ ಪರಿವೆಯೇ ಇರಲಿಲ್ಲ

ಜಗನ್ನಾಥದಾಸರ ಶಿಷ್ಯ ಪರಂಪರೆಯ ಲ್ಲಿ ಪ್ರಾಣೇಶವಿಠಲ ಶ್ರೀದವಿಠಲ ವೆಂಕಟವಿಠಲ ಗೋಪತಿವಿಠಲ ಜ್ಞಾನಮಯವಿಠಲ ಆನಂದಮಯವಿಠಲ ಎಂಬ ಅಂಕಿತಗಳನ್ನುಳ್ಳವರು ಮುಖ್ಯರಾದವರು ಗುರ ಗಳಾದ ಗೋಪಾಲದಾಸರಿಂದ ನಲವತ್ತು ವರ್ಷ ಆಯುರ್ದಾನವನ್ನು ಪಡೆದುದರ ಫಲವಾಗಿ ಜಗನ್ನಾಥದಾಸರು ಶಾಲಿವಾಹನ ಶಕ ೧೭೩೧ ನೆಯ ಶ್ರಾವಣ ಶುದ್ಧ ನವಮಿ ಭಾನುವಾರ ರಾತ್ರಿಯ ಮೊದಲ ಪ್ರಹರಾಂತ್ಯದಲ್ಲಿ (ಅಂದರೆ ದಿ 17-9-1809 ರಲ್ಲಿ) ವೈಕುಂಠವಾಸಿಗಳಾ ದರು ಅವರು ಬದುಕಿದ ಕಾಲಾವಧಿ ೮೧ ವರ್ಷ ೧ ತಿಂಗಳು ೨೦ ದಿನಗಳು ಈಗ ಅವರು ವಾಸಿಸುತ್ತಿದ್ದ ವ ನೆ ವ ೦ದಿರವಾಗಿದೆ ಅವರು ಬಳಸುತ್ತಿದ್ದ ತಾಳತಂಬೂರಿ ಗಳು ಪಾದುಕೆಗಳು ಪೂಜಿಸುತ್ತಿದ್ದ ಸಾಲಿಗ್ರಾಮ ದೇವರ ಪ್ರತಿಮೆಗಳೂ ಅಲ್ಲಿವೆ ಹಾಗೂ ಅವರು ಆ ಮನೆಯಲ್ಲಿ ಒರಗಿ ಕೂಡುತ್ತಿದ್ದು ಗ್ರಂಥರಚನೆ ಗೈಯುತ್ತಿದ್ದ ಆ ಕಂಬಕ್ಕೆ ಶ್ರೀ ಜಗನ್ನಾಥದಾಸಾರ್ಯರ ಸ್ತಂಭ ಎಂದು ಜನರು ಭಕ್ತರು ಕರೆಯು ವರು ಆ ಕಂಬವನ್ನು ಕವಚಗಳಿಂದ ಅಲಂಕರಿಸಿ ಭಕ್ತಾದಿಗಳು ಇಂದಿಗೂ ಪೂಜಿಸುತ್ತಿದ್ದಾರೆ

3

ಜಗನಾ ಥದಾಸರು ತಮ್ಮ ಬಾ‍್ಯದಲ್ಲಿ ಸಂಸ್ಕೃತ ಸಾಹಿತ್ಯವನ್ನು ಕರಗತ ಮಾಡಿ ಕೊಂಡಿದ್ದರಷ್ಟೆ ಆದರೆ ದಾಸರಾದ ಮೇಲೆ ಅದರ ಮೆ ಲಿದ್ದ ಆಭಿಮಾನ ಕಾಲ ಕ್ರಮೇಣ ಕಡಮೆ ಯಾಗಿ ಜನರ ನುಡಿಯ ಕಡೆಗೆ ಗಮನ ಹಾಯ್ಸಿದರು ಹಾಗಾಗಿ ಕನ ಡದಲ್ಲಿ ಕೀರ್ತನೆ ಸುವ್ವಾಲಿ ಮತ್ತಿತರ ಕೃತಿಗಳನ್ನು ರಚಿಸತೊಡಗಿದರು ಪುರಂದರದಾಸ ಕನಕದಾಸ ವಿಜಯದಾಸ ಗೋಪ ಲದಾಸ ಮೋಹನದಾಸರಂತೆ ಇವರ ಕೀರ್ತನೆಗಳು ಜನರನ್ನು ಅಷ್ಟಾಗಿ ಆಕರ್ಷಿಸಲಿಲ್ಲ ಕೆಲವು ಕೃತಿಗಳು ಸಂಸ್ಕೃತ ಪದಗಳಿಂದ ತುಂಬಿದ್ದು ಅರ್ಥವಾಗುವುದೇ ಕಷ್ಟವಾಗಿದೆ ~ವರ ಉಪಲಬ್ಧ ಸಾಹಿತ್ಯ ಕೃತಿಗಳೆಂದರೆ ತಂತ್ರಸಾರ ಉಗಾಭೋಗಗಳು (೨) ಸುಳಾದಿಗಳು (೩) ಸುವಾಲಿ ಗಳು (೬೦೦) ಕೀರ್ತನೆಗಳು (೧೯೪) ಮತ್ತು ಜಗನಾ ಥದಾಸರನು ಸಾಹಿತ್ಯದಲ್ಲಿ ಶಾಶ್ವತವಾಗಿರಿಸುವಂತಹ ಅಧ್ಯಾತ್ಮ ದ್ವೈತ ಸಿದ್ಧಾಂ~ವನು ನಿವೇದಿಸುವ ೯೮೮ ಭಾಮಿನೀ ಷಟ್ಪದಿಗಳನ್ನುಳ್ಳ ಹರಿಕಥಾಮೃತಸಾರ ದಾಸರುಗಳು ನಾಡಿನಾದ್ಯಂತ ಸಂಚರಿಸಿ ಕೀರ್ತನೆಗಳನು ಸಂದರ್ಭಾನುಸಾರ ನಿಂತಲ್ಲಿಯೇ ರಚಿಸಿ ಹಾಡುತ್ತಿದ್ದರು ಅವರ ಶಿಷ್ಯರು ಬರೆದ ಕೊಳ್ಳುತ್ತಿದ್ದರು ಅನಂತರ ಅವನು ಓಲೆಕಟ್ಟನಲ್ಲಿ ಸಂಗ್ರಹಿ ಸಿಡುತ್ತಿದ್ದರು ಆದರೆ ಹರಿಕಥಾಮೃತಸಾರವನ್ನು ಜಗನ್ನಾಥದಾಸರೇ ಕುಳಿತು ರಚಿಸಿರಬೇಕು ಏಕೆಂದರೆ ಈ ಕೃತಿ ಕೀರ್ತನೆಗಳಂತೆ ಚಿಕ್ಕ ಕೃತಿಯಲ್ಲ

ಪಂಡರಾಪುರದಲ್ಲಿ ಜಗನ್ನಾಥವಿಠಲ ಎಂಬ ಅಂಕಿತದ ಶಿಲೆ ದೊರಕಿದುದರಿಂದ ಜಗನಾ ಥದಾಸರು ಮುಂದೆ ರಚಿಸಿದ ಎಲ್ಲಾ ಕೃತಿಗಳಿಗೂ ಅದೇ ಅಂಕಿತವನ್ನು ಬಳಸಿದರು

**ತಂತ್ರಸಾರ** ೨೯ ಪದಗಳಿಂದ ಕೂಡಿದ ಒಂದು ಚಿಕ್ಕ ಕೃತಿ ಇದೊಂದು ಪುಷ್ಪ ಮಾಲಿಕೆ ಮೂಲರಾಮನು ಬ್ರಹ್ಮನಿಗೆ ಅರ್ಪಿತವಾದ ಮಹಾಮಂತ್ರ ಮರ್ಮ ಇದನ್ನು ಜಪಿಸುವವನು ಧನ್ಯನಾಗುವನು ರಾಮನು ವನಜ ಸಂಭವನಾದ ಬ್ರಹ್ಮನಿಗೆ ಹೀಗೆ ವಿವರಿಸುವನು

ವನಜ ಸಂಭವ ಕೇಳು ನಾನೇ ಸರ್ವೋತ್ತಮನು
ಎನಗನಂತಾನಂತ ಮಂಗಳ ಗುಣ
ಪ್ರಣವ ವಾಚ್ಯನು ನಾನು ಅಷ್ಟ ವರ್ಣೋಪೇತ
ಪ್ರಣವದ ವಿಚಾರವನು ಪೇಳ್ವೆ ನಿನಗೆ ೧
ಸಾದರದಿ ಕೇಳು ಅಕಾರ ಉಕಾರ ಮಕಾರ
ನಾದ ಬಿಂದು ಘೋಷ ಶಾಂತತಿ ಶಾಂತರು
ಈ ದಿವ್ಯ ವರ್ಣದಲಿ ವಿಶ್ವ ತೈಜಸ ಪ್ರಾಜ್ಞ
ಮೋದಮಯ ತುರ್ಯಾತ್ಮ ಅಂತರಾತ್ಮ ೨

ಅಂತರಂತ್ಮ ತುರ್ಯಾತ್ಮಗಳು ಹಾಗೂ ಅಜ ಆನಂದ ಇಂದ್ರೇಶ ಮೊದಲಾದವರ ಉತ್ಪತ್ತಿ ಅನಂತರ ಪಂಚವಿಂಶತಿ ರೂಪಗಳು ಅಭಿವ್ಯಕ್ತವಾದದ್ದು ಪರಮಾತ್ಮ ಜ್ಞಾನಾತ್ಮ ರೂಪದಿಂದ ಒಂಬತ್ತು ನಿರುಪಮ ಮೂರ್ತಿಗಳು ಶೋಭಿಸಿದ್ದುದರ ವಿಚಾರ ಈ ಪುಟ್ಟ ಕೃತಿಯಲ್ಲಿ ಗಹನ ತತ್ತ್ವ ವಿಚಾರಗಳು ಸಂಕ್ಷಿಪ್ತವಾಗಿ ವಿಶ್ಲೇಷಿಸಲಾಗಿದೆ ಈ ಕೃತಿಯು ಜಗನ್ನಾಥದಾಸರದ್ದೇ ಎಂದು ಅಭಿಪ್ರಾಯವಿದೆ [5] ಆದರೆ ಕವಿಚರಿತಕಾರರು ವರದೇಂದ್ರ (ಕ್ರಿ ಶ 1774) ರದ್ದೆಂದು ಹೇಳಿದ್ದಾರೆ ಮಾಧ್ವ ಕವಿಯಾಗಿ ನಂಜನಗೂಡು ರಾಘವೇಂದ್ರ ಮಠದಲ್ಲಿ ಸ್ವಾಮಿ ಯಾಗಿದ್ದು ಇವನ ಗುರು ವಸುಧೇಂದ್ರರು ನರಸಿಂಹ ಭಾಗವತನ ಮಗನಾದ ಜಗನ್ನಾಥದಾಸನ ಪ್ರಾರ್ಥನಾನುಸರವಾಗಿ ಈ ಗ್ರಂಥವನ್ನು ವಸುಧೇಂದ್ರನ ಕೃಪೆಯಿಂದ ರಚಿಸಿದ ವಂತೆ ಕವಿ ಹೇಳುತ್ತಾನೆ [6] ಎಂದು ದೃಢವಾಗಿ ಸ್ಪಷ್ಟಪಡಿಸಿದ್ದಾರೆ ಶ್ರೀವರದೇಂದ್ರತೀರ್ಥರು ಇವರ (ಶ್ರೀನಿವಾಸಾಚಾರ್ಯರ) ಬಿನ ಹದ ಮೇರೆ ಪ್ರೀತಿಯಿಂದ ತಂತ್ರಸಾರ ಎಂಬ ಕೃತಿಯನು ರಚಿಸಿ ಅನುಗ್ರಹಿಸಿದರು [7] ಎಂಬ ಅಭಿಪ್ರಾಯವೂ ಇದೆ ಕವಿ ಚರಿತಕಾರರು ದೊರಕಿದ ತಂತ್ರಸಾರದ ಪದಗಳು ೨೫ ಆದರೆ ಆಚ್ಚಾಗಿರುವುದು ೨೭ [8] ಇವು ಎರಡು ಒಂದೇ ಕೃತಿಗಳು ಏಕೆಂದರೆ ಕ ಕ ಚ ಕಾರರು ಉದ ಹರಿಸಿರ ವ ಪಲ್ಲವಿ ಮತ್ತು ಮೂರು ನಾಲ್ಕನೆಯ ನುಡಿಗಳು ಈಗ ಆಚ್ಚಾಗಿರುವ ಕೃತಿಯಲ್ಲಿ ಕಂಡುಬರುವುದರಿಂದ ಈ ಎರಡು ಗ್ರಂಥಗಳು ಭಿನ್ನವಲ್ಲ ೨೬ನೆಯ ನುಡಿಯಲ್ಲಿ –

> ಮಂಗಳ ದೇಶ ಪ್ರಮತಿ ಮುನಿವರ್ಯನಿಗೆ
> ಮಂಗಳ ಶಿವೇಂದ್ರಾದಿ ಸುರನಿಕರ ಪೂಜ್ಯನಿಗೆ
> ಮಂಗಳ ಶಿವೇಂದ್ರಾದಿ ಸುರನಿಕರ ಪೂಜ್ಯನಿಗೆ
> ಮಂಗಳ ಜಗನ್ನಾಥವಿಠಲಯ್ಯಗೆ

ಎಂದಿರುವ ಸ್ತುತಿಯಲ್ಲಿ ಜಗನ್ನಾಥದಾಸರ ಅಂಕಿತ ಜಗನ್ನಾಥವಿಠಲ ಎಂಬ ಅಂಕಿತವಿರುವುದರಿಂದ ಈ ನುಡಿಯು ಜಗನ್ನಾಥದಾಸರದೇ ಎಂದು ದೃಢಪಡಿಸಬಹುದು

**ಸುಳಾದಿ ಹಾಗೂ ಉಗಾಭೋಗಗಳು** ಈ ವರ್ಗಗಳಿಗೆ ಸೇರಿದ ಹಾಡುಗಳು ತತ್ತ್ವ ವಿಚಾರಗಳನು ಪ್ರಮುಖವಾಗಿ ಪ್ರತಿಪಾದಿಸುತ್ತವೆ ಇವುಗಳಲ್ಲಿಯೂ ಸಂಗೀತ ಮೌಲ್ಯಗಳಿರುತ್ತವೆ ಇವುಗಳ ಮೇಲೆ ವಚನಗಳ ಪ್ರಭಾವವೂ ಇದೆ ಬಿಡಿಯಾದ ಅನುಭವದ ಉತ್ಕಟ ನಿರೂಪಣೆಗೆ ಸಂಗೀತ ಗ್ರಂಥಗಳಲ್ಲಿ ಹೇಳಿರುವ ಉದ್ಗ್ರಾಹ—

5 ಶ್ರೀ ಜಗನ್ನಾಥದಾಸರ ಕೃತಿಗಳು ಸಂ ಕೆ ಎಂ ಕೃಷ್ಣರಾವ್ ಇವರ ಈ ಗ್ರಂಥದಲ್ಲಿ ಕೀರ್ತನೆಗಳಲ್ಲೊಂದಾಗಿ ಸೇರಿಸಲಾಗಿದೆ

6 ಕರ್ನಾಟಕ ಕವಿಚರಿತೆ ಸಂ III (1929) ಪುಟ 136 ಆರ್ ನರಸಿಂಹಾಚಾರ್ಯ

7 ಶ್ರೀ ಜಗನ್ನಾಥದಾಸರ ಕೀರ್ತನೆಗಳು (ಉಡುಪಿ ಪುಟ ೧೧೬

8 ಪೂರ್ವೋಕ್ತ—ಕೆ ಎಂ ಕೃಷ್ಣರಾವ್ ಇವರು ಸಂಪಾದಿಸಿರುವ ಗ್ರಂಥದಲ್ಲಿ ೨೫ ನುಡಿಗಳಿವೆ

ಆಭೋಗಗಳ ತದ್ಭವವಾದ ಉಗಾಭೋಗಗಳು[9] ಸ ಳಾದಿಗಳಲ್ಲಿ ಆರಂಭದ ಸಾಲು ಗಳು ವಸ್ತುವಿಗೆ ಸಂಬಂಧಿಸಿದಂತೆ ತಿಳಿಯಾದ ವಿವರಗಳು ಬರುತ್ತವೆ ಅನಂತರ ಕೊನೆಯ ಎರಡು ಸಾಲುಗಳಲ್ಲಿ ಆ ಪದದ ಒಟ್ಟು ಸಾರವಿರುತ್ತದೆ ಲಯ ಪ್ರಾಸ ಗಳು ಕ್ರಮ ಬದ್ಧವಾಗಿರುತ್ತವೆ ಇದು ಸಪ್ತ ತಾಳಗಳಾದ ಧ್ರುವ ಮಟ್ಟ ರೂಪಕ ಝಂಪೆ ತ್ರಿಪುಟ ಅಟ್ಟ ಆದಿತಾಳಗಳ ರಚನೆಯಾಗಿರುತ್ತದೆ ಆದರೆ ಈ ಸಪ್ತ ತಾಳಗಳು ಉಗಾಭೋಗಗಳಲ್ಲಿರ ವುದಿಲ್ಲ ಒಂದು ವಸ್ತುವಿನ ವಿಶೇಷಣೆ ಹಾಗೂ ಸ್ಪಷ್ಟವಾದ ಚಿಂತನೆಯನು ಕಾಣಬಹ ದು ಜಗನ್ನಾಥದಾಸರ ಈ ವರ್ಗಕ್ಕೆ ಸೇರಿದ ಪದಗಳು ಕೇವಲ ೨ ೩ ಅವುಗಳಲ್ಲಿ ಒಂದೊಂದನ್ನು ಉದಾಹರಣೆಯಾಗಿ ಕೊಡ ಬಹುದು ರಸಭರಿತವ ದ ಉಗಾಭೋಗವನ್ನು ಅನುಭವದ ಸಾರ ಎಂದೇ ಕರೆಯುವರು

## ರೂಪಕ ತಾಳ

ಸುಳಾದಿಗೆ

ಮೂರು ಲೋಕ ಸ್ವಾಮಿ ಸರ್ವಜ್ಞ ಸುಖಪೂರ್ಣ
ಪ್ರೇರಕ ಸಾಕ್ಷಿ ಕಾರಣ ಕಾರ್ಯ ದೋಷವಿ
ದೂರ ಸದ್ಗುಣ ಸಾಂದ್ರ ಸಜ್ಜನಾಂಬುಧಿ ಚಂದ್ರ
ಭಾರಕರ್ತ ಜಗಕೆ ನೀ ನಿರೆ ಎಮ್ಮ ಮ
ನೊ ರಥ ಸಲಿಸುವ ದೇಶಸಾಧ್ಯವೋ ನಿನಗೆ
ಕ್ರೂರ ಮಾನವರ ಸಂಹಾರ ಮಾಡಿಸು ಗ ರು
ಮಾರುತೀವಲ್ಲಭ ಪ್ರಾರ್ಥಿಸ ವ ಭಕ್ತರಿಗೆ
ಭೂರಿ ಭಾಗ್ಯವನಿತ್ತು ನಿ ರಕ್ಷಿಸನ ದಿನ
ಶೂರ ಜಗನ್ನಾಥ ವಿಠಲ ನೀನಲ್ಲದಿ
ನಾ ರು ಭಕ್ತರ ಕಾವ ಕರುಣಿಗಳು ಜಗದಿ[10]

ಉಗಾಭೋಗಕ್ಕೆ

ಆರು ವಂದಿಸಲೇನು ಆರು ನಿಂದಿಸಲೇನು
ಆರು ಶಾಪಿಸಲೆ ನು ಆರು ಕೊ ಪಿಸಲೇನು
ಆರು ಮುನಿದು ಮಾತನಾಡದಿದ್ದರೆ ಏನು
ಮಾರುತಾಂತರ್ಯಾಮಿ ಜಗನ್ನಾ ಥ ವಿಠಲನ

---

9 ದಾಸ ಸಾಹಿತ್ಯ ಪೂರ್ವೋಕ್ತ ಪುಟ viii
10 ಜಗನ್ನಾಥದಾಸರ ಹಾಡ ಗಳು ಪುಟ ೯೦

ಕಾರುಣ್ಯಪಾತ್ರರ ಕರುಣವೆನೊ ಳಗಿರೆ
ಆರು ವಂದಿಸಲೇನು ಆರು ನಿಂದಿಸಲೇನು [11]

**ಸುವಾಲಿಗಳು** ಸರ್ವಜ್ಞನ ವಚನ (ತ್ರಿಪದಿ)ಗಳಂತೆ ಶುದ್ಧ ದೇಸೀ ಛಂದಸ್ಸಿನ ಸುವಾಲಿಗಳು ಎಂಬ ಬೇರೆ ಪ್ರಕಾರದಿಂದ ಕರೆಯಲ ಗುವ ಈ ಪದಗಳು ಸಮಾಜದಲ್ಲಿ ಕಾಣುವ ಅನೇಕ ಲೋಪ ದೊ ಷಗಳನ್ನೂ ವಿಮರ್ಶಾತ್ಮಕವಾಗಿ ಚರ್ಚಿಸಿವೆ ಚಿಕ್ಕ ಚಿಕ್ಕ ಪದಗಳಲ್ಲಿ ಗಹನವಾದ ವಿಚಾರಗಳನ್ನೂ ಅಡಗಿಸಬಹುದು ಎಂಬುದನು ತೋರಿಸಿಕೊಟ್ಟಿವೆ ತತ್ತ್ವವನು ಉಪದೇಶಿಸುವುದರಿಂದ ತತ್ತ್ವ ಸುವಾಲಿ ಎಂದೂ ಕರೆಯುವರು ಸುವಾಲಿ ಸುವ್ವಾಲೆ ಸುವ್ವಲೇ ಕೊನೆಗೆ ಹ್ರಸ್ವವಾಗಿ ಸುವ್ವಿ ಎಂದೆಲ್ಲಾ ರೂಪಗಳನ್ನು ತಾಳಿವೆ ಸುವಾಲಿ ಎಂದರೆ ಸು + ವಾಲೆ ಎಂದೂ ಸುಂದರ ವಾದ (ಚಿನ್ನದ) ವಾಲೆಯಿಂದೂ ಅರ್ಥವಾಗುತ್ತದೆ ನಾರೀ ವ ಣಿಯರಿಗೆ ವಾಲೆ ಮಾಂಗಲ್ಯ ಬಹು ಮುಖ್ಯ ವಾಲೆಯ ವಿಶೇಷತ್ವ ಮಾಂಗಲ್ಯಕ್ಕಿಂತಲೂ ಒಂದು ಕೈ ಮಿಗಿಲು ಅದೇ ನಾರಿ ವಿವಾಹವಾಗಿ ದುರದೃಷ ವಶಾತ್ ವಿಧವೆಯಾದಾಗ ಮಾಂಗಲ್ಯವನ್ನು ತೆಗೆದು ಬಿಡ ವಂತೆ ವಾಲೆಯನ್ನೂ ತೆಗೆಯದಿರುವುದು ಅಪವಾದ ವಾಗಿದೆ ಅಲ್ಲದೆ ಬಾಹ್ಯ ಸೌಂದರ್ಯವನು ಅಧಿಕಗೊಳಿಸುವುದು ವಾಲೆಗಳೇ ಕಿವಿ ಯೋಲೆಗಳು ಬಹಿರಂಗದಲ್ಲಿ ಹೇಗೆ ಗೋಚರವೊ ಹಾಗೆಯೇ ಈ ಸುವಾಲಿಗಳು ಅಷ್ಟೇ ಬಹಿರಂಗ ಮುಚ್ಚು ವ ರೆಯಿಲ್ಲದೆಯ ಕಣ್ಣಿಗೆ ಕಾಣುವ ನೀತಿ ಅನೀತಿ ಡಾಂಬಿಕತನ ದುರ್ವರ್ತನೆ ದುರ್ಜನ ಸಜ್ಜನ ತೆಗಳಿಕೆ ಹೊಗಳಿಗೆ ಪಾಪ ಪುಣ್ಯ ಸ್ವರ್ಗ ನರಕ ಶುಚಿ ಅಶುಚಿಗಳ ಗುಣಾವಗುಣಗಳನ್ನು ಮನಮುಟ್ಟುವಂತೆ ನಿವೇದಿ ಸುತ್ತವೆ ಹೀಗೆಯೇ ಗಣಪತಿ ಈಶ್ವರ ಬ್ರಹ್ಮ ರಾಘವೇಂದ್ರ ಭೂ ಮಾತೆ ರುಕ್ಮಿಣಿ ವೆಂಕಟೇಶಾದಿಗಳ ಪದಗಳೂ ಇವೆ

ದೇವರು ಗ ರುಗಳ ಸ್ತುತಿಗಳು ಹೀಗಿವೆ

ಅಂಬಿಕಾತನಯ ಭೂತಾಂಬರ ಧಿಪ ಸುರಕ
ದಂಬ ಸಂಪೂಜ್ಯ ನಿರವದ್ಯ । ನಿರವದ್ಯ ನಿನ್ನ ಪಾ
ದಾಂಬ ಜಗಳೆನ್ನ ಸಲಹಲಿ

—ಗಣಪತಿ

ಪಂಚಾಸ್ಯ ಮನನದ ಚಂಚಲನ ಪರಿಹರಿಸಿ
ಸಂಚಿತಾಗಾಮಿ ಪ್ರಾರಬ್ಧ । ಪಾರಬ್ಧದಾಟಿಸು ವಿ
ರಂಚಿ ಸಂಭವನೆ ಕೃತಯೋಗ

—ಈಶ್ವರ

11 ಅದೇ ಪುಟ ೯೪

ಹೃದಯದಲಿ ತವರೂಪ ವದನ ದಲಿ ತವನ ಮ
ಉದರದಲಿ ನೈವೇದ್ಯ ಶಿರದಲ್ಲಿ । ಶಿರದಲ್ಲಿ ನಿರ್ಮಾಲ್ಯ
ಪದಜಲಗಳಿರಲು ಭಯ ಉ ಟೆ —ವೆಂಕಟೇಶ

ನೋಡಿದವ ದುರಿತ ಈಡಾಡಿದವ ನಿನ್ನ ಕೊಂ
ಡ ಡಿದವ ನಿತ್ಯಹರಿಪಾದ । ಹರಿಪಾದ ಕಮಲಗಳ
ಕೂಡಿಸುವ ಸತ್ಯವೆಂದೆ ದು —ರಾಘವೆ ಂದ್ರ

ಮತ ವ್ರತ ಕಥೆ ದೈವಗಳಲ್ಲಿ ಶ್ರೇಷ ವಾವುವು ಎಂಬುದರ ವಿವರಣೆ ಒಂದು ಸುವಾಲಿ ಯಲ್ಲಿ ಕಾಣಬಹುದು

ಮತದೊಳಗೆ ಮಧ್ವಮತ ವ್ರತದೊಳಗೆ ಹರಿದಿನವು
ಕಥೆಯೊಳಗೆ ಭಾಗವತ ಕಥೆಯೆ ನಿ । ಕಥೆಯೆ ನಿ ವ ಜಾಲೋಕ
ಕತಿಶಯ ಶ್ರಿ ಕೃಷ್ಣ ಪ್ರತಿಮೆನಿ

ದೈವವನು ಳಿದು ಯಾವ ನರನನೇ ನಂಬುವುದಾಗಲಿ ಹೊಗಳುವುದಾಗಲಿ ಫಲವಿಲ್ಲ

ನರರ ಊಂಡಾಡಿ ದಿನ ಬರಿದೆ ಕಳೆಯಲು ಬೆ ಡ
ನರನ ಸಖನಾದ ಸಿರಿಕೃಷ್ಣ । ಸಿರಿಕೃಷ್ಣ ಮ್ಹಾರ ತಿಯ
ಚರಿತೆಯ ಕೊಂಡಾಡೊ ಮನವೃಬ್ಬಿ

ಸುಳ್ಳಿನ ಬಗೆಗೆ ಸೊಗಸ ದ ವಿವರಣೆಯ ನ್ನು ಈ ತ್ರಿಪದಿಯ ಲ್ಲಿ ಮನಗಾಣಬಹುದು ಅಂತೆಯೇ ಜೈನರಲ್ಲಿ ‍ ಳ್ಳು ಪಂಚಮಹಾಪಾತಕಗಳಲ್ಲೊಂದು ಯಾವ ಮನುಷ್ಯನೇ ಆಗಲಿ ಒಮ್ಮೆ ಸುಳ್ಳನ್ನು ಹೇಳಿ ಬಿಟ್ಟನೆಂದರೆ (ತಿಳಿದೋ ತಿಳಿಯ ದೆಯೊ ) ಅದನ್ನು ರಕ್ಷಿಸಲು ಇನೂ ಅನೇಕ ಸುಳ್ಳಿನ ಮಾಲೆಯ ನು ನೇಯಬೆ ಕಾಗುವ ಪ್ರಸಂಗ ಒದಗಿ ಬರುತ್ತದೆ ಕೊನೆಗೆ ಸುತ್ತಿ ಸುತ್ತಿಕೊಂಡು ಸ ಳ್ಳು ತನ್ನ ಹಾದಿಯ ನ್ನು ಬಿಟ್ಟು ನಿಜಾಂಶ ಹೊರಬೀಳ ವಂತೆ ಮಾಡುತ್ತದೆ ಏಕೆ ದರೆ ಸ ಳ ನು ನೆನಪಿನಲ್ಲಿರಿಸಿ ಕೊಳ್ಳುವುದು ಬಹು ಕಷ್ಟ ಆದರೆ ಸತ್ಯವನು ಎಷ್ಟು ವರ್ಷಗಳ ದರೂ ಸ್ಮೃತಿ ಪಟಲದಲ್ಲಿರಿಸಿಕೊಳ್ಳಬಹ ದು

ಸ ಳ್ಳಿಗಿಂತಧಿಕ ಮತ್ತಿಲ್ಲವೊ ಮಹ ಪಾಪ
ಸುಳ್ಳು ಕಳ ತನವು ನಿನ್ನಲ್ಲಿ | ನಿನ್ನಲ್ಲಿ ಉಂಟಾಯಿ
ತೆಲ್ಲೊ ಚಾರತ್ವ ಇದರಂತೆ

ಸತ್ಯದ ಸ್ವಸೂಪವನ್ನು ಕುರಿತು ಹ ಡುವ ಪದವಿದು

ಸತ್ಯವೆಂದರೆ ಖರೆಯು ವಿ ಥ್ಯೆಯೆಂದರೆ ಸುಳ್ಳು
ಸತ್ಯವಿ ಥ್ಯಗಳು ಏಕತ್ರ । ಏಕತ್ರವಿಹುದೆ ಉ
ನ್ಮತ್ತ ಈ ಮಾತು ನಿಜವಲ್ಲಿ

ಇಂತಹ ತ್ರಿಪದಿಯಲ್ಲಿಯೇ ದಾಸರು ತಮ್ಮ ಲೋಕಾನುಭವಗಳನು ವೆ ರೆದಿರುವರು

—ಗುಣವಂತನೆಂಬ ಮಾತನು ಕೇಳಿ ಸ ಖಿಸದವ
ಮನುಜ ಪಶುಸಿದ್ಧ

—ಒಡಿಹೋಗುವ ಮಡಿಯ ಮಾಡಿ ದಣಿಯ ಲು ಬೇಡ

—ಜಲದೊಳಗೆ ಮಿಂದು ನಿರ್ಮಲರಾದೆವೆಂದು ತ
ಮ್ಮೊಳು ತಾವೆ ಹಿಗ್ಗಿ ಸುಖಿಸೋರು

—ಮೀನು ಮೊಸಳೆಗಳು ತಪ್ಪೇನು ಜಲದೊಳಗಿಹವು
ಸಾ ನ ಫಲವ್ಯಾಕೆ ಬರಲಿಲ್ಲ

—ನರಕ ಸ್ವರ್ಗಗಳೆಂಬೆರಡು ಇಲ್ಲಿಹವು ವಿಸ್ಮೃತಿ
ನರಕ ಸ್ಮೃತಿಯೆ ಸ್ವರ್ಗ ಸ್ಮೃತಿ । ಸ್ವರ್ಗವಿರದಿರೆ ಬಾಹ್ಯ
ನರಕ ಭಯಕಂಜಿ ಎಂದೆಂದು

ಮಡಿಮೈಲಿಗೆಗಳನ್ನು ಕುರಿತಾಡಂಬರವರನು ಕಂಡು ದಾಸರಿಗೆ ಎಲ್ಲಿಲ್ಲದ ಕೋಪವಿದೆ

ಮಡಿವ ಡಿಯೆಂದು ಅಡಿಗಡಿಗ್ಹಾರುವೆ
ಮಡಿಯಲ್ಲ ಬಂತು ಬಿಕನಾಸಿ

ಎಂದು ಬೇರೊಬ್ಬ ದಾಸರು ಛೆ ಡಿಸಿದ್ದಾರೆ ಜಗನ್ನಾಥದಾಸರಾದರೊ ಖಂಡಿಸುವ ಬಗೆ ಇಂತಿದೆ

ಓಡಿ ಹೋಗುವ ಮಡಿಯ ಮಾಡಿ ದಣಿಯ ಲು ಬೇಡ
ನೋಡು ಸರ್ವಜ್ಞ ಹರಿರೂಪ । ಹರಿರೂಪ ನೋಡಿ ಕೊಂ
ಡಾಡಿ ಸುಖಿಯಾಗೆ ವ ನವುಬ್ಬಿ

ಮಡಿಯೆಂದರೆ ಬರಿದೆ ಸ್ನಾನ ಮಾಡಿದರಾಯಿತೆ ? ಹಾಗಾದರೆ ನೀರಿನಲ್ಲಿಯೇ ಇರುವ ಮೀನು ಮೊಸಳೆಗಳೇ ಮೊದಲಾದ ಪ್ರಾಣಿಗಳಿಗೇಕೆ ಮಡಿ ಬಾರದು ಎಂದು ಜಗನ್ನಾಥ ದಾಸರು ಪ್ರಶ್ನಿಸುತ್ತಾರೆ ಇಂತಹ ಡಂಭತನಕ್ಕೆ ಅವಕಾಶವೀಯದೆ ಜ್ಞಾನದತ್ತ ಗಮನ ಕೊಡಬೇಕೆಂಬುದೇ ದಾಸರ ಅಭೀಷ್ಟೆ

ಮಾಯಾ ವಾದವನ್ನು ದಾಸರು ಖಂಡಿಸಿರುವ ಮಾರ್ಗ ವಿಶಿಷ್ಟವಾಗಿದೆ

ಮಾಯವಾದಿಯ ಮಂತವು ಹೇಯವೆಂಬುದು ಸಿದ್ಧ
ತಾಯಿ ತಂದೆಗಳು ಸತಿ ಪುತ್ರ । ಸತಿ ಪುತ್ರರಗಲಿದರೆ
ಬಾಯಿ ಬಿಟ್ಟ್ಯಾಕೋ ಅಳುತಿದ್ದಿ
ಎಲ್ಲ ಒಂದೇ ಎಂಬ ಖುಲ್ಲ ಮಾನವ ನಿನ್ನ
ವಲ್ಲಭೆಯು ಬೆರೆದು ಸಂತಾನ । ಸಂತಾನ ಪಡೆದೇಕೆ
ಇಲ್ಲವೇ ಜನನಿ ಭಗಿನೇರು

ಸಿದ್ಧಾಂತಗಳಲ್ಲಿ ದ್ವೈತ ಸಿದ್ಧಾಂತವೇ ಶ್ರೇಷ್ಠ ಅದ್ವೈತ ಸಿದ್ಧಾಂತದಲ್ಲಿ ಹುರುಳಿಲ್ಲ ವೆಂಬುದನು ಸರಳವಾಗಿ ಸ್ಪಷ್ಟೀಕರಿಸಿದ್ದಾರೆ ಅಹಂ ಬ್ರಹ್ಮಾಸ್ಮಿ ಎಂಬ ತತ್ತ್ವ ವನ್ನೂ ಸಂತಾರಾಂ ಒಪ್ಪುವುದಿಲ್ಲ

ಪಾಲು ಗಡಲೊಳಗಿಪ್ಪ ಶ್ರೀಲೋಲ ಹರಿಯೆಲ್ಲಿ
ಹೇಲುಚ್ಚೆ ಯೊಳಗೆ ಹೊರಳುವ ಹೋರಾಡಿ ಬಳಲುವ
ಖೂಳ ಮಾನವನೆ ನೀನೆಲ್ಲಿ
ಈಶನಾನೆಂದವನ ಶ್ವಾಸಬಿಡಗೊಡದೆ ಯಮು
ಪಾಶಗಳ ಕಟ್ಟಿ ಸೆಳೆದೊಯಿದು | ಸೆಳೆದೊಯಿದು ನರಕದೊಳು
ಘಾಸಿಗೊಳಿಸ ವನೊ ಬಹ ಕಾಲ

ಅದ್ವೈತ ಸಿದ್ಧಾಂತವು ಸರ್ವಮಾನ್ಯವೆಂದು ಹೇಳ ವ ಬೋಧಕರಿಗೆ ದಾಸರು ಹೇಳುವ ಪ್ರತಿ ನುಡಿ

ಮಾತಾ ಪಿತರ ದ್ರೋಹಿ ಬಂಧು ಘಾತಕ ಬ್ರಹ್ಮ
ಘಾತಕನ ನೀನು ಪುಸಿಯ ಲ್ಲ | ಪುಸಿಯಲ್ಲ ಶ್ರೀ ಜಗ
ನಾ ಥ ವಿಠಲನೇ ನಾನೆಂಬಿ

ದ್ವೈತಮತದ ಮಾರ್ಗ ಹಾಗೂ ಅದರ ಸಾರ್ಥಕತೆಯನ್ನೂ ಸಾಬೀತು ಪಡಿಸುವ ಪದದ ಹಾಗೂ ಪದದ ಭಾಗಗಳು ಹೀಗಿವೆ

—ನಿನಗೆ ದಾಸನು ನಾನು ಎನಗೆ ದಾಸನು ನೀನು

—ಇಂದಿರಾಪತಿ ನೀನು ಮಂದಭಾಗ್ಯನು ನಾನು

—ನಿತ್ಯ ಬದ್ಧನು ನಾನು ನಿತ್ಯ ಮ ಕ್ತನು ನೀನು
ಭೃತ್ಯನೋ ನಾನು ಪ್ರಭು ನೀನು | ಪ್ರಭು ನೀನು ಮೂರ್ಲೋಕ
ವ್ಯಾಪ್ತನೂ ನೀನು ಅಣು ನಾನು

—ಬಿಂಬ ನೀ ಎನಗೆ ಪ್ರತಿಬಿಂಬ ನಾನಿನಗೆ

—ನೀನಲ್ಲದನ್ಯರಿಗೆ ನಾನೆರಗನೊ ಸ್ವಾಮಿ
ದಾನವಾಂತಕನೆ ದಯ ಮಾಡ | ದಯವಂತ ಎನ್ನೊಳ ಭಿ
ಮಾನ ನಿನಗಿರಲಿ ದಯವಾಗೊ

—ನಿನ ಅಧೀನನು ನಾನು ನಿನ್ನ ದಾಸರ ದಾಸ

—ನಾನಿನ್ನ ಮರೆತರೂ ನೀನೆನ್ನ ಮರೆಯದೆಲೆ
ಸಾನ ರಾಗದಲಿ ಸಲಹುವಿ | ಸಲಹುವೀ ಸರ್ವಜ್ಞ
ಏನೆಂಬೆ ನಿನ್ನ ಕರ ಣಕ್ಕೆ

ಹೀಗೆ ಸ ಉಭವರ್ಗರ್ಗದಲ್ಲಿ ದ್ವೈತ ವ ತವನ್ನು ಪ್ರಚಾರ ವಾಡ ವರಲ್ಲದೆ ಸುವಾಲಿ ಗಳಲ್ಲಿ ಜ್ಞಾನವನು ಪ್ರವೇಯಾಗಳನ್ನು ತ ಂಬಿದ್ದಾರೆ ವ ಹಾಲಕ್ಷ್ಮಿಯು ಸ್ತೋತ್ರ ಗೈಯುವ ಒಂದು ಸುವಾಲಿ

ಈಶ ಪ್ರವಿಷ್ಟೆ ಈಶ ಭಿನ ಳಿ ಸರ್ವ
ದೋಷ ವರ್ಜಿತಳೆ ಪರದೆ ಶೆ । ವರದೇಶೆ ಪತಿಯೊಡನೆ
ವಾಸವಾಗೆನ ಮನದಲ್ಲಿ

ಇಲ್ಲಿ ಸಿದ್ಧಾಂತ ಸಾರವಿದೆ ಶ್ರೀಹರಿಯಿಂದ ಭಿನ ದೇಶ ಕಾಲಗಳಿಂದ ಹರಿಗೆ ಸಮ ಳಾದರೂ ಗ ಣದಿಂದ ಅಸವ ಳಾದ ರವಾದೇವಿಗೆ ಸಮಾಸವಾ ಎಂದೇ ಹೆಸರು ಚೇತನಾಚೇತನ ಸರ್ವ ಸವಾಿದ ಉಂವನು ನಿಯಾಮನ ಮಾಡುವ ಈಶವರ್ಗಕ್ಕೆ ಸೇರಿದಾಕೆ ಸರ್ವದೋಷ ದೂರಳು ನಿತ್ಯಮುಕ್ತಳು ನಿರ್ವಿಕಾರಳು ಸರ್ವರಿಗೂ ವರದಾಯಕಳು ಜೀವೊ ತ್ತವ ರೆನಿಸಿದ ವಾಯು ಬ್ರಹ್ಮರಿಗೂ ಅಧಿಕಳು ಇಂತಹ ಲಕ್ಷ್ಮೀದೇವಿ ನನ ವ ನಸ್ಸಿನಲ್ಲಿ ಶ್ರೀಹರಿಯೊಂದಿಗೆ ಇದ್ದು ವರಪ್ರದಳಾಗು ಎಂದು ಪ್ರವೆಯಾತ್ಮಕವಾಗಿ ಸುವಾಲಿಯಲ್ಲಿ ಸ್ತುತಿಸಲಾಗಿದೆ [12] ಸರ್ವಜ್ಞನ ತ್ರಿಪದಿಗಳಿಗೆ ಸರ್ವಜ್ಞ ಎಂಬ ಅಂಕಿತವಿದ್ದಂತೆ ಈ ಸುವಾಲಿಗಳಿಗೇಕೆ ಇಲ್ಲ ಎಂಬುದು ಸೋಜಿಗ ಒಹ ಶಃ ಭಾವ ವಿಸ್ತಾರಕ್ಕೆ ಅಂಕಿತವಿದ್ದಿದ್ದರೆ ಕುಂಠಿತವಾಗುತ್ತಿತ್ತೋ ಏನೊ

**ಕೀರ್ತನೆಗಳು** ದಾಸರ ಗಳ ಯಾವ ಕೀರ್ತನೆಗಳನ್ನು ಪರಿಕಿಸಿದರೂ ಅವು ದೈವ ವನ್ನೊ ಗ ರ ವನೊ ಅಥವಾ ಸವಾಜ ಸ ಧಾರಣೆಯನೊ ವಿಶ್ಲೇಷಿಸುತ್ತವೆ ಆ ದೈವದ ಹಿರಿವೆ ಗರಿವೆಗಳನೂ ಮಹತ್ವವನ್ನೂ ಹಾಡುತ್ತವೆ ಸಂದರ್ಭಾನು ಸಾರ ದೃಷ್ಟಾಂತದ ರೂಪದಲ್ಲಿ ಪುರಾಣಿಕೋಕ್ತರಾದ ವ್ಯಕ್ತಿಗಳ ಹೆಸರುಗಳನು ಉಲ್ಲೇ ಖಿಸುತ್ತದೆ ಸವಾಜದ ಆಗುಹೊ ಗುಗಳಲ್ಲಿ ಕಷ್ಟ ಸುಖಗಳಲ್ಲಿ ಭಾಗಿಯಾಗುವುದ ರಿಂದ ಅವರು ಕೂಡ ಸವಾಜ ಸುಧಾರಣ ಕಾರ್ಯದಲ್ಲಿ ಭಾಗಿಯಾದಂತೆಯೇ ಜನ ಸಾಮಾನ್ಯರ ನಡ ವೆ ಇದ್ದರೂ ತಾವರೆಯ ಎಲೆಯ ಮೇಲಿರುವ ನೀರಿನಂತೆ ಅಂಟಿಯೂ ಅಂಟದಂತಿದ್ದು ತಮ್ಮ ಧ್ಯೇಯವನ್ನು ಸಾಧಿಸಿದ್ದಾರೆ ಜಗನಾ ಥದಾಸರ ಕೀರ್ತನೆಗಳು ಪುರಂದರದಾಸ ಕನಕದಾಸರ ಕೀರ್ತನೆಗಳಷ್ಟು ಜನಸಾಮಾನ್ಯರನ್ನು ಮುಟ್ಟಲಿಲ್ಲ ಹಾಗೂ ಪ್ರಸಿದ್ಧಿ ಪಡೆಯಲಿಲ್ಲ ಇವರ ಕೀರ್ತನೆಗಳು ಬಹುಪಾಲು ಭಕ್ತಿ ಪ್ರಧ ನವ ಗಿವೆ ದೇವ ದೇವತೆಗಳನು ನದಿ ಪುಣ್ಯಕ್ಷೇತ್ರಗಳನ್ನು ಸ್ತುತಿಸುವ ಜ್ಞಾನಿ ಅಜ್ಞಾನಿಗಳ ತಾರತಮ್ಯ ಭಕ್ತ ನಾಸ್ತಿಕರ ವ್ಯತ್ಯಾಸ ಲೋಕದಲ್ಲಿ ಕಾಣುವ ಆಚಾರ ಅನಾಚಾರಗಳನ್ನು ಮೂಢನಂಬಿಕೆ ಆಡಂಬರ ಡಂಭಾಚಾರಗಳನ್ನು ಖಂಡಿಸಿವೆ ತಮ್ಮ ಜಿ ವನದಲ್ಲಾದ ಪ್ರಮುಖ ಘಟನೆಗಳನು ಕೀರ್ತನೆಗಳ ವ ಲಕ ಸಂಕ್ಷಿಪ್ತವಾಗಿ

12 ಅದೇ ಕೆ ಎಂ ಕೃಷ್ಣರಾವ ಪುಟ VIII ಹಾಗೂ ಉದ್ಧರಿಸಿರುವ ಪದಗಳೆಲ್ಲಾ ಅವರು ಆ ಗ್ರಂಥದಿಂದಲೇ ಆಯ ದೆ

ವರ್ಣಿಸಿವೆ ದಾಸರನು ಯಾರು ಯಾವ ಒಗೆಯಲ್ಲಿ ಹೊಗಳಿದರೂ ತೆಗಳಿದರೂ ಅವರು ಎಲ್ಲವನ್ನು ನಿರ್ಲಿಪ್ತತೆಯಿಂದ ನೋಡುವವರು ಎಂತಹ ಪರಿಸ್ಥಿತಿಯಲ್ಲಿಯೂ ಹರಿಸ್ಮರಣೆ ಬಿಡದವರು ಉದಾ ವಿಜಯದಾಸರನ್ನು ಜಗನ್ನಾಥದಾಸರು ಕೂಸೀ ಮಗದಾಸ ನೆಂದು ಹಾಸ್ಯ ಮಾಡಿದರಾದರೂ ಅವರಿಂದಲೇ ಇವರಿಗೆ ಜೀವನದಲ್ಲಿ ಮಾರ್ಗ ನಿರ್ದೇಶನ ದೊರೆತದ್ದು ಅವಹೇಳನ ಮಾಡುವವರನ್ನು ತಿರಸ್ಕರಿಸಿಬಿಡುತ್ತಿರಲಿಲ್ಲ ತಿರಸ್ಕರಿಸಿದವರನ್ನೂ ಸನ್ಮಾರ್ಗದತ್ತ ಕರೆದೊಯ್ಯುತ್ತಿದ್ದ ಮಹಾ ಪುರುಷರು ಈ ದಾಸರು ಕರಜಿಗೆ ದಾಸಪ್ಪನನ್ನು ಹರಿದಾಸ ದಾಸಪ್ಪರನ್ನಾಗಿ ಪರಿವರ್ತಿಸಿದವರು ಜಗನ್ನಾಥದಾಸರೇ ಸದಾ ಸುಖಲೋಲುಪ್ತನಗಿದ್ದವನನ್ನು ಅಧ್ಯಾತ್ಮದತ್ತ ತಿರುಗಿಸಿದ್ದಲ್ಲದೆ ಅವನಿಗೆ ಶ್ರೀದವಿಠಲ ಎಂಬ ಅಂಕಿತವನಿತ್ತು ಆತನಿಂದ ಅನೇಕಾನೇಕ ಕೀರ್ತನೆಗಳು ಮೂಡಿಬರಲು ಕಾರಣಕರ್ತರಾದವರು ಇವರಿಗೆ ವಿಜಯದಾಸರು ಗೋಪಾಲದಾಸರು ಹೇಗೋ ಕರ್ಜಿಗೆ ದಾಸಪ್ಪನಿಗೆ ಇವರು ಸನ್ಮಾರ್ಗ ತೋರಿದರು

ಮಂತ್ರಾಲಯದ ರಾಘವೇಂದ್ರರಾಯರನ್ನು ಕುರಿತು ಸ್ತುತಿಸುವ ಕೀರ್ತನೆ ಹೀಗಿದೆ

ರೋಗಹರನೆ ಕೃಪಾಸಾಗರ ಶ್ರೀಗುರು
ರಾಘವೇಂದ್ರ ಪರಿಪಾಲಿಸೊ ॥ಪ॥
ಸಂತತ ದ ರ್ವಾದಿ ಧ್ವಾಂತ ದಿವಾಕರ
ಸಂತತ ವಿನುತ ಮಾತ ಲಾಲಿಸೊ ೧
ಪಾವನ ಗಾತ್ರ ಸುದೇವ ವರನೆ ತವ
ಸೇವಕ ಜನರೊಳಗಾಡಿಸೊ ೨
ಘನ ಮಹಿಮ ಜಗನ್ನಾಥ ವಿಠಲ ಪ್ರಿಯ
ನಿನ್ನಾರಾಧನೆ ಮಾಡಿಸೊ ೩

ಇದಲ್ಲದೆ ಇನ್ನೂ ಅನೇಕ ಕೀರ್ತನೆಗಳಲ್ಲಿ ರಾಘವೇಂದ್ರರನ್ನು ಸ್ತುತಿಸಿದ್ದಾರೆ

ಶ್ರೀ ರಾಘವೇಂದ್ರಾರ್ಯ ಬಾರೋ
ಕರುಣ್ಯ ವಾರಿಧಿಯೆ ಬಾರೋ
ಆರಾಧಿಪ ಭಕ್ತರಿಷ್ಟಾ ಪೂರೈಸುವ ಪ್ರಭುವೆ ಬಾರೋ ॥ಪ॥
ಸನ್ಯಾಸ ಕುಲದೀಪ ಬಾರೋ ಸನ್ನುತ ಸದ್ಗುಣನೆ
ಭಾಸುರ ಚರಿತನೆ ಭೂಸುರ ವಂದ್ಯನೆ
ಶ್ರೀ ಸುಧೀಂದ್ರಾರ್ಯರ ವರಪುತ್ರ ರಾಯ ಬಾರೋ
ಶ್ರೀ ಸುಧೀಂದ್ರಾರ್ಯರ ವರಪುತ್ರರೆನಿಸಿದ

ದೇಶಿಕರೊಡೆಯ ರಾಘವೇಂದ್ರರಾಯ ಬಾರೋ
ರಾಘವೇಂದ್ರಯತಿ ಸರ್ವಭೌಮದಿ ದುರಿ
ತಾಘದೂರ ತೇ ನಮೋ ನಮೋ

ಆ ಮಂತ್ರಾಲಯವಾದರೋ ಜನರ ಕಣ್ಣಿಗೆ ಗೋಚರಿಸುವ ಸೊಬಗು ವರ್ಣಿಸಲಸದಳ

ಸುರಪನಾಲಯ ದಂತೆ ಮಂತ್ರಾಲಯಂ
ಕರೆಸುವುದು ಕಂಗೊಳಿಸುವದು ನೋಳ್ಪ ಜನಕೆ ॥ಪ॥

ಕಾಮಧೇನುವಿನಂತೆ ಕಪ್ಪ ಗುರುವರ ಸಾರ್ವ
ಭೌಮ ಸುಧೀಂದ್ರ ಸುತ ರಾಘವೇಂದ್ರ
ಆವ ಯಶಾಧಿಪ ಖಿಳತಮಿಶ್ರ ಓಡಿಸುವ ಚಿಂ
ತಾಮಣಿ ಪ್ರಕಾಶದಂತಿಪ್ಪ ಮಂದಾವನದಿ ೧

ವಾದಿರಾಜಗುರುವನ್ನು ಹೀಗೆ ಸ್ಮರಿಸುತ್ತಾರೆ —

ವಾದಿರಾಜ ಗುರು ವಾದಿರಾಜಾ
ವಾದಿರಾಜ ಪ್ರತಿವಾದಿ ಗಜೇಂದ್ರ ಧ
ರಾ ಧರಾಟ ವಿಬೋಧದ ಚಂದಿ ॥ಪ॥

ನದಿಗಳನು ಪುಣ್ಯಕ್ಷೇತ್ರಗಳನು ಸ್ಮರಿಸುವುದನ್ನು ಮರೆತಿಲ್ಲ

ವರದೇ ಕಾರುಣ್ಯ ಶರಧೇ
ಕರೆದೆನ್ನ ತವ ನಿಧಿಯಲಿಟ್ಟು ಪೊರೆದೇ ॥ಪ॥

ಯಮುನಾ ನದಿಯ ಮಹಿಮೆಯನ್ನು ಕುರಿತು —

ಯಮುನೇ ದುರಿತೋಪಶಮನೇ
ಕರ್ಮ ಪರಿಹರಿಸು ಬಳಿಗದಮನೆ ದಯವಂತೆ ॥ಅ॥

ಕಾವೇರಿಯ ಘನತೆಯನ್ನು ತಿಳಿಸುವಾಗ —

ಕಾವೇರಿ ಕಲುಷಾಪಹಾರಿ ಪಾವನ
ಶರೀರೆ ಶುಭತೊ ಷಕಾರಿ ॥ಪ॥

ಶ್ರೀ ವಾಸುದೇವ ರಂಗೇಶನಾಲಯಕೆ ನೀ
ನಾವರಣನಾಗಿಪ್ಪೆ ವಿರಜೆಯಂತೇ
ದೇವಮುನಿ ಗಂಧರ್ವ ಪಿತೃಪ ನರವರರಿಂದ
ಸೇವನಿಯಾಳ ಗಿ ಸರ್ವಾರ್ಥ ಪೂರ್ಣೆ ೧

ಪಂಢರಿನಾಥನನ್ನು ಭಜಿಸುವಾಗ —

ಕಂಡೆ ಪಂಢರಿರಾಯನ ಸಿರಿಮನ ಪ್ರಿಯನಾ ॥ಪ॥
ಚಂಡ ವಿಕ್ರಮ ಕರದಂಡ ಮನಿಪನೊಲಿ
ದಂಡ ಜಾಧಿಪ ಪ್ರಕಾಂಡ ಸುಪೀರನ ॥ಪ॥

ಕಂಡೆ ಪಂಢರಿರಾಯನ ತನನು
ಕೊಂಡಾಡ ವರ ಪ್ರಿಯ ನ ವಿರ‿ನ ॥ಪ॥

ಇಷ್ಟದೈವವಾದ ತಿರ ಪತಿ ವೆಂಕಟೇಶನನ್ನು ಕಂಡರೆ ಜಗನ್ನಾಥದಾಸರಿಗೆ ತ ಂಬಾ ಒಲವು ಕಡೇಪಕ್ಷ ಐವತ್ತು ಬ ರಿಯಾದರೂ ಆ ದೇವರ ದರ್ಶನ ಮಾಡಿದ್ದಾರೆಂದು ಪದಂತಿ

ತುತಿಸಬಲ್ಲೆನೆ ಲಕ್ಷ್ಮೀಪತಿ ನಿನ ಬ್ರಹ್ಮ ಪಾ
ರ್ವತಿ ಪತ್ಯಾದ್ಯಳವಡ ದತಂಳ ಮಹಿಮೆಗಳ ॥ಅ॥

ಆ ವೆಂಕಟಗಿರಿ ನಿಲಯ ನಂಘ್ರಿರಾ
ಜೀವಯುಗಳಿಗಾ ನಮಿಸುವೆನು ॥ಪ॥

ಸೇವಿಪ ಜನರಿಗವ ರ ತರುವೆನಿಸಿ ಧ
ರಾವ‿ಯಾಖ್ಯ ದಿವಿಯೊಳಿಸೆವ ॥ಅ॥

ಶ್ರೀ ವೆಂಕಟ‿ಶ ಲಾಧಿಪ ನಮೋ ರಾ
ರಾಜೀವ ಭವ ಭವಾರಾಧ್ಯ ನಮೋ ॥ಪ॥

ಪಾತಕರೊಳಗಧಿಕ ನಾನಯ್ಯ ಜಗ
ತ್ಪಾತಕವ ಕಳೆವ ಮಹರಾಯ ನಿನ್ನ
ದೂತನಲ್ಲವೆ ಜೀಯ ಜಗ
ನ್ನಾಥ ವಿಠಲ ಪಿಡಿಯೋ ಕೈಯ ೪೬

(ಈ ಕೀರ್ತನೆಯಲ್ಲಿ ೪೬ ಪದಗಳಿವೆ)

**ಜೀವನ–ಘಟನೆ** ಈಗಿನ ಕಾಲದವರಂತೆ ತಮ್ಮ ಜೀವನಚರಿತೆಗಳನ್ನೂ ದಾಸರು ಬರೆಯಲಿಲ್ಲ ಆದರೆ ಅವರ ಜೀವನದಲ್ಲಾದ ಘಟನೆಗಳನು ಕೀರ್ತನೆಗಳ ಮೂಲಕ ನಿವೇದಿಸಿದರು ಅವುಗಳಿಂದ ಅವರ ಜೀವನಪಥ ಹೇಗೆ ಸಾಗಿತ್ತು ಎಂಬುದನ್ನು ಗುರುತಿಸಬಹುದು ಉಡುಪಿಯ ಕನಕನ ಕಿಂಡಿ ಹೇಗಾಯಿತು ಏಕಾಯಿತು ಎಂಬುದರ ಪೂರ್ವೇತಿಹಾಸಕ್ಕೆ ಕೀರ್ತನೆಗಳಿಂದ ಮಾರ್ಗದರ್ಶನ ಸಿಗುತ್ತದೆ ಅದೇ ರೀತಿ ಜಗನ್ನಾಥದಾಸರ ಜಿ ವನದ ದಾರಿಯನ್ನು ಅವರ ಕೀರ್ತನೆಗಳಿಂದಲೇ ವ ನಗಾಣ ಬಹುದು ಉದರಶೂಲೆಯಿಂದ ನರಳುತ್ತಿರುವಾಗ ವಿಜಯ ದಾಸರನ್ನು ಕಂಡು ತಮ್ಮ ಅಪರಾಧವನ್ನು ಕ್ಷಮಿಸಬೇಕೆಂದು ಪ್ರಾರ್ಥಿಸಿದರು ಆಗ ಅವರು ಗೋಪಾಲದಾಸರ ಬಳಿಗೆ ಕಳುಹಿದರು ಶ್ರೀನಿವಾಸಾಚಾರ್ಯರಿಗೆ ಗೋಪಾ‿ದಾಸರು ತಗಲಿದ್ದ ರೋಗ ವನು ನಿವಾರಿಸಿದ್ದಲ್ಲದೆ ತಮ್ಮ ಆಯ ಷ್ಯದಲ್ಲಿ ನಲವತ್ತು ವರ್ಷಗಳನ್ನು ಆಯುರ್ದಾನ ಮಾಡಿದರು

ವಿಜಯದಾಸರನ್ನು ಹೊಗಳುವ ಈ ಕೀರ್ತನೆಯಲ್ಲಿ ಅವರ ಸಮಾಗಮದಲ್ಲಾದ ಮನದ ತುಮುಲವನ್ನು ಗವನಿಸಬಹುದು

ರತುನ ದೊರಕಿತಲ್ಲ ಎನಗೆ ದಿವ್ಯ
ರತ ನ ದೊರಕಿತಲ್ಲಾ ||ಪಲ್ಲ||

ರತುನ ದೊರಕಿತು ಎನ್ನ ಜನುಮ ಪ
ವಿತರವಾಯಿತು ಈ ದಿನವು ನಾ
ಯತನ ಗೈಯುತ ಬರುತಿರಲು ಪ್ರ
ಯತನವಿಲ್ಲದೆ ವಿಜಯದಾಸರ ||ಅ ಪ||

ಪಥದಿ ನಾ ಬರುತಿರಲು ಥಳಥಳವೆಂದು
ಅತಿ ಕಾಂತಿ ಝಳಪಿಸಲು ಬೆರಗಾಗುತ್ತ
ಅತಿ ಚೋದ್ಯವ ಕಾಣಲು ಸೇವಿಸುತಿರೆ
ಸತತ ಕರಪಿಡಿದಾದರಿಸಿ ವ ನೋ
ರಥವ ಪೂರೈಸುತಲಿ ದಿವ್ಯ ಸ
ನ್ಮತಿಯ ಪಾಲಿಸಿ ಮೋಕ್ಷ ಸ ಪಥವ
ಅತಿಶಯದಿ ತೋರುತ್ತ ಪೊರೆವ ೧

ವಿಜಯ ದಾಸರ ಆಜ್ಞೆಯಂತೆ ಗೋಪಾಲದಾಸರು ಶ್ರೀನಿವಾಸರ ರೋಗವನು ನಿವಾರಿಸಿದ ಘಟನೆಗೆ ಸಂಬಂಧಿಸಿದ ಹಾಡು

ಗೋಪಾಲದಾಸರಾಯ ನಿನ್ನಯ ಪ ದ
ನಾ ಪೊಂದಿದೆನೊ ನಿಶ್ಚಯ ||ಪ||

ಈ ಪೀಡಿಸುವ ತ್ರಯ ತಾಪಗಳೋಡಿಸಿ
ಕೈಪಿಡಿದೆನ ಕಾಪಾಡಿದ ಗ ರ ರಾಯ ||ಅ ಪ||

ಘೋರ ವ್ಯಾಧಿಯನೆ ನೋಡಿ ವಿಜಯರಾಯ
ಭೂರಿ ಕರುಣವ ಮಾಡಿ
ತೋರಿದರಿವರೆ ಉದ್ಧಾರಕರೆಂದಂದಿ
ನಾರಭ್ಯ ತಪಪಾದ ಸಾರಿದೆ ಸಲಹೆಂದು
ಸೂರಿ ಜನ ಸಂಪ್ರಿ ಯ ಸುಗ ಣೋದಾರ
ದುರುಳನ ದೋಷ ನಿಚಯವ
ದೂರಗೈಸಿ ದಯಾಂಬುನಿಧೆ ನಿ
ವಾರಿಸಿದೆ ಕರಪಿಡಿದು ಕರುಣದಿ ೧

ಅಪಮೃತ್ಯುವನು ತರಿದೆ ಎನ್ನೊಳಗಿದ್ದ
ಅಪರಾಧಗಳ ಮರೆದೆ
ಚಪಲ ಚಿತ್ತನಿಗೊಲಿದು ವಿಪುಲ ಮತಿಯನಿತ್ತು
ನಿಪುಣನೆಂದೆನಿಸಿದೆ ತಪಸಿಗಳಿಂದಲಿ

ವಿಜಯದಾಸರು ವೈಕುಂಠವಾಸಿಗಳಾದ ವೃತ್ತಾಂತ ಈ ಕೀರ್ತನೆಯಲ್ಲಿದೆ —

ತೆರಳಿದರು ವಿಜಯದಾಸರು ವಿಜಯ ವಿಠಲನ
ಪುರದೊಳಗೆ ಪರಮ ಭಕ್ತರ ಕಾಣಬೆಕೆನುತ ||ಪ||

ಯುವ ಸಂವತ್ಸರದ ಕಾರ್ತಿಕ ಶುದ್ಧ ದಶಮಿ ವಿಭಕೆ
ರವುಗ ರುವಾರ ಪ್ರಥಮ ಯಾಮದೀ
ಪವನಾಂತರಾತ್ಮಕ ಶ್ರೀಹರಿಯು ದರ್ಶನೋ
ತ್ಸವ ಸಂಪಾದಿಸುವ ಬಹು ಲವಲವಿಕೆಯಿಂದ ೧

ಇದೇ ರೀತಿ ನರಸಿಂಹದಾಸರ ಮರಣವನು ತಿಳಿಸುವ ಕೀರ್ತನೆ ಇದು

ತೆರಳಿದರು ವೈಕುಂಠಪುರದರಸನ
ಚರಣವಬ್ಜ ಸೇವಿಸಲು ನರಸಿಂಹದಾಸರು ||ಪ||

ಜವ ಹರುಷದಿಂದ ಪಾರ್ಥಿವ ವರ ಷ ಮಾರ್ಗಶಿರ
ಅಪರ ಪಕ್ಷದ ಷಷ್ಠಿ ಭೌಮ ವಾರ
ದಿವದಿ ಪ್ರಾತಃಕಾಲ ಸಮಯದಲಿ ಶ್ರೀ ಲಕ್ಷ್ಮೀ
ಧವನಂಘ್ರಿ ಕಮಲ ಧೇನಿಸುತ ಸಂತೋಷದಲಿ ೧

ಈ ನರಸಿಂಹದಾಸರೇ ಜಗನ್ನಾಥದಾಸರ ತಂದೆಯಿರಬಹುದಾದರೆ ಅವರು ಗತಿಸುವಾಗ ಜಗನ್ನಾಥದಾಸರಿಗೆ ೩೮ ವರ್ಷಗಳಾಗಿತ್ತೆಂದು ಊಹಿಸಬಹುದು

ರಾಘವೇಂದ್ರರಾಯರ ಭೌತಿಕ ದೇಹದ ವಿಸರ್ಜನೆಯನ್ನು ನಿರೂಪಿಸುವ ಕೀರ್ತನೆ ಯಿದು ಇದರಿಂದ ಅವರು ಗತಿಸಿದ ಕಾಲವನ್ನು ತಿಳಿಯಬಹುದು

ವಂದಿಸುವೆ ಗುರು ರಾಘವೇಂದ್ರಾರ್ಯರ
ವೃಂದಾವನಕೆ ಪ್ರತಿ ಪ್ರತಿ ದಿನಗಳಲ್ಲಿ ||ಪ||

ಸುವಿರೋಧಿ ವತ್ಸರದಿ ಶ್ರಾವಣ ಪರದ್ವಿತಿಯ
ರವಿವಾರ ತುಂಗಭದ್ರಾತೀರದಾ
ನವಸ ಮಂತ್ರಾಲಯದಿ ದೇಹವನು ಒಟ್ಟು ಮಾ
ಧವನ ಪುರವೈದಿದ ಮಹಾತ್ಮರಿವರಹದೆಂದು ೧

**ಹರಿಕಥಾಮೃತಸಾರ** ದಾಸರು ಮುಖ್ಯವಾಗಿ ಕೀರ್ತನೆಗಳಿಂದಲೇ ಖ್ಯಾತಿ ಪಡೆದವರು ಆದರೆ ಕನಕದ ಸ ಜಗನಾ ಥದಾಸರು ಕೀರ್ತನೆಗಳ ಜತೆಗೆ ಕಾವ್ಯಗಳನ್ನು ರಚಿಸಿ ಕಾವ್ಯ ಪ್ರಪಂಚದಲ್ಲಿ ಸ್ಥಿರ ಸ್ಥಾನಗಳಿಸಿದವರೂ ಹೌದು ಕನಕದಾಸರ ಹರಿಭಕ್ತಿ ಸಾರ ಹಾಗೂ ಜಗನಾ ಥದಾಸರ ಹರಿಕಥಾಮೃತಸಾರ ಇವರಿಬ್ಬರ ಪ್ರಸಿದ್ಧವೆನಿಸ ವ ಕೃತಿಗಳು ಹರಿಭಕ್ತಿಸಾರ ಗ್ರಂಥವು ವರ್ಣನೆಗಳಿಂದ ರಸಭರಿತ ಕ ತಿಯಾದರೆ ಹರಿಕಥಾಮೃತಸಾರ ತತ್ತ್ವಬೋಧಾತ್ಮಕ ಆದರೆ ಶುಷ್ಕವೆನಿಸದ ಮಧ್ವಾಚಾರ್ಯರ ದ್ವೈತ ಸಿದ್ಧಾಂತವನ್ನು ಪ್ರತಿಪಾದಿಸುವ ಮಹತ್ಕೃತಿ

ಹರಿಕಥಾಮೃತಸಾರ ಕಾವ್ಯದ ಹೆಸರಿನ ಪ್ರಕಾರ ಹರಿಕಥೆಯೇ ನಲ್ಲ ಆದರೆ ಒಬ್ಬರು ಈ ನಾಮಾಂಕಿತದ ವ್ಯಾಖ್ಯಾನ ಹೀಗೆ ಮಾಡಿದ್ದಾರೆ ಹರಿಕಥೆ ಎಂಬ ಅಮೃತರಸದಿಂದ ಪೂರ್ಣವಾಗಿ ಇಕ್ಷು ದಂಡದಂತಿರುವವು ವೇದಗಳು ಭಾರತ ಮೊದಲಾದವು ಇವುಗಳಿಗೆ ಹರಿಕಥೆ ಎಂದು ಹೆಸರು ಅಮೃತವೆಂದರೆ ಅದರ ಸಾರವೂ ಆದ್ದರಿಂದ **ಹರಿಕಥಾಮೃತ**ವೆಂದರೆ ಭಾಗವತವೆಂದು ಆಗುವುದು ಅದರ ಸಾರವೆಂದರೆ ಇಂತಹ ಕಬ್ಬಿನ ಹಾಲನು ಕಾಯಿ ಸಿ ಪಕ್ವಮಾಡಿದ ಸಕ್ಕರೆ ಹೇಗೋ ಹಾಗೆ ಈ ಗ್ರಂಥವಿರುವುದು [13]

ಮೂವತ್ತೆರಡು ಸಂಧಿಗಳ ಳ್ ೯೮೮ ಭಾಮಿನಿಷಟ್ಪದಿಯಲ್ಲಿರ ವ ಸರ್ವೋತ್ಕೃಷ್ಟ ಆಧ್ಯಾತ್ಮ ಪ್ರಧಾನವ ದ ಕೃತಿ ಹರಿಕಥಾಮೃತಸಾರ ಕನ್ನಡನಾಡಿನಲ್ಲಿ ಅಲ್ಲದೆ ನೆರೆಯ ಪ್ರಾಂತ್ಯಗಳಲ್ಲೂ ತುಂಬಾ ಜನಪ್ರಿಯವಾಗಿದೆ ಇದರ ಹತ್ತೊಂಬತ್ತು ವಿವಿಧ ಮುದ್ರಣಗಳಿವೆ ಹಲವು ಅನುವಾದಗಳೂ ವ್ಯಾಖ್ಯಾನಗಳೂ ಇವೆ ಸಂಸ್ಕೃತ ಭಾಷೆಯಲ್ಲಿ ಗ್ರಂದಿಕೆ ಟೀಕೆಯನೂ ರಚಿಸಲಾಗಿದೆ ಈಚೆಗೆ ಇದು ಇಂಗ್ಲಿಷ್‌ಗೂ ಭಾಷಾ ಂತರವಾಗಿದೆ [14] ಇಂದಮೇಲೆ ಈ ಕಾವ್ಯದ ಶ್ರೇಷ ತೆ ಗ್ರಂಥವನ್ನೋದಿದೆಯೇ ಅರ್ಥವಾಗುತ್ತದೆ ಈ ಹರಿಕಥ ಮೃತಸಾರ ದ ಒಳಗೆ ಕಾವ್ಯ ಕರ್ತೃವೇ ಹೀಗೆ ಹೇಳಿದ್ದಾನೆ

— ತಾರಕವಿದು ಹರಿಕಥಾಮೃತಸಾರ ಜನಕೆ ॥ ಪ ॥
  ಘೋರತರ ಅಸಾರ ಸಂಸಾರವೆಂಬ ವನಧಿಗೆ ನವ ॥ ಅ ಪ ॥

— ಹರಿಕಥಾವ ೃತವ ಬಿಟ್ಟು ನರತರಿತ್ರಯಿಂದ ದು
  ರ್ದರಗಳಂತೆ ಹರಟೆ ದಿವಸ ಬರಿದೆ ಕಳೆಯುತ್ತಿಪ್ಪ ಮನುಜ

ಆಧ್ಯಾತ್ಮವನ್ನು ಬೋಧಿಸುವ ಈ ಉದ್ಗ್ರಂಥದಲ್ಲಿ ದ್ವೈತ ವ ತವನ್ನು ವಿವರಿಸ ತ್ತದೆ ಹ ಗೂ ಜಗತ್ತಿನ ಸಾಮಾನ್ಯರೂ ಇದರ ಅನುಕೂಲ ಪಡೆಯಲಿ ಎಂಬುದೇ ಕವಿಯ

13 ಹರಿಕಥಾಮೃತಭಾವಪ್ರಕಾಶಿಕೆ ಪುಟ ೧೪
14 ಕನ ಡ ವಿಶ್ವಕೋಶ ಕನ ಡ ಅಧ್ಯಯ ನ ಸಂಸ್ಥೆ ಮೈಸೂರು ೭ ೬೬೬

ಆಶಯ ಈ ಕಾವ್ಯದಲ್ಲಿ ಮಂಗಲಾಚರಣೆ ಕರಣಾ ವ್ಯಾಪ್ತಿ ಭೋಜನರಸ ವಿಭಗ ವಿಭೂತಿ ಪಂಚಾಗಿ ಹೋತ್ರ ವಂಚತನ್ಮಾತ್ರಾ ಮಾತೃಕಾ ವರ್ಣ ಪ್ರಕ್ರಿಯಾ ಸರ್ವ ಪ್ರತಿಕ ಧ್ಯಾನ ಪ್ರಕ್ರಿಯಾ ನಾಡೀಪ್ರಕರಣ ನಾಮಸ್ಮರಣ ಸರ್ವಜೀವನ ಕಲ ಶ್ವಾಸ ದತ್ತ ಸ್ವಾತಂತ್ರ್ಯ ಸ್ವಗತ ಸ್ವಾತಂತ್ರ್ಯ ಕ್ರೀಡಾ ವಿಲಾಸ ಕರ್ವ ವಿಮೋಚನ ಗುಣ ತಾರತಮ್ಯ ಆದೆ ಶಾವಲಾರ ಸಕಲದುರಿತ ನಿವಾರಣ ಕಲ್ಪಸಾಧನ ಬಿಬಾಪರೋಕ್ಷ ಆರೂಹ ತಾರತಮ್ಯ ಗಣಪತಿಸ್ತೋತ್ರ ಅಣು ತಾರತಮ್ಯ ದೈತ್ಯ ತರತಮ್ಯ ನೈವೆದ್ಯ ಪ್ರಕರಣ ಕಕ್ಷ ತರತಮ್ಯ ಸಂಧಿ ಗಳೆಂದು ೩೨ ಸಂಧಿಗಳಿವೆ ಈ ಕಾವ್ಯದಲ್ಲಿ ಬರವ ಒಂದೊದು ಪದ್ಯಕ್ಕೂ ಶಾಸ್ತ್ರ ಪುರಾಣಗಳ ಹಿನೆಲೆ ಇದೆ ಪ್ರಕೃತ ಕೃತಿಯಲ್ಲಿ ಶರೀರ ರಚನೆ ತತ್ತ್ವಾಭಿಮಾನ ದೆವತೆಗಳ ವಿಚಾರ ಮೊದಲಾದವುಗಳಿಗೆ ನಮ್ಮ ಯೋಗ ಶಾಸ್ತ್ರವೇ ಪ್ರಮುಖ ಆಧಾರ ಈ ಪ್ರಾಚ್ಯ ಪದ್ಧತಿಯ ವಿಶ್ಲೇಷಣಗಳಿಗೆ ಪಾಶ್ಚಾತ್ಯ ವಿಜ್ಞಾನದ ಪ್ರಯೋಗಗಳನ್ನು ಅನ್ವಯಿಸಿ ಇನ್ನೂ ಕೂಲಂಕ ಷವಾಗಿ ವಿಚಾರ ಮಾಡಿದ್ದೇ ಆದರೆ ಇದರ ಮಹತ್ವವಷ್ಟೊಂದು ವಿದಿತವಾದೀತು ಶ್ರೀ ಜಗನ್ನಾಥದಾಸರ ಅಸೀಮ ವಾದ ಸಂಸ್ಕೃತ ಶಾಸ್ತ್ರಗ್ರಂಥಗಳ ನಿಶ್ಚಿತ ಜ್ಞಾನ ಅವರ ಹರಿದಾಸ ಮನೋಧರ್ಮದ ಮಾಧ್ಯಮದ ಮೂಲಕ ರೂಪುಗೊಳ್ಳಲಾದ ಹರಿಕಥಾಮೃತಸಾರ ಶುಷ್ಕ ಶಾಸ್ತ್ರಗ್ರಂಥ ವಾಗಿ ಪರಿಣಮಿಸದೆ ಎಲ್ಲ ಕನ್ನಡಿಗರಿಗೂ ಆಹ್ಲಾದವನುಂಟು ಮಾಡಬಲ್ಲ ಸಾಹಿತ್ಯ ಕೃತಿಯಾಗಿ ಮಾನ್ಯವೆನಿಸಿದೆ ನವರಸವನ್ನಾಗಲಿ ಅಷ್ಟಾದಶ ವರ್ಣನೆಗಳನ್ನಾಗಲಿ ಚೇತೋಹಾರಿಯಾದ ಕದೆಯನಾಗಲಿ ರಮಣಿಯ ಕಾರ್ಯವೆನಿಸದಿದ್ದರೂ ಸರಸವಾದ ಸೂಕ್ತಿಗಳಿಂದಲೂ ಸ್ವಾರಸ್ಯವಾದ ಸಾದೃಶ್ಯಗಳಿಂದಲೂ ಸುಲಭಗ್ರಾಹ್ಯವಾದ ಸಮಿತಿ ಗಳಿಂದಲೂ ಕೂಡಿ ಶಾಸ್ತ್ರಜ್ಞನಿಗೂ ಸಾಹಿತ್ಯಜ್ಞನಿಗೂ ಸರಿಸಮಾನವಾಗಿ ಆನಂದ ವನುಂಟು ಮಾಡಬಲ್ಲ ಪಾರಮಾರ್ಥಿಕ ಗ್ರಂಥವೆನಿಸಿದೆ [1]

ಜಗನ್ನಾಥದಾಸರು ಸಂಸ್ಕೃತದಲ್ಲಿ ಪ್ರಕಾಂಡ ಪಂಡಿತರು ವೇದಶಾಸ್ತ್ರ ಪುರಾಣ ಧರ್ಮಗ್ರಂಥಗಳನ್ನು ಬರಿದೆ ಓದಿದರೆ ಫಲವಿಲ್ಲವೆಂದೂ ಉದುಗಾಳಿಯೋದು ಆಗುವು ದೆಂದೂ ಆದರೆ ಅನಿಷಡ್ವರ್ಗವನ್ನು ದಮನವಾಡಿ ಆಚರಣೆ ತರಬಹುದೆಂದೂ ಅವರೇ ತಿಳಿಸಿರುವುದರಲ್ಲಿ ಅರ್ಥವಿದೆ

ವೇದಶಾಸ್ತ್ರ ಪುರಾಣ ಕಥೆಗಳ
ಓದಿ ಪೇಳಿದರೇನು ಸಕಲ ನಿ
ಷೇಧ ಕರ್ಮವ ತೊರೆದು ಸತ್ಕರ್ಮಗಳ ಮಾಡೇನು

---

15 ಶ್ರೀಮದ್ಧರಿಕಥಾಮೃತಸಾರಪ್ರವೆಶಿಕೆ ಆರ ಎಚ ಕುಲಕರ್ಣಿ ಅವರ ಗ್ರಂಥಕ್ಕೆ ಬರೆದಿರುವ ಡಾ॥ ಜಿ ವರದರಾಜರಾವ ಅವರ ಸವಿ ನುಡಿ ಪುಟ IX–X

ಓ ಧನಂಗಳ ಜರಿದು ಶಾ ಸ ನಿ
ರೋಧಗೆ ಸಿದರೇನು ಕಾಮ
ಕ್ರೋಧವಳಿಯದೆ ನಾನು ನನ ದು ಎಂಬ ಮಾನವನು[16] ೧೦-೧೭

ಬಾಹ್ಯಾಡಂಬರದಿಂದ ದೇವರನೂ ಒಲಿಸಲು ಪ್ರಯತ್ನಿಸುವವರನು ಛಿ ಡಿಸುತ್ತಾರೆ ನಾಮ ಮುದ್ರೆಗಳನು ಧರಿಸಿ ಮೆರೆವವರನು ಕುಡು ಕುರಿತು ಹೀಗೆ ಹೇಳಿದ್ದಾರೆ

ಬೆಳಗಿದ್ದೂ ಜಯ ನೊ ಳ್ಳರಿಗೆ ಥಳ
ಥಳಿಸ ತಲಿ ಕಂಗೊಳಿಸುವಂದದಿ
ತೊಳೆದು ದೇಹವ ನಾವ ಮುದ್ರೆಗಳಿಂದಲಂಕರಿಸಿ
ಒಲಿಪಿನಿತ್ಯ ಕುತರ್ಕಯ ಕ್ರಿಗ
ಗಳಲವ ಬೋಧಕ ಶಾಸ್ತ್ರವ ವ ಣವ
ತಿಳಿಯದಿಹ ನರ ಬರಿದೆ ದರೊಳು ಶಂಕಿಸಿದರೇನು[17] ೧೫ ೨೨

ಹೂಜಿಯನು ಎಷ್ಟು ಉಜ್ಜಿದರೇನು ತೊಳೆದರೇನು ಆದರ ವೇಲ್ಬಾಗ ಮಾತ್ರ ಪ್ರಕಾಶಿಸ ತ ದೆ ಆದರ ಆದರ ಒಳಭಾಗವನ್ನು ಕೈಯಿಂದ ಶ ಭ್ರಗೊಳಿಸಲು ಅಸಾಧ್ಯ ಏಕೆಂದರೆ ಅದರ ಬಾಯಿ ತುಂಬಾ ಕಿರಿದು ಆದ ದರಿಂದ ಅಂತರಂಗ ಶುದ್ಧಿಯಿಂದ ನರನಾದವನು ಹೊಳೆಯಬೇಕೆ ಹೊರತು ಬಹಿರಂಗದಿಂದಲ್ಲ ಅಂತರಂಗ ಶುದ್ಧಿಗೆ ದಾಸರೂ ವಚನಕಾರರೂ ಬಹಳ ಮಹತ್ವವನ್ನೂ ಕೊಟ್ಟಿರುವುದು ಇದೇ ಕಾರಣಕ್ಕಾಗಿಯೆ ಇಷ್ಟ ದೈವವನು ಒಲಿಸಿಕೊಳ್ಳುವ ಪರಿ ಈ ಮಾರ್ಗದಿಂದಲೆ ಮಡಿ ಮೈಲಿಗೆಗಳಿಂದಲೇ ಬಾಳು ಮುಕ್ತಾಯವಾದರೆ ಅಂತಹವರ ಜೀವನ ಬರಡೇ ಸರಿ!

ಈ ಗ್ರಂಥದಲ್ಲಿ ನಿರೂಪಿಸಿರುವ ದ್ವೈತತತ್ತ್ವದ ಸಿದ್ಧಾಂತಗಳು ಸರ್ವಕಾಲಕ್ಕೂ ಮಾನ್ಯವಾದುವುಗಳು ಜೀವಾತ್ಮ ಪರಮಾತ್ಮ ಎರಡು ಬೇರೆಬೇರೆ ಅವು ಬೇರೆಯಾಗಿದ್ದರೆ ತಾನೆ ಭಕ್ತ ದೈವ ಎಂಬುದರ ತಾರತಮ್ಯವನ್ನು ಗ ರುತಿಸಬಹುದು ನಾನೇ ದೈವ ಬ್ರಹ್ಮ ಶಿವ ಎಂದೆಲ್ಲಾ ಹೇಳುವುದು ಅರ್ಥವಾಗದ ಸಿದ್ಧಾಂತಗಳು ದೀನನಾನುಸಮಸ್ತ ಲೋಕಕೆ ದಾನಿ ನೀನು ಎಂಬ ಕನಕದಾಸರ ನುಡಿಯ ಅರ್ಥವೂ ಇದೇ ಆಗಿದೆ

— ನಿನ ಸಂಕಲ್ಪಾನುಸಾರ ವಹಾಡೋ
ಎನ್ನ ಸಾಕ ವ ದೊರೆಯೆ ಮಾನ್ಯವಹಾದನೇ
— ಪತಿತ ಪಾವನ ಪೂರ್ಣಕಾಮ ನೀನೆ
ಗತಿ ಎನಗೆ ಸಂತತ ಪರ ಧಾಮ ಬೆ ಡಲೇತಕೆ ಪರರ ದೇಹಿ ಎಂದು

16 ಶ್ರೀಮದ ರಿಕಥಾಮ ತಸಾರಪ್ರವೇಶಿಕೆ
17 ಅದೆ

ನೀಡುವ ದೊರೆ ನವಗೆ ನೀನಿರಲು ಸರ್ವದಾ
ಯಾತರ ಭಯ ಶ್ರೀನಾಥನ ಪರಮ
ಪ್ರೀತಿಯ ಪಡೆದವನೆ

ಮಹತ್ವದ ಈ ಕಾವ್ಯಕ್ಕೆ ಅನೇಕರು ವ್ಯಾಖ್ಯಾನವನೂ ರಚಿಸಿದ್ದಾರೆ ಒಂದು ಪದ್ಯಕ್ಕೆ ಅವರಲ್ಲಿ ಇಬ್ಬರು ಕೊಟ್ಟಿರುವ ತಾತ್ಪರ್ಯ ಕನ ಡಾರ್ಥಗಳನು ಇಲ್ಲಿ ಉದ್ಧರಿಸಲಾಗಿದೆ ಸಹಜವಾಗಿ ಅರ್ಥವಾಗುವ ಈ ಪದ್ಯದ ಅರ್ಥ ಹೇಗೆ ಮೂಡಿ ಬಂದಿದೆಯೆಂಬುದನ್ನು ಗಮನಿಸಬಹುದು

ಕಾದ ಕಬ್ಬಿಣ ಹಿಡಿದು ಬಡಿಯಲು
ವೇದನವು ಲೋಹಗಳಿಗಲ್ಲದೆ
ಲಾದ ದೇಸ್ಯ ಅನಲಗಾವ್ಯಥೆಯೇನು ಮಾಡಿದರು
ಆದಿ ದೇವನು ಸರ್ವಜೀವರ
ಕಾದ ಕೊಂಡಿಹನೊಳ ಹೊರಗೆ ದು
ಖಾದಿಗಳು ಸಂಬಂಧವಾಗುವವೇನೊ ಚಿನ್ಮಯಗೆ ೩-೨೭

**ತಾತ್ಪರ್ಯ** ಕಾದ ಕಬ್ಬಿಣವನ್ನು ಉದ್ದವಾಗಿ ಮಾಡುವುದಕ್ಕಾಗಿ ಹೊಡೆದರೆ ಆ ಹೊಡೆತವು ಕಬ್ಬಿಣಕ್ಕೆ ತಗ ಲಿ ಉದ್ದವಾಗುವುದೇ ಹೊರತು ಆ ಕಬ್ಬಿಣದಲ್ಲಿ ಅವತರಿಸಿರುವ ಅಗಿ ಗೆ ಎಂದಿಗೂ ತಗಲದು ಅದರಂತೆಯೇ ಪರಮಾತ್ಮನು ಸರ್ವ ಜೀವರ ಒಳ ಹೊರಗೆ ವ್ಯಾಪ್ತನಾಗಿದ್ದರೂ ನಿರ್ಲಿಪ್ತನಾಗಿರ ವುದರಿಂದ ಜೀವರ ದೇಹಗಳಿಗಾಗುವ ದುಃಖಾದಿಗಳು ದೇಹಸ್ಥನಾದ ಪರಮಾತ್ಮನಿಗೆ ಸಂಬಂಧವಾಗದು [18]

**ಕನ್ನಡಾರ್ಥ** ಕರ್ವಗಳು ನನಗೆ ಅಂಟಿಕೊಳ್ಳುವುದಿಲ್ಲ ಎಂಬ ಗೀತಾ ವಾಕ್ಯದಂತೆ ಸಂಬ ಧವಾಗದೆ ಎಂದು ಹಿಂದಿನ ಪದ್ಯದಲ್ಲಿ ಹರಿಗೆ ಕರ್ವಲೇಪವಿಲ್ಲ ಎಂದು ಹೇಳಿದ್ದರೂ ಕೆಸರಿನಲ್ಲಿ ಸಿಕ್ಕಿ ಬಿದ್ದಿರುವ ಕಾಲಿಗೆ ಕೊಳೆಯು ಹೇಗೆ ಬಿಡದೋ ಹಾಗೆ ಕರ್ಮಲೇಪವು ಕವಿ ಗಳಲ್ಲಿರುವ ಹರಿಗೆ ತಪ್ಪಲಾರದು ಎಂದು ಪೂರ್ವಪಕ್ಷವು ಉದಯ ಸುತ್ತದೆ ಅದಕ್ಕೆ ಕರ್ವ ಲೆ ಪವು ಬಾರದಂತಿರುವ ದೃಷ್ಟಾಂತವನ್ನು ಹೇಳುತ್ತಾರೆ[19]

ಒಟ್ಟಿನಲ್ಲಿ ಶ್ರೀ ಹರಿಕಥಾಮೃತವು ಸಾವು ನೋವುಗಳ ನೆಲೆ ಬೀಡಾಗಿರುವ ಬಾಳು ಕಾಳ್ಗಿಚ್ಚಿನಲ್ಲಿ ಬೆಂದು ಬೆಂಡಾಗಿರುವವರಿಗೆ ದಿವ್ಯ ಸಿದ್ಧೌಷಧವಾಗಿರುತ್ತದೆ ವಿಷಯ ವಿಷಸರ್ಪಗಳ ಸುಳಿವನ್ನು ಸಹ ನಿರ್ಮೂಲನಗೊಳಿಸುವ ಮಹಾಮಂತ್ರ

18 ಹರಿಕಥಾಮ ತಸಾರಭಾವಪ್ರಕಾಶಿಕೆ ಪುಟ 258
19 ಹರಿಕಥಾಮೃತಸಾರಟೀಕಾ ಪಂಚರತ ಪ್ರಕಾಶಿಕಾ ಪುಟ 222

ವಾಗಿರುತ್ತದೆ ವ್ಯಕರಣದ ಪ್ರಥಮ ಸೋಪಾನವಾಗಿರುತ್ತದೆ ಪುಣ್ಯ ಶ್ರವಣ ಕೀರ್ತನಾದ ಪರಮಾತ್ಮನ ಪರಮ ಮಂಗಳ ಕಥೆಗಳಿಂದ ಪಾಪ ಅಜ್ಞಾನ ಮುಂತಾದ ಸಕಲ ದೋಷಗಳೂ ಕಲಿಕಲ ಷಗಳೂ ಅಳಿದು ಹೋಗುವುವು ಇದರಲ್ಲಿ ಯಾವ ಸಂದೇಹವೂ ಇರುವದಿಲ್ಲ [21] ಎಂಬ ನುಡಿಗಳು ಮಾನ್ಯವಾದುವು

ಜಗನ್ನಾಥದಾಸರ ಶಿಷ್ಯರಾದ ಶ್ರೀದವಿಠಲ ಅಂಕಿತರಾದ ಕರ್ಜಗಿ ದಾಸಪ್ಪನವರು ಈ ಗ್ರಂಥಕ್ಕೆ ಫಲಶ್ರುತಿಯೆಂಬ ಕೊನೆ ಸಂಧಿಯಲ್ಲಿರುವ ೨೪ ಪದ್ಯಗಳು ಗ್ರಂಥ ಪ್ರಶಸ್ತ್ಯಿಯಂತಿದೆ ಅದರಿಂದ ಆಯ್ದು ಇಲ್ಲಿ ಉದ್ಧರಿಸಿರುವ ಮೂರು ಪದ್ಯಗಳೇ ಗ್ರಂಥದ ಘನತೆಯನ್ನು ಸಾರುತ್ತಿವೆ

> ಸಾರವೆಂದರೆ ಹರಿಕಥಾಮೃತ
> ಸಾರವೆಂಬುವುದೆಮ್ಮ ಗುರುವರ
> ಸಾರಿದಲ್ಲದೆ ತಿಳಿಯದೆನುತ ಮಹೇಂದ್ರನಂದನನ
> ಸಾರಥಿಯು ಬಲಗೊಂಡು ಸಾರಾ
> ಸಾರಗಳ ನಿರ್ಣೈಸಿ ಪೇಳ್ವನು
> ಸಾರ ನಡೆವ ಮಹಾತ್ಮರಿಗೆ ಸಂಸಾರವೆಲ್ಲಿಹುದೊ
> ಪರಮ ತತ್ತ್ವದ ಸಾರಯೋಗೀ
> ಶ್ವರರ ಮನಕೆ ವಿಹಾರ ಸಜ್ಜನ
> ನರವಿಗಳ ಶ್ರುತಿಗೊಪ್ಪು ತಿಹ ಶೃಂಗಾರವಲಂಕಾರ
> ಶರಣಜನ ಮಂದಾರವೆನಿಸುವ
> ಹರಿಕಥಾಮೃತಸಾರ ಕೇಳ್ದರೆ
> ದುರಿತ ಪಾರಾವಾರವನು ದಿಟ ಪಾರ ಕಾಂಬುವನು ೩೩ ೭

ಈ ಮೇಲಿನ ಪದ್ಯ (೩೩ ೭) ಕುಮಾರವ್ಯಾಸನ ಭಾರತ ಕಥಾಮಂಜರಿಯಲ್ಲಿ ನಾಂದಿ ಪದ್ಯಗಳ ಸಮೂಹದಲ್ಲಿ ಬರುವ ಅರಸುಗಳಿಗಿದು ವಿ ರ ದ್ವಿಜರಿಗೆ ಪರಮ ವೇದದಸಾರ ಯೋಗೀಶ್ವರರ ತತ್ತ್ವವಿಚಾರ ಮಂತ್ರೀಜನಕೆ ಬುದ್ಧಿ ಗುಣ ಎಂಬ ಫಲಶ್ರುತಿ ಪದ್ಯದ ರೀತಿಯಲ್ಲಿದೆ ಯಾರೋ ಈ ಪದ್ಯವನ್ನು ಬರೆದು ಕುಮಾರ ವ್ಯಾಸನ ತಲೆಗೆ ಗಂಟ ಕಿರಬೆ ಕು ಆ ನಾಂದಿ ಪದ್ಯಗಳನು ಕರಜಗಿ ದಾಸಪ್ಪನವರ ಓದಿರಬೇಕು ಅದೇ ಧಾಟಿಯಲ್ಲಿ ಹರಿಕಥಾಮೃತಸಾರಕ್ಕೆ ಎಣೆದಿರಬೇಕೆನಿಸುತ್ತದೆ ಆದರೆ ಇಲ್ಲಿ ಹೇಳಿರುವ ಗುಣಗಳು ಕಾವ್ಯದಲ್ಲಿದೆ ಎಂಬುದರಲ್ಲಿ ಸಂದೇಹವಿಲ್ಲ ಈ ಬಗ್ಗೆ ಇನ್ನೊಂದು ಪದ್ಯವನು ಉದ್ಧರಿಸಿದರೆ ಸಾಕು ಎನಿಸುತ್ತದೆ

> ಹರಿಕಥಾಮೃತ ಸಾರ ನವರಸ
> ಭರಿತ ಗುಣಗಂಭೀರ ರತ್ನಾ
> ಕರಸುಚಿರ ಶೃಂಗಾರ ಸಾಲಂಕರ ವಿಸ್ತಾರ
> ಸರಸ ನರಕಂಠೀರ ವಾಚಾ
> ರ್ಯರ ಜನಿತ ಸುಕುಮಾರ ಸಾತ್ವಿ
> ಕರಿಗೆ ಪರಮೋದಾರ ಮಾಡಿದ ಮರೆಯದ ಪಕಾರ ೩೩ ೧೪

---

21 ಅದೇ ಪುಟ xi

# ದಕ್ಷಿಣ ಕನ್ನಡ ಜಿಲ್ಲೆಯ ಹರಿದಾಸರು

---

ಜಯಂತ ಸುರತ್ಕಲ್ಲು

## ೧ ತುಪಾಕಿ ವೆಂಕಟರಮಣಾಚಾರ್ಯರು

ಹರಿದಾಸ ಸಾಹಿತ್ಯದ ರಚನೆ ಪ್ರಸಾರಗಳಲ್ಲಿ ದಕ್ಷಿಣ ಕನ್ನಡ ಜಿಲ್ಲೆಯವರು ಯಥೋಚಿತವಾದ ಕೆಲಸಗಳನು ಮಾಡಿದ್ದಾರೆ ಉಡುಪಿಯ ಸೋದೆ ಮ ಠದ ಶ್ರೀ ವಾದಿರಾಜರು ಅನೇಕ ಕೀರ್ತನೆಗಳನ್ನು ರಚಿಸಿದ್ದರು ಪ್ರಸ್ತುತ ತುಪಾಕಿ ವೆಂಕಟ ರಮ ಣಾಚಾರ್ಯರು ರಚಿಸಿದ ದೇವರ ನಾಮ ಗಳು ಕಳೆದ ದಶಕದಲ್ಲಿಯೇ ಅಚ್ಚಾಗಿವೆ ಅವರ ಬಗೆಗೆ ಆ ಗ್ರಂಥದಲ್ಲಿರುವ ಕೆಲವು ಮಾತುಗಳನ್ನು ಕಾಣಬಹುದು

ಇವರು ಬಾಲ್ಯದಲ್ಲಿ ಸೋದರ ಮಾವಂದಿರಿಂದ ತರ್ಕ ಶಾಸ್ತ್ರಗಳನ್ನು ಪಠಿಸಿದರು ಶ್ರೀ ಮಧ್ವಾಚಾರ್ಯರ ಭಾರತ ತಾತ್ಪರ್ಯ ನಿರ್ಣಯಾದಿಗಳನ್ನೂ ಭಾಗವತ ಅಗ್ನಿ ಪುರಾಣ ಮೊದಲ ದ ಗ್ರಂಥಗಳನ್ನೂ ವಾಚಿಸಿದರು ಜೀವನಕ್ಕೆ ಕೋರ್ಟಿನ ಶಿರಸ್ತೆ ದಾರರಾಗಿದ್ದರು 18 ನೇ ಪ್ರಾಯ ದಲ್ಲಿ ಕೆಲವು ಕೀರ್ತನೆಗಳನ್ನು ರಚಿಸಿದರು ತಾಯಿಯ ಆದೇಶದಂತೆ ತಿರ ಪತಿಯದೇವರ ಮುದ್ರಿಕೆಯಲ್ಲಿ ಅವು ರಚಿತವಾಗಿವೆ ಅಂತೆ 32 ನೇ ವರ್ಷದಲ್ಲಿ ಮತ್ತೂ ಹಲವು ಕೀರ್ತನೆಗಳನು ರಚಿಸಿದರು ಅವುಗಳೇ ಈ ಪುಸ್ತಕದಲ್ಲಿ ಛಾಪಿಸಿವೆ ಎಂದು ಪುತ್ತೂರಿನಲ್ಲಿ ಇವರ ತಮ್ಮ ಶ್ರೀ ತುಪಾಕಿ ಸುಬ್ಬಣ್ಣಾಚಾರ್ಯರು ಆ ಪುಸ್ತಕದಲ್ಲಿ ಬರೆದಿದ್ದಾರೆ ಬೆಂಗಳೂರ ಕೃಷ್ಣರಾಜ ವಿಲಾಸ ಮುದ್ರಾಕ್ಷರ ಶಾಲೆಯೊಳ್ ಮ ಎದ್ರಿಸಲ್ ಪಟ್ಟಿತು (ಇಸವಿ 1874) ತುಪಾಕಿ ಯವರ ವಂಶಸ್ಥರಾದ ಶ್ರೀ ಶ್ರೀನಿವಾಸಾಚಾರ್ಯರು ಮ ಂಗಳೂರಲ್ಲಿ ವಾಸಿಸಿದ್ದು ತಮ್ಮ ನಿವಾಸವನ್ನು ಶ್ರೀರಾಘವೇಂದ್ರ ವೃಂದಾವನ ಟ್ರಸ್ಟಿಗೆ ಬಿಟು ಕೊಟ್ಟರು ! ಈ ಪುಸ್ತಕದಲ್ಲಿ 328 ಕೃತಿಗಳಿವೆ

ಈ ಹರಿದಾಸರು ಮಧ್ವಮತಾನುಸಾರವಾಗಿಯೆ ಅನೇಕ ಕೃತಿಗಳನು ಕವಯಿಸಿ ದ್ದಾರೆ ನಾರದ ಜಯ ತಿ ರ್ಥ ವಾದಿರಾಜ ವ್ಯಾಸರಾಯ ಶ್ರೀಪಾದರಾಯ ರಾಘವೇಂದ್ರ ವಿಜಯೀಂದ್ರ ಸುಜ್ಞಾನೇಂದ್ರ ಜಗನ್ನಾಥದಾಸರ ಸ್ತುತಿಗಳು ಇಲ್ಲಿವೆ ದೇವರ ವಿವಿಧ ರೂಪಗಳು ಪ್ರತ್ಯೇಕವಾಗಿ ಕೊಂಡಾಡಿವೆ ವಿಶೇಶವಾಗಿ ದಕ್ಷಿಣ ಜಿಲ್ಲೆಯ ಹಲವಾರು ತೀರ್ಥಕ್ಷೇತ್ರಗಳ ದೇವರುಗಳ ಕೀರ್ತನೆಗಳು ಸೆ ರಿವೆ ವಾರಗಳ ಬಗೆಗೆ ತೀರ್ಥಗಳ ಒಗೆಗೆ ಹಬ್ಬಗಳ ಬಗೆಗೆ ತನ್ನ ಬೇರೆ ಬೇರೆ ವರ್ಷದ ಸ್ಮಾರಕವಾಗಿರುವ ಕೃತಿಗಳು ಇವರ ರಚನೆಗಳಾಗಿವೆ ವಿವಿಧ ವೃತ್ತಗಳಲ್ಲಿ ಇವು ರಚಿತವಾಗಿವೆಯೆಂಬ ದು ವಿಶೇಷವ ಗಿದೆ ಕೆಲವು ಸಾಲುಗಳು ಇಲ್ಲಿ ಬರೆಯಲಿವೆ

1 ಉಡುಪಿಯ ಕೃಷ್ಣನ ಬಗೆಗೆ ಇವರ ಕೀರ್ತನೆಗಳಲ್ಲಿ ಹೇಳಿದುದು ಇಲ್ಲಿ ಬರೆಯಲಿದೆ

ನೋಡಿಯ ಲಾಲಿಸು ಮಾಧವ ॥
ನುಡಿಯ ಲಾಲಿಸು ಪಾಲ । ಕಡಲರಾಯನ ದೇವ ।
ಕಡೆಗೋ ಲ ಪಿಡಿದವ । ಮಣ್ಣುಡುಪಿಯ ಶ್ರೀಕೃಷ್ಣ ॥
ಮಾವನ ಮದವನ್ನು ಮೊಸರಂತೆ ಮ ಥಿಸಿದ ।
ಕಾವನ ತೋರುವೆಯಾ । ಹಾಗಲ್ಲದಿದ್ದರೆ ।
ದೆ ವತೆಗಳಿಗಮೃತವನುಣಿಸಿದೆನೆಂಬ ।
ಸೋವನು ಸಾರಿದೆಯಾ ।ಸೌಭಾಗ್ಯ ಹಿರಿದೊ ।
ಸೇವಕರ ಸೇವಾನುಗುಣ ಫಲ ।
ವೇದ ತರತಮ ಭಾವವೊ ।ಭವ।
ನಾವ ನಡೆಸುವ ನಿಪುಣತೆಯೊ । ದಂರಿ ।
ಕಾವಳಿಯ ದೂರೋಡಿಸುವೆಯೊ ॥೧॥

2 ನವಗ್ರಹಸ್ತೋತ್ರವು ಸೀಸ ಪದ್ಯರೂಪವಿದೆ

ಲಕ್ಷ್ಮೀನೃಸಿಂಹ ನೀ ರಕ್ಷಿಸೆನ್ನನು ಪ್ರೀಯಂ ।
ಪಕ್ಷಪಾತದಿ ಸತ್ಕಟಾಕ್ಷದಿರಿಸು ।
ರೂಕ್ಷಹಾಟಕ ಕಶಿಪು ವಕ್ಷೋವಿಹಾರೈಕ
ದಕ್ಷನಖವಿಜ್ರಿರಿಪು ಪಕ್ಷ ದಂಡಿಸು ।
ತೀಕ್ಷ್ಣ ಮೂಲಾಗ್ರಥಿತ ಕಕ್ಷ ಸಂಚಾರಿಗ್ರಹ ।
ರಕ್ಷಾಕೃತೇ ವಿರೂಪಾಕ್ಷ ಶರಣು ।
ಸೂಕ್ಷ್ಮ ಕಾಲಾದ್ಯುಪಾಧಿಗಳಿಂದ ದಿನವ ।
ಪಕ್ಷ ವ್ಯತ್ಯಯದ ಸಂವತ್ಸರಾಖ್ಯ ॥
ಅಕ್ಷೀಣಬಲಧೈರ್ಯ ಶಕ್ತಿ ಮೊದಲಾಗಿ
ದಯವಪಾಡು ಶರಣೆಂದು ನಮಿಪೆ ನಿನ್ನ ॥೧॥

ಹೀಗೆ ನವ ಸಂಖ್ಯಾಪದಗಳಿಂದ ನವಗ್ರಹಗಳನ್ನು ಸ್ತುತಿಸಿದೆ ಮಹಾಕಾವ್ಯ–ಖಂಡ ಕಾವ್ಯಗಳಲ್ಲಿ ಸೀಸ ಪದ್ಯ ಬಳಸಿದೆ ಕೀರ್ತನಕಾರರು ಇದನ್ನು ಒಳಸಿದ್ದು ವಿಶೇಷ ವಾಗಿದೆ

3 ರಾಮಾಯಣದ ಕತೆಯು ಕೊ ಲುಹಾಡುಗಳಲ್ಲಿ ಬಿತ್ತರಿಸಿದೆ

ಕೋಲಂ ಕೋಲೆನ ಕೋಲೆ |
ಕೋಲಂ ಕೋಲಂ ಕೋಲೆ ॥
ಕೋಲಂ ಶ್ರೀ ರಾಮನ ಬಲಗೊಂಬೆ ರನ್ನದ ॥ಪ॥

ಭೂವಿ ಯೊಳಗೆ ಸಿ ತ ರಾವ ನು ಜನಿಸಲು
ಸೀವೆ ಯ ನಾರೀ ಜನರೆಲ್ಲರನ್ನದ ॥
ಸೀವೆ ಯ ನಾರೀ ಜನರೆಲ್ಲ ನೆರೆದು ಸು ।
ಪ್ರೇಮದಿ ಹಾಡಿ ನಲಿದರು ರನ್ನದ ॥೧॥

ಹರಿದಾಸರ ಕೃತಿಗಳು ಜಾನಪದ ರಾಗಗಳಲ್ಲಿ ಅಳವಡಿಸಿದ್ದು ಜನಪ್ರಿಯ ವ ಗಲು ಅವಕಾಶವಿದೆ ।

ಹೇ ಶ್ರೀನಿವಾಸಿವಿದೋಷ ।
ಭಕ್ತಕಲ್ಪತರೋ ವಿಭೋ ।
ದಯಾಸಿಂಧೋ ಸಮಗತ್ಕ ।
ಪಾಹಿ ಮಾಂ ಪುರುಷೋತ್ತಮ ॥

ಎಂಬೀ ಶ್ಲೋಕದೊಡನೆ (328) ಈ ಕೃತಿ ಸಂಕಲನ ಪೂರ್ತೈಸಿದೆ ವಿವಿಧ ವಿಚಾರ ಪೂರಿತಗಳಾದ ಹರಿದಾಸರ ಕ ತಿಗಳು ಅವರ ವಿಶ ಲ ಭಾವನೆಯ ನ್ನೂ ಜನಪ್ರಿಯತೆ ಯನ್ನೂ ನಿರ್ಧರಿಸುತ್ತವೆ ।

2 ಪಾವಂಜೆ ಲಕ್ಷ್ಮೀನಾರಾಯ ಣಪ್ಪಯ್ಯನವರು ಮಂಗಳೂರಿಂದ 13 ಮೈಲು ಬಡಗು ಪಾವಂಜೆಯ ಲ್ಲಿ ಇಸವಿ 1854 ರಲ್ಲಿ ಜನಿಸಿದರು 1924ರಲ್ಲಿ ನಿಧನ ರಾದರು ಇವರ ಭಾವಚಿತ್ರವು ಪಾವಂಜೆಯು ಸುಬ್ರಹ್ಮಣ್ಯ ದೆ ವಾಲಯ ದಲ್ಲಿದೆ ಶೈವ ಬ್ರಾಹ್ಮಣ ವರ್ಗದವರಾದ ಇವರು ವೈರ ಗ್ಯತಾಳಿ ಸಂಚಿ ರ ಕಾಲದಲ್ಲಿ ಅನೇಕ ಕ್ಷೇತ್ರಗಳ ಸಂದರ್ಶನ ಮಾಡಿದರು ಇವರಿಗೆ ಕಾರ್ಕಳದಲ್ಲಿದ್ದ ಶ್ರೀಭುವನೇಂದ್ರ ತೀರ್ಥರು ಹಿಂದಿನ ಕಾಶೀವ ರಾಧಿ ಶರು ಸದಾಶ್ರಯ ಕೊಟ್ಟರು ಅಲ್ಲಿನ ವೆಂಕಟ ರಮಣನ ಹಾಗೂ ಸ್ವಾಮಿಗಳ ಬಗೆಗೆ ಅನೇಕ ಕೃತಿಗಳನ್ನು ಹಾಡಿದರು ಇವರು ಹರಿಕಥೆಗಳನ್ನು ವ್ಯಾಖ್ಯಾನಿಸಿದಾಗಲೂ ಆಶು ಕವಿತೆಗಳನ್ನು ರಚಿಸುತ್ತಿದ್ದರು ಇವರ ಕೃತಿ ಸಂಕಲನಗಳು ಕಾರ್ಕಳ ಬಂಟವಾಳ ಪಾವಂಜೆಗಳಲ್ಲಿ ಪ್ರಕಟವಾಗಿವೆ (186 ಕೃತಿಗಳ ಸಂಕಲನ ಪಾವಂಜೆಯಲ್ಲಿ ಪ್ರಕಟಿತವಾಗಿದೆ) ಇವು ಗಣಪತಿಪರ ಸರಸ್ವತಿಪರ ವಿಷ್ಣು ಪರ ದುರ್ಗಾಪರ ಮುಖ್ಯ ಪ್ರಾಣಪರ ಶ್ರೀರುದ್ರಪರ ಸುಬ್ರಹ್ಮಣ್ಯಪರ ಕಾಲ ಭೈರವ ಪರಗಳೆಂದು ವಿಭಾಗಿಸಲ್ಪಟ್ಟಿವೆ ಸಂಕ್ಷಿಪ್ತ ವಿರಾಟ ಪರ್ವ (15 ಸೊಲ್ಲು) ಇವರ ಕೃತಿಯೊಂದಾಗಿದೆ ಪಾವಂಜೆಯ ಸುಬ್ರಹ್ಮಣ್ಯ ದೇವಾಲಯ ಕ್ಕೆ ತಮ್ಮ ಆಸ್ತಿಯನ್ನು ನೀಡಿದ್ದರಿವರು ಇವರು ಶೈವಬ್ರಾಹ್ಮಣ ರಾದರೂ ಮಾಧ್ವ ಸಂಪ್ರದಾಯಕ್ಕೆ ಒಳಪಟ್ಟಂತೆ ಹಲವಾರು ಕೃತಿಗಳನ್ನು ರಚಿಸಿ ದ್ದಾರೆ ವಿಷ್ಣು ಪದಗಳೇ 88 ಕೃತಿಗಳಿವೆ ಮುಖ್ಯ ಪ್ರಾಣಪರಾಗಗಳು 13 ಕೃತಿ ಗಳಿವೆಂಬುದೇ ಇವಕ್ಕೆ ಸಾಕ್ಷಿಗಳು

1 ಹರಿಧ್ಯಾನವೆ ಗಂಗಾಸ್ನಾನವಿಧಿ ।
ಯನುಭವವೆ ಜಯವೆ ಮೌನ ।
ಪ್ರಾಣೇಶನೆ ಸರ್ವೋತ್ತಮ ವೇದವು ।
ರಾಣ ಪ್ರಮಾಣವೆ ಜ್ಞಾನ ॥೧॥

ಮತ್ತರ ಸಂಗ ಪ್ರವೃತ್ತಿಯೊಳಿರದೆ ನಿ।
ವೃತ್ತಿಯೊಳಿರುವುದೇ ಮಾನ ॥
ಸತ್ಯಾತ್ಮನ ರೂಪದೊಳು ಭೇದರಾ ।
ಹಿತ್ಯವೆ ಸರ್ವಸಮಾನ ॥೨॥

ಕರ್ತ ಲಕ್ಷ್ಮಿ ನಾರಾಯಣನ ಪಾದ ।
ಭಕ್ತಿವಿರಹಿತನೆ ಹೀನ
ಚಿತ್ತಜೋದ್ಭವ ಪರಾತ್ಪರ ತ್ರಿಜಗವು ।
ಪ್ರತ್ಯಗಾತ್ಮನಾಧೀನ ॥೩॥

ಈ ಚಿಕ್ಕ ಹಾಡಿನಲ್ಲಿ ಸುಲಭ ಶೈಲಿಯಲ್ಲಿ ದ್ವೈತವೇದಾಂತದ ಸಾರವೇ ಹೇಳಿದೆ

2 ಸಾಯಬೇಕೊಂದು ದಿನ । ಎಲೆಮನ ॥ಪ॥

ಮಾಯಾ ಮಮತೆಯು । ಜಾಯಾದಿಗಳ ಸ ॥
ಹಾಯವಿದ್ದರೆ ಕಾಯುವ ತೊರೆದು ॥೧॥

ಎಷ್ಟು ಬದುಕಿದರು ಗಟ್ಟ್ಯಾಗಿದ್ದರು ॥
ಪಟ್ಟವಳಿದರು ಬಿಟ್ಟಿಲ್ಲವನು ॥೨॥

ಕರ್ತ ಲಕ್ಷ್ಮಿನಾರಾಯಣನ ಪಾದ
ಭಕ್ತಿ ಸಾಧನೆಯೊಳ್ ನಿತ್ಯವಾಗಿರು ॥೩॥

ಮರಣಂ ಪ್ರಕೃತಿಃ ಶರೀರಿಣಾಂ ಎಂಬ ಸೂಕ್ತಿಯಂತೆ

ಸಾವು ಕಟ್ಟಿಟ್ಟ ಬುತ್ತಿ ಯಾದರೆ ಅದರ ಮೊದಲು ನಾವೇನು ಸಾಧಿಸಬೇಕೆಂದು ಚುಟುಕಾಗಿ ಇಲ್ಲಿ ಹೇಳಿದೆ

3 ಕೇಶವಾದಿ ಚತುರ್ವಿಂಶತಿ (24) ನಾಮಗಳನ್ನು ಒಂದೊಂದು ಸೊಲ್ಲಿನಲ್ಲಿ ಅಳವಡಿಸಿದ ಕೃತಿಯಲ್ಲಿ ಪ್ರಾಸಗುಣ–ಅಲಂಕಾರ–ಭಾವಗಳು ತುಂಬಿವೆ ಅದೂ ಶ್ರೀನಿವಾಸನ ಪದವಾಗಿ ರಚಿಸಲಾಗಿದೆ ಇಂತಹ ಕೃತಿಗಳು ಸರ್ವತ್ರ ಪ್ರಸಾರವಾದರೆ ಜನತೆಯಲ್ಲಿ ಭಕ್ತಿ ಜ್ಞಾನಗಳ ಹರಡಿಕೆಯಾಗ ಬಲ್ಲುದು !

## ೩ ಪೆಣಂಬೂರ 'ಸದಾನಂದ ಗುರು'

ಮಂಗಳೂರಿಂದ ಅನತಿದೂರದಲ್ಲಿ (6 ಮೈಲು) ನವಮಂಗಳೂರು ಬಂದರ (ಪಣಂಬೂರು) ಸರ್ವ ಋತು ಬಂದರವೆಂದು ಕನ್ನಡದಲ್ಲಿ ಪ್ರಖ್ಯಾತವಿದೆ ಇಲ್ಲಿ ಹರಿಹರರ ಗುಡಿಗಳಿವೆ ಪ್ರಾಚೀನದಲ್ಲಿ ಅಗ್ರಹಾರವಾಗಿರಬೇಕೆಂದು ಹೇಳುತ್ತಾರೆ ಈ ಶತಕದ ಮೊದಲ 4 ದಶಕಗಳಲ್ಲಿ ಇಲ್ಲಿ ಹರಿಕಥೆ ಯಕ್ಷಗಾನ ಕೂಟ ಬಯಲಾಟ ಗಳಲ್ಲಿ ಜನತೆಗೆ ಸಾಂಸ್ಕೃತಿಕ ಧಾರ್ಮಿಕ ವಿಚಾರಗಳು ಮಂದಟ್ಟಾಗುತ್ತಿದ್ದುವು ಅದರಲ್ಲಿ ಹಾಸ್ಯಗಾರರ ಪಾತ್ರವಹಿಸುತ್ತಿದ್ದ ಶ್ರೀನಿವಾಸಯ್ಯ ಸದಾನಂದ ಎಂಬ ಮುದ್ರಿಕೆಯಲ್ಲಿ ಕೀರ್ತನೆಗಳನ್ನು ರಚಿಸಿದ್ದಾರೆ ನೂರು ಕೀರ್ತನೆಗಳು (ಕನ್ನಡ-ತುಳು ಭಾಷೆಗಳಲ್ಲಿ) ಮತ್ತು ಮುಕ್ತಸಾರ ಎಂದು ಖಂಡ ಕಾವ್ಯವೂ ಇವರ ಕೃತಿಗಳಾಗಿವೆ ಶೈವ ಬ್ರಾಹ್ಮಣ ವರ್ಗದವರಾದರೂ ಹರಿಭಕ್ತಿಯ ಪರಕಾಷ್ಠತೆಯಲ್ಲಿ ಕೃತಿಗಳನ್ನು ರಚಿಸಿದ್ದಾರೆ

> 1 ಮುನ್ನ ಮಾಡಿದ ಸುಕೃತದಿಂದಲಿ ।
> ನಿನ್ನ ನಾಮ ಸ್ಮರಣೆ ದೊರಕಿತು ।
> ಚೆನ್ನ ಕೇಶವರಾಯ ಪಾಲಿಸು ।
> ನಿನ್ನ ನಂಬಿದನಾಥನನುದಿನ ॥

ಹರಿಭಕ್ತನಾಗಲು ಪೂರ್ವಸುಕೃತವೇ ಮೂಲವೆಂಬುದು ಇಲ್ಲಿ ಧ್ವನಿತ

> 2 ಭಗವಂತನೇ ನಿನ್ನ ಮಗನು ನಾ ಬೇಡುವೆನು ।
> ಧಗಧಗಿಪ ಬಿಸಿಯೊಳಗೆ ಜಗವು ಸುಡುತಿಹದು ॥

ಎಂಬ ಹಾಡಿಕೆಯಿಂದ ಮಳೆ ಸುರಿದುದೆಂದು ಇವರ ದೈವಿಕ ಭಕ್ತಿಯನ್ನ ಇಲ್ಲಿ ಕಾಣುತ್ತೇವೆ

> 3 ನಾರಾಯಣ ಸ್ವಾಮಿ ದೇವರೆ ಎಂಕ್ಳ್ ।
> ಕಾ ತೊಂದುಳ್ಳ ಈರೆನ್ ತೂಯೆರೆ ॥

(ನಾರಾಯಣ ನಿನನು ನೋಡಲು ಕಾದಿರುವೆವು) ಎಂಬೀ ತುಳು ಭಾಷೆಯ ಪದ್ಯದಲ್ಲಿ ಭಕ್ತಿಯ ಹೊನಲು ಹರಿದಿದೆ !

ಬೆಳ್ಳಿ ದಾಸಪ್ಪಯ್ಯ ಮೂಲ್ಕಿ ವೆಂಕಣ್ಣ ವಾಸುದೇವ ಪ್ರಭು ನಾರಾಯಣ ಕಾಮತ್ ಬೋಳಾರ ವಾಸುದೇವಯ್ಯ ರಾಮ ಕೃಷ್ಣ ವಾಸುದೇವಶ್ಯಾನುಭಾಗ ಮತ್ತು ದೇವರ ಮದ್ರಿತಗಳಾಗಿ ಕೆಲವು ಹರಿಕೀರ್ತನೆಗಳನು ರಚಿಸಿದ್ದರೆಂದು ಕೇಳುತ್ತೇವೆ ಜಾತಿ ಭೇದವಿಲ್ಲದೆ ಹರಿಭಕ್ತಿಯನ್ನು ಸಾರಿದವರಿಂದಾಗಿ ಈ ದಾಸ ಸಾಹಿತ್ಯ ಅನುಭಾವವಾಗಿ ಸಾಗಿ ಬಂದಿದೆ

ಸಕೃದೇವ ಪ್ರಪನ್ನಾಯ
ತವಾಸ್ಮೀತಿಚ ಯಾಚತೇ ।
ಅಭಯಂ ಸರ್ವಭೂತೇಭ್ಯೋ ।
ದದಾಮ್ಯೇತದ್ವ್ರತಂ ಮಮ ॥

ವಾಲ್ಮೀಕಿ ರಾಮಾಯಣದಲ್ಲಿ ವಿಭೀಷಣ ಶರಣಾಗತಿ ಪ್ರಸಂಗದಲ್ಲಿ ಶ್ರೀರಾಮನಿಂದ ಮಾತು ಮತ್ತು ಸದಾ ಆಸಕ್ತನಾದ ಹರಿದಾಸನಿಗೆ ದೆ ವರ ರಕ್ಷೆಯಿದೆಯೆಂದು ಸಾರುತ್ತದೆ ।

ಉಡುಪಿಯ ಸೋದೆ ವಾದಿರಾಜ ಮಠಾಧೀಶರಾಗಿದ್ದ ಶ್ರೀ ವಿಶ್ವೇಂದ್ರ ತೀರ್ಥರು (20 ಶತ) ರಚಿಸಿದ ಕೀರ್ತನ ಮಂಜರಿ 1955 ರಲ್ಲಿ ಅವರ ಶಿಷ್ಯ ಶ್ರೀ ವಿಠೋತ್ತಮ ತೀರ್ಥರಿಂದ ಪ್ರಕಟತವು ರಾಜನಾಥ ರಾಜೆ ಶ ಎಂಬ ಮುದ್ರಿಕೆ ಯ ದೆ 48 ಪದ್ಯಗಳಿವೆ ವಿವಿಧ ರಾಗ ತಾಳಗಳಿಂದ ಸಂಯುಕ್ತವು

೧ ಭುಕ್ತಿಪುರ—ಉ ಡಾರು ಎಂಬಲ್ಲಿ ದೇವರು ಒಬ್ಬ ಬಾಲಕನ ಭಕ್ತಿಗೆ ಮಾವನನ್ನೂ ಕೂಡಿದ ಆನ ವ್ಪಂಡ ಕಥೆಯಿಲ್ಲಿದೆ

ವಿಷ್ಣು ಮೂರ್ತಿಯೆ ಪಾಹಿ ಭುಕಿ ಮಂತೀಶ ॥
ಜಿಷ್ಣುನಂದನ ಸೂತ ವೃಷ್ಣಿ ಕುಲೇಶ ॥ಪ॥

** ಬೇಸಿದ ಮಾವಿನ ಫಲದೊಳು ಪ್ರೇಮವೊ ।
ಬಾಲನ ನುಡಿಯೊಳಗಾಯ್ತೇನೋ ಪ್ರೇಮ ॥
ದಾಸರೊಳ್ ನಿನಗಿಪ್ಪ ಪ್ರೇಮವ ಜಗಕೆಲ್ಲ ।
ಬಾಲನಿಂದು ತೋರ್ದೆ ವಿಷ್ಣು ಮೂರುತಿಯೆ ॥

(ಈತ ತೆಜನ ಜನಿತವಾಗಿರ ವುದು)

2 ಯಾತರ ಭಯವಿದೆ ಹರಿಯ ಕಿಂಕರನೆ ।
ಪಾರ್ಥಸೂತನ ದಯವಿದ್ದರೆ ಸಾಲದೆ ॥

** ಹರಿದಿನ ವ್ರತವನು ಬಿಡದೆ ಮಾಡುವಗೆ ।
ಸರ್ವಜೀವೋತ್ತಮ ಪ್ರಾಣನೆಂಬವಗೆ ॥
ಜಗದೊಳು ಶ್ರೀ ಮಧ್ವರಾಯರ ಮ ತವೇ ।
ನಿಗಮಾರ್ಥವೆಂದು ಡಂಗುರ ಸಾರುವಗೆ ॥

ಇಲ್ಲಿ ದೈವಿಕ ಮತದ ವಿಚಾರಗಳಿವೆ

3 ದಕ್ಷಿಣ ಕನ್ನಡದಲ್ಲಿ ಪ್ರಚುರ ಸಂಖ್ಯೆಯಿರುವ ಶಿವಳ್ಳಿ ಹಾಗೂ ಶಿವ ಬ್ರಾಹ್ಮಣರು ಮಾತಾಡುವ ನುಡಿಗಳಲ್ಲಿ ಒಂದು ಹಾಡು ರಚಿಸಿದ್ದಾರೆ

ಮದುಮೆ ಒಂಜಿ ದ್ರುಪದ ರಾಜ ಮಂದಿರೊಂಟು ।
ಬುಂದೆಲಾಡ್ ಚುರಂಟ ಪ್ರೇಣಿ ರಾಶಿ ರಾಶಿ ॥

ಎಂಬಲ್ಲಿ ಭೀಮನು ದ್ರೌಪದಿಯು ಮದುವೆಗೆ ಹೋಗುವ ಕತೆ ಹೇಳಿದೆ

ದೈವಿಕ ಭಕ್ತಿ ಹಾಗೂ ಜಾನಪದ ವಿಚಾರಗಳನ್ನು ಅಳವಡಿಸಿದ ಹರಿ ಕೀರ್ತನೆಗಳು ಸದಾ ಸರ್ವಸಾಮಾಜಿಕರಿಗೆ ಆದರಾರ್ಹಗಳು ।

# ದಾಸಸಾಹಿತ್ಯದ ಮಹಿಳಾ ಕೃತಿಕಾರರು

## ಅಕ್ಕಮಹಾದೇವಿ

ಕರ್ನಾಟಕದ ದಾಸ ಸಾಹಿತ್ಯ ಭಾರತೀಯ ಸಾಹಿತ್ಯದಲ್ಲೇ ಒಂದು ವಿಶಿಷ್ಟ ಸ್ಥಾನವನ್ನು ಪಡೆದಿದೆ ಸಂಗೀತ ಕ್ಷೇತ್ರಕ್ಕೆ ಮಾತ್ರವಲ್ಲದೆ ಸಾಹಿತ್ಯಿಕ ಹಾಗೂ ಸಾರ್ವಜನಿಕ ಕ್ಷೇತ್ರಗಳಿಗೂ ದಾಸಸಾಹಿತ್ಯದ ಕೊಡುಗೆ ಗಣನೀಯವಾದುದು ನರಹರಿ ತೀರ್ಥರ ಕಾಲದಿಂದ ವಿಕಾಸಗೊಳ್ಳುತ್ತಾ ಬಂದಿರುವ ಕರ್ನಾಟಕದ ದಾಸಸಾಹಿತ್ಯ ವಾಸ್ಕಕೂಟದಾಸಕೂಟಗಳಿಂದ ಪುಷ್ಟಿಹೊಂದಿ ಪುರಂದರದಾಸರ ಕಾಲಕ್ಕೆ ಪರಮೋನ್ನತ ಸ್ಥಿತಿಯನ್ನು ತಲುಪಿತು ಕನಕದಾಸಾದಿಗಳು ಈ ಪರಂಪರೆಯನ್ನು ಮುಂದುವರಿಸಿ ಕನ ಡ ಸಾಹಿತ್ಯದಲ್ಲಿ ದಾಸಸಾಹಿತ್ಯವನ್ನು ಒಂದು ಅವಿಭಾಜ್ಯ ಅಂಗವನ್ನಾಗಿ ಮಾಡಿದರು ಈ ವಿಶಿಷ್ಟ ಪರಂಪರೆಯ ಲ್ಲಿ ಮಹಿಳೆಯರೂ ಪಾತ್ರೊಂಡು ಇದಕ್ಕೆ ಇನ್ನಷ್ಟು ಮೆರುಗನ್ನು ಕೊಟ್ಟರು

ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಮಹಿಳೆಯ ರ ಪಾತ್ರ ಪ್ರತ್ಯೇಕ ಅಧ್ಯಯನಕ್ಕೆ ಯೋಗ್ಯವಾಗಿರುವುದು ಹೆಮ್ಮೆಯ ಸಂಗತಿ ಯಾವುದೇ ಬಾಷ ಪ್ರದೇಶದ ಸಂಸ್ಕೃತಿಯ ಮೂಲಭೂತಸತ್ವ ಜನಪದ ಸಾಹಿತ್ಯದಲ್ಲಿರುತ್ತದೆ ಜನಪದ ಸಾಹಿತ್ಯದ ದೃಷ್ಟಿಯ ಲ್ಲಿ ಮ ಹಿಳೆಯ ಪಾತ್ರ ಅನನ್ಯವಾದುದು ಕನ್ನಡವೂ ಇದಕ್ಕೆ ಹೊರತಾಗಿಲ್ಲ ಕನ್ನಡಿಗರ ಸಂಸ್ಕೃತಿ ಹೆಂಗೆಳೆಯರ ಹಾಡುಗಳಲ್ಲಿ ಅಭಿವ್ಯಕ್ತಿಯನ್ನು ಪಡೆದಿದೆ

ಹೆಸರಿಸಬಹುದಾದ ಮೊದಲ ಕನ ಡ ಕವಯಿತ್ರಿ ಕಂತಿ ಈಕೆಯ ಕೆಲವು ಸಮಸ್ಯಾ ಪದಗಳು ಮಾತ್ರ ಸಿಕ್ಕಿವೆ ಅವುಗಳಲ್ಲಿ ಆಕೆಯ ಪ್ರತಿಭಾಪಾಂಡಿತ್ಯಗಳು ವ್ಯಕ್ತವಾಗಿವೆ ಶಿವಶರಣ ಯುಗದಲ್ಲಿ ಸಾಹಿತ್ಯ ಸೃಷ್ಟಿಯಲ್ಲಿ ಕನ ಡ ಮಹಿಳೆ ಉತ್ಸಾಹದಿಂದ ಪಾಲ್ಗೊಂಡ ಉದಾಹರಣೆಗಳೂ ಇವೆ ಮಹಾದೇವಿಯ ಕ್ಕ ಶರಣ ಯುಗದ ಸಾಮಾಜಿಕ ಸಾಹಿತ್ಯಿಕ ಹಾಗೂ ಧಾರ್ಮಿಕ ಕ್ರಾಂತಿಗಳ ಪ್ರತೀಕವಾಗಿ ತನ್ನ ನಿರ್ಮಾಣಶಕ್ತಿಯಿಂದ ಅನಂತರ ಕಾಲದ ಅನೇಕ ಕವಯಿತ್ರಿಯರಿಗೆ ಆದರ್ಶಳಾಗಿದ್ದಾಳೆ ಮೋಳಿಗೆ ಮಹಾದೇವಿ ಲಿಂಗಮ್ಮ ಕಾಳವ್ವೆ ನೀಲಾಂಬಿಕೆ ಗಂಗಾಂಬಿಕೆ ನಾಗಲಾಂಬಿಕೆ ಮುಕ್ತಾಯ ಕ್ಕ ಮೊದಲಾದ ವಚನಕಾರ್ತಿಯವರಿಂದ ಕನ್ನಡ ಸಾಹಿತ್ಯ ಶ್ರೀಮಂತವಾಯಿ ತು ಇಷ್ಟು ಜನ ಮಹಿಳೆಯ ರು ಕಾವ್ಯಸ್ಫೂರ್ತಿಯನ್ನು ಪಡೆದುದೇ ಒಂದು ಅಪರೂಪ ಸನ್ನಿವೇಶ

ಹನ್ನೆರಡನೆಯ ಶತಮಾನದ ವಚನಕಾರ ಯುಗದ ಅನಂತರ ಮಹಿಳೆಯರು ಸಾಹಿತ್ಯ ನಿರ್ಮಾಣದಲ್ಲಿ ಹೆಚ್ಚಿನ ಆಸಕ್ತಿ ತೋರಿಸಿದಂತಿಲ್ಲ ಶಿವಶರಣ ಯ ುಗದಲ್ಲಿ

ಮಹಿಳೆಯ ರಿಗೆ ಹೆಚ್ಚಿನ ಪ್ರೊ ತ್ಸಾಹವಿತ್ತು, ಎಂಬುದಕ್ಕೆ ಆ ಕಾಲದ ಮಹಿಳಾಕೃತಿ ಕಾರರು ರಚಿಸಿದ ಕೃತಿಗಳೇ ಸಾಕ್ಷ್ಯ

ಹರಿದಾಸಯು ಗದ ಸ್ವರ್ಣಯುಗವೆನ ಲಾಗುವ ಹದಿನಾರನೆಯ ಶತಮಾನದಲ್ಲಿ ಮಹಿಳೆಯರು ಯಾರೂ ಗಣನೀಯ ಕೃತಿ ರಚಿಸಿಲ್ಲ ಅಷ್ಟೇ ಅಲ್ಲ ಹದಿಮೂರ ನೆಯ ಶತಮಾನದಿಂದ ಹದಿನೆಂಟನೆಯ ಶತಮಾನದ ಪ್ರಾರಂಭದವರೆಗೂ ಹೆಸರಿಸ ತಕ್ಕ ಕವಯಿತ್ರಿಯರು ಇಲ್ಲದಿರುವುದು ಶೋಚನೀಯ

ಕನ ಡ ಸಾಹಿತ್ಯ ಬಹುಮುಖವಾಗಿ ವೈವಿಧ್ಯಮಯವಾಗಿ ಬೆಳೆದ ಹದಿನೆಂಟ ನೆಯ ಶತಮಾನದ ಪ್ರಾರಂಭದಲ್ಲಿ ದೇಶೀಯ ಸಾಹಿತ್ಯ ರೀತಿಗೆ ಹೆಚ್ಚಿನ ಪ್ರೊ ತ್ಸಾಹ ಲಭಿಸಿತು ಅಭಿವ್ಯಕ್ತಿಯ ಸ್ವಾತಂತ್ರ್ಯ, ಕಾವ್ಯ ನಿರ್ಮಾಣದ ಸರಳದೃಷ್ಟಿ ಮಹಿಳೆ ಯರನ್ನು ಆಕರ್ಷಿಸಿದವು ಚಿಕ್ಕದೇವರಾಯರ ಕಾಲದಲ್ಲಿ ಮ ಹಿಳೆಯರ ವಿದ್ಯೆಗೆ ಮತ್ತು ಕಲೆಗೆ ಹೆಚ್ಚಿನ ಪ್ರೋತ್ಸಾಹವಿತ್ತೆಂದು ತಿಳಿಯುವುದಕ್ಕೆ ಆತನ ಕಾಲದ ಹೊನ್ನಮ್ಮ, ಶೃಂಗಾರಮ್ಮ ಮೊದಲಾದವರೇ ಸಾಕ್ಷಿ

ಮಹಿಳೆಯರು ಸುಮಾರು ಐನೂರು ವರ್ಷಗಳ ಅನಂತರ ಮತ್ತೆ ಕೃತಿರಚನೆಗೆ ತೊಡಗಿದ ಹಿನ್ನೆಲೆಯಾಗಿ ಈ ಮೇಲಿನ ಕೆಲವು ವಿಷಯಗಳನ್ನು ಸ್ಮರಿಸಬೇಕಾಗಿದೆ ಹೊನ್ನಮ್ಮ, ಶೃಂಗಾರಮ್ಮ ಹಾಗೂ ಚೆಲುವಾಂಬೆಯರು ಅನಂತರ ಕಾಲದವರಿಗೆ ಮ ಖ್ಯ ಪ್ರೇರಣೆಯನ ಬಹುದು

ಹರಿದಾಸ ಸಾಹಿತ್ಯವನು ಬೆಳಸಿದ ಮಹಿಳೆಯರಿಗೆ ಎರಡು ತರದ ಪ್ರೇರಣೆ ಗಳಿದ್ದವೆನ ಬಹುದು ದಾಸಸಾಹಿತ್ಯದ ಸಮೃದ್ಧ ನಿರ್ಮಾಣದ ಕಾಲ ಎಂದರೆ ೧೫ ೧೬ ಶತಮಾನಗಳಲ್ಲಿ ಹರಿದಾಸರು ಕನ ಡಕ್ಕೆ ನೀಡಿದ ಕಾಣಿಕೆಗಳಿಂದಾದ ಪ್ರೇರಣೆ ಮೊದಲನೆಯ ದು ಪುರಂದರ ಕನಕ ಮೊದಲಾದವರು ಸಮಕಾಲೀನ ಮತ್ತು ಅನಂತರ ಕಾಲದ ದಾಸ ಸಾಹಿತ್ಯದ ಮೇಲೆ ಅಪಾರ ಪ್ರಭಾವ ಬೀರಿದರೆಂಬುದರಲ್ಲಿ ಸಂದೇಹವಿಲ್ಲ ಹಾಗೆಯೇ ಹರಿದಾಸ ಸಾಹಿತ್ಯದ ಮಹಿಳ ಕೃತಿಕಾರರಿಗೆ ಅವರಿಗಿಂತ ಒಂದೆರಡು ಶತಮಾನಗಳ ಹಿಂದಿದ್ದ ಕವಯಿತ್ರಿಯರು ಮತ್ತು ವಿಜಯದಾಸ ಗೋಪಾಲದಾಸಾದಿಗಳು ನೀಡಿದ ಪ್ರೇರಣೆ ಎರಡನೆಯ ರೀತಿಯ ದು

ಹದಿನೆಂಟನೆಯ ಶತಮಾನದ ಪ್ರಾರಂಭದಲ್ಲಿ ಭಾಗವತ ಸಾಹಿತ್ಯದ ನಿರ್ಮಾಣ ಫಲಪ್ರದವಾಗಿತ್ತು, ಹದಿನಾಲ್ಕನೆಯ ಶತಮಾನದಲ್ಲಿ ಪ್ರಾರಂಭವಾದ ಈ ಭಾಗವತ ಸಾಹಿತ್ಯ ಹದಿನೆಂಟನೆಯ ಶತಮಾನದಲ್ಲಿ ಮುಂದ ವರಿದು ಅನೇಕ ವಿಧವಾಗಿ ವಿಕಾಸ ಗೊಂಡಿತು ಇದರಲ್ಲಿ ಮಹಿಳೆಯರ ಪಾಲೂ ಇದೆ ಸಂಚಿಯ ಹೊನ ಮ್ಮನ ಹದಿಬದಿಯಧರ್ಮ ದಲ್ಲಿ ಶ್ರೀವೈಷ್ಣವ ಮತಾಭಿಮಾನ ಹಲವೆಡೆಗಳಲ್ಲಿ ವ್ಯಕ್ತವಾಗಿದೆ ಚಿಕದೇವರ ಯನ ಆಸ್ಥಾನದ ಬೇರೆ ಕವಿಗಳ ಕೃತಿಗಳಿಗೂ ಈ ಮಾತು ಅನ್ವಯಿಸು ತ್ತದೆ ಹದಿನೆಂಟನೆಯ ಶತಮಾನದ ಚೆಲುವಾಂಬೆ ತನ್ನ ಕೃತಿಗಳಲ್ಲಿ ಶ್ರೀವೈಷ್ಣವ

ಭಕ್ತಿಗೆ ಹೆಚ್ಚಿನ ಪ್ರಾಧಾನ್ಯ ನೀಡಿದ್ದಾಳೆ ಈ ಹಿನ್ನೆಲೆಯಲ್ಲಿಯೇ ದಾಸಸಾಹಿತ್ಯದ ಮಹಿಳಾ ಕೃತಿಕಾರರು ರೂಪುಗೊಂಡಿದ್ದಾರೆ ಕನ್ನಡ ಹರಿದಾಸ ಸಾಹಿತ್ಯಕ್ಕೆ ಮಹಿಳೆಯರು ಸ್ವಲ್ಪ ತಡವಾಗಿ ತಮ್ಮ ಕೊಡುಗೆಯನಿತ್ತರು

## ಗಲಗಲಿಯ ಅವ್ವ

ಕೊಪ್ಪಳ ತಾಲೂಕಿನ ಭೋಗಾಪುರ ಗ್ರಾಮದ ಶ್ಯಾನುಭೋಗರ ಮಗಳಾದ ಈಕೆ ಬಿಜಾಪುರ ಜಿಲೆಯ ಗಲಗಲಿಯ ಮುದ್ಗಲಾಚಾರ್ಯರನು ವ ದುವೆಯಾದಳು ಆಗ ಆಕೆಗೆ ಹನ್ನೆರಡು ವರ್ಷ ಈಕೆಯ ಗಂಡನಿಗೆ ತೊಂಬತ್ತೈದು ವರ್ಷ ! ಮದುವೆಯಾದ ಎಂಟು ದಿನಗಳಿಗೇ ಮುದಲಾಚಾರ್ಯರು ದಿವಂಗತರಾದರು ಅವರ ಐದು ಜನ ಮಲವ ಕ್ಕಳೆ ಈಕೆಗೆ ಪಾಠ ಪ್ರವಚನ ಹೇಳಿದರು ದೊಡ್ಡ ಪಂಡಿತರನ್ನು ಚಕಿತಗೊಳಿಸುವಷ್ಟು ಪಾಂಡಿತ್ಯ ಪಡೆದು ಶಿಷ್ಯರೊಂದಿಗೆ ಮೈಸೂರಿಗೆ ಹೋಗಿ ರಾಜನಿಂದ ಮರ್ಯಾದೆ ಪಡೆದು ಅಲ್ಲೇ ಕೆಲವು ದಿನ ಪಾಠವನ್ನೂ ಹೇಳಿದಳು ಈಕೆಯ ಬಗೆಗೆ ಇಂತಹ ಇನ್ನೂ ಅನೇಕ ಕಥೆಗಳಿವೆ, ಆದರೆ ಇವುಗಳಲ್ಲಿ ಸತ್ಯಾಂಶವೆಷ್ಟಿದೆ ಎಂದು ನಿಶ್ಚಯಿಸಲಂತೂ ಅಸಾಧ್ಯ

ಮುಯ್ಯದ ಪದಗಳು, ಮೋರೆಗೆ ನೀರು ತಂದ ಹಾಡು ಶೃಂಗಾರ ತ ರತಮ್ಮ ಬೀಗರ ಹಾಡುಗಳ —ಇವೇ ಮುಂತಾದುವು ಈಕೆಯ ಕೃತಿಗಳು ಶ್ರೀರಾಮೇಶ ಎಂಬ ಮುದ್ರಿಕೆಯಿಂದ ಹಾಡುಗಳನ್ನು ರಚಿಸಿರುವ ಅವ್ವ ಹದಿನೆಂಟನೆಯ ಶತಮಾನದ ಪ್ರಾರಂಭದ ಕಾಲದ ಕವಯಿತ್ರಿ

ಮುಯ್ಯದ ಹಾಡು ತುಂಬ ಪ್ರಚಾರದಲ್ಲಿರುವ ಸುದೀರ್ಘ ಗೀತೆ ಗೌರೀ ಪೂಜೆಯ ಕಾಲದಲ್ಲಿ ಮುಯ್ಯ ಒಯ್ಯುವ ಸಂಪ್ರದಾಯವನ್ನು ವಿನೋದವಾಗಿ ಹಾಡಿ ನರ್ತಿಸಿ ಆಚರಿಸ ವ ತಹ ಸಂದರ್ಭವಿದು ಸುಭದ್ರೆ ದ್ರೌಪದಿಯರು ರುಕ್ಮಿಣಿಗೆ ಮುಯ್ಯ ಒಯ್ಯುವಂತೆ ಈ ಹಾಡು ರಚಿತವಾಗಿದೆ ಮುಯ್ಯದ ವಾದದಲ್ಲಿ ತನ್ನನು ಗೆಲ್ಲಿಸಬೇಕೆಂದು ಅವ್ವ ಈ ಹಾಡಿನಲ್ಲಿ ಕೇಳಿಕೊಳ್ಳುತ್ತಾಳೆ ಪಾಂಡವರ ಭಕ್ತಿಯ ನು ಕೃಷ್ಣನ ವಾತ ಲ್ಯವನ್ನು ಕವಯಿತ್ರಿ ಈ ಹಾಡಿನಲ್ಲಿ ವರ್ಣಿಸಿದ್ದಾಳೆ ರ ಕ್ಮಿಣಿ ಸತ್ಯಭಾಮೆಯ ರ ಜಗಳದ ನಡುವೆ ಕೃಷ್ಣನಿಗ ಂಟಾದ ಸ್ಥಿತಿಯ ನು ದ್ರೌಪದಿ ಸೊಗಸಾಗಿ ವರ್ಣಿಸುತ್ತಾಳೆ ಇದೇ ಸಂದರ್ಭವನ್ನು ದಶಾವತಾರದ ವರ್ಣನೆ ಮಾಡಲು ಕವಯಿತ್ರಿ ಉಪಯೋಗಿಸಿಕೊಂಡಿದ್ದಾಳೆ

ಮೋರೆಗೆ ನೀರು ತಂದು ಹಾಡುಗಳು ಇನೊಂದು ಸಂಪ್ರದಾಯವನ್ನು ಪ್ರತಿನಿಧಿಸುತ್ತವೆ ಮದುವೆಯ ಸಮಯದಲ್ಲಿ ಬೀಗರು ಗಂಡಿನ ಮನೆಗೆ ಮೋರೆಗೆ ನೀರು ತರ ವ ಸಂಪ್ರದಾಯವಿದೆ ಈ ಸ ದರ್ಭದಲ್ಲಿ ಈ ಹಾಡುಗಳನ್ನು ಹಾಡುತ್ತಾರೆ ಇವು ಒಂದು ರೀತಿಯ ಜರಿಯುವ ಪದಗಳು ದೇವತೆಗಳಲ್ಲಿ ಈ ಸಂಪ್ರದಾಯವನ್ನೂ ಕಲ್ಪಿಸಿ ಗಲಗಲಿಯ ಅವ್ವ ಹಾಡಿದ್ದಾಳೆ

ಬೀಗರ ಹಾಡುಗಳು ಕೂಡ ಈ ರಿ ತಿಯವೆ ರಾಮಾವತಾರ ಕೃಷ್ಣಾವತಾರ ಗಳಿಗೆ ಸಂಬಂಧಿಸಿದಂತೆ ಈಕೆ ಈ ಹಾಡ ಗಳನ್ನು ರಚಿಸಿದ್ದಾಳೆ ಈಕೆಯ ಹಾಡು ಗಳು ಒಹುಪಾಲು ನಿಂದಾಸ್ತುತಿಗಳಾಗಿವೆ ಹರಿಕಥಾಮೃತಸಾರ ದಲ್ಲಿ ವಿವರಿಸಲಾಗಿ ರುವ ದೇವತೆಗಳ ತಾರತಮ್ಯ ಜ್ಞಾನವನ್ನು ತಿಳಿದುಕೊಂಡು ಕಾಮಕ್ರೋಧಗಳನ್ನು ತೊರೆದು ಪವಿತ್ರ ಜ್ಞಾನವನು ಪಡೆಯುವುದು ಎಲ್ಲ ತರಹದ ಆಭರಣಗಳನ್ನು ಧರಿಸಿ ದಂತೆ ಎಂಬುದು ಈ ಕೃತಿಯಲ್ಲಿ ಪ್ರತಿಪಾದಿಸಲಾದ ಮುಖ್ಯ ವಸ್ತು

ಗಲಗಲಿಯ ಅವ್ವ ಆಡುನುಡಿಗೆ ಹೆಚ್ಚು ಪ್ರಾಧಾನ್ಯವನ್ನು ಕೊಟ್ಟು ಅಲಂಕಾರ ಗಳಿಂದ ವ್ಯಂಗ್ಯದಿಂದ ವಿಸ್ತಾರವಾದ ವರ್ಣನೆಗಳಿಂದ ತನ ಕೃತಿಗಳನು ರಚಿಸಿ ದ್ದಾಳೆ ಸಜ್ಜನರ ಸಂಗ ಸರ್ವವಿಧದಲ್ಲೂ ಶ್ರೇಷ್ಠ ಎಂಬುದನ್ನು ತನ್ನ ಕೃತಿಗಳ ಮೂಲಕ ಸಾರಿದ್ದಾಳೆ

## ಭಾಗವ್ವ

ಗಲಗಲಿಯ ಅವ್ವನ ಶಿಷ್ಯೆಯಾದ ಭಾಗವ್ವನ ಬಗ್ಗೆ ಹೆಚ್ಚಿನ ವಿವರಗಳು ಗೊತ್ತಿಲ್ಲ ಅವ್ವ ಮತ್ತು ಭಾಗವ್ವ—ಇವರ ಬಗ್ಗೆ ವಿವರಗಳನು ಸಂಗ್ರಹಿಸಿರುವ ಡಾ ಸರೋಜಿನಿ ಮಹಿಷಿ (ಕರ್ನಾಟಕದ ಕವಯಿತ್ರಿಯರು ೧೯೬೩ ) ಅವ್ವನ ಜೊತೆ ಕಾಶಿಗೆ ಹೋಗುತ್ತಿರ ವಾಗ ಭಾಗವ್ವ ಕಾಲರಬೇನೆಯಿಂದ ಪೀಡಿತಳಾದಳಂತೆ! ಆಗ ಅವ್ವನ ಆದೇಶದಂತೆ ಭಾಗವತದ ತೃತೀಯಸ್ಕಂಧವನ್ನು ರಚಿಸಿ ರೋಗಮುಕ್ತಳಾದ ಳಂತೆ! ಎಂಬ ಐತಿಹ್ಯವನ್ನು ತಿಳಿಸಿದ್ದಾರೆ ಭಾಗವ್ವನ ಕೃತಿಗಳಲ್ಲಿ ಇದೊಂದೇ ಲಭ್ಯವಾದಂಥದು

ದ ರ್ಯೋಧನನ ಕೆಟ್ಟ ಮಾತುಗಳನ್ನು ಕೇಳಿದ ಪಾಪಪರಿಹಾರಕ್ಕಾಗಿ ವಿದುರನು ತೀರ್ಥಯಾತ್ರೆಗೆ ಹೊರಟನು ದಾರಿಯ ಲ್ಲಿ ಅವನಿಗೆ ಉದ್ಧವನೆಂಬವನು ಸಿಕ್ಕಿದನು ವಿದುರನು ತನಗೆ ಹರಿಯಚರಿತ್ರೆಯನು ಹೇಳಬೇಕೆಂದು ಕೋರಿದಾಗ ಆ ಕಾರ್ಯ ಮಾಡಲು ಮೆ ತ್ರೇಯ ಋಷಿ ಶಕ್ತನಾದವನೆಂದು ಉದ್ಧವ ಉತ್ತರವಿತ್ತ ಮೈತ್ರೇಯರಿಂದ ಹರಿಯ ಚರಿತ್ರೆಯನು ತಿಳಿಯ ುವುದೇ ಇಲ್ಲಿಯ ಪ್ರಧಾನವಸ್ತು ಭಾಗವತ ನ ಮ ಸಂಕೀರ್ತನೆಯೇ ಈಕೆಯ ಮುಖ್ಯೋದ್ದೇಶವಾಗಿತ್ತೆಂಬುದು ಈಕೆಯ ಕಾವ್ಯದಿಂದ ಸ್ಪಷ್ಟವಾಗುವುದು

## ಹೆಳವನಕಟ್ಟೆ ಗಿರಿಯಮ್ಮ

ಹರಿದಾಸ ಸಾಹಿತ್ಯದ ಮಹಿಳಾಕೃತಿಕಾರರಲ್ಲಿ ಪ್ರಮುಖಳು ಗಿರಿಯಮ್ಮ ಈಕೆ ಧಾರವಾಡ ಜಿಲ್ಲೆಯ ರಾಣಿಬೆನ್ನೂರಿನ ಭಿಷ್ಮಪ್ಪ ಜೋಯಿಸರ ಮಗಳು ಚಿಕ್ಕ ವಯಸ್ಸಿನಲ್ಲಿಯೇ ಈಕೆಗೆ ಹರಿಹರ ತಾಲ್ಲೂಕಿನ ಮಳೆ ಬೆನ್ನೂರಿನ ಶ್ಯಾನುಭೋಗ ಕೃಷ್ಣಪ್ಪನ ಮಗ ತಿಪ್ಪರಸನೊಂದಿಗೆ ಮದುವೆಯಾಯಿತು ಆದರೆ ಗಿರಿಯಮ್ಮ

ವೈವಾಹಿಕ ಜೀವನದಿಂದ ವಿಮುಖಳಾಗಿದ್ದಳು ಬಾಲ್ಯದಿಂದಲೂ ಭಗವದ್ಭಕ್ತಿಯಲ್ಲಿ ಬೆಳೆಯುತ್ತಾ ಬಂತು

ಮಲೆಬೆನ್ನೂರಿನ ಸಮೀಪದ ಹಳಿಯಲ್ಲಿ ಹೆಳವನೊಬ್ಬನಿಗೆ ರಂಗನಾಥಮೂರ್ತಿ ಸಿಕ್ಕಿ, ಅಲ್ಲಿ ರಂಗನಾಥಕ್ಷೇತ್ರ ನಿರ್ಮಾಣವಾಗಿ ಅದಕ್ಕೆ ಹೆಳವನಕಟ್ಟೆ ಎಂದು ಆ ಕ್ಷೇತ್ರಕ್ಕೆ ಹೆಸರಾಯಿತು ಈ ರಂಗನಾಥನೇ ಗಿರಿಯಮ್ಮನ ಆರಾಧ್ಯದೈವವ ದನು ಆಕೆಯ ಗಂಡನೂ ಗಿರಿಯಮ ನನ್ನು ದೈವೀಶಕ್ತಿಯಿರುವ ಸ್ತ್ರೀಯೆಂದು ಭಾವಿಸಿ ಗೌರವದಿಂದ ನೋಡುತ್ತಿದ್ದನು ಗಿರಿಯ ಮ್ಮನ ಮಾತಿನಲ್ಲಿ ಊರಿನ ಜನರಿಗೂ ವಿಶ್ವಾಸ ಮೂಡಿತು ಈಕೆಯ ಬಗೆಗೆ ಅನೇಕ ಐತಿಹ್ಯಗಳಿವೆ ಅವುಗಳಲ್ಲಿ ಎಷ್ಟು ಸತ್ಯಾಂಶವಿದೆಯೋ ತಿಳಿಯ ದು

ಕವಿಚರಿತೆಕಾರರು ಈಕೆಯ ಕಾಲವನ್ನು ಸು 1750 ಎಂದು ಊಹಿಸಿದ್ದಾರೆ ಗಿರಿಯಮ್ಮ ತನ ಚಂದ್ರಹಾಸನಕಥೆ ಗೆ ಲಕ್ಷ್ಮೀಶನ ಜೈಮಿನಿಭಾರತ ದ ಚಂದ್ರಹಾಸೋಪಾಖ್ಯಾನ ಮೂಲವೆಂದು ಹೇಳಿಕೊಂಡಿದ್ದಾಳೆ ಆದ ದರಿಂದಲೇ ಈಕೆಯು 1725–50 ರ ಸುಮಾರರಲ್ಲಿ ಬಾಳಿದಳೆಂದು ಹೇಳಬಹ ದು

ಮಂತ್ರಾಲಯದ ಸುಮತೀಂದ್ರಸ್ವಾಮಿ ಮಲೆಬೆನ್ನೂರಿಗೆ ಬಂದಾಗ ಗಿರಿಯಮ್ಮನ ಬಗ್ಗೆ ದೂರು ಹೇಳಿದರೆಂದೂ ಸ್ವಾಮಿಗಳು ಎಲ್ಲವನ್ನೂ ಅರಿತವರಾದುದರಿಂದ ಗಿರಿಯಮ್ಮನಿಗೇ ಮೊಟ್ಟಮೊದಲು ತೀರ್ಥ ನೀಡಿದರೆಂದು ಐತಿಹ್ಯವಿದೆ ಉಡುಪಿಗೆ ಯಾತ್ರಾರ್ಥಿಯಾಗಿ ಹೋಗುವಾಗ ಗೋಪಾಲದಾಸರು ಮಲೆಬೆನ್ನೂರಿಗೆ ಬಂದು ಗಿರಿಯಮ್ಮನಿಗೆ ಬಾಲಗೋಪಾಲ ವಿಗ್ರಹವನ್ನು ಮುದ್ರಿಕೆಯ ನ್ನು ನೀಡಿದರಂತೆ। ಹೆಳವನಕಟ್ಟೆರಂಗ ಎಂಬ ಮುದ್ರಿಕೆಯಲ್ಲಿ ಗಿರಿಯಮ್ಮ ಕೀರ್ತನೆಗಳನ್ನು ರಚಿಸಲು ಗೋಪಾಲದಾಸರ ಸ್ಫೂರ್ತಿಯೆನ್ನಲಾಗಿದೆ

ಗಿರಿಯಮ್ಮನಿಗೆ ಪರಮಾತ್ಮನಲ್ಲಿ ವಾತ್ಸಲ್ಯಭಕ್ತಿ ಭಗವಂತನನ್ನು ಪುತ್ರನೆಂದು ಭಾವಿಸಿ ಆ ಮಗ ವನ್ನು ಆಡಿಸಿ ಮುದ್ದಿಸಿದಂತೆ ತನ್ನ ಕೃತಿಗಳನು ರಚಿಸಿದ್ದಾಳೆ ಈಕೆ ವೈವಿಧ್ಯಪೂರ್ಣ ಕೃತಿಗಳನ್ನು ರಚಿಸಿದ್ದಾಳೆ ಅನೇಕ ಬಿಡಿ ಹಾಡ ಗಳ ಜೊತೆಗೆ ವಿಶೇಷ ಕೃತಿಗಳಾದ ಬ್ರಹ್ಮಕೊರವಂಜಿ ಲವಕುಶರ ಕಾಳಗ ಉದ್ದಾಲಕನ ಹಾಡು ಕೃಷ್ಣಕೊರವಂಜಿ ಮುಂತಾದ ಕಥನ ಕಾವ್ಯಗಳನು ಚಂದ್ರಹಾಸ ಚರಿತೆ ಮತ್ತು ಸೀತಾಕಲ್ಯಾಣ ಎಂಬ ಸಾಂಗತ್ಯ ಕೃತಿಗಳನೂ ರಚಿಸಿದ್ದಾಳೆ ಗಜೇಂದ್ರಮೋಕ್ಷ ಮತ್ತು ಗಿಳಿಪಾರಿಜ ತ ಎಂಬವು ಕೂಡ ಈಕೆಯದೆಂದೇ ಹೇಳುತ್ತಾರೆ ಆದರೆ ಇವು ಅಲಭ್ಯ ಹಲವು ದೇವರನಾಮಗಳನ್ನು ರಚಿಸಿ ಕೀರ್ತನಕಾರರಲ್ಲಿ ಒಳ್ಳೆಯ ಹೆಸರನ್ನು ಪಡೆದಿರ ವುದು ತಿಳಿದ ಸಂಗತಿಯೇ

ಗಿರಿಯಮ್ಮ ತನ ಕೀರ್ತನೆಗಳನು ವಿವಿಧ ಸಂದರ್ಭಗಳಲ್ಲಿ ಹೇಳಿದ್ದಾಳೆ ಈ ಕೀರ್ತನೆಗಳ ಹಿನ್ನೆಲೆಯಲ್ಲಿ ಬಹುಪಾಲು ಪವಾಡಗಳಿವೆ ಹೆಳವನಕಟ್ಟೆಯ

ರಂಗನಾಥನ ಉತ್ಸವ ಕಾಲದಲ್ಲಿ ಉಂಗುರ ಮಾಯವಾಯಿತೆಂದೂ ಗಿರಿಯಮ್ಮ ಒಂದು ಕೀರ್ತನೆಯನ್ನು ಹಾಡಿದ ಕೂಡಲೇ ಗುಬ್ಬಿ ಉಂಗುರವನ್ನು ಬಾಯಲ್ಲಿ ಕಚ್ಚಿ ತಂದು ಚೆಲ್ಲಿ ಹೋಯಿತೆಂದು ಹೇಳಲಾಗಿದೆ ಮಳೆಯಿಲ್ಲದೆ ನರಳುತ್ತಿದ್ದ ಜನರಿಗೆ ರಂಗನಾಥನನ್ನು ಪ್ರಾರ್ಥಿಸಿ ಗಿರಿಯಮ್ಮ ಮಳೆಯನ್ನು ತರಿಸಿಕೊಟ್ಟಳಂತೆ! ಈ ಐತಿಹ್ಯಕ್ಕೆ ಕೆಳಗಿನ ಕೀರ್ತನೆ ಆಧಾರ

ಮಳೆಯ ದಯಮಾಡೋ ರಂಗ ನಿಮ್ಮ
ಕರುಣೆ ತಪ್ಪಿದರೆ ಉಳಿಯದು ಲೋಕ ॥ಪ॥

ಪಶು ಜಾತಿ ಹುಲ್ಲಿಲ್ಲ ಸಾರಂಗ ಮೃಗಗಳು ಬಹಳ
ಹಸಿದು ಬಾಯಾರಿ ಬತ್ತಿದ ಕೆರೆಗೆ ಬಂದು
ತೃಷೆಯಡಗದೆ ತಲ್ಲಣಿಸಿ ಮೂರ್ಛೆಗೊಂಡು
ದೆಸೆದೆಸೆಗೆ ಬಾಯ್ಬಿಡುವವಯ್ಯ ಹರಿಯೆ

ಪ್ರಾಣಿಗಳು ನೀರಿಲ್ಲದೆ ಕಂಗಾಲಾಗಿರುವ ಚಿತ್ರ ಹೃದಯಾರ್ದ್ರವಾಗಿದೆ

ಸಂದು ಹೋದವು ಜ್ಯೇಷ್ಠ ಆಷಾಢ ಶ್ರಾವಣ
ಬಂದಿದೆ ಭಾದ್ರಪದ ಮಾಸವೀಗ
ಇಂದು ಪುರಂದರಗೆ ಹೇಳಿ ವೃಷ್ಟಿಯ ತರಿಸೊ
ಸಂದೇಹವ್ಯಾಕೆ ಹೆಳವನಕಟ್ಟೆಯ ರಂಗ ॥

ಇಂತಹ ಹಾಡುಗಳು ಮಾತ್ರವಲ್ಲದೆ ಗಿರಿಯಮ್ಮ ಮಧುರಭಕ್ತಿಯ ಭಾವಾಭಿವ್ಯಕ್ತಿಯ ಹಾಡುಗಳನ್ನೂ ಬರೆದಿದ್ದಾಳೆ ಭಕ್ತವತ್ಸಲನೆಂಬ ಒರುದು ಬಿಡದಿರು ದೇವ ಬಹು ಪರಾಕೆಲೊ ಮುರಾರಿ ಎನ್ನುತ್ತಾಳೆ ಒಂದು ಕಡೆ ತನ್ನ ಮನಸ್ಸನ್ನು ಮಾತು ಕೇಳುವಂತೆ ಮಾಡುವುದು ಹೇಗೆಂಬ ಯೋಚನೆ ಇನ್ನೊಂದು ಕೀರ್ತನೆಯಲ್ಲಿ

ಮನವೆನ್ನ ಮಾತ ಕೇಳದು ಮಂದ ಜ್ಞಾನದಿ।
ತನುವಿನಾಶೆಯ ಬಿಡಲೊಲ್ಲದು ॥ಪಲ್ಲ॥

ವನಜನಾಭನೆ ನಿನ್ನ ನಾಮ ಸ್ಮರಣೆ ಮಾಡದೆ
ಕಂಡ ಕಂಡೆಡೆಗೆ ಅಲೆಯುತಲಿದೆ
ಸಾಧು ಸಜ್ಜನರ ಸಂಗವ ಮಾಡಿ ಪರಾಗತಿ
ಆದರವನು ಮಾಡಲೊಲ್ಲದು

ಗಿರಿಯಮ್ಮನ ಕೀರ್ತನೇತರ ಕೃತಿಗಳನ್ನು ಇಲ್ಲಿ ಸಂಕ್ಷಿಪ್ತವಾಗಿ ಪರಿಚಿಲಿಸಬಹುದು ಕೃಷ್ಣಕೊರವಂಜಿಯಲ್ಲಿ ಶ್ರೀಕೃಷ್ಣನು ಕೊರವಿಯ ವೇಷ ಧರಿಸಿದ ಕಥೆ ಆಕರ್ಷಕವಾಗಿದೆ ರುಕ್ಮಿಣಿಯ ಅಣ್ಣ ರುಕ್ಮಿ ತನ್ನ ತಂಗಿಯನ್ನು ಜರಾಸಂಧನಿಗೆ ಕೊಡಬೇಕೆಂದು ಯೋಚಿಸುತ್ತಾನೆ ಕೃಷ್ಣ ಆಗ ಕೊರವಿಯ ರೂಪದಲ್ಲಿ ಬಂದು

ಆಕೆಗೆ ಧೈರ್ಯ ತುಂಬುತ್ತಾನೆ ಬ್ರಹ್ಮ ಕೊರವಂಜಿ ಕೂಡ ಕೃಷ್ಣಕೊರವಂಜಿಯನ್ನೇ ಹೋಲುತ್ತದೆ ಇದರಲ್ಲಿ ದೇವಕಿಯ ಗರ್ಭದಲ್ಲಿ ಹುಟ್ಟುವ ಭಗವಂತ ನ ಆಗವ ನ ವನ್ನು ಸೂಚಿಸಲು ಬ್ರಹ್ಮನೇ ಕೊರವಂಜಿಯ ರೂಪ ಧರಿಸಿ ಕಣಿ ಹೇಳಲು ಬರುತ್ತಾನೆ

ಈಕೆಯ ಲವಕುಶರ ಕಾಳಗ ಒಂದು ಹೊಸ ತರಹದ ಕಥೆಯನ್ನೊಳಗೊಂಡಿದೆ ಶೂರ್ಪನಖಿ ಕೊರವಂಜಿಯ ರೂಪದಲ್ಲಿ ಬಂದು ರಾವಣ ಚಿತ್ರ ಬರೆಯುವಂತೆ ಸೀತೆಯನ್ನು ಕೇಳುತ್ತಾಳೆ ಸೀತೆಗೆ ಇಷ್ಟವಿಲ್ಲದಿದ್ದರೂ ಬಲವಂತದಿಂದ ಬರೀ ಪಾದ ವನ್ನು ಮಾತ್ರ ಬರೆಯುತ್ತಾಳೆ ಉಳಿದದ್ದನ್ನು ಕೊರವಿ ತಾನು ಬರೆದು ಜೀವ ತುಂಬಿಸುತ್ತಾಳೆ ಆಗ ಆ ಚಿತ್ರ ರಾವಣನಾಗಿ ಕುಣಿಯತೊಡಗುತ್ತದೆ ಇದರಿಂದ ರಾಮ ಸೀತೆಯನ್ನು ಆಕ್ಷೇಪಿಸುತ್ತಾನೆ ಸೀತೆಯನ್ನು ಮತ್ತೆ ಕಾಡಿಗಟ್ಟುತ್ತಾನೆ ಈ ಚಿತ್ರದ ಕಲ್ಪನೆ ಹೊಸತು ಉಳಿದಂತೆ ಇದು ಜನಪದ ಮೂಲದ ಕಥೆ

ಉದ್ದಾಳಿಕನ ಕಥೆ ಮನುಷ್ಯನನ್ನು ವಿಧಿ ಹೇಗೆ ನಡೆಸುತ್ತದೆಂಬುದಕ್ಕೆ ಉದಾ ಹರಣೆಯಾಗಿದೆ ಇದರಲ್ಲಿ 447 ಪದ್ಯಗಳಿವೆ ಇದರ ಕಥನ ಕಲೆ ನೂತನ ವಾದಂಥದು

ವೈಷ್ಣವ ಕವಯಿತ್ರಿಯಾದ ಈಕೆ ಪರಮತ ಸಹನೆಯಿಂದ ಶಂಕರಗಂಡನ ಹಾಡು ಎಂಬ ಕಾವ್ಯವನ್ನು ಬರೆದಿರುವುದು ವಿಶೇಷ ಈ ಕಾವ್ಯದಲ್ಲಿ ರತಿ ಶಿವನ ತಂಗಿ ತಂಗಿಯನ್ನು ನೋಡಲು ಬಂದ ಶಿವನನ್ನು ಮನ್ಮಥ ಹಾಸ್ಯ ಮಾಡುತ್ತಾನೆ ಶಿವ ಅವನ ಗರ್ವಭಂಗ ಮಾಡುವುದೇ ಈ ಕಾವ್ಯದ ಪ್ರಧಾನ ವಸ್ತು

ಚಂದ್ರಹಾಸನ ಕಥೆ ಸು 350 ಪದ್ಯಗಳು ನಾಲ್ಕು ಸಂಧಿಗಳಲ್ಲಿ ಮೂಡಿ ಬಂದಿರುವ ಸಾಂಗತ್ಯ ಕೃತಿ ಲಕ್ಷ್ಮೀಶನ ಪ್ರಭಾವ ಈ ಕೃತಿಯಲ್ಲಿ ಅಲ್ಲಲ್ಲಿ ಕಾಣುತ್ತದೆ ಈ ಕೃತಿಯಲ್ಲಿ ಸ್ತ್ರೀ ಸಹಜವಾದ ಅನುಕಂಪೆ ಕರುಣಾಜನಕವಾದಂತಹ ಸನ್ನಿವೇಶಗಳಲ್ಲಿ ಉಕ್ಕಿ ಉಕ್ಕಿ ಹರಿದು ಕಾವ್ಯಸಿದ್ಧಿಯನ್ನು ಪಡೆದಿದೆ ತಂದೆತಾಯಿ ಗಳನು ಕಳೆದುಕೊಂಡ ಅನಾಥ ಚಂದ್ರಹಾಸನನ್ನು ನೋಡಿ ಅವನನ್ನು ಸಾಕುತ್ತಿದ್ದ ದಾಸಿ ಹೇಳುವ ಈ ಕೆಳಗಿನ ಮಾತುಗಳನ್ನು ಉದಾಹರಣೆಯಾಗಿ ನೋಡಬಹುದು

ದೇಶಾಧಿಪತಿಯ ಗರ್ಭದಿ ಬಂದು ನಿನಗೀಗ
ಹಾಸ ವ ವಸ್ತ್ರಗಳಿಲ್ಲ
ಬೀಸಿ ತೂಗುವರೆ ತೊಟ್ಟಿಲುಯಿಲ್ಲ ಎನುತಲಿ
ಬೇಸತ್ತು ಅಳಲುವಳೊಮ್ಮೆ

ಗಿರಿಯಮ್ಮನ ಹರಿಭಕ್ತಿ ಈ ಕ ವ್ಯದುದ್ದಕ್ಕೂ ವ್ಯಕ್ತವಾಗಿದೆ ಸೀತಾಕಲ್ಯಾಣ 87 ಪದ್ಯಗಳ ಸಂಗ್ರಹ ಕಾವ್ಯ ಜಯ ಜಯ ಎಂಬ ಸೊಲ್ಲಿನಿಂದ ಮುಕ್ತಾಯ ವಾಗುವ ಸಾಂಗತ್ಯಗಳಿಂದ ಕೂಡಿದೆ ಸೀತಾರಾಮ ಕಲ್ಯಾಣದ ವರ್ಣನೆಯೇ

ಮುಖ್ಯೋದ್ದೇಶವಾಗಿದ್ದರೂ ಈ ಕಾವ್ಯದಲ್ಲಿ ಆರಿಶಿಣ್‌ಣ್ಣೆ ಹಚ್ಚುವ ಸಂಭ್ರಮ ವೇ ಹೆಚ್ಚಾಗಿರುವಂತೆ ಕಾಣುತ್ತದೆ

ಗಿರಿಯಮ್ಮನ ಕೃತಿಗಳನ್ನು ಪರಿಶೀಲಿಸಿದಾಗ ಸರಳವೂ ಸ ಲುಭವೂ ಆದ ಶೈಲಿ ಈಕೆಯದೆಂದು ತಿಳಿಯುತ್ತದೆ ತೊಡಕಿನದಾದ ವರ್ಣನೆಗಳು ಅಲಂಕಾರಗಳು ಇಲ್ಲದೆ ದೆ ಶೀಯ ಛಂದಸ್ಸಿನಲ್ಲಿ ಬರೆದ ಈಕೆ ಸಾಮಾನ್ಯಜನರಿಗಾಗಿಯೇ ಕೃತಿ ರಚಿಸಿ ದಂತಹವಳು ಈಕೆಯ ಕೃತಿಗಳಲ್ಲಿ ಭಕ್ತಿಯ ತೀವ್ರತೆಯೆ ೀ ಹೆಚ್ಚಾಗಿ ಕ ಡು ಬರುತ್ತ ದೆಯೇ ಹೊರತು ವಿದ್ವತ್ತಲ್ಲ ಸಮಕಾಲೀನ ಸಮಾಜದ ಆಚಾರ ವಿಚಾರ ನಂಬಿಕೆ ಪದ್ಧತಿಗಳು ಕ ವ್ಯದಲ್ಲ ಸಂದರ್ಭೋಚಿತವಾಗಿ ಸಮಾವೇಶಗೊಂಡಿವೆ ಈಕೆಯ ಕಾವ್ಯಗಳಲ್ಲಿ ನೇರ ನಿರೂಪಣೆ ಸ್ವಾರಸ್ಯಕರವಾದ ಸಂಭಾಷಣೆಗಳಿವೆ ಹೃದಯ ವಂತಿಕೆ ಮತ್ತು ಸಾಮಾಜಿಕ ಪ್ರಜ್ಞೆಯಿ ರುವ ಈಕೆ ವೈಷ್ಣವ ಭಕ್ತಿಪಂಥದ ಕೃತಿಕಾರ ರಲ್ಲಿ ಪ್ರಮುಖಸ್ಥಾನ ಪಡೆದಿದ್ದಾಳೆ

## ಹರಪನಹಳ್ಳಿ ಭೀಮವ್ವ

ದಾಸಸಾಹಿತ್ಯದ ಪ್ರಮುಖ ಕವಯಿತ್ರಿಯರಲ್ಲಿ ಭೀಮವ್ವ ಒಬ್ಬಳು ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲೂಕಿನ ನಾರಾಯಣದೆ ವರ ಕೆರೆಯ ಲ್ಲಿ ಈಕೆ ಜನ್ಮಿಸಿದಳು ಚಿಕ್ಕ ವಯಸ್ಸಿನಲ್ಲೇ ಭಿ ಮವ್ವ ಅನೇಕ ಪವಾಡಗಳನ್ನು ಮೆರೆದಳೆಂದು ಹೆ ಳುತ್ತಾರೆ ಚಿಕ್ಕಂದಿನಲ್ಲೇ ಪುರಾಣ ಪ್ರವಚನಗಳನ್ನು ಕೇಳಿ ಸಂದರ್ಭಕ್ಕೆ ತಕ್ಕಂತೆ ಸ್ಪಂದಿಸುತ್ತಿದ್ದ ಳೆಂದೂ ಹೇಳ ತ್ತಾರೆ ಈಕೆಗೆ ಹನ್ನೊಂದು ವರ್ಷಕ್ಕೇ ನಲವತ್ತೈದು ವರ್ಷದ ಮ ನಿಯಪ್ಪನ ಮೂರನೆಯ ಹೆಂಡತಿಯಾಗಿ ವಿವಾಹವಾದಳು ವಿವಾಹಾನಂತರ ಕೃಷ್ಣಾಬಾಯಿಯಾದಳು ಗಂಡನ ಊರಾದ ರಾಯದುರ್ಗ ತಾಲೂಕಿನ ಹಿರೇಹಾಳ ಗ್ರಾಮದಿಂದ ದಂಗೆಗೆ ಭಯಪಟ್ಟು ನಾಯಕರ ರಾಜಧಾನಿಯಾದ ಹರಪನಹಳ್ಳಿಗೆ ಹೊ ದರು ತನ್ನ 35ನೆಯ ವಯಸ್ಸಿನಲ್ಲಿ ಭಿ ಮವ್ವ ವಿಧವೆಯಾದಳು ಅನಂತರ ಆಕೆಯ ಜೀವನಮಾರ್ಗವೇ ಬದಲಾಯಿತು ಅನಕ್ಷರಸ್ಥೆಯಾದ ಈಕೆಗೆ ಕಾವ್ಯ ನಿರ್ಮಾಣ ಶಕ್ತಿ ಬಂದದ್ದೇ ಒಂದು ಪವಾಡ ! ಏನಾದರೂ ಬರೆಯಬೆ ಕೆಂದು ಪ್ರೇರಣೆಯಾದಾಗ ಪರಮಾತ್ಮನೇ ಎದುರು ನಿಂತು ಆ ಕಥೆಯ ರೂಪದಲ್ಲಿ ಕಾಣಿಸಿ ಕೊಳ್ಳುತ್ತಿದ್ದನಂತೆ ! ಒಮ್ಮೆ ನಾರದ ವಿ ಣೆಹಿಡಿದು ಶ್ರೀಕೃಷ್ಣನನ್ನು ಕರೆದ ಕೊಂಡು ಬಂದನಂತೆ ! ಇದೇನೆಂದು ಭಿ ಮವ್ವ ಕೇಳಿದಾಗ ಸತ್ಯಭಾಮ ತನಗೆ ಕೃಷ್ಣನನ್ನು ದಾನಮಾಡಿದಳೆಂದು ಹೇಳಿದನಂತೆ ! ಇದೇ ಪ್ರಸಂಗ ಕೃಷ್ಣದಾನವ್ರತ ದಲ್ಲಿ ನಿರೂ ಪಿತವಾಗಿರುವುವಂತೆ ! ಈಕೆಗೆ ನಾರದನೇ ಕನಸಿನಲ್ಲಿ ಬಂದು ಭಿ ಮೇಶಕೃಷ್ಣ ಎಂಬ ಅಂಕಿತ ಕೊಟ್ಟನಂತೆ ! ಆದರೆ ಇವುಗಳಲ್ಲಿ ಸ್ವಲ್ಪ ಸತ್ಯಾಂಶವಿದ್ದರೂ ಅದನ್ನು ಜನ ಇನ್ನಷ್ಟು ಬೆಳೆಸಿ ದೊಡ್ಡದು ಮಾಡುತ್ತಾರೆ ತೌರು ಮನೆಯ ಭೀಮ ಅತ್ತೆಮನೆಯ ಕೃಷ್ಣಗಳೆರಡೂ ಸೇರಿ ಭಿ ಮೇಶಕೃಷ್ಣ ಆಯಿತೆಂದು ಹೇಳುತ್ತಾರೆ

ಭಿ ಮವ್ವ 143 ಸ್ವಾ ಹಾಡುಗಳನ್ನೂ ನಳಚರಿತ್ರೆ ಮುಯ್ಯದ ಹಾಡು ಪತಿದಾನಕೊಟ್ಟ ಹಾಡು ಶಕುಂತಲೆ ದುಷ್ಯಂತ ಮಹಾರಾಜನ ಹಾಡು ರತಿಕಲ್ಯಾಣ ಸುಭದ್ರಾ ಕಲ್ಯಾಣ ಮುಂತಾದ ದೊಡ್ಡ ಹಾಡುಗಳನ್ನೂ ರಚಿಸಿದ್ದಾಳೆ (ಹರಪನ ಹಳ್ಳಿ ಭಿ ಮವ್ವನ ಕೃತಿಗಳು ಸಂ ಡಾ॥ ಟಿ ಎನ್ ನಾಗರತ್ನ)

ಈಕೆಯ ಕೃತಿಗಳಲ್ಲಿ ಕಥನಕಾವ್ಯಗಳೇ ಹೆಚ್ಚು ಇವುಗಳಿಗೆ ರಾಮಾಯಣ ಭಾರತ ಮತ್ತು ಭಾಗವತಗಳಿಂದ ವಸ್ತುವನ್ನು ಆರಿಸಿಕೊಂಡಿದ್ದಾಳೆ ಮಂಗಳಗೌರೀ ವ್ರತ ಸ್ತುತಿಮಣಿಮಾಲಿಕೆ ಶುಕ್ರವಾರ ಶನಿವಾರದ ಹಾಡುಗಳು ಬಾಗಿಲು ಕಟ್ಟುವ ಹಾಡುಗಳು ಕೋಲ್ಹಾಡು ಹಸೆಕರೆಯುವ ಹಾಡು ಮುಂತಾದುವು ಇವಳ ಹಾಡು ಗಳಲ್ಲಿವೆ

ಧರ್ಮರಾಜನಿಗೆ ಬೃಹದಶ್ವನೆಂಬ ಮುನಿಹೇಳಿದ ನಳನಕಥೆ ಭಿ ಮವ್ವ ಉವೆ ಯ ಸುತನ ಚರಣಕಮಲಕೆ ನಮಿಸಿ ಪೇಳುವೆ ನಾನು ಹರುಷದಿ ರಮೆಯ ರವ ಣನ ಕರುಣದಿಂದಲಿ ನಳನ ಕಥೆಗಳನು ಎಂದು ಈ ಕೃತಿಯನ್ನು ಆರಂಭಿಸಿದ್ದಾಳೆ ದೂತನ ಪಾತ್ರಕ್ಕೆ ಹಂಸಪಕ್ಷಿಯನ್ನು ಬಳಸಿಕೊಂಡಿದ್ದಾಳೆ

ಜೂಜಿನಲ್ಲಿ ಸೋತ ನಳ ದಮಯಂತಿಯೊಡನೆ ಕಾಡಿಗೆ ಹೋಗುತ್ತಾನೆ ನಳನ ಮಾತನು ಕೇಳದೆ ದಮಯಂತಿ ಆತನ ಹಿಂದೆಯೇ ಕಾಡಿಗೆ ಬಂದಾಗ ಅವಳನ್ನು ತಂದೆಯ ಮನೆಗೆ ಕಳುಹಿಸಬೇಕೆಂದುಕೊಂಡು ರಾತ್ರಿ ಕಾಡಿನಲ್ಲಿ ಅವಳನ್ನು ಬಿಟ್ಟು ಹೋದರೆ ತಾನೇ ಹೋಗುತ್ತಾಳೆ ಎಂದು ಚಿಂತಿಸುವ ನಳನ ಮನಸ್ಸಿನ ಡೋಲಾಯ ಮಾನ ಸ್ಥಿತಿಯನ್ನು ಸಹಜಸುಂದರವಾಗಿ ಚಿತ್ರಿಸುತ್ತಾಳೆ ಭಿ ಮವ್ವ

> ಅತ್ತ ಹೋಗುವವನು ಇತ್ತ ಬರುವೋನೊ ಭರದಿಂದ ಕೋಪ ಲಾಂಗಿ
> ಕೊಟ್ಟಿಲ ತೂಗುವಂದದಿ ತಿರುಗಾಡಿದಾ

ಶೃಂಗಾರ ಕರುಣ ಭಕ್ತಿ ವೀರರಸಗಳ ಚಿತ್ರಣ ಮ ನೋಹರವಾಗಿ ಕಥೆಯ ಉದ್ದಕ್ಕೂ ಬಂದಿದೆ ಸಂದರ್ಭಾನುಸಾರವಾಗಿ ಅಲಂಕಾರ ಉಪಮೆ ಕವಿಸಮಯ ವನ್ನು ಬಳಸಿ ತುಂಬ ಚಮತ್ಕಾರದಿಂದ ಕಾವ್ಯ ಹೆಣೆದಿದ್ದಾಳೆ

ಮುಯ್ಯದ ಹಾಡು ರುಕ್ಮಿಣಿ ಸತ್ಯಭಾಮೆಯರು ಕುಂತಿಯ ಸೊಸೆಯ ರಿಗೆ ಮ ಯ್ಯಿಕೊಟ್ಟು ಬರುವುದು ಇವರ ಪ್ರಧಾನವಸ್ತು ಕೃಷ್ಣನ ಅಂಗನೆಯರ ವರ್ಣನೆ ಗಳು ವಿಪುಲವಾಗಿ ಮೂಡಿಬಂದಿವೆ ಈ ಹಾಡಿನಲ್ಲಿ ಮಧ್ಯೆ ಮಧ್ಯೆ ಶ್ರೀಕೃಷ್ಣನ ಅವತಾರಗಳ ವರ್ಣನೆ ಸಾಹಸಗಳ ವರ್ಣನೆಗಳು ಇವೆ ಈ ಹಾಡಿನ ಕೊನೆಯಲ್ಲಿ ದಶಾವತಾರದ ವರ್ಣನೆ ಇದೆ

ಪತಿದಾನಕೊಟ್ಟಹಾಡು ಒಂದು ಸುಂದರ ಕಲ್ಪನೆ ಇದಕ್ಕೆ ಕೃಷ್ಣದಾನ ವ್ರತ ಎಂದೂ ಹೆಸರು ಹೆಸರೇ ಸೂಚಿಸುವಂತೆ ಸತ್ಯಭಾಮೆ ತನ್ನ ಪತಿಯನ್ನು

ದಾನ ಕೊಡ ವುದೇ ಇದರ ಮುಖ್ಯ ಕಥಾ ವಸ್ತು ಕಥೆಯ ಪ್ರಾರಂಭದಲ್ಲಿ ಗಣಪತಿ ಯನು ಪ್ರಾರ್ಥಿಸಿದ ಮೇಲೆ ರತಿ ಪತಿ ಪಿತನದಾನವ ಕೊಟ್ಟ ಕಥೆಗಳನು ಅತಿ ಹರುಷದಲಿ ಪೇಳ್ವೆನು ಎನ್ನುತ್ತಾಳೆ ಭಿ ಮವ್ವ

ನಾರದನ ಸಂಚು ಭಾಮೆಯ ಗರ್ವ ರ ಕ್ಮಿಣಿಯ ಹಿರಿಮೆ ತುಳಸಿಯ ಮಹಿಮೆ ಮ ಂತಾದ ವು ಈ ಕೃತಿಯಲ್ಲಿ ಬಣ್ಣಿಸ್ಪಟ್ಟಿವೆ

ಶಕ ಂತಲೆ ದ ಷ್ಯಂತ ಮಹ ರಾಜನ ಹಾಡು ಕೂಡ ವ ಹಾಭಾರತದ ಕಥೆ ಕಾಳಿದಾಸನ ಅಭಿಜ್ಞಾನ ಶಾಕುಂತಲದ ಕಥೆಯನೂ ಜೋಡಿಸಿ ತನ್ನದೇ ಆದ ರೀತಿ ಯಲ್ಲಿ ಭೀಮವ್ವ ಈ ಕಥೆಯನ್ನು ನಡೆಸಿಕೊಂಡು ಬಂದಿದ್ದಾಳೆ

ರತಿಕಲ್ಯಾಣದಲ್ಲಿ ದಲ್ಲಿ ಭೀಮವ್ವ ದ್ರೌಪದಿಗೂ ಕ ಷ್ಣಭಕ್ತಿಗೂ ಸ್ಥಾನವನ್ನು ಕಲ್ಪಿಸಿ ಹೊಸ ರೀತಿಯ ಲ್ಲಿ ಬರೆದಿದ್ದಾಳೆ ಮಗ ಮನ್ಮಥನಿಗೆ ಮದ ವೆ ಮಾಡಲು ದ್ರೌಪದಿಯ ಸಹಾಯ ಕೋರಿದಾಗ ದ್ರೌಪದಿ ರತೀ ಕಲ್ಯಾಣಕ್ಕೆ ಎಲ್ಲ ರೀತಿಯ ಸಿದ್ಧತೆಗಳನೂ ಮಾಡುತ್ತಾಳೆ

ಸ ಭದ್ರಾಕಲ್ಯಾಣ ವೂ ಕೃಷ್ಣನ ಕೃಪೆಯಿ ಂದ ನಡೆಯುವ ಇನ್ನೊಂದು ಕಥೆ ಅಜ ನನು ಯತಿವೇಷದಲ್ಲಿ ಬಂದು ಸುಭದ್ರೆಯ ನ್ನು ಮದುವೆಯಾಗುವ ಸ್ವಾರಸ್ಯಕರ ವಾದ ಕಥೆ ಇದರಲ್ಲಿದೆ

ಉಳಿದ ಹಾಡುಗಳ ಕಥಾಂಶವಿರುವ ಮತ್ತು ಇಲ್ಲದ ಹಲವು ಹಾಡುಗಳನ್ನೂ ಭೀಮವ್ವ ರಚಿಸಿದ್ದಾಳೆ ರುಕ್ಮಿಣಿ ಸತ್ಯಭಾಮೆಗೆ ಹತ್ತು ಅವತಾರಗಳನು ವರ್ಣಿಸುವ ಒಂದು ಹಾಡು ಸಂಭಾಷಣೆಯ ರೀತಿಯ ಲ್ಲಿ ಇದೆ

ಅಕ್ಕರವುಳ್ಳ ನಮ್ಮಕ್ಕ ರುಕ್ಮಿಣಿ ಕೇಳೆ
ರಕ್ಕಸಾಂತಕ ಕೃಷ್ಣ ಮತ್ತೆಲ್ಲಿ ಪೋದ ಎಂದು ಸತ್ಯಭಾಮೆ ಕೇಳಿದಾಗ—
ಸತ್ಯಭಾಮೆಯೆ ನಿನ್ನ ಚಿತ್ತದ್ವಲ್ಲಭ
ನೀರೊಳು ಪೊಕ್ಕು ವೇದವ ತಂದು ಪುತ್ರಗಿಡಹೋದ ಎಂದು ರುಕ್ಮಿಣಿ

ಉತ್ತರ ನೀಡುತ್ತಾಳೆ । ಇದೇ ರಿ ತಿ ಹಾಡು ಮುಂದುವರಿಯ ತ್ತದೆ

ಕ ಷ್ಣಲೀಲೆಗಳನ್ನು ಭಿ ಮವ್ವ ಇನೂ ಂದು ಹಾಡಿನಲ್ಲಿ ವರ್ಣಿಸಿದ್ದಾಳೆ ಭೀಮವ್ವನ ಅಂತರಂಗದ ಪ್ರತಿಧ್ವನಿಯಂತಿರುವ ಕೆಳಗಿನ ಹಾಡಿನಲ್ಲಿ ವ ಧುರ ಭಾವ ಗಳಿವೆ

ಹರಿ ಹರಿ ಹರಿ ಎನ ದೆ ಈ ನಾಲಿಗಿ
ನ್ನಿರುವುದ್ಯಾತಕೆ ಸ ಮ್ಮನೆ
ಸರಸಿಜಾಕ್ಷನ ದಿವ್ಯ ಸಾಸಿರನಾಮ ಬಿಟ್ಟು

ಪರರವಾರ್ತೆಲಾಸಕ್ತಿ ಪಾಮರನಾಗುವುದ್ಯಾಕೆ
ಕಲ್ಲು ಹಿತ್ತಾಗಿ ರಂಗವಾಲಿ ಎನಿಸುವುದು

ಭೀಮವ್ವನ ಕೃತಿಗಳು ಕಥನ ಕಲೆ ಮತ್ತು ವರ್ಣನಾ ನೈಪುಣ ದಿಂದ ಕೂಡಿ ಸರಳಶೈಲಿಯಿಂದ ಸಾಮಾನ್ಯ ಜನರನೂ ಆಕರ್ಷಿಸ ತ್ತವೆ ಕನ್ನಡದಲ್ಲಿ ಇಷ್ಟೊಂದು ಕೃತಿಗಳನ್ನು ರಚಿಸಿದ ಕವಯಿತ್ರಿಯರು ಬಹಳ ವಿರಳ ಅಥವಾ ಇಲ್ಲವೇ ಇಲ್ಲ ಎನ್ನ ಬಹುದು ಕೃತಿಯ ವೈವಿಧ್ಯದಲ್ಲಿ ಭೀಮವ್ವನನ್ನು ಮೀರಿಸ ವವರಿಲ್ಲ ಈ ದೃಷ್ಟಿ ಯಿಂದ ಭೀಮವ್ವ ಚಿರಸ್ಮರಣೀಯ ಳಾಗಿದ್ದಾಳೆ 1822 ರಿಂದ 1902ರ ವರೆಗೆ ಬಾಳಿದ ಭಿ ಮವ್ವ ಕನ್ನಡದ ಜನಪ್ರಿಯ ಕವಯಿತ್ರಿಯ ರಲ್ಲಿ ಒಬ್ಬಳು

## ಇತರ ಕವಯಿತ್ರಿಯರು

ಇದ ವರೆಗೂ ಹೇಳಿದ ಮಹಿಳಾ ಕೃತಿಕಾರರನ್ನು ಬಿಟ್ಟರೆ ವಿಸ್ಮೃತವಾಗಿ ಬರ ವಣಿಗೆ ನಡೆಸಿದವರಾಗಲಿ ಅತ್ಯಂತ ಪ್ರತಿಭಾಸ್ವತರಾದವರಾಗಲಿ ಕಾಣ ಬರುವುದಿಲ್ಲ 1850 ರಿಂದ ಈಚಿನ ಕಾಲದಲ್ಲಿ ಕೆಲವರು ವೈಷ್ಣವ ಪಂಥದಲ್ಲಿ ಕೃತಿರಚನೆ ಮಾಡಿ ದ್ದಾರೆ ಡಾ॥ ಸರೋಜಿನಿ ಮಹಿಷಿಯವರು ಅಂಥವರ ಬಗ್ಗೆ ವಿವರಗಳನು ಕೊಟ್ಟಿ ದ್ದಾರೆ (ಕರ್ನಾಟಕದ ಕವಯಿತ್ರಿಯರು)

**ಚಿ ರಾ ಚೆಲ್ಲಮ್ಮ** (1850) ಈಕೆ ಕೆಲವು ಕೃತಿಗಳನ್ನು ರಚಿಸಿದ್ದಾಳೆ ಕೃಷ್ಣಾತೀರದಲ್ಲಿರುವ ಚಿರುಕ ಪಲ್ಲಿ ಎಂಬ ಗ್ರಾಮದಲ್ಲಿ ರಾಮಯಾರ್ಯ ಲೌಕಿಕ ವಿಹಾರದಿ ವೇತನಾಂಕಿತನಾಗಿ ಕರ್ನಾಟಕದಿಯಿರುತಿರಲು ಚೆಲ್ಲಮ್ಮ ಹುಟ್ಟಿದಳು

ಚೆಲ್ಲಮ್ಮ ರಚಿಸಿರುವ ರುಕ್ಮಿಣೀ ಪರಿಣಯ ಪ್ರಸಿದ್ಧ ಪೌರಾಣಿಕ ವಸ್ತುವನ್ನು ಒಳಗೊಂಡ ಕೃತಿ ಇದಕ್ಕೆ ಹೊಸ ಮೆರಗನ್ನು ಕೊಟ್ಟು ಲಲಿತ ಷಟ್ಪದಿಯಲ್ಲಿ ಈಕೆ ರಚಿಸಿದ್ದಾಳೆ ಇದರಲ್ಲಿ ಶ್ರೀಕೃಷ್ಣನ ಲೀಲಾ ವಿಭೂತಿಯನ್ನು ನಿರೂಪಿಸಿದ್ದಾಳೆ

ರಾಜಕಳಾನಿಧಿ ಈ ಕೃತಿಗಳಲ್ಲಿ ವಿಶಿಷ್ಟವಾದಂಥದು ಗೃಹಿಣೀಧರ್ಮ ಜನ್ಮ ರಾಜಕೀಯ ರಾಜ್ಯಾಂಗ ಅಮಾತ್ಯ ಅರ್ಥ ಕಾಲ ಕರ್ತವ್ಯ ಮುಂತಾದ 16 ಪ್ರಕರಣಗಳಿಂದ ಕೂಡಿರುವ ಈ ಕೃತಿ ಚೆಲ್ಲಮ್ಮನ ಸರ್ವತೋಮುಖ ಪಾಂಡಿತ್ಯವನ್ನು ತಿಳಿಸುತ್ತದೆ

ಪಾರಿಜಾತಾಪಹರಣ ಈಕೆಯಿಂದ ರಚಿತವಾದ ಒಂದು ಕಾವ್ಯನಾಟಕ ಇದ ರಲ್ಲಿ ಐದು ಅಂಕಗಳಿವೆ ಕೃಷ್ಣನು ಭಾಮೆಗಾಗಿ ಇಂದ್ರನ ವನದಿಂದ ಪಾರಿಜಾತವನ್ನು ಅಪಹರಿಸಿದ ಕಥೆಯೇ ಇದರ ಕಥಾವಸ್ತು ಸಂಸ್ಕೃತ ನಾಟಕಗಳ ಪರಂಪರೆಯ ನ್ನೇ ಈಕೆ ಅನುಸರಿಸಿದ್ದಾಳೆ

ಚೆಲ್ಲಮ್ಮನ ರಚನೆಗಳಲ್ಲಿ ಪ್ರಸಾದಗುಣವಿದೆ ಕೆಲವು ಕಡೆ ಹೊಸ ಹೊಸ ಉಪಮೆಗಳನ್ನು ಬಳಸಿದ್ದಾಳೆ ರುಕ್ಮಿಣಿಯ ಸೌಂದರ್ಯದ ವರ್ಣನೆಯನ್ನು ಮಾಡು

ವಾಗ ತುಂಬಿಯನು ಜರಿದವು ಸತಿ ಕ ರುಳಂಬುಜದ ಡಾಳವನು ವದನವು ಬೆಂಬಿಡಿ ದವಾ ಶ್ರುತಿಗಳುರೆ ಶ್ರೀಕ ರದಾಕ ತಿಯಾ ಎಂದಿದ್ದಾ ಳೆ ಚೆಲ್ಲಮ್ಮ

ಈಕೆಯ ಕಾವ್ಯಗಳಲ್ಲಿ ಪಾಂಡಿತ್ಯವೂ ರಸಭರಿತವಾದ ಭಾವ‍ಗಳೂ ಇವೆ ಭಕ್ತಿಯೇ ಈಕೆಯ ಕಾವ್ಯಗಳ ಪ್ರಧಾನರಸ ಈಕೆಯ ಕೃತಿಗಳಲ್ಲಿ ವೈವಿಧ್ಯತೆಗಳು ಕಂಡು ಒರುತ್ತವೆ

## ಗಣಪಕ್ಕ (1870)

ಕಳೆದ ಶತಮಾನದ ವೈಷ್ಣವ ಪಂಥದ ಕವಯಿತ್ರಿಯಾದ ಈಕೆ ಉತ್ತರ ಕನ್ನಡ ಜಿಲ್ಲೆಯ ಗೋಕರ್ಣದವಳು ಈಕೆ ಚಿಕ್ಕ ವಯಸ್ಸಿನಿಂದಲೇ ಕಾವ್ಯ ರಚನೆಯಲ್ಲಿ ಆಸಕ್ತಿ ತೋರಿಸುತ್ತಿದ್ದಳಂತೆ ಈಕೆ ಅಕ್ಷರಸ್ಥಳು ರಾಮಭಕ್ತರಾದ ಗಣಪಭಟ್ಟರು ಈಕೆಯ ತಂದೆ ತಾಯಿ ಪಾರ್ವತಿ ಇವರ ವ ನೆಯಲ್ಲಿ ಯಾವಾಗಲೂ ಭಜನೆ ಕೀರ್ತನೆ ಸಂತರ್ಪಣೆಗಳು ನಡೆಯುತ್ತಿದುದರಿಂದ ಈಕೆಗೆ ಸಹಜವಾಗಿ ದೈವಭಕ್ತಿ ಬೆಳೆಯಿತು ಹನ ರಡನೆಯ ವಯ ್ಸನಲ್ಲಿ ನ ಗಪ್ಪ ಸಣ್ಣ ಭಡತಿ ಎಂಬ ವವನ ಜೊತೆ ಈಕೆಯ ವಿವಾಹವಾಯಿತು ಬಡತನದ ಸಂಸಾರವಿದ್ದರೂ ಈಕೆ ಕಾವ್ಯ ರಚಿ ಸುವುದನು ಅಭ್ಯಾಸ ಮಾಡಿಕೊಂಡಳು ಗೊ ಕರ್ಣ ಮಹಾತ್ಮೆ ಕೃಷ್ಣನ ಹುಟ್ಟು ಕೃಷ್ಣಲೀಲೆ ಕೃಷ್ಣನಹ ಟ್ಟು ಯಕ್ಷಗಾನ ಅನಂತನ ಕಥೆ ತ ಳಸೀ ಮಹಾತ್ಮೆ ಆರತಿ ಪದಗಳ ಮದುವೆಯ ಹಾಡು ವ ಂತಾದ ಕೃತಿಗಳನ್ನು ರಚಿಸಿದ್ದಾ ಳೆ ಗಣಪಕ್ಕ

ಗೋಕರ್ಣ ಮಹಾತ್ಮೆ ಗೋಕರ್ಣದ ಸ್ಥಳಪುರಾಣವನು ತಿಳಿಸುವಂತಹ ಹಾಡಿನ ರೂಪದಲ್ಲಿರುವ ಕಥೆ ರುಕ್ಮಿಣಿ ಪರಿಣಯ ದ ಕಥೆಯನ್ನೂ ಈಕೆ ಬರೆ ದಿದ್ದರೂ ಸಂಪೂರ್ಣ ವಾಗಿ ದೊರೆತಿಲ್ಲವೆಂದಿದ್ದಾರೆ ಡಾ॥ ಸರೋಜಿನಿ ಮಹಿಷಿಯವರು ಈಕೆಯ ಬಿ ಗರ ಹಾಡುಗಳು ವಿನೋದ ಪ್ರಸಂಗಗಳ ದ ಬಿ ಗರನ ಜರಿಯುವ ಪದ ಗಳವು ದೇವರ ನಿಂದಾಸ್ತುತಿಯ ವರ್ಣನೆಗಳೂ ಈ ಹಾಡಿನಲ್ಲಿರುತ್ತವೆ ಕೃಷ್ಣನ ಹುಟ್ಟು ಚಿಕ್ಕ ಕೃತಿಯಾದರೂ ದ ಷ್ಟ ಶಿಕ್ಷಣ ಶಿಷ್ಟ ರಕ್ಷಣೆಗಾಗಿ ಕೃಷ್ಣನ ಅವತಾರ ವಾದ ವಿಷಯವನ್ನು ಸುಂದರವಾಗಿ ಹೇಳುವಂತಹ ಕೃತಿ ಇದನ್ನೇ ವಸ್ತುವನ್ನಾಗಿ ವುಳ್ಳ ಒಂದು ಯ ಕ್ಷಗಾನವನ್ನೂ ಈಕೆ ರಚಿಸಿದ್ದಾಳೆ

## ಸುಂದರಾಬಾಯಿ (1875)

ಧಾರವಾಡ ತಾಲ್ಲೂಕಿನ ಹೆಬ್ಬಳ್ಳಿಯ ಶ್ರೀಮಂತ ಜಹಗಿ ರದ ರರ ಮನೆತನ ದವಳು ಈಕೆ ಬಾಲವಿಧವೆಯಾದ ಸುಂದರಾಬಾಯಿ ಮಾವಂದಿರಾದ ಶ್ರೀ ಸತ್ಯ ಪರಾಕ್ರಮ ಸ್ವಾಮಿಗಳಿಂದ ಧರ್ಮಕಾರ್ಯಗಳ ದೈವಭಕ್ತಿಯ ಪ್ರೇರಣೆ ಪಡೆದಳು

ದಾಸವ ಥದ ಕವಯತ್ರಿಯರು ಸಾಮಾನ್ಯವಾಗಿ ಸ್ವೀಕರಿಸಿದ ವಸ್ತುಗಳನ್ನೇ ಈಕೆಯೂ ಕಾವ್ಯರೂಪಕ್ಕಿಳಿಸಿದ್ದಾಳೆ ಶ್ರೀ ವೆಂಕಟೇಶಾ ಬೆಟ್ಟದೊಡೆಯ ಶ್ರೀ

ವೆಂಕಟೇಶಾ ಎಂಬ ಕಾವ್ಯಮುದ್ರಿಕೆಯಿಂದ ಈಕೆ ಕೃತಿಗಳನ್ನು ರಚಿಸಿದ್ದಾಳೆ. ಕೃಷ್ಣನ ಹುಟ್ಟು, ರುಕ್ಮಾಂಗದ ಚರಿತ್ರೆ, ಸುಭದ್ರಾಮುಯ್ಯ, ರುಕ್ಮಿಣಿ ಮುಯ್ಯ, ರುಕ್ಮಿಣೀ ಪರಿಣಯ, ಸುಭದ್ರಾಕಲ್ಯಾಣ, ಶುಕ್ರವಾರ–ಶನಿವಾರ ಗೌರಿಯ ಹಾಡುಗಳು ಮುಂತಾದವನ್ನು ಈಕೆ ರಚಿಸಿದ್ದಾಳೆ. ರುಕ್ಮಿಣೀ ಸ್ವಯಂವರದಲ್ಲಿ ಕವಯಿತ್ರಿ ತಾನೇ ಕಥಾನಾಯಿಕೆಯೆಂದು ಭಾವಿಸಿಕೊಂಡು ಕೃತಿ ರಚಿಸಿದಂತೆ ತೋರುತ್ತದೆ. ರುಕ್ಮಾಂಗದ ಚರಿತೆ ಒಬ್ಬ ಭಾಗವತನ ಚರಿತ್ರೆ. ಏಕಾದಶಿಯ ವ್ರತವನ್ನು ಎಲ್ಲರೂ ಆಚರಿಸಬೇಕೆಂದು ಹೇಳುವುದೇ ಇಲ್ಲಿನ ಪ್ರಧಾನ ವಿಷಯ. ಕೃಷ್ಣನ ಹುಟ್ಟು, ಈ ವಿಷಯವನು ಕುರಿತು ಅನೇಕರು ಕಾವ್ಯ ರಚಿಸಿದ್ದಾರೆ. ಕಥೆಯಲ್ಲಿ ಹೆಚ್ಚಿನ ವ್ಯತ್ಯಾಸಗಳೇನೂ ಇಲ್ಲದಿದ್ದರೂ ಈಕೆಯ ಶೈಲಿಯಲ್ಲಿ ವೈವಿಧ್ಯವಿದೆ. ಸರಳ ಶೈಲಿ, ನೇರ ನಿರೂಪಣೆ, ಪರಿಚಿತ ಕಥಾವಸ್ತು, ಮೃದುಮಧುರ ನೀತಿ ವಾಕ್ಯಗಳು ಈಕೆಯ ಕಾವ್ಯಗುಣಗಳು.

## ಪೆನ್ನಿ ಲಕ್ಷ್ಮೀಬಾಯಿ (1880)

ಉತ್ತರ ಕನ್ನಡ ಜಿಲ್ಲೆಯ ಗೋಕರ್ಣದ ರಾವ ಭಟ್ಟರೆಂಬ ವೈದಿಕರ ಮಗಳಾದ ಈಕೆ ದೇವರನಾಮಗಳನು ರಚಿಸಿದ್ದಾಳೆ. ಈಕೆಗೆ ಅಲ್ಪ ಸ್ವಲ್ಪ ವಿದ್ಯಾಭ್ಯಾಸವೂ ಇತ್ತಂತೆ. ಗೋಕರ್ಣದ ಮನೆಮನೆಯಲ್ಲೂ ಈಕೆಯ ಹಾಡುಗಳು ಪ್ರಚಾರದಲ್ಲಿವೆ. ಬಹಳಮಟ್ಟಿಗೆ ಆಡುಮಾತನ್ನೇ ತನ್ನ ಹಾಡುಗಳಲ್ಲಿ ಬಳಸಿರುವ ಈಕೆಯ ಶೈಲಿ ತುಂಬ ಸರಳ. ಈಕೆ ತನ್ನ ಹಾಡುಗಳಲ್ಲಿ ಒಳ್ಳೆಯ ಶಬ್ದ ಚಿತ್ರಗಳನ್ನು ಬಳಸಿ ಕಾವ್ಯ ಸುಂದರವಾಗುವಂತೆ ಮಾಡಿದ್ದಾಳೆ.

## ಶಾಂತಿಬಾಯಿ (1880)

ಶಿವಮೊಗ್ಗೆಯ ಸಾಗರದ ಕೊಪ್ಪ ವೆಂಕಟೇಶಯ್ಯನವರ ಮಗಳು ಈಕೆ. ಜೀವನದಲ್ಲಿ ಅನೇಕ ಆಘಾತಗಳಿಗೆ ಸಿಕ್ಕಿದ ಶಾಂತಿಬಾಯಿಗೆ ಪುಟ್ಟಯ್ಯನೆಂಬ ಸಾಧುಗಳ ಪರಿಚಯದಿಂದ ಪರಮಾರ್ಥ ಚಿಂತನೆಯಲ್ಲಿ ಮನಸ್ಸು ತೊಡಗಿತು. ಇಹಲೋಕದ ಪರಿವೆಯೇ ಇಲ್ಲದೆ ಎಲ್ಲವನ್ನೂ ಮರೆತು ಗಂಟೆಗಟ್ಟಲೆ ಧ್ಯಾನ ಮೌನದಲ್ಲಿ ಕೂರುತ್ತಿದ್ದಳು. ಈಕೆ ಕನ್ನಡ ಮರಾಠಿಗಳೆರಡರಲ್ಲೂ ಪದಗಳನ್ನು ರಚಿಸಿದ್ದಾಳೆ. ಶಾಂತಿಪಾಲಿಪ ಗುರು ಎಂಬ ಅಂಕಿತದಿಂದ ಹಲವು ಕೀರ್ತನೆಗಳನ್ನು ರಚಿಸಿದ್ದಾಳೆ. ಇವುಗಳಲ್ಲಿ ಬಹುಪಾಲು ಭಕ್ತಿಪರವಾದ ವೈರಾಗ್ಯ ಕೀರ್ತನೆಗಳು.

## ಓರಬಾಯಿ ಲಕ್ಷ್ಮೀದೇವಮ್ಮ *(1890)*

ಬಳ್ಳಾರಿ ಜಿಲ್ಲೆಯ ಸೊಂಡೂರಿನ ದಿವಾನ್ ಅಚ್ಚಪ್ಪನಾಯಕರ ಮಗಳು ಈಕೆ. ಈಕೆಯ ಪತಿ ಮಾಧವರಾಯರು ವಕೀಲರು. ಚಿಕ್ಕಂದಿನಲ್ಲೇ ವಿಧವೆಯಾದ ಈಕೆ

ಬಳ್ಳಾರಿಯಲ್ಲಿ ನರಸಿಂಹಸ್ವಾಮಿ ದೇವಾಲಯವನ್ನು ಕಟ್ಟಿಸಿ ತನ್ನ ತನುವ ನಧನಗಳನ್ನು ಅದಕ್ಕೆ ಅರ್ಪಿಸಿ ಅಲ್ಲಿಯೇ ಸೇವೆಮಾಡಿಕೊಂಡಿದ್ದಳು

ಈಕೆ ಮಂತ್ರಾಲಯದ ರಾಘವೇಂದ್ರಯತಿಗಳನ್ನು ಕುರಿತು ಅನೇಕ ಹಾಡುಗಳನ್ನು ರಚಿಸಿದ್ದಾಳೆ ಭಕ್ತಿಯೇ ಈಕೆಯ ಹಾಡುಗಳ ಪ್ರಧಾನವಸ್ತು

ಈ ಕೆಲವು ಕವಯಿತ್ರಿಯರನ್ನು ಬಿಟ್ಟರೆ ಈಗಲೂ ಈ ವೈಷ್ಣವ ಭಕ್ತಿ ಪಂಥದ ಪರಂಪರೆಯನ್ನು ಮುಂದುವರಿಸಿಕೊಂಡು ಬರುತ್ತಿರುವವರಲ್ಲಿ ಉಡುಪಿಯ ವಾದಿರಾಜವರದ ಗಿರಿಬಾಲೆ ಮೈಸೂರಿನ ವಿದ್ಯಾರಣ್ಯಪುರಂನ ಜೀವೂಬಾಯಿ ಬೆಂಗಳೂರಿನ ಚಾಮರಾಜಪೇಟೆಯ ರಾಜಾಮಣಿಯವರನ್ನು ಹೆಸರಿಸಬಹುದು ಇವರಲ್ಲದೆ ಇನ್ನೂ ಎಷ್ಟೋ ಜನ ಅಜ್ಞಾತ ಕವಯಿತ್ರಿಯರು ಈ ಪರಂಪರೆಯನ್ನು ಮುಂದುವರಿಸಿಕೊಂಡು ಬಂದಿದ್ದಾರೆ ಬರುತ್ತಿದ್ದಾರೆ

ಕರ್ನಾಟಕದ ಪ್ರಮುಖ ಹರಿದಾಸರಾದ ಪುರಂದರ ಕನಕಾದಿಗಳ ಪ್ರಭಾವ ನಮ್ಮ ಕವಯಿತ್ರಿಯರ ಮೇಲೆ ಪ್ರಭಾವಬೀರಿದರೂ ಅವರು ಕೃತಿಗಳನ್ನು ರಚಿಸಲು ಬಹಳಷ್ಟು ಕಾಲವೇ ಬೇಕಾಯಿತು 18ನೆಯ ಶತಮಾನದಲ್ಲಿ ತಕ್ಕ ವಾತಾವರಣ ಏರ್ಪಟ್ಟು ಕೆಲವು ಶತಮಾನಗಳ ಕಾಲ ಸ್ತಬ್ಧವಾಗಿದ್ದ ಸ್ತ್ರೀಯರು ಎಚ್ಚರಗೊಂಡು ಮತ್ತೆ ಕೃತಿರಚನೆಗೆ ತೊಡಗಿದರು ಅವರಿಗೆ ಪ್ರೋತ್ಸಾಹವೂ ದೊರೆಯಿತು ಇದುವರೆಗೆ ನೋಡಿದ ಕವಯಿತ್ರಿಯರೆಲ್ಲರೂ ದೇವರ ನಾಮಗಳನ್ನು ಹಾಗೂ ಹೆಚ್ಚಿನ ಸಂಖ್ಯೆಯಲ್ಲಿ ಕಥನ ಗೀತೆಗಳನ್ನು ರಚಿಸಿದ್ದಾರೆ ಇವರ ಹಾಡುಗಳು ಜನಸಮಾನ್ಯರ ಬಯಲ್ಲಿ ಇಂದಿಗೂ ಮೆರೆಯುತ್ತಿವೆ ಈ ಕವಯಿತ್ರಿಯರ ಸರಳಶೈಲಿ ಸರಳವಾದ ಭಾಷೆ ನೇರ ನಿರೂಪಣೆ ನೂತನ ಉಪಮೆಗಳಿಂದ ವೈವಿಧ್ಯಮಯ ವರ್ಣನೆಗಳಿಂದ ಕೂಡಿದ ಹಾಡುಗಳು ಎಲ್ಲರಿಗೂ ಪ್ರಿಯವಾದಂಥವು

---

# ವ್ಯಾಸರಾಯರು

ಜಿ ಜಿ ಮಂಜುನಾಥನ್

ವ್ಯಾಸತೀರ್ಥ, ವ್ಯಾಸರಾಯ ಅಥವಾ ವ್ಯಾಸರಾಜಸ್ವಾಮಿಗಳು ಎನ್ನುವ ನಾಮಾಂತರಗಳಿಂದ ಪ್ರಸಿದ್ಧರಾದ ವ್ಯಾಸರಾಯರು ರಾಜೇಂದ್ರತೀರ್ಥರ ಪರಂಪರೆಯಲ್ಲಿ ನಾಲ್ಕನೆಯವರಾಗಿ ಬಂದ ಬ್ರಹ್ಮಣ್ಯತೀರ್ಥರ ಶಿಷ್ಯರು ಮಧ್ವ ಪರಂಪರೆಯ ಸಂನ್ಯಾಸಿಗಳಲ್ಲಿ ಜಯತೀರ್ಥರ ಅನಂತರ ಬಂದ ಪ್ರಸಿದ್ಧಸ್ವಾಮಿಗಳು ಮಧ್ವರು ಪ್ರತಿಪಾದಿಸಿದ ವೈಷ್ಣವಧರ್ಮ ಕಳಿಂಗ ತುಳುನಾಡು ಮತ್ತು ಆನೆಗೊಂದಿಗಳಲ್ಲಿ ರಾಜ್ಯಾಶ್ರಯವನ್ನು ಹೊಂದಿದ್ದಿತು ಅನಂತರ ವಿಜಯನಗರ ಸಾಮ್ರಾಜ್ಯದಲ್ಲಿ ವ್ಯಾಸರಾಯರು ಮಧ್ವದರ್ಶನಕ್ಕೆ ಒದಗಿಸಿಕೊಟ್ಟ ಸ್ಥಾನ ಅದ್ವಿತೀಯವಾದುದು

ವ್ಯಾಸರಾಯರ ಜೀವನ ವಿಚಾರವನ್ನು ಕುರಿತು ವ್ಯಾಸರಾಯರ ಸಮಕಾಲೀನನಾದ ಸೋಮನಾಥ ಎನ್ನುವ ಸ್ಮಾರ್ತ ಬ್ರಾಹ್ಮಣಕವಿ ವ್ಯಾಸಯೋಗಿ ಚರಿತವನ್ನು ಬರೆದಿದ್ದಾನೆ ವ್ಯಾಸರಾಯರ ಬಂಧುವಾದ ಶ್ರೀನಿವಾಸತೀರ್ಥನು ವ್ಯಾಸವಿಜಯವನ್ನು ರಚಿಸಿದ್ದಾನೆ ಪುರಂದರದಾಸರು ತಮ್ಮ ಒಂದು ಕೀರ್ತನೆಯಲ್ಲಿ ವ್ಯಾಸರಾಯರ ಸಮಗ್ರ ಜೀವನ ಚರಿತ್ರೆಯನ್ನು ನಿರೂಪಿಸಿದ್ದಾರೆ ಇದನ್ನೇ ಆಧರಿಸಿ ವಿಜಯದಾಸರು ಒಂದು ಕೀರ್ತನೆಯನ್ನು ರಚಿಸಿದ್ದಾರೆ ಅಚ್ಯುತರಾಯಾಭ್ಯುದಯಂ ಕೃಷ್ಣರಾಯಾಭ್ಯುದಯಗಳಲ್ಲಿ ವ್ಯಾಸರಾಯರನ್ನು ಕುರಿತ ವಿಚಾರಗಳು ಪ್ರಾಸಂಗಿಕವಾಗಿ ಒಂದಿವೆ ವ್ಯಾಸರಾಯರಿಗೆ ಕೊಟ್ಟ ದತ್ತಿಗಳು ಶಾಸನಗಳು ಅವರ ಜೀವಿತ ರೂಪಿಸಲು ಮತ್ತೊಂದು ಮುಖ್ಯ ಆಕರ ಇವುಗಳನ್ನು ಆಧರಿಸಿದ ವ್ಯಾಸರಾಯರ ಜೀವನ ವಿಚಾರ ಮುಂದಿನಂತಿದೆ

> ವ್ಯಾಸರಾಯರ ಚರಣಕಮಲ ದರ್ಶನವೆನ
> ಗೇಸುಜನ್ಮದ ಸುಕೃತ ಫಲದಿ ದೊರಕಿತೊ ಎನ
> ಸಾಸಿರ ಕುಲಕೋಟಿ ಪಾವನವಾಯಿತು____

ಎಂದು ಪುರಂದರದಾಸರು ವ್ಯಾಸರಾಯರನ್ನು ಸ್ತುತಿಸಿದ್ದಾರೆ

"ಪುರಂದರ ವಿಠಲನೇ ಪರ ಎನ್ನುವ ಮಹಾಮಂತ್ರವನ್ನು ವ್ಯಾಸರಾಯರು ಪುರಂದರರಿಗೆ ಉಪದೇಶಿಸಿದ್ದಾರೆ ಚಕ್ರಾಂಕಿತವನ್ನು ಮಾಡಿದ್ದಾರೆ ಪುರಂದರದಾಸರಿಗೆ ಪುರಂದರವಿಠಲ ಎನ್ನುವ ಅಂಕಿತವನ್ನು ಕೊಟ್ಟವರೂ ವ್ಯಾಸರಾಯರೆ ಅವರು ನ್ಯಾಯಾಮೃತ ತರ್ಕತಾಂಡವ ಚಂದ್ರಿಕೆಗಳನ್ನು ರಚಿಸಿ ಮಹಾಯಾವಾದಿ ಮೊದಲಾದ ಇಪ್ಪತ್ತೊಂದು ಕುಭಾಷ್ಯರ ಬಾಯನ್ನು ಮುದ್ರಿಸಿದರು ವ್ಯಾಸ

ರಾಯರು ದಾಸರೊಳು ನಾಯಕನೆಂದೆನಿಸಿದರು ಶೇಷಾವೇಶ ಪ್ರಹ್ಲಾದನವತಾರವೆನಿಸಿದರು ದೇಶಾಧಿಪನಿಗೆ ಬಂದ ಕುಹೂಯೋಗವನ್ನು ಪರಿಹರಿಸಿ ಸಿಂಹಾಸನವನ್ನು ಏರಿದರು ವ್ಯಾಸಾಬ್ಧಿಯನ್ನು ಬಲಿಸಿದರು ಕಾಶೀದೇಶದೊಳೆಲ್ಲ ಭಾಸುರ ಕೀರ್ತಿಯನ್ನು ಪಡೆದರು

ಶ್ರೀಪಾದರಾಯರಲ್ಲಿ ವಿದ್ಯಾಭ್ಯಾಸ ಮಾಡಿದ ವ್ಯಾಸರಾಯರಿಗೆ ವಿಜಯೀಂದ್ರ ವಾದಿರಾಜರೆನ್ನುವ ಶಿಷ್ಯರು ಸುರೇಂದ್ರರು ಬಂದು ವ್ಯಾಸರಾಯರಲ್ಲಿ ವಿಜಯೀಂದ್ರರನ್ನು ಪುತ್ರಭಿಕ್ಷೆ ಬೇಡಿದರು ವ್ಯಾಸರಾಯರು ವಿಜಯೀಂದ್ರರನ್ನು ಕೊಟ್ಟು ಮಠವನ್ನು ಉದ್ಧರಿಸಿದರು ಮಧ್ವಮತ ಸಾಗರದಲ್ಲಿ ಪೂರ್ಣಚಂದ್ರನಂತೆ ಉದಯಿಸಿದ ವ್ಯಾಸರಾಯರು ಬ್ರಹ್ಮಣ್ಯರ ಕುವರನೆಂದನಿಸಿದರು

ವ್ಯಾಸರಾಯರು ಕಾಶಿಯ ಗದಾಧರಮಿಶ್ರನನು ಸೋಲಿಸಿ ದಾಸನನ್ನಾಗಿ ಮಾಡಿಕೊಂಡರು ಪಕ್ಷ–ಧರ, ವಾಜಪೇಯ ನಾರಸಿಂಹ ಲಿಂಗಣ್ಣಮಿಶ್ರ ಮೊದಲಾದ ನೂರೆಂಟು ಮಂದಿಯನ್ನು ಗೆದ್ದು ಪಡೆದ ವಿಜಯ ಪತ್ರವನ್ನು ವಾಸುದೇವ ಗೋಪಾಲಕೃಷ್ಣನಿಗೆ ವಿಭೂಷಣವನ್ನು ಮಾಡಿ ಹಾಕಿಸಿದರು

ಇಷ್ಟು ಪುರಂದರ ಕೀರ್ತನೆಯಲ್ಲಿ ವ್ಯಾಸರಾಯರ ಬಗ್ಗೆ ದೊರೆಯುವ ಅಂಶಗಳು ವಿಜಯದಾಸರು ಈ ಎಲ್ಲ ವಿಷಯಗಳನು ಹೇಳುತ್ತಾರೆ ಅದರ ಜೊತೆಗೆ ಬನ್ನೂರು ಗ್ರಾಮದಲ್ಲಿ ಜನಿಸಿ ಭೂಸ್ಪರ್ಶವಿಲ್ಲದೆ ಬ್ರಹ್ಮಣ್ಯತೀರ್ಥರ ದಿವ್ಯಕರಗಳಿಂದ ಚೆನ್ನಾಗಿ ಉಪನೀತನಾಗಿ ಪೋಷಿಸಿಕೊಂಡು ಸಂನ್ಯಾಸ ಪಟ್ಟವನ್ನು ಧರಿಸಿದುದಾಗಿ ತಿಳಿದು ಬರುತ್ತದೆ

೩

ವ್ಯಾಸತೀರ್ಥರ ತಂದೆಯ ಹೆಸರು ಬಲ್ಲಣ್ಣಸುಮತಿ ಈತ ಕಾಶ್ಯಪಗೋತ್ರದ ರಾಮಾಚಾರ್ಯರ ಅರುಜನ ಮಕ್ಕಳಲ್ಲಿ ಕಿರಿಯಾತ ಈತನ ಹೆಂಡತಿ ಅಕ್ಕಮ್ಮ ಇವರಿಗೆ ಒಂದು ಹೆಣ್ಣು ಎರಡು ಗಂಡು ಮಕ್ಕಳು ಇವರಲ್ಲಿ ಕಿರಿಯವನೇ ವ್ಯಾಸತೀರ್ಥರೆಂದು ಹೆಸರಾದ ಯತಿರಾಜ ಯತಿರಾಜನ ಜನ್ಮದಿನವನ್ನು ಕುರಿತಂತೆ ವಿದ್ಯಾರತ್ನಾಕರಸ್ವಾಮಿಗಳು ಹೀಗೆ ಹೇಳುತ್ತಾರೆ—

ರಾಮಾಚಾರ್ಯಸುಧೀಮಣೇರ್ದಯಿತಯಾಗರ್ಭೇಧೃತಃ ಶ್ರೀಮತೋ
ಬ್ರಹ್ಮಣ್ಯಸ್ಯ ಯತೀಶತಃ ಕರುಣಯಾ ಸಂವತ್ಸರೇಷ್ವಾದಿಮೇ
ವೈಶಾಖಾದಿವಪಕ್ಷಕೇ ದಿನಮಣೇರ್ವಾರೇ ತಿಥೌ ಸಪ್ತಮೇ
ಪ್ರಹ್ಲಾದೋಽವತತಾರ ಭೂಮಿವಲಯೇ ನಾಗಾಧಿಪಾಸ್ಯಾಂಶಭೃತ್ ॥

ಸ್ವಾಮಿ ಕಣ್ಣು ಪಿಳ್ಳೆಯವರ ಪಂಚಾಂಗದ ಪ್ರಕಾರ ಈ ತೇದಿ ಕ್ರಿ ಶ 1447 ನೇ ಏಪ್ರಿಲ್ 22 ನೇ ತಾರೀಖಿನ ದಿನ ಭಾನುವಾರಕ್ಕೆ ಹೊಂದುತ್ತದೆ ವ್ಯಾಸಯೋಗಿ

ಚರಿತವನು ಆಧರಿಸಿ ಬಿ ಎಸ್ ಕೆ ಶರ್ಮರು ಸು 1400 ರಲ್ಲಿ ವ್ಯಾಸರಾಯರ ಜನನವಾಯಿತೆಂದು ಅಭಿಪ್ರಾಯ ಪಡುತ್ತಾರೆ

ವ್ಯಾಸರಾಯರಿಗೆ ಎರಡನೆಯ ವರ್ಷದಲ್ಲಿ ಚೌಲ ಐದನೆಯ ವರ್ಷದಲ್ಲಿ ಅಕ್ಷರಾಭ್ಯಾಸ ಏಳನೆಯ ವರ್ಷದಲ್ಲಿ ಉಪನಯನಗಳಾದುವು ಬಲ್ಲಣ್ಣನು ತನ್ನ ವಾಗ್ದಾನದಂತೆ ಯತಿರಾಜನನ್ನು ಬ್ರಹ್ಮಣ್ಯತೀರ್ಥರಿಗೆ ಒಪ್ಪಿಸಿದನು ಬ್ರಹ್ಮಣ್ಯತೀರ್ಥರಲ್ಲಿ ವ್ಯಾಸರಾಯರಿಗೆ ನ್ಯಾಯವೇದಾಂತ ಶಾಸ್ತ್ರ ಪ್ರವಚನಗಳಾದವು ಆಶ್ರಮ ಧರ್ಮಗಳ ಉಪದೇಶವಾಯಿತು ಆತ್ಮಶ್ರಾದ್ಧಾದಿಕರ್ಮಗಳನು ಮಾಡಿಸಿ ದೀಕ್ಷೆಕೊಟ್ಟು ವ್ಯಾಸತೀರ್ಥರೆಂದು ನಾಮಕರಣ ಮಾಡಿದರು 1478 ರಲ್ಲಿ ವ್ಯಾಸತೀರ್ಥರು ಪಟ್ಟವೇರಿದರು ಅನಂತರ ಕಂಚಿಗೆ ಪ್ರಯಾಣ ಮಾಡಿದರು ಅಲ್ಲಿ ಹಲವಾರು ವರ್ಷಗಳ ಕಾಲ ವೇದಾಂತದ ಷಡ್ದರ್ಶನವನ್ನು ಅಭ್ಯಸಿಸಿದರು ನ್ಯಾಯಾಮೃತ ತಾತ್ಪರ್ಯ ಚಂದ್ರಿಕ ಮತ್ತು ತರ್ಕತಾಂಡವಗಳನ್ನು ರಚಿಸಿದರು, ಕಂಚಿಯಿಂದ ಹಿಂದಿರುಗಿಬಂದ ವ್ಯಾಸತೀರ್ಥರು ಮುಳಬಾಗಿಲಿನ ಶ್ರೀಪಾದರಾಯರಲ್ಲಿ 15 ವರ್ಷಗಳಕಾಲ ವ್ಯಾಸಂಗವನು ನಡೆಸಿದರು ವಿದ್ಯಾಭ್ಯಾಸದ ಅನಂತರ ಸಂಚಾರ ಕಾಲದಲ್ಲಿ ಪಂಡರಂಗ ಕ್ಷೇತ್ರಕ್ಕೆ ವ್ಯಾಸರಾಯರು ಹೋಗಿದ್ದಾಗ ಅಲ್ಲಿಯ ಭೀಮಾ ನದಿ ತೀರದಲ್ಲಿ ದೊರಕಿದ ಕರಂಡದಲ್ಲಿ ರಕ್ಮಿಣಿ ಸತ್ಯಭಾಮಾ ಸಮೇತನಾದ ವೇಣು ಗೋಪಾಲಕೃಷ್ಣನ ಪ್ರತಿಮೆ ಇದ್ದಿತು ಈ ವಿಗ್ರಹವನ್ನು ಭಕ್ತಿಯಿಂದ ಪ್ರಾರ್ಥಿಸಿ ವ್ಯಾಸರಾಯರು ಕಣಸಿದರೆಂದು ಪ್ರತೀತಿಯಿದೆ ಇಂದಿಗೂ ಈ ವಿಗ್ರಹ ಸೋಸಲೆ ಮಠದ ಅಧಿಪತಿಗಳಿಂದ ಪೂಜಿತವಾಗುತ್ತಿದೆ

ಸಾಳುವ ನರಸಿಂಹನು ಚಂದ್ರಗಿರಿಯಲ್ಲಿ ಆಳುವ ಸಂದರ್ಭದಲ್ಲಿ ಅಲ್ಲಿಗೆ ವ್ಯಾಸರಾಯರು ಬಂದರು ಅದ್ಭುತ ಸ್ವಾಗತವನು ದೊರೆ ಅವರಿಗೆ ನೀಡಿದನು ಇಲ್ಲಿ ಹಲವರು ವರ್ಷಗಳ ಕಾಲ ವ್ಯಾಸರಾಯರಿದ್ದರು ದತ್ತಾತ್ರೇಯರನ್ನು ಕಾರ್ತವೀರ್ಯಾರ್ಜುನ ಬಾದರಾಯಣನನ್ನು ಯುಧಿಷ್ಠಿರ ಗೌರವಿಸಿ ಪೂಜಿಸಿದ ಹಾಗೆ ವ್ಯಾಸರಾಯರನ್ನು ಸಾಳುವ ನರಸಿಂಹನು ಗೌರವಿಸಿದನು ಇಲ್ಲಿ ವೇದಾಂತಗೋಷ್ಠಿಗಳು ಚರ್ಚೆಗಳು ನಡೆಯುತ್ತಿದ್ದವು ಇಂತಹುದೇ ಸಂದರ್ಭದಲ್ಲಿ ಗಂಗೇಶನ ತತ್ವಚಿಂತಾಮಣಿಯಂತಹ ತರ್ಕಗ್ರಂಥಗಳ ಖಂಡನವನು ಮಾಡಿದರು ಇದೇ ಸಂದರ್ಭದಲ್ಲಿ ತಿರುಪತಿಯ ಶ್ರೀನಿವಾಸನ ಪೂಜಾಕಾರ್ಯ ಇವರಿಗೆ ಲಭಿಸಿತು 1486 ರಿಂದ 1498 ರವರೆಗೆ 12 ವರ್ಷಗಳ ಕಾಲ ಇವರು ಆ ದೇವರ ಪೂಜೆ ನಡೆಸಿದುದಾಗಿ ಸಾಂಪ್ರದಾಯಿಕ ಹೇಳಿಕೆಗಳಿವೆ ಇದೇ ಕಾಲದಲ್ಲಿ ವ್ಯಾಸರಾಯರು ದಕ್ಷಿಣ ಭಾರತದಲ್ಲಿ ಪ್ರವಾಸವನ್ನು ಕೈಕೊಳ್ಳುತ್ತಿದ್ದರು ಆ ಸಂದರ್ಭದಲ್ಲಿ ತಿರುಪತಿಯಲ್ಲಿ ಪೂಜೆಗೆ ತಾತ್ಕಾಲಿಕ ವ್ಯವಸ್ಥೆಯನ್ನು ಮಾಡುತ್ತಿದ್ದರು

ವ್ಯಾಸರಾಯರು ಸಾಳುವ ನರಸಿಂಹನ ಮಂತ್ರಿಗಳ ಆಹ್ವಾನದ ಮೇರೆಗೆ 1493 ರಲ್ಲಿ ವಿಜಯನಗರಕ್ಕೆ ಬಂದು ನೆಲೆಸಿದರು ವಿಜಯನಗರದ ದೊರೆ ಪ್ರತಿ

ದಿವಸ ಇವರ ಉಪದೇಶವನ್ನು ಪಡೆಯುತ್ತಿದ್ದನು. ಈ ಸ್ಥಾನ ವ್ಯಾಸರಾಯರಿಗೆ ಸುಲಭವಾಗಿ ದಕ್ಕಲಿಲ್ಲ. ಇದಕ್ಕಾಗಿ ಅವರು ಕಳಿಂಗದ ಬಸವಭಟ್ಟನನ್ನು 30 ದಿನಗಳ ಕಾಲ ವಾದಮಾಡಿ ಸೋಲಿಸಬೇಕಾಯಿತು. ಈ ಸಂದರ್ಭದಲ್ಲಿ ಆವನು ವ್ಯಾಸರಾಯರಿಗೆ ಕೊಡುಗೆಯಾಗಿಕೊಟ್ಟ ಈಶ್ವರಲಿಂಗ ಇಂದಿಗೂ ಸೋಸಲೆ ವ್ಯಾಸರಾಯ ಮಠದಲ್ಲಿದೆ.

ಸಾಳುವ ನರಸನ ಅನಂತರ ಬಂದ ವೀರನರಸಿಂಹನು ವ್ಯಾಸರಾಯರನ್ನು ಗೌರವದಿಂದಲೇ ಕಂಡನು. ವಿಜಯನಗರದ ರಾಜನು ಪ್ರತಿದಿವಸ ಮಠದ ವೆಯಾಗದ ಎಂದೆಂದೂ ಹೆಂಗಸನ್ನು ಮುಟ್ಟದ ವಿದ್ವಾಂಸ ಬ್ರಾಹ್ಮಣನಿಂದ ಉಪದೇಶವನ್ನು ಪಡೆಯುತ್ತಾನೆ ಎಂದು ನ್ಯೂನಿಜ್ ಹೇಳುವ ಮಾತು ವಿರನರಸಿಂಹ ಮತ್ತು ವ್ಯಾಸರಾಯರಿಗೆ ಅನ್ವಯಿಸುವಂಥವು. ಸೋಮನಾಥನ ಪ್ರಕಾರ ಈ ಕಾಲದಲ್ಲಿ ವ್ಯಾಸರಾಯರು ಚಂದ್ರಿಕಾ, ತರ್ಕತಾಂಡವ ಮತ್ತು ನ್ಯಾಯಾಮೃತಗಳನ್ನು ರಚಿಸಿದರು. ಇದು ಸೋಮನಾಥನು ಕೊಡುವ ಕ್ರಮ. ಆದರೆ ಕೃತಿಗಳ ಪರಿಶೀಲನೆಯಿಂದ ವ್ಯಾಸರಾಯರು ನ್ಯಾಯಾಮೃತ, ಚಂದ್ರಿಕಾ ಮತ್ತು ತರ್ಕತಾಂಡವಗಳನ್ನು ರಚಿಸಿರುವ ಸಾಧ್ಯತೆಯಿದೆ.

ಕೃಷ್ಣದೇವರಾಯನು 1509 ರಲ್ಲಿ ಸಿಂಹಾಸನವೇರಿದ ಮೇಲೆ ವ್ಯಾಸತೀರ್ಥರ ಜೀವನದ ವೈಭವ ಮುಗಿಲು ಮುಟ್ಟಿತು. ತನ್ನ ಕುಲದೇವತೆಗೆ ಕಡಿಮೆಯಿಲ್ಲದಂತೆ ಆತ ವ್ಯಾಸರಾಯರನ್ನು ಕಂಡನು. ಈ ಸಂದರ್ಭವನ್ನು ಕುರಿತು ಸೋಮನಾಥ ಹೀಗೆ ಹೇಳುತ್ತಾನೆ—

> ಯಾವಂತೋ ವಿಷಯಾಹೃತಾ ಭ ಜಬಲಂ ಯಾವತ ಪತ್ನಾಜಿತಾ
> ಯಾವಂತಶ್ಚ ವದಾನ್ಯತಾ ಕರಸರೋಜಾತಾಶ್ರಯಾ ಯಾವತೀ
> ಯಾವತ್ಯೋ ಧನಸಂಪದೇ ಗ ಣಗಣೋ ಯಾವಾಂಶ್ಚ ಯಾವದ್ಯಶ
> ಸ್ತಾವತ್ಕರ್ತು ಮಿಯೇಷ ಪೂಜನಮಸೌ ಶ್ರೀ ವ್ಯಾಸಭಿಕ್ಷೋರ್ನೃಪಃ ॥

ಸು. 1500 ರ ಹೊತ್ತಿಗಾಗಲೇ ವ್ಯಾಸರಾಯರು ಬಿಜಾಪುರದ ಸುಲ್ತಾನರಿಂದ ಒಂಟೆಯ ಮೇಲೆ ಹಸಿರು ಛಾವುಟ ಹಿಡಿದು ಹೋಗುವ ಗೌರವವನ್ನು ಪಡೆದಿದ್ದರು. 1511 ರಲ್ಲಿ ಕಂಚಿಯ ವರದರಾಜನಿಗೆ ತಮ್ಮ ಹೆಸರಿನಲ್ಲಿ ಆವಣಿ ಉತ್ಸವವನ್ನು ನಡೆಸಲು ಪಡವೀಡು ರಾಜ್ಯದ ಪೂಲಂಬಾಕ್ಕಂ ಎನ್ನುವ ಗ್ರಾಮವನ್ನು ದೊರೆಯಿಂದ ದತ್ತಿ ಪಡೆದಿದ್ದರು. ಹಂಪೆಯ ವಿಠಲಸ್ವಾಮಿ ದೇವಾಲಯದ ಗೋಡೆಯ ಮೇಲೆ ಇರುವ 1513 ರ ಶಾಸನದಲ್ಲಿ ದೇವಾಲಯಕ್ಕೆ ಭೂಮಿಯನ್ನು ದತ್ತಿಯಾಗಿಬಿಟ್ಟ ಉಲ್ಲೇಖವಿದೆ. ಅದರಲ್ಲಿ ಗುರುಗಳು ವ್ಯಾಸರಾಯರಿಗೆ ಪಾಲು (ಸೌ. ಇ. ಇ. IV, 489. 1889) ಎನ್ನುವ ಮಾತಿದೆ.

ಕೃಷ್ಣದೇವರಾಯನು ಸಂಸ್ಕೃತದಲ್ಲಿ ಒರೆದ ಕಾವ್ಯದ ತುಣುಕೊಂದು ಲಭ್ಯವಿದ್ದು ಅದರಲ್ಲಿ ವ್ಯಾಸರಾಯರನು ಕುರಿತು—

ಉತ್ಸಾಹಂ ಮಮ ವೀಕ್ಷ್ಯ ಮದ್ಗುರ ರಥ ಶ್ರೀವ್ಯಾಸತೀರ್ಥೋ ಮುನಿಃ
ಪರ್ಯಾಲೋಚ್ಯ ಪುರಾಣ ಶಾಸ್ತ್ರವಿವಿಧಾಮಾ ಯೇತಿಹಾಸಾದಿಕಾನ್
ಒಬ್ಧಾಸ್ತತ್ರ ಕಥಾ ಹರೇಃ ಪಶುಪತೇಃ ಸಾಮ್ಯಂ ನಿರಸ್ಯಾಧಿಕಂ
ವಿಷ್ಣೂಂ ಕೀರ್ತಯ ಸರ್ವಥೆ ತ್ಯುಪದಿಶನ ಮಹ್ಯಂ ಮುದಾ ದತ್ತವಾನ್ ॥

ಎನು ವ ಹೇಳಿಕೆ ಇದೆ ಇದರಿಂದ ಕೃಷ್ಣದೆ ವರಾಯ ನು ವ್ಯಾಸರಾಯರನು ತನ್ನ ಪರಮಗ ರುವೆಂದು ಸ್ವೀಕರಿಸಿದ್ದುದು ಖಚಿತವಾಗುತ್ತದೆ

ಕಳಿಂಗದ ಎದ್ದಾನಂತರ ಒಂದು ದಿವಸ ಕೃಷ್ಣರಾಯನು ವ್ಯಾಸತೀರ್ಥರಲ್ಲಿಗೆ ಗ್ರಂಥವೊಂದನ್ನು ಹಿಡಿದು ಧಾವಿಸಿದನು ಅದು ಕಳಿಂಗದ ದೊರೆ ಕಳಿಸಿದ್ದ ಅದ್ವೈತವೇದಾಂತವನು ಪ್ರತಿಪಾದಿಸುವ ಪುಸ್ತಕ ವ್ಯಾಸರಾಯರಲ್ಲಿಗೆ ಅದು ವಿಮರ್ಶೆಗಾಗಿ ಬಂದಿದ್ದಿತು ಆ ಮೂಲಕ ವ್ಯಾಸರಾಯರಿಗೆ ವಾದಕ್ಕೆ ಆಹ್ವಾನ ದೊರಕಿದ್ದಿತು ರ ಯನ ಘನತೆ ಮತ್ತು ದ್ವೈತವೇದಾಂತದ ಬಗೆಗಿನ ವಿಜಯನಗರದ ಒಲವು ಕ ರ್ಣವಾಗಿ ಉಂಟಾಗಿದ್ದ ಪರಿಸ್ಥಿತಿಯ ನ್ನು ಇದು ಕೆಣಕಿದ್ದಿತು ವ್ಯಾಸರಾಯರು ಈ ಕೃತಿಯನ್ನು ನಿರಾಯಾಸವಾಗಿ ಖಂಡಿಸಿ ಹಿಂದಿರುಗಿಸಿದರು ಕೃಷ್ಣದೇವರಾಯನ ಗೌರವ ಇದರಿಂದ ಹೆಚ್ಚಿತ ಸೊ ಮನಾಥ ಕವಿ ಈ ಕೃತಿಯ ಹೆಸರನ್ನು ಹೇಳಿಲ್ಲ ಆದರೆ ವಿದ್ವಾಂಸರ ಈ ಗ್ರಂಥವು ವಿದ್ಯಾಧರ ಮಹಾಪಾತ್ರನದೆಂದು ತೀರ್ಮಾನಿಸಿದ್ದಾರೆ

ಕ್ರಿ ಶ 1520 ರಲ್ಲಿ ರಾಯಚೂರು ಧಾಳಿಗೆ ಹೋಗುವ ಮುನ್ನ ಕೃಷ್ಣರಾಯನು ವ್ಯಾಸರಾಯರಿಗೆ ರತ್ನಾಭಿಷೇಕವನ್ನು ನಡೆಸಿದನು

ಕೃಷ್ಣದೇವರಾಯನ ಆಡಳಿತ ಕಾಲದಲ್ಲಿ ಕುಹುಯೋಗ ಪ್ರಾಪ್ತವಾಯಿತು ಇದು ದೊರೆಗೂ ಸಾಮ್ರಾಜ್ಯಕ್ಕೂ ಕೇಡನು ಸೂಚಿಸಿತು ಆಸಂದರ್ಭದಲ್ಲಿ ವ್ಯಾಸರಾಯರು ಕೃಷ್ಣದೇವರಾಯನ ಸಹಾಯ ಕ್ಕೆ ನಿಂತರು 8–1–1521 ಕ್ಕೆ ಸರಿ ಹೋಗುವ ವಿಕ್ರಮ ಸಂ॥ ಪುಷ್ಯ ಬಹುಳ 30 ರಂದು ಕೃಷ್ಣದೇವರಾಯನು ವ್ಯಾಸರಾಯರಿಗೆ ಸಕಲ ಸಾಮ್ರಾಜ್ಯವನ್ನು ಧಾರೆಯೆರೆದು ಸಿಂಹಾಸನದ ಮೇಲೆ ಕೂರಿಸಿದನು ಪೂರ್ವನಿಯೋಜಿತದಂತೆ ಅವರಿಂದ ಅನೇಕ ದಾನಗಳು ನಡೆದುವು ಆ ಸಂದರ್ಭವನು ಕುರಿತು ಎದ್ಯಾರತಾ ಕರರು—

ತತ್ಸಿಂಹಾಸನ ಮಾರುಹನ್ಪ್ರಚುರ ಭೂದಾನಾದಿ ಸಂಸಾಧಯಂ
ಸ್ವದ್ರಾಜ್ಯಂ ಪುನರಪ್ಯ ಯ ಕ್ಷಿತಿಭೃತೇ ಕೃಷ್ಣಾಭಿಧಾನಾಯ ಸಃ
ತತ್ಸಂವತ್ಸರಗಾಂತ್ಯಮಾಸಿ ಧವಳೇ ಪಕ್ಷೇ ಹರೇರ್ವಾಸರೇ
ಪ್ರಾಂತೇ ವ್ಯಾಸ ಸಮುದ್ರನಾಮಕವ ದಾದ್ದಾ ಮಂ ಸ ಚಾಸ್ಮೈ ನ ಪಃ ॥

ಅಂದಿನಿಂದ ವ್ಯಾಸತೀರ್ಥರು ವ್ಯಾಸರಾಯ ರಾದರು ಕುಹುಯೋಗ ಕಳೆದ ಅನಂತರ ಕೃಷ್ಣದೇವರಾಯನಿಗೆ ವ್ಯಾಸರಾಯರು ಸಾಮ್ರಾಜ್ಯವನ್ನೂ ಸಿಂಹಾಸನವನ್ನೂ ಹಿಂದಿರುಗಿಸಿದರು ಇದರ ಕುರ ಹಾಗಿ ವ್ಯಾಸರಾಜ ವ ರದಲ್ಲಿ ಸಕಲ ಜಗೌರವಗ ಳೊಂದಿಗೆ ಸ್ವಾಮಿಗಳು ಪೀಠವನು ಇಂದಿಗೂ ಏರುತ್ತಿದ್ದಾರೆ

ಕ್ರಿ ಶ 1523 ರಲ್ಲಿ ವ್ಯಾಸರ ಯರಿಗೆ ಬ್ರಹ್ಮಣ್ಯತೀರ್ಥಪುರ ದತ್ತಿಯಾಗಿ ಲಭಿಸಿತು ತಿರ ಪತಿಯ ವ್ಯಾಸರಾಯರ ವ ರದಲ್ಲಿರುವ 1524 ರ ಶಾಸನದಂತೆ ಬಹುಶಃ ವ್ಯಾಸರಾಯರು ಆಗ ಅಲ್ಲಿದ್ದು ಕುಹೂಯೋಗ ನಿವಾರಣೆಗಾಗಿ ಶ್ರೀನಿವಾಸ ನಲ್ಲಿ ಪ್ರಾರ್ಥನೆ ಮಾಡಿದುದನ್ನು ಸೂಚಿಸುತ್ತದೆ 1526 ರಲ್ಲಿ ಬೆಟ್ಟಕೊಂಡ ಎನ್ನುವ ಗ್ರಾಮವನು ವ್ಯಾಸರಾಯರು ದತ್ತಿಯಾಗಿ ಪಡೆದು ಅದಕ್ಕೆ ವ್ಯಾಸಸಮುದ್ರ ಎಂದು ಪುನರ್ನಾಮಕರಣಮಾಡಿದರು

ಕೃಷ್ಣದೇವರಾಯನು 1527 ರಲ್ಲಿ ತೀರ್ಥಯಾತ್ರೆಗೆ ಹೋಗಿ ಹಿಂದಿರ ಗ ವ ವರೆಗೆ ಅಳಿಯ ರಾವ ರಾಯನ ತಾತ್ಕಾಲಿಕ ಆಡಳಿತವಿದ್ದು ಆ ಸಮಯದಲ್ಲಿ ವ್ಯಾಸ ರಾಯ ರು ಬೆಟ್ಟಕೊಂಡದಲ್ಲಿ ನೆಲೆಸಿದ್ದರು ಕ ಷ್ಣದೇವರಾಯ ನು ಹಿಂತಿರುಗಿ ಬಂದ ಮೇಲೆ ಮತ್ತೊಂದು ದತ್ತಿಯನು ವ್ಯಾಸರಾಯರಿಗೆ ಕೊಟ್ಟು ಅವರಿಗೆ ಮೊದಲು ಇದ್ದ ಸ್ಥಾನವನು ಕಲ್ಪಿಸಿದನು ಆದರಲ್ಲಿ—

> ನಿಗಮಾಗಮ ನಿರ್ಣೀತ ನಿರ್ಜರಾಧೀಶ ಮಂತ್ರಿಣೇ
> ನೃಪೇ ಂದ್ರ ಮುಕುಟೀರತ ನೀರಾಜಿತ ನಿಜಾಂಘ್ರಯೋ
> ನಿರಹಂಕಾರ ಚಿತ್ತಾಯ ನೀತಿಮಾರ್ಗೋಪದೇಶಿನೇ
> ಶೇಷಾಯ ನರವೇಷಾಯ ಶಿಕ್ಷಿತಾಂತರ ವೈರಿಣೇ
> ಪುರಾಣ ಪುರುಷಧ್ಯಾನ ಪುಷ್ಯತ್ಪುಷ್ಕಲ ಮೂರ್ತಯೇ
> ಮಧ್ವಾಚಾರ್ಯ ಮತಾಂಭೋಜ ಮಾರ್ತಂಡಾಯಿತ ತೇಜಸೇ
> ಬ್ರಹ್ಮಣ್ಯತೀರ್ಥ ಶಿಷ್ಯಾಯ ಬ್ರಹ್ಮ ನಿರ್ಮಲ ಮೂರ್ತಯೇ
> ವ್ಯಾಸತೀರ್ಥಯ ತೀಂದ್ರಾಯ ವಿದ್ವದಿಂದೀವರೇಂದವೇ
> (ಶಿವಮೊಗ್ಗ 85 ನೆಯ ಶಾಸನ)

ಎನ್ನುವ ಹೇಳಿಕೆಯಿದ್ದು ವ್ಯಾಸರಾಯರ ಸಮಗ್ರ ಚಿತ್ರಣ ಇದರಲ್ಲಿ ದೊರೆಯುತ್ತಿದೆ

ಚಕ್ರತೀರ್ಥದ ಬಳಿ ಯಂತ್ರೋದ್ಧಾರಕ ಪ್ರಾಣದೇವರ ಪ್ರತಿಷ್ಠೆ ಮಾಡಿ ದೇಶಾದ್ಯಂತ 732 ಪ್ರಾಣದೇವರ ಪ್ರತಿಷ್ಠಾ ಪನೆ ಮಾಡಿದುದು ಒಂದು ಮಹತ್ವದ ಸಂಗತಿ ಈ ಸಂದರ್ಭವನ್ನು ಕುರಿತು ವಿದ್ಯಾರತ್ನಾಕರರು—

> ಮೂರ್ತೀಸ್ಸಪ್ತಶತಂ ಪ್ಲವಂಗಪಪತೇರ್ದ್ವಾ ತ್ರಿಂಶದಪ್ಯಂಜನಾ
> ಸೂನೋರ್ನಿರ್ಮಮ ಈಶತೋಷಣ ಕೃತೇ ರೌದ್ರಾಬ್ದಯಾಬ್ದೇಶಕೇ

ಶಾಲಿವಾಹನ ನಾಮಿ ಯುಗ್ಮಯು ಗಳಂ ಚತ್ವಾರಿ ಚೈಕಂ ಲಿಖಿನ್
ಯಾಂ ಸಂಖ್ಯಾಂ ಮನಸಾ ದಧಾತಿ ತದಿಯಂ ಸಂಖ್ಯಾಯತ ಪೂರ್ಯತೇ ॥

ಎಂದು ಹೇಳಿದ್ದಾರೆ ಕೃಷ್ಣದೇವರ ಯ ನ ಮರಣಾನಂತರ ಅಚ್ಯುತರಾಯನೂ ವ್ಯಾಸರಾಯ ರನ್ನು ಗೌರವಿಸಿದನು ಒಚ್ಯುತರಾಯನ ಆಡಳಿತ ಕಾಲದಲ್ಲಿ ಎಂದರೆ 1532 ರಲ್ಲಿ ಹಂಪೆಯ ವಿರೂಪಾಕ್ಷಸ್ವಾಮಿ ದೇವ ಲಯದಲ್ಲಿ ವ್ಯಾಸತೀರ್ಥರು ಯೋಗ ವರದ ನರಸಿಂಹನನ್ನು ಪ್ರತಿಷ್ಠಿ ಸಿದರು

8-3-1539 ಕ್ಕೆ ಸಂವಾದಿಯಾದ ವಿಳಂಬ ಸಂವತ್ಸರ ಫಾಲ್ಗುಣ ಬಹ ಳ ಚತ ರ್ಥಿ ಶನಿವಾರದಂದು ವ್ಯಾಸರ ಯರು ನಿಧನರಾದರೆಂದು ಪುರಂದರದಾಸರು ತಿಳಿಸುತ್ತಾರೆ ಆ ಸಂದರ್ಭವನು ಕುರಿತಂತೆ ವ್ಯಾಸರಾಯ ರೇ ಹೀಗೆ ಹೇಳಿದ್ದಾರೆ—

ಪುಟ್ಟ ನಾಭುವಿಯೊಳಗೆ ಬಹುದಿನ ಕಳೆಯಿತೋ
ಪುಟ್ಟದಂತೆ ಮಾಡೊ ಸೃಷ್ಟೀಶ ಸಿರಿ ಕೃಷ್ಣ ॥ಪ॥

ಹೀಗೆ ವ್ಯಾಸರಾಯರ ಜೀವನ ಅವರ ವ್ಯಕ್ತಿತ್ವದ ಘನತೆಗೆ ತಕ್ಕಂತೆ ಕೊನೆಗೊಂಡಿತು ಆನೆಗೊಂದಿಯ ಲ್ಲಿ ಒಂದು ಮೈಲಿ ಪೂರ್ವಕ್ಕಿರುವ ನವಬೃಂದಾವನದಲ್ಲಿ ಅವರ ಬೃಂದಾವನವಿದೆ

೬

ವ್ಯಾಸತೀರ್ಥರು ತಮ್ಮ ವರ್ಚಸ್ಸಿನಿಂದ ವ್ಯಕ್ತಿತ್ವದಿಂದ ಅವೊ ಘವಾದ ಶ್ರಮದಿಂದ ದ್ವೈತಸಿದ್ಧಾಂತವನ್ನು ಅಖಂಡಭಾರತದಲ್ಲಿ ಉಳಿಸಿದರು ನ್ಯಾಯಾ ಮೃತ ಚಂದ್ರಿಕಾ ಮತ್ತು ತರ್ಕತಾಂಡವ ಎನ್ನುವ ಕಟ್ಟುಗಳ ಮೂಲಕ ಛಿದ್ರ ಗೊಳ್ಳು ತ್ತಿದ್ದ ಮಧ್ವಸಿದ್ಧಾಂತವನ್ನು ವ್ಯಾಸರಾಯ ರು ರಕ್ಷಿಸಿದರೆಂದು ಅಪ್ಪಯ ತಿಳಿಸಿದ್ದಾರೆ ವಾಙಳ ಬಾಗಿಲಿಗೆ ಒಂದಿದ್ದ ಪಕ್ಷಧರಮಿಶ್ರ ಎನ್ನುವ ಉತ್ತರ ಭಾರತದ ವಿದ್ವಾಂಸನೊಬ್ಬನು ವ್ಯಾಸರಾಯರನು ಕ ರಿತು—

ಯದಧೀತಂ ತದಧೀತಂ ಯದನಧೀತಂ ತದಪ್ಯಧೀತಮ್
ಪಕ್ಷಧರವಿಪಕ್ಷೇ ನಾವೀಕ್ಷಿ ವಿನಾ ನವೀನ ವ್ಯಾಸೇನ ॥

ಎಂದು ಉದ್ಗರಿಸಿದ ದಾಗಿ ಒಂದು ಸಾ ಪ್ರದ ಯಿಕ ಹೇಳಿಕೆಯಿ ದೆ ವಂಶೀ ವಿಭೂಷಿತ ಕರಾತ್ ಎಂದು ಮಧುಸೂದನ ಸರಸ್ವತಿಯವರು ವ್ಯಾಸರಾಯ ರನ್ನು ಸ್ತುತಿಸಿದ್ದಾರೆ

ವಿಜಯನಗರದ ಅರಸರು ಸರ್ವಧರ್ಮಸಹಿಷ್ಣುಗಳಾಗಲು ವ್ಯಾಸರಾಯರ ಶ್ರಮವೆ ಕಾರಣ ವಾದದಲ್ಲಿ ಸೋತ ಬಸವಭಟ್ಟನನ್ನು ವ್ಯಾಸರಾಯರು ಅದ್ಭುತ ವಾದ ಗೌರವದಿಂದ ನಡೆಸಿಕೊಂಡ ದು ಇದಕ್ಕೆ ಒಂದು ನಿದರ್ಶನ ತಿರ ಪತಿಯ ಲ್ಲಿ

ತಮಗೆ ದೊರೆತ್ತಿದ್ದ ಪೂಜೆಯ ಅವಕಾಶವನ್ನು ಬಳಸಿಕೊಂಡು ವ್ಯಾಸರಾಯರು ತಮ್ಮ ಧರ್ಮೀಯರ ಆಧಿಪತ್ಯವನ್ನು ಅಲ್ಲಿ ಏರ್ಪಡಿಸಬಹುದಿತ್ತು. ಆದರೆ ಅವರು ಹಾಗೆ ಮಾಡಲಿಲ್ಲ. ವ್ಯಾಸರಾಯರು ವೈಷ್ಣವಮತದ ಆಚಾರ್ಯರಾದರೂ ಶಿವನನ್ನು ಶೈವರನ್ನು ದ್ವೇಷಿಸಲಿಲ್ಲ. ಅದರ ಬದಲಾಗಿ ಶಿವನನ್ನು ಕುರಿತು ಸ್ತೋತ್ರವೊಂದನ್ನು ರಚಿಸಿದ್ದಾರೆ. ಬಸವಭಟ್ಟನ ಕೊಡುಗೆಯಾದ ಶಿವಲಿಂಗ ಸೋಸಲೆ ವ್ಯಾಸರಾಯರ ಮಠದಲ್ಲಿದ್ದು ಇಂದಿಗೂ ಮಹಾಶಿವರಾತ್ರಿಯಂದು ವಿಶೇಷವಾಗಿ ಪೂಜೆಗೊಳ್ಳುತ್ತಿದೆ. ಇವರ ಕಾಲದಲ್ಲಿ ವಿದ್ಯಾರಣ್ಯರ ಕಾಲದಿಂದಲೂ ವಿಟ್ಠಲನೊಂದಿಗೆ ರಾಜ್ಯದ ದೈವವಾಗಿದ್ದ ವಿರೂಪಾಕ್ಷ ಮತ್ತು ವಿರೂಪಾಕ್ಷರಾಜಮುದ್ರೆ ಮುಂದುವರೆಯಿತು.

ವ್ಯಾಸರಾಯರ ಸಂದೇಶ: ಚಿಂತನಶೀಲರೂ ಪ್ರಾಮಾಣಿಕರೂ ಆದವರಿಗೆ ತಲುಪಿತು. ಅವರ ಕಾರ್ಯಕ್ಷೇತ್ರ ಧಾರ್ಮಿಕ ಮತ್ತು ವೇದಾಂತಪರವಾಗಿದ್ದಿತು. ಈ ಎರಡು ಕ್ಷೇತ್ರಗಳಲ್ಲಿ ಅವರು ಸಲ್ಲಿಸಿದ ಸೇವೆ ಅಮೋಘವಾದದು. ದರ್ಶನಶಾಸ್ತ್ರದಲ್ಲಿ ಅವರು ಎಷ್ಟು ಗಟ್ಟಿಗರೊ ಅಷ್ಟೇ ಗಟ್ಟಿಗರು ಕೀರ್ತನಕಾರರಾಗಿ ಕೂಡ. ತಮ್ಮ ಗುರು ಶ್ರೀಪಾದರಾಜರ ಮಾದರಿಯಲ್ಲಿ ಕನ್ನಡದಲ್ಲಿ ಅನೇಕ ಸುಂದರ ಕೀರ್ತನೆಗಳನ್ನು ವ್ಯಾಸರಾಯರು ರಚಿಸಿದರು. ತಮ್ಮ ಶಿಷ್ಯರಾದ ಪುರಂದರ ಮತ್ತು ಕನಕದಾಸರನ್ನು ಕರ್ನಾಟಕಕ್ಕೆ ಕೊಡುಗೆಯಾಗಿ ಇತ್ತುದೇ ವ್ಯಾಸರಾಯರ ಘನಕಾರ್ಯಗಳಲ್ಲಿ ಒಂದು. ದಾಸಕೂಟವು ಸಮಾಜದಲ್ಲಿ ವೈಷ್ಣವ ಧರ್ಮದ ಪ್ರಜ್ಞೆಯನ್ನು ಜನಸಾಮಾನ್ಯರ ನೈತಿಕ ಉದ್ಧಾರವನ್ನು ಉಂಟುಮಾಡಿತು.

ವ್ಯಾಸರಾಯರ ಪ್ರಭಾವ ಹಳೆಯ ಮೈಸೂರಿನಲ್ಲಿ ಉತ್ತರ ಕರ್ನಾಟಕದ ಬಾಗಲಕೋಟೆ ಹುನಗುಂದ ಮುದ್ದೆಬಿಹಾಳ ಮುಂತಾದ ಪ್ರದೇಶಗಳಲ್ಲಿ ಆಗಿದೆ. ತಮಿಳುನಾಡಿನ ಕುಂಭಕೋಣ ಕಂಚಿ ಮುಂತಾದೆಡೆಗಳಲ್ಲಿ ವ್ಯಾಸರಾಯರ ಶಿಷ್ಯರಿದ್ದಾರೆ. ಅಷ್ಟೇ ಅಲ್ಲದೆ ಬಂಗಾಳದ ಚೈತನ್ಯ ಪಂಥೀಯರ ಭಕ್ತಿಪಂಥದಮೇಲೆ ವ್ಯಾಸರಾಯರ ಪ್ರಭಾವ ದೊಡ್ಡದು. ಚೈತನ್ಯಪಂಥೀಯರ ಒಂದು ಗುಂಪು ತಾವು ರಾಜೇಂದ್ರತೀರ್ಥ ಮತ್ತು ವ್ಯಾಸತೀರ್ಥರ ಮೂಲಕ ಬಂದ ಮಾಧ್ವರು ಎಂದು ಭಾವಿಸುತ್ತಾರೆ. ಚೈತನ್ಯರ ಜೀವಿತವನ್ನು ಕುರಿತು ಬರೆದ ಕವಿ ಕರ್ಣಪೂರ್ಣನು ವ್ಯಾಸರಾಯರ ಮೂರು ಕೃತಿಗಳನ್ನು ವಿಷ್ಣು ಸಂಹಿತ ಎಂದು ಕರೆದಿದ್ದಾನೆ.

ಈ ಎಲ್ಲ ಪರಿಶೀಲನೆಯಿಂದ ವ್ಯಾಸರಾಯರು 16ನೆಯ ಶತಮಾನದಲ್ಲಿ ಉತ್ತರ ಮತ್ತು ದಕ್ಷಿಣ ಭಾರತದಲ್ಲಿ ವೈಷ್ಣವ ಧರ್ಮದ ಪ್ರಸಾರ ಕಾರ್ಯದಲ್ಲಿ ಮಹಾನ್ ವ್ಯಕ್ತಿಯಾಗಿದ್ದುದು ತಿಳಿದು ಬರುತ್ತದೆ.

೨೨

ಶ್ರೀಪಾದರಿಂದ ರಚಿತವಾದ ಕೆಳಗಿನ ಪದ್ಯ ಮಧ್ವಮತದ ಸ್ವರೂಪವನ್ನು ತಿಳಿಸುತ್ತದೆ—

> ಶ್ರೀಮನ್ಮಧ್ವಮತೇ ಹರಿಃ ಪರತರ ಸತ್ಯಂ ಜಗತ್ತತ್ವತೋ
> ಭೇದೋ ಜೀವಗಣಾ ಹರೇರನುಚರಾಃ ನೀಚೋಚ್ಚ ಭಾವಂಗತಾಃ
> ಮುಕ್ತಿರ್ನೈಜ ಸುಖಾನ ಭೂತಿರಮಲಾ ಭಕ್ತಿಶ್ಚ ತತ್ಸಾಧನಂ
> ಹ್ಯಕ್ಷಾದಿತ್ರಿತಯಂ ಪ್ರಮಾಣಮಖಿಲಾಮ್ನಾಯೈಕ ವೇದ್ಯೋ ಹರಿ ॥

ಇದರ ಪ್ರಕಾರ—1) ಶ್ರೀಹರಿಯು ಸರ್ವೋತ್ತಮ 2) ಜಗತ್ತು ಪರಮಾರ್ಥಿಕ ಸತ್ಯ 3) ಪಂಚಭೇದವು ಪಾರಮಾರ್ಥಿಕ ಸತ್ಯ ಮತು ನಿತ್ಯ 4) ಜೀವಗಣಗಳು ಶ್ರೀಹರಿಯ ಅನುಚರರು 5) ನಿತ್ಯ ತಾರತಮ್ಯವುಳ್ಳವರು 6) ಸ್ವರೂಪ ಸುಖಾನುಭವವೇ ಮುಕ್ತಿ 7) ನಿರ್ಮಲವಾದ ಭಕ್ತಿಯು ಮುಕ್ತಿಗೆ ಸಾಧನ 8) ಪ್ರತ್ಯಕ್ಷ ಅನುಮಾನ ಆಗಮಗಳು ಸಾಧಕ ಪ್ರಮಾಣಗಳು 9) ಶ್ರೀಹರಿಯು ಆಗಮ ಮಾತ್ರ ವೇದ್ಯನು ಈ ಎಲ್ಲ ಅಂಶಗಳೂ ಮಧ್ವಾಚಾರ್ಯರ ತತ್ವವಾದದ ಸಂಗ್ರಹ ಸ್ವರೂಪ

ವ್ಯಾಸರಾಯರು ಶ್ರೀಪಾದರಾಯರಲ್ಲಿ ವ್ಯಾಸಂಗ ಮಾಡಿದವರು ಈ ತತ್ವಗಳ ಪ್ರತಿಪಾದನೆಗಾಗಿ ಅವರು ಸಂಸ್ಕೃತದಲ್ಲಿ 9 ಕೃತಿಗಳನ್ನು ರಚಿಸಿದ್ದಾರೆ ವ್ಯಾಸತ್ರಯಗಳೆಂದು ಪ್ರಸಿದ್ಧವಾದ ನ್ಯಾಯಾಮೃತ ತರ್ಕತಾಂಡವ ಮತ್ತು ಚಂದ್ರಿಕಗಳು ಅವರ ಮೂರು ಪ್ರಮುಖ ಗ್ರಂಥಗಳು ಕಿರುಕೃತಿಗಳಲ್ಲಿ ಭೇದೋಜ್ಜೀವನಕ್ಕೆ ಪ್ರಥಮ ಸ್ಥಾನ ಅನಂತರ ಅವರ ತತ್ವ ಪ್ರತಿಪಾದನಾ ಗ್ರಂಥಗಳಾದ ಖಂಡನ ತ್ರಯ (1 ಮಾಯಾವಾದ ಖಂಡನ ಮಂದಾರ ಮಂಜರಿ 2 ಉಪಾಧಿ ಖಂಡನ ಮಂದಾರ ಮಂಜರಿ 3 ಪ್ರಪಂಚವಿ ಥ್ಯಾತ್ವಾನುಮಾನಖಂಡನ ಮಂದಾರ ಮಂಜರಿ) ಮತ್ತು ತತ್ವವಿವೇಕಗಳು ಬರ ತ್ರವೆ ಮಧ್ವಾಚಾರ್ಯರ 37 ಕೃತಿಗಳನ್ನು ಹೇಳುವ ಗ್ರಂಥಮಾಲಿಕಾ ಸ್ತೋತ್ರ ಇವರದು ಶ್ರೀಪಾದರಾಜರಚಿತವೆಂದು ಹೇಳುವ ಶ್ರೀಮನ್ಮಧ್ವಮತೆ ಎನ್ನುವ ಕೃತಿಯನ್ನು ಇವರ ಹೆಸರಿಗೂ ಹೇಳುತ್ತಾರೆ ಅಲ್ಲದೆ ಆಂತರಿಕ ಆಧಾರಗಳಿಂದ ಬಿ ಎನ್ ಕೆ ಶರ್ಮ ಅವರು ವ್ಯಾಸರಾಯರ ಸತ್ತರ್ಕವಿಲಾಸ ಎನು ವ ಕೃತಿಯೊ ದಿದ್ದು ಅದರ ಹಸ್ತಪ್ರತಿಗಳು ಉಪಲಬ್ಧವಿಲ್ಲ ಎಂದು ಊಹಿಸಿದ್ದಾರೆ

ಶ್ರೀಪಾದರಾಯರು ಕನ್ನಡದಲ್ಲಿ ಸುಳಾದಿ ಪದಗಳನ್ನು ರಚಿಸಿದಂತೆಯೇ ವ್ಯಾಸರಾಯರು ಕೂಡ ಕನ್ನಡದಲ್ಲಿ ಅನೇಕ ಕೃತಿಗಳನ್ನು ರಚಿಸಿದ್ದಾರೆ ಅವುಗಳಲ್ಲಿ

ಸುಮಾರು 102 ಕೀರ್ತನೆಗಳು ಪ್ರಕಟವಾಗಿವೆ ಕೃಷ್ಣ ಸಿರಿಕೃಷ್ಣ ಮತ್ತು ಶ್ರೀಕೃಷ್ಣ ಎನುವ ಅಂಕಿತಗಳಲ್ಲಿ ಅವರ ಕೀರ್ತನೆಗಳಿವೆ ಅವರ ಅಂಕಿತವನು ಕುರಿತು ಒಂದು ಉಲ್ಲೇಖ ಹಿ ಗಿದೆ ವ್ಯಾಸರಾಯ ರು ಕೃಷ್ಣ ಮ ದ್ದಿಕೆಯಿಂದ ದೆ ವರನಾಮಗಳನು ಮಾಡ ತ್ತಿದ್ದರು ಒಂದ ರಾತ್ರಿ ಸ್ವಪ್ನದಲ್ಲಿ– ನೀನಂತು ಸಂನ್ಯಾಸಿ ನಿನಗೆ ಹೆಂಡರಿಲ್ಲ ನನಗಿಲ್ಲವೆ ? ಶ್ರೀಕೃಷ್ಣನೆಂದು ಅಂಕಿತವಮಾಡು ಎಂದು ಪರಮಾತ್ಮನು ಹೆ ಳದನಂತೆ ! ಅನಂತರ ಅವರು ಶ್ರೀಕೃಷ್ಣನೆಂದ ಪದಗಳಿಗೆ ಅಂಕಿತ ಮಾಡ ತ್ತ ಒಂದರಂತೆ [1] ವ್ಯಾಸರಾಯರ ಕೀರ್ತನೆಗಳನು ಕ ರಿತು ಆರ್ ಎಸ್ ಪಂಚಮುಖಿಯವರು ಹಿ ಗೆ ಹೆ ಳುತ್ತಾರೆ ಸಂಸ ರದಲ್ಲಿ ಹೇಯ ಬುದ್ಧಿ ಇಂದ್ರಿಯ ನಿಗ್ರಹ ಸಜ್ಜನ-ಂಗ ಪರಮಾತ್ಮನಲ್ಲಿ ಅತು೦ವಾದ ಭಕ್ತಿ ಶ್ರೀಕೃಷ್ಣನೇ ಶರಣು ಎಂಬ ದೃಢವಿಶ್ವಾಸ ಇವು ವ್ಯಾಸರಾಯ ರ ಕೃತಿಗಳಿಂದ ಒಡೆದು ಕಾಣ ತ್ತೇವೆ [1] ವ್ಯಾಸರಾಯ ರ ಕೃತಿಗಳು ದೃಷ್ಟಾಂತ ಉಪಮೆ ರೂಪಕ ಮುಂತಾದ ಅ೦ಂಕಾರ ಗಳಿಂದ ಕೂಡಿ ಸರಳವಾಗಿವೆ ಅವರ ಭಾಷೆ ಹೃದಯ ಂಗವ ವಾಗಿದೆ ಅವರು ಸಂಸ್ಕೃತ ಕೃತಿಗಳಲ್ಲಿ ತೋರಿದ ಪ್ರೌಢಿಮೆ ಇಲ್ಲಿ ಕಂಡುಬರುವುದಿಲ್ಲ ಅಲ್ಲಿ ವಿದ್ವಾಂಸ ರನ್ನು ಪ್ರತಿವಾದಿಗಳನ್ನು ಕುರಿತು ಬರೆದರೆ ಇಲ್ಲಿ ಅವರು ಜನಸಾಮಾನ್ಯರನ್ನು ಪಂಥದ ಮ ಲಿನ ಅಭಿಮಾನಿಗಳನ್ನು ಕುರಿತು ಬರೆದಿದ್ದಾರೆ ಇವರ ಕೃತಿಗಳಲ್ಲಿ ಆತ್ಮ ನಿರೀಕ್ಷಣೆಯಿದೆ ಆರ್ತಭಾವವಿದೆ ಸಮಾಜವನ್ನು ತಿದ್ದುವ ಒಯಕೆಯೂ ಇದೆ ಉದ ಹರಣೆಗೆ ಜೇನಿನೊಳಗೆ ಬಿದ್ದ ನೊಣದಂತೆ ಕರದಲೊಪ್ಪುವ ಮುತ್ತಿಗೆ ಕನ್ನಡಿಯ ನೋಡಬೇ ಕೆ ? ಏನೆಂಬೆ ದಾಸರಿ ಕೋಡಗೂಂದದಿ ಕುಣಿಯ ವೆ ನಾನೆಲ್ಲ ಜನಗಳ ಮುಂದೆ ಜೊ ಗಿಗಾಗಿ ಕೊ ಡಗ ಪಾಟು ಬಡುವಂತೆ ಚಾರತ್ವವನು ಮಾಡಿದ ಪಾಪಿಗಳಿಗೆಲ್ಲ ಗೋಪೀಜನಜಾರನೆಂದರೆ ಸಾಲದೆ ಕರಿರಥಾ ತುರಗವಿರಲು ಬಿಟ್ಟು ಕಿಡಹುವ ಕತ್ತೆಯೆರಲಿ ಬೇಡವೊ ದಾವಾನ೦ವ ತಪ್ಪಿಸಿ ಕ ಡಾನೆಯ ದೇವಗಂಗೆಯ ತಂದು ಹೊ ಗಿಸಿದಂತೆ ಗಾತ್ರವೆ ವ ಂದಿರ ಹೃದಯವೇ ಮಂಟಪ ನೇತ್ರವೇ ಮಂದಿರ ಮ ಂತಾದುವನ್ನು ನೋಡಬಹುದು ಪುರಂದರದಾಸರು ವ್ಯಾಸರಾಯ ರ ಸಾಧನೆಗಳನ್ನೆಲ್ಲ ಕುರಿತು ಸ್ತುತಿಸಿದಂತೆಯೇ ಅವರು ಐಕ್ಯರಾದಾಗ ಬರೆದ ಪದ್ಯದಲ್ಲಿ ಒರುವ—

> ಭಕುತಿಯು ಕುತರಾಗಿ ಮುಕುತಿಮಾರ್ಗಪಿಡಿದು
> ಅಖಿಳ ಬಗೆಯಿಂದ ಧ್ಯಾನಿಸುತ
> ಸಕಲಾಗಮಗೇಯ ಸದ್ಗುಣ ಪರಿಪೂರ್ಣ
> ಅಕಳಂಕ ಪುರಂದರವಿಠಲನ ಬಳಿಗೆ ॥

---

1 ಶ್ರೀ ಕರ್ನಾಟಕ ಭಕ್ತ ವಿಜಯ (1963)—ಬೇಲೂರು ಕೇಶವದಾಸರು ಪುಟ 387

1 ಕರ್ನಾಟಕ ಹರಿದಾಸ ಸಾಹಿತ್ಯ (1952)—ಆರ ಎಸ ಪಂಚಮುಖಿ ಪುಟ 116

ಎನ್ನುವ ಮಾತು ವ್ಯಾಸರಾಯ ರ ಜೀವಿತದ ಗಂತವ್ಯವನ್ನು ಸೂಚಿಸುತ್ತದೆ ಹೀಗೆ ಸುಮಾರು 75 ವರ್ಷಗಳಿಗೂ ಮೀರಿ ಬದುಕಿದ್ದ ವ್ಯಾಸರಾಯರು 16 ನೆಯ ಶತಮಾನದಲ್ಲಿ ಕರ್ನಾಟಕದಲ್ಲಿ ಧಾರ್ಮಿಕ ಆಂದೋಲನದ ನೇತೃತ್ವವನ್ನು ವಹಿಸಿದರು ರಾಜಕೀಯ ಸ್ಥಿರತೆಯನ್ನು ಕಾಪಾಡುವಲ್ಲಿ ಪ್ರಮುಖ ಪಾತ್ರ ವಹಿಸಿದರು ಸಮಾಜದ ಶಿಷ್ಟತೆಯನ್ನು ಕಾಪಾಡಿದರು ಏನು ಮುನಿಗಳದ್ದೇನಂ ಮಾಡಿದರಂ ವ್ಯಾಸಮು ನಿ ಮಧ್ವಮತವನುದ್ಧರಿಸಿದ ಎನ್ನುವ ಪುರಂದರದಾಸರ ಮಾತಿನ ಸಾರ್ಥಕ್ಯ ಅವರ ಜಿ ವನದಲ್ಲಿ ಕಂಡುಬರುತ್ತದೆ

## ಆಕರ


1 History of the Dvaita School of Vedanta and its Literature-B N K Sharma Motilal Banarsi Das Delhi 1981

2 ಶ್ರೀ ಕರ್ನಾಟಕ ಭಕ್ತ ವಿಜಯ — ಶ್ರೀ ಬೇಲೂರು ಕೇಶವದಾಸರು ಸುಬೋಧ ಮು ದ್ರಣಾಲಯ ಬೆಂಗಳೂರು 1963

3 ಕರ್ನಾಟಕದ ಹರಿದಾಸ ಸಾಹಿತ್ಯ—ಆರ್ ಎಸ್ ಪಂಚಮುಖಿ ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು 1952

4 ಕರ್ನಾಟಕದ ಹರಿದಾಸರು—ಎಚ್ ಕೆ ವೇದವ್ಯಾಸಾಚಾರ್ಯ ಶ್ರೀ ಪರಿಮಳ ಸಂಶೋಧನ ಮತ್ತು ಪ್ರಕಾಶನ ಮಂದಿರ ನಂಜನಗೂಡು

5 ಪೂಜಾತತ್ವ (ಪುರಂದರದಾಸರ ಕೀರ್ತನೆಗಳು—ಬೆಟಗೇರಿ ಕೃಷ್ಣಶರ್ಮ ಮತ್ತು ಹುಚ್ಚೂರಾವ ಬೆಂಗೇರಿ ಧಾರವಾಡ

6 ವ್ಯಾಸರಾಯರ ಹಾಡ ಗಳು—ಕಾವ್ಯಪ್ರೇಮಿ ಸಮಾಜ ಪುಸ್ತಕಾಲಯ ಧ ರವಾಡ

7 ಕರ್ನಾಟಕದ ಹರಿದಾಸರು—ಜಿ ಎಚ್ ಬಿ ಆಚಾರ್ಯ

8 ವ್ಯಾಸರಾಯರು—ಜಯತೀರ್ಥ ರಾಜಪುರೋಹಿತ

# ದಾಸಸಾಹಿತ್ಯ ರಕ್ಷಣೆ ಪ್ರಕಟಣೆ

**ಡಾ॥ ಟಿ ಎನ್ ನಾಗರತ್ನ**

ಯಾವುದೇ ಬಗೆಯ ಸಾಹಿತ್ಯವನ್ನು ಅಭ್ಯಾಸಮಾಡಬೇಕಾದರೂ ಮೊದಲ ಹಂತವಾಗಿ ಆ ಸಾಹಿತ್ಯವನ್ನು ಸಂಗ್ರಹಿಸಬೇಕು ಸವ ಕಾಲ ಸ ಸ ಹಿತ್ಯ ಸಂಗ್ರಹಣೆ ಮುದ್ರಣ ವ ವಸ್ಥೆಯಿಂದಾಗಿ ಸುಲಭವಾದರೂ ಹಿಂದಿನ ಸಾಹಿತ್ಯವನ್ನು ಸಂಗ್ರಹಿಸುವುದು ಅಷ್ಟು ಸುಲಭದ ಕೆಲಸವಲ್ಲ ಕನ್ನಡ ಸಾಹಿತ್ಯಕ್ಕೆ ಸಾವಿರ ವರ್ಷಗಳ ಹಳಮೆಯಿದ್ದರೂ ಆ ಸಾಹಿತ್ಯವೆಲ್ಲ ದ ಎಲಾಗಿರುವುದು ಹಸ್ತಪ್ರತಿಗಳಲ್ಲಿ ಆದ ರಿಂದ ಅಭ್ಯಾಸಿಗಳು ಮೊದಲು ಹಸ್ತಪ್ರತಿ ಸರ್ವೇಕ್ಷಣ ಕಾರ್ಯ ಮಾಡುವುದು ಅನಿವಾರ್ಯ ನಮ್ಮಲ್ಲಿ ಸಾಹಿತ್ಯ ಕೃತಿಗಳ ಒಗೆ ಒಂದು ಧಾರ್ಮಿಕ ಆವರಣವಿರುತ್ತದೆ ಹಸ್ತಪ್ರತಿಗಳಲ್ಲಿರುವ ಗ್ರಂಥಗಳನು ಮನೆತನದ ಆಸ್ತಿ ಎಂದು ಪರಿಗಣಿಸಿ ದೇವರ ಬಳಿಯಿಟ್ಟು ಪೂಜೆಮಾಡಲಾಗುತ್ತದೆ ಈ ರಿ ತಿಯ ಭಾವನಾತ್ಮಕ ಸಂಬಂಧಗಳು ಬಲವಾಗಿರುವುದರಿಂದ ತಮ್ಮಲ್ಲಿರುವ ಸಾಹಿತ್ಯ ಕೃತಿಗಳ ಅಥವಾ ಗ್ರಂಥಗಳ ಪ್ರತಿಗಳನು ಯಾರೂ ಅಷ್ಟು ಸುಲಭವಾಗಿ ಇತರರಿಗೆ ಕೊಡುವುದಿಲ್ಲ ಕೆಲವರಿಗೆ ಅವುಗಳ ಬಗ್ಗೆ ಏನೂ ತಿಳಿದಿರುವುದಿಲ್ಲ ಅವುಗಳನು ಓದುವ ಸಾಮರ್ಥ್ಯವಿರದಿದ್ದರೂ ಅವರು ಅವುಗಳ ಪೂಜೆಯನು ಮಾತ್ರ ಬಿಡುವುದಿಲ್ಲ ಇನ್ನು ಕೆಲವರಿಗೆ ಅವುಗಳಲ್ಲಿರುವ ವಿಷಯಗಳ ಅರಿವಿದ್ದೂ ಆರ್ಥಿಕವಾಗಿ ಅವರ ಅವುಗಳನ್ನು ಪ್ರಕಟಿಸುವ ಸ್ಥಿತಿಯಲ್ಲಿರುವುದಿಲ್ಲ ಆದರೂ ಅವರು ವರ್ಷಕ್ಕೊಮ್ಮೆ ದಸರಾ ಹಬ್ಬದ ಮೂಲಾನಕ್ಷತ್ರದಂದು ಅವುಗಳ ಧೂಳು ಕೊಡವುದಿನಕಡಿ ಹತ್ತಿಸುತ್ತಾರೆಯೇ ವಿನಾ ಇತರರಿಗೆ ಅವನು ಕೊಡುವುದಿಲ್ಲ ನಮ್ಮಿಂದ ಹಸ್ತಪ್ರತಿಗಳನು ಪಡೆದು ಇವರು ವಿಪರೀತ ಹಣ ಸಂಪಾದಿಸುವರೆಂಬ ಯೋಚನೆಯೂ ಕೆಲವರಿಗುಂಟು ಹೀಗಾಗಿ ನಮ್ಮಲ್ಲಿ ಹಸ್ತಪ್ರತಿಗಳ ಸಂಗ್ರಹಣೆ ಬಲು ಕಷ್ಟಕರವಾದ ಕೆಲಸ ಅದರಲ್ಲೂ ದಾಸಸಾಹಿತ್ಯ ಇತರ ಲಿಖಿತ ಕಾವ್ಯಗಳಂತಲ್ಲ ನೂರಾರು ವರ್ಷಗಳ ಕಾಲ ಕೇವಲ ಬಾಯಿಂದ ಬಾಯಿಗೆ ದ ಟಿ ಒಂದಂತಹ ಸಾಹಿತ್ಯ ಆಸಕ್ತರು ಓದುಬರಹ ಬಲ್ಲವರು ಗಾಯನದಲ್ಲಿ ಪರಿಶ್ರಮವುಳ್ಳವರು ತವ ಗೆ ಇಷ್ಟವಾಗಿ ತೋರಿದ ಹಾಡುಗಳನು ಬರೆದಿಟ್ಟುಕೊಳ್ಳಲು ಮೊದಲು ಮಾಡಿದರು ಆಗ ದಾಸಸಾಹಿತ್ಯದ ಲಿಖಿತ ಪ್ರತಿಗಳು ತಯಾರಾದವು ಲೋಕೋ ಭಿನ್ನರುಚಿಃ ಆದುದರಿಂದ ಒಬ್ಬೊಬ್ಬರು ಸಂಗ್ರಹಿಸಿಟ್ಟ ಹಾಡುಗಳು ಒಂದೊಂದು ರೀತಿಯವು ಕೃಷ್ಣನ ಬಾಲಲೀಲೆ ಕೆಲವರಿಗೆ ಮೆಚ್ಚುಗೆಯಾಗಿರಬಹುದು ಮಧ್ವಶಾಸ್ತ್ರ ಮತ ತತ್ವಗಳ ಆಸಕ್ತಿ ಕೆಲವರಿಗಿರಬಹುದು ಯಾವುದೇ ರಿ ತಿಯ ಕ ತಿಯಾದರೂ ಪರವಾಗಿಲ್ಲ ಹರಿದಾಸರು ಹಾಡಿದ್ದಾದರೆ ಸರಿ ಎನ್ನುವ ವ ನೆ ೀ

ಭಾಗ ಹಲವರಿಗಿರಬಹುದು ಅಂದರೆ ವೈಯಕ್ತಿಕವಾದ ಭಕ್ತಿ ಸಾಹಿತ್ಯಾಭಿರುಚಿ ವಸ್ತುವ ತ್ವಿಷೆ ದಾಸರು ಹುಟ್ಟಿ ಬೆಳೆದ ಸ್ಥಳಗಳ ಪರಿಸರದ ಪ್ರಭಾವ ಬಾಂಧವ್ಯ ಅಭ್ಯಾಸಾಸಕ್ತಿ ಹಾತ ವ ಗೀಳು ಇ ತೆ ಮೊದಲಾದ ಕಾರಣಗಳಿಂದ ದಾಸಸಾಹಿತ್ಯ ಸಂಗ್ರಹಣೆ ನಡೆದಿರುವುದು ಕಂಡುಬರುತ್ತದೆ ಜೈನ ವಿ ರಶೈವ ವೈದಿಕಮಠಗಳಲ್ಲಿ ದಾಸಸಾಹಿತ್ಯದ ಸಂಗ್ರಹವಿಲ್ಲ ಬಹುಶಃ ಮಠದ ಪರಿಸರದಲ್ಲಿ ವ್ಯಾಸಸಾಹಿತ್ಯ (—ಸಂಸ್ಕೃತ ಭ ಷೆಯ ಮೂಲಕ ಪ್ರತಿಪಾದಿಸಿದ ಮಾಧ್ವಮತ ತತ್ವಗಳು) ಕ್ಕೆ ಇದ್ದ ಮನ ಣೆ ದಾಸಸಾಹಿತ್ಯಕ್ಕೆ ಇಲ್ಲದಿದ್ದುದರಿಂದ ಇಂದು ನಾವು ದಾಸಸಾಹಿತ್ಯ ಸಂಗ್ರಹಣೆಗೆ ದಾ ರ ಸಂಬಂಧಿಗಳನ್ನೋ ಆ ಕ್ತರ ದ ಆಸ್ತಿಕರನ್ನೋ ಅವಲಂಬಿಸ ಬೇಕಾಗಿದೆ

ಹೀಗೆ ಈಗ ಉಪಲಬ್ಧವಿರುವ ದಾಸಸಾಹಿತ್ಯದ ಹಸ್ತಪ್ರತಿಗಳನ್ನು

1) ಓಲೆಯ ಪ್ರತಿಗಳು
2) ದಪ್ಪ ಕೈ ಕಾಗದದ ಪ್ರತಿಗಳು
3) ಸಾಮಾನ್ಯ ಕಾಗದದ ಹಸ್ತಪ್ರತಿಗಳು

ಎಂದು ವಿಂಗಡಿಸಿಕೊಳ್ಳಬಹುದು ಇವುಗಳೊಂದಿಗೆ ಹಳೆಯ ಮುದ್ರಿತ ಪ್ರತಿಗಳಿಗೂ ಪ್ರತ್ಯೇಕ ಹಸ್ತಪ್ರತಿಗಳ ಬೆಲೆಯನ್ನು ಕೊಡುವುದುಂಟು ಅಂತೆಯೇ ಕಂಠಸ್ಥವಾಗಿ ರುವ ದಾಸರ ಪದಗಳನು ಧ್ವನಿ ಮುದ್ರಿಸಿಕೊಂಡು ಅವುಗಳಿಗೂ ಪ್ರತ್ಯೇಕ ಹಸ್ತ ಪ್ರತಿಯ ಬೆಲೆಯನ್ನ ಕೊಡಬಹುದು ಈ ಎಲ್ಲ ರಿ ತಿಯ ಹಸ್ತಪ್ರತಿಗಳೂ ಮೈಸೂರಿನ ಕನ ಡ ಅಧ್ಯಯನ ಸಂಸ್ಥೆಯ ಹರಿದಾಸ ಸಾಹಿತ್ಯ ವಿಭಾಗದ ಗ್ರಂಥ ಭಂಡಾರದಲ್ಲಿವೆ ಧ್ವನಿಮುದ್ರಿತವಾದ ನೂರಾರು ಹಾಡುಗಳೊಂದಿಗೆ ಸು 335 ಲಿಖಿತ ಹಸ್ತಪ್ರತಿಗಳಿವೆ ಇವುಗಳೊಂದಿಗೆ ಸಾಕಷ್ಟು ಹಳೆಯ ಮುದ್ರಿತ ಪ್ರತಿಗಳೂ ಇದ್ದು ಗ್ರಂಥಭಂಡಾರವನು ಶ್ರೀಮಂತವ ಗಿಸಿವೆ ಓಲೆಯ ಪ್ರತಿಗಳು ಕನ ಡ ಲಿಪಿಯಲ್ಲಿಯ ಕಾಗದದ ಪ್ರತಿಗಳು ದೇವನಾಗರೀ ತೆಲುಗು ಮತ್ತು ಕನ ಡ ಲಿಪಿಗಳಲ್ಲಿಯೂ ಇವೆ

ಹಸ್ತಪ್ರತಿಗಳು ಒಂದೊಂದೇ ಪ್ರತಿಗಳಾಗಿದ್ದು ಮತ್ತೆ ಮತ್ತೆ ಬಳಸುವುದರಿಂದ ಬಲುಬೇಗ ಜೀರ್ಣವಾಗಿ ನಶಿಸಿಹೋಗುತ್ತವೆ ಮುಂಚ್ಚಿದರೆ ಪುಡಿಯಾಗುವ ಸ್ಥಿತಿಗೆ ಬಂದಿರುವ ಓಲೆಯ ಕಾಗದದ ಹಸ್ತಪ್ರತಿಗಳೂ ಇವೆ ಹೀಗಾಗಿ ಅವುಗಳನ್ನು ಮುತುವರ್ಜಿಯಿಂದ ನೋಡಿಕೊಂಡು ಕಾಪಾಡದಿದ್ದರೆ ನಮ್ಮ ಮುಂದಿನ ತಲೆಮಾರಿಗೆ ಅವುಗಳಲ್ಲಿರುವ ವಿಚಾರದ ನೀಡಿಕೆ ಅಸಾಧ್ಯ ಆದ್ದರಿಂದ ಹಸ್ತಪ್ರತಿಗಳ ಸಂಗ್ರಹಣೆ ಎಷ್ಟು ಕಷ್ಟಸಾಧ್ಯವೋ ಅವುಗಳ ಸಂರಕ್ಷಣೆ ಇನ್ನೂ ಹೆಚ್ಚಿನ ಜವಾಬ್ದಾರಿಯುತ ವಾದದ್ದು

ಮೊಟ್ಟಮೊದಲಿಗೆ ಹಸ್ತಪ್ರತಿಗಳನು ಬಳಸುವವರಿಗೆ ಅವು ನಮ್ಮವು ಎನು ವ ಅಭಿಮಾನ ಆತ್ಮಗತ್ಮ ಒಂದು ಒಳಿಯ ವ ಗ ವನು ಎತ್ತಿಕೊಳು ವಾಗ ಇರ ವ ಎಲ್ಲಿ ತಗುಲಿಸಿಬಿಡುತ್ತೇವೋ ಬೀಳಿಸಿಬಿಡ ತ್ತೇವೊ ಎಲ್ಲಿ ಅದಕ್ಕೆ ಹಾನಿಯಾಗುತ್ತದೊ ಎನ್ನುವ ಆತಂಕ ಎಚ್ಚರ ಕಳಕಳಿಗಳು ಒಂದು ಹಸ್ತಪ್ರತಿಯನ್ನು ಕೈಗೆ ತೆಗೆದು ಕೊಳ್ಳುವಾಗಲೂ ಇರಬೇಕು

ಹಿಂದಿನವರು ಹಸ್ತಪ್ರತಿಗಳ ರಕ್ಷಣೆಗೆ ಅನೇಕ ಮಾರ್ಗಗಳನು ಹುಡ ಕಿಕೊಂಡಿದ್ದರು ಅವಗಳನು ನಕಲು ಮಾಡಿ ಬಣ್ಣಬಣ್ಣದ ಒಟೆ ಗಳಲ್ಲಿ ಕಟ್ಟಿಡುವುದ ಹೊಂಗೆ ಎಲೆ ಬೇವಿನೆಲೆ ಕರ್ಪೂರದ ಹೆಂಟೆಗಳು ಅರಿಶಿನ ಶ್ರೀಗಂಧದ ಪುಡಿಗಳನ್ನು ಹಸ್ತಪ್ರತಿಗಳೊಂದಿಗಿಟ್ಟು ಗಂಟು ಕಟ್ಟಿಡುವುದು ಇವೇ ಮೊದಲಾದ ಕ್ರಮಗಳಿ ದ ಬೆಳ್ಳಿಮೀನು ಜಿರಳೆ ಪುಸ್ತಕಕಿ ಟ ಗೆದ್ದಲು ಮೊದಲಾದ ಪುಸ್ತಕ ವೈರಿಗಳ ದ ಕ್ರಿಮಿ ಕೀಟಗಳನು ನಿವಾರಿಸ ತ್ತಿದ್ದರು ಕಾಗದದ ಹಸ್ತಪ್ರತಿಗಳಾದರೆ ದಪ್ಪಟ್ಟೆ ಹ ಗೂ ರಟ್ಟುಗಳನು ಒಳಸಿ ಪ್ರತಿಗಳಿಗೆ ರಟ್ಟು ಹ ಕಿದ ವ ಮೂಲಕ ರಕ್ಷಣೆ ಒದಗಿಸು ತ್ತಿದ್ದರು ಸೌದೆಒಲೆ ಸ ರುಗುಗಳನು ಹೊತ್ತಿಸುತ್ತಿದ್ದ ಹೆಂಚಿನ ಮನೆಗಳಲ್ಲಿ ದೊಡ್ಡದೊಡ್ಡ ಮ ರದ ಪೆಟ ರಿಗಳಲ್ಲೂ ಸಂದೂಕಗಳಲ್ಲೂ ಬೆತ್ತದ ಒ ಟ್ಟಿಗಳಲ್ಲೂ ಹಸ್ತಪ್ರತಿಗಳನಿ ಟ್ಟು ಅವುಗಳನ್ನು ಹೊಗೆಗ ಡಿಗಳಲ್ಲಿಡುತ್ತಿದ್ದರು ಹೊಗೆಯ ಹ ಗೂ ಬೆಚ್ಚ ಯ ವಾತಾವರಣದಿಂದಾಗಿ ಹಸ್ತಪ್ರತಿಗಳಿಗೆ ಬೂಷ್ಟು ಹಿಡಿಯುತ್ತಿರ ಲಿಲ್ಲ ಹಸ್ತಪ್ರತಿಗಳನು ವ ನೆಯ ಮಾಡಿ ಒದಿ ಎಗಳ ಸಂಧಿಯಲ್ಲಿ ಸಿಕ್ಕಿಸ ತ್ತಿದ್ದುದೂ ಸಾಮಾನ್ಯ ನೋ ಟವ ಗಿತ್ತು ಅವು ಹೊಗೆಯಿ ಂದ ಕಪ್ಪಾದರೂ ಹ ಳುಹಪ್ಪಟೆ ಗಳಿಗೆ ತ ತ್ತಾಗ ತ್ತಿರಲಿಲ್ಲ ಧೂಳಿ ಹಿಡಿದು ಅವುಗಳ ಮೇ ಲ ಬೂಷ್ಟು ಬೆಳೆಯ ತ್ತಿರ ಲಿಲ್ಲ ಓಲೆಯ ಪ್ರತಿಗಳಾದರೆ ವಿಶೆ ಷ ಮ ತ ವರ್ಜಿ ಮಹಿ ಓಲೆಗಳನು ಒಂದರ ಮೇಲೊಂದರಂತೆ ಜೋಡಿಸಿ ಆ ಓಲೆಗಳ ಉಳತೆಗೆ ಸರಿಯಾಗಿ ಕತ್ತರಿಸಿದ ಎರಡು ಮರದ ಪಟ್ಟಿಗಳನ್ನು ಅವುಗಳ ಮೇಲೆ ಒಂದು ಕೆಳಗೊಂದು ಇಟ್ಟು ಒಂದು ದಾರದಿಂದ ಕಟ್ಟು ಕಟ್ಟಿ ಇಡ ತ್ತಿದ್ದರು ಅವುಗಳ ಅಳತೆ ಗಾತ್ರಗಳಿಗೆ ಅನುಗುಣವಾಗಿ ನಡು ನಡುವೆ ರಂಧ್ರಗಳನು ಕೊರೆದು (ಒಂದು ಅಥವಾ ಓಲೆ ಉದ್ದವ ಗಿದ್ದಲ್ಲಿ ಎರಡು) ಅವುಗಳ ಮೂಲಕ ಉದ್ದನೆಯ ದಾರವನು ಪೋಣಿಸಿ ಕಟ್ಟಿಡುತ್ತಿದ್ದುದೂ ಉಂಟು ಹರಿದಾಸಸಾಹಿತ್ಯದ ಕೆಲವು ಹಸ್ತಪ್ರತಿಗಳಿಗೆ ಕ ಪ್ಪಾಣಿನದ ರಟ್ಟು ಹಾಕಿ ಸಂರಕ್ಷಿಸಿರು ವುದು ಗಮನಾರ್ಹ (ಕನ ಡ ಅಧ್ಯಯನ ಸ ಸ್ಥೆಯಲ್ಲಿರುವ ಕೆ 22 ಕೋಲಾರದ ಪ್ರಹ್ಲಾದರಾಯರ ಸಂಗ್ರಹದ ಅನುಕ್ರಮಾಂಕ ಇರುವ ಪ್ರತಿ ಮೊದಲಾದುವು )

ಈಗ ಹಸ್ತಪ್ರತಿಗಳ ಸಂರಕ್ಷಣೆ ಮೊದಲಿಗಿಂತಲೂ ಸ ಲಭವಾಗಿದೆ ಶಿಥಿಲ ವಾಗಿರುವ ಹಸ್ತಪ್ರತಿಗಳನ್ನು ಓಲೆಯ ದ ಗಲೀ ಕಾಗದದ್ದಾಗಲೀ ಕೂಡಲೆ ನಕಲು ಮಾಡಿ ಮೂಲದೊಂದಿಗೆ ತಾಳೆ ನೋಡಿ ರಟ್ಟು ಹಾಕಿಸಿ ಇಟ್ಟುಕೊಳ್ಳುವುದು ಒಳ್ಳೆ ಯ ದು ಮತ್ತೆ ಮತ್ತೆ ಆ ಪ್ರತಿಯ ನ್ನು ಪರಿಶೀಲಿಸಬೇ ಕಾದಾಗ ಅದರ ನಕಲನ್ನು

ನೊ ಡಿದರೆ ಸಾಕು ಓಲೆಯ ಪ್ರತಿಗಳಾದಲ್ಲಿ ಅವು ಒಣಗಿ ಪುಡಿಪುಡಿಯಾಗಲು ಅವಕಾಶ ಕೊಡದಂತೆ ಧೂಳು ಮ ಚ್ಚುವುದಕ್ಕೆ ಆಸ್ಪದವಿಲ್ಲದಂತೆ ಒಂದು ರಿ ತಿಯ ಕ್ರಿಮಿನಾಶಕ ಎಣ್ಣೆಯನು ಬಳಿದು ಅವು ಮೆತ್ತಗಿರುವಂತೆ ನೋಡಿಕೊಳ್ಳಲಾಗುತ್ತದೆ ಮ್ಯೆಸೂರಿನ ಪ್ರಾಚ್ಯ ಸಂಶೋಧನ ಸಂಸ್ಥೆಯ ಲ್ಲೂ ಕನ್ನಡ ಅಧ್ಯಯನ ಸಂಸ್ಥೆಯಲ್ಲೂ ಈ ಸ್ಥಳೀಯವಾಗಿ ತಯಾರಿಂದ ಎಣ್ಣೆಯ ಉಪಯೋಗವನ್ನೂ ಅದರ ಪರಿಣಾಮ ವನ್ನೂ ನೋಡಬಹುದು ಓಲೆಗಳ ಎರಡು ಪಕ್ಕಗಳಿಗೂ ಕುಂಚಗಳಿಂದ ಈ ಎಣ್ಣೆ ಯನ್ನು ಸವರಿ ಒಂದರ ಮೇಲೊಂದರಂತೆ ಜೋಡಿಸಿ ಹಿಂದಿನವರು ಮಾಡು ತ್ತಿದ್ದಂತೆಯೆ ಅವುಗಳ ಎರಡು ಮಗ್ಗುಲಿಗೂ ಮರದ ತೆಳ್ಳನೆಯ ಹಲಗೆಗಳನ್ನು ಜೋಡಿಸಿ ರಂಧ್ರದ ಮೂಲಕ ದಾರವನು ಪೋಣಿಸಿ ಕಟ್ಟಿಡಬೇ ಕು ಅಷ್ಟು ಬಿಗಿ ಯಾಗಿಯೂ ಕಟ್ಟದೆ ಸಡಿ ವಾಗಿಯೂ ಕಟ್ಟದೆ ಓಲೆಗಳು ಸ ರಕ್ಷಿತವಾಗಿರುವಂತೆ ನೋಡಿಕೊಂಡು ಕಟ್ಟಬೇಕು ಹಸ್ತಪ್ರತಿಗಳಿಗೆ ಬೂಷ್ಟು ಹಿಡಿಯದಂತೆ ಹವಾ ನಿಯ ಂತ್ರಣ ಕೊಠಡಿಗಳಲ್ಲಿಡುವುದು ಹವಾಗುಣಕ್ಕೆ ತಕ್ಕಂತೆ ಪ್ರತಿಗಳಿಗೆ ವಿದ್ಯುತ್ ಶಾಖದ ಆರೈಕೆ ಮಾಡುವುದು ವೈಜ್ಞಾನಿಕವಾಗಿ ತಯಾರಿಸಲಾಗಿರುವ ಬಗೆಬಗೆಯ ರಾಸಾಯನಿಕ ಕ್ರಿಮಿನಾಶಕ ದ್ರಾವಣಗಳನ್ನು ಬಳಸುವುದು ಕಾಲಕಾಲಕ್ಕೆ ಹಸ್ತಪ್ರತಿ ಗಳ ಮೆ ಲಿನ ಧೂಳು ಬೂಷ್ಟುಗಳನು ಬಟ್ಟೆಯಿಂದ ಒರೆಸಿ ತೆಗೆಯುವುದು ಇವೇ ಮೊದಲಾದ ಕ್ರಮಗಳನ್ನನುಸರಿಸಿ ಹಸ್ತಪ್ರತಿಗಳು ನಶಿಸಿ ಹೋಗದ ಹ ಗೆ ತಡೆಯ ಬಹುದು

ಯಂತ್ರಗಳ ಬಳಕೆ ಹೆಚ್ಚಿರುವ ಈ ಇಪ್ಪತ್ತನೇ ಶತಮಾನದ ಕೊನೆಯ ಭಾಗ ದಲ್ಲಿ ಹಸ್ತಪ್ರತಿಗಳ ಸಂರಕ್ಷಣೆ ಇನ್ನೂ ಸರಳ ಸುಲಭವಾಗಿದೆ ಹಸ್ತಪ್ರತಿಗಳ ಬೆರಳಚ್ಚಿನ ಪ್ರತಿಗಳನ್ನು ತೆಗೆದಿಡಬಹುದು ವಂನ ಶ್ಯನ ಶಕ್ತಿ ಕಾಲಗಳನ್ನು ಹೆಚ್ಚು ವ್ಯಯ ಮಾಡದೆಯೇ ಹಸ್ತಪ್ರತಿಗಳ ಝೆರಾಕ್ಸ್ ಪ್ರತಿಗಳನ್ನು ತೆಗೆಯುವುದು ಮೈಕ್ರೋಫಿಲ್ಮ್ ಮಾಡಿಕೊಳ್ಳುವುದು ಫೋಟೋ ಸ್ಟ್ಯಾಟ್ ನಕಲುಗಳನ್ನು ತೆಗೆಯು ವುದು – ಇವು ಸ್ವಲ್ಪ ದುಬಾರಿಯಾದರೂ ಪರಿಣಾಮಕಾರಿಯಾದ ಕ್ರಮಗಳಾಗಿವೆ ಕಂಠಸ್ಥವಾಗಿರುವ ಕೀರ್ತನೆಗಳನ್ನು ಧ್ವನಿಮುದ್ರಕ ಯಂತ್ರದ ಸಹಾಯದಿಂದ ಮುದ್ರಿತ ಟೇಪುಗಳಾಗಿ ಕ್ಯಾಸೆಟ್ಟುಗಳಾಗಿ ಪರಿವರ್ತಿಸಿ ಸಂಗ್ರಹಿಸಿ ಸಂರಕ್ಷಿಸಿಡಬಹುದು ಅಥವಾ ಬಲ್ಲವರಿಂದ ಹಾಡಿಸಿ, ಶೀಘ್ರಲಿಪಿಯನ್ನು ಬಳಸಿ ಬರೆದಿಟ್ಟುಕೊಳ್ಳಬಹುದು

ಇಷ್ಟೆಲ್ಲ ಕಷ್ಟಪಟ್ಟು ಸಂಗ್ರಹಿಸಿ ಸಂರಕ್ಷಿಸಿದ ಪ್ರತಿಗಳನ್ನು ಪ್ರಕಟಿಸುವುದೇನೂ ಸುಲಭವಲ್ಲ ಈಗ್ಗೆ ಸು 160 ವರ್ಷಗಳಿಂದೀಚೆಗಷ್ಟೇ ಮುದ್ರಣಕಲೆ ಹುಟ್ಟಿ ಬೆಳೆಯಲಾರಂಭಿಸಿದ್ದು ಅದಕ್ಕಿಂತ ಮೊದಲು ಹಸ್ತಪ್ರತಿಗಳನ್ನು ನಕಲು ಮಾಡಿ ದಾನವಾಡುತ್ತಿದ್ದುದರಿಂದ ಗ್ರಂಥಗಳ ಪ್ರಸರಣ ಕಾರ್ಯ ನಡೆಯುತ್ತಿತ್ತು ಗ್ರಂಥ ದಾನ ಒಂದು ಪುಣ್ಯಕಾರ್ಯವೆನ್ನುವ ನಂಬಿಕೆಯ ಪರಂಪರೆ ನಮ್ಮದು ಉದಾಹರಣೆಗೆ ಗುಜರಾತಿನ ದೊರೆ ಜಯಸಿಂಹ ಸಿದ್ಧರಾಜನು (1096–1143) ಹೇಮಚಂದ್ರ

ಎರಚಿತ ವ್ಯಾಕರಣ ವನ್ನು ಏಷ್ಯಾ ಖಂಡದಾದ್ಯಂತ ಪ್ರಚಾರಕ್ಕೆ ತರಬೇಕೆಂಬ ಆಸೆಯಿಂದ ಮ ನೂ ರು ಜನ ಲಿಪಿಕಾರರಿಂದ ಮೂರು ವರ್ಷಗಳ ಕಾಲ ಸತತವಾಗಿ ಪ್ರತಿಮಾಡಿಸಿ ಅದರ 1 25 000 ಪ್ರತಿಗಳನು ಹಂಚಿದನಂತೆ ಕರ್ನಾಟಕದ ದಾನ ಚಿಂತಾಮಣಿ ಅತ್ತಿಮಬ್ಬೆ ಪೊನ್ನನ ಶಾಂತಿಪುರಾಣ ದ ಒಂದು ಸಾವಿರ ಪ್ರತಿಗಳನ್ನು ಮಾಡಿಸಿ ದಾನ ಮಾಡಿದ ವಿಷಯ ಸರ್ವವಿದಿತ ಆದರೆ ಹರಿದ ಸಸಾಹಿತ್ಯಕ್ಕೆ ಈ ಒಂದ ಪರಿಪಾರ ಇರಲಿಲ್ಲ ಹಿಂದೆಯೇ ಹೇಳಿದಂತೆ ಅದು ನೂರ ರು ವರ್ಷಗಳ ಕಾಲ ಕೇವಲ ಬಾಯಿಂದ ಬಾಯಿಗೆ ಹರಿದು ಬಂದಂತಹ ಸಾಹಿತ್ಯ ಯಾರಿಗೆ ಯಾವ ಕೀರ್ತನೆ (ಅಥವಾ ಕೀರ್ತನೆಗಳು) ಮನಸ್ಸಿಗೆ ಬರುತ್ತದೋ ಅದನ್ನು ಬರೆದಿಟ್ಟು ಕೊಂಡದ್ದು ಈಗ ನಮಗೆ ಸಿಕ್ಕಿರ ವ ಹರಿದಾಸಸಾಹಿತ್ಯದ ಹಸ್ತಪ್ರತಿಗಳಲ್ಲಿ ಪ್ರಾಚೀನ ವಾದ ಲಿಖಿತ ಕಾಲದ ಸೂಚನೆಯಿರುವ ಪ್ರತಿ ಕೇವಲ 167 ವರ್ಷ ಹಿಂದಿನದು [1] ಉಳಿದ ಹಸ್ತಪ್ರತಿಗಳಲ್ಲಿ ಕಾಲ ನಿರ್ದೇಶನವಿಲ್ಲ ಅವುಗಳ ಸ್ವರೂಪವನ್ನು ಗಮನಿಸಿ ಹೇಳ ವುದ ದರೆ ಯಾವ ಒಂದು ಪ್ರತಿಯನೂ ಸು 200 ವರ್ಷಗಳಿಗಿಂತ ಹಿಂದಿನ ದೆಂದು ಗ ರುತಿಸುವುದು ಕಷ್ಟ ದಾಸಸಾಹಿತ್ಯದ ಹಸ್ತಪ್ರತಿಗಳ ಈ ಪರಿಸ್ಥಿತಿ ಯಿಂದಾಗಿ ಅವುಗಳಲ್ಲಿ ಸ್ಖಾಲಿತ್ಯಗಳೂ ಹೆಚ್ಚು ಹೀಗಿರುವಾಗ ಕೆಲವು ಮಹನೀಯರು ತಮ ಗೆ ಸಿಕ್ಕಿದ ಕೆಲವು ಹಸ್ತಪ್ರತಿಗಳನ್ನು ಮುದ್ರಿಸುವ ಮನಸ್ಸು ಮಾಡಿದ್ದು ಕನ ಡಿಗರ ಪುಣ್ಯ

ನಮಗೆ ತಿಳಿದಿರ ವಂತೆ ಕ್ರಿ ಶ 1850 ರಲ್ಲಿ ಮಂಗಳೂರಿನಲ್ಲಿ ಪ್ರಕಟವಾಗಿರುವ ದಾಸರ ಪದಗಳು ಎಂಬ ಕಲ್ಲಚ್ಚಿನ ಪ್ರತಿಯೇ ಪ್ರಾಚೀನವಾದುದು ಇದನ್ನೇ ಡಾ॥ ವರದರ ಜರಾಯರು ಗ್ಯಾರೆಟ್ ಪ್ರತಿ ಎಂದು ಕರೆದಿರುವುದು ಇದರಲ್ಲಿ ಸಂಪಾದ ಕರ ಹೆಸರಿರುವ ಪುಟ ತ್ರುಟಿತವಾಗಿದ್ದರೂ ಮುಂದೆ 1871 ರಲ್ಲಿ ಅಚ್ಚಾಗಿರುವ ಇದರ ನಕಲೇ ಎನ ಬಹ ದ ದ ಪುಸ್ತಕ ಮೈಸೂರು ಗವರನ್‌ಮೆಂ ಟ್ ಡೈರೆಕ್ಟರ್ ರವರಾದ ಜೆ ಗ್ಯಾರೆಟ್ ಸಾಹೇಬರ ಒಪ್ಪಣೆ ಪ್ರಕಾರ ವಿನೇ ಆವರ್ತಿ ಛಾಪಿಸಲ್ಪಟ್ಟಿತು ಎಂದೂ ಹೊಳಕಲ್ಲು ನರಸಿಂಹಯ್ಯನವರಿಂದ ಪರಿಷ್ಕರಿಸಲ್ಪಟ್ಟಿದೆ ಎಂದೂ ತಿಳಿದು ಒರ ತ್ತದೆ 158 ಪುಟಗಳಿರುವ ಈ ಪುಸ್ತಕದಲ್ಲಿ ಬೆ ರೆ ಬೇರೆ ದಾಸರ ಗಳ 173 ಕೀರ್ತನೆಗಳಿವೆ

ಅನಂತರ 1873 ರಲ್ಲಿ ಮದರಾಸಿನಲ್ಲಿ ಅಚ್ಚಾಗಿರುವ ಹರಿಭಜನ ಕೀರ್ತನೆ (ಬೇರೆ ಬೇರೆ ದಾಸರ ಪದಗಳು) ಬೆಂಗಳೂರಿನ ಕರ್ನಾಟಕ ಬುಕ ಡಿಪೋ ಅಚ್ಚು ಮಾಡಿರ ವ ಹರಿಭಜನೆ ಕಿ ರ್ತನೆ (ಕನಕದ ಸರ ಕೀರ್ತನೆಗಳು ಮತ್ತು ಕೆಲರದಾಸರ ಕೆಲವು ದೋಹೆಗಳು ಇವೆ) ಕರ್ನಾಟಕಾಕ್ಷರ ಮುದ್ರಾಶಾಲೆಯಿಂದ ತೆಲ ಗು ಲಿಪಿಯಲ್ಲಿ ಅಚ್ಚಾಗಿರ ವ ಕನಕದಾಸರ ಭಕ್ತಿಸಾರ ಇತ್ಯಾದಿ ಪುಸ್ತಕಗಳನ್ನು ನೋಡಬಹುದು

1 (ಪಾ ೫೭) ಕನ್ನಡ ಅಧ್ಯಯನ ಸಂಸ ಯ್ಥಳಿದೆ

1877 ರಲ್ಲಿ ಬೆಳಗಾಂನಿಂದ ಪ್ರಕಟವಾಗಿರುವ ಹರಿಕಥಾಮೃತಸಾರ 1888 ರಲ್ಲಿ ಬೆಂಗಳೂರಿನ ವಿಚಾರದರ್ಪಣ ಮುದ್ರಣಾಲಯದಿಂದ ಪ್ರಕಟವಾಗಿರುವ ಕನಕದಾಸರ ನಳಚರಿತ್ರೆ, 1891 ರಲ್ಲಿ ಬೆಂಗಳೂರಿನಿಂದ ಪ್ರಕಟವಾದ ಕನಕದಾಸರ ಹರಿಭಕ್ತಿಸಾರ - ಇವುಗಳು ದಾಸಸಾಹಿತ್ಯದ ಪ್ರಾರಂಭದ ಪ್ರಕಟಣೆಗಳು.

ಅನಂತರ 1894 ರಿಂದ ಮಡಕಶಿರ ಬಾಲಕೃಷ್ಣರಾಯರ ಪುರಂದರದಾಸರು ಮಾರು ಪಾಡಿನ ಕೀರ್ತನಲು (ತೆಲುಗು ಲಿಪಿಯಲ್ಲಿದೆ) ಬೆಳಗಾವಿಯ ಆಬಾಜಿ ರಾಮಚಂದ್ರ ಸಾವಂತರ ದಾಸರ ಪದಗಳ ಸಂಗ್ರಹವು (ದೇವನಾಗರೀ ಲಿಪಿಯಲ್ಲಿದೆ) ಇವೆ ಮೊದಲಾದ ಪ್ರಕಟಣೆಗಳ ಪ್ರಾರಂಭವಾದುವು. 1914 ರಲ್ಲಿ ಬೆಂಗಳೂರಿನ ಟಿ. ಎನ್. ಕೃಷ್ಣಯ್ಯಶೆಟ್ಟರೂ 1923 ರ ವೇಳೆಗೆ ಉಡುಪಿಯ ಪಾವಂಜೆಗುರುರಾಯರೂ ಹರಿದಾಸ ಸಾಹಿತ್ಯದ ಪ್ರಕಟಣೆಯನ್ನು ಪ್ರಾರಂಭಿಸಿದರು. ಮುಂದೆ 2-3 ವರ್ಷಗಳಲ್ಲಿ ಸಬೋಧ ಎಂ. ರಾಮರಾಯರ ಹರಿದಾಸ ಕೀರ್ತನ ತರಂಗಿಣಿ ಮಾಲೆ ಪ್ರಾರಂಭವಾಯಿತು. 1944 ರ ವೇಳೆಗೆ ರಾಯಚೂರು ಜಿಲ್ಲೆಯ ಲಿಂಗಸೂಗೂರಿನ ವರದೇಂದ್ರ ಹರಿದಾಸ ಸಾಹಿತ್ಯ ಮಂಡಲಿಯಿಂದ ಶ್ರೀ ಗೊರವಾಳ ಹನುಮಂತರಾಯರು ದಾಸಸಾಹಿತ್ಯದ ಸಂಪುಟಗಳನ್ನು ಪ್ರಕಟಿಸಲಾರಂಭಿಸಿದರು. ಆ ತರುವಾಯ ಬಂದಂತಹ ಮುಖ್ಯ ಪ್ರಕಟಣೆಗಳೆಂದರೆ ಪುರಂದರ ಕನಕರ ಚತುರ್ಥ ಶತಮಾನೋತ್ಸವದ ಪ್ರಕಟಣೆಗಳು; ಮತ್ತು, ಧಾರವಾಡದ ಮಿಂಚಿನಬಳ್ಳಿ ಪ್ರಕಾಶನದಿಂದ ಪ್ರಕಟವಾದ ಪುರಂದರ ಸಾಹಿತ್ಯದ ಆರು ಸಂಪುಟಗಳು (ಸಂಪಾದಕರು ಶ್ರೀ ಬೆಟಗೇರಿ ಹನುಮಂತರಾವ ಶ್ರೀ ಬೆಟಗೇರಿ ಕೃಷ್ಣಶರ್ಮ). ಹೀಗೆ ಪ್ರಮುಖ ಹರಿದಾಸರ ಕೀರ್ತನೆಗಳ ಹಾಗೂ ಕಥನ ಸರ ಕಾವ್ಯಗಳ ಸಂಗ್ರಹಣೆ ಹಾಗೂ ಪ್ರಕಟಣೆಯ ಕಾರ್ಯಗಳು ಸುಮಾರು 135 ವರ್ಷಗಳಿಂದ ನಿರಂತರವಾಗಿ ನಡೆದು ಬಂದಿವೆ. ಈ ಕಾರ್ಯದಲ್ಲಿ ಹೆಚ್ಚಿನ ಆಸಕ್ತಿ ವಹಿಸಿ ಕೆಲಸ ಮಾಡಿದ ಪ್ರಕಾಶನ ಸಂಸ್ಥೆಗಳೆಂದರೆ

ಶ್ರೀಮನ್ಮಧ್ವಸಿದ್ಧಾಂತ ಗ್ರಂಥಾಲಯ ಉಡುಪಿ, ಶ್ರೀ ವರದೇಂದ್ರ ಹರಿದಾಸ ಸಾಹಿತ್ಯಮಾಲೆ ಲಿಂಗಸೂಗೂರು, ಸುಬೋಧ ಪ್ರಕಟನಾಲಯ ಬೆಂಗಳೂರು, ಸಮಾಜ ಪುಸ್ತಕಾಲಯ ಧಾರವಾಡ, ಮಿಂಚಿನಬಳ್ಳಿ ಕಾರ್ಯಾಲಯ ಧಾರವಾಡ, ಪರಿಮಳ ಸಂಶೋಧನ ಮತ್ತು ಪ್ರಕಾಶನ ಮಂದಿರ ನಂಜನಗೂಡು, ಗುರುಕೃಪಾ ಗ್ರಂಥಮಾಲಾ ಮೈಸೂರು, ಕನಕ-ಪುರಂದರರ ನಾಲ್ಕುನೂರು ವರ್ಷಗಳ ಉತ್ಸವ ಸಮಿತಿಗಳು, ದಾಸಾಶ್ರಮ ಸಂಶೋಧನ ಪ್ರಕಟನ ಮಾಲೆ - ಇತ್ಯಾದಿಗಳನ್ನು ಹೆಸರಿಸಬಹುದು. ವ್ಯಕ್ತಿಗಳನ್ನು ಹೆಸರಿಸುವುದರಲ್ಲಿ ಮಡಕಶಿರ ಬಾಲಕೃಷ್ಣರಾವ್, ಆಬಾಜಿ ರಾಮಚಂದ್ರ ಸಾವಂತ, ಟಿ. ಎನ್. ಕೃಷ್ಣಯ್ಯಶೆಟ್ಟಿ, ಟಿ. ಕೆ. ಕೃಷ್ಣಸ್ವಾಮಿಶೆಟ್ಟಿ, ಹರಿದಾಸರತ್ನಂ ಗೋಪಾಲದಾಸರು ಮೊದಲಾದವರನ್ನು ಹೆಸರಿಸಬಹುದು.

ದಾಸರ ಕೀರ್ತನೆಗಳ ಸಂಕಲನಗಳು, ಕಾವ್ಯಗಳು ಪ್ರಕಟವಾದುದು ದಾಸ ಸಾಹಿತ್ಯ ಪ್ರಕಟಣೆಯಲ್ಲಿ ಮೊದಲ ಹಂತ. ಅನಂತರ ದಾಸಸಾಹಿತ್ಯದ ವಿಮರ್ಶೆ

ಸಂಶೋಧನೆ ದಾಸರಚರಿತ್ರೆ ದಾಸಸಾಹಿತ್ಯ ಸಂಗ್ರಹಕಾರರು ಇತ್ಯಾದಿಗಳನ್ನು ಕುರಿತಂತೆ ನೂರಾರು ಪುಸ ಕಗಳು ಪ್ರಕಟವಾಗಿವೆ ಅವುಗಳಲ್ಲಿ ಮ ಖ್ಯವಾದವು ಗಳನು ಸ್ಥೂಲವಾಗಿ ಪರಿಚಯ ಮಾಡಿಕೊಳ್ಳಬಹುದು

**(ಅ) ಹರಿದಾಸಸಾಹಿತ್ಯವನ್ನು ಅಭ್ಯಸಿಸಿ ಬರೆದಂತಹ ಡಾಕ್ಟೋರೇಟ್ ನಿಬಂಧಗಳು**

(ಕ) ಪ್ರಸನ ವೆಂಕಟದಾಸರು ಮತ್ತು ಅವರ ಕೃತಿಗಳು — ಲೇಖಕರು ಡಾ॥ ಎ ಟಿ ಪ ಟಿ ಲ ಮೊದಲ ಮುದ್ರಣ 1956ರಲ್ಲಿ ಇದು ಆರ್ ಎಸ್ ಪಂಚಮುಖಿಯವರ ಮಾರ್ಗದರ್ಶಿತ್ವದಲ್ಲಿ ಮುಂಬಯಿ ವಿಶ್ವವಿದ್ಯಾನಿಲಯದಿಂದ ಪಿಹೆಚ ಡಿ ಪದವಿಯ ನು ಪಡೆದ ದಾಸಸಾಹಿತ್ಯವನ್ನು ಕ ರಿತ ಮೊದಲ ನಿಬಂಧ ಕರ್ನಾಟಕದ ಹರಿದಾಸರ ಭಕ್ತಿಯ ಸ್ವರೂಪವನ್ನು ಕೃತಿಯ ಹಿನೆ ಲೆಯಾಗಿ ಹೇಳಿ ಪ್ರಸನ್ನ ವೆಂಕಟದಾಸರ ಜಿ ವನ ವಿಚಾರವನು ಆ ಕಾಲದ ರಾಜಕಿ ಯ ಸಾಮಾಜಿಕ ಪರಿಸ್ಥಿತಿಗಳಲ್ಲಿ ಚರ್ಚಿಸಿದ್ದಾರೆ ಪ್ರಸನ ವೆಂಕಟದಾಸರ ಕೃತಿಗಳಲ್ಲಿ ಬರುವ ದ್ವೈತ ಸಿದ್ಧಾಂತದ ಪ್ರಮೇಯಗಳು ಅವರ ವಿಶೇಷ ಕೃತಿಗಳು ಅವರ ಕೃತಿಗಳ ಭಾಷೆ ಬಂಧ ಶೈಲಿ— ಈ ಎಲ್ಲ ವಿಚ ರಗಳನ್ನೂ ಇಲ್ಲಿ ಪರಿಶಿ ಲಿಸಿರುವರು ಪ್ರಸನ್ನ ವೆಂಕಟದಾ ರ ೨೦೩ ಕೀರ್ತನೆಗಳು ೩ ಸುಳಾದಿಗಳು ವ ತ್ತು ೩ ಉಗಾಭೋಗಗಳನ್ನು ತಮ್ಮ ಕ್ಷೇತ್ರಕಾರ್ಯದಿಂದ ಪತ್ತೆಹಚ್ಚಿ ಉಳಿದ ಉಪಲಬ್ಧ ಸಾಮಗ್ರಿಗಳನು ಒಳಗೊಂಡು ಸು 356 ಪುಟಗಳಲ್ಲಿ ತಮ್ಮ ನಿಬಂಧವನು ಸಿದ್ಧಪಡಿಸಿದ್ದಾರೆ ಧಾರವಾಡದ ಮಿಂಚಿನಬಳ್ಳಿ ಕಾರ್ಯಾಲಯವು ತನ್ನ ೧೯ನೇ ವರ್ಷದ ಮೊದಲಕ ಡಿಯಾಗಿ ಈ ನಿಬಂಧವನು ಪ್ರಕಟಿಸಿದೆ

(ಚ) ಶ್ರೀಜಗನಾ ಥದಾಸರು — ಲೇಖಕರು ಡಾ॥ ಕೆ ಎಂ ಕೃಷ್ಣರಾವ್ ಮೊದಲಮುದ್ರಣ 1956ರಲ್ಲಿ ಇದೂ ಶ್ರೀ ಆರ್ ಎಸ್ ಪಂಚಮುಖಿಯವರ ಮಾರ್ಗದರ್ಶಿತ್ವದಲ್ಲಿ ಸಿದ್ಧವಾದ ನಿಬಂಧ ಮೈಸೂರು ವಿಶ್ವವಿದ್ಯಾನಿಲಯದಿಂದ ಪಿಹೆಚ್ ಡಿ ಪದವಿಯನ್ನು ಗಳಿಸಿದೆ ಕರ್ನಾಟಕದಲ್ಲಿ ಹರಿದಾಸಪ ಥ ಎಂಬ ವಿವರವಾದ ಹಿನ್ನೆಲೆಯೊಂದಿಗೆ ಪ್ರಮ ಖ ಹರಿದಾಸರ ಬಗ್ಗೆ ಮಾಹಿತಿ ನೀಡಿ ಜಗನ್ನಾಥದ ಸರ ಜಿ ವನ ವ್ಯಕ್ತಿತ್ವ ಹಾಗೂ ಕ ತಿಗಳನ್ನವಲೋಕಿಸಿ ವಿಮರ್ಶಿಸಿರುವ ಕೃತಿ ಇದು ದಾಸರ ತತ್ತ್ವೋಪದೇಶ ಸಂದೇಶ ಶೈಲಿ ಛಂದಸ್ಸು ಈ ಎಲ್ಲ ಅಂಶಗಳನ್ನು ಇಲ್ಲಿ ಪರಿಶಿ ಲಿಸಿರುವರು ಉಪಯು ಕ್ತವಾದ ಅನುಬಂಧಗಳಿಂದ ಕೂಡಿ 400 ಪುಟಗಳಲ್ಲಿರುವ ಈ ನಿಬಂಧವನ್ನು ಮೈಸೂರಿನ ಉಷಾಸಾಹಿತ್ಯಮಾಲೆಯು ಪ್ರಕಟಿಸಿದೆ

(ಟ) ಕರ್ನಾಟಕದ ಹರಿದಾಸರು (ವಿಮರ್ಶಾತ್ಮಕ ಅಧ್ಯಯನ) ಲೇಖಕರು ಡಾ ಎಚ್ ಕೆ ವೆ ದವ್ಯಾಸಾಚಾರ್ಯ ಮೊದಲ ಮು ದ್ರಣ 1965ರಲ್ಲಿ ಇದೂ

ಶ್ರೀ ಆರ್ ಎಸ್ ಪಂಚಮುಖಿಯವರ ಮಾರ್ಗದರ್ಶಿತ್ವದಲ್ಲಿ ಸಿದ್ಧವಾಗಿದ್ದು ಪಿಹೆಚ್ ಡಿ ಪದವಿಗಾಗಿ ಮುಂಬಯಿ ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಿದ ನಿಬಂಧ ಧರ್ಮ ಅದರ ಲಕ್ಷಣ ಸ್ವರೂಪ ಇತಿವೃತ್ತಗಳು ವೈದಿಕಧರ್ಮದ ಮುಖ್ಯ ಪ್ರಮೇಯಗಳು ಅವುಗಳಲ್ಲೊಂದಾದ ಭಕ್ತಿಯ ಪ್ರಾಮುಖ್ಯ ವಿವೇಚನೆ ಭಾರತದಲ್ಲಿ ಭಕ್ತಿ ವೈಷ್ಣವ ಸಂತರು ಕನ್ನಡ ಹರಿದಾಸರು–ಹೀಗೆ ವಿಸ್ತೃತವಾದ ಪರಿಧಿಯ ಹಿನ್ನೆಲೆಯಲ್ಲಿ ಹರಿದಾಸರು ಹಾಗೂ ಅವರ ಕೃತಿಗಳ ತಿರುಳನು ಕುರಿತು ಇಲ್ಲಿ ವಿವೇಚಿಸಲಾಗಿದೆ ಸು 700 ಪುಟಗಳ ವಿಸ್ತಾರವಿರುವ ಈ ನಿಬಂಧವನ್ನು ನಂಜನಗೂಡಿನ ಶ್ರೀ ಪರಿಮಳ ಸಂಶೋಧನ ಮತ್ತು ಪ್ರಕಾಶನ ಮಂದಿರವು ಪ್ರಕಟಿಸಿದೆ

(ತ) ಪ್ರಸಾದಯೋಗ (ಶ್ರೀ ಪುರಂದರದಾಸರ ಜೀವನ ಮತ್ತು ಕೃತಿಗಳು)– ಲೇಖಕರು ಡಾ॥ ವ ಅ ದಿವಾಣಜಿ ಡಾ॥ ರಂ ಶ್ರೀ ಮುಗಳಿಯವರ ಮಾರ್ಗದರ್ಶಿತ್ವದಲ್ಲಿ ಸಿದ್ಧವಾಗಿ ಪೂನಾ ವಿಶ್ವವಿದ್ಯಾನಿಲಯದಿಂದ ಪಿಹೆಚ್ ಡಿ ಪದವಿಯನು ಪಡೆದ ನಿಬಂಧವಿದು ಇಡಿ ನಿಬಂಧ ಪುರಂದರದಾಸರಿಗೇ ಕೇಂದ್ರಿಕೃತವಾಗಿದ್ದು ಹಿನ್ನೆಲೆಯಾಗಿ ಹರಿದಾಸಕೂಟ ಮತ್ತು ವೈಷ್ಣವಮತದ ಪರಿಚಯವನ್ನು ಮಾಡಿಕೊಡಲಾಗಿದೆ ದಾಸರ ಜೀವನ ಚರಿತ್ರೆ ಅವರ ಕೃತಿಗಳಲ್ಲಿರುವ ಮಾಧ್ವದರ್ಶನ ಬೋಧಿಸಿದ ಲೋಕನೀತಿ ಕಾವ್ಯ ಸೌಂದರ್ಯಾದಿಗಳನ್ನು ಪ್ರತ್ಯೇಕ ಪ್ರತ್ಯೇಕವಾಗಿ ವಿಶ್ಲೇಷಿಸಿ ವಿವರ್ಶಿಸಲಾಗಿದೆ ಉಪಯುಕ್ತವಾದ ಪರಿಶಿಷ್ಟಗಳನ್ನೊಳಗೊಂಡು ಒಟ್ಟು 233 ಪುಟಗಳಲ್ಲಿರುವ ಈ ನಿಬಂಧವನು ಮೈಸೂರಿನ ಉಷಾಸಾಹಿತ್ಯಮಾಲೆ ಪ್ರಕಟಿಸಿದೆ

(ಪ) ಶ್ರೀ ವಿಜಯದಾಸರು (ಜೀವನ ಮತ್ತು ಕೃತಿಗಳ ಸಮೀಕ್ಷೆ) ಲೇಖಕರು ಡಾ॥ ಕೆ ಗೊ ಕುಲನಾಥ್ ಮೊದಲ ಮುದ್ರಣ 1978ರಲ್ಲಿ ಡಾ॥ ಜಿ ವರದಾರಾಜರಾಯರ ಮಾರ್ಗದರ್ಶಿತ್ವದಲ್ಲಿ ಪಿಹೆಚ್ ಡಿ ಪದವಿಗಾಗಿ ಮೈಸೂರು ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಿದ ನಿಬಂಧವಿದು ವಿಜಯದಾಸರ ಜೀವನಕ್ಕೆ ಹಿನ್ನೆಲೆಯಾಗಿ ಕರ್ನಾಟಕದಲ್ಲಿ ಹರಿದಾಸಸಾಹಿತ್ಯದ ಉಗಮ ದಾಸರ ಅಂಕಿತ ಸಾಹಿತ್ಯ ಇತ್ಯಾದಿಗಳನ್ನು ಪರಿಶೀಲಿಸಿ ದಾಸರ ಜೀವನವನ್ನು ಕಂಡರಿಸಿರುವರು ದಾಸರ ಕೀರ್ತನೆಗಳನ್ನು ಭಕ್ತಿ ತತ್ತ್ವ ಕಾವ್ಯಮೌಲ್ಯಗಳ ದೃಷ್ಟಿಯಿಂದ ಅಭ್ಯಾಸ ಮಾಡಿರುವುದಲ್ಲದೆ ವಿಜಯದಾಸರ ಕೃತಿಗಳು ಮತ್ತು ಜಗನ್ನಾಥದಾಸರ ಹರಿಕಥಾಮೃತಸಾರದ ತೌಲನಿಕ

1 ಇದೇ ವಿದ್ವಾಂಸರ ಮಾರ್ಗದರ್ಶಿತ್ವದಲ್ಲಿ ಡಾ॥ ಟಿ ಎನ್ ನಾಗರತ್ನರವರು ಹರಿದಾಸರ ಭಕ್ತಿ ರೂಪ—ಎಂಬ ವಿಷಯವಾಗಿ ನಿಬಂಧ ರಚಿಸಿ 1975ರಲ್ಲಿ ಮೈಸೂರು ವಿಶ್ವವಿದ್ಯಾನಿಲಯದಿಂದ ಪಿಹೆಚ್ ಡಿ ಪದವಿಯನು ಪಡೆದಿದ್ದಾರೆ ಆ ನಿಬಂಧ ಇನ್ನೂ ಬೆಳಕನು ಕಾಣುವ ಬಯಕೆ ಹೊತ್ತು ಮೈಸೂರು ವಿಶ್ವವಿದ್ಯಾನಿಲಯದ ಪ್ರಸಾರಾಂಗದ ಕತ್ತಲ ಕೋಣೆಯಲ್ಲಿ ಕುಳಿತಿದೆ!

ಅಭ್ಯಾಸವನ್ನೂ ಮಾಡಿದ್ದಾರೆ ಹರಿದಾಸಸಾಹಿತ್ಯದಲ್ಲಿ ವಿಜಯ ದಾಸರ ಸ್ಥಾನ ನಿರ್ದೇಶನದೊಂದಿಗೆ ಒಟ್ಟು ಸು 450 ಪುಟಗಳಲ್ಲಿರುವ ಈ ನಿಬಂಧವನ್ನು ಬೆಂಗಳೂರಿನ ಸಿಂಧುಶಯನ ಪ್ರಕಾಶನವು ಪ್ರಕಟಿಸಿದೆ

**(ಆ) ದಾಸಸಾಹಿತ್ಯವನ್ನು ಕುರಿತ ಪ್ರತ್ಯೇಕ ವಿಮರ್ಶಾ ಗ್ರಂಥಗಳು ಅವುಗಳಲ್ಲಿ ಮುಖ್ಯವಾದ ಒಂದೆರಡು ಪ್ರಕಟಣೆಗಳನ್ನು ಗಮನಿಸೋಣ**

(ಕ) ಕರ್ನಾಟಕದ ಹರಿದಾಸ ಸಾಹಿತ್ಯ ಲೇಖಕರು ರಾ ಸ್ವಾ ಪಂಚಮುಖಿ ಮೊದಲ ಮುದ್ರಣ 1952ರಲ್ಲಿ ಪುಸ್ತಕದ ಪ್ರಾರಂಭದಲ್ಲಿ ಸು 70 ಪುಟಗಳ ವಿದ್ವತ್ಪೂರ್ಣ ಪೀಠಿಕೆಯಿದೆ (ಇಂಗ್ಲೀಷ್‌ನಲ್ಲಿ) ಅನಂತರ ಪುಸ್ತಕ ಮೂರು ಭಾಗಗಳಲ್ಲಿದ್ದು ಮೊದಲನೆಯ ಭಾಗದಲ್ಲಿ ಭಕ್ತಿಯ ಪ್ರಾಚೀನತೆ ಪ್ರಸಾರ ದ್ವೈತ ಸಿದ್ಧಾಂತದ ಸಾಮಾನ್ಯ ಪ್ರಮೇಯಗಳು ದಾಸಕೂಟದ ಕೇಂದ್ರವಾಗಿ ಪಂಢರಾಪುರ ಕರ್ನಾಟಕದ ಹರಿದಾಸ ಪರಂಪರೆಯ ಪರಿಚಯ–ಈ ವಿವರಗಳನ್ನು ಒದಗಿಸುತ್ತದೆ ಎರಡನೆಯ ಭಾಗ ಹರಿಭಕ್ತಿ ಭಕ್ತನ ಲಕ್ಷಣ ಹರಿದಾಸರ ವೇದಾಂತ ಪ್ರಮೇಯಗಳನ್ನು ಪರಿಚಯಿಸುವುದರೊಂದಿಗೆ ಶ್ರೀಪಾದರ ಜರಾದಿಯಾಗಿ ಪ್ರಸನ್ನ ವೆಂಕಟದಾಸರವರೆಗೆ ಪ್ರಮುಖರಾದ ಹತ್ತುಜನ ದಾಸರ ಉಪದೇಶ ಸರಣಿಯ ಸ್ಥೂಲ ಪರಿಚಯವಿದೆ ಮೂರನೆಯ ಭಾಗದಲ್ಲಿ ಹರಿದಾಸರ ಭಾಷೆ ಶೈಲಿ ಹರಿದಾಸ ಸಾಹಿತ್ಯ—ಲಲಿತಕಲೆಗಳ ಸಂಬಂಧ ದಾಸ ಸಾಹಿತ್ಯದಲ್ಲಿ ಜನಜೀವನದ ಚಿತ್ರ ಹರಿದಾಸರು ಜಗತ್ತಿಗೆ ಮಾಡಿದ ಉಪಕಾರ ಇತ್ಯಾದಿ ವಿವರಗಳನೊಳಗೊಂಡಿದೆ ಒಟ್ಟು ಸು 380 ಪುಟಗಳಿರುವ ಈ ಪುಸ್ತಕವನು ಬೆಂಗಳೂರಿನಿಂದ ಕನ್ನಡ ಸಾಹಿತ್ಯ ಪರಿಷತ್ತು ಪ್ರಕಟಿಸಿದೆ

(ಚ) ಹರಿಭಕ್ತಿಸುಧೆ ಲೇಖಕರು ರಂಗನಾಥ ರಾಮಚಂದ್ರ ದಿವಾಕರ ಮೊದಲ ಮುದ್ರಣ 1935ರಲ್ಲಿ ಎರಡನೆಯ ಆವೃತ್ತಿ 1948ರಲ್ಲಿ ಮತ್ತು ಮೂರನೆಯದು 1956ರಲ್ಲಿ ಭಕ್ತಿ–ಭಕ್ತಿ ಮಾರ್ಗ ಭಕ್ತಿವೈವಿಧ್ಯಾದಿಗಳಿಗೆ ಸಂಬಂಧಿಸಿದಂತೆ ಪುಸ್ತಕದ ಮೊದಲಲ್ಲಿ 15 ಪುಟಗಳ ಪ್ರಸ್ತಾವನೆಯಿದೆ ಹರಿದಾಸರ ಕೀರ್ತನೆ ಸುಳಾದಿಯ ನುಡಿಗಳು ಹಾಗೂ ಉಗಾಭೋಗಗಳನು ಅವುಗಳಲ್ಲಿನ ಭಾವವೈವಿಧ್ಯಕ್ಕೆ ತಕ್ಕಂತೆ 26 ವಿಭಾಗಗಳನಾಗಿ ವಿಂಗಡಿಸಿ (ಗುರುಮಹಿಮೆ ನಾಮಮಹಿಮೆ ಆರ್ತಭಾವ ದಾಸ್ಯಭಾವ ದರ್ಶನ ಸಾಕ್ಷಾತ್ಕಾರ ಇತ್ಯಾದಿ) ಒಂದೊಂದು ವಿಭಾಗಕ್ಕೂ ಅಲ್ಲಿಯ ಕೀರ್ತನೆಗಳನ್ನು ಕುರಿತು ಸೂಕ್ತ ಟಿಪ್ಪಣಿ ಬರೆದಿರುವರು ಕೊನೆಯಲ್ಲಿ ಉಪಯುಕ್ತವಾದ ಪರಿಶಿಷ್ಟವಿರುವುದು (ಅಲ್ಲಿ ದಾಸರ ಪರಿಚಯ ಕೀರ್ತನೆಗಳಲ್ಲಿಯ ಕಥಾ ಸಂದರ್ಭಗಳ ವಿವರಣೆ ಕಠಿಣ ಶಬ್ದಗಳ ಅರ್ಥಗಳನ್ನು ಕೊಟ್ಟಿರುವರು) ಒಟ್ಟು 272 ಪುಟಗಳಿರುವ ಈ ಉಪಯುಕ್ತ ಪುಸ್ತಕವನ್ನು ಹುಬ್ಬಳ್ಳಿಯ ಆಧ್ಯಾತ್ಮ ಕಾರ್ಯಾಲಯ ಪ್ರಕಟಿಸಿದೆ

(೬) ಹರಿದಾಸ ಹೃದಯ ಲೇಖಕರು ಡಾ॥ ಜಿ ವರದರಾಜರಾವ್ ಮೊದಲ ಮುದ್ರಣ 1967 ರಲ್ಲಿ ಈ ಪುಸ್ತಕದಲ್ಲಿ ದಾಸಸಾಹಿತ್ಯಕ್ಕೆ ಸಂಬಂಧಿಸಿದಂತೆ 10 ವಿಮರ್ಶಾತ್ಮಕ ಪ್ರಬಂಧಗಳಿವೆ ಪಾದರಾಜರು ಪುರಂದರದ ಸರು ಕನಕದಾಸರು ವಿಜಯ ದಾಸರ ಗಳನು ಕ ರಿತ ಪ್ರತ್ಯೇಕ ಪ್ರಬಂಧಗಳಲ್ಲದೆ ಭಕ್ತಿವೈವಿಧ್ಯ ಹರಿದಾಸರ ಹೆದ್ದಾರಿ ದಾಸಸಾಹಿತ್ಯ ವಿಕಾಸ ಎಂಬ ಪ್ರಬಂಧಗಳೂ ಸೇರಿವೆ ನಿಜವ ದ ಅರ್ಥದಲ್ಲಿ ಇಲ್ಲಿ ಲೇಖಕರು ಹರಿದಾಸರ ಹೃದಯ ವನು ತೆರೆದು ತೋರಿಸಿದ್ದಾರೆ ಅವರುಗಳ ಹೃದಯಾನುಭವವನ್ನು ಅವರ ಮಾತ ಗಳಲ್ಲಿಯೇ ಪರಿಚಯಿಸಿದ್ದಾರೆ ಒಟ್ಟು 218 ಪುಟಗಳಿರುವ ಈ ಪುಸ್ತಕವನ್ನು ಮೈಸೂರಿನ ಶಾರದಾ ಮಂದಿರದಿಂದ ಪ್ರಕಟಿಸಲಾಗಿದೆ

(೭) ದಾಸಸಾಹಿತ್ಯ ದ್ವಿತಿ ಯ ಘಟ್ಟದ ಸಾಧನೆ ಬೇರೆ ಬೇರೆ ಲೇಖಕರ ಆರು ಉಪನ್ಯಾಸಗಳ ಸಂಕಲನವಿದು – ರ ಯಚೂರಿನಲ್ಲಿ 1970 ರ ಸೆಪ್ಟೆಂಬರ ತಿಂಗಳಿನಲ್ಲಿ (11 12 13ನೇ ತಾರಿ ಖು) ನಡೆದ ಪ್ರಚಾರೋಪನ್ಯಾಸ ಶಿಬಿರದಲ್ಲಿ ವಿದ್ವಾಂಸರ ವ ಓದಿದ ಪ್ರಬಂಧಗಳ ಸಂಕಲನ ಹರಿದಾಸರ ಪೈಕಿ ವಿಜಯದಾಸ ರು ಹಾಗೂ ಅವರ ಶಿಷ್ಯ ಪರಂಪರೆಯನು ದ್ವಿತೀಯ ಘಟ್ಟದವರೆಂದೂ ಶ್ರೀಪ ದರ ಜ ರಿಂದ ಪುರಂದರರವರೆಗೆ ಪ್ರಥಮ ಘಟ್ಟದವರೆಂದೂ ಭಾವಿಸುವ ರೂಢಿಯಿದೆ ಅದರಂತೆ ದ್ವಿತೀಯ ಘಟ್ಟದ ಹರಿದ ಸರಲ್ಲಿ ಮುಖ್ಯರಾದ ವಿಜಯದಾಸರು ಗೋಪಾಲದಾಸರು ಜಗನಾ ದದಾಸರು ಮೋಹನದಾಸರುಗಳನು ಕುರಿತ ತೆ ಹಾಗೂ ದಾಸಸಾಹಿತ್ಯ ದ್ವಿತೀಯಘಟ್ಟದ ಹಿನೆ ಲೆ ಹಾಗೂ ಸಾಧನೆಗಳನು ಕ ರಿತು 6 ಪ್ರಬಂಧಗಳು ಒಟ್ಟು 140 ಪುಟಗಳಲ್ಲದ್ದು ಕರ್ನಾಟಕ ವಿಶ್ವವಿದ್ಯಾನಿಲಯ ದಿ ದ (ವಿಶೆ ಷ ವಾಙ್ಮಯ ಪ್ರಸಾರ ಪುಸ್ತಕಮಾ ಲ) ಪ್ರಕಟವಾಗಿದೆ

(೮) ಹರಿದಾಸ ಸಾಹಿತ್ಯ ಸಮೀಕ್ಷೆ ಸಂಪಾ ದಕರು ಡ ॥ ಜಿ ವರದರಾಜ ರಾವ್ ಮೈಸೂರಿನ ಕನ್ನಡ ಅಧ್ಯಯನ ಸಂಸ್ಥೆಯ ಹರಿದಾಸ ಸಾಹಿತ್ಯಮಾಲೆಯ ಮೊದಲನೆಯ ಪುಸ್ತಕದ (ಶ್ರೀಪಾದರಾಜರ ಕೃತಿಗಳು) ಬಿಡುಗಡೆಯ ಸಂದರ್ಭದಲ್ಲಿ (5 8 1973) ಏರ್ಪಡಿಸಿದ್ದ ವಿಚಾರಗೋ ಷ್ಠಿ ಯಲ್ಲಿ ವಿದ್ವಾಂಸರು ವ ಓದಿದ ಪ್ರಬಂಧಗಳ ಸ ಕಲನವಿದು ಏಳು ಪ್ರಬಂಧಗಳಿರುವ ಈ ಪುಸ್ತಕದಲ್ಲಿ ಸಮಗ್ರ ಹರಿದಾಸ ಸಾಹಿತ್ಯದ ಒಂದು ವಿವ ಶರ್ಾತ್ಮಕ ಅವಲೋಕನವಿದೆ ದಾಸಸಾಹಿತ್ಯ ಸಂಪಾದನೆಯ ಸಮಸ್ಯೆಗಳು ಅದರ ಪೌರಾಣಿಕವಮೌಲ್ಯ ಸಂಗೀತಮೌಲ್ಯ ಸಾಹಿತ್ಯ ಮೌಲ್ಯ ಸಾಮಾಜಿಕಮೌಲ್ಯಗಳು ಹರಿದಾಸ ಸಾಹಿತ್ಯದ ಮೇಲೆ ಸಂಸ್ಕೃತ ವೆ ದಾಂತ ಗ್ರಂಥಗಳ ಪ್ರಭಾವ ಹರಿದಾಸ ಸಾಹಿತ್ಯದಲ್ಲಿ ದ್ವೈತ ಸಿದ್ಧಾಂತ – ಈ ಎಲ್ಲಾ ವಿಷಯಗಳನೂ ಕ ರಿತ ಪ್ರೌಢ ಪ್ರಬಂಧ ಸಂಕಲನ ಹರಿದಾಸ ಸಾಹಿತ್ಯ ಸಮೀಕ್ಷೆ ಒಟ್ಟು 121 ಪುಟಗಳಿರ ವ ಈ ಪುಸ್ತಕವನ್ನು ಕನ್ನಡ ಅಧ್ಯಯ ನ ಸಂಸ್ಥೆಯು ಪ್ರಕಟಿಸಿದೆ

ಇವುಗಳೆ ಅಲ್ಲದೆ ಪುರಂದರದಾಸರನು ಕುರಿತಂತೆಯೆ ಅನೇಕ ಕೃತಿಗಳು ಹೊರಬಂದಿವೆ ಉದಾ ಪುರಂದರರೊ ಪನಿಷತ್ (ಭಾಗ ೧-೨)__ಲೇಖಕರು ಭದ್ರಗಿರಿ ಕೆ ಶವದಾಸರು ಪುರಂದರದಾಸರೂ ಮತ್ತು ಅವರ ಕಿ ರ್ತನೆಗಳು ಲೇಖಕರು ಜಿ ವರದರಾಜರಾವ್ ಶ್ರಿ ಪುರಂದರದಾಸರು ಲೇಖಕರು ಎಸ್ ಕೆ ರಾಮಚಂದ್ರರಾಯರು *Purandara & Haridasa Movement* ಲೇಖಕರು ಎಂ ವಿ ಕೃಷ್ಣರಾವ ಇತ್ಯಾದಿ ಕನಕದಾಸರಿಗೆ ಸಂಬಂಧಿಸಿದಂತೆ ವ ಹಾತ್ಮಾ ಕನಕದಾಸ ಪ್ರಶಸ್ತಿ ಪ್ರಕಾಶಕರು ರಾಜ್ಯಸಮಿತಿ ಕನಕದಾಸರ ಚತುರ್ಥ ಶತಮಾನೋತ್ಸವ ಬೆಂಗಳೂರು ಹಾಗೂ ಕನಕಕಿರಣ ಸಂಪಾದಕರು ಕ್ಯಾತ ಚಿಕ್ಕಣ್ಣ – ಇವುಗಳನ್ನು ಹೆಸರಿಸಬಹುದು

## (ಇ) ಹರಿದಾಸರ ಚರಿತ್ರೆಗಳನ್ನು ಕುರಿತ ಪುಸ್ತಕಗಳು

(ಕ) ಕವಿ ಕನಕದಾಸರು ಲೇಖಕರು ಕಟ್ಟಿ ಶೇಷಾಚಾರ್ಯ

(ಚ) ಕರ್ನಾಟಕ ಭಕ್ತ ವಿಜಯ ಲೆ ಖಕರು ಬೆ ಲೂರು ಕೆ ಶವದಾಸರು

(ಟ) ಮಾಧ್ವ ವಾಙ್ಮಯ ತಪಸ್ವಿಗಳು ಲೇಖಕರು ಎಂ ಪಂಡರೀನ ಥಾ ಚಾರ್ಯ ಗಲಗಲಿ

(ತ) ಹರಿದಾಸರ ಕತೆಗಳು ಲೆ ಖಕರು ಕಲಮದಾನಿ ಗುರ ರಾಮರು

(ಪ) ಹರಿಭಕ್ತ ವಿಜಯದ ಸಂಪುಟಗಳು ಲೇಖಕರು ಎಂ ಗೋವಿಂದರಾವ್ – ಇವೇ ಮೊದಲಾದವು

ಇವುಗಳೊಂದಿಗೆ ಕೊರಟಿ ಶ್ರೀನಿವಾಸರಾಯರು ಕಾದಂಬರಿಗಳ ಚೌಕಟ್ಟಿನಲ್ಲಿ ಬರೆದು ಪ್ರಕಟಿಸಿರವ ಶ್ರೀ ವ್ಯಾಸರಾಯರು ಶ್ರೀವಾದಿರಾಜರು ಶ್ರೀಮಧ್ವಾಚಾರ್ಯರು ಮೊದಲಾದ ಕೃತಿಗಳನ್ನು ಹೆಸರಿಸಬಹುದು

## (ಈ) ಹರಿದಾಸ ಸಾಹಿತ್ಯ ಸಂಗ್ರಹಕಾರರನ್ನು ಕುರಿತಂತೆ ಪ್ರಕಟವಾಗಿರುವ ಪುಸ್ತಕ ಲೇಖನಗಳು

ಉದಾಹರಣೆಗೆ (ಕ) ದಾಸಸಾಹಿತ್ಯ ಪ್ರವರ್ತಕರು ಲೇಖಕರು ಕೊರಟಿ ಶ್ರೀನಿವಾಸರಾವ್

(ಚ) 1984 ಜನವರಿ 29ರ ತರಂಗ ದ ಡಾ॥ ಜಿ ವರದರಾಜರಾಯರ ಲೇಖನ

## (ಉ) ದಾಸಸಾಹಿತ್ಯ ಪ್ರಕಾರಗಳನ್ನು ಬೇರೆ ಬೇರೆಯಾಗಿ ಆಚ್ಚಿಸಿರುವ ಪುಸ್ತಕಗಳು

ಉದಾಹರಣೆಗೆ (ಕ) ವಿಜಯದಾಸರ 'ಸ ಪ್ತಪ್ರಕರಣ ಸುಳಾದಿಗಳು 1948 ರಲ್ಲಿ (ಲಿಂಗಸೂಗೂರಿನ ಪ್ರಕಟಣೆ)

(ಚ) ಶ್ರೀ ಹರಿದಾಸರ ಉಗಾಭೋಗಗಳು 1965 ರಲ್ಲಿ (ಬೆಂಗಳೂರಿನ ಹರಿದಾಸರತ್ನಂ ಗೋಪಾಲದಾಸರು)

(ಟ) ಶ್ರೀ ಜಗನ್ನಾಥದಾಸರಾಯರ ಕೃತ ತತ್ವ ಸುವ್ವಾಲಿ 1895 ರಲ್ಲಿ (ಮದರಾಸು ಮಡಕಶಿರಾ ಬಾಲಕೃಷ್ಣರಾವ್)

(ತ) ಕನಕದಾಸರ ಕೀರ್ತನೆಗಳು (ಚತುರ್ಥ ಶತಮಾನೋತ್ಸವ ಸಮಿತಿ)

**(ಊ) ಹರಿದಾಸರ ತತ್ವಗ್ರಂಥಗಳ ಪ್ರಕಟಣೆ**

ಉದಾಹರಣೆಗೆ (ಕ) ವಾದಿರಾಜರ ಸ್ವಪ್ನ ಪದ ಗುಂಡಕ್ರಿಯೆ ಲಕ್ಷ್ಮೀಶೊ ಭಾನೆ

(ಚ) ಕನಕದಾಸರ ಹರಿಭಕ್ತಿಸಾರ

(ಟ) ಜಗನ್ನಾಥದಾಸರ ತತ್ವಸುವ್ವಾಲಿಗಳು ಹರಿಕಥಾಮೃತಸಾರ

**(ಋ) ಟೀಕುಸಹಿತ ದಾಸರ ತತ್ವಗ್ರಂಥಗಳ ಪ್ರಕಟಣೆ**

ಉದಾಹರಣೆಗೆ (ಕ) ವಾದಿರಾಜರ ಸ್ವಪ್ನ ಗದ್ಯ ವೈಕುಂಠ ವರ್ಣನೆ ಮೊದಲಾದುವು ದಾವಣಗೆರೆಯ ಬಿ ಭೀಮರಾಯರ ಟೀಕುವಿನೊಡನೆ ಪ್ರಕಟವಾಗಿವೆ

(ಚ) ಜಗನ್ನಾಥದಾಸರ ಹರಿಕಥಾಮೃತಸಾರ–ಸಂಕರ್ಷಣ ಒಡೆಯರೇ ಮೊದಲಾದವರ ಟೀಕುಗಳೊಡನೆ ಪ್ರಕಟವಾಗಿದೆ

**(ೠ) ದಾಸರ ಬಿಡಿ ಹಾಡುಗಳನ್ನು ಇಡೀ ಪುಸ್ತಕವಾಗಿ ಪ್ರಕಟಿಸಿರುವುದು**

ಉದಾಹರಣೆಗೆ (ಕ) ಹರಪನಹಳ್ಳಿ ಭೀಮವ್ವನ ನಳಚರಿತ್ರೆ ಹಾಡು (ಶಾರದಾ ವಿಲಾಸ ಮುದ್ರಣ ಶಾಲೆ ಬೆಂಗಳೂರು) ಶಕುಂತಲಾ ಚರಿತ್ರೆ (ಶ್ರೀನಿವಾಸಾಚಾರ್ಯ ಹೊಂಬಾಳಿ ಗದಗ)

ಸುಭದ್ರಾ ಕಲ್ಯಾಣ ಹಾಡು (ಶ್ರೀಕೃಷ್ಣ ಪುಸ್ತಕಾಲಯ ಧಾರವಾಡ 1956)

**(ಎ) ಹರಿದಾಸರ ಆಯ್ದ ಪದಗಳ ಸಂಕಲನ ಪ್ರಕಟಣೆ**

ಉದಾಹರಣೆಗೆ (ಕ) ಮಾಧ್ವ ಭಜನ ಮಂಜರಿ (ಶ್ರಿ ನಿವಾಸಾಚಾರ್ಯ ಹೊಂಬಾಳಿ ಗದಗ)

(ಚ) ಹರಿಭಕ್ತಿವಾಗಿನಿ (ವಿಶ್ವಕನ್ನಡ ಸಮ್ಮೇಳನದ ಪ್ರಕಟಣೆ)

(ಟ) ಶ್ರೀ ಹರಿಭಜನಾಮೃತಸಾರ (ಲಿಂಗಸೂಗೂರಿನ ಪ್ರಕಟಣೆ)

**(ಏ) ಹರಿದಾಸರನ್ನು ಕುರಿತ ನಾಟಕಗಳ ಪ್ರಕಟಣೆ**

ಉದಾಹರಣೆಗೆ (ಕ) ಮುಕ್ತ ಕನಕದಾಸ (ಲೇಖಕರು ಎಂ ಡಿ ಶ್ರೀನಿವಾಸಯ್ಯಂಗಾರ್ 1927 ರಲ್ಲಿ ಮೈಸೂರಿನ ಶ್ರೀಕೃಷ್ಣಾ ಪ್ರೆಸ್‌ನಲ್ಲಿ ಪ್ರಕಟವಾದ 5 ಅಂಕಗಳ ನಾಟಕ)

(ಚ) ಮುಕುತಿ ಮುಗುತಿ (ಪರ್ವತವಾಣಿ)

(ಟ) ಶ್ರೀಪುರಂದರದಾಸರು (ಸುಬೋಧ ಎಂ ರಾವ ರಾವ್)

(ತ) ವಿಜಯ ರಾಯರ ಪಾದ ನಿಜವಾಗಿ ನಂಬಲು 1 (ಸೀತಾರಾಮದಾಸ)

(ಪ) ಪುರಂದರದಾಸ ನೃತ್ಯರೂಪಕ (1984 ರ ಗಾನ ಭಾರತಿಯ ಸಂಚಿಕೆಯಲ್ಲಿ ಕೆ ಮುರಲೀಧರರಾವ್)

**(ಐ) ಹರಿದಾಸರನ್ನು ಕುರಿತ ಕವನಗಳ ಪ್ರಕಟನೆ**

ಉದಾಹರಣೆ (ಕ) ಪುರಂದರದಾಸರಿಗೆ ( ತೋರಣ ಪು 71 ಜಿ ವರದರಾಜರಾವ್)

(ಚ) ಶ್ರೀ ಪುರಂದರದಾಸರು ( ನೆನೆದವರ ಮನದಲ್ಲಿ , ಕೆ ಎಸ್ ನಿಸ್ಸಾರ್ ಅಹಮದ್)

**(ಒ) ಸ್ವರಪ್ರಸ್ತಾರದೊಡನೆ ದಾಸರ ಕೀರ್ತನೆಗಳ ಪ್ರಕಟಣೆ**

ಉದಾಹರಣೆ (ಕ) ಪುರಂದರದಾಸ ಕೀರ್ತನ ಸ್ವರಾವಳಿ (ಎಚ್ ಕೆ ಅಶ್ವತ್ಥನಾರಾಯಣ)

(ಚ) ಪುರಂದರ ಕೃತಿಶತಕ (ಪುರಂದರದಾಸರ ಚತುರ್ಥ ಶತಮಾನೋತ್ಸವ ಸಮಿತಿಯ ಪ್ರಕಟಣೆ)

(೬) ಹರಿದಾಸರನ್ನು ಕುರಿತ ವಿಶೇಷ ಸಂಚಿಕೆಗಳ ಪ್ರಕಟಣೆ

ಉದಾಹರಣೆ (ಕ) ಜೀವನ ಸಂಪುಟ 24 ಸಂಚಿಕೆ 9

(ಚ) ಸುಬೋಧ ಜನವರಿ 1964

(ಟ) ಪರಿವಾಳ ಶ್ರೀಪುರಂದರದಾಸಾಂಕ 1964

(ತ) ತರಂಗ ಜನವರಿ 29 1984

ಮತ್ತು ಪ್ರತಿವರ್ಷ ಪುರಂದರದಾಸರ ಉತ್ಸವಕಾಲದಲ್ಲಿ ಪ್ರಕಟವಾಗುವ ದೈನಿಕಗಳ ಪುರವಣಿಗಳು ಸವಿಸಂಚಿಕೆಗಳು (ಉದಾ ಪುರಂದರ 1983 1984) ಇತ್ಯಾದಿಗಳು

—ಹೀಗೆ ದಾಸಸಾಹಿತ್ಯವನ್ನು ಕುರಿತಂತೆ ನೂರಾರು ಪುಸ್ತಕಗಳು ಲೇಖನಗಳು ಪ್ರಕಟವಾಗಿವೆ ಪ್ರಕಟವಾಗುತ್ತಿವೆ

1968ರಲ್ಲಿ ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯು ದಾಸರ ಕೀರ್ತನೆಗಳ ಪರಿಷ್ಕೃತ ವಿಮರ್ಶಾತ್ಮಕ ಆವೃತ್ತಿ (Critical Editions) ಗಳನ್ನು ಪ್ರಕಟಿಸುವ ಯೋಜನೆಯನ್ನು ಹಮ್ಮಿಕೊಂಡಿದೆ ನೂರಾರು ವರ್ಷಗಳಿಂದ ಹೀಗೆ ಬಿಡಿ ಪ್ರತಿಗಳಲ್ಲಿ ಪ್ರಕಟವಾಗಿರುವ ಹಾಗೂ ಇನ್ನೂ ಕಂಠಸ್ಥವಾಗಿಯೇ ಉಳಿದಿರುವ ದಾಸಸಾಹಿತ್ಯ ಸಾಮಗ್ರಿಯನ್ನು ಸಂಗ್ರಹಿಸಿ ಗ್ರಂಥಸಂಪಾದನ ಶಾಸ್ತ್ರರೀತ್ಯಾ ಸಂಪಾದಿಸಿ ದಾಸಸಾಹಿತ್ಯದ ಉತ್ತಮ ಹಾಗೂ ಶುದ್ಧ ಪ್ರತಿಗಳನ್ನು ಪ್ರಕಟಿಸಿ ಜನತೆಗೆ ಒದಗಿಸುವ ಕೆಲಸವನ್ನು ಕೈಗೊಂಡಿದೆ ಆ ನಿಟ್ಟಿನಲ್ಲಿ ಈಗ ಕನ್ನಡ ಅಧ್ಯಯನ ಸಂಸ್ಥೆಯ ಹರಿದಾಸ ಸಾಹಿತ್ಯ ವಿಭಾಗವು ಎಲ್ಲ ರೀತಿಯ ಸು 335 ಹಸ್ತಪ್ರತಿಗಳನ್ನೂ ತನ್ನದೇ ಆದ ಧ್ವನಿವಾಹಿನಿ ಧ್ವನಿಯಂತ್ರವನ್ನೂ ಧ್ವನಿಮುದ್ರಿತ ಟೇಪುಗಳನ್ನೂ ಪಡೆದಿರುವ ಗ್ರಂಥಭಂಡಾರವನ್ನು ಹೊಂದಿದೆ ಹರಿದಾಸ ಸಾಹಿತ್ಯಮಾಲೆಯಲ್ಲಿ ದಾಸರ ಕೃತಿಗಳ ಪರಿಷ್ಕೃತ ಆವೃತ್ತಿಗಳನ್ನೂ ಪ್ರಕಟಿಸುತ್ತಿದೆ

1973ರಲ್ಲಿ ಈ ಸಂಸ್ಥೆಯಿಂದ ಡಾ ॥ ಜಿ ವರದರಾಜರಾಯರು ಸಂಪಾದಿಸಿದ ಶ್ರೀಪಾದರಾಜರ ಕೃತಿಗಳು ಪ್ರಕಟವಾಯಿತು ಇದು ದಾಸಸಾಹಿತ್ಯ ಪ್ರಕಟಣೆಯ ಇತಿಹಾಸದಲ್ಲೇ ಒಂದು ಮೈಲಿಗಲ್ಲು ಎಂಬುದು ನಿರ್ವಿವಾದ ಕವಿಕಾವ್ಯಗಳನ್ನು ಕುರಿತ ವಿಮರ್ಶಾತ್ಮಕವಾದ ವಿಸ್ತಾರವಾದ ಪೀಠಿಕೆ ಉಪಯುಕ್ತವಾದ ಅನುಬಂಧಗಳಿಂದ ಕೂಡಿ ಹರಿದಾಸರ ಕೀರ್ತನೆಗಳನ್ನು ಹೇಗೆ ಸಂಪಾದಿಸಬೇಕೆನ್ನುವುದಕ್ಕೆ ಈ ಪುಸ್ತಕ ಒಂದು ಮಾದರಿಯಾಗಿದೆ ಈ ಆವೃತ್ತಿಯಲ್ಲಿ 112 ಆಕರಗಳಿಂದ (ತಾಳೆಗರಿಯ ಕಾಗದದ ಹಾಗೂ ಮುದ್ರಿತ ಪ್ರತಿಗಳು) ಸಂಗ್ರಹಿಸಿ ಸಂಪಾದಿಸಿದ 101

ಕೃತಿಗಳಿವೆ ಇವುಗಳಲ್ಲಿ 65 ಕೃತಿಗಳು ಎರಡು ಅಥವಾ ಅದಕ್ಕಿಂತ ಹೆಚ್ಚು ಆಕರ ಗಳಲ್ಲಿ ದೊರೆಯುವುದರಿಂದ ಅವು ಶ್ರೀಪಾದರಾಜರವೇ ಎಂಬ ವಿಶ್ವಾಸವನ್ನಿಡಲಾಗಿದೆ 28 ಕೃತಿಗಳು ಏಕೈಕ ಆಕರದಲ್ಲಿ ದೊರೆಯುವುದರಿಂದ ಅನುಮಾನಕ್ಕೆ ಆಸ್ಪದವಿದ್ದು ಅವಕ್ಕೆ ಇನ್ನೊಂದು ಆಕರ ದೊರೆಯುವವರೆಗೆ ಅವು ಪ್ರತ್ಯೇಕವಾಗಿಯೇ ನಿಲ್ಲುತ್ತವೆ ಉಳಿದವುಗಳಲ್ಲಿ 2 ಕೃತಿಗಳು ಪ ರ ಪ್ರಥೆ ದಗಳು ಎರಡು ರಿ ತಿಯ ಲ್ಲಿ ಪ್ರಚಾರದಲ್ಲಿ ಇರ ವ ಒಂದೇ ಕೀರ್ತನೆಯನ ಹೀಗೆ ಕರೆದಿದೆ 6 ಕೃತಿಗಳ ಅಂಕಿತ ಸಂದಿಗ್ಧವಾಗಿದೆ ಅವು ಯಾರ ಕೃತಿಗಳೆಂದು ಉಪಲಬ್ಧ ಆಕರಗಳ ಆಧಾರದ ಮೇಲೆ ನಿರ್ಧರಿಸಲಾಗಿಲ್ಲ ಈ ಪುಸ್ತಕದಲ್ಲಿ 23 ಕೀರ್ತನೆಗಳನ್ನು ಹೊಸದಾಗಿ ಮೊದಲಬಾರಿಗೆ ಪ್ರಕಟಿಸಲಾಗಿದೆ ಒಟ್ಟು ಸು 478 ಪುಟಗಳಲ್ಲಿ ಅಚ್ಚಾಗಿರುವ ಈ ಪುಸ್ತಕ ದಾಸಸಾಹಿತ್ಯ ಪ್ರಕಟಣೆ ಯಲ್ಲಿ ಹೊಸಮಾರ್ಗವನು ತೆರೆಯಿತು ಅನಂತರ ಇದೇ ಸಂಪಾದಕರ ಶ್ರೀ ವ ಹಿ ಪತಿರಾಯ ರ ಕೃತಿಗಳ 1976ರಲ್ಲಿ ಪ್ರಕಟವಾಯಿತು 680 ಕೃತಿಗಳುಳ್ಳ ಈ ಪುಸ್ತಕ ಒಟ್ಟು 580 ಪುಟಗಳಲ್ಲಿ ಅಚ್ಚಾಗಿದೆ

ಹೆಚ್ಚು ಕಡಿಮೆ ಅದೇ ದಾರಿಯಲ್ಲಿ ಸ ಗಿರುವ ಶ್ರೀ ಗೊ ಪಾಲದಾಸರ ಕೃತಿ ಗಳು ವ ತ್ತು ಶ್ರೀ ವಾದಿರಾಜರ ಕೃತಿಗಳು ಕ್ರಮವಾಗಿ 1977 ವ ತ್ತು 1980ರಲ್ಲಿ ಡಾ॥ ಟಿ ಎಸ್ ನಾಗರತ್ನರವರಿಂದ ಸಂಪಾದಿತವಾಗಿ ಕನ್ನಡ ಅಧ್ಯಯನ ಸಂಸ್ಥೆ ಯಿ ಂದ ಪ್ರಕಟವ ಗಿವೆ ಗೋಪಾಲದಾಸರ 87 ಕೀರ್ತನೆಗಳು 71 ಸ ಳ ದಿಗಳು 20 ಉಗಾಭೊ ಗಗಳೂ ಇವೆ (ಒಟ್ಟು 178) 82 ಕೃತಿಗಳು ವಿಶ್ವಸನಿ ಯವಾಗಿದ್ದು 94 ಕೃತಿಗಳು ಏಕೈಕ ಆಕರಗಳಲ್ಲಿವೆ ಉಳಿದ ಎರಡು ಕೃತಿಗಳ ಅಂಕಿತ ಸಂದಿಗ್ಧ ವ ಗಿದೆ ಕವಿಕಾವ್ಯಗಳನು ಕುರಿತ ಪೀಠಿಕೆ ಶಬ್ದಾರ್ಥಾದಿ ಅನ ಬಂಧಗಳಿಂದ ಕೂಡಿ 79 ಆಕರಗಳ ಆದಾರದಿ ದ ಸಿದ್ಧವಾಗಿದ್ದು ಒಟ್ಟು 630 ಪುಟಗಳಲ್ಲಿ ಶ್ರೀಗೋಪಾಲ ದಾಸರ ಕೃತಿಗಳು ಅಚ್ಚಾಗಿದೆ

ಶ್ರೀ ವಾದಿರಾಜರ ಕ ತಿಗಳು 143 ಆಕರಗಳ ಆಧ ರದಿ ದ ಸಿದ್ಧವಾಗಿದ್ದು ಒಟ್ಟು 313 ಕೃತಿಗಳಿವೆ ಅವುಗಳಲ್ಲಿ 291 ಕೀರ್ತನೆಗಳು 10 ಸುಳಾದಿಗಳು ಮತ್ತು 12 ಉಗಾಭೋಗಗಳು 170 ಕೃತಿಗಳು ವಿಶ್ವಾಸಾರ್ಹವಾಗಿದ್ದು 127 ಕೃತಿಗಳು ಇದರಲ್ಲಿ ಮೊಟ್ಟ ಮೊದಲ ಬಾರಿಗೆ ಅಚ್ಚಾಗಿವೆ 861 ಪುಟಗಳಲ್ಲಿ ಅಚ್ಚಾಗಿರುವ ಈ ಪುಸ್ತಕಕ್ಕೆ ಕವಿ-ಕಾವ್ಯವನ್ನು ಕುರಿತಂತೆ ಡಾ॥ ಜಿ ವರದರ ಜರಾಯರು ವಿಸ್ತಾರ ವ ದ ಪೀಠಿಕೆಯ ನ್ನು ಬರೆದಿದ್ದಾರೆ ಅನುಬಂಧಗಳಿಂದ ಕೂಡಿದ ಈ ಆವೃತ್ತಿ ಸಂಶೋ ಧಕರಿಗೆ ಒಳ್ಳೆಯ ಆಕರ ಗ್ರಂಥವ ಗಿದೆ

ಈಗಲೂ ಕನ ಡ ಅಧ್ಯಯನ ಸಂಸ್ಥೆ ದಾಸಸಾಹಿತ್ಯ ಸ ಗ್ರಹಣೆ ಸಂಪಾದನೆ ಹಾಗೂ ಪ್ರಕಟಣೆಯ ಕಾರ್ಯವನ್ನು ಮುಂದುವರಿಸಿರುವ ಫಲವಾಗಿ ಆ ಮಾಲೆಯಲ್ಲಿ

ಹರಪನಹಳ್ಳಿ ಭೀಮವ್ವನ ಹಾಡುಗಳು ಅಚ್ಚಾಗುತ್ತಿದ್ದು (ಸಂ ಡಾ॥ ಟಿ ಎಸ್ ನಾಗರತ್ನ) ಸದ್ಯದಲ್ಲಿಯೇ ಪ್ರಕಟವಾಗಲಿದೆ (ಸು 700 ಪುಟಗಳು) ಶ್ರೀ ಜಗನ್ನಾಥದಾಸರ ಕೃತಿಗಳು (ಸಂ ಟಿ ಎಸ್ ನಾಗರತ್ನ) ಮತ್ತು ಶ್ರೀ ಪ್ರಸನ್ನ ವೆಂಕಟದಾಸರ ಕೃತಿಗಳು (ಸಂ ಶ್ರೀಮತಿ ಟಿ ಕೆ ಇಂದುಬಾಯಿ) ಅಚ್ಚಿನ ಮನೆಗೆ ಹೋಗಲು ಸಿದ್ಧವಾಗಿವೆ ಶ್ರೀ ವಿಜಯದಾಸರ ಕೃತಿಗಳು ಶ್ರೀ ವ್ಯಾಸರಾಯರ ಕೃತಿಗಳು ಸಂಪಾದನೆಯ ವಿವಿಧ ಹಂತಗಳಲ್ಲಿವೆ ಮುಂದೆ ಉಪಲಬ್ಧ ದಾಸ ಸಾಹಿತ್ಯವಷ್ಟನ್ನೂ ಸಂಪಾದಿಸಿ ಹೀಗೆಯೇ ವಿವಿಧ ಸಂಪುಟಗಳಲ್ಲಿ ಪ್ರಕಟಿಸುವ ಯೋಜನೆ ಸಂಸ್ಥೆಯ ಮುಂದಿದೆ

ಒಟ್ಟಿನಲ್ಲಿ ಹರಿದಾಸಸಾಹಿತ್ಯದ ಸಂಗ್ರಹಣೆ ಸಂರಕ್ಷಣೆ ಪ್ರಕಟಣೆಗಳು ನಡೆಯುತ್ತಿದ್ದ ಬಗ್ಗೆ 1850ರಿಂದಲೂ ನಮಗೆ ಸ್ಪಷ್ಟ ಮಾಹಿತಿಗಳು ಸಿಕ್ಕಿದ್ದು 1984ರಲ್ಲೂ ಆ ಕಾರ್ಯಗಳು ವ್ಯವಸ್ಥಿತವಾಗಿ ನಡೆಯುತ್ತಲಿದ್ದು, ಹರಿದಾಸ ಸಾಹಿತ್ಯ ಪ್ರಕಟಣೆಯ ಭವಿಷ್ಯ ಉಜ್ವಲವಾಗಿ ಕಾಣುತ್ತಿದೆ *

* ಈ ಲೇಖನಕ್ಕೆ ಡಾ ವರದರಾಜರಾಯರ ಶ್ರೀಪಾದರಾಜರ ಕೃತಿಗಳು ಪೀಠಿಕೆಯನ್ನೂ ಬಿ ಎಂ ಶ್ರೀ ಸ್ಮಾರಕ ಪ್ರತಿಷ್ಠಾನದ ಪ್ರಕಟಣೆ— ಹಸ್ತಪ್ರತಿಶಾಸ್ತ್ರವನ್ನೂ ವಿಶೇಷವಾಗಿ ಬಳಸಿಕೊಂಡಿದೆ

# ಜನಸಾಮಾನ್ಯರ ವೇದ , ದಾಸಸಾಹಿತ್ಯ

ಸಿ ಪಿ ಕೆ

ಕರ್ಣಾಟಕದ ಸಾಂಸ್ಕೃತಿಕ ಚರಿತ್ರೆಯನ್ನು ಅವಲೋಕಿಸಿದರೆ ಎರಡು ಸರ್ವೋದಯ ಚಳುವಳಿಗಳು ಕಣ್ಣಿಗೆ ಬೀಳುತ್ತವೆ ಶಿವಶರಣರದು ಹನ್ನೆರಡನೆಯ ಶತಮಾನದಲ್ಲಿ ಘಟಿಸಿದ್ದು ಇನ್ನೊಂದು ಹರಿದಾಸರದು ೧೫-೧೬ನೆಯ ಶತಮಾನದಲ್ಲಿ ಎದ್ದು ಕಾಣುವಂಥದು ಶಿವಶರಣರ ಈ ವಚನ ವಾಙ್ಮಯಕ್ಕೆ ವೀರಶೈವ ಧರ್ಮ ಹಿನ್ನೆಲೆಯಾದರೆ ಹರಿದಾಸರ ಕೀರ್ತನ ಸಾಹಿತ್ಯಕ್ಕೆ ಮಧ್ವಾಚಾರ್ಯ ಪ್ರಣೀತ ದ್ವೈತಸಿದ್ಧಾಂತ ಹಿನ್ನೆಲೆಯಾಗಿದೆ ವಚನಕಾರರೂ ಹರಿದಾಸರೂ ಸಂಸ್ಕೃತದಲ್ಲಿ ನಿಕ್ಷಿಪ್ತವಾಗಿ ಸಾಮಾನ್ಯ ಜನತೆಗೆ ಅಗಮ್ಯವಾಗಿದ್ದ ವಿಷಯಗಳನ್ನು ತಿಳಿಗನ್ನಡದಲ್ಲಿ ತಿಳಿಸಿಕೊಟ್ಟರು ಜನತೆಗೆ ಅರ್ಥವಾಗುವ ಭಾಷೆಯಲ್ಲಿ ಕೆಲವೊಮ್ಮೆ ಆಡುನುಡಿಯಲ್ಲಿ ಜ್ಞಾನ ಪ್ರಜ್ಞಾನಗಳನ್ನು ಸಂವಹನಗೊಳಿಸಿ ಉಪಕರಿಸಿದರು ಗಂಡು-ಹೆಣ್ಣು ಬ್ರಾಹ್ಮಣ-ಶೂದ್ರ ಅಗ್ರಜ-ಅಂತ್ಯಜ ಎಂಬ ಭೇದವಿಲ್ಲದೆ ಎಲ್ಲರೂ ಉದ್ಧಾರಗೊಳ್ಳಲು ಅನುವು ಮಾಡಿಕೊಟ್ಟರು ಈ ಸಾಹಿತ್ಯವನ್ನು ಸಾಮಾನ್ಯರ ವೇದ ಎಂದು ಕರೆಯಬಹುದು ವೇದ ಶಬ್ದಕ್ಕೆ ಜ್ಞಾನವೆಂಬ ವ್ಯಾಪಕವಾದ ಮೂಲಾರ್ಥವಿರುವುದನ್ನು ಲಕ್ಷಿಸಬೇಕು ( ಅನಂತಾ ಹಿ ವೈ ವೇದಾಃ ಎಂಬ ಮಾತನ್ನು ನೆನೆಯಬಹುದು) ಜ್ಞಾನ, ಭಕ್ತಿ ವೈರಾಗ್ಯಗಳ ಉಪದೇಶ ಪಾಮರರಿಗೆ ಅವರ ಭಾಷೆಯಲ್ಲಿ ಲಭ್ಯವಾಯಿತೆನ್ನುವುದು ಅಪೂರ್ವ ಸಂಗತಿ

ಸಾಮಾನ್ಯರ ವೇದ ಎಂಬ ಮಾತು ಹರಿದಾಸರ ಹಾಡುಗಳಿಗೆ ಹೆಚ್ಚು ಸಮಂಜಸವಾಗಿ ಒಪ್ಪುತ್ತದೆ ವೇದ ಶಬ್ದದ ಸಮಾನಾರ್ಥದಲ್ಲಿ ದಾಸರ ಮಾಧ್ಯಮ ಕನ್ನಡವಾದರೂ ಅವರದು ಶುದ್ಧ ವೈದಿಕ ಪರಂಪರೆಯೇ ವಚನಕಾರರ ಬಗೆಗೆ ಹೀಗೆ ಹೇಳುವುದು ಕಷ್ಟ ಅವರು ವೇದೋಪನಿಷತ್ತುಗಳನ್ನು ಸಂಪೂರ್ಣವಾಗಿ ಅಲ್ಲಗಳೆಯದಿದ್ದರೂ ವೈದಿಕ ಪರಂಪರೆಯನ್ನು ಕುರಿತು ಅವರದು ಮುಖ್ಯವಾಗಿ ಪ್ರತಿಭಟನೆಯ ನಿಲುವು ವೇದದ ಜ್ಞಾನಕಾಂಡವನ್ನಷ್ಟೆ ವಚನಕಾರರು ಪುರಸ್ಕರಿಸಿದರು ಕರ್ಮಕಾಂಡವನ್ನು ಖಂಡಿಸಿದರು ಹರಿದಾಸರೆಲ್ಲ ವೇದದ ಕರ್ಮಕಾಂಡವನ್ನು ತಕ್ಕಮಟ್ಟಿಗೆ ಒಪ್ಪುತ್ತಾರೆ ವರ್ಣಾಶ್ರಮ ಧರ್ಮವನ್ನು ವಿರೋಧಿಸುವುದಿಲ್ಲ

ಹರಿದಾಸರ ಕೀರ್ತನ ವಾಙ್ಮಯ ವೇದೋಪನಿಷತ್ತುಗಳ ತಿರುಳನ್ನು ಕನ್ನಡದಲ್ಲಿ ಪ್ರತಿಪಾದಿಸುತ್ತದೆ ಅಲ್ಲಿನ ಗಹನ ತತ್ತ್ವಗಳನ್ನು ಅಧ್ಯಾತ್ಮರಹಸ್ಯಗಳನ್ನು

ಸರಳ ಸುಲಭ ರೀತಿಯಲ್ಲಿ ಜನಸಾಮಾನ್ಯರಿಗೆ ಅನಾವರಣಗೊಳಿಸುತ್ತದೆ. ದಾಸ ಶ್ರೇಷ್ಠರೆನಿಸಿದ ಪುರಂದರದಾಸರ ಕೀರ್ತನೆಗಳಿಗೆ ಪುರಂದರೋಪನಿಷತ್ ಎಂಬ ಅಭಿಧಾನ ಸಂದಿರುವುದನ್ನು ಗಮನಿಸಬಹುದು. ಇದು ಸಮಗ್ರ ದಾಸಸಾಹಿತ್ಯಕ್ಕೇ ಅನ್ವಯಿಸುತ್ತದೆ. ಕಲ್ಲು ಸಕ್ಕರೆ ಕೊಳ್ಳಿರೋ ಎಂದು ದಾಸರು ಮನೆಮನೆಯ ಬಾಗಿಲಿಗೆ ಹೋಗಿ ವೇದಶಾಸ್ತ್ರಾದಿಗಳ ಸಂದೇಶವನ್ನು ಹೃದ್ಯವಾಗಿ ಬಿತ್ತರಿಸಿದರು. ಅವರ ರಚನೆಗಳಲ್ಲಿ ಒಂದು ಕಡೆ ಮಾಧ್ವಸಿದ್ಧಾಂತ ಪ್ರಮೇಯಗಳಿದ್ದರೆ ಮತ್ತೊಂದು ಕಡೆ ಎಲ್ಲ ಮತ ಧರ್ಮಗಳಿಗೂ ಸಮಾನವಾದ ಸದಾಚಾರಸಂಹಿತೆಯಿಂದ ಸಾಮಾನ್ಯರ ದೃಷ್ಟಿಯಲ್ಲಿ ಎರಡನೆಯದೇ ಮುಖ್ಯ.

ಹರಿದಾಸದರ್ಶನದ ಆಕರಗಳೆಂದರೆ ಮಧ್ವಾಚಾರ್ಯರೂ ಅವರ ಅನುಯಾಯಿಗಳೂ ವ್ಯಾಖ್ಯಾನಿಸಿದಂತೆ ವೇದೋಪನಿಷತ್ತುಗಳು ಸ್ಮೃತಿಗಳು ಬ್ರಹ್ಮಸೂತ್ರಗಳು ಭಾಗವತಾದಿ ಪುರಾಣಗಳು ರಾಮಾಯಣ ಮಹಾಭಾರತಗಳು ನ್ಯಾಯಸುಧಾದಂತಹ ಕೃತಿಗಳು ಮುಂತಾದುವು. ಎಷ್ಟೋ ಕಡೆ ಇವುಗಳಿಂದ ಆಯ್ದ ಭಾಗಗಳನ್ನು ದಾಸರು ಕನ್ನಡಕ್ಕೆ ಅನುವಾದಿಸುವುದುಂಟು.

> ಮಧ್ವಮತವನ್ನು ಶ್ರೀಪಾದರಾಜರು ಹೀಗೆ ಸೂತ್ರೀಕರಿಸಿದ್ದಾರೆ
> ಶ್ರೀಮನ್ಮಧ್ವಮತೇ ಹರಿಃ ಪರತರಃ ಸತ್ಯಂ ಜಗತ್ತತ್ವತೋ ।
> ಭೇದೋ ಜೀವಗಣಾ ಹರೇರನುಚರಾಃ ನೀಚೋಚ್ಚ ಭಾವಂಗತಾಃ ॥
> ಮುಕ್ತಿರ್ನೈಜಸುಖಾನುಭೂತಿರಮಲಾ ಭಕ್ತಿಶ್ಚ ತತ್ಸಾಧನಂ ।
> ಹ್ಯಕ್ಷಾದಿ ತ್ರಿತಯಂ ಪ್ರಮಾಣಮಖಿಲಾಮ್ನಾಯೈಕವೇದ್ಯೋ ಹರಿಃ ॥[1]

ದಾಸರು ತಮ್ಮ ಅನೇಕ ಹಾಡುಗಳನ್ನು ಈ ಸೂತ್ರಗಳಿಗೆ ಭಾಷ್ಯವನ್ನಾಗಿಸಿದ್ದಾರೆ. ಹರಿದಾಸರಲ್ಲಿ ವೇದಾಂತ ಗ್ರಂಥಗಳಂತೆ ಸಾಧಕ ಬಾಧಕ ಪ್ರಮಾಣಗಳನ್ನು ಸಾಲಾಗಿ ಕೊಟ್ಟು ಪ್ರಮೇಯವನ್ನು ಪ್ರತಿಷ್ಠೆಗೊಳಿಸುವ ಕ್ರಮವು ಅನುಸರಿಸಲ್ಪಟ್ಟಿಲ್ಲ. ಪ್ರಮಾಣಗಳನ್ನು ಬುಡಕಟ್ಟಾಗಿ ಇಟ್ಟುಕೊಂಡು ಜನಸಾಮಾನ್ಯರ ಅನುಭವವನ್ನು ವಿವೇಚಿಸಿ ಪ್ರತ್ಯಕ್ಷ ಅನುಮಾನಗಳಿಗೆ ನಿಲುಕದ ವೇದೈಕವೇದ್ಯನಾದ ಶ್ರೀಹರಿಯ ಮಹಿಮೆಯನ್ನು ಕೊಂಡಾಡುತ್ತ ಜ್ಞಾನಿಗಳಾದ ಪ್ರಹ್ಲಾದ–ನಾರದಾದಿಗಳ ಪ್ರತ್ಯಕ್ಷವನ್ನು ಉದಾಹರಿಸಿ ಎಲ್ಲರಿಗೂ ಮನದಟ್ಟಾಗುವಂತೆ ಗುಹ್ಯ ಪ್ರಮೇಯಗಳನ್ನು ವಿವರಿಸಿದ್ದಾರೆ.[2]

---

1 ಶ್ರೀಹರಿ ಸರ್ವೋತ್ತಮನು. ಜಗತ್ತು ಪಾರಮಾರ್ಥಿಕ ಸತ್ಯ. ಪಂಚಭೇದವು ಪಾರಮಾರ್ಥಿಕ ಸತ್ಯ ಮತ್ತು ನಿತ್ಯ. ಜೀವಗಣಗಳು ಶ್ರೀಹರಿಯ ಅನುಚರರು. ನಿತ್ಯ ತಾರತಮ್ಯವುಳ್ಳವರು. ಸ್ವರೂಪ ಸುಖಾನುಭವವೇ ಮುಕ್ತಿ. ನಿರ್ಮಲವಾದ ಭಕ್ತಿಯು ಮುಕ್ತಿಗೆ ಸಾಧನ. ಪ್ರತ್ಯಕ್ಷ ಅನುಮಾನ ಆಗಮಗಳು ಸಾಧಕ ಪ್ರಮಾಣಗಳು. ಶ್ರೀಹರಿಯು ಆಗಮಮಾತ್ರ ವೇದ್ಯನು.

2 ಡಾ ಸ್ವಾ ಪಂಚಮುಖಿ— ಕರ್ನಾಟಕ ಹರಿದಾಸ ಸಾಹಿತ್ಯ ಪುಟ ೯೯

ಪುರಂದರದಾಸರು ದ್ವೈತಸಿದ್ಧಾಂತವನ್ನು ಹೀಗೆ ಸಂಕ್ಷಿಪ್ತವಾಗಿ ತಿಳಿಸುತ್ತಾರೆ

ಸತ್ಯ ಜಗಕಿದು ಪಂಚಭೇದವು |
ನಿತ್ಯ ಶ್ರೀ ಗೋವಿಂದನ ।
ಕೃತ್ಯವನಾಂತು ತ ರತಮ್ಯದಿ ।
ಕ ಷ್ಣನಧಿಕೆ ದು ಸ ರಿರ ॥

ಅಷ್ಟೆ ಅಲ್ಲ ಹೀಗೆ ಎಚ್ಚರಿಸುತ್ತಾರೆ
ಬಿಡಬೆ ಡ ಬಿಡಬೇಡಿ ।
ಮಧ್ವವ ತದ ಸಿದ್ಧಾಂತದ ಪದ್ಧತಿ ।
ಬಿಡಬೆ ಡ ಬಿಟ್ಟು ಕೆಡಬೆ ಡ ॥

ಪುರಂದರದಾಸರ ಈ ಕೀ ್ಿಯೂ ಗವ ನಾರ್ಹ ವೈದಿಕ ಪರಂಪರೆಯ ದೃಷ್ಟಿಯಿಂದ

ಒಬ್ಬ ಆಚಿ ರಿಯ ನು ದೈವವೇ ಇಲ್ಲವೆಂದ
ಒಬ್ಬಾಚಾರಿಯ ನು ದೈವಕೆಂಟೇ ಗ ಣವೆಂದ
ಒಬ್ಬಾಚಾರಿ ನು ನಿರ್ಗ ಣ ನಿರಾಕ ರ
ನಿರವಯ ವನೆಂದಾ ಕಡೆಯಲಿ ತಾನೇ ದೈವವೆಂದಾ ।
ಒಬ್ಬರು ವೇದಾರ್ಥವರಿತು ಒರಿಯರು
ಒಬ್ಬ ಮಧ್ವಾಚಾರಿಯರೆ ಪುರ ದರ ದ ಲ_
ನೊಬ್ಬನೆ ದೈವವೆಂದು ತೋರಿಸಿಕೊಟ್ಟರಾಗಿ ॥
ವೈದಿಕ ಮತದಲ್ಲಿ ನಡೆದೇವೆಂದು ತಾವು
ವೈಷ್ಣವವಂ ಒಟ್ಟುಕೊಟ್ಟರು ಕೆಲರು
ವೈಷ್ಣವ ಮತದಲ್ಲಿ ನಡೆದೆ ವೆಂದು ತಾವು
ವೈದಿಕವಂ ಬಿಟ್ಟುಕೊಟ್ಟರು ಕೆಲವರು
ವೈದಿಕ ವೈಷ್ಣವವೊಂದೆಂದು ವ ಧ್ವವ ಐ
ಪ್ರತಿಪಾದಿಸಿದ ಪುರಂದರವಿಠಲ ವೆ ಚ್ಚ ॥

ಭಕ್ತಿಯ ಸ್ವರೂಪವನು ಅದರ ಸಾಧನೆಗೆ ಮಾಡಬೇಕಾದ ಉಪಾಯವನ್ನು ಪುರಂದರರ ಒಂದು ಪರಿಚಿತ ರೂಪಕದ ಮೂಲಕ ವಿವರಿಸ ತ್ತಾರೆ

ಆನ ಭವದಡ ಗೆಯ ಮಾಡಿ ಅದ
ಕ್ಕನ ಭವಿಗಳು ಬಂದು ನೀವೆಲ್ಲ ಕೂಡಿ ॥ಪ॥
ತನುವೆಂಬ ಭಾಂಡವ ತೊಳೆದು ಕೆ ಳ ವ

ಮನದ ಚಂಚಲವೆಂಬ ಮ ಎಸುರೆಯ ಕಳೆದು
ಘನವಾಗಿ ಮನೆಯನ್ನು ಬಳೆದು ಅಲ್ಲಿ
ಮಿನುಗುವ ತ್ರಿಗುಣದ ಒಲೆಗೂಂಡ ನಡೆದು (?) ॥೧॥

ವಿರಕ್ತಿಯೆಂಬುವ ಮಡಿಯುಟ್ಟು ಪೂರ್ಣ
ಹರಿಭಕ್ತಿಯೆಂಬ ನೀರನ್ನೆಸರಿಟ್ಟು
ಅರಿವೆಂಬ ಬೆಂಕಿಯ ಕೊಟ್ಟು ಮಾಯಾ
ಮರೆಯೆಂಬ ಕಾಷ ಮ ಮ ದದಿಂದ ಸುಟ್ಟು ॥೨॥

ಕರುಣೆಂಬ ಸಾಮ ಗ್ರಿ ಹೂಡಿ ಮೋಕ್ಷ
ಪರಿಕರವಾದಂಥ ಪಾಕವ ಮಾಡಿ
ಗುರುಶರಣರು ಸವಿದಾಡಿ ನಮ್ಮ
ಪುರಂದರವಿಠಲನ ಬಿಡದೆ ಕೊಂಡಾಡಿ ॥೩॥

ಹರಿಸರ್ವೋತ್ತಮತ್ವವನ್ನು ಹೇಳುವ ಪುರಂದರದಾಸರ ಈ ಹಾಡು ಭಗವನ್ಮಹಿಮೆಯನ್ನು ಅಮೋಘವಾಗಿ ಸ್ಥಾಪಿಸುತ್ತದೆ

ಸಕಲ ಗ್ರಹಬಲ ನೀನೆ ಸರಸಿಜಾಕ್ಷಾ
ನಿಖಿಳರಕ್ಷಕ ನೀನೆ ವಿಶ್ವವ್ಯಾಪಕನೆ
ಜಿತವಾಗಿ ಎನ್ನೊಡೆಯ ಪುರಂದರ ವಿಠಲನೆ ।
ಶ್ರುತಿಗೆ ನಿಲುಕದ ಅಪ್ರತಿಮಮಹಿಮ ನೀನೆ ॥

ಒಳಗಣ್ಣಿಗೆ ಹರಿ ತೋರುವ ಪರಿಯನ್ನು ಹೀಗೆ ತಾಂತ್ರಿಕವಾಗಿ ಬಣ್ಣಿಸುತ್ತಾರೆ ಪುರಂದರದಾಸರು

ಆಧಾರ ಮೊದಲಾದ ಆರುಚಕ್ರ
ಶೋಧಿಸಿ ಬಿಡಬೆ ಕು ಈಷಣ ಮೂರು
ಸಾಧಿಸಿ ಸುಷುಮ್ನ ತಿರು ಅಲ್ಲಿ
ಭೇದಿಸಿ ನೀ ಪರಬ್ರಹ್ಮನ ಸೇರು ॥೧॥

ಎಲೆಹಾಕದೆ ಮೇಲೆ ನೋಡು ಮುಂದೆ
ತವಕದಿಂದಲಿ ವಾಯುಬಂಧನ ಮಾಡು
ಸವಿದು ನಾದವ ಪಾನಮಾಡು ಅಲ್ಲಿ
ನವವಿಧ ಭಕ್ತಿಲಿ ನಲಿನಲಿದಾಡು
ಅದರೊಳಗೆ ಆಡುತಾನೆ ಭಾನು

ಮಂಡಲ ನಾರಾಯಣನೆಂಬುವನೆ
ಕುಂಡಲಿ ತುದಿಯೊಳಿದ್ದಾನೆ ನಮ್ಮ
ಪುರಂದರ ವಿಠಲನು ಪಾಲಿಸುತ್ತಾನೆ

ಸಾತ್ವಿಕ ಜೀವರ ಮುಕ್ತಿಯಲ್ಲಿ ಐದು ಬಗೆ ಅದರ ವಿವರಣೆ ಪುರಂದರರಲ್ಲಿ ಹೀಗೆ ಬರುತ್ತದೆ

ಸಾಲೋಕ್ಯ ಸ ಮೀಪ್ಯ ಸಾರೂಪ್ಯ ಸಾಯುಜ್ಯ ಸಾರ್ಷ್ಟಿಯೆಂಗಳು
ಯೋಗ್ಯ ಜೀವರಿಗೆ ಆ ಲೋಕದಲ್ಲಿಪ್ಪುದು ಸಾಲೋಕ್ಯವೆಂಬ ದ ।
ಆ ಪಟ್ಟಣ ಸಮೀಪದಲ್ಲಿಪ್ಪುದು ಸಾಮೀಪ್ಯವೆಂಬುದು
ಶಂಖ ಚಕ್ರಗದ ಪದುಮಧರರಾಗಿ ಸರ್ವರು ಸಾರೂಪ್ಯವೆಂಬ ಮುಕುತಿಯೆನಿಪವು ।
ಹರಿಪಾದಯುಗಳಲ್ಲಿ ತತ್ವಾಭಿಮಾನಿ ದೇವತೆಗಳಿಗೆ ಸಾಯುಜ್ಯವೆಂಬ ಮುಕುತಿ ನೋಡಯ್ಯ ।
ಎಂಬ ಐದು ಪಂಚವಿಧ ಮುಕುತಿಯೆಂಬುವರು ॥

ಹರಿಸ್ಮರಣೆಯೊಂದೆ ಮೋಕ್ಷದಾಯಕವೆನುತ್ತಾರೆ ಪುರಂದರರು

ಸ್ಮರಣೆಯೊಂದೇ ಸಾಲದೆ ಗೋವಿಂದನ
ಸ್ಮರಣೆಯೊಂದೆ ಸಾಲದೆ
ಪರಿಪರಿವಿಧವೆಲ್ಲ ಭ್ರಾಂತಿಯೆಂದು ತಿಳಿದು
ಪರಮ ಪುರುಷ ಹರಿಯ ನೆರೆ ನಂಬಿದವರಿಗೆ

ದೇಹದ ಅನಿತ್ಯತೆಯನ್ನು ಪುರಂದರದಾಸರು ಸಾರುವುದು ಹೀಗೆ

ನಂಬದಿರು ಈ ದೇಹ ನಿತ್ಯವಲ್ಲ ।
ಅಂಬುಜಾಕ್ಷನ ಭಜಿಸಿ ಸುಖಿಯಾಗೊ ಮನವೆ
ಎಲುಬು ರಕ್ತಮಾಂಸಗಳ ಮೇಲೆ ಚರ್ಮದ ಹೊದಿಕೆ
ಒಳಗೆ ಮಲಮೂತ್ರ ಕ್ರಿಮಿರಾಶಿ ಇಹವು
ಹಲವು ವ್ಯಾಧಿಯ ಬೀಡು ಪಂಚಭೂತದ ನಾಡು
ಬಲುಹು ದೇಹದ ನೆಚ್ಚಿ ಕೆಡಬೇಡ ಮನವೆ

ವೈರಾಗ್ಯಬೋಧಕವಾದ ಪುರಂದರದಾಸರ ಹಾಡುಗಳಲ್ಲಿ ಇದು ಪ್ರಸಿದ್ಧವಾದುದು

ಆರು ಹಿತವರು ನಿನಗೆ ಈ ಮೂವರೊಳಗೆ
ನಾರಿಯೋ ಧಾರಿಣಿಯೋ ಬಲ ಧನದ ಸಿರಿಯೋ
ಅನ್ಯರಲ್ಲಿ ಜನಿಸಿದ್ದ ಅಂಗನೆಯ ಕರೆತಂದು
ತನ್ನ ಮನೆಗವಳ ಯಜಮಾನಿ ಎನಿಸಿ

ಭಿನ್ನವಿಲ್ಲದೆಯರ್ಧ ದೇಹವೆನಿಸ ವ ಸತಿಯು
ಕಣ್ಣನಲಿ ನೋಡಲಮ್ಮಳು ಕಾಲವಶದಿ

ಈ ಸಂಸಾರ ಹೆ ಯವೆಂದೇನೂ ಹೇಳುವುದಿಲ್ಲ ದಾಸರು ಬದುಕಬೇಕು ಆದರೆ ಭಗವಂತನನ್ನು ಮರೆಯದೆ ಅಹಂಕಾರ ಮಮಕಾರಗಳನು ಬಿಟ್ಟು ಅನಾಸಕ್ತಿಯಿಂದ ಬದ ಕಬೇಕು ಎಂಬುದು ಅವರ ಹಿತವಚನ ಇದು ಪುರಂದರವಾಣಿ

ಈಸಬೇಕು ಇದ್ದು ಜೈಸಬೇಕು
ಹೇಸಿಕೆ ಸಂಸಾರದಲ್ಲಿ ಆಶಾ ಲೇಶ ಮಾಡದ್ಹಾಂಗೆ
ತಾಮರಸ ಜಲದಂತೆ ಪ್ರೇಮವಿಟ್ಟು ಭವದೊಳು[1]

ಷಟ್ಕರ್ಮ ಮಾಡಬೇಕು ಎಂದು ಹೇಳುತ್ತಾರೆ ಪುರಂದರದಾಸರು ಒಟ್ಟಿನಲ್ಲಿ ಅವರ ಕೀರ್ತನೆಗಳ ವಿಷಯಗಳು ಇವು ಸಂಸಾರಕ್ಕೆ ಬೇಕಾಗುವ ನೀತಿಯ ಉಪದೇಶ ಲೋಕದ ಜನರ ಸ್ವರೂಪ ಸಾಧನ ಯೋಗ್ಯತೆಗನುಸರಿಸಿ ಉಪಯುಕ್ತವಾದ ಉಪಾಸನೆಯ ಕ್ರಮ ವಿಷ್ಣುಭಕ್ತಿಯನು ಉದ್ರೇಕಿಸುವ ತಾರತಮ್ಯ ಪಂಚಭೇದ ಜ್ಞಾನ ಶ್ರೀ ಹರಿಯ ಕಾರುಣ್ಯ ಜೀವನ ಪರಾಧೀನತೆ ಶ್ರೀಹರಿಯ ಸ್ವಾತಂತ್ರ್ಯ ಸಚ್ಚಿದಾನಂದಾತ್ಮನಾದ ನಾರಾಯಣನ ಅಚಿ ತ್ಯಾದ್ಭುತ ಶಕ್ತಿಯನ್ನು ಪ್ರಕಟಿಸುವ ಅವತಾರಲೀಲೆಗಳು ಹರಿ ಸಂಕಲ್ಪದ ಅಪ್ರತಿಹತಿ ಕರ್ಮತ್ರಯ ದಿಂದ— ಸಂಚಿತ ಪ್ರಾರಬ್ಧ ಆಗಾಮಿಗಳಿಂದ-ಸಂಸಾರದ ಸಂಕೋಲೆಯ ಲ್ಲಿ ಸಿಕ್ಕಿ ಗತಿಗಾಣದ ಜೀವನು ಈ ಸಂಸಾರದಲ್ಲಿಯೇ ಇದ್ದು ಅವುಗಳ ಬಾಧೆಯ ನು ತಪ್ಪಿಸಿಕೊಳ್ಳುವ ಉಪಾಯವಾದ ಶ್ರೀಹರಿಯೇ ಶರಣು ಎಂಬ ಭಾವನೆ ಅವನ ಕಾರುಣ್ಯದಿಂದ ಯಥಾ ಯೋಗ್ಯವಾಗಿ ಅಪರೋಕ್ಷ ಜ್ಞಾನವನು ಹೊಂದಿ ಜ್ಞಾನಾನಲದಿಂದ ಸಂಚಿತಾಗಾಮಿಗಳನು ಸುಟ್ಟು ಪ್ರಾರಬ್ಧವನು ತಗ್ಗಿಸುವುದು –ಇತ್ಯಾದಿ

ಮುಕ್ತಿಯ ಸಾಧನವನ್ನು ಕುರಿತು ಶ್ರೀ ಪಾದರಾಜರು ಹೀಗೆ ಹೇಳುತ್ತಾರೆ

ಭಕ್ತಿಬೇಕು ವಿರಕ್ತಿಬೇಕು
ಶಕ್ತಿಬೇಕು ಮುಂದೆ
ಮುಕ್ತಿಯ ಬಯಸುವಗೆ

ಶ್ರೀಹರಿಯ ಸ್ವರೂಪವನು ವ್ಯಾಸತೀರ್ಥರು ಹೀಗೆ ಸಂಗ್ರಹಿಸುತ್ತಾರೆ

ಜಿಜ್ಞಾಸುವಿಗೆ ಜ್ಞಾನಕಾರಣ
ಜ್ಞಾನಿಗೆ ಅಪರೋಕ್ಷಕಾರಣ
ಅಪರೋಕ್ಷಿಗೆ ಅಧಿಕಾನಂದಕಾರಣ
ಮುಕ್ತಿಗೆ ತಾನೆ ಫಲರೂಪ

---

1 ಪದ್ಮಪತ್ರಮಿವಾಂಭಸಾ ಎಂಬ ಭಗವದ್ಗೀತೆಯ ಹೋಲಿಕೆಯಿದು

ವಾದಿರಾಜತೀರ್ಥರು ಅಷ್ಟಾದಶಪುರಾಣಗಳ ಸಾರಾಂಶವನ್ನು ತಿಳಿಯಪಡಿಸುವ ಹಲವಾರು ಪದ್ಯಗಳನ್ನು ಗದ್ಯ ಪದ್ಯ ಗ್ರಂಥಗಳನ್ನೂ ರಚಿಸಿದ್ದಾರೆ ಅಷ್ಟೇ ಅಲ್ಲ ಉಪನಿಷತ್ತು ಮಂತ್ರ ಬ್ರಾಹ್ಮಣಗಳು ಬ್ರಹ್ಮಸೂತ್ರಗಳು ಪಾಂಚರಾತ್ರಾಗಮ ಮೊದಲಾದ ಮೂಲಭೂತ ಪ್ರಮಾಣಗಳನ್ನು ತಮ್ಮ ಕೃತಿಗಳಲ್ಲಿ ಸಮಾವೇಶಗೊಳಿಸಿದ್ದಾರೆ ಶಾಸ್ತ್ರಜ್ಞಾನವಿಲ್ಲದವರಿಗೆ ಇವು ತುಂಬ ಉಪಾದೇಯವಾಗಿವೆ ವಿಜಯದಾಸರ ಹಾಡುಗಳಲ್ಲಿ ಪರ ಪರತತ್ತ್ವ ಹರಿವಾಯುಗಳು, ತೀರ್ಥಕ್ಷೇತ್ರಗಳು ಮುಂತಾದುವನ್ನು ಕುರಿತ ವಿಚಾರಗಳು ಅಭಿಮಾನಿ ದೇವತೆಗಳ ಸ್ತೋತ್ರಗಳೂ ಕಂಡುಬರುತ್ತವೆ ಗೋಪಾಲದಾಸರು ಭಾರತ ಭಾಗವತ ರಾಮಾಯಣಗಳ ಕಥೆಗಳನ್ನು ತಮ್ಮ ಕೃತಿಗಳಲ್ಲಿ ನಿರೂಪಿಸಿ ಶ್ರೀಹರಿಯ ಮಹಾತ್ಮ್ಯ ಮತ್ತು ಸ್ವಾತಂತ್ರ್ಯಾದಿ ಗುಣಗಳನ್ನು ಸ್ತುತಿಸಿದ್ದಾರೆ ಉಪನಿಷತ್ತತ್ತ್ವಗಳೂ ಅದರಲ್ಲಿ ಉಕ್ತವಾಗಿದೆ ಜಗನ್ನಾಥದಾಸರ ರಚನೆಗಳಲ್ಲಿ ಶ್ರುತಿ ಪುರಾಣ ಇತಿಹಾಸ ಶ್ರೀಮದಾಚಾರ್ಯರ ಟೀಕಾ ಗ್ರಂಥಗಳು ಮೊದಲಾದುವುಗಳ ಸಾರವು ಕ್ರೋಡೀಕೃತವಾಗಿದೆ

ಒಟ್ಟಿನಮೇಲೆ ೧೫ ೧೬ನೆಯ ಶತಮಾನದಲ್ಲಿ ಶ್ರೀ ವ್ಯಾಸತೀರ್ಥ ಪುರಂದರದಾಸ ವಾದಿರಾಜತೀರ್ಥ ಕನಕದಾಸ ಮುಂತಾದ ತತ್ತ್ವಜ್ಞಾನಿಗಳು ಜನತೆಯ ಎಲ್ಲ ವರ್ಗದ ಜನರಿಗೆ ಬ್ರಾಹ್ಮಣರೂ ಶಾಸ್ತ್ರಾಭಿಜ್ಞರೂ ಇವರಿಂದ ಆರಂಭವಾಗಿ ಶೂದ್ರರೂ ಶಾಸ್ತ್ರಜ್ಞಾನವಿಲ್ಲದವರ ಪರ್ಯಂತ ತತ್ತ್ವಜ್ಞಾನದ ಸವಿಯೂಟವನ್ನು ಭಕ್ತಿಯ ದ್ರಾಕ್ಷಾಪಾಕದಿಂದ ಕೂಡಿಸಿ ಒದಗಿಸಿಕೊಟ್ಟರು [1] ಜಟಿಲ ಆಧ್ಯಾತ್ಮಿಕ ತಾತ್ತ್ವಿಕ ವಿಚಾರಗಳನ್ನು ವೇದಾಂತ ಪ್ರಮೇಯಗಳನ್ನು ಅವರು ಜನಭಾಷೆಯಲ್ಲಿ ಅಂಗೈನಲ್ಲಿ ಮಾಡಿಕೊಟ್ಟರು [2]

ಹರಿದಾಸರ ಉಪದೇಶ ಸಾಮಾನ್ಯರ ವೇದ ಮಾತ್ರವಲ್ಲ ಅಸಾಮಾನ್ಯರಿಗೂ ಅದರಿಂದ ಪ್ರಯೋಜನವುಂಟು ವಚನಸಾಹಿತ್ಯ ಮತ್ತು ದಾಸಸಾಹಿತ್ಯ ಕಲಿಯದವರ ಕಾಮಧೇನು ಮಾತ್ರವಲ್ಲ ಕಲಿತವರ ಕಲ್ಪವೃಕ್ಷವೂ ಹೌದು ಅದರ ಗುರಿ ಎಲ್ಲರ ಏಳ್ಗೆ ಕಲ್ಯಾಣ ಅದಕ್ಕಾಗಿ ಶರಣರು ಮತ್ತು ದಾಸರು ಸಂಸ್ಕೃತದಲ್ಲಿದ್ದ ದೇವಗಂಗೆಯನ್ನು ಕನ್ನಡದ ನೆಲಕ್ಕೆ ಕರೆತಂದರು ಭಗೀರಥರಾದರು ಅವರಿಗೆ ನಾಡು ಋಣಿ

---

1 ಡಾ ಸ್ವಾ ಪ ಪವ ಖಿ ಪೂರ್ವೋಕ್ತ ಪುಟ ೭

2 ಅವರು ಬಳಸುವ ದೇಸಿಯ ಉಪನ್ಯಾಸ ಗ್ರಾಮ್ಯ ಪ್ರಯೋಗಗಳು ಹಾಗೂ ಜನಜೀವನದಿಂದೆತ್ತಿಕೊಂಡ ಉಪಮೆ ರೂಪಕ ದೃಷ್ಟಾಂತಗಳು ಕೂಡ ಈ ದಿಶೆಯಲ್ಲಿ ಗಮನಿಸಬೇಕಾದವು

# ದಾಸಸಾಹಿತ್ಯದಲ್ಲಿ ಜನಪ್ರಿಯ ಮೌಲ್ಯಗಳು

ಬಿ ಎಸ್ ಸಣ್ಣಯ್ಯ

ಕನ ಡ ಸಾಹಿತ್ಯದಲ್ಲಿರುವ ವಿವಿಧ ಪ್ರಕಾರಗಳಲ್ಲಿ ದಾಸಸಾಹಿತ್ಯ ಒಂದು ವಿಶಿಷ್ಟ ಸ್ಥಾನವನು ಗಳಿಸಿಕೊಂಡಿದೆ ವಚನಸಾಹಿತ್ಯದ ಅನಂತರ ಜನಸಾಮಾನ್ಯರ ಸ್ವತ್ತಾಗಿ ಪರಿಣಮಿಸಿದ ಸಾಹಿತ್ಯವೆಂದರೆ ದಾಸರ ಹಾಡುಗಳು ದಾಸರ ತಾವು ಬದುಕಿನಲ್ಲಿ ಕಂಡ ಅಂಕ ಡೊಂಕುಗಳನ್ನು ಖಂಡಿಸಿ ತಿದ್ದಬಯಸಿದ್ದಾರೆ ಎಲ್ಲರನ್ನೂ ಸರಿಯಾದ ಮಾರ್ಗದಲ್ಲಿ ನಡೆಯ ಹೇಳಿದ್ದಾರೆ ಸಾಮಾನ್ಯವಾಗಿ ಜನತೆ ಭಾವಿಸಿರುವ ಬಳಿತು ಕೆಡಂಕ ಗಳ ಬಗೆಗೆ ಉತ್ತಮ ರೀತಿಯಲ್ಲಿ ತಿಳಿಯಹೇಳುವ ತತ್ತ್ವೋಪದೇಶ ಇವರ ಹಾಡುಗಳಲ್ಲಿ ಅಡಗಿದೆ ಹೀಗೆ ರಚಿತವಾದ ಭಕ್ತಿಪ್ರಧಾನವಾದ ಲೋಕ ವನು ತಿದ್ದಬಯಸುವ ಹಾಡುಗಳು ಸಂಗೀತಕ್ಕೆ ಅಳವಡುವುದರಿಂದ ಹಾಡಲು ಅನ ಕೂಲವಾಗಿ ಅದರಿಂದ ಜನ ಹೆಚ್ಚು ಪ್ರಭಾವಿತರಾಗಲು ಸಹಕಾರಿಯಾಗಿದೆ ಸಂಗೀತಮಯವಾಗಲ್ಲದೆ ಸಾಮಾನ್ಯ ಪದಪುಂಜಗಳಿಂದ ಆಡುಮಾತುಗಳಿಂದ ಕೂಡಿದ್ದು ಉಪಮ ದೃಷ್ಟಾಂತಗಳ ಮೂಲಕ ತಿಳಿಯಹೇಳುವುದರಿಂದ ಸಾಮಾನ್ಯ ಜನತೆಗೂ ವ ಗಮುಟ್ಟುವಂತಹುದಾಗಿದೆ ಈ ಹಾಡುಗಳಲ್ಲಿ ಮೋಕ್ಷಸಿದ್ಧಿಗೆ ಮಾರ್ಗ ಸೂಚಿ ಯನು ಕಾಣಬಹ ದು ದಾಸರ ಗುರಿ ಸಮಾಜಸುಧಾರಣೆಯಾಗಿದೆ ಅದು ಆರ್ಥಿಕ ಸುಧಾರಣೆಯಾಗದಿದ್ದರೂ ಆತ್ಮೋನ್ನತಿಗೆ ಸಹಕಾರಿಯಾದ ಕರ್ಮವಿಮುಕ್ತಿಗೆ ಕಾರಣವಾಗಿದೆ ಅವರು ಗಳಿಸಿದ ಲೋಕಾನುಭವ ಅಪಾರ ಆ ಅಪಾರ ಅನುಭವ ಗಳೇ ಅವರ ಹಾಡುಗಳಲ್ಲಿ ಮೈದಳೆದಿವೆ ಇವುಗಳಲ್ಲಡಗಿರುವ ಜನಪ್ರಿಯ ಮೌಲ್ಯ ಗಳೇ ಈ ಹಾಡುಗಳ ಶ್ರೇಷ್ಠತೆಯ ಸಂಕೇತವಾಗಿವೆ

ಕನ ಡದಲ್ಲಿ ನರಹರಿತೀರ್ಥರೇ ಕೀರ್ತನೆಯ ಪ್ರಥಮ ಕರ್ತೃವೆಂದು ಪರಿಗಣಿತ ರಾಗಿದ್ದಾರೆ ಅನಂತರ ಬಂದ ಪುರಂದರದಾಸ ಕನಕದಾಸರು ದಾಸಸಾಹಿತ್ಯದ ಅಶ್ವಿನೀದೇವತೆಗಳೆಂದು ಹೆಸರ ಪಡೆದರು ತರ ವಾಯ ಬಂದ ಪ್ರಸನ ವೆಂಕಟ ದಾಸ ವಿಜಯದಾಸ ಗೋಪಾಲದಾಸ ಮೊದಲಾದವರು ಎರಡನೆಯ ಘಟ್ಟದ ಹೆಸ ರಾಂತ ವ್ಯಕ್ತಿಗಳಾದರು ಒಬ್ಬೊಬ್ಬರೂ ತಮ್ಮದೆ ಆದ ರೀತಿಯಲ್ಲಿ ವಿಷಯನಿರೂ ಪಣೆ ಮಾಡಿದ್ದರೂ ಎಲ್ಲರ ಉದ್ದೇಶವೂ ಮೋಕ್ಷಮಾರ್ಗದ ಏಕೈಕ ಗುರಿಯಾಗಿದೆ

ಈ ಮೋಕ್ಷಸಾಧನೆಗೆ ಉತ್ತಮ ಮಾಧ್ಯಮವೆಂದರೆ ಮಾನವಜನ್ಮವೆಂಬುದು ದಾಸರ ಅಭಿಪ್ರಾಯವಾಗಿದೆ ಆದುದರಿಂದಲೇ ಪುರಂದರದಾಸರು

ಮಾನವಜನ್ಮ ದೊಡ್ಡದು ಇದ
ಹಾನಿಮಾಡಲು ಬೇಡಿ ಹುಚ್ಚಪ್ಪಗಳಿರಾ

ಎಂದು ಸಾರಿ ಹೇಳಿದರು ಈ ಜೀವವು ಕರ್ಮಪಾಶದಿಂದ ಕ್ರಿಮಿಕೀಟಾದಿ ಜೀವಿಗಳಾಗಿ ಅನೇಕ ಜನ್ಮಗಳಲ್ಲಿ ನಡೆದು ಯಾವುದೋ ಸುಕೃತದಿಂದ ಮಾನವಜನ್ಮ ಪಡೆಯುತ್ತದೆ ಕ್ರಿಮಿ ಕೀಟವಾಗಿ ಹಕ್ಕಿಹರಿಣಿಯಾಗಿ ಮಾಡಲಾಗದ ಕಾರ್ಯವನ್ನು ಮಾನವನು ಬುದ್ಧಿಶಕ್ತಿಯ ಬಲದಿಂದ ಕೈಗೊಳ್ಳಬಹುದು ಇಲ್ಲಿ ದೈವವನು ಒಲಿಸಿಕೊಳ್ಳುವುದು ಸಾಧ್ಯವೆಂಬುದು ಅವರ ತೀರ್ಮಾನವಾಗಿದೆ ಮಾನವನಾಗಿದ್ದಾಗ ವಿವಿಧ ಆಸೆ ಆಮಿಷಗಳಿಗೆ ಒಳಗಾಗುವುದು ಸಹಜವಾದುದು ಈತನಲ್ಲಿ ಪಶುತ್ವ ಮಾನವತ್ವವೆರಡೂ ಅಡಗಿರುತ್ತವೆ ಆದರೆ ಪಶುತ್ವವನು ಮೆಟ್ಟನಿಂತು ಮಾನವತ್ವ ಮುಂದುವರಿದಾಗ ಭಕ್ತಿಯೆಂಬ ಹರಿಗೋಲನೇರಿ ದೈವಸಾಕ್ಷಾತ್ಕಾರ ಮಾಡಿಕೊಳ್ಳುವುದು ಸುಲಭ ಜೀವನದಲ್ಲೊದಗುವ ನಶ್ವರ ಸುಖಗಳನ್ನು ಕಡೆಗಣಿಸಿ ಶಾಶ್ವತ ಸುಖಪ್ರದಾಯಕವಾದ ಮೋಕ್ಷಸಿದ್ಧಿಯನ್ನು ಪಡೆಯಬೇಕಾದರೆ ಮಾನವನು ಈ ದೇಹದ ನಶ್ವರತೆಯನ್ನು ಅರಿತಿರಬೇಕು ಆದುದರಿಂದಲೆ ದಾಸರು ನಿತ್ಯವಲ್ಲ ನಿತ್ಯವಲ್ಲ ಅನಿತ್ಯ ದೇಹವಿದಣ್ಣ ನಂಬದಿರು ಈ ದೇಹ ನಿತ್ಯವಲ್ಲ ಎಂದು ಮೊದಲಾಗಿ ಹೇಳಿ ಜೀವನದ ಅಲ್ಪತೆಯನು ಸಾರಿದರು ಮಾನವಜನ್ಮದಲ್ಲಿ ಗಳಿಸಿದ ಧನ ಧಾನ್ಯ ಕನಕಾದಿಗಳು ಶಾಶ್ವತವಲ್ಲ ಬಡನಿರ್ದ ಸತಿ ಮಕ್ಕಳು ಬಂಧುಬಳಗಗಳಾರೂ ಜೊತೆಯಲ್ಲಿ ಬರಲಾರರು ಶಾಶ್ವತವಾದುದು ಹಾಗೂ ತಮ್ಮೊಡನೆಯೇ ಇರುವಂತಹುದೂ ಆದ ಜೀವನ್ಮುಕ್ತಿಯೇ ಪ್ರಧಾನವಾದುದೆಂಬುದನ್ನು ಮನದಟ್ಟು ಮಾಡಿಕೊಟ್ಟರು ಅವರು

> ನೆಚ್ಚದಿರು ಈ ಭಾಗ್ಯ ಆರಿಗೂ ಸ್ಥಿರವಲ್ಲ ನಿಶ್ಚಯವೆಚ್ಚರಿಕೆ
> ಹೆಚ್ಚದೆ ಹಿಗದೆ ಇದ್ದರೆ ಲೋಕಕ್ಕೆ
> ಮೆಚ್ಚು ಕೇಳೆಚ್ಚರಿಕೆ

ಎಂದರು ಜೀವನದಲ್ಲಿ ಹೆಣ್ಣು ಹೊನ್ನು ಮಣ್ಣು ಈ ಮೂರರ ಬಂಧನದಿಂದ ಮುಕ್ತನಾಗುವುದು ದುಸ್ತರವೇನೊ ಹೌದು ಇದನ್ನು ಪೂರ್ಣವಾಗಿ ತ್ಯಜಿಸಬೇಕೆಂದೇನೂ ದಾಸರು ಹೇಳಲಿಲ್ಲ ಇದರಲ್ಲಿದ್ದೂ ಇಲ್ಲದಂತೆ ಭಾಗ್ಯವನ್ನೂ ಹೊಂದಿಯೂ ಹೊಂದದವನಂತೆ ನಿರ್ಲಿಪ್ತನಾಗಿ ದೈವದತ್ತ ಮನಸ್ಸನ್ನು ನೆಲೆಗೊಳಿಸುವುದು ಅತಿ ಮುಖ್ಯವೆಂದರು ಆದುದರಿಂದಲೇ ಅವರು

> ಈಸಬೇಕು ಇದ್ದು ಜೈಸಬೇಕು ಈ
> ಹೇಸಿಕೆ ಸಂಸಾರದಲ್ಲಿ

ಎಂದರು ಭಕ್ತನ ಬಯಕೆಲ್ಲ ಭಗವಂತನಿಗೆ ಮೀಸಲು ಎಂದರು ಜೀವನದಲ್ಲಿ ಉತ್ತಮ ಮಾರ್ಗವಾವುದೆಂಬುದನು ತಿಳಿಸಿರುವ ಅವರು ಯಾವುದೇ ವ್ಯಕ್ತಿ ತನ್ನ ಬದುಕನು ಭಗವಂತನಿಗರ್ಪಿಸಿ ಸಾತ್ವಿಕತೆಯಿಂದ ಮುಂದುವರಿದರೆ ದೈವಸಾನ್ನಿಧ್ಯ ಪಡೆಯುವುದು ಸುಲಭವೆಂದರು ವಿಜಯದಾಸರು

ಬಡತನ ಬಂದರೆ ಹಿಗ್ಗುತಲಿರಬೇಕು
ಹೊನ್ನು ಹಣವ ಕೊಡಲಿಬೇಡ

x x x

ಏನ ದೆಂಬೊ ಮಾತು ಎಂದೆಂದಿಗೂ ಬೇಡ
ನಿನ್ನವನು ನಿನ ವನು ನಿನ ವನೆಂದೆನಿಸಿ
ಮನಿ ಸಿ ಪಾಲಿಸೈ ವಿಜಯವಿರಲಾ

ಎಂದು ದೈವವನು ಬೇಡಿದರು ಪುರಂದರರು ರೌದ್ರದಾರಿದ್ರ್ಯವು ರಾಘವ ನಡಿಗೆನಿ ಎಂದು ಹೇಳಿದರು ಎಂದರೆ ಜೀವನದಲ್ಲಿ ಒದಗಿಬರ ವ ಆಗುಹೋಗು ಗಳಾವುದಕ್ಕೂ ಗಮನವೀಯದೆ ಎಲ್ಲಾ ದೈವೇಚ್ಛೆಯೆಂದು ತಿಳಿದು ಉತ್ತಮ ನಡವಳಿ ಕೆಯನ್ನು ಹೊಂದಿರಬೇಕೆಂಬುದೇ ಅವರ ಇಚ್ಛೆಯಾಗಿದೆ ಆದುದರಿಂದಲೇ ಪುರಂದರ ದಾಸರು

ಅಪರಾಧಿ ನಾನಲ್ಲ ಅಪರ ಧವೆನಗಿಲ್ಲ
ಕಪಟನಾಟಕ ಸೂತ್ರಧಾರಿ ನೀನೆ
ನೀನು ಆಡಸಲು ಜಡವೊನಕೆ ಅಭಿನಯಗೊಂಬೆ
ಏನ ಬಲ್ಲುದು ಬೇರೆ ಕೃತಿಯನೊಂದ ?

ಎಂಬಿವೇ ಮಾತ ಗಳಿಂದ ಪುರಂದರ ವಿಠಲನ ಪ್ರಸನ್ನತೆಯಿಂದ ಯಾವುದು ಒದಗಿಬಂದರೆ ಅದನು ಸಾತ್ವಿಕವಾಗಿ ಸ್ವೀಕರಿಸಬೇಕು ಆದರೆ ದ ರ್ನಡತೆ ದುರಾಚಾರಗಳಿಂದ ವಿವ ಕ್ತನಾಗಿರುವುದನು ಮಾತ್ರ ಎಂದೆಂದಿಗೂ ವ ರೆಯಬ ರದು ದೈವೆ ಚ್ಛೆಯೆಂದು ಸ್ವಾರ್ಥಬುದ್ಧಿಯಿಂದ ಇಹಲೋಕದ ಭೋಗಭಾ ಗ್ಯಗಳಿಗೆ ವ ರು ಳಾಗಿ ಕೂರುವುದು ಮರುಳ್ತನದ ಪರಮಾವಧಿಯಾಗುತ್ತದೆ ಅಲ್ಲದೆ ಎಲ್ಲ ಕಾರ್ಯ ಗಳು ದೆ ವೇಚ್ಛೆಯಂತೆ ನಡೆಯುತ್ತದೆಂದು ನಂಬಿ ಕೈಕಟ್ಟಿ ಕೂಡಬಾರದು ಆತನ ಸ್ಮರಣೆಯಿಂದ ಉತ್ತಮ ಕಾಯ ್ಯಗಳನು ಮಾಡಬೇಕೆಂಬುದೇ ಅವರ ಬಯ ಕೆ ಕನಕದಾಸರು

ಗಳಿಸದಿರು ಸೀವೆ ಯನು ಗಳಿಸದಿರು ದ್ರವ್ಯವನು
ಗಳಿಸದಿರು ನೀ ದುರಿತರಾಶಿಗಳನು

x x x

ನಳಿನನಾಭನ ದಿವ್ಯನಾಮವನು ನೆನೆದು
ನೆಲೆಯಾದ ಪರವ ಪದವಿಯ ಪಡೆಯೊ ಮನುಜ

ಎಂದು ಸಾರಿದರು ಬದುಕಿನಲ್ಲಿ ಬಡತನ ಸಿರಿತನಗಳು ಮುಖ್ಯವಲ್ಲ ಇವು ಯಾವುವೂ ಶಾಶ್ವತವಲ್ಲ ಶಾಶ್ವತ ಸುಖವನ್ನು ಪಡೆಯಲು ಇವಾವುವೂ ನೆರವಾಗ ಲ ರವು ಎಂತಹ ಐಶ್ವರ್ಯದಿಂದ ಕೂಡಿದವನಾದರೂ ದೈವಶಕ್ತಿಯಿಂದ ವಿಮುಖ ನಾಗಿದ್ದರೆ ಅವನು ದರಿದ್ರನೆಂದೇ ಪರಿಗಣಿತನಾಗುತ್ತಾನೆ ದೈವಭಕ್ತನಾದವನು ಎಂತಹ ಕಠಿಣ ಪರಿಸ್ಥಿತಿಯಲ್ಲಿದ್ದರೂ ಎಲ್ಲ ಸುಖಸೌಭಾಗ್ಯಗಳನು ಹೊಂದಿದವ ನಾಗುತ್ತಾನೆ ಎಂದು ಪ್ರತಿಪಾದಿಸಿದರು ಇದಕ್ಕೆ ನೈತಿಕ ಸಿದ್ಧತೆ ಡಂಭ ಚಾರವನು ತ್ಯಜಿಸುವಿಕೆ ಅವಶ್ಯವೆಂಬುದನು ಒತ್ತಾಯಪೂರ್ವಕವಾಗಿ ಹೇಳಿದರು ಆದುದರಿಂದಲೆ ಅವರು

> ಕ ಟಿಲವ ಬಿಡದಿಹ ಕುಜನರು ಮಂತ್ರದ
> ಪಠಣೆಯ ಮಾಡಿದರೇನು ಫಲ ?

ಎಂದೆಲ್ಲಾ ವಿವರಿಸಿದರು

ನೈತಿಕ ಜೀವನ ಸಮಾಜದಿಂದ ಬಳುವಳಿಯಾಗಿ ಬರ ವುದಿಲ್ಲ ಪಹಾನವನು ತಾನು ಪ್ರಯತ್ನಪಟ್ಟು ನಡೆಯ ಏವ ರಿ ತಿ ನೀತಿಗಳಿಂದ ಆದು ದೊರೆಕೊಳ್ಳುತ್ತದೆ ಅದಕ್ಕಾಗಿ ಸಂಸಾರತ್ಯಾಜ್ಯವಾಗಲಿ ದೇಹದಂಡನೆಯಾಗಲಿ ಬೆ ಕಾಗುವುದಿಲ್ಲ ಬೇಕಾ ದದ್ದು ಉತ್ತಮ ನಡವಳಿಕೆ ಪರಿಶ ದ್ಧ ಮನಸ್ಸು

ಸಂಸಾರದಲ್ಲಿ ಗಳಿಸಿದ ಯಾವ ಆಸ್ತಿಯೇ ಆಗಲಿ ಜೊತೆಯಲ್ಲಿ ಒರುವುದಿಲ್ಲ ಮಂಚ ಬಾರದು ಮಡದಿ ಬಾರಳು ಕಂಚು ಕನ ಡಿಬಾರದು ಸಂಚಿತಾರ್ಥದ ದ್ರವ್ಯ ಒಡವೆಯಾಸೆಗೆ ಒಡಲ ಕಟ್ಟಿಗೆ ವ ಡದಿ ಬೆನ ಲಿ ಬಾಹಳು ಬಾರದು ಎಂದು ಹೇಳಿ ಅರ್ಥ ಪುತ್ರ ಮಿತ್ರ ಬಾಂಧವರಾರೂ ಜೊತೆಯಲ್ಲಿ ಬರುವುದಿಲ್ಲವೆಂಬುದನು ವಿವರಿಸಿ ದ್ದಾರೆ ಪುರಂದರದಾಸರು

> ಎಚ್ಚರಿಕೆ ಭಾಗ್ಯ ಯಾರಿಗೂ ಸ್ಥಿರವಲ್ಲ
> ನಿಶ್ಚಯವೆಚ್ಚರಿಕೆ
> ಹೆಚ್ಚದೆ ಹಿಗ್ಗದೆ ಇದ್ದರೆ ಲೋಕಕ್ಕೆ
> ಮೆಚ್ಚು ಕೇಳೆಚ್ಚರಿಕೆ

ಎಂದೂ ಎಚ್ಚರಿಕೆಯಿತ್ತಿದ್ದಾರೆ

ಮುಕ್ತಿಸಾಧನೆಗೆ ಯಾವ ಜಾತಿ ಮತ ಭೇದವಿಲ್ಲ ಸ್ತ್ರೀ ಪುರುಷ ಎಂಬ ವಾದ ವಿಲ್ಲ ಉತ್ತಮ ನಡವಳಿಕೆಯುಳ್ಳವರೆಲ್ಲರೂ ಇದಕ್ಕೆ ಅರ್ಹರು ಆದುದರಿಂದಲೇ ಪುರಂದರದಾಸರು ಹೊಲೆಯನಾರು ಊರ ಹೊರಗಿರುವವನೆ ಹೊಲೆಯ? ಅಲ್ಲ ಅಲ್ಲ ಎಂದು ಸಾರಿದರು ಹೊಲೆಯನಾರೆಂಬುದನ್ನು ಆತನ ನಡತೆಯವೇ ಲೆ ನಿಷ ರ್ಕಿ ಸಿದರು ಸಮಾಜದಲ್ಲಿನ ಸಾಮಾನ್ಯ ಜನ ಹುಟ್ಟಿನಿಂದ ಹೊಲೆಯನೆಂಬ ಹಣೆಪಟ್ಟಿ ಕಟ್ಟಿ

ಊರ ಹೊರಗಿರಿಸಿದ ಮಾತ್ರ ಆತ ಖಂಡಿತ ಹೊಲೆಯನಾಗಲಾರ ಎಂಬುದಾಗಿ ಸಮಾಜವನ್ನು ಎಚ್ಚರಿಸಿದರು. ಊರ ಹೊರಗಿರುವವ ಉತ್ತಮ ನಡವಳಿಕೆಯುಳ್ಳವನಾಗಿದಲ್ಲಿ ಆತನೇ ಯೋಗ್ಯ. ಊರೊಳಗಿದ್ದವನು ಹುಟ್ಟಿನಿಂದ ಉತ್ತಮನೆಂದು ಪರಿಗಣಿತನಾಗಿದ್ದರೂ ಕೀಳು ನಡತೆಯಿಂದ ಕೂಡಿದ್ದರೆ ಆತನೇ ಅಧಮ ಎಂದರೆ ಇದು ಬಹು ಜನಪ್ರಿಯ ಲೌಕಿಕ ಸತ್ಯವೆಂದು ಯಾರಾದರೂ ಒಪ್ಪಬೇಕಾಗುತ್ತದೆ ಕುದೃಷ್ಟಿಯ ಅಂಧಾನುಕರಣೆಯ ಮೂಢಜನ ಮಾತ್ರ ತಿರಸ್ಕರಿಸಬಹುದು. ವಿಷಯಾಸಕ್ತಿಯಿಂದ ತುಂಬಿದವನೂ ಅರ್ಥಹೀನ ಸಂಪ್ರದಾಯದಿಂದ ಕೂಡಿದವನೂ ಅರ್ಥವಿಲ್ಲದ ಮೂಢ ನಂಬಿಕೆಗಳಲ್ಲಿ ಆಸಕ್ತನಾದವನೂ ಅನೈತಿಕತೆಗೆ ಆಗರವಾದವನೂ ಕೀಳು ಮಾನವನಾಗುತ್ತಾನೆಯೇ ಹೊರತು ಹುಟ್ಟಿನಿಂದ ಅಲ್ಲ ಎಂಬುದನು ದಾಸರು ಮನಗಾಣಿಸಿದ್ದಾರೆ

ಪುರಂದರದಾಸರು ಶೀಲವಂತನಾಗದವನು ಹರಿಕಥೆಯನ್ನು ಕೇಳದವನು ಆಳಾಗಿ ಅರಸಂಗೆ ಕೇಡು ಬಗೆಯುವವನು ಸೂಳೆಯನು ಕಾಮಿಸುವವನು ಭಾಷೆ ತಪ್ಪುವವನು ಮೊದಲಾಗಿ ಹಲವರು ಕಾರಣಗಳಿಂದ ಹೊಲೆಯನಾರೆಂಬುದನ್ನು ಗುರುತಿಸಿದ್ದಾರೆ. ವಿಜಯ ದಾಸರು

> ನಿರ್ಮಲ ಕೋಪವಳಿಯಲರಿಯದವ ಹೊಲೆಯ
> ಬಳಗ ಬರಲು ಬಿಟ್ಟು ಒಳಗೆ ಉಂಬವ ಹೊಲೆಯ
> ಹೊನ್ನು ಹಣಗಳಿಸಿ ಕೂಡಿದವನೆ ಹೊಲೆಯ
> ಹೆಣ್ಣು ಬಣ್ಣಕ್ಕೆ ಸೊಲುವವನೆ ಹೊಲೆಯ
> ಉಣ್ಣಲಿಕ್ಕೆ ಹಿಂದೆ ಹಂಗಿಸುವವನೆ ಹೊಲೆಯ
> ಸವತಿಯ ಮೇಲೆ ಮಗಳ ಕೊಡುವವನೆ ಹೊಲೆಯ
> ಪಿತ ಮಾತಾ ಗುರುಗಳ ಬೈಯುವವನೆ ಹೊಲೆಯ

ಎಂದು ಘೋಷಿಸಿದರು

ದಾಸಸಾಹಿತ್ಯವು ಭಕ್ತಿಪ್ರಧಾನವಾದುದು. ಎಲ್ಲ ಕಷ್ಟಪರಂಪರೆಗಳ ನಿವಾರಣೆಗೆ ದೈವಭಕ್ತಿಯೊಂದೇ ಪರಿಹಾರಮಾರ್ಗವೆಂಬುದು ಅವರ ನಿರ್ಣಯ. ಜೀವನದ ಎಲ್ಲ ಆಗುಹೋಗುಗಳನ್ನೂ ಆತನಲ್ಲಿ ಅರ್ಪಿಸಬೇಕೆಂಬ ಅರ್ಪಣಾಭಾವ ಅವರ ಹಾಡುಗಳಲ್ಲಿ ತುಂಬಿದೆ. ಆದುದರಿಂದಲೇ ಅವರು

> ತಲ್ಲಣಿಸದಿರು ಕಂಡ್ಯ ತಾಳು ಮನವೇ
> ಎಲ್ಲರನು ಸಲಹುವನು ಶ್ರೀನಿವಾಸ

ಎಂದರು

> ನಿನ್ನಾಧೀನ ಎನ್ನ ತನುಮನ

> ನಿನಾ ಧಿ ನ ಎನ ಧನ ಧಾನ್ಯ
> ಎನ್ನ ವಸ್ತು ವಾಹನ ನಿನ್ನಾಧೀನ
> ಎನ ಪುತ್ರ ಮಿತ್ರ ಕಳತ್ರರು ನಿನ್ನಾಧೀನ
> ಎನ್ನ ಅಧೀನ ಆವುದುಂಟು ನಿ ನೆ ನೋಡಾ
> ಎನ್ನ ಇಚ್ಛೆಯ ಪುರಂದರ ವಿಠಲಾ

ಎಂದು ತನ ದೇಂದಿದ್ದ ಎಲ್ಲವಸ್ತುಗಳೂ ದೈವಾಧಿ ನವೆಂದರು

ದಾಸರು ವ ಡಿವ್ಯೆಲಿಗೆಗಳ ಬಗೆಗೆ ಸ್ಪಷ್ಟವಾದ ಅಭಿಪ್ರಾಯವನ್ನು ಹೊರಗೆಡ ಹಿದ್ದಾರೆ ಅವರು ಆತ್ಮಶುದ್ಧಿಗೆ ಮಹತ್ವವ್ಮಿತ್ತಿರುವರೇ ಹೊರತು ಬಾಹ್ಯ ಆಡಂಬರಕ್ಕಲ್ಲವೆಂಬುದನು ಇಲ್ಲಿ ಮನಗಾಣಬಹುದು ಪುರಂದರರು

> ಮಡಿ ಮಡಿಯೆಂದಡಿಗಡಿಗ್ಹಾರುತಿ
> ಮಡಿ ಮಾಡುವ ಬಗೆ ಬೆ ರುಂಟು
> ಪೊಡವಿ ಪಾಲಕನ ಪಾದಧ್ಯಾನವನು
> ಬಿಡದೆ ಮಾಡುವುದು ಅದು ಮಡಿಯು

ಎಂದು ಮೊದಲಾಗಿ ಹೇಳುವ ಹಾಡಿನಲ್ಲಿ ಮಡಿಯೆಂದರೇನೆಂಬುದನ್ನು ವಿವರಿಸಿ ದ್ದಾರೆ ಕಾಮ ಕ್ರೋಧಗಳನ್ನು ಒಳಗೆ ತುಂಬಿಟ್ಟುಕೊಂಡು ಹೊರಗಣ ತೋರಿಕೆಗೆ ಬಟ್ಟೆಗಳನ್ನು ಒಗೆದು ಒಣಗಿಸಿ ಉಟ್ಟುಕೊಂಡರೆ ಅದರಿಂದ ಯಾವ ಪ್ರಯೊ ಜನವೂ ಇಲ್ಲವೆಂದಿದ್ದಾರೆ ಅಷಾಢಭೂತಿಗಳೆನಿಸಿಕೊಂಡ ದೈವ ಭಕ್ತರಂತೆ ನಟಿಸುವ ವ್ಯಕ್ತಿ ಗಳಿಗೆ ದಾಸರ ಮಾತು ಮಾರ್ಮಿಕವಾಗಿದೆ ಇಂತಹುದರಿಂದಲೂ ಬದುಕನ್ನು ತಿದ್ದಿ ಕೊಳ್ಳಲಾಗದ ಮನುಜರು ಪೂರ್ವಾರ್ಜಿತಕರ್ಮದಿಂದ ನಡೆಯುತ್ತಿದ್ದಾರೆಂದು ಸಹಾ ನುಭೂತಿ ವ್ಯಕ್ತಪಡಿಸಬೇಕಾಗುತ್ತದೆ

ಹೀಗೆಯೇ ವ್ರತ ನಿಯಮಗಳ ಬಗೆಗೂ ದಾಸರು ಚರ್ಚಿಸಿದ್ದಾರೆ

> ಏನು ವ್ರತವೇನು ಸಾಧನಗಳೇನೊ
> ಸ್ವಾನುಭವದಜ್ಞಾನಿ ಹೀನ ಮಾನವನೇ
> ಶಾಕವ್ರತವೆನುತ ಫಲಶಾಕಗಳ ಬಿಡುವಂತೆ
> ಬೇಕಾದ ಆಕಾಂಕ್ಷೆ ಬಿಡಬಾರದೆ
> ಸಾಕೆನಿಸಿದ ರತಿಗೆ ಸತತ ಮನಕೊಡುವಂತೆ
> ಶ್ರೀಕಾಂತನೊಳು ಮನವನಿಡಬ ರದೆ

ಎಂದು ಹೇಳುವಲ್ಲಿ ವ್ರತವೆಂಬ ಬಾಹ್ಯಾಚರಣೆಯಿಂದ ಏನೂ ಪ್ರಯೋಜನ ವಿಲ್ಲವೆಂಬುದನ್ನು ಶ್ರುತಪಡಿಸಿದ್ದಾರೆ ಯಾವುದೇ ಆಚಾರಕ್ಕೆ ವ್ರತಕ್ಕೆ ಅಂತರಂಗ

ಶುದ್ಧಿಯಿಲ್ಲದ ಹೊರತು ಸಾರ್ಥಕವಿಲ್ಲ ಪರಸತಿ ಪರಧನ ಪರನಿಂದೆ ಪರಮ ಪಾತಕ ವೆಂದರಿತರೆ ಅದೇ ಉತ್ತಮ ವ್ರತ ದೈವಸಾನ್ನಿಧ್ಯನವನ್ನು ಸೇರುವ ಮಾರ್ಗ ಎಂದಿದ್ದಾರೆ

ತೀರ್ಥಯಾತ್ರೆಗಳ ಬಗೆಗೂ ದಾಸರು ವಿಡಂಬನೆ ಮಾಡಿದ್ದಾರೆ ದೇವರನ್ನು ಒಲಿಸಿಕೊಳ್ಳಲು ಕ್ಷೇತ್ರಗಳನ್ನು ಸುತ್ತಿಬರುವುದು ಹಾಸ್ಯಾಸ್ಪದವೆಂದು ಸಾರಿದ್ದಾರೆ ಪಾಪ ಮಾಡಿದವನು ಪುಣ್ಯಕ್ಷೇತ್ರಗಳ ಸಂದರ್ಶನದಿಂದ ತನ್ನ ಪಾಪವನ್ನು ಕಳೆದು ಕೊಳ್ಳುವನೆಂಬ ನಂಬಿಕೆ ಹಲವರಲ್ಲಿದೆ ತೀರ್ಥಕ್ಷೇತ್ರ ದರ್ಶನದಿಂದಲೆ ಪಾಪವಿಮುಕ್ತನಾಗುವುದಾದರೆ ಹಲವರು ಅಂತಹ ಕಾರ್ಯಕ್ಕೆ ಕೈಹಾಕಿಯಾರು ಉತ್ತಮ ನಡವಳಿಕೆಯನ್ನು ಹೊಂದಿದವನು ಪುಣ್ಯಕ್ಷೇತ್ರಗಳೆಂದು ಗಣಿಸಿರುವಲ್ಲಿಗೆ ಹೋಗಲಿಲ್ಲವೆಂದ ಮಾತ್ರಕ್ಕೆ ಆತನು ಪಾಪಪೂರಿತನಾಗುತ್ತಾನೆಯೆ? ಇದು ಖಂಡಿತಾ ಸಾಧ್ಯವಿಲ್ಲವೆಂಬುದನ್ನು ದಾಸರು ಹಲವಾರು ದೃಷ್ಟಾಂತಗಳ ಮೂಲಕ ವಿವರಿಸಿದ್ದಾರೆ ವಿವಿಧ ಕ್ಷೇತ್ರಗಳಿಗೆ ತೆರಳಿ ಅಲ್ಲಿನ ತೀರ್ಥದಲ್ಲಿ ಮಿಂದು ದೇವರ ದರ್ಶನಮಾಡಿ ಬರುವ ಬದಲು ಅಂತರಂಗದ ದೈವವನ್ನು ಕಾಣುವ ಹಂಬಲವನ್ನು ಹೊಂದಿದ್ದರೆ ಮಾತ್ರ ಸಿದ್ಧಿಸಾಧ್ಯ

ಎತ್ತ ಹೋದರೇನು ಎತ್ತ ನಿಂದರೇನು
ಚಿತ್ತ ಬಂದಂತೆ ಚಿಗಿದಾಡಿದರೇನು
ಚಿತ್ತದಲಿ ಹರಿಯ ಕಾಣುವ ಭಕ್ತರಿಗೆ
ಮತ್ತೆ ಇತರ ಜನರ ಪರಿವೆಯೇನೊ

ಎಂದು ಕ್ಷೇತ್ರಯಾತ್ರಾರ್ಥಿಗಳಿಗೆ ಹಿತವಚನ ವಿತ್ತರು ಗೋಪಾಲದಾಸರು ಚಿತ್ತದಲ್ಲಿ ಹರಿಯನ್ನು ಕಾಣುವ ಭಕ್ತನಾಗಿದ್ದಲ್ಲಿ ಮಾತ್ರ ಎತ್ತ ಹೋದರೂ ಬಂದರೂ ಒಂದೇ ಅದಿಲ್ಲದೆ ಬರಿಯ ತಿರುಗಾಟಕ್ಕೆ ಯಾವ ಪುರುಷಾರ್ಥವೂ ಇಲ್ಲ ಎಂದರು ಕನಕದಾಸರು ಮತ್ತೂ ಮುಂದುವರಿದು

ಕಾಶಿವಾರಣಾಸಿ ಕಂಚಿ ಕಾಳಹಸ್ತಿ ರಾಮೇಶ್ವರ
ಏಸು ದೇಶ ತಿರುಗಿದರೆ ಬಾಹುದೇನೊ ಅಲ್ಲಿ ಆಹುದೇನೊ

ಎಂದವರೆ

ವಾಸುದೇವನೆಂಬ ಒಳಗಿದ್ದ ಹಂಸನ ಸೇರಿ
ಲೇಸನುಂಡು ಮೋಸಗೊಳದೆ ಮುಕ್ತನಾಗೊ ನೀ ಶಕ್ತನಾಗೊ

ಎಂದು ಸಾರಿದರು ಪುರಂದರದಾಸರು ಹರಿಭಕುತಿ ಉಳ್ಳವರ ಶರೀರವೆ ಕರ್ಮ ಕ್ಷೇತ್ರ ಪದುಮನಾಭನ ಪಾದ್ಮ ವದನವೆ ವೈಕುಂಠ ಎಂದರು ಎಂದರೆ ವಿವಿಧ ಕ್ಷೇತ್ರಗಳನ್ನು ಸಂದರ್ಶಿಸುವುದೇ ತಪ್ಪೆಂದು ಯಾರೂ ಭಾವಿಸಬರದು ಪ್ರವಾಸಿಯಾಗಿ ವಿವಿಧ ಕ್ಷೇತ್ರಗಳನ್ನು ಸಂದರ್ಶಿಸುವುದಕ್ಕೂ ದೈವವನ್ನು ಒಲಿಸಿಕೊಳ್ಳುವೆ

ನೆಂಬ ಭ್ರಮೆಯಿಂದ ಹೊರಡುವುದಕ್ಕೂ ನಾವು ಅಂತರವನು ಗುರುತಿಸಿಕೊಳ್ಳುವುದು ಉತ್ತಮವೆಂಬ ದನು ಗವ ನದಲ್ಲಿಟ್ಟುಕೊಳ್ಳಬೇಕು

ಸಾಂಪ್ರದಾಯಿಕ ಜಪತಪಗಳಿಗೂ ಅವರ ವಿರೋಧವಿದೆ ಇಂತಹ ಜಪತಪ ಗಳಿಂ ದೈವವನ್ನು ಸಾಕ್ಷಾತ್ಕರಿಸಿಕೊಳ್ಳುವ ಪ್ರಯತ್ನದಲ್ಲಿದ್ದರೆ ಮಾನ್ಯ ಇಲ್ಲದೆ ಸಾಂಪ್ರ ದಾಯಿಕ ಯ ಕ್ರಿಗಳಿಂದ ಕೂಡಿದ್ದರೆ ಲೌಕಿಕ ಆಸೆ ಆಮಿಷಗಳಿಗಾಗಿ ಮಾಡುವಂತಹು ದಾದರೆ ಅದು ತ್ಯಾಜ್ಯವಾಗುತ್ತದೆ ಆದುದರಿಂದಲೇ ಕನಕದಾಸರು

ಜಪವ ಮಾಡಿದರೇನು ತಪವಮಾಡಿದರೇನು
ವಿಪರಿ ತ ಕಪಟಗುಣ ಕಲುಷವಿದ್ದವರು

ಎಂದರೆ ಪುರಂದರರು

ಶ್ವಾನ ಬೂದಿಯೊಳಿರಲು ಶಿವಭಕ್ತನೆನಬಹುದೆ
ಕಾನನದೊಳಿಹ ಕಾಗೆ ವನವಾಸಿಯೇ
ಗಾಣ ತಿರ ಗಲು ಎತ್ತು ದೇಶಯಾತ್ರಿ ಎನಬಹುದೆ
ಗಾಳಿಯ ಂಬಾಭುಜಗ ಉಪವಾಸಿಯೆ

ಮೊದಲಾದ ಹಲವಾರು ಉಪಮಾನಗಳಿಂದ ಯಾವ ರೀತಿಯಿಂದಿದ್ದರೂ ಕಲ್ಮಶ ಹೃದಯಿಯಾಗಿದ್ದರೆ ಎಲ್ಲಾ ವ್ಯರ್ಥವೆಂಬ ದನ್ನು ಸಾಧಾರವಾಗಿ ನಿರೂಪಿಸಿದ್ದಾರೆ ಆದರೆ ಉನ್ನತ ಆದರ್ಶದಿಂದ ಕೂಡಿದ ಧ್ಯಾನ ಮೌನ ಜಪಾನುಷಾ ನಗಳಿಗೆ ಸ್ಥಾನ ವಿರುವುದನ್ನು ನಾವು ಕಾಣಬಹುದು

ದಾಸರು ಯಾವ ಜಾತಿ ಮತ ಭೇದವಿಲ್ಲದೆ ಎಲ್ಲ ಮಾನವರು ಉತ್ತಮ ನಡವಳಿಕೆಯಿಂದ ಮೋಕ್ಷಸಿದ್ಧಿಯನ್ನು ಪಡೆಯಬಹುದೆಂಬ ದನು ನಿರೂಪಿಸಿದರೂ ಏಕೊ ಏನೊ ಕೆಲವರಾದರೂ ಸ್ತ್ರೀಯರ ಬಗೆಗೆ ಉತ್ತಮ ಭಾವನೆಯನ್ನು ಹೊಂದಿಲ್ಲ ದಿರುವುದನ್ನು ಕಾಣಬಹುದು ಇದಕ್ಕೆ ಕಾರಣ ಸ್ಪಷ್ಟವಾಗಿಲ್ಲದಿದ್ದರೂ ಹಲವರಂ ಹಲವು ರೀತಿಯ ಊಹೆಯನ್ನು ಮಾಡಬಹುದು ಕನಕದಾಸರು

ಪತಿವ್ರತೆಯೆಂಬ ವರು ಶತಸಹಸ್ರದಲೊಂದು
ಮಿತಿಮಿಾರಿ ಇರುವರ್ಕೈ ಇತರ ಜನರು
ಮತಿಗೆ ಮನಸೋತು ಅನ್ಯ ಪುರುಷರ ಕೂಡಿ
ರತಿಯೊಳಗೆ ಸಿಲುಕಿರುವರು ರಮ್ಯದೊಳಗಿಹರು

ಎಂದು ಹೇಳುವಲ್ಲಿ ಯಾವುದೋ ಅವ್ಯಕ್ತ ಆಸ ಭವವನ್ನು ಪಡೆದು ಜಿಗುಪ್ಸೆಗೊಂಡಿರ ಬೇಕೆಂದು ತೋರುತ್ತದೆ ಸ್ತ್ರೀಯರಿಂದ ವಂಚಿತರಾಗಿರದೆ ಅಥವಾ ವಂಚಿತರಾದ ವರನು ಕಾಣದೆ ಇಂತಹ ಮಾತನ್ನು ಹೇಳಲು ಸಾಧ್ಯವಾಗ ತ್ತಿರಲಿಲ್ಲ ಹೀಗೆಂದ ಮಾತ್ರಕ್ಕೆ ಸ್ತ್ರೀಯರು ಮಾತ್ರ ಇಂತಹ ನಡುವಳಿಕೆಯುಳ್ಳವರೆಂದು ಸರ್ವರಿಗೂ

ಇಂತಹ ಮಾತನ್ನು ಅನ್ವಯಿಸುವುದು ಸಾಧ್ಯವಾಗುವುದಿಲ್ಲ. ಅಲ್ಲದೆ ಪುರುಷರೆಲ್ಲರಿಗೂ ಉತ್ತಮರೆಂದೂ ಯಾರೂ ಹೇಳಲಾಗುವುದಿಲ್ಲ. ಮಾನವಸಹಜ ದೌರ್ಬಲ್ಯ ಸ್ತ್ರೀಯರಿಗೆ ಮಾತ್ರವಲ್ಲ ಪುರುಷರಿಗೂ ಇದ್ದದ್ದೇ. ಅಂತೆಯೇ ಎ ಜನರಲ್ಲಿಯೂ ಇಂತಹವರು ಇದ್ದೇ ಇರುತ್ತಾರೆ. ಅದಕ್ಕಾಗಿ ಸ್ತ್ರೀಯರನ್ನೇ ಪ್ರತ್ಯೇಕಿಸಿ ಹೇಳುವುದರಲ್ಲಿ ಔಚಿತ್ಯ ಕಂಡುಬರುವುದಿಲ್ಲ. ಕನಕದಾಸರು ಹೇಳುವ ಮೇಲಣ ಮಾತನ್ನು ಮಾನವ ಸಮುದಾಯಕ್ಕೆ ಅನ್ವಯಿಸಬೇಕೇ ಹೊರತು ಕೇವಲ ಸ್ತ್ರೀಯರಿಗಲ್ಲ.

ಹಾಗೆಯೆ ಪುರಂದರದಾಸರು ಹೇಳುವ ನಂಬಬೇಡಿ ನಾರಿಯರನು ಹರಿಬಲ ಹಾರೈಸಬೇಡಿ ಎಂಬ ಮಾತಿನ ಬಗೆಗೂ ಇದೇ ಅಭಿಪ್ರಾಯವನ್ನು ಯಾರಾದರೂ ಹೊಂದಬೇಕಾಗುತ್ತದೆ. ಅವರು

ಹೆಣ್ಣು ಹೇಗಿರಬೇಕೆಂದರೆ
ಹಣ್ಣಿನಂತೆ ಲಕ್ಷಣವಾಗಿರಬೇಕು ಬಾಳೆ
ಹಣ್ಣಿನ ರುಚಿಯಂತೆ ಗುಣವಿರಬೇಕು

ಇತ್ಯಾದಿ ಹೇಳುವ ಮಾತುಗಳಲ್ಲಿ ಗಂಡು ಅಪೇಕ್ಷಿಸುವಂತಹ ಹೆಣ್ಣಿನ ಚಿತ್ರಣವನು ಕಾಣುತ್ತೇವೆ. ಆದರೆ ಅದನ್ನೇ ಹೆಣ್ಣು ಹೇಳುವುದಾದರೆ ಉತ್ತಮ ಪುರುಷನ ರೂಪು ಲಕ್ಷಣಗಳನ್ನೇ ಬಯಸುತ್ತಾಳೆ. ದಾಸರ ಇಂತಹ ಮೇಲಣ ಮಾತುಗಳು ಪುರುಷಪ್ರಿಯವಾಗುವುದೇ ಹೊರತು ಇಡೀ ಮಾನವ ಸಮುದಾಯಕ್ಕೆ ಹೊಂದುವಂತಹವಾಗುವುದಿಲ್ಲ.

ಹೀಗೆ ಸ್ತ್ರೀಯರನ್ನು ಕಟುವಾಗಿ ಟೀಕಿಸಿದ ದಾಸರು ಹೆಣ್ಣಿನ ಬಗೆಗೆ ಮರುಕವನು ವ್ಯಕ್ತಗೊಳಿಸುವುದನ್ನು ಕಾಣಬಹುದು. ಬರಿಯ ಸಂಪ್ರದಾಯಬದ್ಧ ನಿಯಮಗಳಲ್ಲೇ ನಿರತನಾಗಿರುವ ಪತಿಯನ್ನು ಕಟ್ಟಿಕೊಂಡ ಸತಿಯ ಮನದ ತೊಳಲಾಟವನ್ನು

ಒಲ್ಲೆನವ್ವ ವೈದಿಕ ಗಂಡನ ನಾ
ನೆಲ್ಲಾದರು ಕಲ್ಲ ಹಾಯುವೆನವ್ವಾ

ಎಂಬ ಪದದಲ್ಲಿ ಪುರಂದರದಾಸರು ಹೆಣ್ಣೊಬ್ಬಳ ವ್ಯಥೆಯನ್ನು ಸಹಜವಾಗಿ ಚಿತ್ರಿಸಿದ್ದಾರೆ. ಹೀಗೆ ಸ್ತ್ರೀಯರು ವಿವಿಧ ರೀತಿಯಲ್ಲಿ ಅನುಭವಿಸುವ ಕಷ್ಟಕೋಟಲೆಗಳು ದಾಸರ ಹಾಡುಗಳಲ್ಲಿ ಕಂಡು ಬರುತ್ತವೆ. ಅದರಿಂದ ದಾಸರು ಹೆಣ್ಣಿನ ಬಗೆಗೆ ಹೊಂದಿರುವ ಕರುಣಾಭಾವವನ್ನು ನಾವು ಕಾಣಬಹುದು. ಆತ್ಮೀಯವಾದ ಭಾವವುಳ್ಳ ತವರು ಅತ್ತಿಗೆ ನಾದಿನಿಯರು ಕೊನೆಗೆ ಪತಿಯಾದವನೂ ಕೂಡ ಪತ್ನಿಯನ್ನು ಕಡೆಗಣಿಸಿದ ಸಂದರ್ಭದಲ್ಲಿ ಸ್ತ್ರೀಯು ಪರಿತಪಿಸುವ ರೀತಿಯನ್ನು ವಿಷಾದದಿಂದ

ತ್ತೇನೆ ನೋಡು ಗಂಡ ವಿಷ ಕುಡಿಯುತ್ತೇನೆ ಎನ್ನುವಮಟ್ಟಿನ ತೀವ್ರಭಾವನೆ ದಾಸರ ಹಾಡ ಗಳಲ್ಲಿ ವ್ಯಕ್ತವಾಗುತ್ತದೆ

ಮುಪ್ಪಿನ ಗಂಡನ ಒಲ್ಲೆನು ನಾನು
ತಪ್ಪದೆ ಪಡಿಪಾಟ ಪಡಲಾರೆನಕ್ಕ

ಎಂಬ ಹಾಡಿನಲ್ಲಿ ಪುರಂದರದಾಸರು ಮುದುಕನನ್ನು ಕೂಡಿದ ಹೆಣ್ಣೊಬ್ಬಳು ಅನುಭವಿ ಸುವ ಘೋರಯಾತನೆಯನು ಸಹೃದಯ ಹೃದಯಸ್ಪರ್ಶಿಯಾಗಿ ನಿರೂಪಿಸಿದ್ದಾರೆ ಹೀಗೆ ಹೆಣ್ಣಿನ ಬಗೆಗೆ ದಾಸರು ನಿಷ್ಠುರ ಹಾಗೂ ಮಧುರ ಭಾವನೆಗಳೆರಡನ್ನೂ ಹೊಂದಿರು ವುದನ್ನು ನಾವು ಕಾಣಬಹುದು

ಸ್ತ್ರೀಯರ ಬಗೆಗೆ ವಿಮರ್ಶಿಸಿದ ದಾಸರು ಪುರುಷರ ಬಗೆಗೆ ಹೇಳಿದ್ದಾರೆ ಆದರೆ ಸ್ತ್ರೀಯರ ಬಗೆಗೆ ಆಡಿದಷ್ಟು ಕಠಿಣ ನುಡಿಗಳು ಇವರ ಬಗೆಗಿಲ್ಲ ಪುರುಷನು ಹೆಂಡತಿಗೆ ದಾಸನಾಗಿರಬಾರದೆಂಬ ಉಪದೇಶವಿದೆ ಆತನು ಸ್ತ್ರೀಯ ಒಲ ಮೆಗೆ ಮನಸೋತು ಶ್ರೀಹರಿಯನ್ನು ಮರೆಯುವನೆಂಬ ಕಾಳಜಿಯಿಂದ ಈ ರೀತಿಯಲ್ಲಿ ತಿಳಿಯ ಹೇಳಿರಬೇಕೆಂದು ತೋರುವುದಲ್ಲದೆ ಅಂದಿನ ಸಮಾಜದಲ್ಲಿ ಸ್ತ್ರೀಗಿದ್ದ ಸ್ಥಾನ ಮಾನದ ಮೇಲೆ ಆಡಿದ ಮಾತ ಗಳೆಂದು ತೋರುತ್ತದೆ ಇಲ್ಲದಿದ್ದಲ್ಲಿ ಇಂತಹ ಹೇಳಿಕೆಗಳಿಗೆ ಯಾವ ಬೆಲೆಯೂ ನೆಲೆಯೂ ಸಿಕ್ಕುವುದಿಲ್ಲ ಅಲ್ಲದೆ ಇಂತಹ ಹಾಡು ಗಳು ದಾಸರಿಂದ ಬಂದವುಗಳಲ್ಲ ಬೇರಾರೊ ಬರೆದು ಸೇರಿಸಿರಬಹುದೆಂಬ ಊಹೆ ಯನು ಮಾಡುವವರೂ ಇರಬಹುದು

ಮಾನವನ ಉತ್ತಮ ನಡವಳಿಕೆಗಳಾವುವೆಂಬುದನ್ನು ದಾಸರು ತಮ್ಮ ಹಾಡು ಗಳಲ್ಲಿ ನಿರೂಪಿಸಿದ್ದಾರೆ ಪರನಿಂದೆ ಕೂಡದೆನ್ನುತ್ತಾರೆ ಕನಕದಾಸರು ಪರನಿಂದೆ ಗಿಂತ ಪಾತಕವೆಂಬುದುಂಟೆ ಎನ್ನುತ್ತಾರೆ ವಿಜಯದಾಸರಾದರೊ ಇತರರು ತಮ್ಮನ್ನು ನಿಂದಿಸಿದರೆ ಅದರಿಂದ ಕಿಂಚಿತ್ತೂ ಬೇಸರಗೊಳ್ಳಬೇಡಿರೆಂದು ಉಪ ದೇಶಿಸುತ್ತಾರೆ ಅಲ್ಲದೆ ಸತ್ಸಂಗವಿರಬೇಕೆನ್ನುತ್ತಾರೆ ಉತ್ತಮರ ಸಂಗದಿಂದಧಿಕ ಧರ್ಮವುಂಟೆ ಎಂದಿದ್ದಾರೆ ಸಜ್ಜನರ ಜೊತೆಯ ಲ್ಲಿ ಬೆರೆತು ನಡೆವುದರಿಂದ ತಾನೂ ಅಂತಹ ಉತ್ತಮನು ನುಹ್ಯನಾಗಲು ಸಾಧ್ಯವೆಂಬುದು ಅವರ ಅಭಿಪ್ರಾಯವಾಗಿದೆ ಹಾಗೆಯೇ ದುಷ್ಟಸಂಗವೂ ತ್ಯಾಜ್ಯವೆನ್ನುತ್ತಾರೆ

ಒಟ್ಟಿನಲ್ಲಿ ದಾಸರದು ಸಮಾಜ ಸುಧಾರಣೆಯ ದೃಷ್ಟಿ ಜೀವನದಲ್ಲಿ ಸಾಧಿಸ ಬೇಕಾದುದ್ದು ಐಹಿಕ ಭೋಗಭಾಗ್ಯಗಳಿಗಿಂತ ಮಿಗಿಲಾದ ಶಾಶ್ವತ ಸಿದ್ಧಿ ಎಂಬುದು ಅವರ ಉಪಾದೇಶಾವಳಿಯ ಸಾರವಾಗಿದೆ ಆತ್ಮೋನ್ನತಿಯನ್ನು ಸಾಧಿಸುವ

ಮಾರ್ಗವನ್ನು ತಿಳಿಯ ಹೇಳುವ ಅವರ ಕೃತಿಗಳು ಅತ್ಯಂತ ಜನಪ್ರಿಯವಾದುವು ಭಕ್ತಿ ಧರ್ಮಮಾರ್ಗಗಳಿಂದ ಮಾತ್ರ ಮುಕ್ತಿಯನ್ನು ಸಾಧಿಸಬಹುದೆಂಬ ಉನ್ನತ ಆದರ್ಶವನ್ನು ಹೊಂದಿದ ಅವರು ಇತರರನ್ನು ಆ ದಾರಿಯಲ್ಲಿ ನಡೆಯಬೇಕೆಂದು ಸೂಚಿಸಿದರು ಆ ಸೂಚನೆಗೆ ಸಹಕಾರಿಯಾಗಿ ತಮ್ಮ ಲೋಕಾನುಭವವನ್ನು ತಾತ್ವಿಕ ನೆಲೆಗಟ್ಟಿನ ಮೇಲೆ ನಿರೂಪಿಸಿ ಜನಮನದ ಉತ್ತಮ ಸ್ಥಿತಿಗೆ ಪ್ರಯತ್ನಿಸಿದರು ಇಂತಹ ಉತ್ತಮ ಆದರ್ಶದಿಂದ ಕೂಡಿದ ಅವರ ಸಾಹಿತ್ಯ ಬಹುಜನ ಪ್ರಿಯವಾಗಿ ಸಮಾಜದಲ್ಲಿ ನೆಲೆಗೊಂಡಿತು ಈ ಆದರ್ಶಪಾಲನೆಯಿಂದ ಪ್ರತಿವ್ಯಕ್ತಿಯೂ ಉತ್ತಮ ಗೊಳ್ಳುವುದಲ್ಲದೆ ಅದರಿಂದ ಸಮಾಜೋದ್ಧಾರ ಸಾಧ್ಯ

---

# ದಾಸಸಾಹಿತ್ಯ ಮತ್ತು ಕನ್ನಡ

— ಆರ ರಾಮಕೃಷ್ಣ

ಭಾರತದ ಇತರ ಎಲ್ಲ ಸಾಹಿತ್ಯಗಳಂತೆ ಕನ್ನಡ ಸಾಹಿತ್ಯಕ್ಕೂ ಪ್ರೇರಕ ಪ್ರಚೋದಕ ಮತ್ತು ಪೋಷಕ ಶಕ್ತಿಯೆಂದರೆ ಧರ್ಮವೇ ಧರ್ಮವೆಂಬುದು ಪ್ರಕೃತಿಯ ಅಂತರ್ಭೂತ ಮಾನವ ಗುಣ ಆದದರಿಂದ ಕನ್ನಡ ಸಾಹಿತ್ಯದಲ್ಲಿ ಧರ್ಮ ಪ್ರಾಚುರ್ಯ ಕಂಡುಬರುವುದು ಸಹಜವಾಗಿದೆ ಜನಸಾಮಾನ್ಯರಿಗೆ ಧರ್ಮ ಬೋಧೆ ಮಾಡಬೇಕಾದರೆ ಅದನು ಜನರಿಗೆ ಅರ್ಥವಾಗುವ ಭಾಷೆಯಲ್ಲಿ ಮಾಡಬೇಕು ಈ ಅಂಶವನ್ನು ದೃಷ್ಟಿಯಲ್ಲಿಟ್ಟುಕೊಂಡು ಬೌದ್ಧರು ಸಂಸ್ಕೃತದಲ್ಲಿದ್ದ ಧರ್ಮ ತತ್ವಗಳನ್ನು ಅಂದಿನ ಜನರ ನಿತ್ಯಬಳಕೆಯ ಭಾಷೆಯಾಗಿದ್ದ ಪಾಲಿಯ ಮೂಲಕ ಪ್ರಚಾರ ಮಾಡಿದರು ಅವರಂತೆಯೇ ಜೈನರೂ ತಮ್ಮ ಧರ್ಮಪ್ರಚಾರಕ್ಕೆ ಪ್ರಾಕೃತ ಭಾಷೆಯನ್ನು ಮಾಧ್ಯಮವನ್ನಾಗಿ ಮಾಡಿಕೊಂಡರು ಇದೇ ರೀತಿಯಲ್ಲಿ ವೀರಶೈವ ವಚನಕಾರರು ಕನ್ನಡದಲ್ಲಿಯೇ ತಮ್ಮ ಕೃತಿರಚನೆ ಮಾಡಲು ತೊಡಗಿದರು ಅವರ ಮುಖ್ಯ ಗುರಿ ಜನಜಾಗೃತಿ ಆತ್ಮೋದ್ಧಾರದ ಹೆದ್ದಾರಿ ಸರ್ವರ ಸ್ವತ್ತಾಗಬೇಕೆಂಬುದು ಅವರ ಹೆಬ್ಬಯಕೆ ಆದುದರಿಂದ ಅವರು ವೈದಿಕ ನಿರ್ಬಂಧಗಳನ್ನು ಸಡಿಲಿಸಿ ವರ್ಣಾಶ್ರಮಬಂಧಗಳನು ತ್ಯಜಿಸಿದರು ಸ್ತ್ರೀಯರೂ ಶೂದ್ರರೂ ಆಧ್ಯಾತ್ಮಜ್ಞಾನ ಪಡೆಯಲು ಅನರ್ಹರು ಎಂಬ ಸಂಕುಚಿತ ಭಾವನೆಯನ್ನು ದೂರು ಮಾಡಿದರು ಇದರ ಪರಿಣಾಮವಾಗಿ ಸಮಾಜದ ಎಲ್ಲ ವರ್ಗದ ಜನರೂ ವೀರಶೈವ ಮತದ ಅನುಯಾಯಿಗಳಾದರು ಅನುಭಾವಿಗಳಾದರು

ವೀರಶೈವ ಮತದ ಪ್ರಾಬಲ್ಯದಿಂದ ವರ್ಣಾಶ್ರಮಗಳ ತಳಹದಿಯ ಮೇಲೆ ನಿಂತಿದ್ದ ವೈದಿಕ ಮತದ ಅನುಯಾಯಿಗಳು ತತ್ತರಿಸಿದರು ತಮ್ಮ ಧಾರ್ಮಿಕ ಅಸ್ತಿತ್ವವನ್ನು ಸ್ಥಿರಗೊಳಿಸುವ ಹೊಸ ಸಿದ್ಧಾಂತವೊಂದನ್ನು ಸ್ಥಾಪಿಸಲು ಪ್ರಯತ್ನ ಪಟ್ಟರು ಅವರ ಪ್ರಯತ್ನದ ಫಲವೇ ದ್ವೈತಮತದ ಸ್ಥಾಪನೆ ಮಧ್ವಾಚಾರ್ಯರೇ ಈ ಮತದ ಸ್ಥಾಪಕರು ಈ ಮತದ ಮುಖ್ಯ ತತ್ವಗಳಿವು ಶ್ರೀ ಹರಿಯೇ ಸರ್ವೋತ್ತಮನು ಜಗತ್ತು ಸತ್ಯ ಜೀವರಲ್ಲಿ ತಾರತಮ್ಯವಿದೆ ಎಲ್ಲ ಜೀವರು ಹರಿಯ ಅನುಚರರು ಎಲ್ಲದರಲ್ಲಿಯೂ ತರತಮ ಭಾವವಿದೆ ನೈಜ ಸುಖಾನುಭವವೇ ಮುಕ್ತಿ ಈ ಮುಕ್ತಿಗೆ ಭಕ್ತಿಯೇ ಸಾಧನ ಪ್ರತ್ಯಕ್ಷ ಅನುಮಾನ ಶಬ್ದ ಎಂಬ ಮೂರು ಪ್ರಮಾಣಗಳು ಶ್ರೀಹರಿಯನ್ನು ವೇದಗಳಿಂದ ಮಾತ್ರ ತಿಳಿಯುವುದು ಸಾಧ್ಯ ಈ ತತ್ವಗಳನ್ನು ಜನಸಾಮಾನ್ಯರಲ್ಲಿ ಪ್ರಚಾರ ಪ್ರಸಾರ ಮಾಡುವುದಕ್ಕಾಗಿಯೇ ಹುಟ್ಟಿದುದು ದಾಸಸಾಹಿತ್ಯ

ವೀರಶೈವ ಮತವು ತ್ವರಿತಗತಿಯಿಂದ ಹರಡಿದ ದಕ್ಕೆ ಮುಖ್ಯ ಕಾರಣವೆಂದರೆ ವಚನಕಾರರು ಬಳಸಿದ ಭಾಷಾಮಾಧ್ಯಮ ಈ ಸೂಕ್ಷ್ಮವನ್ನು ಅರಿತ ವೈಷ್ಣವ ಧರ್ಮದ ಅನುಯಾಯಿಗಳು ತಮ್ಮ ಧಾರ್ಮಿಕ ಪ್ರಚಾರಕ್ಕೆ ಜನರ ಆಡುನುಡಿಯನ್ನೇ ಹೆಚ್ಚಾಗಿ ಬಳಸಿಕೊಂಡರು ಶಿವಶರಣರು ಕಾವ್ಯಮಯವಾದ ಗದ್ಯದಲ್ಲಿ ವಚನಗಳನ್ನು ರಚಿಸಿ ಜನಮನವನು ಸೂರೆಗೊಂಡರೆ ಹರಿದಾಸರು ಹೃದಯವನ್ನು ಸೂರೆಗೊಳ್ಳಬಲ್ಲ ಕೀರ್ತನೆಗಳನು ಹಾಡಿ ಜನರನ್ನು ತಮ್ಮತ್ತ ಸೆಳೆದ ಕೊಂಡರು ಈ ಕೀರ್ತನೆಗಳು ಸಂಗೀತ ಪ್ರಧಾನವಾದದ್ದು ಪರಮಾತ್ಮನು ಸಂಗೀತಕ್ಕೆ ಕಿ ರ್ತನೆ ನೃತ್ಯಗಳಿಗೆ ಬಹುಬೇಗ ಪ್ರಸನ್ನನಾಗುವನೆಂಬ ನಂಬಿಕೆ ಇದಕ್ಕೆ ಕಾರಣ ಭಕ್ತಿಯ ಪರಿವಾರಗಳಲ್ಲಿ ಒಂದಾದ ಸಂಗೀತಕ್ಕೆ ಸಾಹಿತ್ಯವೂ ಸೇರಿದರೆ ಅದರ ಸೊಗಸು ಮತ್ತಷ್ಟು ಹೆಚ್ಚುವು ದೆಂದು ಭಾವಿಸಿದ ಹರಿದಾಸರು ಸಂಗೀತಕ್ಕೂ ಸಾಹಿತ್ಯಕ್ಕೂ ಸಾಮರಸ್ಯವನೂ ವೈವಿಧ್ಯವನೂ ತಂದರು ಸಂಗೀತಕ್ಕೆ ಸಂಬಂಧಿಸಿದಂತೆ ವಿವಿಧ ರಾಗತಾಳಗಳಲ್ಲೂ ಸಾಹಿತ್ಯಕ್ಕೆ ಸಂಬಂಧಿಸಿದಂತೆ ವಿವಿಧ ಛಂದಸ್ಸುಗಳಲ್ಲೂ ತಮ್ಮ ಕೃತಿಗಳನ್ನು ರಚಿಸಿದರು ಪದ ಸುಳಾದಿ ಉಗಾಭೋಗ ಶ್ಲೋಕ ಕಂದ ವೃತ್ತ ದ್ವಿಪದಿ ತ್ರಿಪದಿ ಚೌಪದಿ ಷಟ್ಪದಿ ರಗಳೆ ಮುಂತಾದ ಪ್ರಕಾರಗಳಲ್ಲಿ ಅವರ ಸಾಹಿತ್ಯ ರೂಪುಗೊಂಡಿದೆ ಕನ್ನಡ ವನು ಸಂಗೀತ ಭಾಷೆಯನ್ನಾಗಿ ಮಾಡಿದ ಕೀರ್ತಿ ಮುಖ್ಯವಾಗಿ ಹರಿದಾಸರಿಗೆ ಸಲ್ಲಬೇಕು

ಹರಿದಾಸ ಸಾಹಿತ್ಯ ಅಪಾರವಾದುದು ವೈವಿಧ್ಯವಾದುದು ಆದುದರಿಂದ ಅಧ್ಯಯನದ ದೃಷ್ಟಿಯಿಂದ ಈ ಸಾಹಿತ್ಯವನ್ನು ವಿಭಾಗಿಸುವುದು ಅತ್ಯಂತ ಅವಶ್ಯಕ ಶ್ರೀ ಮಧ್ವಾಚಾರ್ಯರ ಸೇವೆ ಸಂಸ್ಕೃತ ವಾಙ್ಮಯಕ್ಕೆ ಸಂದಿರುವುದರಿಂದಲೂ ಶ್ರೀನರ ಹರಿತೀರ್ಥರ ಮೂರು ಕೃತಿಗಳು ಮಾತ್ರ ಲಭ್ಯವಾಗಿರುವುದರಿಂದಲೂ ದಾಸಸಾಹಿತ್ಯ ರಚನೆ ಶ್ರೀಪಾದರಾಜರಿಂದಲೇ ಸಕ್ರಮವಾಗಿ ಪ್ರಾರಂಭವಾಯಿತು ಮಾಧ್ವ ಪರಂಪರೆಯಲ್ಲಿ ದ್ವೈತ ತತ್ವಗಳನ್ನು ಸಂಸ್ಕೃತ ಭಾಷೆ ತಿಳಿಯ ದ ಜನರಿಗೆ ಸರಳ ಕನ್ನಡ ದಲ್ಲಿ ತಿಳಿಸಿಕೊಡುವ ಕೈಂಕರ್ಯವನ್ನು ಮೊದಲು ಕೈಗೊಂಡವರು ಶ್ರೀಪಾದರಾಜ ರೆಂದು ದಾಸಸಾಹಿತ್ಯ ಪಂಡಿತರು ಅಭಿಪ್ರಾಯ ಪಟ್ಟಿದ್ದಾರೆ ಆದುದರಿಂದ ಕಾಲ ಮತ್ತು ಭಾಷೆಯ ದೃಷ್ಟಿಯಿಂದ ದಾಸಸಾಹಿತ್ಯದ ಬೆಳವಣಿಗೆಯನು ವಿದ್ವಾಂಸರು ಮೂರು ಹಂತಗಳಲ್ಲಿ ಗುರುತಿಸಿದ್ದಾರೆ 1 ಶ್ರೀಪಾದರಾಜ ಯುಗ (15–17ನೆಯ ಶತಮಾನದವರೆಗೆ) 2 ವಿಜಯದಾಸ ಯುಗ (17–19 ನೆಯ ಶತಮಾನದವರೆಗು ಮತ್ತು 3 ತಂದೆ ಮುದ್ದುಮೋಹನ ವಿಠಲ ಯುಗ (20ನೆಯ ಶತಮಾನ)

ಹರಿದಾಸ ಸಾಹಿತ್ಯ ಅಪಾರವಾದುದು ವೈವಿಧ್ಯವಾದುದು ಎಂದು ಹಿಂದೆಯೇ ಹೇಳಿದೆ ಪ್ರಸಿದ್ಧ ಹರಿದಾಸರೆನಿಸಿಕೊಂಡಿರುವ ಪ್ರತಿಯೊಬ್ಬರೂ ಸಾವಿರಾರು ಕೃತಿ ಗಳನ್ನು ರಚಿಸಿದ್ದಾರೆ ದಾಸಶ್ರೇಷ್ಠರಾದ ಶ್ರೀ ಪುರಂದರದಾಸರೊಬ್ಬರೆ ನಾಲ್ಕು ಲಕ್ಷ ಎಪ್ಪತ್ತೈದು ಸಾವಿರ ಕೃತಿಗಳನ್ನು ರಚಿಸಿದ್ದಾರೆಂದು ತಿಳಿದುಬರುತ್ತದೆ ಅಪಾರವಾದ

ಈ ಸಾಹಿತ್ಯರಾಶಿಯನ್ನು ಭಾಷೆಯ ದೃಷ್ಟಿಯಿಂದ ಪರಿಶೀಲಿಸುವುದು ಎಷ್ಟು ತೊಡಕಿನ ಕೆಲಸವೆಂಬುದು ಯಾರಿಗಾದರೂ ಅರಿವಾಗದಿರದು. ಮಹಾಪ್ರಬಂಧದ ವ್ಯಾಪ್ತಿಗೊಳಪಡುವ ಈ ವಿಷಯವನ್ನು ಒಂದು ಸಣ್ಣ ಪ್ರಬಂಧದಲ್ಲಿ ಹಿಡಿದಿಡುವುದು ತುಂಬ ಕಷ್ಟ. ಆದುದರಿಂದ ದಾಸ ಪರಂಪರೆಯಲ್ಲಿ ಪ್ರಮುಖರಾದವರ (ಶ್ರೀ ಪುರಂದರದಾಸ, ಕನಕದಾಸ, ವಿಜಯದಾಸ ಮುಂತಾದವರು) ಕೆಲವು ಕೃತಿಗಳನ್ನು ಮಾತ್ರ ಗಮನಿಸಿ ದಾಸಸಾಹಿತ್ಯದ ಭಾಷಾ ಸ್ವರೂಪವನ್ನು ಕಂಡುಕೊಳ್ಳುವ ಒಂದು ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

ದಾಸಸಾಹಿತ್ಯದಲ್ಲಿ ನಡುಗನ್ನಡ ಮತ್ತು ಹೊಸಗನ್ನಡ ರೂಪಗಳಿವೆ. ಇವುಗಳಲ್ಲಿ ನಡುಗನ್ನಡ ರೂಪವೇ ಹೆಚ್ಚಾಗಿ ಕಂಡುಬರುತ್ತದೆ. ಏಕೆಂದರೆ ದಾಸಸಾಹಿತ್ಯದ ಪ್ರಮುಖರು 15 ರಿಂದ 18 ನೆಯ ಶತಮಾನಗಳಲ್ಲಿ ಕಾಣಿಸಿಕೊಳ್ಳುತ್ತಾರೆ. ಈ ಶತಮಾನಗಳಲ್ಲಿ ನಡುಗನ್ನಡವೇ ಪ್ರಚಲಿತವಾಗಿದ್ದುದರಿಂದ ದಾಸಸಾಹಿತ್ಯದಲ್ಲಿ ಇದನ್ನೇ ಕಾಣುತ್ತೇವೆ.

ವ್ಯಂಜನಾಂತ ಪದಗಳು ಸ್ವರಾಂತವಾಗಿವೆ. ಉದಾಹರಣೆಗೆ

(i) ನ > ಉ — ನಾನು ನೀನು, ಅವನು ಏನು ತಾನು

(ii) ಣ > ಉ — ಉಣ್ಣು ಕಾಣು ಕಣ್ಣು ಹೆಣ್ಣು ಮಣ್ಣು

(iii) ಲ > ಉ — ಕಾಲು ಪಾಲು ಸೋಲು ಬಳಲು ಅರಲು

(iv) ಳ > ಉ — ತಾಳು ಬಾಳು ಕೇಳು ಆಳು ಮರುಳು

(v) ರ > ಉ — ಸೋರು ಉಸಿರು ಬಸಿರು ಮೊಸರು ನಾರು

ಅನುಸ್ವಾರದಿಂದ ಕೂಡಿದ ಪದಗಳು ಅನುಸ್ವಾರವನ್ನು ಕಳೆದುಕೊಂಡಿವೆ. ಉದಾ: ತೋಂಟ > ತೋಟ ಪಲುಂಬು > ಹಲುಬು ತುಳುಂಕು > ತುಳುಕು ತುರುಂಬು > ತುರುಬು ಮುಸುಂಕು > ಮುಸುಕು/ಮುಸುಗು ಸರಂಗು > ಸೆರಗು ಬೆಡಂಗು > ಬೆಡಗು ಅಲ್ಲಂ > ಅಲ್ಲ

ಪಕಾರ ಹಕಾರವಾಗಿ ಪರಿವರ್ತನೆ ಹೊಂದಿದೆ. ಉದಾ: ಪಾಸು > ಹಾಸು ಪರಿ > ಹರಿ ಪಕ್ಕಿ > ಹಕ್ಕಿ ಪೊಳೆ > ಹೊಳೆ ಪೊತ್ತು > ಹೊತ್ತು ಕೆಲವೆಡೆ ಪಕಾರವೇ ಬಳಕೆಯಾಗಿದೆ. ಉದಾ: ಪೋಗದಿರು ಪಾಲು

ಱ ಮತ್ತು ೞ ಕಾರಗಳು ರ ಮತ್ತು ಳ ಕಾರಗಳಾಗಿವೆ. ಉದಾ: ಅಱಿ > ಅರಿ ಮಱಿ > ಮರಿ ಮೞೆ > ಮಳೆ ಬಾೞು > ಬಾಳು

ಯಕಾರಾಂತ ಪದಗಳು ಇ ಕಾರಾಂತ ಮತ್ತು ಐ ಕಾರಾಂತವಾಗಿವೆ. ಉದಾ:
ಯ > ಇ – ತಾಯಿ ಕಾಯಿ ಕಯ್ಯ/ಕೈ ಮೆಯ್ಯ/ಮೈ ಸಾಯಿ
ಯ > ಐ – ಲಲನೆಯರ > ಲಲನೇರ

ಎ ಕಾರ ಪದಗಳು ಯ ಕಾರವಾಗಿ ಬಳಕೆಗೊಂಡಿವೆ ಉದಾ ಕಂಡಿರೆ > ಕಂಡಿರ್ಯಾ, ತಂದಿರೆ > ತಂದಿರ್ಯಾ

ಸಂಸ್ಕೃತದ ಮಹಾಪ್ರಾಣಾಕ್ಷರಗಳು ಅಲ್ಪಪ್ರಾಣಾಕ್ಷರಗಳಾಗಿವೆ ಉದಾ ಛಂದ > ಚಂದ ಘೂಕ > ಗೂಗೆ, ಅರ್ಘ್ಯ > ಅಗ್ಗ ಢಕ್ಕೆ > ಡಕ್ಕೆ ರೂಢಿ > ರೂಡಿ ನಿಧಾನ > ನಿದಾನ

ಸಂಸ್ಕೃತದ ಕೆಲವು ಖ ಕಾರಾಂತ ಪದಗಳು ಗ ಕಾರಗಳಾಗಿಯೂ ಥ ಕಾರವು ಟ ಕಾರವಾಗಿಯೂ, ಧ ಕಾರವು ದ ಕಾರವಾಗಿಯೂ ಪರಿವರ್ತನೆ ಪಡೆದಿವೆ ಉದಾ

ಖ > ಗ — ಮುಖ > ಮೊಗ ವೈಶಾಖ > ಬೇಸಗೆ

ಥ > ಟ — ಗ್ರಂಥಿ > ಗಂಟು

ಧ > ದ — ವೀಧಿ > ಬೀದಿ

ಇವಲ್ಲದೆ ವೇತ್ರ > ಬೆತ್ತ ವಲ್ಲಿ > ಬಳ್ಳಿ ದ್ರೋಣ > ದೋಣಿ ಪ್ರಣತೆ > ಹಣತೆ ಪುಸ್ತಕ > ಹೊತ್ತಗೆ ಬ್ರಹ > ಬೊಮ್ಮ ಕಾಂಸ್ಯ > ಕಂಚು ಜಟಾ > ಜಡೆ, ಇಳಾ > ಎಳೆ ಪ್ರಯಾಣ > ಪಯಣ ಗಹನ > ಗಾನ ನಿಯಮ > ನೇಮ ಪತ್ತನ > ಪಟ್ಟಣ ಆಜ್ಞೆ > ಆಣೆ ದ್ಯೂತ > ಜೂಜು ಪ್ರಗ್ರಹ > ಹಗ್ಗ ಆಶ್ಚರ್ಯ > ಅಚ್ಚರಿ ಧ್ವನಿ > ದನಿ ಕಾಷ > ಕಡಿ ದೃಷ್ಟಿ > ದಿಟ್ಟಿ ಕೂಷ್ಮಾಂಡಕ > ಕುಂಬಳ ವಿನಾಯಕ > ಬೆನಕ ಮುಂತಾದ ಪರಿವರ್ತನೆಗಳನ್ನು ಗಮನಿಸಬಹುದು

ಕ ಟ ತ ಅಕ್ಷರಗಳು ಗ ಡ ದ ಗಳಾಗಿವೆ ಉದಾ ಡಮರುಕ > ಡಮರುಗ ಮಲ್ಲಿಕಾ > ಮಲ್ಲಿಗೆ ಕಟಕ > ಕಡಗ ಅಟವಿ > ಅಡವಿ ತಟ > ತಡ ಭೂತಿ > ಬೂದಿ

ಕೆಲವು ನ ಕಾರಾಂತ ಪದಗಳು ಕೊನೆಯ ನ ಕಾರವನ್ನು ಲೋಪ ಮಾಡಿಕೊಂಡಿವೆ ಉದಾ ರಾಜನ > ರಾಜ ಕರಿನ್ > ಕರಿ ಆತ್ಮನ್ > ಆತ್ಮ ಬ್ರಹ್ಮನ್ > ಬ್ರಹ್ಮ

ವ್ಯಂಜನಾಂತ ಪದಗಳು ಕೊನೆಯ ವ್ಯಂಜನವನ್ನು ಲೋಪ ಮಾಡಿಕೊಂಡಾಗಲಿ ಅಥವಾ ಮತ್ತೊಂದು ಅದೇ ವ್ಯಂಜನ ಮತ್ತು ಉ ಕಾರದೊಡನಾಗಲಿ ವ್ಯತ್ಯಾಸ ಗೊಂಡಿದೆ ಉದಾ ಶಿರಸ್ > ಶಿರ, ಯಶಸ್ > ಯಶ ಮನಸ್ > ಮನ (ಮನಸು)

ಸಂಸ್ಕೃತದ ಪ್ರಥಮಾ ವಿಭಕ್ತಿಯ ಬಹುವಚನಾಂತವಾಗಿರುವ ಕೆಲವು ಪುಲ್ಲಿಂಗ ವ್ಯಂಜನಾಂತ ಪದಗಳು ತಮ್ಮ ಕೊನೆಯ ವಿಸರ್ಗವನ್ನು ಲೋಪ ಮಾಡಿಕೊಂಡಿವೆ ಉದಾ ಹನುಮಂತಃ > ಹನುಮಂತ ಭಗವಂತಃ > ಭಗವಂತ

ಸಂಸ್ಕೃತದ ಪ್ರಥಮಾ ವಿಭಕ್ತ್ಯಂತ ಏಕವಚನಗಳು ತಮ್ಮ ಕೊನೆಯ ವ್ಯಂಜನ ದೊಡನೆ ಮತ್ತೊಂದು ಅದೇ ವ್ಯಂಜನವನ್ನೂ ಉ ಕಾರವನ್ನೂ ಸೇರಿಸಿಕೊಂಡಿವೆ ಉದಾ ಸಂಪತ್ > ಸಂಪತ್ತು, ವಿಪತ್ > ವಿಪತ್ತು ದಿಕ್ > ದಿಕ್ಕು

ಛಂದಸ್ಸಿನ ಅನುಕೂಲಕ್ಕಾಗಿ ಕೆಲವು ಅಕ್ಷರಗಳು ಸಜಾತೀಯ ದ್ವಿತ್ವಾಕ್ಷರಗಳಾಗಿವೆ ಉದಾ ಘನ> ಘನ್ನ ರಮಣಿ> ರಮ್ಮಣಿ ಮುನಿ> ಮುನಿ

ತಾಳಕ್ಕನುಸಾರವಾಗಿ ಕೆಲವು ಅಕ್ಷರಗಳು ದೀರ್ಘಾಕ್ಷರಗಳಾಗಿವೆ ಉದಾ ಶರಣು> ಶರಾಣು ಚರಣ> ಚರಾಣ ಸ್ಮರಣೆ> ಸ್ಮರಾಣೆ ಕರ ಣ> ಕರೂಣ

ದೀರ್ಘಾಂಶಗಳು ಸ್ವರಾಂತಗಳಾಗಿವೆ ಉದಾ ಲಕ್ಷ್ಮೀ> ಲಕ್ಷ್ಮಿ ಸರಸ್ವತೀ> ಸರಸ್ವತಿ> ಸರಸತಿ

ಕೆಲವು ವೇಳೆ ಎರಡು ಪದಗಳು ಸೇರುವಾಗ ಎರಡನೇ ಪದದ ಆದಿವ್ಯಂಜನವು ಲೋಪವಾಗಿ ಅದರ ಸ್ಥಳದಲ್ಲಿ ಸ್ವರ ಬಂದು ಮೊದಲನೆ ಪದದ ಕೊನೆಯ ಅಕ್ಷರದೊಂದಿಗೆ ಸಂಧಿಯಾಗುತ್ತದೆ ಉದಾ ಉಚ್ಚರಿಸಲೋಶವಲ್ಲ (ಉಚ್ಚರಿಸಲು+ ವಶವಲ್ಲ) ಎಂಬ ಸಂಧಿಯಲ್ಲಿ ಎರಡನೆ ಪದದ ಆದಿವ್ಯಂಜನ ಲೋಪಗೊಂಡು ಅದರ ಸ್ಥಳದಲ್ಲಿ ಒ ಎಂಬ ಸ್ವರ ಬಂದು ವಿಜಾತೀಯ ಸಂಧಿಕಾರ್ಯ ನಡೆದಿದೆ

ಸಂಸ್ಕೃತದ ಸುವರ್ಣದೀರ್ಘ ಮತ್ತು ಯ ಣ್ ಸಂಧಿಗಳು ಪ್ರಯೋಗಗೊಂಡಿವೆ ಉದಾ ಸವರ್ಣದೀರ್ಘಸಂಧಿ—ದೇವಾಸುರ ಗುರೂಪದೇಶ ಅಸ್ತ್ರವ್ಯಸ್ತ್ರಾಡ್ತ್ರಾದಿ

ಯಣ್‌ಸಂಧಿ ಅತ್ಯಂತ ಅತ್ಯಾಕಿ ತಾಳ್ಯುದ್ದ ಅಧ್ಯಾತ್ಮ

ಷಷ್ಠಿ ವಿಭಕ್ತಿ ಸೇರುವಾಗ ಅನೇಕ ವೇಳೆ ದ್ವಿತ್ವರೂಪವಾಗುತ್ತವೆ ಉದಾ ಶ್ರೀಧರನ> ಶ್ರೀಧರನ್ನ (ಶ್ರೀಧರನ ಸೇವೆಗೆ ಸಾಧನ ಸಂಪತಾಯ್ತು) ವಿಠಲನ> ವಿಠಲನ (ಗುಣನಿಧಿ ಪುರಂದರ ವಿಠಲನ್ನ ಬಂಟನಾಗದವ) ಇದು ತಾಳಕ್ಕೋಸ್ಕರ ಮಾಡಿಕೊಂಡ ಮಾರ್ಪಾಡಾಗಿರಬಹುದೆಂದು ಕೆಲವರ ಊಹೆ

ಮಾಡಿದ ನೋಡಿದ ಕೇಳಿದ ಮುಂತಾದುವು ಮಾಡ್ದ (ಸಂಹಾರ ಮಾಡ್ದ) ನೋಡ್ದ ಕೇಳ್ದ ಎಂದಾಗಿವೆ ಅಂತೆಯೇ ಲಕ್ಷ್ಮೀ ಬ್ರಹ್ಮ ಸರಸ್ವತಿ ಎಂಬ ಪದಗಳು ಲಕುಮಿ ಬರಮ ಸರಸತಿ ಎಂಬುದಾಗಿ ಬಳಕೆಗೊಂಡಿವೆ

ಷ ಕಾರ ಹೆಚ್ಚಾಗಿ ಕಾಣಿಸಿಕೊಳ್ಳುತ್ತದೆ ಅಷ್ಟು ಅಷ್ಟೂ ಇಷ್ಟು ಇತ್ಯಾದಿ ಉದಾ ಇಷ್ಟು ದೊರಕಿದರೆ ವಂತ್ತಷ್ಟು ಬೇಕೆಂಬಾಸೆ ಅಷ್ಟೂ ದೊರಕಿದರೆ ಇನ ಷ್ಟರಾಸೆ

ಕೆಲವು ಪದಗಳು ಹೊಸ ಹೊಸ ಭಾವಗಳಲ್ಲಿ ಅಥವಾ ಬೇರೆ ಬೇರೆ ಪ್ರತ್ಯಯಗಳನು ಹೊಂದಿ ಪ್ರಯೋಗಗೊಂಡಿವೆ ಉದಾ ಊಳಿಗ, ಅಕ್ಕ ತಂದೆ ಸ್ವಾಮಿ ಕಲ್ಲು ಅಂಬಿಗ

ಮಹಾಪ್ರಾಣಾಕ್ಷರಗಳ ಬಳಕೆ ವಿಶಿಷ್ಟರೀತಿಯಲ್ಲಿ ಕಾಣಿಸಿಕೊಂಡಿದೆ ಉದಾ ಇಟಾ ಂಗೆ ಇರುವೆನು ಹರಿಯೆ ಎನ್ನ ಧೊರೆಯೆ ಎಂಬಲ್ಲಿ ಇಟ್ಟ+ಹಾಂಗೆ ಎಂಬ ಪದಗಳ ಸಂಧಿಯಾಗಿ ಟ್ಟ ಮತ್ತು ಹಾ ಗಳಿಗೆ ಪ್ರತಿಯಾಗಿ ಟಾ ಬಂದಿದೆ ಅಂತೆಯೇ ಅಟ್ಟವೆಂಧತ್ತಿ ತಟ್ಟನೆ ಬಿದ್ದನು ಎಂಬಲ್ಲಿ ಅಟ್ಟವೆಂದು+ಹತ್ತಿ ಇವೆರಡರ ಸಂಧಿಯಾಗಿ ಧ ಕಾರ ಬಂದಿದೆ

ಅಚ್ಚಗನ್ನಡ ಪದಗಳು ವಿಪುಲವಾಗಿ ಬಳಕೆಯಾಗಿವೆ ಉದಾ ಅಗಿ ಅರಸು ಅರೆ ಅವು ಆಳು ಇಳಿ ಉಡು ಎಣ್ಣೆ ಎರಡು ಒಂದು ಕದ ಕಲ್ಲು ಕಡಿವೆಂಕೈ ಕಣ್ಣು ಕಿವಿ ಕರಿ ಕರು ಕಾರು (ಕಾರಿದ) ಗಿಡ ತಲೆ ತರು ನೆಲ ನೆಲ್ಲುಂ ನುರು ಬರು ಬೆಚ್ಚನೆ ಬಾಯಿ ಮೆಲ್ಲನೆ ಮೆಲ್ಲಗೆ ಮೊಸರು ಮಜ್ಜಿಗೆ ಸಣ್ಣ ಹೊಳೆ ಇತ್ಯಾದಿ

ಸಂಸ್ಕೃತ ಪದಗಳೂ ಭಾವಕ್ಕನುಗುಣವಾಗಿ ಬಂದಿವೆ ಉದಾ ಅಂಗ ಆಕಾಶ ಆದೇಶ ಉತ್ತರ ಉರಗ ಕುಮಾರ ಗೃಹ ಗಂಧ ಗಗನ ಗದಾ ಗಂಗಾ ದಶ ಧರ್ಮ ದೀನ ದ್ವಾರ ನದಿ ಪಿತ್ಯ ಪಾಂಚ ಪುತ್ರ ಪುರ ಪಾದ ಪತ್ರ ಫಲ ಪುಷ್ಪ ಬಾಣ ಬ್ರಹ್ಮ ಮಾರ್ಗ ಮಾತ್ಯ ಮುನಿ ಮತ ಮೋಕ್ಷ ಮುಖ ಮಹಾ ಯಾತ್ರಾ ಯುಗ ಯುದ್ಧ ಯಮುನೆ ರಾಮ ರಾಶಿ ಸಂಧ್ಯಾ ಸಂಗ ಸಹಸ್ರ ವೇದ ವಿದ್ಯಾ ಶಿರ ಶತ ಶಿವ ಇತ್ಯಾದಿ

ಕೆಲವು ಮರಾಠಿ ಪದಗಳೂ ತಮಿಳು ಪದಗಳೂ ಬಳಕೆಗೊಂಡಿವೆ ಉದಾ

ಮರ ಟಿ ಭವನ ದೇಶ ಪಾಳತಿ ಪ್ರಕಟಿ

ತಮಿಳು ನಾಲು ಎನಕೆ ಇದಂ ಪಣ್ಣಿಕೊ

ಬಾಲಭಾಷೆಯ ಪದಗಳು ವಿಶೇಷವಾಗಿ ನಮ್ಮನ್ನಾಕರ್ಷಿಸುತ್ತವೆ ಉದಾ ಬೂಚಿ ಬಂದಿದೆ ಚಾಚಿ ಕುಡಿದು ಪಾಚಿಕೊಳ್ಳೊ ನಾಲುಮುಖದ ಕಾಕುಮಾಡಿ ಗುಮ್ಮನ ಕರೆಯದಿರೆ ಅಮ್ಮಿಯ ಬೇಡೆನು ಮಮ್ಮು ಉಣಕೇನೆ ಅಂಗಿ ತೊತ್ತೇನೆ ಗೋಪಿ ಡೀ ಡೀ ಆಡೋನೆ ರಂಗ ಅಪ್ಪತ್ತಿಕೊಡು ಬಿತಿ ಬಿತಿ ಬೂವಾ ಉಂದೇನು ನಿನ್ನ ಮಾಡಿದ ಒಬ್ಬಟು ಕೊಡು ಇತ್ಯಾದಿ

ಹರಿದಾಸರ ಅನೇಕ ಕೃತಿಗಳಲ್ಲಿ ವಚನ ಸಾಹಿತ್ಯದ ಪ್ರಭಾವವನ್ನು ಸ್ಪಷ್ಟವಾಗಿ ಗುರುತಿಸಬಹುದು ವಿಶೇಷವಾಗಿ ಉಗಾಭೋಗಗಳ ಮೇಲೆ ವಚನಗಳ ಪ್ರಭಾವ ಉಂಟಾಗಿದೆ ಕೆಲವು ಉಗಾಭೋಗಗಳ ಬಂಧವು ವಚನಗಳ ಬಂಧವನ್ನೇ ಹೋಲುತ್ತದೆ ಉದಾ

ಬಸವಣ್ಣನವರ ವಚನ

ಹರಿವ ಹಾವಿಗಂಜೆ ಉರಿಯ ನಾಲಗೆಗಂಜೆ ಸುರಗಿಯ ಮೊನೆಗಂಜೆ
ಒಂದಕ್ಕಂಜುವೆ ಒಂದಕ್ಕಳುಕುವೆ
ಪರಸ್ತ್ರೀ ಪರಧನವೆಂಬೀ ಜೂಬಿಂಗಂಜುವೆ
ಮುನ್ನಂಜದ ರಾವಣನೇ ವಿಧಿಯಾದ
ಅಂಜುವೆನಯ್ಯಾ ಕೂಡಲಸಂಗಮದೇವಾ

ಪುರಂದರದಾಸರ ಉಗಾಭೋಗ

ಉರಿಗಂಜೆ ಸೆರೆಗಂಜೆ ಶರೀರದ ಭಯಕಂಜೆ
ಹಾವಿಗಂಜೆ ಚೇಳಿಗಂಜೆ ಕತ್ತಿಯ ಧಾರಗಂಜೆ
ಇನ್ನೊಂದಕ್ಕಂಜುವೆ ಇನ್ನೊಂದಕ್ಕಳ ಕುವೆ
ಪರಧನ ಪರಸತಿಗೆರಡಕ್ಕಂಜುವೇನಯ್ಯ
ಹಿಂದೆ ಕೌರವ ರಾವಣರೇನಾಗಿ ಪೋದರು
ಮುಂದೆ ಸಲಹೊ ಪುರಂದರವಿಠಲ

ಈ ರಚನೆಗಳಲ್ಲಿನ ಭಾವ ಭಾಷೆ ಹೆಚ್ಚು ಕಡಿಮೆ ಒಂದೇ ಆಗಿದೆ ಇಂತಹ ಅನೇಕ ಉದಾಹರಣೆಗಳು ಸಿಗುತ್ತವೆ ಇವು ಶಿವಶರಣರಂತೆ ವಚನಗಳನ್ನು ರಚಿಸಲು ಹರಿದಾಸರು ಮಾಡಿದ ಪ್ರಯತ್ನಗಳೇ ? ಎಂಬ ಪ್ರಶ್ನೆಗೆ ಎಡೆಮಾಡಿಕೊಟ್ಟಿವೆ

**ನಾಮಪದಗಳು** ನಾಮಪದವು ಲಿಂಗ ವಚನ ವಿಭಕ್ತಿಗಳಿಂದ ಕೂಡಿರುತ್ತದೆ ಲಿಂಗ ಪ್ರಭೇದವು ಅರ್ಥವನು ಅನುಸರಿಸುವುದರಿಂದ ಅದು ಪ್ರಕೃತಿಯಿಂದಲೇ ಸೂಚಿತವಾಗುತ್ತದೆ ತ್ರಿವಿಧ ಲಿಂಗವ್ಯವಸ್ಥೆಯೂ ದ್ವಿವಿಧ ವಚನ ವ್ಯವಸ್ಥೆಯೂ ಕಂಡು ಬರುತ್ತದೆ ವಚನ ವಿಭಕ್ತಿಗಳು ಸಾಮಾನ್ಯವಾಗಿ ಪ್ರತ್ಯಯಗಳಿಂದ ಸೂಚಿತವಾಗುತ್ತವೆ

ವಸ್ತುವಾಚಕಗಳು ಕೀರ್ತನೆಯಲ್ಲಿ ಬಳಕೆಯಾಗ ವ ವಸ್ತುವಾಚಕಗಳು ಜನ ಬಳಕೆಯ ಲ್ಲಿರುವಂಥ ಸಾಮಾನ್ಯ ಪದಗಳೇ ಆಗಿವೆ ಇವುಗಳನು ರೂಢನಾಮ ಅಂಕಿತನಾಮ ಅನ್ವರ್ಥಕನಾಮ ಎಂಬುದಾಗಿ ವಿಭಾಗಿಸಿಕೊಳ್ಳಬಹುದು ಉದಾ ನದಿ ದೇಶ ರಂಗ ಬೇವು ಕುಂಟ ಯೋಗಿ ರೋಗಿ ಇತ್ಯಾದಿ

ಗುಣವಾಚಕಗಳು ವಸ್ತುಗಳ ಗುಣ ರೀತಿ ಸ್ವಭಾವಗಳನ್ನು ತಿಳಿಸುವಂಥವು ಉದಾ ದೊಡ್ಡ ಚಿಕ್ಕ ಒಳ್ಳೆಯ

ಸಂಖ್ಯಾವಾಚಕಗಳು ಸಂಖ್ಯೆಯನು ಹೇಳುವ ಪದಗಳು ಉದಾ ಒಂದು ಎರಡು ನೂರು' ಹಳಗನ್ನಡದಲ್ಲಿ ಇಲ್ಲದ ಛಪನ್ನ ಬತ್ತೀಸು ತೆತ್ತೀಸು ಮುಂತಾದವೂ ಬಳಕೆಗೊಂಡಿವೆ

ವಿಭಕ್ತಿ ಪ್ರತ್ಯಯಗಳು ಉ ಪ್ರಥಮಾ ವಿಭಕ್ತಿ ಪ್ರತ್ಯಯವೆಂದು ಬಳಕೆಯಾಗಿದೆ ಉದಾ ಕಾಲು ಹಾಲು ಕಾಳು ಬಾಳು ದ್ವಿತೀಯಾ ಪ್ರತ್ಯಯವಾದ— ಅನ್ ಉ ಕಾರವನು ಹೊಂದಿ—ಅನು ಎಂದು ಅಥವಾ ಅನುನಾಸಿಕವನ್ನು ಕಳೆದುಕೊಂಡು ಅ ಎಂದಾಗಿದೆ ಉದಾ ನನ್ನನು ಗಿರಿಯ ಕೊರಳ ತೃತೀಯಾ ಪ್ರತ್ಯಯ ಇಂದು —ಇಂದೆ ಎಂಬವು ಪ್ರಯೋಗಗೊಂಡಿದ್ದರೂ— ಇ ಪ್ರತ್ಯಯವೇ ಹೆಚ್ಚಾಗಿ ಕಂಡು ಬರುತ್ತದೆ ಉದಾ ವ ರದಿ ನೆಲದಿ ಚತುರ್ಥೀ ಪ್ರತ್ಯಯ ಕೆ ಕ್ಕೆ ಗೆ ಉದಾ ಮುಂದಕೆ ಅಕ್ಕೆ ಒಳಗಣ್ಣೆ ಸಪ್ತಮ್ಯರ್ಥದಲ್ಲೂ ಚತುರ್ಥಿಯನ್ನು ಬಳಸಿರುವುದೂ ಉಂಟು ಪಂಚಮೀ ವಿಭಕ್ತಿ ಕನ ಡದಲ್ಲಿಲ್ಲ ದೆಸೆ ಎಂಬುದಕ್ಕೆ ತೃತೀಯಾ ಪ್ರತ್ಯಗಳು ಸೇರಿವೆ ಷಷ್ಠಿ ಪ್ರತ್ಯಯ —ಅ ದ್ವಿತೀಯಾ ವಿಭಕ್ತಿ ಪ್ರತ್ಯಯ ದ ಕೊನೆಯ ಅನುನಾಸಿಕಕ್ಕೆ ಲೋಪವುಂಟಾಗುವುದರಿಂದ ದ್ವಿತೀಯಾ ಷಷ್ಠಿ ಯಲ್ಲಿ ಕೆಲವು ಸಲ ಸಂದೇಹ ತಲೆದೋರುವುದು ಉದಾ ರಾಮನ ಕೃಷ್ಣನ ಸಪ್ತಮೀ ಪ್ರತ್ಯಯ—ಅಲಿ —ಅಲು —ಇ ಉದಾ ನೊಸಲಲಿ ಏಮ್ಮಲಿ ಕೈಯಲು ಬಲದಿ ಸರ್ವನಾಮಗಳು ಪುರುಷವಾಚಕಗಳ ಕೊನೆಯ ನ್ ಕಾರಕ್ಕೆ ಲೋಪವಾಗಿ ನಾ ನೀ ಅವ, ಎಂತಲೂ ಇಲ್ಲವೇ ಅನುನಾಸಿಕಯುಕ್ತವಾಗಿ ಕೊನೆಗೆ ಉ ಕಾರವನ್ನು ಹೊಂದಿ ನಾನು ನೀನು ಅವನು ಎಂಬುದಾಗಿ ಪ್ರಯೋಗಗೊಂಡಿವೆ

**ಕ್ರಿಯಾಪದಗಳು** ಕ್ರಿಯಾರ್ಥವನು ತಿಳಿಸುವ ಪದಗಳಿಗೆ (ಧಾತುಗಳಿಗೆ) ಆಖ್ಯಾತ ಪ್ರತ್ಯಯಗಳು ಸೇರಿ ಕ್ರಿಯಾಪದಗಳಾಗಿವೆ ಧಾತುಗಳಲ್ಲಿ ಮೂಲ ಮತ್ತು ಸಾಧಿತ ಎಂಬ ಎರಡು ವಿಧಗಳವೆ ಉದಾ

ಮೂಲ ಧಾತು ತಿನ್ ಏರ್ ಬಾಳ್ ಕೆರಳ್ ಸಾಧಿತ ಧಾತು ಮಾಡಿಸು ರಕ್ಷಿಸು ಆಲಿಸು ನುಡಿಯಿಸು ಧಾತುಗಳನ್ನು ಸಕರ್ಮಕ ಅಕರ್ಮಕ ಎಂಬದಾಗಿ ವಿಂಗಡಿಸಬಹುದು ಕರ್ಮವನ್ನು ಅಪೇಕ್ಷಿಸುವುವು ಸಕರ್ಮಕ ಅಪೇಕ್ಷಿಸದಿರುವುವು ಅಕರ್ಮಕ

ಸಕರ್ಮಕ ಮಾಡ್ ಉಣ್ ತರ್ ಕೊಯ್ ಅಕರ್ಮಕ ಬದುಕು ಮಲಗು ಇರ್ ಬರ್ ಏಳ್ ವರ್ತಮಾನ ಭವಿಷ್ಯತ್ಕಾಲಗಳಲ್ಲೂ ಪ್ರಯೋಗವಾಗುವ ಪ್ರತ್ಯಯಗಳಲ್ಲಿ ಬರುವ ಪ ಕಾರ ಹ ಕಾರವಾಗುವುದು ವಿಶೇಷವಾಗಿ—ಇರ್ ಬರ್ ಎಂಬ ಧಾತುಗಳಲ್ಲಿ ಬರುವ ಪ ಕಾರಕ್ಕೆ ಮಾತ್ರ ಹ ಕಾರ ಬರುವುದು ಉದಾ ಇಹುದು ಬಹುದು

ಪ್ರಥಮ ಪುರುಷ ವಿಧ್ಯರ್ಥದಲ್ಲಿ— ಅಲಿ ಪ್ರತ್ಯಯ ಹೆಚ್ಚು ಬಳಕೆಯಾಗಿದೆ ಉದಾ ಹೋಗಲಿ ಬರಲಿ ಕೊಳ್ ಎಂಬ ಧಾತು ಕೆಲವೊಮ್ಮೆ ಕೊನೆಯ ವ್ಯಂಜನವನ್ನು ಕಳೆದುಕೊಂಡು ವಿಧ್ಯರ್ಥದಲ್ಲಿ ಪ್ರಯೋಗಗೊಂಡಿದೆ ಉದಾ ನೋಡಿಕೊ

ಕೀರ್ತನೆಗಳಲ್ಲಿ ಕಾಣಿಸಿಕೊಳ್ಳುವ ಮುಖ್ಯವಾದ ಕೆಲವು ಧಾತುಗಳು ಅಪ್ಪು ಆಗೆ ಅರಸು ಅಡಗು ಅಂಜು ಆಳ್ ಇರ್ ಎಳ್ ಒಯ್ ಕದಿ ಕರಿ ಕಳ್ ಕಾಯ್ ಕಾಣ್ ಕೀಳ್ ಕುಡಿ ಕೇಳ್ ಕೊಲ್ ಗೆಲ್ ತಾಳ್ ತಿಳಿ ತಿನ್ ತೂರ್ ದೊರೆ (ದೊರೆಯಿತು) ನಗು ನಲಿ ನಾಚು ನಿಲ ನುಡಿ ನೆನೆ ನೋ (ನೊಂದನು) ಪೇಳ್ ಪೊರೆ ಪೊಳೆ ಪೋ (ಪೋಗು) ಮೇಳ್ ಬರ್ ಬೀಳ್ ಬೇಡ್ ಮಾಡ ಮೀ (ಮೀಯಲ್) ಮೆಲ್ ಸಲಹು ಸವಿ ಸಾಕು ಹೊಳೆ ಇತ್ಯಾದಿ

**ಶೈಲಿ** ಹರಿದಾಸರ ಕೃತಿಗಳಲ್ಲಿ ಕಂಡು ಬರುವ ಶೈಲಿಯನು ಗಮನಿಸಿದಾಗ ದಾಸಸಾಹಿತ್ಯದ ಭಾಷಾ ಸ್ವರೂಪ ಇನ್ನೂ ಹೆಚ್ಚು ಸ್ಪಷ್ಟವಾಗುತ್ತದೆ ಭಾಷೆ–ಭಾವಗಳ ನವ ರಸ ಸಂಯೋಜನೆಯೇ ಶೈಲಿ ಇಲ್ಲದಿದ್ದರೆ ಬರವಣಿಗೆಗೆ ಕಾವ್ಯತ್ವವಿಲ್ಲ ರಸ ಹೊರ ಸೂಸದು ಆನಂದ ಅದೃಶ್ಯ [1] ಆಲೋಚನೆಗೆ ಸಾಕಷ್ಟು ಸಮರ್ಪಕ ಭಾಷೆಯನು ಜೋಡಿಸುವ ಸಮಾರಂಭವೇ ಶೈಲಿ [2] ಎಂದಿದ್ದಾನೆ ಜೆ ಎ ಸಿಮನ್ಸ್ ಚೆಲುವಾದ ಭಾವನೆ ಚೆಲುವಾದ ಭಾಷೆಯ ಕೈ ಹಿಡಿದೇ ಬರುತ್ತದೆ ಕುರೂಪ ಭಾವನೆಗೆ ಕುರೂಪ ಭಾಷೆಯೇ ಸಂಗಾತಿ ವಿಶಾಲ ಭಾವನೆ ಸಂಕುಚಿತ ಭಾಷೆಯೊಡನೆ ಎಂದಿಗೂ ಸೇರದು ನೀಚ ಭಾವನೆಗೆ ಕೋಮಲ ಭಾಷೆಯ ಸಂಬಂಧವಿಲ್ಲ [3] ಭಾಷೆಯ ಮೇಲೆ ಸಂಪೂರ್ಣವಾದ ಹಿಡಿತವುಳ್ಳವರಿಗೆ ಈ ಮಾತು ಅನ್ವಯವಾಗುತ್ತದೆ ಭಾಷೆಯೇ ಕರಗತವಾಗದ ಕವಿಗಳಲ್ಲಿ ಭಾವನೆ ಉತ್ತಮವಾದರೂ ಸಮರ್ಪಕವಾದ ಭಾಷಾಪ್ರಯೋಗವಿಲ್ಲದೆ ಕವಿಯ ಭಾವನೆ ಸಮರ್ಪಕವಾಗಿ ಪ್ರಕಟವಾಗದಿರಬಹುದು ಆದದರಿಂದ ಭಾಷೆ – ಭಾವಗಳೆರಡೂ ಕವಿಯಲ್ಲಿ ಪಕ್ವವಾದರೆ ಅವನ ಕಾವ್ಯ ರಸಾನುಭವನ್ನುಂಟು ಮಾಡುತ್ತದೆ ಎನ್ನಬಹುದು ಶಬ್ದಸಂಪತ್ತಿನ ಶಕ್ತಿಯುಳ್ಳ ಕವಿ ತನ್ನ ಭಾವನೆಗಳನ್ನು ನಾನಾ ವಿಧವಾಗಿ ಭಾಷಾ ಹಂದರದಲ್ಲಿ ಹಬ್ಬಿ ಲೋಕವನ್ನೇ ವಿಸ್ಮಯಗೊಳಿಸಬಲ್ಲವನಾಗುತ್ತಾನೆ [4] ಭಾಷೆ ಮತ್ತು ಶೈಲಿಯನ್ನು ಕುರಿತ ಈ ಸೂತ್ರಗಳು ದಾಸ ಸಾಹಿತ್ಯದಲ್ಲಿ ಎಷ್ಟರ ಮಟ್ಟಿಗೆ ಸಿದ್ಧಿಸಿವೆ ಎಂಬುದನು ಪರಿಶೀಲಿಸಬಹುದು

ದಾಸ ಸಾಹಿತ್ಯದಲ್ಲಿ ಪದ ಜೋಡಿ ಬಹು ಸುಂದರವಾಗಿದೆ ಕೀರ್ತನೆಗಳಲ್ಲಿ ಪಂಕ್ತಿಯ ಎರಡನೆಯ ಅಕ್ಷರದ ಪ್ರಾಸದ ಜೊತೆಗೆ ಕೊನೆಯ ಅಕ್ಷರದ ಪ್ರಾಸಗಳೂ

---

1 ಡಾ ಎಸ್ ವಿ ರಂಗಣ್ಣ ಶೈಲಿ ೧ ಪುಟ ೨

2 ಅದೇ ಪುಟ ೭

3 ಡಾ ಕೆ ಎಂ ಕೃಷ್ಣರಾವ್ ಶ್ರೀ ಜಗನ್ನಾಥದಾಸರು ಪುಟ ೩೨೧ ೧೯೫೩

4 ಡಾ ಕೆ ಗೋಕುಲನಾಥ್ ಶ್ರೀ ವಿಜಯ ದಾಸರು—ಜೀವನ ಮತ್ತು ಕೃತಿಗಳ ಸಮೀಕ್ಷೆ ಪುಟ ೨೯೪, ೯೭೭

ಪಂಕ್ತಿಯ ನಡುವೆ ಮಧ್ಯ ಪ್ರಾಸಗಳೂ ಬಂದು ಕಾವ್ಯ ಸೌಂದರ್ಯವನ್ನು ಹೆಚ್ಚಿಸಿವೆ ಪ್ರಾಸಗಳಲ್ಲಿ ಸ್ವರಗಳೂ ಲ ನ ಸ ಮ ವ ಮುಂತಾದ ಲಲಿತ ವರ್ಣಗಳೂ ಬಹು ಮುದ್ದಾಗಿ ಸೇರಿಕೊಂಡು ಉಚ್ಚಾರ ಮಾತ್ರದಿಂದ ಮನಸ್ಸಿನ ಅಭಿಪ್ರಾಯವು ಹೊರ ಸೂಸಿ ಬರುವಂತ ಮನೋಹರವಾಗಿದೆ ಸಂಗೀತದ ಸಹಕಾರವೂ ಸೇರಿರುವುದರಿಂದ ಕಾವ್ಯದಲ್ಲಿ ರಸವು ಉಕ್ಕಿ ಬರುತ್ತದೆ ರಸ ಪೋಷಣೆಯನ್ನು ಚೆನ್ನಾಗಿ ಮಾಡಬಲ್ಲ ಅಕ್ಷರಯುತ ಶಬ್ದಗಳು ಹಾಡುಗಳಲ್ಲಿ ರಮ್ಯವಾಗಿ ಹೆಣೆದು ಕೊಂಡಿವೆ [1]

ದಾಸರ ಕೃತಿಗಳಲ್ಲಿ ಕಾಣಸಿಕೊಳ್ಳುವ ಪ್ರಾಸದ ಸೌಂದರ್ಯ ಸಹಜವಾದುದು ಪ್ರಾಸಕ್ಕಾಗಿಯೇ ಅನುಚಿತ ಪದಗಳನ್ನು ಪ್ರಯೋಗಿಸದೆ ಅರ್ಥ ದೃಷ್ಟಿಯಿಂದ ಆದಿ ಮಧ್ಯ ಮತ್ತು ಅಂತ ಪ್ರಾಸಗಳನ್ನು ಬಳಸಿದ್ದಾರೆ ಭಕ್ತಿಯ ಭರದಲ್ಲಿ ಭಾವಪೂರಿತವಾಗಿ ಹಾಡಲು ಅನುಕೂಲವಾಗುವ ನಿರರ್ಗಳ ಓಟವುಳ್ಳ ಪದಗಳು ವಿಶೇಷವಾಗಿ ಆಕರ್ಷಿಸುತ್ತವೆ ಅವುಗಳ ಬಂಧಕ್ಕೆ ಸೋಲುತ್ತೇವೆ ಉದಾಹರಣೆ
ಆದಿ ಮಧ್ಯ ಅಂತ್ಯ ಪ್ರಾಸಗಳು

ದೇವ ಬಂದ ನಮ್ಮ ಸ್ವಾಮಿ ಬಂದನೋ
ದೇವರ ದೇವ ಶಿಖಾಮಣಿ ಬಂದನೋ
ಉರಗ ಶಯನ ಬಂದ ಗರುಡಗಮನ ಬಂದ
ನರಗೊಲಿದವ ಬಂದ ನಾರಾಯಣ ಬಂದ

ಪಕ್ಷಿವಾಹನ ಲಕ್ಷ್ಮೀರಮಣ
ಲಕ್ಷ್ಮೀ ನಿನ್ನ ವಕ್ಷದಲ್ಲಿ
ರಕ್ಷಃಶಿಕ್ಷಣ ದಕ್ಷ ಪಾಂಡವ
ಪಕ್ಷರಕ್ಷ ಕಮಲಾಕ್ಷ

(ಪುರಂದರದಾಸ)

ಕಸ್ತೂರಿಯ ಬೊಟ್ಟು ಕಂಗಳಿಗೆ ಕಾಡಿಗೆ ಹಚ್ಚಿ
ಮತ್ತೆ ಕದಪಿನಲಿ ಕುಂಕುಮವನೊತ್ತಿ

ಯೋಗಿಗಳೆಲ್ಲ ಜಯ ಜಯ ಜಯವೆನ್ನೆ
ಭೋಗಿಗಳೆಲ್ಲ ಭಯ ಭಯ ಭಯವೆನ್ನೆ

---

1 ಡಾ ಕೆ ಎಂ ಕೃಷ್ಣರಾವ್ ಶ್ರೀ ಜಗನ್ನಾಥದಾಸರು ಪು ೭೧

ಯಮಕ

ರಂಗ ಬಾರೋ ಪಾಂಡುರಂಗ ಬಾರೋ
ರಂಗ ಬಾರೋ ನರಸಿಂಗ ಬಾರೋ
ಕಂದ ಬಾರೋ ಎನ ತಂದೆ ಬಾರೋ
ಇಂದಿರಾ ರಮಣ ಮುಕುಂದ ಬಾರೋ

(ಪುರಂದರದಾಸ)

ಮರಿದು ಮರಿದು ಭಾರತದರ್ಥವ । ಅರಿದು ಅರಿದು ಮರ ಭಾಗವತ ।
ಪರಿಯ ಪರಿಯ ಪುರಾಣಕೃತಿಯನಾ।

ಪಾರಾಣ ಮಾಡಿ ಕುರುಡ ಬಧಿರಾ । ನರರ ತೆರದಿ ಅರಹು ಮರವು ।
ಬೆರೆತು ಬೆರೆತು ತಾರಕವಿಲ್ಲಾದೆ।
(ಶ್ರೀ ಪ್ರಸನ್ನ ವೆಂಕಟದಾಸರು)

## ಚಿತ್ರಕವಿತೆ

ಅಕ್ಷರಗಳನೂ ಪದಗಳನ್ನೂ ಕ ಶಲತೆಯಿಂದ ಆರಿಸಿ ಜೋಡಿಸಿ ಕವಿಗಳು ಉಂಟುಮಾಡುವ ಶಬ್ದ ವೈಚಿತ್ರ್ಯಕ್ಕೆ ಚಿತ್ರಕವಿತ್ವವೆಂದೂ ಹೆಸರು ದಾಸರ ಕೃತಿಗಳಲ್ಲಿ ಚಿತ್ರ ಕವಿತೆಗಳಿಗೆ ಕೊರತೆಯಿಲ್ಲ ಪದ್ಯದಲ್ಲಿ ಒಂದು ಪದವನ್ನೇ ಪ್ರತಿಯೊಂದು ಸಾಲಿನಲ್ಲಿಯೂ ಪ್ರಯೋಗಿಸಿ ಪುರಾಣ ಕಥೆಗಳನ್ನು ನೆನಪಿಸುತ್ತಾ ತತ್ತ್ವಗಳನ್ನೂ ತಿಳಿಸಿಕೊಟ್ಟಿದ್ದಾರೆ ಸಾಮಾನ್ಯವಸ್ತುವನ್ನಾರಿಸಿಕೊಂಡು ತತ್ತ್ವಪ್ರತಿಪಾದನೆ ಮಾಡುವುದರ ಮೂಲಕ ದಾಸರು ತಮ್ಮ ಪ್ರತಿಭೆಯನ್ನೂ ಕೌಶಲವನ್ನೂ ಮೆರೆದಿದ್ದಾರೆ ಉದಾಹರಣೆಗೆ

ಕಲ್ಲಿನಿಂದ ಸರ್ವಫಲ ಬಾಹುದೋ ॥ಪ॥
ಕಲ್ಲು ಭಜಿಸಿದರೆ ಕೈವಲ್ಯ ತೋರುವುದು ॥ಅ ಪ ॥

ಕಲ್ಲು ಕಡೆಯುತ್ತಿರಲು ಅಮೃತವೇ ಪುಟ್ಟಿತು
ಕಲ್ಲು ಎತ್ತಲು ವಾಳಿಯೊಳೆಲ್ಲರು ಉಳಿದರು
ಕಲ್ಲು ಹರಿಪಾದನು ಸೋಕೆ ಹೆಣ್ಣಾಯಿತು
ಕಲ್ಲು ಲಂಕೆಗೆ ಮಾರ್ಗ ಚೆನ್ನಾಗಿ ಶೋಭಿಸಿತು ॥

(ಶ್ರೀ ವಿಜಯದಾಸರು)

ಐದು ಮಂದಿ ಭಾವನವರು ಐದು ವೈದ್ಯನರು ಕೂಡಿ
ಐದು ಪರಿ ತಾನಾಗಿ ಮಾವನ್ನೈದು ಕತ್ತಲೆ ಕೋಣೆ

ಗೈದ ಪಂತೆ ಮಾಡುವರು ಐದು ತಂದು ಬೆಚ್ಚಿಸುವರು
ಐದನೆ ಬೊಕ್ಕಸದ ಮನೆಯೆಲ್ಲಿದೆಯೋ ನಾ ಕಾಣೆ
(ಶ್ರೀ ಗೋಪಾಲದಾಸರು)

## ಸ್ವಭಾವೋಕ್ತಿ

ದಾಸರು ವ್ಯಾಪಕರೆತು ಹಾಡಿದ ಹಾಡುಗಳಲ್ಲಿ ಸ್ವಭಾವೋಕ್ತಿಗಳು ನೈಜವಾಗಿ ಅಪ್ರಯತ್ನಪೂರ್ವಕವಾಗಿ ಬಂದಿವೆ ಶ್ರೀಕೃಷ್ಣನ ಬಾಲಲೀಲೆಗಳನ್ನು ವರ್ಣಿಸುವಲ್ಲಿ ಸ್ವಭಾವೋಕ್ತಿ ಹೆಚ್ಚಾಗಿ ಬಳಕೆಯಾಗಿದೆ ತಾಯಿ ತನ್ನ ಕೂಸಿನೊಂದಿಗೆ ಆಡುವ ಮುದ್ದಾಟಗಳು ಮಗುವಿನ ಬಾಲಲೀಲೆಗಳು ವಿನೋದಗಳು ಅಂದಚೆಂದಗಳು— ಇವನ್ನೆಲ್ಲಾ ದಾಸರು ಸಹಜವಾಗಿ ಕಣ್ಣಿಗೆ ಕಟ್ಟುವಂತೆ ವರ್ಣಿಸಿದ್ದಾರೆ ಪುರಂದರ ದಾಸರ ಲಾಲಿಸಿದಳು ಮಗನ ಯಶೋದೆ ಎಂಬ ಕೀರ್ತನೆ ಸ್ವಭಾವೋಕ್ತಿಗೆ ಉತ್ತಮ ಉದಾಹರಣೆ

ಬಿಗಿದ ಪಟ್ಟಿಯಲಿ ಬಾಯಿ ತಲೆಯು ಹೊಳೆಯುತಿರೆ
ಚಿಗುಟುತ ಎಡದ ಕೈಯಲಿ ಕುಚವ
ನಗುತ ನಾಚುತ ಗೋಪಿಯ ಮುಖ ನೋಡುತ
ಮಿಗೆ ನಲಿನಲಿದುಂಡ ಪುರಂದರವಿಠಲ (ಪುರಂದರದಾಸರು)

ಚರಣತಳದಲ್ಲಿ ಕೆಂಪುಶುದ್ಧ
ಅರವಿಂದ ಧ್ವಜವಜ್ರ ಸೊಪು ಸ್ತುತಿ
ಪರಿಗೆ ಸುರಭೂಜ ತಂಪುನೋಟ (ಶ್ರೀವಿಜಯದಾಸರು)

## ದೇಸಿ ಪದಗಳು

ಕೀರ್ತನೆಗಳಲ್ಲಿ ಪ್ರಯೋಗಗೊಂಡಿರುವ ದೇಸಿ ಪದಗಳು ತಮ್ಮ ಅಪೂರ್ವತೆಯಿಂದ ಗಮನಾರ್ಹವಾಗಿವೆ ಸಾಹಿತ್ಯಿಕ ಮೌಲ್ಯವನ್ನು ತಂದುಕೊಟ್ಟಿವೆ ನಿದರ್ಶನಕಾಗಿ ಪುರಂದರದಾಸರ ಮತ್ತು ಕನಕದಾಸರ ಕೃತಿಗಳಲ್ಲಿ ಕಂಡುಬರುವ ಕೆಲವು ದೇಸಿ ಪದಗಳ ಚೆಲುವನ್ನು ಗಮನಿಸಬಹುದು ಪುರಂದರರ ಲೋಕಾನುಭವ ಅಪಾರವಾದುದು ಅವರು ಲೋಕಸಂಚಾರವನ್ನು ಕೈಗೊಂಡಾಗ ಸಮಾಜದ ವಿಭಿನ್ನ ವ್ಯಕ್ತಿಗಳೊಂದಿಗೆ ಬೆರೆತ ಕಾರಣ ಅವರ ಲೋಕಾನುಭವ ವಿಸ್ತಾರವಾಯಿತು ವ್ಯಾಪಾರಿಗಳು ಒಕ್ಕಲಿಗರು ತಿರುಕರು ಬೇಡರು ಬೆಸ್ತರು ಮುಂತಾದವರ ಆಡುನುಡಿಯನ್ನು ತಮ್ಮ ಕೀರ್ತನೆಗಳಲ್ಲಿ ಸಮರ್ಥವಾಗಿ ಬಳಸಿಕೊಂಡಿದ್ದಾರೆ ಈ ನುಡಿಗಳು ಜನರ ಜಾನಪದವನ್ನು ಬಿಂಬಿಸುವುದರಿಂದ ಅತ್ಯಂತ ಪರಿಣಾಮಕಾರಿಯಾಗಿದೆ ಪ್ರಭಾವಯುತವಾಗಿದೆ ನಿದರ್ಶನಕ್ಕಾಗಿ ಒಂದೆರಡನ್ನು ನೋಡಬಹುದು

ಬುಡುಬ ಡುಕೆಯವನು ಹಾಲುಹಕ್ಕಿಯು ನುಡಿಗಳನ್ನು ಕೇಳಿ ಲೋಕದ ಘಟನೆಗಳನ್ನು ಹೇಳುತ್ತಾನೆ. ಪುರಂದರರು ಶುಕವೆಂಬ ಹಕ್ಕಿಯಿಂದ ಕೇಳಿಸಿಕೊಂಡದ್ದನ್ನು ಈ ರೀತಿ ಹೇಳುತ್ತಿದ್ದಾರೆ

ಜಯವಾದೆ ಜಯವದೆ ಈ ಮನೆತನಕೆ ।
ಭಯ ವಿಲ್ಲ ಎಂದೆಂದಿಗೂ ನಿಜವು ।
ಬಿಡು ಬಿಡು ಬಿಡು ಬಿಡು ಮನ ಸಂಶಯವ ।
ಶ ಕನೆಂಬ್ಹಕ್ಕಿ ಹೇಳುತದಪ್ಪ । ಜಗವೆಂಬಾ ಗಿಡ ಹುಟ್ಟ್ಯೆತಣ್ಣ
ಹಣ್ಣುಗಳೆರಡು ಬಿದಾವಪ್ಪ । ಮೂರು ಬುಡ ಗಿಡದ ಕೆಳಣ್ಣ ।

ಹೊನ್ನು ಹೆಣ್ಣು ಮಣ್ಣು ಎಲ್ಲವೂ ಅಸ್ಥಿರ ಇದನ್ನು ಅರುಹುವ ಪದ್ಯವಿದು

ಲೊಳಲೊಟ್ಟೆ ಎಲ್ಲಾ ಲೊಳಲೊಟ್ಟೆ
ಆನೆ ಕುದ ರೆ ಒಂಟೆ ಲೊಳಲೊಟ್ಟೆ
ಸೇನೆ ಭಂಡಾರವು ಲೊಳಲೊಟ್ಟೆ
ಮಾನಿನಿಯರ ಸಂಗ ಲೊಳಲೊಟ್ಟೆ
ದೊಡ್ಡಕ್ಷೋಣಿಶನೆಂಬುದು ಲೊಳಲೊಟ್ಟೆ
ಮುತ್ತು ಮಾಣಿಕ್ಯ ಲೊಳಲೊಟ್ಟೆ
ಚಿನ ಛತ್ರ ಚಾಮರ ಧ್ವಜ ಲೊಳಲೊಟ್ಟೆ
ಸುತ್ತುಗಲ ಕೋಟೆ ಲೊಳಲೊಟ್ಟೆ
ಕಂಟಿಕರೆಂಬೋದು ಲೊಳಲೊಟ್ಟೆ
ನೆಂಟರು ಇಷ್ಟರು ಲೊಳಲೊಟ್ಟೆ
ಗುಣನಿಧಿ ಪುರಂದರ ವಿರಲನ
ಬಂಟನಾಗದವ ಲೊಳಲೊಟ್ಟೆ

ಕನಕದಾಸರ ಭಾಷೆ ಪುರಂದರದಾಸರ ಭಾಷೆಗಿಂತ ಹೆಚ್ಚು ಗ್ರಾಮ್ಯವೂ ಶಕ್ತಿಯುಕ್ತವೂ ಆಗಿದೆಯೆಂಬುದಕ್ಕೆ ಅವರ ದೇವಿ ನಮ್ಮ ದೇವರು ಬಂದರು ಬನಿ ರೆ ಎಂಬ ಹಾಡಿನ ಕೆಲವು ಸಾಲುಗಳನು ಗಮನಿಸಬಹುದು

ದೊಡ್ಡ ಮಡುವಿನೊಳೆ ನಮ್ಮ ರಂಗ
ಗುಡ್ಡವ ಹೊತ್ತುಕೊಂಡು ನಿಂತಾನ್ಯೆ
ಗುಡ್ಡವ ಹೊತ್ತುಕೊಂಡು ನಿಂತು ಸುರರನು
ಡೊಳ್ಳಿನ ಮೇಲ್ ಕೈಯ ಭರಮಾಪ್ಪ ಹಾತ್ಯಾನ

ತಾಳವ ಶಿವನಪ್ಪ ತಾಟ್ಯಾನ್ಯಾ
ಒಳ್ಳೊಳ್ಳೆ ಪದಗಳ ಹನುಮ ಪ್ಪ ಹಾದ್ಯಾನಂ
ಚೆಲ ವ ಕನಕಪ್ಪ ಕುಣಿದಾನ್ಯಾ

ದಾಸರ ಭಾಷಾಪ್ರಯೋಗದಲ್ಲಿ ಕಂಡು ಬರುವ ವೈಶಿಷ್ಟ್ಯವೆಂದರೆ ಗಾದೆ ಮಾತುಗಳು ತಮ್ಮ ಜೀವನಾನುಭವದಿಂದ ಹೊಸ ಹೊಸ ನುಡಿಗಟ್ಟುಗಳ ಗಾದೆಗಳ ಪ್ರಯೋಗ ವನ್ನು ತಮ್ಮ ಕೃತಿಗಳಲ್ಲಿ ತಂದಿದ್ದಾರೆ ಉದಾಹರಣೆಗೆ ರವ ಣನಿಲ್ಲದ ನಾರಿ ಪರರ ಕಣ್ಣಿಗೆ ಮಾರಿ ಕೋಳಿಗೆ ಯಾಕೆ ಹೊನ ಪಂಜರ ಬೋಳಿಗೆ ಯಾಕೆ ಜಾಜಿ ಮಲ್ಲಿಗೆ ಬ ವಿ ತೋಡಿದರೆ ಬೇತಾಳ ಹೊರಟಿತು ರೊಕ್ಕ ಎರಡಕ್ಕೂ ದುಃಖ ಕಾಣಕ್ಕ ಹರಿ ಕೊಟ್ಟ ಕಾಲಕ್ಕ ಉಣಲಿಲ್ಲ ಓಡಿ ಹೋಗುವ ಮ ಡಿಯು ಮಾಡಿ ದಣಿಯಲು ಬೇಡ ಅರಿತವರಿಗತಿ ಸುಲಭ ಹರಿಯ ಪೂಜೆ ದೇವಗಂಗೆಯು ತಡಿಯ ಭ ವಿ ತೋಡುವನಂತೆ ನಡೆವುದೇ ಹರಿಯಾತ್ರೆ ನುಡಿವುದೇ ಹರಿನಾಮ ಅರಸು ಮುಟ್ಟಿದ ನಾರಿ ಮಾನ್ಯಳು ಪರುಸು ಮುಟ್ಟಿದ ಲೋಹ ಚಿನ್ನ ಕುನ್ನಿ ಕಟ್ಟಿದ ರಾನೆ ಆಳ ಕುವುದೇ ಅರಸು ಒಲಿದ ಮೇಲೆ ಪಿಸುಣರ ಭಯವುಂಟೆ ಇತ್ಯಾದಿ

ದಾಸರ ದೃಷ್ಟಿಯ ಲ್ಲಿ ತತ್ತ್ವ ಭಕ್ತಿ ಮುಖ್ಯವೇ ಹೊರತು ಭಾಷೆಯಲ್ಲ ಭಾಷೆ ಬದಲಾದರೂ ತತ್ತ್ವ ಭಾವ ರಸ ರಹಸ್ಯ ಒಂದೇ ಭಾಷಾ ಭೇದದಿಂದ ಅಧ್ಯಾತ್ಮಜ್ಞಾನ ಸಂಪಾದನೆಗೆ ಅಡಿಯಾಗಬಾರದು ದಾಸ ಪ್ರಮುಖರು ಸಂಸ್ಕೃತ ಸಾಹಿತ್ಯ ಶಾಸ್ತ್ರಗಳಲ್ಲಿ ಪಂಡಿತರು ಆದುದರಿಂದ ಸಂಸ್ಕೃತದ ಪ್ರಭಾವ ಅವರ ಕೃತಿ ಗಳಲ್ಲಿ ಕಾಣಿಸಿಕೊಳ್ಳುವುದು ಸಹಜ ಕನ್ನಡ ಆಡು ನುಡಿಯನ್ನು ಹೇಗೆ ಲೀಲಾ ಜಾಲವಾಗಿ ಬಳಸಿದ್ದಾರೆಯೋ ಹಾಗೆಯೇ ಸಂಸ್ಕೃತ ಪದಗಳನ್ನೂ ಬಳಸಿದ್ದಾರೆ ಉದಾಹರಣೆಗೆ

ಪಾಹಿ ಮಾಂ ಸೀತಾಪತೆ । ಪಾಹಿ ಮಾಂ ಕೃಷ್ಣ ಪಾಹಿ ।
ನವನೀತ ಚೋರ ಶತಪತ್ರಾಯಂತ ನೇತ್ರಾ ದಾತಾಪತ್ಯ ಅಸ್ಮೃತ ಪಾಪ
ಪಂಕ ಶೋಷಾ ಪುನಃ ಪುನಃ ಕಮನೀಯತರ ಗಾತ್ರನಾ ಅರುಣ
ಕವ ಲಾಯಂತ ನೇತ್ರ ಪಾಥೇಯಂ ಸ್ಮಿತವದನ

(ಶ್ರೀ ಪ್ರಸನ್ನ ವೆಂಕಟದಾಸರು)

ದುರ್ಗಾ ದುರ್ಗೆಯ ಮಹಾ ದುಷ್ಟ ಜನ ಸಂಹಾರಿ
ದುರ್ಗಾಂತರ್ಗತ ದುರ್ಗೆ ದುರ್ಲಭೆ
ದುರ್ಗಮವಾಗಿದೆ ನಿನ್ನ ಮಹಿಮೆ ಬೊಮ್ಮ
ಭರ್ಗಾತಿಗಳೆಲ್ಲ ಗುಣಿಸಿದರೂ

(ಶ್ರೀ ವಿಜಯದಾಸರು)

ಪಾಲಿಸೆನ್ನ ಗೋಪಾಲಕೃಷ್ಣ । ವ್ಯಾಪ್ತ ಗುಪ್ತ ಜಗದ ಪ್ತ ।
ದೋಷ ನಿರ್ಲಿಪ್ತ ತೃಪ್ತ ಗತಸುಪ್ತ ಸುಷುಪ್ತ

(ಶ್ರೀ ಜಗನಾ ಥ ದಾಸರು)

ಇದುವರೆಗೆ ದಾಸ ಸಾಹಿತ್ಯದ ಭಾಷಾ ಸ್ವರೂಪವನು ಕಂಡುಕೊಳ್ಳುವ ಪ್ರಯ ತ ತಕ ವ ಟ್ಟಿಗೆ ನಡೆದಿದೆ ಐದು ಶತಮಾನಗಳ ದ್ದಕೂ ಹರಡಿಕೊಂಡಿರ ವ ಹರಿದಾಸ ಸಾಹಿತ್ಯದ ಅನೇಕ ಕೃತಿಗಳನು ಅರ್ಥಮಾಡಿಕೊಳ್ಳುವುದಕ್ಕೆ ಶಾಸ್ತ್ರಜ್ಞಾನ ಸಾಹಿತ್ಯಜ್ಞಾನ ಭಾಷಾಜ್ಞಾನಗಳು ವಿಶೇಷವಾಗಿ ಬೇಕು ಹೀಗೆಂದ ಮಾತ್ರಕ್ಕೆ ಹರಿದಾಸರ ಹಾಡ ಗಳು ಕೇವಲ ವೆ ದ ಂತವನೇ ಹೇಳುವ ಬರಡು ನುಡಿಗಳಲ್ಲ ಜಿ ವನಕ್ಕೆ ಸಂಬಂಧಿಸಿದಂತೆ ಇಹಕ್ಕೂ ಪರಕ್ಕೂ ಸಾಧನವಾಗುವ ತೆ ಒ ವನ ಸುಖ ಮಯ ಸುಂದರವಾಗ ವಂತೆ ಆನಂದವನು ತಂದ ಕೊಡುವಂತೆ ಇರುವ ಉತ್ತಮ ಸಾಹಿತ್ಯದ ಸೊಗಸು ಅವುಗಳಲ್ಲಿದೆ ದಾಸರ ಪದಗಳನ್ನು ಓದುವಾಗ ರಾಗ ತಾಳ ಕಾಲಗತಿಯನು ಅನುಸರಿಸಿದರೆ ಸಾಹಿತ್ಯದ ಗಾಂಭೀರ್ಯ ಶಬ್ದ ಸಂಪತ್ತು ಅರ್ಥ ಪೂರ್ಣತೆ ರಸಭಾವಗಳ ಆವಿರ್ಭಾವ ಒಂದೊ ದೂ ವಿವರವಾಗಿ ತಿಳಿದು ಅನುಭವಿ ಸುವುದರಿಂದ ಆಗುವ ಆನಂದ ಅಷ್ಟಿಷ್ಟಲ್ಲ ಕನ ಡವು ಎಳೆದಂತೆ ಬರುವ ಸರಳ ಭಾಷೆಯೆಂಬುದನ್ನು ದಾಸ ಸಾಹಿತ್ಯ ಸಾಧಿಸಿ ತೋರಿಸಿ ದೆ ಕನ ಡ ನುಡಿಯ ಸೊಬಗು ಸಂಭ್ರಮ ಶಬ್ದಗಳ ಮಧುರ ಜೋ ಡಣೆ ಲೀಲಾಜ ಲ ಶೈಲಿಯಿಂದ ಹೊಸ ಮಾಗ ಸ್ಥಾಪಿಸಿ ಹರಿದಾಸರು ಭಾಷೆಯನ್ನು ಬೆಳೆಸಿದ್ದಾರೆ

---

6 ಡಾ ಕೆ ಎಂ ಕೃಷ್ಣರಾವ್ ಶ್ರಿ ಜಗನ್ನಾಥದಾಸರು ಪುಟ ೬೦ ೧೯೫೩

# ದಾಸ ಸಾಹಿತ್ಯದಲ್ಲಿ ದೇಸಿ

ಪ್ರಧಾನ್ ಗುರುದತ್ತ

ಕನ್ನಡ ಸಾಹಿತ್ಯದ ತವನಿಧಿಗಳಲ್ಲಿ ಒಂದು [1] ಎಂಬ ಪ್ರಶಂಸೆಗೆ ಪಾತ್ರವಾಗಿರುವ ಜನತೆಯ ಜೀವನಾಡಿಯನು ಪರಿಶುದ್ಧಗೊಳಿಸಿ [2] ಕನ್ನಡದ ಭಾಷಿಕ ಶಕ್ತಿಯ ಬಹು ಆಯಾಮಗಳನು ಸೆರೆದು ತೋರಿರುವ [3] ಭಾರತೀಯ ಸಂಗೀತ ಶಾಸ್ತ್ರದ ಇತಿಹಾಸದಲ್ಲಿ ಕರ್ನಾಟಕವನು ಅವ ರವಾಗಿಸಿರುವ ಅಷ್ಟೇ ಅಲ್ಲ ಸಾಹಿತ್ಯ ಸಂಗೀತಗಳ ಅಪೂರ್ವ ಸಾಮರಸ್ಯವ ನ್ನು ಮೆರೆದಿರುವ[4] ಹಾಗೂ ಈ ಎಲ್ಲ ಕಾರಣಗಳಿಂದಾಗಿ ಕನ್ನಡ ಸಾಹಿತ್ಯಕ್ಕೆ ಜಾಗತಿಕ ಮಹತ್ವವನ್ನು ತಂದು ಕೊಟ್ಟಿರುವ ಹರಿದಾಸ ಸಾಹಿತ್ಯ ಕನ್ನಡದ ಹೆಮ್ಮೆಯ ಸಾಧನೆಗಳಲ್ಲಿ ಒಂದಾಗಿದೆ

ಕರ್ನಾಟಕದ ಸ ಂಸ್ಕೃತಿಕ ಮತ್ತು ಧಾರ್ಮಿಕ ಜೀವನದಲ್ಲಿ ದಾಸಸಾಹಿತ್ಯದ ಮಹತ್ವವೇನೆಂಬುದನ್ನು ಅರಿಯದವರಿಲ್ಲ ಸಾರ್ವಜನಿಕ ಜೀವನದಿಂದ ದಾಸರನ್ನು ಬೇರ್ಪಡಿಸಿದರೆ ವೇದಾಂತದ ಪರಮೋಚ್ಚ ತತ್ವಗಳ ಮತ್ತು ದುಡಿಮೆಯೇ ಉಸಿರಾಗಿರುವ ಜನಸಾಮಾನ್ಯರ ನಡುವೆ ಧ್ರುವಗಳಷ್ಟು ಅನಂತರ ಏರ್ಪಡುತ್ತದೆ ಉಪನಿಷತ್ತಿನ ಕ್ಲಿಷ್ಟ ಚಿಂತನೆಗಳನ್ನು ಸರಳ ಸುಂದರ ಕನ್ನಡಭಾಷೆಯಲ್ಲಿ ವಿಶ್ಲೇಷಿಸಿಕೊಡಲಾಗಿದೆ ಹಾಗೂ ಇಂಪಾದ ಗೀತೆಗಳ ರೂಪದಲ್ಲಿ ಅವುಗಳನ್ನು ಅಳವಡಿಸಲಾಗಿದೆ ಈ ನಾಡಿನ ಮನೆ ಮನೆಯ ಮುಂದೆ ಅವು ಮೊಳಗುತ್ತಿವೆ ಮಾನವ ಹೃದಯ ತುಂಬ ಆನಂದದಿಂದ ಅಂಟಿಕೊಳ್ಳಬಹುದಾದಂಥ ಗೀತಗಳು ಇವು [5] ಎಂದೂ ಅವರ ಹಾಡುಗಳಲ್ಲಿರುವ ಮೃದು ಮಧುರ ಸಂದೇಶಕ್ಕೆ ಮನಸ್ಸನು ನೇರವಾಗಿ ತಟ್ಟಬಲ್ಲಂಥ ಎಂಥ ಅಪೂರ್ವವಾದ ಶಕ್ತಿಯಿದೆ ಎಂದರೆ ಉದಾತ್ತ ಆವೇಶಕ್ಕೆ ಒಳಗಾಗಬಹುದಾದಂಥ ಯಾವ ಹೃದಯವೂ ಎಂದೂ ತನ್ನನ್ನು ತಾನು ತಡೆದುಕೊಳ್ಳಲಾರದು [6] ಎಂದೂ ವಿದ್ವಾಂಸರು ಹರಿದಾಸ ಸಾಹಿತ್ಯದ ಹಿರಿಮೆಯನು ಬಗೆಬಗೆಯಾಗಿ ಹಾಡಿಹೊಗಳಿದ್ದಾರೆ

ಜಾಗತಿಕ ಧಾರ್ಮಿಕ ಸಾಹಿತ್ಯ ಅಸಂದಿಗ್ಧ ರೂಪದಲ್ಲಿ ಸ್ಪಷ್ಟಪಡಿಸಿರುವ ಒಂದು ಸಂಗತಿಯೆಂದರೆ ಧರ್ಮದ ಭಾಷೆ ಮತ್ತು ಜನಸಾಮಾನ್ಯರ ಭಾಷೆ ಒಂದಾಗಿದ್ದಾಗ ಮಾತ್ರವೇ ಧರ್ಮ ಅರ್ಥಪೂರ್ಣವಾಗುತ್ತದೆ ಹಾಗೂ ಅರಿವು ಬೋಧೆ ಮತ್ತು ಸಾಕ್ಷಾತ್ಕಾರಗಳು ಸುಲಭ ಸಾಧ್ಯವಾಗುತ್ತದೆ ಧರ್ಮ ಜನರ ಹತ್ತಿರ ಬರಲೂ ಸಾಧ್ಯವಾಗುವುದು ಅದು ಜನತೆಯ ಮಾಧ್ಯಮವನ್ನು ಆಶ್ರಯಿಸಿದಾಗಲೇ ಈ ಸತ್ಯವನ್ನು ಅರಿತು ಆಚರಣೆಗೆ ತಂದಿದುದರಿಂದಲೇ ಬೌದ್ಧ ಮತ್ತು ಜೈನಧರ್ಮಗಳು ಧಾರ್ಮಿಕ ಕ್ರಾಂತಿಯನ್ನು ಸಾಧಿಸಲು ಸಾಧ್ಯವಾಯಿತು ಈ ಆಘಾತಗಳೇ ಹಿಂದೂ

ಧರ್ಮವನ್ನು ಮತ್ತು ನಿರ್ದಿಷ್ಟವಾಗಿ ಹೆ ಳಬೇಕೆಂದರೆ ವೈಷ್ಣವ ಧರ್ಮವನ್ನು – ಜನಸಾಮಾನ್ಯರ ಒಳಗೆ ತಂದುವು ಭಕ್ತಿಪ ಥದ ಇತಿಹಾಸ ಒಂದು ಅರ್ಥದಲ್ಲಿ ಹಿಂದೂ ಧರ್ಮ ಜನಸಾಮಾನ್ಯರತ್ತ ನಡೆದು ಬಂದ ಇತಿಹಾಸವೇ ಭಕ್ತಿಯ ಪಾವನ ಗಂಗೆ ಜನ–ಸಾಮಾನ್ಯರ ಮೈಮನಗಳಿಗೆ ತಂಪೆರೆದದ್ದು ಈ ಅವಧಿಯಲ್ಲಿಯೆ ಜ್ಞಾನದ ಮೇರುವಾಗಿ ಜನಸಾಮಾನ್ಯರ ಅಳವಿಗೆ ಮಿ ರಿ ನಿಂತಿದ್ದ ಧರ್ಮ ಜ್ಞಾನದ ತೊರೆಯಾಗಿ ಹರಿದು ಬಂದು ಎಲ್ಲೆಲ್ಲೂ ಹಸಿರುಮೂಡಿಸ ವ ಪವಾಡವನ್ನು ವೆ ರೆ ಯಿತು ಕರ್ನಾಟಕದ ಹರಿದಾಸ ಸ ಹಿತ್ಯ ಭಾರತೀಯ ಭಕ್ತಿ ಪ ದದ ಈ ವರ್ಣ ವ ಯ ಸ ಧನೆಯ ಒಂದು ವ ಖವನ್ನು ನಮ್ಮ ವ ಎಂದೆ ಇರಿಸುತ್ತದೆ

ವೆ ಷ್ಣವ ಧರ್ಮಕ್ಕೆ ಆಧಾರಪ್ರಾಯವಾಗಿದ್ದ ವೇದೋ ಪನಿಷತ್ತುಗಳೆಲ್ಲ ಸಂಸ್ಕೃತ ಭಾಷೆಯಲ್ಲೇ ಇದ್ದುದರಿಂದ ಜನ ಸಾಮಾನ್ಯರು ಭಯ–ಭಕ್ತಿಗಳಿಂದ ದೂರ ಸರಿದು ನಿಲ್ಲುವಂತಾಗಿತ್ತು ಈ ಪರಿಸ್ಥಿತಿಯನ್ನು ನಿವ ರಿಸಿ ಆ ಆರ್ಷೇಯ ಗ್ರಂಥಗಳ ಸಾರವನು ಕನ ಡದಲ್ಲಿ ದಂದುಕೊಡುವ ಕನ ಡವನು ಈ ಅಗತ್ಯಕ್ಕೆ ತಕ್ಕಂತೆ ಯಶಸ್ವಿಯಾಗಿ ಬಳಸುವ ಹೊಣೆ ಹರಿದಾಸರ ಮೇಲೆ ಬಿತ್ತು ಮಾನಸಿಕವಾಗಿ ತಾವು ಇದಕ್ಕೆ ಸಿದ್ಧರಾದಂತೆ ಇತರರನ್ನೂ ಸಿದ್ಧಪಡಿಸಬೇಕಾದ ಹೊಣೆಯೂ ಅವರದಾಗಿತ್ತು ಸಂಸ್ಕೃತದ ಬಗೆಗಿನ ವ್ಯಾಮೋಹವನ್ನು ಕನ ಡದ ಬಗೆಗಿನ ಒಲವರವನ್ನಾಗಿಸಬೇಕಾಗಿ ಬಂದಾಗ ಬಗೆಬಗೆಯಾಗಿ ಈ ನಿಲುವನ್ನು ಸವ ರ್ಥಿಸಲು ಯ ತ್ನಿಸಿರುವುದನ್ನು ನಾವು ಕಾಣಬಹುದಾಗಿದೆ ಶ್ರೀ ಕೃಷ್ಣಗೊ ಪೀವಿಲಾಸಂ ಕರ್ತೃವ ದ ವೆಂಕಟ ರ್ಯ ಶಿಷ್ಯನ

> ಗಂಗೆಯ ಗಾಜ ಕುಪ್ಪಿಗೆಯೊಳು ತರಲು ತಾಂ
> ಗಂಗೆಯಹುದಲ್ಲದೆ ಜಲವಹುದೆ?
> ರಂಗನ ಕಥೆಯಿಭ ಷ ಂತರದೊಳು ಪೆ ಳೆ
> ವ ಂಗಳ ಮಹಿಮೆ ತಪ್ಪುವುದೆ ?

—ಎಂಬ ಮಾತಿನಲ್ಲಾಗಲೀ [7] ಅನ ಭವಾಮೃತ ದ ಕರ್ತೃವಾದ ರಂಗನಾಥನ

> ಲಲಿತವಹ ಕನ ಡದ ನ ಡಿಯ ಲಿ
> ತಿಳಿದು ತನ್ನೊಳು ತನ್ನ ಮೊ ಕ್ಷವ
> ಗಳಿಸಿಕೊಂಡರೆ ಸಾಲದೆ ಸಂಸ್ಕೃತದಲಿನ್ನೇನು ? [8]

—ಎಂಬ ನುಡಿಯಲ್ಲಾಗಲೀ

> ಸಂಸ್ಕೃತ ವಿದಲ್ಲೆಂದು ಕ ಹಕ ತಿ–
> ರಸ್ಕರಿಸಲೇನಹುದು ಭಕ್ತಿಪು
> ರಸ್ಕರದಿ ಕೇಳ್ವರಿಗೆ ಒಲಿವನು ಪುಷ್ಕರಾಕ್ಷ ಸದಾ॥ [9]

ಹಾಗೂ

> ಕೃತಿಪತಿ ಕಥಾನ್ವಿತವೆನಿಪ ಪ್ರಾ–
> ಕೃತವೆ ತಾ ಸಂಸ್ಕೃತವೆನಿಸಿ ಸ
> ದ್ಗತಿಯ ನೀ ವುದು ಭಕ್ತಿಪೂರ್ವಕ ಪೇಳ್ವ ಕೇಳ್ವರಿಗೆ॥ [10]

—ಎಂಬ ಜಗನ್ನಾಥದಾಸರ ಮಾತುಗಳಲ್ಲಾಗಲೀ

> ಶ್ರೀ ಕೃತೀಪತಿಯಮಲ ಗುಣಗಳು
> ಈ ಕೃತಿಯೊಳುಂಟಾದ ಬಳಿಕ
> ಪ್ರಾಕೃತವೆ ಸಂಸ್ಕೃತದ ಸಡಗರವೇನು ಸುಗುಣರಿಗೆ? [11]

— ಎಂಬ ಕರ್ಜಗಿ ದಾಸರ ಹೇಳಿಕೆಯಲ್ಲಾಗಲಿ ನಾವು ಕಾಣುವುದು ಸಂಸ್ಕೃತದಿಂದ ಕನ್ನಡದತ್ತ ಸರಿಯಬೇಕಾಗಿ ಬಂದಿರುವ ಅಗತ್ಯದ ಪ್ರತಿಧ್ವನಿಯನ್ನು ಈ ಸಂಕ್ರಮಣವನ್ನು ದಾಸರು ಯಶಸ್ವಿಯಾಗಿ ನಡೆಸಿ ಕನ್ನಡ ಭಾಷೆಯ ಶಕ್ತಿ ಸಾಮರ್ಥ್ಯಗಳನ್ನು ಸೊಗಸುಗಳನ್ನು ಬಿಂಕ–ಬಿನ್ನಾಣಗಳನ್ನು ನಯನಾಜೂಕುಗಳನ್ನು ದೇಸಿ ಎಂಬ ಮಾತಿನಿಂದ ಸೂಚಿಸಲಾಗಿದೆ ದಾಸ ಸಾಹಿತ್ಯದಲ್ಲಿ ದೇಸಿಯ ಈ ಸೊಬಗು ವ್ಯಕ್ತವಾಗಿರುವ ಪರಿಯನ್ನು ನಿರೂಪಿಸುವುದೇ ಈ ಲೇಖನದ ಉದ್ದೇಶ

o o o

ದೇಸಿ ಎಂಬ ಮಾತಿಗೆ ಕಾಕು ದೇಶ್ಯ [12]ಎಂಬ–ಅಂದರೆ ಕೊಂಕುನುಡಿ ಹಾಗೂ ನಿರ್ದಿಷ್ಟ ಪ್ರದೇಶದ ವೈಶಿಷ್ಟ್ಯಗಳನ್ನೊಳಗೊಂಡಿರುವುದು (ದೇಶೀಯ) ಎಂಬ ಅರ್ಥಗಳು ಮಾತ್ರವಲ್ಲದೆ ಸೊಬಗು ಸೌಂದರ್ಯ ಎಂಬ ಅರ್ಥಗಳನ್ನುಳ್ಳ ದೇಸೆ [1] ಶಬ್ದದ ಅರ್ಥಗಳೂ ಸೇರಿಕೊಂಡು ಬಿಟ್ಟಿವೆ ವಾಸ್ತವವಾಗಿ, ಪ್ರದೇಶನಿಷ್ಠವಾದುದು ಎಂಬ ಅರ್ಥ ಕಾಲಾನುಕ್ರಮದಲ್ಲಿ ಮರೆಯಾಗಿ ಸೊಬಗು–ಸೌಂದರ್ಯ ಎಂಬ ಅರ್ಥಛಾಯೆಗಳೇ ನೆಲೆನಿಂತಿವೆ ದೇಸಿವೇಟ ವೇಟಯುಪ್ಪ ದಟಿಂ ಪಾಸುಗಿಯಂ ಬೆಸಟಿಸಗಂ ಎಂಬ ಕವಿರಾಜ–ಮಾರ್ಗಕಾರನ ಹೇಳಿಕೆಯಲ್ಲಿ ಈ ಪ್ರಾದೇಶಿಕ ವೈಶಿಷ್ಟ್ಯವೇ ಸೂಚಿತವಾಗಿದೆ ಪಂಪನಲ್ಲಿ ಈ ಪ್ರಾದೇಶಿಕ ಅಥವಾ ಭೌಗೋಳಿಕ ಎಂಬ ಅರ್ಥದಲ್ಲಿ ಮಾತ್ರವಲ್ಲದೆ ಸೊಬಗು ಎಂಬ ಅರ್ಥದಲ್ಲಿಯೂ ಈ ಮಾತು ಬಳಕೆಯಾಗಿದೆ ಎಂಬುದಕ್ಕೆ ಒಂದಿದೆ ಸಿಯೊಳ್ ಪುಗುವುದು [14] ಹಾಗೂ ಕುರುಳ್ಗಳೊಳ್ ತೊಡರ್ದ ದೇಸಿಯನಾವಗವಿ ೀವ ಚೆನ್ನ ಪೂಗಳನವಸೊಯ್ಯನೋಸರಿಸುತಂ [15] ಎಂಬಂಥ ಪ್ರಯೋಗಗಳು ಸಾಕ್ಷಿಯಾಗಿವೆಯೆಂದು ಹೇಳಲಾಗಿದೆ ದೇಸಿಯೊಳ್ ಎಂದರೆ ದೇಸಿ ಶೈಲಿಯಲ್ಲಿ ಎಂದರೆ ಅಚ್ಚಗನ್ನಡ ಶೈಲಿಯಲ್ಲಿ [16] ಎಂದೂ ಎರಡನೆಯ ಸಂದರ್ಭದಲ್ಲಿ ಇದಕ್ಕೆ ಚೆಲುವು ಎಂದೂ[17] ಡಿ ಎಲ್ ನರಸಿಂಹಾಚಾರ್ ಅವರು ವ್ಯಾಖ್ಯಾನಮಾಡಿದ್ದಾರೆ ಇದನ್ನು ನಡಿಗಳ ದೇಸಿ ನುಡಿ

ಗಟ್ಟಿನ ದೇಸಿ ಗಾದೆಯ ದಿ ಸಿ ಥ ದಸ್ಸಿನ ದೆ ಸಿ ವರ್ಣನೆಗಳ ದೆ ಸಿಯೆಂದು ವಿಂಗಡಿಸಿ ವಿವರವಾಗಿ ನಿರೂಪಿಸಿದ್ದರೆ ಮ ಳಿಯ ತಿಮ್ಮಪ್ಪಯ್ಯನವರು [18] ಕನ ಡ ದ್ದೊಳೊಲ್ದು ಪೂವ ಣಚಾರ್ಯರ್ ದೇಸಿಯನೆ ನಿಱಿಸಿ ದ ವಿಚಾರವನು ಕವಿರಾಜ ಮಾರ್ಗಕ ರ ಉಲ್ಲೇಖಿಸಿದ್ದರೆ [19] ದೇಸಿಗೆ ಬೀಟ್ದ ಮಹಾಕವೀಶ್ವರ ರ ಬಿದ್ಧತ್ತ ವನು ಸೂಕ್ತಿ ಸುಧಾರ್ಣವ ದಲ್ಲಿನ ಒಂದು ಉಲ್ಲೇಖ ಹಾಸ್ಯಮಯವಾಗಿ ವಿವರಿಸುತ್ತದೆ [10] ಆ ಉಲ್ಲೇಖ ಹೀಗಿದೆ

> ಥ ದ ವಿ ದಾವುದೆಂದೊಡಿಱವರ್ ಪದಬಂಧದೊಳೀಪ್ರಯೋಗವೆ ಂ
> ತೆಂದೊಡೆ ಬಯ್ಸಲ್ದರಾವ ಕವಿವಾರ್ಗವಿ ದೆಂದೊಡೆವೊಯ್ವರ್ಅರ್ಥಮೇ!
> ನೆಂದೊಡೆ ತೊಂಡಱುಂಡುಗೆಡೆದುಟ್ಟುದ ನಿಕ್ಕುವರಾವ ನೀತಿ ಪೇ
> ೞೆಂದೊಡೆ ಕೋಲ್ವರೀಗಳಿನ ದೇಸಿಗೆ ಬಿ ಟ್ದ ವ ಹ ಕವೀಶ್ವರರ ॥

ಹಾಸ್ಯದ ಪ್ರಕರಣವಾಗಿ ಮಾತ್ರವಲ್ಲದೆ ಹಿಂದೆಯೇ ದೇಸಿಯನು ಯಾವ ರೂಪಗಳಲ್ಲಿ ಗುರುತಿಸುವ ಪ್ರಯ ತ್ನ ನಡೆದಿತ್ತೆಂಬ ದರ ಉಲ್ಲೇಖವಾಗಿಯೂ ಈ ವೃತ್ತ ಗವಸಾರ್ಹವಾಗಿದೆ ಅಂದರೆ ಛಂದಸ್ಸು ಪದಪ್ರಯೊ ಗ ಶೈಲಿ ಅರ್ಥ ಹಾಗೂ ನಿ ತಿಗಳ ವಿಷಯ ದಲ್ಲಿ ಸ್ವಚ್ಛಂದವನು ಮೆರೆದಿದ್ದರೆ ಅದನು ದೇಸಿಯೆಂದು ಪರಿಗಣಿಸಲಾಗುತ್ತಿತ್ತೆಂದು ಭಾವಿಸಬಹ ದು ಸಿದ್ಧ ಸಂಪ್ರದಾಯ ದ ಉಲ್ಲಂಘನೆ ಯಲ್ಲಿ ಸ್ವಾತಂತ್ರ್ಯ ಕ್ರಿಯಾಶೀಲತೆಯೂ ಇರಬಹುದು ನಿರ್ಲಕ್ಷ್ಯ ಸ್ವಚ್ಛಂದಶಿ ಲ ವ ನೋ ಭಾವವೂ ಇರಬಹುದು ಎಂಬುದನ್ನು ನಾವು ಮ ರೆಯುವಂತಿಲ್ಲ ಹೀಗಾಗಿ ದೇಸಿಯ ಬಳಕೆಯ ಹಾಗೂ ಅದರ ಯ ಶಸ್ಸಿನ ಬಗ್ಗೆ ಆಲೋಚಿಸುವಾಗ ಭಾಷೆಗೆ ಎಷ್ಟರ ಮ ಟ್ಟಿಗೆ ಹೊಸ ಆಯಾಮ ಗಳು ಕಲ್ಪಿತವಾದ ವು ಎಂಬುದು ಹಾಗೂ ವಿನೂತನ ವಿಷಯಗಳಿಗೆ ಭಾಷೆಯನ್ನು ಮಾಧ್ಯಮ ವಾಗಿ ಬಳಸ ವಲ್ಲಿ ಎಷ್ಟರ ಮಟ್ಟಿನ ಯಶಸ್ಸು ಸಾಧಿತವಾಯಿತು ಎಂಬುದು ಮಾನಕಗಳು ಅಥವಾ ಒರೆಗಲ್ಲ ಗಳಾಗುತ್ತವೆ ದಾಸ ಸಾಹಿತ್ಯ ಈ ದಿಕ್ಕಿನಲ್ಲಿ ಯಾವ ಸಾಧನೆಗಳನ್ನು ತನ ದಾಗಿಸಿಕೊಂಡಿತು ಎಂಬುದು ಹಿ ಗಾಗಿ ತ ಂಬ ಮುಖ್ಯವಾದ ವಿಚ ರವಾಗುತ್ತದೆ ಪ್ರಾತಿನಿಧಿಕವಾಗಿ ಕೆಲವು ಹರಿ ದಾಸರ ರಚನೆಗಳನ್ನು ಅನ ಲಕ್ಷಿಸಿ ಈ ಕ್ಷೇತ್ರದಲ್ಲಿ ಅವರು ಸೃಷ್ಟಿಸಿದ ಸೀಮಾ ರೇಖೆಗಳನು ಸ್ಪಷ್ಟಪಡಿಸ ವುದಷ್ಟೆ ನಾವು ಮಾಡಬಹುದಾಗಿರುವ ಕಾರ್ಯ ಏಕೆ ದರೆ ಹರಿದಾಸರ ಸಂಖ್ಯೆ ಅಪರಿಮಿತವಾಗಿದೆ ಅವರ ರಚನೆಗಳ ಸಂಖ್ಯೆ ಅಗಣಿತವಾಗಿದೆ

ದಾಸಸಾಹಿತ್ಯದ ಯಾವ ಮುಖಗಳನ್ನು ದೆ ಸಿಯ ದೃಷ್ಟಿಯಿ ಂದ ಪರಿಗಣಿಸ ಬೇಕು ಎಂಬ ಪ್ರಶ್ನೆ ಗೆ ಉತ್ತರ ಸ್ಪಷ್ಟವಾಗಿಯೆ ಇದೆ ದಾಸಸಾಹಿತ್ಯದ ವೈಶಿಷ್ಟ್ಯ ಗ ಳ ಎಂದು ಯಾವ ಅಂಶಗಳನ್ನು ಉಲ್ಲೇಖಿಸಲಾಗುತ್ತದೆಯೋ ಆ ಅಂಶಗಳಲ್ಲಿ ದೇಸಿ ಎಷ್ಟರ ಮ ಟ್ಟಿಗೆ ಕಾಣಿಸಿಕೊಂಡಿದೆ ಎಂಬುದನ್ನು ಗಮನಿಸ ವುದು ಈ ದೃಷ್ಟಿ

ಯಿಂದ ಪ್ರಕೃತವಾಗುತ್ತದೆ ಈ ವೈಶಿಷ್ಟ್ಯಗಳನ್ನು ಡಾ ಜಿ ವರದರಾಜರಾಯರು ಹೀಗೆ ಸ್ಪಷ್ಟಪಡಿಸಿದ್ದಾರೆ

ಕನ ಡ ಹರಿದಾಸಸಾಹಿತ್ಯವು ಪ್ರಧ ನವಾಗಿ ಭಕ್ತಿ ಪರವಾದದ್ದು ಭಗವದ್ ಭಕ್ತನು ತನ ಆತ್ಮ ಶೋಧನೆಯನು ಮಾಡಿಕೊಂಡು ಭಗವಂತನ ಅನುಗ್ರಹಕ್ಕಾಗಿ ಹಗಲಿರುಳೂ ಹಂಬಲಿಸುತ್ತ ಇಷ್ಟಾರ್ಥಸಿದ್ಧಿಯಾದ ವೇಳೆ ತನ ದಿವ್ಯಾನ ಭವ ವನ್ನು ಇತರರಿಗೂ ತಿಳಿಯ ಹೇಳಿ ಸಮಸ್ತರನ್ನೂ ಪುನೀತರನಾ ಗಿ ಮಾಡುವುದೇ ಅವನ ಮುಖ್ಯಗುರಿ ಆದ್ದರಿಂದ ಹರಿದಾಸ ಸಾಹಿತ್ಯವನು ಸಮಷ್ಟಿಯಿಂದ ಸವಿಕಾಕ್ಷಿ ಸಿದಾಗ ಇಲ್ಲಿ ಲಯಾ ಹರಿದಾಸರ ಆತ್ಮಶೋಧನೆ ಅಪರೋಕ್ಷಾನುಭವ ಭಗವಂತನನ್ನು ಅವರು ಆರಾಧಿಸುವ ನಾನಾ ವಿಧಾನಗಳು ಮೊದಲು ನಮ್ಮ ಮನಸ್ಸನ್ನು ಸೆಳೆಯುತ್ತವೆ ಈ ಹರಿದಾಸರು ಶ್ರೀವ ಧ್ವಾಚಾರ್ಯರ ಅನ ಯಾಯಿಗಳಾದ ದರಿಂದ ಆ ಮತದ ಪ್ರವ ನಾಂಶಗಳನು ಈ ಕೀರ್ತನ ಮಾಧ್ಯ ಮದ ಮೂಲಕ ಸರ್ವರಿಗೂ ಸುಲಭವಾಗಿ ವೇದ್ಯವಾಗುವಂತೆಯೂ ತಿಳಿಸಿರುವರು ಆದ ರಿಂದ ಹರಿದಾಸ ಸಾಹಿತ್ಯವು ಮೊದಲೊದಲು ಆಯಾ ಭಕ್ತರ ಆ ಅಂತ ರಂಗಿಕವಾದ ಅಭೀಪ್ಸೆಯನು ನಿರೂಪಿಸುವುದನ್ನೆ ಮುಖ್ಯ ಲಕ್ಷ್ಯದಲ್ಲಿಟ್ಟು ಕೊಂಡು ಕ್ರಮಕ್ರಮವಾಗಿ ಶ್ರೀ ಮಧ ಚಾರ್ಯರ ಸಿದ್ಧಾಂತಗಳನ್ನು ಸಾರಿ ಹೇಳುವ ಸಾಧನವಾಯಿತೆಂದು ಏಣಿಸಿದರೆ ತಪ್ಪಾಗದು ಈ ರೀತಿ ಅದರ ಕ್ಷಿತಿಜ ವಿಸ್ತಾರವ ದಂತೆಲ್ಲ ಹರಿದಾಸ ಸಾಹಿತ್ಯವು ದ್ವೈತ ಸಿದ್ಧಾಂತದ ವ ಣಿದರ್ಪಣವೆನಿ ಸಿತು ಅದರಲ್ಲಿ ವೇದ, ಉಪನಿಷತ್ತ ರಾಮಾಯಣ ಭಾರತ ಭಾಗವತ ವಿವಿಧ ಪುರಾಣಗಳು ಮತ್ತು ಪಾಂಚರಾತ್ರಾಗಮಗಳ ತಿರುಳೆಲ್ಲವೂ ತಿರುಳು ಗನ್ನಡದ ನುಡಿಗಳಲ್ಲಿ ಅಡಕವಾಗಿ ಎಲ್ಲರ ಮನಸ್ಸನ್ನೂ ಮಿಡಿಯ ಲಾರಂಭಿಸಿತು [21]

ಈ ಹಿನ್ನೆಲೆಯನ್ನು ದೃಷ್ಟಿಯಲ್ಲಿರಿಸಿಕೊಂಡು ಹರಿದಾಸ ಸಾಹಿತ್ಯದಲ್ಲಿನ ತಿರ ಳುಗನ ಡದ ಬೆಡಗನ್ನು ಅಂದರೆ ದೇಸಿಯ ಚೆಲುವನ್ನು ನೋಡಬಹುದು

ಹರಿದಾಸರ ಪ ಕ್ತಿಯಲ್ಲಿ ಅಗ್ರಮಾನ್ಯರ ಗಿರುವ ಶ್ರೀಪಾದರಾಜರ (ಕ್ರಿ ಶ ಸು ೧೪೫೦) ಕೃತಿಗಳನ್ನೇ ಮೊದಲಿಗೆ ಪರಿಶೀಲಿಸಬಹುದು

ಇಟ್ಟಾಂಗೆ ಇರುವೆನೋ ಹರಿಯೇ ಎನ್ನ ದೊರೆಯೇ।
ಸೃಷ್ಟಿವಂದಿತ ಪಾದಪದುಮ ಶ್ರೀ ಹರಿಯೇ॥ [22]

—ಎಂದು ಸಂಪೂರ್ಣ ಶರಣಾಗತಿಯನ್ನು ಮೆರೆಯುವ ಶ್ರೀಪಾದರಾಜರ ವಿನಯದಲ್ಲಾಗಲೀ

ಬಂದು ಬಂದು ನಾನಾ ಭವದಲ್ಲಿ ಬೆಂದೆನಯ್ಯ
ಇಂದೆನ್ನ ಸಲಹಯ್ಯ ರಂಗವಿಠಲ [23]

—ಎಂಬ ಅವರ ಆತ್ಮನಿವೇದನೆಯಲ್ಲಾಗಲೀ

ಬಿಡಿ ಬಿಡಿ ಸಂದೇಹವನು ಪೊಡವಿ ಮನುಜರೆಲ್ಲ।
ಒಡೆಯನೊಬ್ಬನೆ ಜಗಕೆ ರಂಗವಿಠಲ॥ [೨೪]

—ಎಂಬ ಉಪದೇಶದಲ್ಲಾಗಲೀ,

ಪೋಪು ಹೋಗೋಣ ಬಾರೊ ರಂಗ।
ಪೋಪು ಹೋಗೋಣ ಬಾರೋ॥ [೨೫]

—ಎಂಬ ಶಿಶುಗೀತೆಯಲ್ಲಾಗಲಿ

ಬ್ಯಾಡ ಮಧುರೆಗೆ ಪೋಗ ಬ್ಯಾಡೆಲವೊ ಶ್ರೀಕೃಷ್ಣ।
ಬೇಡಿಕೊಂಬೆವೊ ದೈನ್ಯದಿ॥
ನೋಡು ನಮ್ಮ್ಯಾಲೆ ದಯಮಾಡು ಮದನನಂಗೀಡು।
ಮಾಡುವುದೇನುಚಿತವಲೋ ಮಾಧವ ಕೃಪಾಕರನೆ ॥[೨೬]

—ಎಂಬ ಗೋಪಿಯರ ಪ್ರಾರ್ಥನೆಯಲ್ಲಾಗಲೀ

ವಿಧಿಗೆ ದಯವಿಲ್ಲವಕ್ಕ ಎಮ್ಮ ಮ್ಯಾಲೆ।
ಯೆಂದು ಪತಿಯನಗಲಿಸಿದ ಒಮ್ಮಿಂದಲೊಮ್ಮೆ॥ [೨೭]

—ಎಂಬ ಅವರ ವಿಷಾದ ಭಾವದಲ್ಲಾಗಲೀ

ಕೇಳಿದ್ಯಾ ಕೌತಕವನ್ನು ಕೇಳಿದ್ಯಾ।
ಕೇಳಿದ್ಯಾ ಕೌತಕವನು ನಾ
ಕೇಳಿದೆ ನಿನಗಿಂತ ಮುನ್ನ ಆಹಾ
ಚಾಳಿಕಾರ ಕೃಷ್ಣ ಪೋಗದೆ ಮಧುರೆಗೆ
ಕೋಳಿ ಕೂಗದ ಮುನ್ನ ನಾಳೆ ಪಯಣವಂತೆ॥ [೨೮]

—ಎಂಬ ಸದ್ದಿ ಚಿಂತರನಿಂದ ಕಂಗೆಟ್ಟ ಗೋಪಿಯರ ವಿಹ್ವಲತೆಯಲ್ಲಾಗಲೀ

ಎಲ್ಲ್ಯಾಡಿ ಬಂದ್ಯೋ ಎನ್ನ ರಂಗಯ್ಯಾ ನೀ
ಎಲ್ಲ್ಯಾಡಿ ಬಂದ್ಯೋ ಎನ್ನ ಕಣ್ಣ ಮುಂದಾಡದೆ।

ಅಷ್ಟು ದಿಕ್ಕಲಿ ಅರಸಿ ಕಾಣದೆ ಬಹಳ
ದಟ್ಟಗೆಟ್ಟೆನು ನಿನ್ನ ನೋಡದೆ ಇ
ನ್ನೆಷ್ಟು ಹೇಳಲಿ ಕೇಳಬಾರದೆ ರಂಗ
ವಿಠಲ ನೀ ಎನ್ನ ಕಣ್ಣ ಮುಂದಾಡದೆ॥ [೨೯]

—ಎಂಬ ತಾಯಿಯ ಎದೆಯೊಳಗಿದ ಕಾತರದಲ್ಲಾಗಲೀ

ಸದ್ದು ಮಾಡಲು ಬೇಡವೋ–ನಿನ್ನ ಕಾಲಿಗೆ
ಬಿದ್ದು ನಾ ಬೇಡಿಕೊಂಬೆ।
ನಿದ್ದೆ ಗೆಯ್ಯುವರೆಲ್ಲ ಎದ್ದರೆ ನೀನು ಬಂ
ದಿದ್ದುದ್ದು ಕಂಡರೇನೆಂಬುವರೋ ರಂಗ॥[30]

—ಎಂಬ ಗೋಪಿಕೆಯ ಪ್ರಣಯಭೀತಿಯಲ್ಲಾಗಲೀ

ಏನು ಭ್ರಮೆಯ ಮನುಜರಿಗೆ ಎಷ್ಟು ಮಮತೆ ಪ್ರಕೃತಿಯಲಿ
ಮಾನುಗಾಳವ ನುಂಗಿ ಮೋಸ ಹೋದ ತೆರನಂತೆ॥[31]

ಎಂಬ ಅನುಕಂಪದ ನುಡಿಯಲ್ಲಾಗಲಿ ಸಂಸ್ಕೃತ ಪದಗಳು ಅಪವಾದ ಸ್ವರೂಪವಾಗಿ ಕಾಣಿಸಿಕೊಳ್ಳುತ್ತವೆಯೇ ಹೊರತು ನಿಯಮವೆಂಬಂತೆ ಅಲ್ಲ. ಭಾವದ ಬಗೆ ಯಾವುದೇ ಆಗಲಿ ಅದು ಮೈದಳೆಯುವುದು ಅಚ್ಚಗನ್ನಡದಲ್ಲಿ, ತಿರುಳುಗನ್ನಡದಲ್ಲಿ. ಆಡುನುಡಿಯ ಮೋಡಿಯಂತೂ ಅಚ್ಚರಿಯನ್ನುಂಟು ಮಾಡುತ್ತದೆ. ಕೃತಕತೆಯಾಗಲಿ ಕ್ಲಿಷ್ಟತೆಯಾಗಲೀ ಈ ಬಗೆಯ ನುಡಿಗಳಲ್ಲಿ ಸಪ್ಪಗೆ ಎದ್ದು ಕಾಣದಿರುವುದು ಅಪ್ರಯತ್ನಪೂರ್ವಕವಾದ ಅನುದ್ದಿಷ್ಟವಾದ ಸಹಜವೂ ಸ್ವಾಭಾವಿಕವೂ ಆದ ಶ್ರೀ ಪಾದರಾಜರ ದೇಸಿಯ ಒಲವಿಗೆ ಸಾಕ್ಷಿಯನ್ನು ನುಡಿಯುತ್ತದೆ. ಸಂಸ್ಕೃತ ಭಾಷೆಯ ಪರಿಸರದಲ್ಲಿಯೇ ಬೆಳೆದುನಿಂತ ವ್ಯಕ್ತಿತ್ವದಲ್ಲಿ ಅರಳಿ ಪರಿಮಳವನ್ನು ಬೀರಿದ ಈ ದೇಶಿಯ ಸೊಬಗು ಆನಂದಾತಿಶಯಕ್ಕೆ ಕಾರಣವಾಗುತ್ತದೆ. ಪೋಪು ಹೋಗೋಣ ಬಾರೋ ರಂಗ ಪೋಪು ಹೋಗೋಣ ಬಾರೋ ಎಂಬ ಕೀರ್ತನೆ ಜನಮನವನ್ನು ಸೆಳೆದಿರುವುದಕ್ಕೆ ಇದೇ ಕಾರಣ. ಪೋಪು ಎಂಬ ಮಾತಿನಲ್ಲಿ ಸೂಚಿತವಾಗಿರುವ ಆತ್ಮೀಯತೆ ಮತ್ತು ವಾತ್ಸಲ್ಯವಂತೂ ಅನನ್ಯವಾದುವು. ಇಂಥ ವೈಶಿಷ್ಟ್ಯಗಳಿಂದಾಗಿ ಶ್ರೀ ಪಾದರಾಜರ ದೇಸಿ ನಮ್ಮ ಮನಸ್ಸನ್ನು ಸೂರೆಗೊಳ್ಳುತ್ತದೆ.

ಸಾಸಿರ ಜಿಹ್ವೆಗಳುಳ್ಳ ಶೇಷನ ಕೊಂಡಾಡಬೇಕು ವ್ಯಾಸಮುನಿರಾಯರ ಸನ್ಯಾಸದಿರವ ಎಂದು ಗುರುಗಳಾದ ಶ್ರೀಪಾದರಾಜರಿಂದಲೇ ಪ್ರಶಂಸೆಗೆ ಒಳಗಾದ ಶ್ರೀ ವ್ಯಾಸರಾಜರು (ಕ್ರಿ. ಶ. ೧೪೪೭–೧೫೩೯) ಕರ್ನಾಟಕದ ಧಾರ್ಮಿಕ ಇತಿಹಾಸದಲ್ಲಿ ಮಾತ್ರವಲ್ಲದೆ ವಿಜಯನಗರದ ಇತಿಹಾಸದಲ್ಲೂ ವಿಶೇಷ ಉಲ್ಲೇಖಕ್ಕೆ ಅರ್ಹರಾಗಿರುವಂಥವರು–ಶ್ರೀ ಕೃಷ್ಣದೇವರಾಯನನ್ನು ಕುಹೂಯೋಗದ ದುಷ್ಪರಿಣಾಮದಿಂದ ಪಾರುಗೊಳಿಸುವ ಸಲುವಾಗಿ ಸ್ವತಃ ಆ ಅವಧಿಯಲ್ಲಿ ಕರ್ನಾಟಕ ಸಾಮ್ರಾಜ್ಯ ರತ್ನ ಸಿಂಹಾಸನಾಧೀಶ್ವರರೂ ಆಗಿದ್ದುದರಿಂದಾಗಿ. ದಾಸಸಾಹಿತ್ಯಕ್ಕೆ ಭದ್ರವಾದ ಬುನಾದಿಯನ್ನು ಹಾಕಿದ ಈ ಯತೀಶ್ವರರು ಸಂಸ್ಕೃತ ವಿದ್ವತ್ತಿನ ಒಂದು ಉತ್ತುಂಗ ಶಿಖರವನ್ನೇ ಪ್ರತಿನಿಧಿಸುತ್ತಿದ್ದಂತೆಯೇ ಕನ್ನಡದಲ್ಲಿಯೂ ಪ್ರೌಢಿಮೆಯನ್ನು ಮೆರೆದಂಥವರು. ಕನ್ನಡ ಮತ್ತು ಸಂಸ್ಕೃತ ಭಾಷೆಗಳ ಹಿತಮಿತವಾದ ಬಂಧವನ್ನು ಮೆರೆಯ

ವಂತೆಯೋ ಅಷ್ಟಗನ ಡದ ಸಂಪನೂ ಅವರ ಭಾವೆ ಸೂಚಿಸುತ್ತದೆ ಉದ ಹರಣೆಗೆ

ಇಂದ್ರಿಯಂಗಳೆಂಬ ಕಳ್ಳರೈವರು
ಬಂಧಿಸಿ ತಮ್ಮ ವಿಷಯ ಕೊಯ್ದ್ದನ
ಕಂದಿಸಿ ಜ್ಞಾನವೆಂಬ ದೃಷ್ಟಿಯ
ಎಂದೆಂದಿನ ಧರ್ಮಧನವನೊಯ್ದರು [32]

ಎಂಬ ರಚನೆಯಲ್ಲಿ ಉಭಯ ಭ ಷೆಗಳ ಸವ ರಸಪೂರ್ಣ ಸಂಗಮವನ್ನು ಗ ರ ತಿಸಿ ಬಹ ದಾದರೆ,

ಕರಿಯ ಭಯವುಂಟೆ ಕೇಸರಿಯ ಇಕೆ ಯೊಳಿದ್ದ ವಗೆ
ದುರಿತದ ಭಯವೆ ಶ್ರೀಕ ಷ್ಣನ ದಾಸರ ಸಂಗವಿರಲು
ದುರಿತ ತಿಮಿರಕ್ಕೆ ತರಣಿ ನಾನಲ್ಲವೆ [3]

ಎಂಬ ಅಭಯದ ನುಡಿಯಲ್ಲಾಗಲೀ

ಕೊಳಲ ನುಡಿಸು ಕಿವಿಯೊಳೆನಗೆ ಚಿಂವ ಮೋಹನಾ ।
ಕೊಳಲ ನುಡಿಸಿ ಪ್ರೇಮಸುಧೆಯ
ವ ಳೆಯ ಸುರಿಸಿ ಭವದ ತಾಪ
ಕಳೆದು ತಿಳಿವಿನೆಳಬಳ್ಳಿಯ
ಬೆಳೆಯಿಸಿ ಬೆಸೆಗನ್ನ ವ ನದೊಳು ॥ [34]

ಎಂಬ ಮುರುಳಿಯ ನಾದದ ವ ಹಿಮೆಯನು ಸ ರುವ ಮೋಹಕ ಗೀತದಲ್ಲಾಗಲೀ

ಏಳು ಸುತ್ತಿನ ಕೋಟೆ ಯಮುನಾಳು ಮುತ್ತಿಕೊಂಡು
ಪಾಳು ಮಾಡೇವೆಂದು ಪೇಳುತ್ತಿರಲು
ಆಳು ಸಾಮಾಗ್ರಿಯ ಅಪಾರ ಬಲವೋಡಿ
ಕೇಳಿ ಹೋಗದ ಮುನ್ನ ಕೋಟೆ ರಕ್ಷಿಸಬೇಕು [35]

ಎಂಬ ಉಪದೇಶಾಮೃತದಲ್ಲಾಗಲೀ ಕನ್ನಡದ ಕಂಪು ಹೇಗೆ ಸೂಸಿದು ಸ ತ್ತಿ ನಮ್ಮನ್ನು ಆವರಿಸಿಕೊಳ್ಳುತ್ತದೆಂಬುದನ್ನು ಬಿಡಿಸಿ ಹೇಳುವ ಅಗತ್ಯವೇ ಇಲ್ಲ

ಶ್ರೀ ವಾದಿರಾಜರಂತೂ (ಕ್ರಿ ಶ ೧೪೮೧ ೧೬೦೦) ವ್ಯಾಸಕೂಟ–ದಾಸಕೂಟ ಗಳೆಡರಲ್ಲೂ ಗೌರವದ ಸ್ಥಾನವನು ಪಡೆದುಕೊಂಡಿರ ವಂಥವರು ಅವರ ಬಹು ಳ ಷಾ ಪರಿಣತಿಯಂತೂ ಬೆಚ್ಚಿ ಬೀಳಿಸುವಂಥದು ಚಿತ್ರ ವಿಚಿತ್ರ ಚಿತ್ಕಾರ ಪ್ರತಿಮೋಲ್ಲಸಿತತಪ್ತರಜತರಂಜಿತಸ್ಫಟಿಕವ ಣಿಗಣಪ್ರಬಿ ರತಟಿತ್ಕೋಟಿಜ್ವಾಲಾ ವಿಲ ಸಿತವಾದ ವಜ್ರಪೀಠದಲಿ ಕುಳಿತು [36] ಎಂದು ಸಂಸ್ಕೃತ ಭೂಯಿಷ ವಾಗಿ ಬರೆದು ಬೆರಗಾಗಿಸಬಲ್ಲ । ಈ ವಿದ್ವಾಂಸರು ಸತ್ಯಮುಗಾ ಚಿಪ್ಪು ತಾನವಾ್ಮ

ವಿನುವಮ್ಮ । ಸತ್ಯಹರಿಶ್ಚಂದ್ರನಿಗೆ ಚಾಲಚೆಪ್ಪಿರೆ ಕನ್ನೆ ವಿನವೆ ನಾವಮಾಟ [87] ಎಂದು ತೆಲುಗಿನಲ್ಲಿ ಹೇಗೆ ವಿಜೃಂಭಿಸಬಲ್ಲರೋ ಹಾಗೆಯೇ ಕನ್ನಡದಲ್ಲಿಯೂ ದೇಸಿಯನ್ನು ಮೆರೆಯಬಲ್ಲರು ರಂಗನಿನಗಾರೇನೆಂದರು ಮರೆತು ನಿದ್ರೆಗೈದೆಯಾ ಎಂಬ ಕೀರ್ತನೆಯಲ್ಲಿನ ಈ ನುಡಿಗಳನ್ನು ನೋಡಿ [88]

ಬಿಕ್ಕಿ ಬಿಕ್ಕಿಯಳುತ ಬಂದ ಗೋಪಿಯ ಕಂದ
ಉಕ್ಕಿ ಹರಿವ ಕಣ್ಣನೀರ ತೊಡೆದಳಶೋದೆ
ಅಕ್ಕರದಿಂದಲಿ ಮಗನ ಅಕಿವ ಇದ್ದನಾಡಿ
ಮಕ್ಕಳ ಮಾಣಿಕ್ಯವೆ ನೀ ಮನೆಯೊಳಗಾಡೈ ॥

ಎಂದು ಸಮಾಧಾನ ಪಡಿಸಿದಾಗ ಆ ಕಂದ ದೂರವ ಬಗೆ ಇದು

ಹಳ್ಳಿಯ ಮಕ್ಕಳು ಎನ್ನ ಬೈದರಮ್ಮ
ಕಳನೆಂದು ಎನ ಕೂಡೆ ಆಡಲೊಲ್ಲರು
ಮೆಲ್ಲನೆ ಬೈಯ ಇತ್ತ ಬರಲು ಕಲ್ಲಲಿಟ್ಟರಮ್ಮಯ್ಯ
ಅಲ್ಲಿಂದಂಜಿ ಅಳುತ ನಾನು ಓಡುತ ಬಂದೆ ॥

ಅಂತೆಯೇ ವಿಡಂಬನ ವ್ಯಾಜದ ಸ್ತುತಿಯಲ್ಲಿ ಆಡುನುಡಿಯ ಸಹಜರೂಪ ಹೇಗೆ ಪರಿಯತ್ತದೆಂಬುದನ್ನು ನೋಡಿ

ಹ್ಯಾಂಗೆ ಕೊಟ್ಟನು ಹೆಣ್ಣ ಸಾಗರನು ಈ ವರಗೆ ।
ಶೃಂಗಾರ ಪುರುಷರು ಬಹು ಮಂದಿಯಿರಲು ॥
ಗಪ್ಪನಾರುವ ಮೈಯ್ಯ ಬಿಟ್ಟಿದ್ದ ಬಿರುಗಣ್ಣು
ಮುಟ್ಟನೋಡಿದರೆ ಮೈಯ್ಯತಿ ಕಠಿಣವು ।
ಸೊಟ್ಟ ಮೋರೆಯ ಇವಗೆ ಎಷ್ಟುದ್ದ ಹಲ್ಲುಗಳ
ಇಷ್ಟು ಘೋರವಮುಖದಳಿಯನೆಲ್ಲಿ ದೊರಕಿದನೊ ॥
ಬಡವನು ಭಿಕ್ಷುಕುನ ಬಡಬನಂದದಿ ಕೋಪವು
ನೋಡಿದರೆ ತಲೆ ಜಟೆಯು ಕಟ್ಟಿದುದು
ಬಿಡಗುನುಡಿಗಾರ ಚಾರ ಚೋರನಿಗೆ ।
ನೋಡಿ ನೋಡಿ ಹೆಣ್ಣ ಹ್ಯಾಂಗೆ ಕೊಟ್ಟನು ॥
ಭಂಡನಾಗಿರೆ ವನು ಕಂಡವರೊಡನೆ ಕಾಳಗವ
ಕೊಂಡುಬಹ ಬಲು ಉದ್ದಂಡನಿವನು ।
ಅಂಡಜವಾಹನಗೆ ಯೋಗ್ಯವಾದ ಹೆಣ್ಣ
ಕಂಡುಕಂಡೀ ಹಯವದನಗೆ ಕೊಟ್ಟನ್ಯಾಗೆ ॥ [89]

ದಶಾವತಾರದ ನಿರೂಪಣೆ ಇದರಲ್ಲಿ ಅಡಗಿದೆ ಎಂಬುದನ್ನು ಗುರ ತಿಸುವು ದರ ಜೊತೆಗೆ ಗಪ್ಪರ ನಾರು ಬಿರ ಗಣ್ಣು ಸೊಟ್ಟಮೋರೆ ನ ಡಿಗಾರ ಭಂಡ ಮೊದಲಾದ ಮಾತುಗಳಲ್ಲಿ ದೇಸಿಯ ಚೆಲುವು ಸಹಜ ಅನಲಂಕೃತ, ಅಕೃತಕ ರೂಪ ದಲ್ಲಿ ವ್ಯಕ್ತವಾಗಿದೆ ಎಂಬ ದನು ನೋಡಬಹುದು

ಸಂಸಾರದ ಮಾಯೆಯ ಬಂಧನದಿಂದ ಬಿಡಿಸಿಕೊಳ್ಳುವುದೇ ಭಕ್ತನು ಮಾಡ ಬೇಕಾಗಿರ ವ ಸಾಧನೆ ಎಂಬುದನು ಮನಗಾಣಿಸ ವ ಕಿ ರ್ತನೆಯುಲ್ಲೂ ಆಡುನುಡಿಯ ಇದೇ ವಿಲಾಸವನ್ನು ಕಾಣಬಹುದು

ಬಿಟ್ಟು ಬನಿ ರೊ ಸಂಸಾರದ್ವಂದ್ವ ।
ಸೃಷ್ಟಿಪತಿಯ ಸೇರಿ ನೀವು ಸುಖಿಸಬನಿ ರೊ ॥
ಹೆಂಡಿರು ಮಕ್ಕಳು ಎಂಬೋ ಹಂಬಲ ವೆ ಡಿರೋ
ಕೊಂಡವರಲ್ಲಿ ಕೊಂಡವರಲ್ಲಿ ಮ ಂದಿನ ಗತಿಯೇನು ॥
ಎಷ್ಟು ಮಾಡಿ ಗಳಸಿ ತಂದರು ಸಾಲದೆಂಬರೊ ।
ನಷ್ಟಮಾಡಿ ಇವನ ಬದ ಕು ಎಲ್ಲ ತಿಂ‿ರು ॥
ನಡು ಬೀದಿಯಲಿ ಇವನ ಎಳೆದು ಸೆಳೆವರೊ ।
ಕಡೆಗಣ್ಣು ಕುಡಿಹುಬ್ಬು ನೋಟದಿಂದಲಿ ॥
ಉಂಡು ಉಟ್ಟು ಗುಂಡಿನಂತೆ ಮನೆಯಲಿರುವರೊ ।
ಚಂಡ ಯಮನ ದೂತರು ಬಂದು ಎಳೆದು ಒಯ್ವರೊ ॥
ವ ಟ್ಟಿ ಭಜಿಸಿರೊ ಹಯವದನನಂಘ್ರಿಯ ।
ನೆಟ್ಟನೆ ಮುಕ್ತಿಮಾರ್ಗ ತೋರಿಕೊಡುವನೊ ॥ [40]

ಉಪದೇಶ ನೀತಿಬೊ ಧಗಳಂತೆಯೇ ಲೋಕಜೀವನವನು ವಿಡಂಬಿಸುವುದೂ ದಾಸರ ರೀತಿಯೇ ಈ ವಿಡಂಬನೆ ತುಂಬ ಪರಿಣಾಮಕಾರಿಯಾಗ ವಂತೆ ಮಾಡು ವಲ್ಲಿಯೂ ಆಡ ನುಡಿ ತನ್ನ ಪಾತ್ರವನ್ನು ವಹಿಸುತ್ತದೆ ಉದಾಹರಣೆಗೆ ಹಣದ ಗುಣವನು ಬಣ್ಣಿಸುವ ವಾದಿರಾಜರ ಈ ಕೀರ್ತನೆಯನ್ನು ನೋಡಬಹ ದು

ಹಣವೆ ನಿನ್ನಯ ಗ ಣವೇನು ಬಣ್ಣಿಪೆನೊ ।
ಹಣವಿಲ್ಲದವನೊಬ್ಬ ಹೆಣವೆ ಸರಿ ಕಂಡ್ಯಾ ॥
ಬೆಲೆಯಾಗದವನೆಲ್ಲ ಬೆಲೆಯ ಮಾಡಿಸುವಿ
ಎಲ್ಲ ವಸ್ತುಗಳನಿದ್ದಲ್ಲೆ ತರಿಸುವಿ ।
ಕ ಲಗೆಟ್ಟವರ ಸತ್ಕುಲಕೆ ಸೇರಿಸುವಿ
ಹೊಲೆಯನಾದರೂ ತಂದೊಳಗಿರಿಸುವಿ ॥
ಅಂಗನೆಯರ ಸಂಗ ಅತಿಶಯದಿ ಮಾಡಿಸುವಿ
ಶ ೃಂಗಾರಾಭರಣಂಗಳ ಬೇಗ ತರಿಸುವಿ ।

ಮಂಗನಾದರು ಅನಂಗನೆಂದೆನಿಸ ವಿ
ಕಂಗಳಿಲ್ಲದವಗೆ ವ ಗಳ ಕೊಡಿಸ ವಿ ॥
ಚರಣಕ್ಕೆ ಬಂದಂಥ ದುರಿತವನ್ನು ಬಿಡಿಸ ವಿ
ಸರುವರಿಗೆ ಶ್ರೇಷ ನರನ ಮಾಡಿಸುವಿ ।
ಅರಿಯದ ಶ ೀರನ ಅರಿತವನೆನಿಸುವಿ
ಸಿರಿಹಯವದನನ ಸ್ಮರಣೆ ವ ರೆಸುವಿ ॥ [41]

ಹರಿಸರ್ವೋತ ವ ತ್ವದ ಪ್ರತಿಪಾ ದನೆ ಹ ಗೂ ಅನನ್ಯ ಶರಣಾಗತಿಯ ನಿರೂಪಣೆ ಹರಿದ ಸಸಾಹಿತ್ಯದ ಒಂದು ವಿಶಿಷ ಲಕ್ಷಣ ಈ ಭಾವನೆಯನು ಬಿಂಬಿಸುವ ವಾದಿರಾಜರ ಕೀರ್ತನೆಯೂ ಅಚ್ಚಗನ್ನಡದ ಸೊಗಸನ್ನು ಮನವರಿಕೆ ಮಾಡಿಕೊಡುವಂತೆಯೂ ಇದೆ

ಇನ್ನೇನು ಮಾಡುವೆ ಇನ್ಯಾರ ಬೇಡುವೆ ಪ್ರ
ಪ್ರಸನ ಚೆನ ಕೇಶವ ಎನ್ನ ಬಿನ ಪವ ।
ವ ನ್ನಿಸಿ ದಿನ ದಿನದಲ್ಲಿ
ನಿನ ನಚ್ಚಿಪಂತೆ ಮಾಡು ॥
ಮೊಲೆಯ ಂಬ ಹಸ ಗೂಸು ಮಾತನಾಡಿ ತನ್ನ
ಮನದಭೀಷ್ಟವ ಪೇಳ್ವುದೆ
ಚೀರಿ ಅಳ ವದ್ಯೆಸೆ ಅದನರಿತು ಆದರ ತಾಯಿ
ಅಪ್ಪಿ ಮುದ್ದಾಡಿಸುತ್ತ
ಬಳಲಿಕೆ ಪೋಪಂತೆ ನುಸ ಬಿಸಿ ಪಾ ಲನು
ಬಾಯೆಂದು ಕುಡಿಸುವಳು
ಸಿರಿಲಲನೆಯ ರಸ ನಮ್ಮಾ ಈ ಪರಿಯಲಿ
ನೀನು ಲ ಲಿಸಿ ಸಲಹಬೇಕು ॥
ಪರರ ವ ನೆಗಳಿಗೆ ಪರಿಪರಿದು ನಾನು ಬೇ
ಸರಲ ರೆ ತಂದೆ ನೀ
ನಿರಿಸಿದಂತೆ ಇರಲ ಳ್ಳವನು ಎನ್ನ
ಭರಭಾರ ನಿನ ದಯ್ಯ
ಅರಿಯ ದ ಮೂಢ ನಾನು ಅರಿವಿನೊಡಲು ನೀನು
ಕಿರಿದಿಗೆ ಕಿರಿದು ನಾನು ನೀನು
ಹಿರಿಯ ರಿಗೆ ಹಿರಿಯನು ಕರಿಕರೆಯಲು
ಪೊರೆದಂತೆ ಪೊರೆಯೆ ನ ನು
ವ ಕರಿಯು ಕೋದು ಪೊರೆದಂತೆ ॥

ಸರಿ ಮಿಗಿಲಿಲ್ಲದ ಸರ್ವೇಶ ಹರಿಯೆ ಎಂದು
ಸಿರಿ ಹಯವದನರ ಯ ನಿನ್ನ
ಪರಮ ಮುನಿಗಳಲ್ಲಿ
ಪರೀಕ್ಷೆಯ ಮಾಡಿನೋಡಿ
ಮುನ ನಿರ್ಣೈಸಿದರು ಇನ್ನಾರು ನಿನ್ನಂಥವರು ? ॥ ೬೩

ತಾತ್ವಿಕ ವಿಚಾರಗಳನ್ನು ಮಾತ್ರವಲ್ಲದೆ ಸ ರ್ವತ್ರಿಕ ತತ್ವಗಳನ್ನು ಬೋಧಿಸುವ ಸಂದರ್ಭದಲ್ಲಿಯೂ ಅವರ ಮನಸ್ಸು ದೇಸಿಯನೆ ೇ ಆಶ್ರಯಿಸುತ್ತದೆ ಉದಾಹರಣೆಗೆ ತ ಳ್ಮೆ ಯ ವಿಚಾರವನು ಒತ್ತಿ ಹೆ ಳುವ ಈ ಕೀರ್ತನೆಯ ನ್ನು ನೋಡಬಹುದು

ತ ಳುವಿಕೆಗಿ ತ ತಪವು ಇಲ್ಲ ।
ಕೇಳಬಲ್ಲವರಿಗೆ ಹೇಳುವೆನು ಸೊಲ್ಲ ॥
ದುಷ್ಟ ಮ ನುಜರು ಪೇಳ್ವ ನಿಷು ರದ ನುಡಿ ತಾಳು
ಕಷ್ಟ ಬಂದರೆ ತಾಳು ಕಂಗೆಡದೆ ತಾಳು ।
ನೆಟ್ಟ ಸಸಿ ಫಲ ಬರ ಮತನಕ ಶಾಂತಿಯ ತಾಳು
ಕಟ್ಟು ಒತ್ತಿಯ ಮುಂದೆ ಉಣ ಉಂಟು ತಾಳು ॥
ಹಳದು ಹಂಗಿಸ ವ ಹಗೆಯ ಮಾತನು ತಾಳು
ಸ ಳಿನುಡಿ ಕುಹಕ ಕುಮಂತ್ರವನ್ನು ತಾಳು ।
ಅಳ ಕದಲೆ ಬಿರುಸು ಬಿಂಕದ ನ ಡಿಯ ನೀತಾಳು
ಹಲಧರಾನುಜನನು ಹ ದಯದಲಿ ತಾಳು
ನಕ್ಕು ನ ಡಿವರ ಮುಂದೆ ಮುಕ್ಕರಿಸದೆ ತಾಳು
ಅಕ ಸವ ಮಾಡುವರ ಅಕ್ಕರದಿ ತಾಳು ।
ಉಕ್ಕೋ ಹಾಲಿಗೆ ನೀರು ಇಕ್ಕಿದಂದದಿ ತಾಳು
ಪಕ್ಷೀಶ ಹಯವದನ ಶರಣೆಂದು ಬಾಳು ॥ ೬೪

ದಾಸರೆಂದರೆ ಪುರಂದರದಾ ಸಯ್ಯ ಎಂದು ಗ ರುಗಳಾದ ವ್ಯಾಸರಾಯರಿಂದಲೇ ಹೊಗಳಿಸಿಕೊಂಡ ಶ್ರೀ ಪುರಂದರದಾಸರಲ್ಲಿ (ಕ್ರಿ ಶ ೧೪೮೪-೧೫೬೪) ದೇಸಿಯ ವಿಶ್ವರೂಪವನ್ನೇ ನಾವು ಕಾಣಬಹುದು ದೇಸಿಯ ಸೊಬಗನ್ನು ವೆ ರೆಯುದ ಅವರ ರಚನೆಯೇ ಇಲ್ಲವೆನು ವಷ್ಟು ದೇಸಿಯ ಸಮೃದ್ಧಿಯನು ಅವರ ರಚನೆಗಳು ಸೂರೆಗೊಡುತ್ತವೆ ಅವರ ಹೃದಯವೇ ದೇಸಿಯ ಲ್ಲಿ ಸ್ಪಂದಿಸುತ್ತಿದೆ

ಯೆಂಬ ಅನುಭವ ನಮಗಾಗುತ್ತದೆ ದಾಸಸಾಹಿತ್ಯದ ಅನೇಕ ಉದ್ದೇಶಗಳಿಗೆ ದೇಶಿಯನು ಯಶಸ್ವಿಯಾಗಿ ಕಸಿಮಾಡಿದ ಹಿರಿಮೆಯೂ ಅವರದಾಗಿದೆ ವಾಸ್ತವವಾಗಿ ಅವರ ರಚನೆಗಳ ಸ್ವಜನಪ್ರಿಯತೆಗೆ ದೇಸಿಯೂ ಬಹುವ ಟ್ಟಿಗೆ ಕಾರಣವೆಂದರೆ ತಪ್ಪಾಗಲಾರದು

ಶ್ರೀಕೃಷ್ಣನ ಬಾಲಲೀಲೆಯ ತುಂಟಾಟಗಳನ್ನು ವರ್ಣಿಸುವ ಈ ಕೀರ್ತನೆಯಲ್ಲಿನ ದೇಶಿಯಂ ಸಹಜ ಲಾಸ್ಯವನು ನೋಡಿ

ಮೆಲ್ಲ ಮೆ ಲ್ಲನೆ ಬಂದನೆ ಗೋಪಮ್ಮ ಕೆ ಳಿ
ಮೆ ಲ್ಲ ಮೆಲ್ಲನೆ ಬಂದನೆ ॥
ಮೆ ಲ್ಲ ಮೆ ಲ್ಲನೆ ಬಂದು ಗಲ್ಲಕೆ ಮುದ್ದುಕೊಟ್ಟು
ನಿಲ್ಲದೆ ಓಡಿ ಹೋದ, ಕಳ್ಳಗೆ ಬುದ್ಧಿ ಪೇಳೆ ॥
ಹಾಲು ಮಾರಲು ಪೋದರೆ ನಿನ ಯ ಕಂದ
ಕಾಲಿಗಡ್ಡವ ಕಟ್ಟಿದ ಹಾಲ ಸುಂಕವ ಬೇಡಿ ।
ಕೋಲನೆ ಅಡ್ಡಗಟ್ಟಿ ಶಾಲೆಯ ಸೆಳೆದುಕೊಂಡು
ಹೇಳದೊಡಿದ ಕೃಷ್ಣ ॥

ಹೋಗೀರೆ ರಂಗಯ್ಯನ ಮೆ ಲೆ ನೀವು
ದೂರೇನು ಕೊಂಡು ಬಂದಿರೆ
ಯೋಗೀಶ ಪುರಂದರವಿಠಲರಾಯನ
ತೂಗಿ ಪಾಡಿರೆ ಬೇಗ ನಾಗವೆ ಣಿಯ ರಲ್ಲ ॥ [44]

ಐಹಿಕ ಭೋಗ ಭಾಗ್ಯಗಳ ನಶ್ವರತೆಯನು ಸಾರಿಹೇಳುವ ಈ ಕೀರ್ತನೆಯಲ್ಲಿನ ಲೊಳಲೊಟ್ಟೆ ಎಲ್ಲಾ ಲೊಳಲೊಟ್ಟೆ ಎಂಬ ಮಾತುಗಳಂತೂ ದೇಸಿಯ ಅಸದೃಶ ಸಾವ ರ್ಥ್ಯವನ್ನು ಸಾರ ತ್ತವೆ

ಲೊಳಲೊಟ್ಟೆ ಎಲ್ಲಾ ಲೊಳಲೊಟ್ಟೆ
ಆನೆಕ ದ ರೆ ಒಂಟೆ ಲೊಳಲೊಟ್ಟೆ ।
ಬಹ ಸೇನೆ ಭಂಡಾರವು ಲೊಳಲೊಟ್ಟೆ
ಮಾನಿನಿಯರ ಸಂಗ ಲೊಳಲೊಟ್ಟೆ

ಕಂಟಕರೆಂಬೋದು ಲೊಳಲೊಟ್ಟೆ
ನಮ್ಮ ನೆಂಟರು ಇಷ್ಟರು ಲೊಳಲೊಟ್ಟೆ
ಉಂಟಾದ ಗುಣನಿಧಿ ಪುರಂದರವಿಠಲನ್ನ
ಬಂಟನಾಗದವ ಲೊಳಲೊಟ್ಟೆ ॥ [4]

ಹರಿನಾಮದ ಮಹಿಮೆಯನು ಸಾರುವ—

ಕಲ್ಲು ಸಕ ರೆ ಕೊಳ್ಳಿರೊ ನೀವೆಲರು ಕಲ್ಲು ಸಕ್ಕರ ಕೊಳ್ಳಿರೋ ॥
ಕಲ್ಲು ಸಕ್ಕರೆ ಸವಿ ಬಲ್ಲವರೆ ಬಲ್ಲರು
ಫುಲ್ಲಲೋಚನ ಶ್ರೀಕೃಷ್ಣ ನಾಮವೆಂಬ ॥
ಎತ್ತು ಹೆ ರುಗಳಿಂದ ಹೊತ್ತು ಮಾರುವುದಲ್ಲ
ಒತ್ತೊತ್ತಿ ಗೋಣಿಯೊಳ್ತುಂಬುವುದಲ್ಲ ।
ಎತ್ತ ಹೋದರು ಬಾಡಿಗೆ ಸುಂಕವಿದಕಿಲ್ಲ
ಉತ್ತಮ ಸರಕಿದು ಅತಿಲಾಭ ಬರುವಂಥ ॥
ನಷ್ಟ ಬೀಳುವುದಲ್ಲ ನಾತ ಹುಟ್ಟುವುದಲ್ಲ
ಎಷ್ಟು ಒಯ್ದರು ಬೆಲೆರೊಕ್ಕವಿದಕಿಲ್ಲ ।
ಕಟ್ಟಿರುವೆಯು ತಿಂದು ಕಡವೆ ಯಾಗುವುದಲ್ಲ
ಪಟ್ಟಣದೊಳಗೆ ಪ್ರಸಿದ್ಧವಾಗಿರುವಂಥ ॥
ಸಂತೆ ಸಂತೆಗೆ ಹೋಗಿ ಶ್ರಮಪಡಿಸುವುದಲ್ಲ
ಸಂತೆಯೊಳಗೆ ಇಟ್ಟು ಮಾರುವುದಲ್ಲ ।
ಸಂತತ ಭಕ್ತರ ನ ಲಿಗೆ ಸವಿಗೊಂಬ ।
ಕಾಂತ ಪುರಂದರವಿಠಲನ ನಾಮವೆಂಬ ॥ [46]

ಎಂಬ ಈ ಕಿ ರ್ತನೆಯಲ್ಲಾಗಲೀ ಐಹಿಕ ಭೋಗಭಾಗ್ಯಗಳಲ್ಲಿ ವ್ಯೈವ ರೆತು ಭಗವಂತ ನನ್ನು ಮರೆತುದಕ್ಕಾಗಿ ವಿಷಾದಿಸಿ ಹಂಬಲಿಸುವ ಭಕ್ತನ ಆತ್ಮನಿವೆ ದನೆಯು ಪ್ರತೀಕ ವಾಗಿರುವ—

ಏನು ಗತಿಯೋ ಎನಗೆ ಎಲ್ಲೆ ಹರಿ ।
ನಾ ನಿನ್ನ ನೆನೆಯ ದೆ ಮೋಸಹೊ ದೆನಲ್ಲೋ ॥

x x x x

ಉರಿವ ಕಿಚ್ಚನು ಹಿತವೆಂದು ಬಂದದರೊಳು
ಎರಗಿದಾ ಪತಂಗದ ತಾದೆನಲ್ಲೋ ।
ಸಲೆ ನಿಜವೃತ್ತಿಯ ಜರೆದು ಪರಾನ ವಾ
ನಲಿದ ಉಡು ಹೊಟ್ಟೆಯ ಹೊರೆಯುತಲಿ ॥
ಒಲೆಯ ತುದಿಯ ಲ್ಲಿದ್ದ ಮಾಂಸಕೆ ಮೋಹದಿ
ಸಿಲುಕಿದಾ ಮಿನಿನಂತಾದೆನಲ್ಲೋ ಹರೀ ॥ [47]

ಎಂದು ಸಾಗುವ ಕೀರ್ತನೆಯಲ್ಲಾಗಲೀ ಇಹಲೋಕ ಪರಲೋಕಗಳ ಭೇದ ವನು ವ ನೆಗಾಣಿಸಿ ನೆಚ್ಚಬೇಕಾಗಿರ ವ ನಿಜದ ನೆಲೆಯತ್ತ ಗಮನ ಸೆಳೆಯುವ

ಆಲ್ಲಿದೆ ನಮ್ಮನೆ ಇಲ್ಲಿ ಹೋದೆ ಸುಮ್ಮನೆ ॥
ಕದ ಬಾಗಿಲಿರಿಸಿದ ಕಳ್ಳಮನೆಯಿದೂ
ಮುದದಿಂದ ಲೋಲ್ಯಾಡೊ ಸ ಳ್ಳುಮನೆ ॥

ಮೂಳಿಗೆ ಮನೆಯಿಂದ ನೆಚ್ಚಿ ಕೆಡಲುಬೇಡ
ಕೇಳಯ್ಯ ಹರಿಕಥೆ ಶ್ರವಣಂಗಳಾ ॥
ನಾಳಿಮದೂತರು ಒಂದೆಳೆದೊಯ್ಯಾಗ
ಮಾಳಿಗೆ ಮನೆ ಸಂಗಡ ಬ ರದಯ್ಯ ॥ [೩೮]

ಎಂದು ಮುಂತ ಗಿ ಸತ್ಯೋದ್ಘಾಟನೆ ಮಾಡ ವ ಕೀರ್ತನೆಯಲ್ಲಾಗಲೀ ಬಾಳಿನಲ್ಲಿ ಶೀಲದ ಪ್ರಾಮುಖ್ಯವನು ಸಾರುವ—

ಹೊಲೆಯ ಹೊರಗಿಹನ ಊರೊಳಗಿಲ್ಲವೆ
ಶ್ರೀಹರಿಯ ಸ್ಮರಣೆಯನ್ನು ಬಲ್ಲವರು ಪೇಳಿ ॥

x x x x

ಇದ್ದಾಗ ದಾನಧರ್ಮವ ಮಾಡದವ ಹೊಲೆಯ
ಮದ್ದಿಕ್ಕಿ ಕೊಲ್ಲುವವ ಮಾರಿ ಹೊಲೆಯ
ಬದ್ಧವಾದ ನಯ ನುಡಿಯು ಇಲ್ಲದಾತನೆ ಹೊಲಯ
ಶುದ್ಧ ನಂಬಾತ ಶುಂಠ ಹೊಲೆಯ ॥
ಆಸೆಮಾತನು ಕೊಟ್ಟು ಭಾಷೆ ತಪ್ಪುವ ಹೊಲೆಯ
ಲೇಸ ಉಪಕ ರಗಳ ಮಾಡಿದವ ಹೊಲೆಯ ।
ಮೋಸದಲಿ ಜೀವನವ ಮುನಿದು ಕೆಡಿಸುವ ಹೊಲೆಯ
ಹುಸಿಯ ಬೊಗ ಳ ವನೊಬ್ಬ ಹ ಚ್ಚು ಹೊಲೆಯ ॥
ಅರಿತು ಆಚಾರವನು ನಡೆಸದಾತನೆ ಹೊಲೆಯ
ಪರಸತಿಗೆ ಅಳ ಕಿದವ ಪಾಪಿ ಹೊಲೆಯ ।
ಗಂರುಡಿರಿಯ ರನು ಕಂಡು ನಮಿಸಿದಾತನೆ ಹೊಲೆಯ
ಪುರಂದರವಿಠ ಲನ ನೆನೆಯದವ ಹೊಲೆಯ ॥ [೨]

ಈ ಕೀರ್ತನೆಯ ಲ್ಲಾಗಲೀ ನೀನೆ ಗತಿ ನೀನೆ ಮತಿ ನೀನೆ ಸ್ವಾಮಿ ನಿನ್ನಲ್ಲದ ನ್ಯತ್ರ ದೈವಗಳ ನಾನರಿಯೆ [೩೯] ಎಂಬ ಪರಮ ಸಮರ್ಪಣ ಭಾವದ ರಚನೆಯ ಲ್ಲಾಗಲೀ ನೇಸಿಯ ಸೊಗಸ ಸ್ವಾರಸ್ಯಗಳು ನಮ್ಮ ಮನವನ್ನು ಸೆಳೆಯದೆ ಇರುವು ಧಾರ್ಮಿಕ ಚಿಂತನೆಗಳೇ ಆಗಲಿ ಸಾಹಿತ್ಯಿಕ ಸಂಸ್ಪರ್ಶದ ಭಾವನೆಗಳೇ ಆಗಲಿ ದೇಸಿ ಯಲ್ಲಿ ಬೆಸುಗೆಗೊಂಡು ಅಪೂರ್ವ ಸೌಂದರ್ಯದಿಂದ ಕಂಗೊಳಿಸ ತ್ತವೆ

ಶ್ರೀ ಪುರಂದರದಾಸರ ಸಮಕಾಲೀನರಾದ ಶ್ರೀ ಕನಕದಾಸರಲ್ಲಿಯೂ (ಕ್ರಿ.ಶ. ೧೫೦೯-೧೬೦೭) ದೇಸಿಯ ಚೆಲುವು ಸಾಮರ್ಥ್ಯ ಮತ್ತು ವೈಭವಗಳನ್ನು ಕಾಣಬಹುದು. ಲೋಕದ ಭಂಡತನವನ್ನು ದಿಟ್ಟತನದಿಂದ ಬಯಲಿಗೆಳೆಯುವ

ಎಲ್ಲಾರು ಮಾಡುವುದು ಹೊಟ್ಟೆಗಾಗಿ ಗೇಣುಬಟ್ಟೆಗಾಗಿ

ಚಂಡಭಟರಾಗಿ ನಡೆದು ಕತ್ತಿ ಡಾಲು ಕೈಲಿ ಹಿಡಿದು
ಖಂಡತುಂಡ ಮಾಡುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ ॥
ಅಂದಣ ಪಲ್ಲಕ್ಕಿಯೇರಿ ಮಂದಿ ಮಾರ್ಬಲ ಕೂಡಿ
ಚಂದದಿಂದ ಮೆರೆಯುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ ॥
ಸಂನ್ಯಾಸಿ ಜಂಗಮ ಜೋಗಿ ಜಟ್ಟಿ ಮೊಂಡ ಬೈರಾಗಿ
ನಾನಾ ವೇಷಗಳೆಲ್ಲ ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ ॥ [61]

ಇಂಥ ಕೀರ್ತನೆಯಲ್ಲಾಗಲೀ

ಉಂಬುವುದಕಿಲ್ಲದ ಅರಸಿನೋಲಗಕಿಂತ
ತಂಬಿದೂರೊಳಗೆ ತಿರಿದುಂಬುವುದೆ ಲೇಸು
ಹಂಬಲಿಸಿ ಹಾಳು ಹರಟೆ ಒಡಿಯುವುದಕಿಂತ
ಹರಿದಾಸರಲಿ ಕಲಹವೇ ಲೇಸು ॥ [62]

ಎಂಬಂಥ ವಿವೇಕ ಬೋಧೆಯಲ್ಲಾಗಲೀ ದೇಸಿ ಸಾಂದ್ರ ಪ್ರಭಾವದೊಂದಿಗೆ ಮೆರೆಯುವುದು ನಮ್ಮ ಅನುಭವಕ್ಕೆ ಒಂದೇ ಒರುತ್ತದೆ. ಇಷ್ಟೇ ಅಲ್ಲ ಬೆಡಗಿನ ವಚನಗಳನ್ನೇ ಹೋಲುವ ಮುಂಡಿಗೆಯ ರಚನೆಗಳಲ್ಲಿಯೂ ದೇಸಿಯ ವೈಭವವನ್ನು ಕನಕದಾಸರು ಮೆರೆಯಬಲ್ಲರು ಎಂಬುದಕ್ಕೆ ಸಾಕ್ಷಿ ಇದು

ಒಂಬತ್ತು ಹೂವಿಗೆ ಒಂದೇ ನಾಳವು । ಚಂದಮಾಮಾ ॥
ತುಂಬಿನಾಳ ತದಿತ ಒಬ ಭಾನ ಪ್ರಭೆ । ಚಂದಮಾಮಾ
ಕದರುಗಾತರ ಕಂಬ ತೆಕ್ಕೆಗಾತರ ಹೂವು । ಚಂದಮಾಮಾ
ಆನೆಗಾತರ ಕಾಯಿ ಒಂಟೆಗಾತರ ಹಣ್ಣು । ಚಂದಮಾಮಾ ॥
ಕಾಲಿಲ್ಲದಾತನು ಹತ್ತಿದನಾ ಮರ । ಚಂದಮಾಮಾ
ಕೈಯಿಲ್ಲದಾಸನು ಕೊಯ್ದನು ಆ ಹಣ್ಣು । ಚಂದಮಾಮಾ
ಕನಕನಾಡಿದ ಗುಟ್ಟು ಆದಿಕೇಶವ ಬಲ್ಲ । ಚಂದಮಾಮಾ ॥
ತಿಳಿದವರು ಪೇಳಿರೈ ಹಳಗನ್ನಡ । ಚಂದಮಾಮ ॥ [63]

ದೇಸಿಯು ಅಚ್ಚಗನ್ನಡತನದ ಲಕ್ಷಣವನ್ನು ಮೀರಿ ಅದರ ಮುಂದಿನ ಹಂತವಾದ ಆಡುನುಡಿಯ ಸೊಗಸನು ಅಥವಾ ಜಾನಪದದ ಸೊಬಗನು ತಂದು ಕೊಡ

ಬಲ್ಲ ಶಕ್ತಿಯೂ ಕನಕದಾಸರಲ್ಲಿತ್ತು ಎಂಬುದಕ್ಕೆ ದೇವಿ ನಮ್ಮ ದ್ಯಾವರು ಬಂದರು ಬನ್ನಿರೆ ನೋಡ ಬನ್ನಿರೆ [೩೪] ಎಂಬ ಅವರ ಕೀರ್ತನೆ ಉದಾಹರಣೆಯನ್ನಾದಗಿ ಸಂತೃದೆ

ಅನುಸ್ಯೂತವಾಗಿ ಶತಮಾನಗಳ ಕಾಲ ಸಾಗಿ ಬಂದಿರುವ ಹರಿದಾಸರ ಮ ಹಾ ಪರಂಪರೆಯಲ್ಲಿ ಪ್ರಾತಿನಿಧಿಕವಾಗಿ ಶ್ರೀ ಮಹಿಪತಿರಾಯರು (ಕ್ರಿ ಶ ೧೬೧೧ ೮೧) ಶ್ರೀ ಗೋಪಾಲದಾಸರು (ಕ್ರಿ ಶ ೧೭೨೧ ೬_) ಮ ತ್ತು ಶ್ರೀ ಜಗನಾ ಥದಾಸರ (ಕ್ರಿ ಶ ೧೭೨೮ ೧೮೧೯) ರಚನೆಗಳನ್ನು ಪರಿಶೀಲಿಸಬಹುದು

ಹರಿದಾಸಸಾಹಿತ ದ ಇತಿಹಾಸದ ಅತ್ಯಂತ ಸಂದಿಗ್ಧ ಕಾಲದಲ್ಲಿ ಕಾಣಿಸಿಕೊಂಡ ಮಹಿಪತಿದಾಸರಲ್ಲಿಯೂ ದೇಸಿಯ ನಿಚ್ಚಳವಾದ ನಿಲುವು ಇರುವಂಥ ರಚನೆಗಳನ್ನು ಕಾಣಬಹ ದಾಗಿದೆ ಆತ್ಮಾನಂದದ ಅನ ಭವವನ್ನು ವರ್ಣಿಸುವ ಅವರ ಈ ಪರಿ ಯನ್ನು ನೋಡಿ

ಸ್ವಾನಂದದ ಸುಖ ಏನೆಂದ್ಹೇಳಲಿ ಕೌತ ಕ ।
ಒಡೆದು ಹೇಳುವುದಲ್ಲ ಓಡಿದು ತಾ ಕೊಡಲಿಕ್ಕಿಲ್ಲ
ಪಡೆದುಕೊಂಡವನೆ ಬಲ್ಲ ಗೂಡಿನ ಸೊಲ್ಲ ॥
ಸಕ್ಕರೆ ಸವಿದಂತೆ ಮೂಕಪ್ರಕಟಿಸೇನೆಂದರೆ ಸುಖ
ಮುಕುತಿಗೆ ಬಾರದು ನಿಶ್ಯಂಕ ಸುಖ ಅಲೌಕಿಕ ॥
ಮನುಜನರ ಹೆಜ್ಜೆ ಮೆಟ್ಟು ಏನೆಂದ್ಹೇಳಲಿ ನಾ ಗುಟ್ಟು
ಅನುದಿನ ಮಹಿಪತಿ ಗುಟ್ಟು ಘನಕ್ಕೆಗೊಟ್ಟು ॥[೩೫]

ಅಥವಾ ಭವದ ನಿದ್ರೆಯನ್ನು ಕಳೆದ ಚಿತ್ಪ್ರಕಾಶದ ಬೆರಗನ್ನು ಬಣ್ಣಿಸುವ ಈ ನುಡಿಗಳನ್ನು ನೋಡಿ

ಬೆಳಗಿನೊಳು ಬೆಳಗಾಯಿತಂ ನೋಡಿ
ಥಳಥಳಿಸುತ ಮನದೊಳಗೆ
ಹೊಳೆಯುತ ಒಳಹೊರಗೇಕೋ ಮಯದಲ
ರಥಳ ರಥಳಿಸುತಿಹುದು ಜಗದೊಳಗೆ
ಬೆಳಗಾಯಿತು ಎನ್ನೊಳಗೆ ॥

x x x x

ಬೆಳಗಿನೊಳು ಬೆರಗಾದನು ಮಹಿಪತಿ ಅತಿ ಆಶ್ಚರ್ಯವ ನೋಡಿ

ತೊಳಲಿ ಬಳಲುವ ಭವದ ನಿದ್ರೆಯಂಗಳೆದನು ತಾ ಕಾಡ್ಯಾಡಿ
ಬೆಳಗೇ ಬೆಳಗಾಯಿತು ಘನಗುರುದಯಮನದೊಳಂ ನಿಜ ಒಡಮೂಡಿ
ಬೀಳುವ ತಿಮಿರ ಢವ ಭವಪಾಶವ ಕಳೆದನು ಸದ್ಗುರು ಪಾದವ ಕೂಡಿ ॥ [೬]

ಅನುಭವೈಕಗಮ್ಯವಾಗಿರುವ ಇ ಧ ಭಾವನೆಗಳನ್ನು ಇಂತ ದರೂ ತೆರೆದು ಹೇಳಲು ಸಾದ್ಯವಾಗಿರುವುದಕ್ಕೆ ದೇಶಿಯೂ ಕಾರಣವ ಗಿದೆ—ಹೃದಯ ಸಂವಾದ ವನ್ನು ಸಾಧಿಸುವ ಶಕ್ತಿ ಶಿಷ್ಟ ಭಾಷೆಗಿಂತ ಆಡುನುಡಿಯಲ್ಲಿ ಹೆಚ್ಚಾಗಿ ಬಿ ಡ ಬಿಟ್ಟಿರು ವುದರಿಂದ ಅಂತೆಯೇ ಬೆಡಗಿನ ಕೀರ್ತನೆಗಳ ರಚನೆಯಲ್ಲಿಯೂ ಅವರು ದೇಸಿ ಯ ನ್ನು ಯ ಶಸ್ವಿಯಾಗಿ ಬಳಸಬಲ್ಲರು ಎಂಬ ದಕ್ಕೆ ಇದು ಸಾಕ್ಷಿಯಾಗಿದೆ

> ತಾಯಿ ಇಲ್ಲದ ಶಿಶುವು ಕಾಯ ವಿಲ್ಲದೆ ಬಂದು
> ಕೈಯ ಇಲ್ಲದೆ ಕೊಂಡು ಸೆ ವಿಸುವುದು
> ಬಾಯಿ ಇಲ್ಲದೆ ನುಂಗುವುದು ಕಂಡು ವ ಹಿಪತಿಯು
> ಕೈಯ ಮುಗಿದನು ಗುರುವಿಗೆ ತ್ರಾಹಿಯೆ ಂದು ॥ [67]

ಇಂಥ ಸಂದರ್ಭಗಳಲ್ಲಿ ಮಾತ್ರವಲ್ಲದೆ ಸ್ವಾನ ಭವವನ್ನು ಮು ಕ್ತ ರೂಪದಲ್ಲಿ ಹಂಚಿಕೊಳು ವಾಗಲೂ ಅವರ ಬಳಕೆಯ ಲ್ಲಿ ದೇಸಿಯ ಸೊಗಸನ್ನು ಕಾಣಬಹುದು ಉದಾ ಲೇಸ ಲೇಸಾಯಿತೆನ ಜನುಮ ನೋಡಿ ವಾಸ ದೇವನೆ ಬಂದು ಕೈಗೊಡಿ [68]

ಹರಿದಾಸ ಸಾಹಿತ್ಯ ಪರಂಪರೆಯ ಅಪರೋಕ್ಷಜ್ಞಾನಿಗಳಲ್ಲಿ ಪ್ರಮು ಖರೆಂದು ಹೆಸರ ಗಿರ ವ ಗೋಪಾಲದಾಸರಲ್ಲಿಯೂ ನಾವು ಆಡ ನ ಡಿಯ ಬನಿಯ ನು ಕಾಣ ಬಹುದು ಉದಾಹರಣೆಗೆ

> ದಯವಿರಲಿ ದಯ ವಿರಲಿ ದಾಮೋದರ ।
> ಸಯವಾಗಿ ಬಿಡದೆನ್ನ ಸಾಕ ವ ಶ್ರೀಕೃಷ್ಣ ॥
> ಹೋಗಿಬರುವೆ ಯ್ಯ ಹೋದ ಹಾಂಗೆಲ್ಲ
> ಸಾಗುವವನಲ್ಲ ನಾ ನಿನ ಬಿಟ್ಟು ।
> ತೂಗಿ ತೊಟ್ಟಿಲು ಕೊನೆಗೆ ಸ್ಥಳದಲ್ಲೇ ನಿಲ್ಲುವುದೆ
> ಹ್ಯಾಗೆ ನೀ ನಡೆದಂತೆ ಹಾಗೆ ನಾ ನೆಡಕೊಂಬೆ ॥
> × × × ×
> ಬಿನ ಪವ ಕೇಳು ಸ್ವಾಮಿ ಎನ ನೊಬ್ಬನೆ ಅಲ್ಲ
> ಎನ ಹೊಂದಿನಡೆವ ವೈಷ್ಣವರನ ।
> ಇನ್ನವರಿಗೆ ಬಾಹೋ ದ ಷ ರ್ಮಗಳ ಕೆಡಿಸಿ
> ಘನಗತಿಗೈದಿಸುವ ಭಕುತಿ ಕೊಡು ಕರುಣದಿ ॥

ಎನಗೆ ಆವುದು ಒಲ್ಲೆ ಎಲ್ಲೆಲ್ಲಿ ಪೋದರು
ಕ್ಷಣ ಬಿಡದೆ ನಿನ್ನ ನೋಳ್ಪ ಜ್ಞಾನವ ಕೊಡೊ ।
ಚಿನ ವ ಯ ಮೂರುತಿ ಗೋಪಾಲವಿಠಲ
ಘನಕರುಣಿ ಮಧ್ವಮ ನಿ ಮನಮಂದಿರನಿವಾಸ ॥ [೬]

ಅಥವಾ

ಹಾಗೆ ಇತ್ತೇ ಇನ್ನು ಹಾಗೆ ಆಗಲಿ ದೇವ
ಹೀಗೆ ಇತ್ತೇ ಇನ್ನು ಹೀಗೆ ಆಗಲಿ ದೇವ
ಹಾಗೆ ಹೀಗೆ ಇನ್ನು ಎರಡೂ ಆಗಲಿ ದೇವ
ಆಗ್ಬಂಬುವನ್ನಾರು ಈಗ ಅಳುಕವನ್ನಾರು
ಆಗ ವಂಥ ಕಾರ್ಯ ಆಗಲೀಸನು ಯಾರು
ಆಗದಂಥ ಕಾರ್ಯ ಆಗುವಮಾಡುವನ್ನಾರು
ಬ ಗಿದೆ ನಿನ  ಚರಣಂಗಳಿಗೆ ನಾನು
ಹೇಗಾದರು ಲೇಸೆ ನೀನಿತ್ತ ಭಾಗ್ಯಕೆ[೬೦]

ಅಪ್ರಯತ್ನವಾಗಿ ಅದ್ಭುತ ಪರಿಣಾಮಕ್ಕೆ ಆಡುನುಡಿಯನ್ನು ಹೇಗೆ ಯಶಸ್ವಿಯಾಗಿ ಬಳಸಿಕೊಳ್ಳಬಲ್ಲರು ಎಂಬುದಕ್ಕೆ ಅವರ ಇಂಥ ಅನೇಕ ರಚನೆಗಳು ಸಾಕ್ಷಿಯಾಗಬಲ್ಲವು

ಗೂಢಭಕ್ತನ ವರ್ಣನೆಗೂ ಇದೇ ದೇಸಿಯನ್ನು ಬಳಸಿ ಈ ಕ ರ್ತನೆಯಲ್ಲಿ ಅವರು ಓದುಗರನ್ನು ಬೆರಗುಗೊಳಿಸಿದ್ದಾರೆ

ಮಾಡಲಿ ಬೇಕು ಎಲ್ಲ ಮಾಡಿಲ್ಲವೆನಬೇಕು
ನೋಡಲಿ ಬೇಕು ಎಲ್ಲ ನೋಡಿಲ್ಲವೆನಬೇಕು
ಬೇಡಲಿ ಬೇಕು ನಾನೆ ಬೇಡಿಲ್ಲವೆನಬೇಕು
ಓಡಲಿ ಬೇಕು ನಾನೆ ಓಡಲಿಲ್ಲನಬೇಕು
ಆಡಲಿ ಬೇಕು ನಾನೆ ಆಡಿಲ್ಲವೆನಬೇಕು
ನೀಡಲಿ ಬೇಕು ನಾನೆ ನೀಡಿಲ್ಲವೆನಬೇಕು
ಕೇಡು ಲಾಭಕೆ ಮನವ ಕೆಡಿಸದೆ ಒಂದೇ ರೀತಿ
ನೋಡಿದವರಿಗೆ ಉನ್ಮದನಂತೆ ತೋರುತ್ತ
ಗೂಢನಾಗಿ ಹರಿಯ ಗುಣಗಳ ಕೊಂಡಾಡುತ್ತ
ರೂಢಿಲಿ ಈ ವಪುವನ್ನು ಮಾಡಿದೆಲ್ಲ ಸಾಧನ
ಮಾಡಿದವರ ಪ್ರಾಣ ಗೋಪಾಲವಿಠಲ ತಾನು
ನೋಡು ಈ ಪರಿ ಇದ್ದವಗೆ ಮಾಡುವ ಗತಿಗೆ ಹವಣೆ [೬೧]

ಜಗನ್ನಾಥದಾಸರು ಅಪರೋಕ್ಷ ಜ್ಞಾನಿಗಳೆಂದು ಪ್ರಸಿದ್ಧಿಯನ್ನು ಪಡೆದಿದ್ದ ಅನುಭಾವಿಗಳು ಹಾಗೂ ಉಭಯ ಭಾಷಾವಿಶಾರದರು. ಅವರಲ್ಲಿ ಕಾಣ ಬರುವ ಭಾಷಿಕ ಸಂಕ್ರಮಣವನ್ನು ವರ್ಣಿಸುತ್ತ ಡಾ. ಕೆ. ಎಂ. ಕೃಷ್ಣರಾಯರು ಹೀಗೆಂದಿದ್ದಾರೆ. "ಕನ್ನಡದ ಹರುಕು ಮುರುಕು ನುಡಿಗಳಿಗೆ ಅಗಮ್ಯ ಮಹಿಮನಾದ ಪರಮಾತ್ಮನು ಒಲಿಯುವುದು ಸಾಧ್ಯವೆ ? ಶ್ರುತಿಸ್ಮೃತಿ ಸೂತ್ರಾದಿಗಳೇ ಸಾಕಾಗದಿರುವಾಗ ದಾಸ ಪದ ಪೇಳಿದರೆ ಶ್ರೀಶನೊಲಿಯುವನೆ ? ಎಂದು ಚತುಶ್ಶಾಸ್ತ್ರ ಘನಪಂಡಿತರಾದ ಶ್ರೀ ಶ್ರೀನಿವಾಸಚಾರ್ಯರಿಗೆ (ಜಗನ್ನಾಥ ದಾಸರಿಗೆ) ತೋರಿದ್ದುದರಲ್ಲಿ ಆಶ್ಚರ್ಯ ವಾದರೂ ಏನು ? ಹೀಗೆ ಅವರು ಮೊದಲು ಹರಿದಾಸವೃಂದವನ್ನೇ ತೆಗಳಿರಬೇಕೆಂದು ಅನುಮಾನಿಸಬಹುದು. ಆದರೆ ದೈವಲೀಲೆಯಿಂದ ಅವರ ಈ ಅಭಿಪ್ರಾಯ ಬದಲಾಗ ಬೇಕಾಯಿತು. ತಾವು ಯಾವ ಗುಂಪನ್ನು ತೆಗಳಿದ್ದರೋ ಅವಜ್ಞೆಯಿಂದ ಕಂಡಿದ್ದರೋ ಅದೇ ಗುಂಪಿಗೆ ಸೇರಿ ಪ್ರಖ್ಯಾತರೂ ಆದರು ! ಇದೆ ಒಂದು ಪವಾಡ ದಂತಿದೆ—ತನು ಬೆಂದಂತೆ ಮನ ನೊಂದಂತೆ ಭಾವ ಮೃದುವಾಯಿತು. ಸಂಸ್ಕೃತದಲ್ಲಿ ಓದಿದ್ದ ಘನತತ್ತ್ವಗಳು ಕ್ಲಿಷ್ಟವಾದ ಶಾಸ್ತ್ರವಿಷಯಗಳು ಸರಳ ಸುಂದರವಾಗಿ ಕನ್ನಡ ದಲ್ಲಿ ಹುಟ್ಟಿ ಇಳಿದುವು.[೬೨] ವಾಸ್ತವವಾಗಿ ಶ್ರೀ ಗೋಪಾಲದಾಸರ ಯೋಗಸಾಮರ್ಥ್ಯ ದಿಂದ ಇವರಿಗೆ ದೊರೆತ ಆಯುರ್ದಾನ ಕನ್ನಡದ ಪಾಲಿಗೆ ವರವೇ ಆಯಿತು. ಮುಂದುವರಿದು ಕೃಷ್ಣರಾಯರೆನ್ನುತ್ತಾರೆ: "ಪಂಡಿತೋಽಹಂ ಎಂದು ಬೀಗುತ್ತಿದ್ದವರು ದಾಸೋಽಹಂ ಎಂಬ ದೈನ್ಯಕ್ಕೆ ಇಳಿದರು ! ಎಂತಹ ಮಾರ್ಪಾಟು ! ಸ್ನಾನವಾದ ಮೇಲೆ ಮಡಿಯಲ್ಲಿ ಕನ್ನಡ ಮಾತನಾಡುವುದಿರಲಿ ಕೇಳಲೂ ಕೂಡದು ಎಂದಿದ್ದ ಶಾಸ್ತ್ರಜ್ಞ ಹೋಗಿ ಮಾತೃಭಾಷೆಯಾದ ಕನ್ನಡನುಡಿಯ ಸವಿಯನ್ನು ಸವಿದು ದೈವದತ್ತವಾದ ಪ್ರತಿಭೆಯನ್ನು ಈ ಕಡೆಗೆ ತಿರುಗಿಸಿ ಕನ್ನಡ ನುಡಿಯ ಸೇವೆಯನ್ನು ಅಪಾರವಾಗಿ ಮನಃಪೂರ್ವಕವಾಗಿ ಮಾಡಿದರು. ಕನ್ನಡ ವಾಙ್ಮಯದ ಗೌರವವನ್ನು ಕಾಪಾಡಿ ಬೆಳೆಸಿದರು— ಸಂಸ್ಕೃತದಲ್ಲಿನೇನು ? ಏನು ಪಾಮರರ ಪಟ್ಟಿಗೆ".[೬೩]

ಅವರ ಹರಿಕಥಾಮೃತಸಾರದಲ್ಲಿ ಸಂಸ್ಕೃತ ಶಬ್ದಗಳ ಭಾರದಿಂದ ಕುಸಿಯುತ್ತಿರುವಂಥ ಷಟ್ಪದಿಗಳನ್ನು ಗುರುತಿಸಬಹುದಾಗಿರುವಂತೆಯೇ ಅಚ್ಚ ಕನ್ನಡತನದಿಂದ ಮೆರೆಯುತ್ತಿರುವಂಥ ರಚನೆಗಳನ್ನು ಕಾಣಬಹುದು. ಉದಾಹರಣೆಗೆ ಅನುಗಾಲವೂ ಹೇಗೆ ಹರಿಸ್ಮರಣೆಯಲ್ಲಿ ಕಳೆಯಬಹುದೆಂಬುದನ್ನು ನಿರೂಪಿಸುವ ಷಟ್ಪದಿ ಹೀಗಿದೆ:

ಮಕ್ಕಳಾಡಿಸುವಾಗ ಮಡದಿಯೊ—
ಳಕ್ಕರದಿ ನಲಿವಾಗ ಹಯಪ
ಲ್ಲಕ್ಕಿ ಗಜ ಮೊದಲಾದ ವಾಹನಗಳೇರಿ ಮೆರೆವಾಗ ।
ಒಕ್ಕುವಾಗಾಕಳಿಸುತಲಿ ದೇ
ವಕೀತನಯನ ಸ್ಮರಿಸುತಿಹ ನರ
ಸಿಕ್ಕನು ಯಮದೂತರಿಗೆ ಆವಲ್ಲಿ ನೋಡಿದರು ॥

ಸರ್ವಾಂತರ್ಯಾಮಿಯಾಗಿರುವ ಭಗವಂತನನ್ನು ವರ್ಣಿಸುವ ಈ ಷಟ್ಪದಿ ಇನ್ನಷ್ಟು ಕನ ಡಮಯವಾಗಿದೆ

ಎಲ್ಲಿ ಕೇಳಿದರಲ್ಲಿ ನೋಡಿದ
ರೆಲ್ಲಿ ಬೇಡಿದರಲ್ಲಿ ನೀಡಿದ
ರೆಲ್ಲಿ ಓಡಿದರೆಲ್ಲಿಯಾಡಿದರಲ್ಲಿ ಇರುತಿಹನು |
ಬಲ್ಲಿದರಿಗತಿಬಲ್ಲಿದನು ಸರಿ
ಇಲ್ಲ ಇವಗಾವಲ್ಲಿ ನೋಡಲು
ಖುಲ್ಲ ಮಾನವರನೊಲ್ಲನ ಪ್ರತಿಮಲ್ಲ ಜಗಕೆಲ್ಲ ||

ಅವರ ಕೀರ್ತನೆಯಲ್ಲಿಯೂ ಹಿತವಾದ ದೇಸಿಯ ಸಂಗಮವಿರಬಲ್ಲದು ಉದಾಹರಣೆಗೆ ಸ್ತುತಿನಿಂದೆಗಳಿಗೆ ಅತೀತರಾಗಿ ಬಾಳಬೇಕೆಂಬುದನ್ನು ಒತ್ತಿ ಹೇಳುವ

ಬಂಧುಜನರು ತನಗೊಂದಿಸಿ ನುಡಿಯಲು ಬಂದ ಭಾಗ್ಯವೇನೋ |
ಹಿಂದೆ ಮುಂದೆ ತನ್ನ ನಿಂದಿಸಿ ನ ಡಿಯಲು ಕುಂದ ದದ್ದೇನೋ || [66]

ಎಂಬ ನುಡಿಯಾಗಲೀ

ಕೊಳಲೇನು ಪುಣ್ಯವ ಮಾಡಿ ಕೃಷ್ಣನ ಕರವನ್ನೈದಿತೇ [67]

ಎಂಬ ಕೊಳಲಿನ ಭಾಗ್ಯವನ್ನು ವರ್ಣಿಸುವ ಕೀರ್ತನೆಯನ್ನಾಗಲಿ

ಉಂಡು ಉಟ್ಟುದ್ದೆಲ್ಲ ರಂಗನ ಸೇವೆಯೆನಿ
ಕಂಡ ಕಂಡದ್ದು ಹರಿಪ್ರೀತಿಯೆನ್ನಿ ಮೂರ್ಲೋಕಕ್ಕೆ
ಪಾಂಡವಪ್ರಿಯ ನೆ ದೊರೆಯೆನಿ || [68]

ಎಂಬ ತತ್ವಸುವಾಲಿಯನ್ನಾಗಲೀ

ಎನ್ನಪ್ಪ ಎನ್ನಣ್ಣ ಎನ್ನಯ್ಯ ಎನ ರಸ
ಎನ್ನ ಕುಲದೈವ ಸ ಖಿದೋರೋ ಇಹಪರದಿ
ಎನ್ನ ಒಟ್ಟಗಲದಿರು ಕಂಡ್ಯ || [69]

ಎಂಬ ಬಿನ್ನಹದ ಸುವಾಲಿಯನಾ ಗಲೀ ದೇಸಿಯ ಬಳಕೆಯ ನಿದರ್ಶನವಾಗಿ ಹೆ ಳಬಹುದು ಆದರೂ ಇತರ ದಾಸರಿಗೆ ಹೋಲಿಸಿದರೆ ದೇಸಿಯ ಪ್ರಾಚುರ್ಯ ಜಗನ್ನಾಥದಾಸರಲ್ಲಿ ಕಡಿಮೆಯೇ ಎಂದೆನಿಸುತ್ತದೆ ಇತರ ದಾಸರ ಸಂಸ್ಕೃತ ಪಾಂಡಿತ್ಯ ವನ್ನ ಗಣಿಸಿಯೂ

ಹರಿದಾಸ ಸಾಹಿತ್ಯದಲ್ಲಿ ದೇಸಿಯ ಬಳಕೆಯ ಬಗ್ಗೆ ಕೊನೆಯದಾಗಿ ಇಷ್ಟು ಹೇಳಬಹುದು ಭಕ್ತಿ ಪಂಥ ಶ್ರೀಸಾಮಾನ್ಯರ ಬಗೆಗೆ ತೋರಿದ ಕಳಕಳಿಯ ಕುರುಹಾಗಿರುವ ದೇಸಿಯ ಬಳಕೆ ಕನ್ನಡದ ಶಕ್ತಿ ಸಾಮರ್ಥ್ಯಗಳನ್ನು ತೆರೆದು ತೋರಿತು ಹೊಸ ಆಯಾಮಗಳನ್ನು ಕಲ್ಪಿಸಿತು ಭಾಷಿಕ ಸಾಧ್ಯತೆಗಳನ್ನು ಮನವರಿಕೆ ಮಾಡಿಕೊಟ್ಟಿತು ಅನುಭಾವದ ಕ್ಷೇತ್ರದಲ್ಲಿನ ಸವಾಲುಗಳಿಗೆ ಭಾಷೆ ಸರಿಸಮನಾಗಿ ಮಿಡಿದದ್ದು ಮಾತ್ರವಲ್ಲ ಭಾಷೆ ಹೊಸ ಎತ್ತರ ಬಿತ್ತರಗಳನ್ನು ಪಡೆದುಕೊಂಡಿತು ಸಮೃದ್ಧ ಸಾಹಿತ್ಯ ಸೃಷ್ಟಿಯ ಮೂಲಕ ಅನುಭಾವ ಸಾಹಿತ್ಯವನ್ನು ಸಮೃದ್ಧಿಗೊಳಿಸಲು ಅದು ನೆರವಾಯಿತು ಹೊಸ ದಾರ್ಶನಿಕ ಪರಿಭಾಷೆಯನ್ನೇ ಅದು ದೇಶಿಯಲ್ಲಿ ಸೃಷ್ಟಿಸಿತು ಭಕ್ತಿ ಎಂಬುದು ಆರೋಹಣಕ್ಕೆ ದುಸ್ಸಾಧ್ಯವಾದ ಮೇರುವಾಗಿ ಉಳಿಯದೆ ಎಲ್ಲರ ಮನೆಯ ಬಾಗಿಲವರೆಗೂ ಹರಿದು ಬಂದು ಮೈಮನಗಳಿಗೆ ತಂಪೆರೆದ ಪಾವನಗಂಗೆಯಾಯಿತು ಭಕ್ತ ಮತ್ತು ಭಗವಂತನ ನಡುವೆ ಎಬ್ಬಿಸಿದ ಭಾಷೆಯ ಗೋಡೆಯನ್ನು ಕೆಡವಿ ನೇರವಾದ ಹೃದಯಸಂವಾದ ಸಾಧ್ಯವಾಗುವಂತೆ ಮಾಡಿತು ವ್ಯಕ್ತಿಗೆ ಸಮಾಜಕ್ಕೆ ಭಾಷೆಗೆ ದೇಶಕ್ಕೆ ತಾರಕವಾದ ಶಕ್ತಿಯಾಗಿ ಪರಿಣಮಿಸಿತು ಗೌರವಾದರಗಳನ್ನು ಗಳಿಸಿಕೊಡುವ ಸಂಪತ್ತಾಯಿತು ಹೆಮ್ಮೆಯ ಸಾಧನೆಯಾಗಿ ಉಳಿಯಿತು ತಾನು ಬೆಳೆದು ನಾಡ ನುಡಿಗಳನ್ನು ಬೆಳೆಯಿಸಿತು ಒಂದು ಭಾಷೆಯ ಜನಾಂಗದ ಇತಿಹಾಸದಲ್ಲಿ ಅಪೂರ್ವವಾಗಿ ಘಟಿಸುವ ಭಾಗ್ಯದ ಪ್ರತೀಕವಾಯಿತು ಇದು ಕಡಿಮೆ ಅರ್ಥಪೂರ್ಣವಾದ ಸಾಧನೆಯೇನೂ ಅಲ್ಲ

## ಅಡಿ ಟಿಪ್ಪಣಿಗಳು

1 ಕನ್ನಡ ಸಾಹಿತ್ಯ ಚರಿತ್ರೆ ರಂ ಶ್ರೀ ಮುಗಳಿ ಪು ೨೬
2 ಶ್ರೀ ಜಗನ್ನಾಥದಾಸರು ಡಾ ಕೆ ಎಂ ಕೃಷ್ಣರಾವ ಪು ೬೭
3 E P Rice A History of Kanarese Literature p 78
4 ಹರಿದಾಸರ ಸಾಹಿತ್ಯ ಸಂಗೀತಗಳಲ್ಲಿರುವ ಸಾಮರಸ್ಯ ತಲೆದೂಗಿಸುವಂಥದು ಎಂದಿದ್ದಾರೆ ಡಾ ಕೆ ಎಂ ಕೃಷ್ಣರಾಯರು ನೋಡಿ ಪೂರ್ವೋಕ್ತ ಪು ೬೫
5 ಶ್ರೀ ಎಚ್ ಜಿ ಬೆಂಗೇರಿಯವರ ಮೂಲ ಹೇಳಿಕೆ ಇಂತಿದೆ Take away the Dasas from public life the high principles of Vedantha and toiling masses are poles asunder The difficult thoughts of the Upanishads have been analysed into simple and beautiful Kannada and rendered into melodius verses which are sung at the door of every Cottage in the Country What human heart can but grapple with the immense

joy (The Haridasa Kuta p 30) ಡಾ॥ ಕೆ ಎಂ ಕೃಷ್ಣರಾಯರ ಪೂರ್ವೋಕ್ತ ಗ್ರಂಥದಿಂದ ಉದ್ಧೃತ ಪು ೬೫

6 ಮೂಲ ಹೇಳಿಕೆ ಹೀಗಿದೆ The gentle message of their songs had a direct appeal which no heart susceptible to noble impulse could ever resist (The Journal of the Music Academy Madras Vol XIV P 48) ಡಾ॥ ಕೆ ಎಂ ಕೃಷ್ಣರಾಯರ ಪೂರ್ವೋಕ್ತ ಗ್ರಂಥದಿಂದ ಉದ್ಧೃತ ಪು ೬೫

7 ಕೆ ವೆಂಕಟರಾಮಪ್ಪನವರಿಂದ ಉದ್ಧೃತ ನೋಡಿ ಕನ್ನಡ ಸಾಹಿತ್ಯ ಪು ೫೪

8 ಡಾ ಕೆ ಎಂ ಕೃಷ್ಣರಾವ್ ಅವರಿಂದ ಉದ್ಧೃತ ನೋಡಿ ಪೂರ್ವೋಕ್ತ ಗ್ರಂಥ ಪು ೩೫೫ ಕನ್ನಡ ಸಾಹಿತ್ಯ ಪೂರ್ವೋಕ್ತ ಪು ೫೫

9 ಅದೇ ಪು ೩೫೬

10 ಅಲ್ಲೇ

11 ಅಲ್ಲೇ

12 ಹಳಗನ್ನಡ ನಿಘಂಟು ಸಂ ಎನ್ ಬಸವಾರಾಧ್ಯ ಪು ೫೬೬ ೫೪೮

13 ಅದೇ ಪು ೫೬

14 ವಿಕ್ರಮಾರ್ಜುನ ವಿಜಯ ೧ ೨

15 ಅದೆ ೨ ೧

16 ಪಂಪಭಾರತ ದೀಪಿಕೆ ಪು ೫

17 ಅದೇ ಪು ೬೨

18 ನಾಡೋಜ ಪಂಪ ಪು ೨ ೩ ೮

19 ಕವಿರಾಜಮಾರ್ಗ

20 ಸೂಕ್ತಿ ಸುಧಾರ್ಣವ ೧ ೩೫

21 ಶ್ರೀ ಪಾದರಾಜರ ಕೃತಿಗಳು ಸಂ ಡಾ ಜಿ ವರದರಾಜರಾವ ಪು xx xxi

22 ಅದೆ ಪು ೮

23 ಅದೇ ಪು ೮೧

24 ಅದೇ ಪು ೯೪

25 ಅದೇ ಪು ೬೬

26 ಅದೇ ಪು ೧೧೫

27 ಅದೇ ಪು ೧೫೩

28 ಅದೇ ಪು ೪೨

29 ಅದ ಪು ೨೪ ೬

30 ಅದೇ ಪು ೧೬

31 ಅದೇ ಪು ೨೦೭

32 ಶ್ರೀ ಜಗನ್ನಾಥದಾಸರು ಪೂರ್ವೋಕ್ತ ಪು ೯೦

33 ಅಲ್ಲೇ

34 ಅದೇ ಪು ೯೧

35 ಅದೇ ಪು ೯೦

36 ಶ್ರೀ ವಾದಿರಾಜರ ಕೃತಿಗಳು ಸಂ ಡಾ ಟಿ ಎಸ್ ನಾಗರತ ಪು ೨೫೫
37 ಅಲ್ಲೇ
38 ಅದೇ ಪು ೧೮೧
39 ಅದೆ ಪು ೧೬೫
40 ಅದೇ ಪು ೧ ೫
41 ಅದೆ ಪು ೧೬೫
42 ಅದೇ ಪು ೧ ೯ ೨೧
43 ಅದೇ ಪು ೬೩ ೪
44 ಪುರಂದರದಾಸರ ಕೀರ್ತನೆ (ಭಾಗ೧ ೩) ಶ್ರೀ ಮನ್ಮಧ್ವಸಿದ್ಧಾಂತ ಗ್ರಂಥಾಲಯ ಉಡುಪಿ ೧೯೩೧ ಪು ೪೭
45 ಅದೇ ಪು ೫೫
46 ಅದೇ ಪು ೬೪ ೬೫
47 ಅದೇ ಪು ೬೦ ೬೧
48 ಅದೇ ಪು ೮
49 ಅದೇ ಪು ೯೩ ೮೪
50 ಅದೇ ಪು ೮೬
51 ಶ್ರೀ ಜಗನಾ ಥದಾಸರು ಪೂರ್ವೋಕ ಪು ೧೯೮ರಲ್ಲಿ ಉದ್ಧ ತ
52 ಅದೇ ಪು ೧೨೦ರಲ್ಲಿ ಉದ್ಧ ತ
54 ಅಲ್ಲೇ
55 ಶ್ರೀ ಮಹಿಪ ರಾಯ ರ ಕ ತಿಗಳು ಸಂ ಡಾ ಜಿ ವರದರಾಜರ ವ್ ಪು ೩೯೩
56 ಅದೇ ಪು ೨ ೨
57 ಅದೇ ಪು ೨೭
58 ಅದೇ ಪು ೩೩೭
59 ಶ್ರೀ ಗೋಪಾಲದಾಸರ ಕ ತಿಗಳು ಸಂ ಡಾ ಟಿ ಎನ್ ನಾಗರತ ಪು ೧೦೨
60 ಅದೇ ಪು ೧೩೪
61 ಅದೇ ಪು ೪೫
62 ಶ್ರೀ ಜಗನಾ ಥದಾಸರು ಪೂರ್ವೋಕ ಪು ೧೬೭
63 ಅದೆ ಪು ೧೬೬
64 ಅದೇ ಪು ೨೩೯
65 ಅದೇ ಪು ೨೩೮
66 ಅದೆ ಪು ೩೦೮
67 ಅದೇ ಪು ೩೦೯
68 ಅದೇ ಪು ೩೧೫
69 ಅದೇ ಪು ೩೨೭

# ಹರಿದಾಸರ ಕೃತಿಗಳ ಛಂದಸ್ಸು

— ಡಾ॥ ಕೆ ಜಿ ನಾರಾಯಣ ಪ್ರಸಾದ್

ಕನ್ನಡ ಸಾಹಿತ್ಯದ ಇತಿಹಾಸದಲ್ಲಿ ಹರಿದಾಸ ಸಾಹಿತ್ಯದ್ದು ಒಂದು ಪ್ರಮುಖ ಘಟ್ಟ ಶಿವಶರಣರ ನಂತರ ಜನಸಾಮಾನ್ಯರಿಗೆ ಸುಲಭವಾಗಿ ನಿಲುಕುವ ಸಾಹಿತ್ಯವನ್ನು ರಚಿಸಿದವರು ಹರಿದಾಸರು ಹರಿದಾಸ ಸಾಹಿತ್ಯದ ಉಗಮವನ್ನು ಮಧ್ವಾಚಾರ್ಯರಿಂದಲೇ ಗುರುತಿಸಲಾಗುತ್ತದೆ ಅಂದಿನಿಂದ ಇಂದಿನವರೆಗೂ ಆ ಸಾಹಿತ್ಯ ಬೆಳೆಯುತ್ತಲೇ ಬಂದಿದೆ ಇಷ್ಟು ಸುದೀರ್ಘವಾದ ಇತಿಹಾಸವಿದ್ದರೂ ಇದರಲ್ಲಿ ವಿಶೇಷವಾದ ಪ್ರತಿಭೆಯಿಂದ ಮೆರೆದವರು ಕೆಲವು ಮಂದಿ ಮಾತ್ರ ಮಹೀಪತಿರಾಯರು ಶ್ರೀಪಾದರಾಯರು ವ್ಯಾಸರಾಯರು ವಾದಿರಾಜರು ಪುರಂದರದಾಸರು ಕನಕದಾಸರು ವಿಜಯದಾಸರು ಜಗನ್ನಾಥದಾಸರು ಗೋಪಾಲದಾಸರು ಪ್ರಸನ್ನ ವೆಂಕಟದಾಸರು ಮುಂತಾದ ಕೆಲವರನ್ನು ಈ ಸಂದರ್ಭದಲ್ಲಿ ಹೆಸರಿಸಬಹುದು ಆದ್ದರಿಂದ ಇಂತಹ ಪ್ರಮುಖರ ಕೃತಿಗಳನ್ನು ಮಾತ್ರ ವಿಶೇಷವಾಗಿ ದೃಷ್ಟಿಯಲ್ಲಿಟ್ಟುಕೊಂಡು ಈ ಅಧ್ಯಯನಕ್ಕೆ ತೊಡಗಲಾಗಿದೆ

ಕೀರ್ತನೆಗಳು ಉಗಾಭೋಗಗಳು ಸುಳಾದಿಗಳು ವಚನಸಾಮಗಳು ಹರಿಕಥೆಗಳು ಮತ್ತು ಲಘು ಹಾಗೂ ದೀರ್ಘ ಕಾವ್ಯಗಳು ಎಂಬ ಪ್ರಕಾರಗಳಲ್ಲಿ ಹರಿದಾಸರ ಕೃತಿಗಳು ಹರಡಿವೆ ಇವೆಲ್ಲ ಗೇಯತಾ ಪ್ರಧಾನವಾದವು ತಾಳ ತಂಬೂರಿಗಳ ಮೇಳಕ್ಕೆ ಕೆಲವೊಮ್ಮೆ ನರ್ತನಕ್ಕೆ ಹೊಂದುವಂತೆ ರಚಿತವಾದವು ಹರಿದಾಸರು ಭಕ್ತಿಪರವಶರಾಗಿ ಹಾಡುತ್ತಲೋ ಕುಣಿಯುತ್ತಲೋ ಇವನು ರಚಿಸಿದ್ದಾರೆ ಹೀಗಾಗಿ ಇಲ್ಲಿ ಗ್ರಾಂಥಿಕ ಸಾಹಿತ್ಯದ ಛಂದಸ್ಸಿನ ಬಿಗಿ ನಿಷ್ಕೃಷ್ಟ ನಿಯಮಪಾಲನೆ ಕಂಡುಬರುವುದಿಲ್ಲ ಬದಲಾಗಿ ಸಂಗೀತದ ಛಂದಸ್ಸಿನ ಮಿತಿಯ ಸ್ವಾತಂತ್ರ್ಯ ಹೆಚ್ಚಾಗಿ ಕಂಡುಬರುತ್ತದೆ ಹರಿದಾಸರು ಸಂಗೀತದ ಮಟ್ಟುಗಳಿಗೆ ತಲೆಬಾಗಿದಂತೆ ಸಾಹಿತ್ಯದ ಛಂದಸ್ಸಿಗೆ ವಿಶೇಷವಾಗಿ ತಲೆಬಾಗಲಿಲ್ಲವೆಂದು ಹೇಳಿದರೆ ತಪ್ಪಾಗಲಾರದು ಹೀಗಾಗಿ ಹ್ರಸ್ವೀಕರಣ ದೀರ್ಘೀಕರಣ ಮುಂತಾದ ಛಂದಸ್ವಾತಂತ್ರ್ಯಗಳು ಇಲ್ಲಿ ವಿಪುಲವಾಗಿ ಕಾಣಿಸಿಕೊಳ್ಳುತ್ತವೆ ಆದರಿಂದಾಗಿ ಅಲ್ಲಿರಬಹುದಾದ ಛಂದೋಬಂಧ (ಸಾಹಿತ್ಯದ್ದು) ಯಾವುದು ಎಂಬುದನ್ನು ಗುರುತಿಸುವುದು ಕೂಡ ಕೆಲವೊಮ್ಮೆ ಕಷ್ಟವಾಗುತ್ತದೆ ಆದರೂ ಪರಿಶ್ರಮಪಟ್ಟು ಹುಡುಕಿದಾಗ ಅಲ್ಲಿ ಯಾವುದೋ ಒಂದು ನಿರ್ದಿಷ್ಟ ಛಂದೋಬಂಧವಾಗಲಿ ಅದರ ಛಾಯೆಯಾಗಲಿ ಇರುವುದು ಕಂಡುಬರುತ್ತದೆ

ಹೀಗಿರುವಾಗ ಹರಿದಾಸರ ಕೃತಿಗಳ ಛಂದಸ್ಸಿನ ಬಗ್ಗೆ ಅಧ್ಯಯನ ಮಾಡುವುದರ ಔಚಿತ್ಯವೇನು ಎಂಬ ಪ್ರಶ್ನೆ ಏಳುವುದು ಸಹಜ ಅದಕ್ಕೆ ಉತ್ತರವೂ ಇದೆ ಅದರ

ಬಗ್ಗೆ ಅಧ ಯನ ಮಾಡುವುದರಿಂದ ಪ್ರಧಾನವಾಗಿ ನಮ್ಮ ಛಂದಸ್ಸಿನ ಪ್ರವಾಹದಲ್ಲಿ ಈಗ ಅಜ್ಞಾತವಾಗಿ ಉಳಿದಿರುವ ಎಷ್ಟೋ ಬಂಧಗಳನು ಕಂಡ ಕೊಳ್ಳಬಹ ದು ಮಾತ್ರವಲ್ಲದೆ ಅವನು ಹಾಡುವ ವಿಧಾನವನ್ನು ಕೂಡ ವಿಮರ್ಶಿಸಬಹುದು ಜೊತೆಗೆ ಈಗ ಇಲ್ಲದ ಎಷ್ಟೋ ಹೊಸ ಬಂಧಗಳನ್ನು ರಚಿಸಲು ಮಾದರಿಗಳು ದೊರಕ ತ್ತವೆ ಅಂತೆಯೇ ಈವರೆಗೆ ರಚಿತವಾಗಿರ ವ ಛಂದೋಬಂದಗಳಲ್ಲಿ ಹಲವು ಹ ಡುವ ರೀತಿಯನ್ನ ಕಂಡ ಕೊಳ್ಳಬಹುದು ಇದರಿಂದಾಗಿ ಅದರ ಅಧ್ಯಯನದ ಅಗತ್ಯವಿದೆ

ಈ ಹಿನ್ನೆಲೆಯ ಲ್ಲಿ ಪ್ರಕೃತದ ಅಧ್ಯಯನವನು ಕೈಗೊಳ್ಳಲಾಗಿದೆ ಹರಿದಾಸರ ಕೃತಿಗಳಲ್ಲಿ ಛಂದಸ್ಸಿನ ಮೂಲ ಅಂಶಗಳಾದ ಪ್ರಾಸ ಯ ತಿ ಮಾತ್ರಾದವು ಯಾವರೀತಿ ಯ ಲ್ಲಿ ಬಳಕೆಯಾಗಿವೆ ಮಾತ್ರಾಛಂದಸ್ಸಿ ಅ ಶಛಂದಸ್ಸುಗಳ ಬಂಧಗಳು ಎಷ್ಟರ ಮಟ್ಟಿಗೆ ಕಂಡುಬರುತ್ತವೆ ಎಂಬುದನು ಕಂಡ ಕೊಳ್ಳುವುದು ಪ್ರಕ ತದ ಉದ್ದೇಶ ಇದಕ್ಕೆ ಎಲ್ಲ ಹರಿದಾಸರ ಎಲ್ಲ ಕೀರ್ತನೆಗಳನೂ ಪರಿಶೀ ಲಿಸಬೇಕಾಗುತ್ತದೆ ಆದರೆ ಅದು ಹಿಡಿತಕ್ಕೆ ಮೀರುವ ಕೆಲಸ ಪ್ರಕೃತದ ಪರಿಮಿತಿಯಲ್ಲಂತೂ ಅದು ಸಾಧ್ಯವಿಲ್ಲ ಆದ್ದರಿಂದ ಹಿ ದೆಯೇ ತಿಳಿಸಿದಂತೆ ಪ್ರಮುಖ ಹರಿದಾಸರ ಕೃತಿಗಳನ್ನು ಮಾತ್ರ ಇಲ್ಲಿ ಲಕ್ಷ್ಯದಲ್ಲಿಟ್ಟುಕೊಳ್ಳಲಾಗಿದೆ ಸಾಮಾನ್ಯವಾಗಿ ಈ ಪ್ರವ ಖರ ಅನ ಕರಸ್ಯೆಯೇ ಇತರರಲ್ಲಿಯೂ ಕಂಡುಬರ ವುದರಿಂದ ಈ ಆಯ್ಕೆಯಲ್ಲಿ ಔಚಿತ್ಯವೂ ಇದೆ ಇದೇ ರೀತಿ ಹರಿದಾಸರ ಕೃತಿಗಳಲ್ಲಿ ಸಾಹಿತ್ಯದ ಛಂದಸ್ಸಿನ ಬಂಧಗಳನ್ನು ಗ ರ ತಿಸಲು ಸಾಧ್ಯವಿರುವ ಕೀರ್ತನೆಗಳನ್ನು ಮಾತ್ರ ಇಲ್ಲಿ ಆಯ್ದುಕೊಳ್ಳಲಾಗಿದೆ ಲಘು ಹಾಗೂ ದೀರ್ಘಕಾವ್ಯಗಳಲ್ಲಿ ಸಾಮಾನ್ಯವಾಗಿ ಷಟ್ಪದಿಯೋ ಸಾ ಗತ್ಯವೋ ವ ತ್ತೋ ಂದೂ ಪ್ರಸಿದ್ಧ ಬಂಧ ಬಳಕೆಯಾಗಿರ ತ್ತದೆ ಆದರ ಲಕ್ಷಣವನ್ನು ವಿವರಿಸ ವುದು ಅನಗತ್ಯ ಆದ್ದರಿಂದ ಅವನು ಕೈಬಿಡಲ ಗಿದೆ ಹರಿಕಥೆಗಳಲ್ಲಿ ಕೀರ್ತನೆಗಳು ಕ ಡುಬರುತ್ತವೆ ಆದರೆ ಅವು ಹೆಚ್ಚಿನ ವೇಳೆ ಪ್ರಸಿದ್ಧ ದಾಸರ ಕೃತಿಗಳೇ ಆಗಿರುತ್ತವೆ ಅಥವಾ ಅದೇ ಮಾದರಿಯವಾಗಿರುತ್ತವೆ ಆದ್ದರಿಂದ ಹರಿಕಥೆಗಳನೂ ಕೈಬಿಡಲಾಗಿದೆ

ಹಳೆಯ ಛಂದೋರೂಪಗಳನ್ನು ಹೊಸ ಪರಿಭ ಷೆಗಳಿಂದ ಅಳೆಯಬಹ ದೇ ಎಂಬುದರ ಬಗ್ಗೆ ಈ ಸಂಬಂಧದಲ್ಲಿ ಒಂದು ವಿವರಣೆ ಅಗತ್ಯ ಉದಾಹರಣೆಗೆ ಷಟ್ಪದಿಯ ಮೂರ ಆರನೆಯ ಪಾದಗಳ ಅ ತ್ಯದಲ್ಲಿ ಒಂಟಿಯಾಗಿ ಬ್ಬರುವ ಗ ರು ವನ್ನು ವ ಎಡಿ ಯೆಂದು ಕರೆಯ ವುದು ಈ ಗ ರು ಆಗ ಇತ್ತು ಈಗಲೂ ಇದೆ ಇದನ್ನು ಆಗ ಅಂತ್ಯದ ಗುರು ಎಂದು ಕರೆಯುತ್ತಿದ್ದರು ಈಗ ಮುಡಿಯೆ ಂದು ಕರೆಯಬಹುದು ಅಷ್ಟೆ ಹೆಸರಿನಲ್ಲಿ ಮಾತ್ರ ವ್ಯತ್ಯಾಸ ಆದ್ದರಿಂದ ಷಟ್ಪದಿಯ ಲಕ್ಷಣವನ್ನು ವಿವರಿಸುವಾಗ ಮೂರು ಆರನೆಯ ಪಾದಗಳ ಅಂತ್ಯದಲ್ಲಿ ವ ಡಿ ಬರು ತ್ತದೆ ಎಂದು ಹೇಳಿದರೆ ಅದರ ಲಕ್ಷಣಕ್ಕೆ ಕುಂದೇನೂ ಬರ ವುದಿಲ್ಲ ಆದರಿಂದಾಗಿ ಅದು ತಪ್ಪು ಆಗುವುದಿಲ್ಲ ಹಾಗ ಗಿ ಇಲ್ಲಿ ಹರಿದಾಸರ ಕೃತಿಗಳ ಛಂದಸ್ಸನ್ನು ವಿವರಿಸಲು ಹೊಸ ಪರಿಭ ಷೆಗಳನ್ನು ಕೂಡ ಬಳಸಲಾಗಿದೆ

ಈ ಉದ್ದೇಶ ಪರಿಮಿತಿಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಇನು ನೇರವಾಗಿ ಅಧ್ಯಯನಕ್ಕೆ ತೊಡಗಬಹುದು

**ಛಂದಸ್ಸಿನ ಮೂಲ ಅಂಶಗಳು** ಕಾವ್ಯಗಳಲ್ಲಿ ಹೆ ಗೋ ಹಾಗೆಯೇ ಹರಿದಾಸರ ಕೃತಿಗಳಲ್ಲಿ ಕೂಡ ಆದಿಪ್ರಾಸವು ನಿಯ ತವಾಗಿಯೆ ಪಾಲಿತವಾಗ ತ್ತದೆ ಅದನ್ನು ಮೀರುವುದು ಬಹಳ ವಿರಳ ಉಗಾಭೋ ಗಗಳು ಮತ್ತು ಸ ಳಾದಿಗಳಲ್ಲಿ ಮಾತ್ರ ಅದರ ಮೀರುವಿಕೆಯ ಪ್ರಮಾಣ ಹೆಚ್ಚು ಆದಿಪ್ರಾಸ ಸಹಿತ ಮ ತ್ತು ಆದಿಪ್ರಾಸ ರಹಿತ ಭಾಗಗಳಿಗೆ ಉದ ಹರಣೆಯಾಗಿ ಇವನ್ನು ನೋಡಬಹುದು

೧ ಯತಿಪ್ರಾಸವಿರಬೇಕು ಗತಿಗೆ ನಿಲ್ಲಿಸಬೇಕು
ರತಿಪತಿ ಪಿತನೊಳು ಅತಿಪ್ರೀಯ ವಿರಬೇಕು
[ ಗ ರುಮಧ್ವಪತಿವಿಠಲ ತಾಳಬೆ ಕು ತಕ್ಕ ಮೆ ಳಬೆ ಕು ]

೨ ಒಂದೆರಡರೆದರೆ ಬಹಳ ಚಿಯ ಟಿಬೆ
ಮೇಲೆರಡರೆದರೆ ಬಹುಖ ರಂಬೆ
ಆದು ಎರಡರೆದರೆ ಅತಿಖಾರಂಬೆ
[ಪುರಂದರದಾ ಸರ (?) ಮಹಮ್ಮಾರೀ ವೆ ಣಸಿನಕಾಯಿ ]

೩ ಪಾಪಾಟವಿಗೆ ದಾವಾನಲ
ಕಾಮಾನಲ ಕಾಲಾಂಬು ದ
ಮೋಹಾಂಬು ದ ಝಂಝಾನಿಲ
ಕೋಪಾನಿಲ ಭುಜಂಗಮ
ಶಿರಿಕೃಷ್ಣನ ಪದಸೇವೆ ಭವಭ ಜಂಗಗರುಡಾ
[ವ್ಯಾಸರಾಯರು ಶ್ರೀದೇವಿ ಸುಳ ದಿ]

ಆದಿಪ್ರಾಸವು ಮೊದಲನೆಯ ದರಲ್ಲಿ ಇದೆ ಆದರೆ ಉಳಿದೆರಡರಲ್ಲಿ ಇಲ್ಲ

ಹರಿದಾಸರ ಕೃತಿಗಳಲ್ಲಿ ಕಂಡುಬರುವ ಒ ದು ವಿಶೆ ಷ ಲಕ್ಷಣವೆಂದರೆ ಅಂತ್ಯ ಪ್ರಾಸ ಮತ್ತು ವಡಿ ಇವಕ್ಕೆ ಸಿಕ್ಕಿರುವ ಪ್ರಾಶಸ್ತ್ಯ

೧ ಪರತತ್ವಭಾವವ ತಿಳಿದಿರಬೇಕು
ಹರಿಪರದೇವತೆಯಧೀನ ಇರಬೇಕು
ವರಲಕ್ಷ್ಮಿಯಿಂದದಿ ದಯವಿರಬೇಕು
ಪುರಂದರವಿಠಲ ವೆ ಚ್ಚಬೇಕು
[ಪುರಂದರದಾಸರು ಹಣ್ಣಿನಂತೆ ಲಕ್ಷಣ ಇರಬೇಕು ]

೨ ಗರುಡಶೇಷಾದಿಗಳು ಬಿಡದೆ ಪೊತ್ತಿಹ ಪಾದ
ಧರೆಯ ಈರಡಿಮಾಡಿ ಅಳೆದ ಪಾದ
ಸಿರಿತನ್ನ ತೊಡೆಯ ಮೇಲಿಟ್ಟು ಒತ್ತುವ ಪಾದ
ವರಕಾಗಿನೆಲೆಯಾದಿಕೇಶವನ ಪಾದವನು
[ಕನಕದಾಸರು ಭಜಿಸಿ ಬದುಕೆಲೊ ಮನುಜ ಮನಮುಟ್ಟಿ ಹರಿಯ ]

೩ ವೇದಲ್ಲ ವಾದಲ್ಲ ಭೇದವೊಡುವದಲ್ಲ
ಸಾಧಕರಿಗೆ ತಾ ಸಿಲುಕದು ಮಾ
ಓದಲ್ಲ ಶೋಧಲ್ಲ ಗಾದಿಯ ಮಾತಲ್ಲ
ಭೇದಿಸಿದರೆ ತಾನು ತಿಳಿವದು ಮಾ
[ಮಹೀಪತಿರಾಯರು ಏನೆಂದ್ಹೇಳಲಿ ಸ್ವಾನಂದ ಮಹಿಮೆಯು ]

೪ ಜನಕತನುಜೆಯ ಮನವ ಹರ್ಷಿಸಿ
ವನವ ನೀ ಕಿತ್ತಾಡಿದೆ
ದನುಜರನು ಸದೆದು ಲಂಕೆಯ
ಅನಲಗಾಹುತಿ ಮಾಡಿದೆ
[ವಾದಿರಾಜರು ಆಂಜನೇಯನೆ ಅಮರ ವಂದಿತ ]

೫ ಕಂಡಕಂಡದ್ದೆಲ್ಲ ಕಮಲನಾಭನ ಮೂರ್ತಿ
ಉಂಡು ಉಟ್ಟದ್ದೆಲ್ಲ ವಿಷ್ಣುಪೂಜೆ
ತಂಡತಂಡದ ವಾರ್ತೆ ವಾರಿಜಾಕ್ಷನ ಕೀರ್ತಿ
ಹಿಂಡು ಮಾತುಗಳೆಲ್ಲ ಹರಿಯ ನಾಮ
[ವಿಜಯದಾಸರು ಸಾಧನದ ಬಗೆಗಾಣೆನೆನ್ನಬಹದೆ ]

ಇವುಗಳಲ್ಲೆಲ್ಲ ಅಂತ್ಯಪ್ರಾಸವನ್ನು ಪಾಲಿಸಿರುವುದನ್ನು ಗಮನಿಸಬೇಕು ಅಂತೆಯೇ ಅದರಲ್ಲಿರುವ ವೈವಿಧ್ಯವನ್ನು ಕೂಡ ಮೊದಲನೆಯದರಲ್ಲಿ ನಾಲ್ಕು ಪಾದಗಳಿಗೂ ಒಂದೇ ಅಂತ್ಯಪ್ರಾಸವಿದೆ [*aaaa* ಮಾದರಿಯಲ್ಲಿ] ಎರಡನೆಯದರಲ್ಲಿ ಮೊದಲ ಮೂರಕ್ಕೆ ಮಾತ್ರ ಇದೆ [*aab* ಮಾದರಿಯಲ್ಲಿ] ಮೂರನೆಯದರಲ್ಲಿ ೧–೩ ಕ್ಕೂ ೨–೪ ಕ್ಕೂ ಇದೆ [*abab* ಮಾದರಿಯಲ್ಲಿ] ನಾಲ್ಕನೆಯದರಲ್ಲಿ ೨–೪ ಕ್ಕೆ ಮಾತ್ರ ಇದೆ [*abcb* ಮಾದರಿಯಲ್ಲಿ] ಐದನೆಯದರಲ್ಲಿ ೧–೩ ಕ್ಕೆ ಮಾತ್ರ ಇದೆ [*abac* ಮಾದರಿಯಲ್ಲಿ] ಹೀಗೆಯೇ

೧ ನೀಲಾಂಬರವನುಟ್ಟು । ನಳನಳಿಸುವ ಮಂಚ
ನಾಲಿಗೆಯೆರಡುಳ್ಳ । ನೈಜಮಂಚ

ನಾಟ್ಯಕಲ್ಪದಿ । ತಪವ ಮಾಡಿದ ಮಂಚ
ಪ ೭ವ ಎಸಲಾಹಲವ । ಹಿಡಿದಿಹ ವ ಂಚ
[ಜಗನ್ನಾಥದಾಸರು ಒಲುರಮ್ಮವಾಗಿಹ ದು ಹರಿಯಮಂಚ ]

೨ ಹಸಿವಿಗಾರದೆ ಬೆಕ್ಕು । ಹತ್ತಿಯನು ಮೆದ್ದಂತೆ
ತೃಷಿವಿಗ ರದೆ ಕೂಪ । ತೊ ಡಿದಂತೆ
ಬಿಸಿಲಿಗಾರದೆ ಕೋತಿ । ಬಾಡೆ ವೆ ೀಲೆ ಕೂತಂತೆ
ಕುಸುವಿ ಯ ಹೊಲದೊಳಗೆ । ಕತ್ತೆ ಹೊಕ್ಕಂತೆ
[ಪುರಂದರದಾಸರು ಭಾಷೆಹಿ ನರ ಸಂಗ ಅಭಿಮಾನ ಭಂಗ ]

ಎಂಬಂತಹ ಕಡೆಗಳಲ್ಲಿ ವಡಿಯ ಪಾಲನೆಯನ್ನು ಕೂಡ ಗಮನಿಸಬಹ ದು ಆದರೆ ಅಂತ್ಯಪ್ರಾಸವನ್ನಾಗಲಿ ವಡಿಯನ್ನಾಗಲಿ ಆದಿಪ್ರಾಸದಂತೆ ನಿಯತವಾಗಿ ಪಾಲಿಸಿಲ್ಲ ವೆಂಬುದನ್ನು ಮಾತ್ರ ಮರೆಯ ಂತಿಲ್ಲ

ಹರಿದಾಸರ ಕೃತಿಗಳಲ್ಲಿ ಬರುವ ಯ ತಿಯು ಸಂಸ್ಕೃತದ ಯ ತಿಯಂತಿಲ್ಲ ಬದಲ ಗಿ ಕನ್ನಡಕ್ಕೆ ಸಹಜವಾಗಿರ ವಂತೆ ಲಯಾನುಸಾರಿಯಾಗಿ ಮಾತ್ರ ಬರುತ್ತದೆ

ಲಯದ ದೃಷ್ಟಿ ಯಿ ಂದ ಹೇಳುವುದಾದರೆ ಹರಿದಾಸರ ಕೃತಿಗಳಲ್ಲಿ ತಾಳಲಯ ವೇ ಪ್ರಧಾನ ಹಾಗಿದ್ದರೂ ಮಾತ್ರಾಲಯ ಅಂಶಲಯಗಳನು ಕೂಡ ಬಹುಮಟ್ಟಿಗೆ ಗುರ ತಿಸಬಹುದು ಮಾದರಿಗೆ

**ಅಂಶಲಯ** ಸ್ತಂಭದಿ ನರಹರಿ ಎಂಬ ಭಾ ವದಿ ಬಂದು ವಿ ವಿ ವಿ ವಿ
ಕಂಭದಿ ಪತಿಎಹು ಸಂಭ್ರಮ ಗೊಳ ತಲಿ ವಿ ವಿ ವಿ ವಿ
[ವಾದಿರಾಜರು ಬ ರಯ್ಯ ದಯಮಾಡಿ ತ್ವರಿತದಿ ಬೇಗ ]

**ಮಾತ್ರಾಲಯ** ಉತ್ಸಾಹ ಬಹಳ ದ್ರವ್ಯ ದಿಂದ ಗರುಡ ೩ ೩ ೩ ೩
ವಹನ ನ ಪ್ರಿ ಭಜಿಸಿ ಆನು ೩ ೩ ೩ ೩
ಗ್ರಹವ ಮಾಡು ಎಂದು ಬೇಡಿ ೩ ೩ ೩ ೩
ಆಹಿಕ ಸುಖವ ಬಯಸು ವವನು ೩ ೩ ೩ ೩
[ಜಗನ್ನಾಥದಾಸರು ನೀಚನಲ್ಲವೆ ಇವನು ನಿ ಚನಲ್ಲವೆ ]

**ಮಂದ ನಿಲ** ಸದ್ಗತಿ ಮುಕ್ತಿಯು ಸಾಧಿಸಿ ತೋರುವ ಆತನೆ ಸದ್ಗುರು
ಮೂರ್ತಿಯ ಎ ವಾ ೪ ೪ ೪ ೪ ೪ ೪ ೪ ೪ ಮಂ
[ಮಹೀಪತಿರಾಯರು ದೇಹದ ಒಳಗಿಹ ದೇವರ ತಿಳಿದಿಹ ಆತನೆ ]

ಲಲಿತ    ಎಳೆತಂಳಸಿ ವನವಮಾತಿ ಧರಿಸಿಕೊಳ ಬೇಕು    ೫ ೫ ೫ ಪ
ಥಳಿ-(s)ನೆ ಹರಿಯಪ್ರಾ ಜಿಸುತಿರಲು ಬೇಕು    ೫ ೫ ೫ ಪ
ಕಳಕಳನೆ ಏಕವಮನ ಕರಗುತಿರ ಬೇಕು    ೫ ೫ ೫ ಪ
ನಳಿನನಾ ಭನಪಾದ ಪೊಗಳುತಿರ ಬೇಕು    ೫ ೫ ೫ ಪ
[ಪುರಂದರದಾಸರು    ಇಂದ್ರಿಯಂಗಳ ಸುಖವ ನೆಚ್ಚದಿರು ಕ ಡ್ಯ ]

ಭಾವಿ ನಿ    ಒಂದು ಅರಿಯದ ಮಂದ ವ ತಿನಾ    ೩ ೪ ೩ ೪
ನಿಂದು ನಿಮ್ಮನು ಮಂದಿ ಪೆ    ೩ ೪ ೩ ಮು
ಇಂದಿ ರೇಶನ ತಂದು ತೋರಿಸಿ    ೩ ೪ ೩ ೪
ತಂದೆ ವಮಾಡೆಲೊ ಸತ್ಯ ಪೆ    ೩ ೪ ೩ ಮು
[ವಿಜಯದಾಸರು    ಗುರುಪುರಂದರದಾಸರೇ ನಿಮ್ಮ ಚರಣ ಸರಸಿಜ ನಂಬಿದೆ ]

ಇಂದು ನಾವು ಗಣ ಪರಿವೃತ್ತಿಯೆಂದು ಗ ರುತಿಸ ವ ಪ್ರಕ್ರಿಯೆ ಯ ಸಂಳುಹನು ಕೂಡ ಹರಿದ ಸರ ಕೃತಿಗಳಲ್ಲಿ ಅಲ್ಲಲ್ಲಿ ಗುರುತಿಸಬಹ ದು ಉದಾಹರಣೆಗೆ

೧    ಜನನಿ ಜನಕ ರಂತೆ ಜನಾ
ರ್ದನನು ಸಲಹು ತಿರಲು ಬಿಟ್ಟು
**ಧನಿಕರಮನೆ** ಮನೆಗ ಳಲ್ಲಿ    ೩+೩>೪+೨
ಶುನಕ ನಂತೆ ತಿರುಗು ವವನು
[ಜಗನ್ನಾಥದಾಸರ    ನೀಚನಲ್ಲವೇ ಇವನು ನೀಚನಲ್ಲವೇ ]

೨    ಹಾಲು ಹಲವನು ಪಾನವ ಮಾಡಿದ
**ಫಾಲ ಲೋಚನನೆ** ಬಲ್ಲವ ನು    ೪+೪>೪+೫
[ವಿಜಯ ದಾಸರು    ರಾಮ ರಾಮ ಎಂಬೆರಡಕ್ಷರ ]

೩    ನಾರಾ ಯಣಪಾ **ದಾರ ವಿಂದೆ ಯುಗ**    ೪+೪>೩+೩+೨
ಆರಾ ಧನೆಯೊಂ ದೇ
ತ ರಿಸು ವದುಸಂ **ಸಾರಶರಧಿಯುಗ**    ೪+೪>೩+೩+೨
ತೋರ ವ ದೋಮುಂ ದೇ
[ಜಗನಾ ಥದಾಸರು    ಬಯಸದಿರಹಿಕ ಸುಖಗಳ ನಂದಿನ ]

೪    ಕೊಂಡಾಡೆ ಶಬ್ದಪ್ರತಿ **ಶಬ್ದವಾಗುತಿದೆ ಭೂ**    ೫+೫>೩+೫+೨
ಮಂಡಲಾ
[ವಿಜಯದಾಸರು    ಭಕ್ತಜನ ಸಂರಕ್ಷಣ ]

ಇದೇ ರೀತಿ ವಿಷಮ ಗಣಗಳ ಬಳಕೆಯನ್ನು ಕೂಡ ಅಲ್ಲಲ್ಲಿ ಕಾಣುತ್ತೇವೆ ಮಾದರಿಗೆ

೧ ಶ್ರೀ ಕಳತ್ರನಂಘ್ರಿಕಮಲ
ವೇಕ ಚಿತ್ತ ದಲ್ಲಿ ಮನೋ ು–
ವಾಕು ಲಗಳ ಬಿಟ್ಟು ಸುಖೋ ು–
ದ್ರೇಕದಿಂದ ಸ್ಮರಿಸ ದವನು
[ಜಗನ್ನಾಥದಾಸರು ನೀಚನಲ್ಲವೇ ಇವನು ನೀಚನಲ್ಲವೇ ]

೨ ಬೋಧದ ಭಂಗೀ ಅಮೃತದ ಲಂಗೀ ಸಮಾನ ಗುಳಿಗೆಯ ನಿಟ್ಟು ು–ು
[ಪುರಂದರದಾಸರು ಮಾಡಿದಯೆ ನ್ನ ಫಕೀರನು ಸದ್ಗುರು ]

೩ ಶುಕಾದಿ ಮುನಿಗಳು ಕೂಡಿದ ಪ್ರಭೆಯು ು–ು
[ವ ಹೀಪತಿರಾಯ ರು ಶ ದ್ಧ ಸನ್ಮಾರ್ಗ ಸರ್ವರಿಗಿದು ಒಂದೆ ]

ಪ್ರತ್ಯೇಕ ಗಣಗಳ ಬಳಕೆಯ ಂತೂ ವಿಶ ಷವಾಗಿ ಕಂಡುಬರುತ್ತದೆ ಅಂಶಲಯ ಮಾತ್ರಾಲಯಗಳೆರಡರಲ್ಲೂ ಲಯಗತಿಗೆ ವಿಶ ಷ ಮಿಾಟು ಕೊಡುವಲ್ಲಿ ಅವನ್ನು ಬಳಸಿದ್ದಾರೆ ಉದಾಹರಣೆಗೆ

೧ ಸದಮಲ ಲಕ್ಷಣ ತುಂಗನಾ [ಸಿರಿ ವಿ ವಿ ವಿ [ಪ್ರ
ಸದನನ್ನ ಕರ ಣ ಂತ ರಂಗನ್ನಾ ವಿ ವಿ ವಿ
ಮದಮೋಹ ತಿಮಿರಪ ತಂಗನ್ನಾ [ಹಯ ವಿ ವಿ ವಿ [ಪ್ರ
ವದನನ ಚರಣಾಬ್ಜ ಭೃಂಗನ್ನಾ ವಿ ವಿ ವಿ
[ವಾದಿರಾಜರು ಅರ್ಥನ್ನಾ ಯೋಗ ಧ ರ್ಮನ್ನಾ ]

೨ ವಿಜಯು ವಿಠಲ ನಾ [ಅಂಘ್ರಿ ಶಿ ಶಿ ಮು [ಪ್ರ
ಭಜನೆ ಮಾಳ್ಪ ರಾ ಶಿ ಶಿ ವ ಂ
ಕುಜನ ಭಂಜ ರಾ [ದಿ ಶಿ ಶಿ ಮು [ಪ್ರ
ಗ್ವಿಜಯ ರಾಯ ರಾ ಶಿ ಶಿ ಮು
[ವಿಜಯದಾಸರು ಸಾರಿ ಭಜಿಸಿರೋ ಟೀಕಾಚಾರ್ಯರಂಘ್ರಿಯಾ

ಹ್ರಸ್ವೀಕರಣ ದೀರ್ಘೀಕರಣಗಳಂತೂ ಹೆಚ್ಚಿನ ಪ್ರಮಾಣದಲ್ಲೇ ಕಾಣಸುತ್ತವೆ ಹರಿದಾಸರ ಕೃತಿಗಳು ಸಂಗೀತ ಪ್ರಧಾನರಚನೆಗಳಾದ್ದರಿಂದ ಇದು ಹೀಗೆ ಈ ಎರಡು ಪ್ರಕ್ರಿಯೆಗಳನ್ನೂ ಒಳಗೊಂಡಂತೆ ಈ ಉದಾಹರಣೆಯನ್ನು ನೋಡಬಹ ದು

ಹೇಮ ಖಚಿತ ಕಿ ರೀಟ ಕುಂಡಲ ಕಾಮಿ ತಫಲ ದಾಯ ಕ
ಅಮಿತ ಸೌಲಭ್ಯ ಪ್ರಬಲ ಶಾಸ್ತ್ರೋ ದ್ದಾಮ ವಿದ್ಯಾ ಶರನಿ ಧೆ
[ವಿಜಯದಾಸರು "ಶರಣು ಗಜಮುಖ ಆಖುವಾಹನ ]

ಇಲ್ಲಿ ತಪು ಎಂಬುದನ್ನು ತ(s)ಪು ಎ ದು ಚತುರ್ಮಾತ್ರಾಗಣವಾಗಿ ಹಿಗ್ಗಿಸಿಯೂ ಸೌಭ್ಯ ಎಂಬುದನು ಚ ುಮಾ ತ್ರಾಗಣವಾಗಿ ಕುಗ್ಗಿಸಿಯೂ ಹೇಳಬೇಕಂ

ಹೀಗೆ ಛಂದಸ್ಸಿನ ವಿವಿಧ ಮೂಲ ಲಂಶಗಳನ್ನು ಒಳಗೊಂಡಂತೆ ಹರಿದಾಸರು ಕೃತಿಗಳನು ರಚಿಸಿದ್ದಾರೆ ಇನ್ನು ಪ್ರಮುಖ ಅಂಶ ಬ ಧಗಳ ಬಗ್ಗೆ ನೋಡಬಹುದು

**ಅಂಶಬಂಧಗಳು** ಪಾದದ ಉದ್ದದ ದೃಷ್ಟಿಯಿಂದ ಕಿರಿಯಕ್ಕರವು ಅಂಶಬಂಧಗಳಲ್ಲೆಲ್ಲ ಬಹಳ ಕಿರಿಯದು [ ವಿ ವಿ ರು ಳ ಎಂಬುದು ಅದರ ರಚನಾ ಸೂತ್ರ] ಬಹಳ ಕಿರಿಯದೆಂಬ ಕಾರಣದಿಂದಾಗಿ ಆ ಬಂಧ ಅಷ್ಟಾಗಿ ಬಳಕೆಯಲ್ಲಿ ಕಂಡು ಬರುವುದಿಲ್ಲ ಆದರೆ ಅದಕ್ಕೆ ಪ್ರತ್ಯೇಕ ಗಣಗಳನ್ನು ಜೋಡಿಸಿ ರೂಪಿಸಿದ ಅರ್ಧಸಮಚೌಪದಿ ಬಂಧವನ್ನು ಮಾತ್ರ ಹರಿದಾಸರು ಅಲ್ಲಲ್ಲಿ ಬಳಸಿದ್ದಾರೆ ವಾದರಿಗೆ

ನಿ ರನು ಕಂಡರೆ ವಂಳ ಗುತಿದೆ [ತನ್ನ ವಿ ವಿ ರು [ಪ್ರ
ವೋರೆಯ ತೋರದೆ ಓಡುತಿದೆ ವಿ ವಿ ರು
ಧಾರಿಣಿ ಅಲ್ಲಲ್ಲ ಅಳಿಯುತಿದೆ [ದೊಡ್ಡ ವಿ ವಿ ರು [ಪ್ರ
ಭೈರವಾ ಕಾರದಿ ಕೂಗುತಿದೆ ವಿ ವಿ ರು
*[ಕನಕದಾಸರು ಮಗ ವಿನ ಮರುಳಿದು ಬಿಡದಲ್ಲ ]*

ಪ್ರತ್ಯೇಕ ಗಣಗಳಿಂದಾಗಿ ಇಲ್ಲಿ ಲಯಗತಿಗೆ ವಿಶೆ ಷ ವಿಸಾಟು ದೊರೆತು ಕಿರಿಯಕ್ಕರದ ಪ್ರತ್ಯೇಕಗಣಗಳಿಂದಾಗಿ ಇಲ್ಲಿ ಲಯಗತಿಗೆ ವಿಶೆ ಷ ವಿಸಾಟು ದೊರೆತು ಕಿರಿಯಕ ರದ ಏಕತಾನತೆ ತಕ್ಕಮಟ್ಟಿಗೆ ನಿವಾರಿತವ ಗಿದೆ

ಇದರಲ್ಲೇ ರ ದ್ರಕ್ಕೆ ಬದಲು ಬ್ರಹ್ಮವನ್ನು ತಂದಾಗ ಮತ್ತೊಂದು ಪ್ರಕಾರ ಸಿದ್ಧವಾಗುತ್ತದೆ ಅದಕ್ಕೆ ಈ ಉದಾಹರಣೆಯನ್ನು ನೋಡಬಹುದು

ಸು (s)ಧೀಂದ್ರ ಕರಕಂಜ ಜಾತ [ವಿ ವಿ ವಿ ಬ್ರ [ಪ್ರ
ಬುಧಸಂಗ ಸತತಸ ಮೇತ ವಿ ವಿ ಬ್ರ
ವಿಧಿಪಿತ ಗುರುಜಗ ನ್ನಾಥ [ವಿರಲ ವಿ ವಿ ಬ್ರ [ಪ್ರ
ಸಧಿಕನೆಂ ದೊರೆದವಿ ಖ್ಯಾತ ವಿ ವಿ ಬ್ರ
[ ಗುರುಜಗನ್ನಾಥವಿರಲ ನಿನ್ನ ನಂಬಿದೆ ರಾಘವೇಂದ್ರ ]

ಇದರಲ್ಲೇ ಬ್ರಹ್ಮಕ್ಕೆ ಬದಲು ವಿಷ್ಣುವನ್ನು ತಂದಾಗ ಇನ್ನೊಂದು ಪ್ರಕಾರ ಸಿದ್ಧವಾಗುತ್ತದೆ ಶ್ರೀಪಾದರಾಜರು ವಾದಿರಾಜರು ವಿಜಯ ದಾಸರು ಮೊದಲಾದವರಲ್ಲಿ ಅಂತಹದಕ್ಕೆ ಉದಾಹರಣೆಯನ್ನು ಕಾಣುತ್ತೇವೆ ವಾದರಿಗೆ

ಬೆರಳ ಉಂ ಗುರವೆಲ್ಲ ಹೋಗಿದೆ [ನಿನ ವಿ ವಿ ವಿ [ಪ್ರ
ಕೊರಳಪ ದಕವೆಲ್ಲ ನೀಗಿದೆ ವಿ ವಿ ವಿ
ಸರಕೆಲ್ಲ ಅವಳಲ್ಲಿ ಸಾಗಿದೆ [ಆ ವಿ ವಿ ವಿ [ಪ್ರ
ತರುಣಿವಂ ಹಿ (ಃ) ಮೆ ಹೀಂ ಗಾಗಿದೆ ವಿ ವಿ ವಿ
[ಶ್ರೀಪಾದರಾಜರು ಎಲ್ಲಾಡಿ ಬಂದ್ಯೋ ನೀ ಹೇಳಯ್ಯಾ ]

ಇದೇ ವರ್ಗಕ್ಕೆ ಸೇರಿಸಬಹುದಾದ ಮತ್ತೊಂದು ಪ್ರಕಾರದ ಚೌಪದಿಯು ಶ್ರೀಪಾದ ರಾಜರಲ್ಲಿ ಬಳಕೆಯಾಗಿದೆ ವಠಾದರಿಗೆ

ಆಲಯಂ ದೊಳಗೆ ನೀ ನಾಡದೆ [ಚಿನಿ ವಿ ವಿ ವಿ [ಪ್ರ
ಪಾಯಸ ಕ್ಕರೆಯ ನೀ ನೊಲ್ಲದೆ [ಚಿಕ್ಕ ವಿ ವಿ ವಿ [ಪ್ರ
ಬಾಲೆಯ ರೊಡನೆ ಕೂ ಡ್ಯಾಡದೆ [ಮುದ್ದು ವಿ ವಿ ವಿ [ಪ್ರ
ಬಾಲಯ್ಯ ನೀ ಎನ್ನ ಕಣ್ಣಮುಂ ದಾಡದೆ ವಿ ವಿ ವಿ ವಿ
[ಶ್ರೀಪಾದರಾಜರು ಎಲ್ಲಾಡಿ ಬಂದ್ಯೋ ಎನ್ನ ರಂಗಯ್ಯ ನೀ ]

ಹೀಗೆ ಮೂರರನೆಯ ಗಣದ ಸ್ಥಾನದಲ್ಲಿ ವಿಷ್ಣುವನು ತರದೆ ಬ್ರಹ್ಮವನ್ನೇ ಉಳಿಸಿ ಪ್ರತ್ಯೇಕ ಗಣಗಳನ್ನು ಮಾತ್ರ ಕಿತ್ತುಹಾಕಿ ರೂಪಿಸಿದ ಸಮಚೌಪದಿ ಬಂಧವೊಂದನ್ನು ಮಹೀಪತಿರಾಯರಲ್ಲಿ ಕಾಣುತ್ತೇವೆ ಮಾದರಿಗೆ

ಈಸು ಪ ರಿಯಲಿನ ಗಿಂದು ವಿ ವಿ ಬ್ರ
ಆಶೆಪೂ ರಿಸಿದೆನ ಗಿಂದು ವಿ ವಿ ಬ್ರ
ಭಾಸ್ಕರ ಗುರುವಾಗಿ ಬಂದು ವಿ ವಿ ಬ್ರ
ಭಾಸಿಪಾ ಲಿಸಿದೆನ ಗಿಂದು ವಿ ವಿ ಬ್ರ

[ಮಹೀಪತಿರಾಯರು ನೀನೇ ಎನಗಾಗಿ ಬಂದು ನೀನೆ ನೀನಾಗೆನಗಿಂದು ]
ಇದು ಕಿರಿಯ ಕ್ಕರಕ್ಕೆ ಬಹಳ ಸಮೀಪವಾಗಿ ನಿಲ್ಲುತ್ತದೆ ಅಂತೆಯೇ ದೊರೆಯುಕ್ಕರದ ಅರ್ಧದಷ್ಟು ಇದೆ ಹಾಗೆಯೇ ಸಾಂಗತ್ಯದ ಕಿರಿಯಪಾದದ ನಾಲ್ಕರಷ್ಟು ಕೂಡ ಇದೇ ಬಂಧದಲ್ಲಿ ಪ್ರತ್ಯೇಕ ಗಣಗಳು ಹಾಗೂ ಅಧಿಕಪಾದಗಳನ್ನು ಜೋಡಿಸಿ ಮತ್ತೊಂದು ರೂಪವನ್ನು ಹೊರಡಿಸಬಹುದು ಇಂತಹದಕ್ಕೆ ಶ್ರೀಪಾದರಾಯರು ವಿಜಯದಾಸರು ಜಗನ್ನಾಥದಾಸರು ಮುಂತಾದವರಲ್ಲಿ ಉದಾಹರಣೆಗಳು ಸಿಕ್ಕುತ್ತವೆ ವಠಾದರಿಗೆ

ಆಶ್ರಿತ ಜನಕಲ್ಪ ವೃಕ್ಷ [ನಿನ ವಿ ವಿ ಬ್ರ [ಪ್ರ
ಆಶ್ರಯಿ ಸಿದೆ ಬಲು ದಕ್ಷ [ಗುಣ ವಿ ವಿ ಬ್ರ [ಪ್ರ
ರಾಶಿವಿ ರಾಗಪ್ರ ತ್ಯಕ್ಷ [ವಾಗೆ ವಿ ವಿ ಬ್ರ [ಪ್ರ

ದಾಸತ್ವ ಕೊಡುಬಲ ದೀಕ್ಷ [ಆಹ ವಿ ವಿ ಬ್ರ [ಪ್ರ
ಏಸು ಜ ನ್ಮದಲಿದ್ದ ದೋಷವ ಕಳೆದು ಸಂ ವಿ ವಿ ವಿ ವಿ
ತೋಷವಾ ಗುವ ಕರ್ಣ ಭೂಷಣ ಕೃಪೆಮಾಡು ವಿ ವಿ ವಿ ವಿ
[ವಿಜಯದಾಸರು ಪವಮಾನ ಮದು ರುವೆ ಪವಮಾನ ]

ಅಂತ್ಯದಲ್ಲಿ ಇಂತಹ ದೇ ಸಮದ್ವಿಪದಿ ಬರುವಂತಹ ಬಂಧವೊಂದನ್ನು ಶ್ರೀಪಾದ ರಾಜರು ವಾದಿರಾಜರು ಮುಂತಾದವರು ಬಳಸಿದ್ದಾರೆ ಮಾದರಿಗೆ

ನಿರಿಗೆಯ ಪಿಡಿಯದಿರೊ [ಕಾಂಚಿ ದಾಮ ವಿ ರು [ಪ್ರ
ಕಿರುಗಂಟೆ ಧ್ವನಿಗೈಯ ದೆ ವಿ ರು
ಕಿರುದುಟಿ ಗಳ ನೀನು ಸವಿದ ಚ ಪ್ಪರಿಸಲು ವಿ ವಿ ವಿ ವಿ
ತರವಲ್ಲ ಗಂಡ ಮ ತ್ಸರವತಾ ಳುವನಲ್ಲ ವಿ ವಿ ವಿ ವಿ
[ಶ್ರೀಪಾದರಾಯರು ಸದ್ದು ಮಾಡಲು ಬೆ ಡವೊ ನಿನ್ನ ಕಾಲಿಗೆ ಬಿದ್ದು ನಾ ಬೇಡಿಕೊಂಬೆ ]

ಈ ಬಂಧದ ಅಂತ್ಯದ ದ್ವಿಪದಿಯನ್ನೇ ಪ್ರತ್ಯೇಕ ನ ಡಿಯಾಗಿ ಬಳಸುವುದೂ ಉಂಟು ಮಹೀಪತಿರಾಯರು ವಾದಿರಾಜರು ವಿಜಯದಾಸರು ಜಗನ್ನಾಥದಾಸರು ಮುಂತಾ ದವರಲ್ಲಿ ಇದಕ್ಕೆ ಉದಾಹರಣೆ ಸಿಕ್ಕುತ್ತದೆ ಮಾದರಿಗೆ

ತೀರ್ಥಕ್ಷೇ ತ್ರಂಗಳ ಮೂರ್ತಿ ಮ ಹಿಮೆಗಳ ವಿ ವಿ ವಿ ವಿ
ಕೀರ್ತಿಸಿ ಜಗದಿಕ ತಾರ್ಥನೆಂ ದೆನಿಸಿದೆ ವಿ ವಿ ವಿ ವಿ
[ಜಗನ್ನಾ ಥದಾಸರು ದಾಸರಾಯಾ ಪುರಂದರದಾಸರಾಯ ]

ಇದರಲ್ಲಿ ಆದಿಪ್ರಾಸವಿದೆ ಅಂತ್ಯಪ್ರಾಸವಿಲ್ಲ ಅಂತೆಯೇ ರಗಳೆಯ ಹೋಲಿಕೆಯಿ ದ್ದರೂ ಅದರ ಹರಿವು ಇಲ್ಲಿಲ್ಲ ಪ್ರತಿ ನ ಡಿಯ ಅಂತ್ಯದಲ್ಲೂ ಪಲ್ಲವಿಯು ಪುನರಾ ವರ್ತಿವಾಗುವುದೇ ಇದಕ್ಕೆ ಕಾರಣ

ತ್ರಿಪದಿಯ ದ್ವಿತೀಯಪಾದಗಳಿಂದ ಒಂದು ರೀತಿಯ ದಿ ಪದಿಯ ನ್ನು ರೂಪಿಸ ಲಾಗುತ್ತದೆ ಮಾದರಿಗೆ

ಹಮ್ಮಿನ ಳಿದು ಶ್ರೀರಂಗ ವಿ ರ (s)ಲನ ವಿ ಬ್ರ ವಿ ವಿ
ಸುಮ್ಮಾನ ದಿಂಸೇ ವಿಪ ವ್ಯಾಸ ಮ ಎನಿರಾಯ ವಿ ಬ್ರ ವಿ ವಿ
[ಶ್ರೀಪಾದರಾಜರು ಇದಿರದಾವನು ನಿನಗೀ ಧರೆಯೊಳು ]

ಇಲ್ಲಿ ಕೂಡ ಆದಿಪ್ರಾಸ ಮಾತ್ರ ಇದೆ ಅಂತ್ಯಪ್ರಾಸವಿಲ್ಲ

ಛಂದೋವತಂಸದ ಅರ್ಧದಷ್ಟಿರುವ ದ್ವಿಪದಿಯನ್ನು ಮಹಿಪತಿರಾಯರು ಶ್ರೀಪಾದರಾಯರು ಮುಂತಾದವರು ಬಳಸಿದ್ದಾರೆ ಉದಾ ಗೆ

ಹರಿಹರಿ ಎಂದುಕೊಂ ಡಾಡುಪ ಬನಿ ವಿ ವಿ ವಿ ಬ್ರ
ಹರಿಮಹಿ ಪತಿಗುರು ತಾಯಿತಂ ದ್ಯೆನಿ ವಿ ವಿ ವಿ ಬ್ರ
[ಮಹೀಪತಿರಾಯರು ಹರಿ ಹರಿ ಎನ್ನಿ ಸಿರಿಲೋಲ ಎನ್ನಿ ]

ನಾಲ್ಕು ವಿಷ್ಣುಗಣಗಳ ಪಾದ ಮತ್ತು ಛಂದೋವತಂಸದ ಪಾದ ಇವುಗಳ ಬೆಸುಗೆಯಿಂದ ವಿಳೆಯನು ಹೋಲ ವ ವಿಷಮದ್ವಿಪದಿಯೊಂದನ್ನು ರೂಪಿಸ ಬಹುದು ಅಂತಹದನು ಶ್ರಿಪಾದರಾಜರು ಬಳಸಿದ್ದಾರೆ ಮಾದರಿಗೆ

ತುಂಗವಿ ಹಂಗತು ರಂಗದ ಯಪಾಪಾಂಗ ವಿ ವಿ ವಿ ವಿ
ರಂಗವಿ ರಲಭವ ಭಂಗಶ ಭಾಂಗ ವಿ ವಿ ವಿ ಬ್ರ

[ಶ್ರೀಪಾದರಾಜರು ನಂದನಂದನ ಪಾಹಿ ಗುಣವೃಂದ ]
ಇದರ ಎರಡರಷ್ಟಿರುವ ಚೌಪದಿ ಕೂಡ ಉಂಟು ಮಾದರಿಗೆ

ಭವ ಜನ್ಮ ದಲಿ ಬಂದು ಒಹು ಬಳ ಲಿದೆ ನಾನು ವಿ ವಿ ವಿ ವಿ
ಬಹುವಿಧಿ ಬಲೆಯೊಳು ಸಿಲುಕಿ ಜೀ ವನವು ವಿ ವಿ ವಿ ವಿ
ಅ(ಽ)ವಿಧ್ಯ ದಾಟಿಕೆ ಖವರು ಕೂಡಿತಾ ವಿ ವಿ ವಿ ವಿ
ಜೀವನ ಮುಕ್ತಿಗಾ ಣಿಸುಗೊಡ ದಿಹರು ವಿ ವಿ ವಿ ಬ್ರ
[ಮಹೀಪತಿರಾಯರು ಕರುಣಿಸೊ ಗುರು ತಾರಿಸೊ

ಶುದ್ಧ ಛಂದೋವತಂಸವನ್ನು ಮಹಿಪತಿರಾಯರು ಶ್ರೀಪಾದರಾಯರು ಜಗನ್ನಾಥದಾಸರು ಮುಂತಾದವರು ಬಳಸಿದ್ದಾರೆ ಉದಾಹರಣೆಗೆ

ಪಿತಮಾತೆ ಸತಿಸುತ ರಗಲಿರ ಬೇಡ ವಿ ವಿ ಬ ಬ್ರ
ಯತಿಯಾಗಿ ಅ(ಽ)ರಣ್ಯ ಚರಿಸಲು ಬೆ ಡ ವಿ ವಿ ವಿ ಬ್ರ
ವ್ರತನೇಮ ಮ(ಽ)ಮಾಡಿ ದಣಿಯಲು ಬೇಡ ವಿ ವಿ ವಿ ಬ್ರ
ಸತಿಯಿಲ್ಲ ದವಗೆಸ ದ ತಿಯಿಲ್ಲೊ ಮೂಢ ವಿ ವಿ ವಿ ಬ್ರ
[ಪುರಂದರದಾಸರು ಜ್ಞಾನವೊಂದೇ ಸಾಕು ಮುಕ್ತಿಗೆ ]

ಛಂದೋವತಂಸಕ್ಕೆ ಮತ್ತೆರಡು ಪಾದಗಳನ್ನು ಕೂಡಿಸುವುದರಿಂದ ಮತ್ತೊಂದು ಬಗೆಯ ಸಿದ್ಧವಾಗುತ್ತದೆ ಮಾದರಿಗೆ

ಕಲಿಕಲ್ಮ ಷ ವಿದೂರ ಕುಜನ ಕು ದಾರ ವಿ ವಿ ವಿ ಬ್ರ
ನಳಿನಾಕ್ಷ ವಿಮಲಶ್ರೀ ತುಳಸಿಯ ಹಾರ ವಿ ವಿ ವಿ ಬ್ರ
ಗಳಸ ಶೋ ಭಿತಕಮಂ ಡಲದಂಡ ಧಾರ ವಿ ವಿ ವಿ ಬ್ರ
ಅಲವಬೋ ಧರಮತ ಜಲಧಿವಿ ಹಾರ ವಿ ವಿ ವಿ ಬ್ರ
ಸುಲಲಿತ ಕರುಣಾಂಬು ಧೇಜಗ ನ್ನಾಥವಿ ವಿ ವಿ ವಿ ಬ್ರ
ಟ ಲನೊಲು ಮೆಯ ಪಡೆ ದಿಳೆಯೊಳು ಮೆರೆವೆ ವಿ ವಿ ವಿ ಬ್ರ

[ಜಗನ್ನಾ ಥದಾಸರು ಶ್ರೀ ರಾಘವೇಂದ್ರ ನಿಮ್ಮ ಚ ರಣಚರಣವ ಸಾರಿದೆ ]

ಛಂದೋವತಂಸದ ವರ್ಗಕ್ಕೇ ಸೇರಿಸಬಹುದಾದ ಮತ್ತೊಂದು ಬಂಧವನ್ನು ಪುರಂದರ ದಾಸರು ಜಗನ್ನಾಥದಾಸರು ಮುಂತಾದವರಲ್ಲಿ ಕಾಣುತ್ತೇವೆ ಹಾದರಿಗೆ

ಜಿತವಾಗಿ ಕೇಳೊ ಈ ಸೊಲ್ಲ [ಹರಿ ವಿ ವಿ ಬ್ರ [ಪ್ರ
ಕಥೆಯಲ್ಲಿ ನಿರತನಾ ಗಿರು ಲೋಹ ಕಲ್ಲ ವಿ ವಿ ವಿ ಬ್ರ
ಪ್ರತಿಮೆ ಪೂ ಜಿಸಿದರೇ ನಿಲ್ಲ [ಪರೀ ವಿ ವಿ ಬ್ರ [ಪ್ರ
ಕ್ಷಿತನೆಂಬೊ ರಾಯ ಈ ಮಹಿಮೆಯ ಬಲ್ಲ ವಿ ವಿ ವಿ ಬ್ರ

[ಜಗನ್ನಾಥದಾಸರು ಮನವೇ ಮರೆವರೆ ನೊ ಹರಿಯ ]

ನಾಲ್ಕು ವಿಷ್ಣುಗಣಗಳ ಪಾದರಚನೆಯ ಷಟ್ಪದಿಗೆ ಬೇರೆ ರಚನೆಯ ಮೂರು ಪಾದಗಳನ್ನು ಸೇರಿಸಿ ರೂಪಿಸಿದ ಒಂದು ನವಪದಿಯನು ವಿಜಯದಾಸರು ಬಳಸಿದ್ದಾರೆ ಉದಾಹರಣೆಗೆ

ಹೆಣ್ಣು ವಹಾ ರಿ(s) ಹೊನ್ನ ಕಟ್ಟಿದ ಮನುಜರ ವಿ ವಿ ವಿ ವಿ
ಕಣ್ಣನೆ ಕಳಚಿಹಿಂ ಗಿನಪುಡಿ ಯನೆ ತುಂಬಿ ವಿ ವಿ ವಿ ವಿ
ಸುಣ್ಣದೊ ಳಗೆ ಹೂಳಿ ಜನ್ಮಕ ಳೆದು ಶಿರ ವಿ ವಿ ವಿ ವಿ
ವಣ್ಣಿಕ ಲ್ಲನೆ ಆಡಿ ಇನ್ನು ಉ ಕ್ಕಿನ ಕಾದ ವಿ ವಿ ವಿ ವಿ
ಎಣ್ಣೆಯ ಸ ರಿದು ನೀ ರನ್ನೆರೆದು ನರವರ್ಣಾಂಸ ವಿ ವಿ ರು ವಿ
ಉಣ್ಣೆಂದು ತಿನಿಸುವರೊ [ತಿತ್ತಿಯನಿಕ್ಕಿ ವಿ ರು [ಪ್ರ
ಹಣ್ಣಣ್ಣು ಮಾಡುವರೊ [ಅಸಿಪತ್ರಾ ವಿ ರು [ಪ್ರ
ರಣ್ಯವ ಹೊಗಿಸುವರೊ [ಕ್ಷುಧೆಯೆನೆ ವಿ ರು [ಪ್ರ
ವ ಣ್ಣುಬಾ ಯ ಲಿ ತುಂಬಿ ಕುಟ್ಟಿಮೆ ಲ್ಲಿಸುವರೊ ವಿ ವಿ ವಿ ವಿ

[ವಿಜಯದಾಸರು ಎಚ್ಚರಿಕೆಚ್ಚರಿಕೆ ಮನವೆ ಇನ್ನು ]

ಐದು ಗಣಗಳ ಪಾದರಚನೆಗೆ ಸಂಬಂಧಿಸಿದಂತೆ ಮದನವತಿಯ ಆರ್ಧದಷ್ಟರ ಬಂಧವನು ವಿಜಯದಾಸರಲ್ಲಿ ಒಂದೆಡೆ ಕಾಣುತ್ತೇವೆ ಹಾದರಿಗೆ

ವಾವ ನ ನಮ್ಮನು ಒಲಿದುಕಾ ಯುಂವನಂತೆ ರಾಮರಾಮ ವಿ ವಿ ವಿ ವಿ ರು
ವಾಮನ ನೆ(s)ಡೆಯೆದಿ ಭೂಪ್ರೈಕುಂ ರವ ಕಂಡೆ ರಾಮರಾಮ ವಿ ರು ವಿ ವಿ ರು

[ವಿಜಯದಾಸರು ಕಾಶಿಯ ಹಾದಿಲಿ ಕೇಶವನಿದ್ದಾನೆ ರಾಮರಾಮ ]

ಇದರಲ್ಲಿ ಕೊನೆಯ ರುದ್ರವು ಸಹಜವಾಗಿವೆ ಎರಡು ಬ್ರಹ್ಮಗಣಗಳಾಗಿ ಒಲ್ಲಾತ್ತದೆ ದೀರ್ಘೀಕರಣತತ್ವವನ್ನು ಬಳಸಿ ಸುಲಭವಾಗಿ ಇದನ್ನು ಪಂಚಮಾತ್ರಾಲಯಕ್ಕೆ ಕೂಡ ತಿರುಗಿಸಬಹ ದು

ಮದನವತಿಗೆ ಮಹೀಪತಿರಾಯರಲ್ಲಿ ಉದಾಹರಣೆ ಸಿಕ್ಕುತ್ತದೆ ಮಾದರಿಗೆ

ಮಂದರ ಧರವಾ ಧವಶ್ರೀ ಹರಿಮು ಕ ಂದಬಾರೊ ವಿ ಬ್ರ ಬ್ರ ಬ್ರ ರು
ಸುಂದರ ವದನನೆ ನಂದಯ ಶೋದೆಯ ಕಂದಬ ರೊ ವಿ ವಿ ವಿ ವಿ ರು
ಕಂದರ್ಪ ಕೋಟಿಲಾ ವಣ್ಯದ ಲೊಪ್ಪುವಾ ನಂದಬಾರೊ ವಿ ವಿ ವಿ ವಿ ರು
ವಂದಿತ ತ್ರೈಲೋಕ್ಯ ಇಂದಿರಾ ಪತಿ ದೀನ ಬಂಧು ಬಾರೊ ವಿ ವಿ ವಿ ವಿ ರು
[ಮಹೀಪತಿರಾಯರು ದೇವಾಧಿದೇವ ಶ್ರೀದೇವಶಿಖಾಮಣಿ ಬಾರೊಬಾರೊ ]

[ಮೊದಲ ಪಾದದಲ್ಲಿ ಬ್ರಹ್ಮಗಣಗಳು ಬಂದಿರುವುದು ವಿಷ್ಣುಗಣಗಳಿಗೆ ಆದೇಶವಾಗಿ ಧ(s)ರವಾ ಧ(s)ವಶ್ರೀ ಹ(s)ರಿವ ಎ ಎಂದು ಎಳೆದಲ್ಲಿ ಅವನ್ನು ಕೂಡ ವಿಷ್ಣುವಿಗೆ ಹೊಂದಿಸಬಹುದ ] ಇಲ್ಲಿ ಕೂಡ ರ ದ್ರವು ಎರಡು ಬ್ರಹ್ಮಗಣಗಳಾಗಿ ಒಡೆಯುತ್ತದೆ ಆದರೆ ಮಾತ್ರಾಲಯ ಕ್ಕೆ ತಿರುಗಿಸಬೇಕಾದಲ್ಲಿ ಇಲ್ಲಿ ದೀರ್ಘೀಕರಣ ತತ್ವವನ್ನು ಹೆಚ್ಚಿನ ಪ್ರಮಾಣದಲ್ಲಿ ಬಳಸಬೇ ಕಾಗುತ್ತದೆ ಹಾಗಾಗಿ ಇದರಲ್ಲಿ ಅಂಶಲಯ ಗ ಣ ಮಾತ್ರ ಹಿಂದಿನದಕ್ಕಿಂತ ಹೆಚ್ಚಾಗಿದೆ

ಈ ಬಂಧದಲ್ಲೇ ಅಂತ್ಯದ ರುದ್ರಕ್ಕೆ ಬದಲು ಬ್ರಹ್ಮವನ್ನು ತಂದಾಗ ಮತ್ತೊಂದು ಬಂಧ ಸಿದ್ಧವಾಗುತ್ತದೆ ವಾದಿರಾಜರಲ್ಲಿ ಇದಕ್ಕೆ ಉದಾಹರಣೆ ಸಿಕ್ಕುತ್ತದ ಮಾದರಿಗೆ

ಅನುದಿನ ಪೊಕ್ಕು ನೀ ಸಾರಿಸು ಸಜ್ಜನ ರೆಡೆಗೆ ವಿ ವಿ ವಿ ವಿ ಬ್ರ
ಮನೆಮನೆ ವಾರ್ತೆಯ ಬಿಟ್ಟುಧ್ಯಾ ನಿಸಿರಡಿ ಗಡಿಗೆ ವಿ ವಿ ವಿ ವಿ ಬ್ರ
ಕನಸಿನೊ ಳ ದರು ಪೊ ಗದಿ ರಥಮರ ಬಳಿಗೆ ವಿ ವಿ ವಿ ವಿ ಬ್ರ
ಗುಣನಿಧಿ ಹಯವದ ನನಭಜಿ ಸಿರೊ ಒಂದು ಘಳಿಗೆ ವಿ ವಿ ವಿ ವಿ ಬ್ರ
[ವಾದಿರಾಜರು ಸಾಕು ಸಡಗರವ ಬಿಟ್ಟು ಹರಿಯ ನೆನೆ ಬೇಗ ]

ಇದಕ್ಕೇ ಅಧಿಕಗಣಗಳನು ಕೊಂಡಿಹಾಕಿ ಮತ್ತೊಂದು ಪ್ರಭೇದವನು ನಿರ್ಮಿಸ ಬಹುದು ಅಂತಹವನು ವಿಜಯದಾಸರ ಬಳಸಿದ್ದಾರೆ ಮಾದರಿಗೆ

ಶೀತರೆ ಪುಟ್ಟರೆ ಮೇದಿನಿ ಪಾಲಗೆ ಮೆಚ್ಚಿ ವಿ ವಿ ವಿ ವಿ ಬ್ರ
ಬಂದನೊ ಹೆಚ್ಚಿ ವಿ ಬ್ರ

ಆತುಮ ಮೂರುತಿ ದಶರಥ ನಿಗೆ ಮಗ ನಾದ ವಿ ವಿ ವಿ ವಿ ಬ್ರ
ಲೀಲಾವಿ ನೋದ ವಿ ಬ್ರ

ಜ್ಯೋತಿಪ್ರ ಕಾಶನು ಸಾಕೇತ ಪುರದಲಿ ನಲಿದ ವಿ ವಿ ವಿ ವಿ ಬ್ರ
ಸ್ತುತಿಪರಿ ಗೊಲಿದ ವಿ ಬ್ರ

ಭೂತಳ ದೊಳು ಜಾ ನಕಿಗೆ ನಾ ಥ(s)ನಾಗಿ ಮೆರೆದ ವಿ ಬ್ರ ವಿ ವಿ ಬ್ರ
ಕಾಯಿತ ಗರೆದ ವಿ ಬ್ರ

[ವಿಜಯದಾಸರು ರಂಗನ ನೋಡಿರೈ ಕರುಣಾಪಾಂಗನ ಪಾಡಿರೈ ]

ಆರು ಗಣಗಳ ಬ್ರ ವಿ ವಿ ವಿ ವಿ ರು × ೪ ರಚನೆಯ ಬಂಧವನು ನಮ್ಮ ಲಾಕ್ಷಣಿಕರು ಹೇಳಿಲ್ಲವೆಂದೂ ಹಿಂದೆ ಅಂತಹದು ಇರಲಿಲ್ಲವೆಂದೂ ತಿಳಿದಿದ್ದೇವೆ ಆದರೆ ಹರಿದಾಸರು ಆದಿಯ ಬ್ರಹ್ಮಕ್ಕೆ ಬದಲು ವಿಷ್ಣುವನ್ನು ತಂದು ಈ ಬಂಧ ವನ್ನು ಅಲ್ಲಲ್ಲಿ ಬಳಸಿದ್ದಾರೆ ಉದಾಹರಣೆಗೆ

ಥಳಥಳಿ ಸುವಬ್ರಹ್ಮ ರಂಧ್ರವೆ ಸುಖವೆಂದು ಪೊಳಗುವ ಬ್ರಾಹ್ಮಣನೊ
ವಿ ವಿ ವಿ ವಿ ವಿ ರು

ಬಲುರವಿ ಶತಕೋಟಿ ಶಿಂಶುಪಾ ರ(s)ದಲ್ಲಿ ಶೇರೋವ ಬ್ರಾಹ್ಮಣನೊ
ವಿ ವಿ ವಿ ವಿ ವಿ ರು

ಕಲಿಯುಗ ದಲಿ ಹರಿ ನಾಮದ ಅಮೃತವ ನುಂಡವ ಬ್ರಾಹ್ಮಣನೊ
ವಿ ವಿ ವಿ ವಿ ವಿ ರು

ಸುಲಭದಿ ಪುರಂದರ ವಿಠ ಲ ರಾಯನ ಶೇರೋವ ಬ್ರಾಹ್ಮಣನೊ
ವಿ ವಿ ವಿ ವಿ ವಿ ರು

[ಪುರಂದರದಾಸರು ಬ್ರಾಹ್ಮಣನೆಂದರೆ ಬ್ರಹ್ಮವ ತಿಳಿದವ ]

ಸಾಂಗತ್ಯವು ವಿಷ್ಣುಗಣಗಳ ಪಾದರಚನೆಯ ವರ್ಗಕ್ಕೆ ಸೇರುತ್ತದೆ ಸಾಂಗತ್ಯದ ಒಂದು ಮತ್ತು ಮೂರನೆಯ ಪಾದಗಳಲ್ಲಿ ನಾಲ್ಕು ನಾಲ್ಕು ವಿಷ್ಣುಗಣಗಳೂ ಎರಡು ಮತ್ತು ನಾಲ್ಕನೆಯ ಪಾದಗಳಲ್ಲಿ ಎರಡು ವಿಷ್ಣು ಮತ್ತು ಒಂದು ಬ್ರಹ್ಮವೂ ಬರು ತ್ತದೆಯೆಂಬುದನ್ನು ತಿಳಿದಿದ್ದೇವೆ ಅಂತೆಯೇ ಅಂಶಬಂಧಗಳಲ್ಲಿ ಗಣಾದೇಶ [ಎಂದರೆ ಒಂದು ರೀತಿಯ ಗಣದ ಸ್ಥಾನದಲ್ಲಿ ಪ ತ್ತೊಂದು ರಿ ತಿಯ ಗಣ ಬರುವುದು—ಉದಾ ಹರಣೆಗೆ ವಿಷ್ಣುವಿನ ಸ್ಥಾನದಲ್ಲಿ ಬ್ರಹ್ಮವೋ ರುದ್ರವೊ ಬರುವುದು] ಸಹಜವೆಂಬು ದನ್ನು ಕೂಡ ಈ ರಚನಾವಿಧಾನ ಮತ್ತು ಸ್ವಾತಂತ್ರ್ಯಗಳನ್ನು ಬಳಸಿಕೊಂಡು ಸಾಂಗತ್ಯದಲ್ಲೇ ರೂಪಿಸಬಹುದಾದ ಕೆಲವು ಮಾದರಿಗಳನು ಮಹೀಪತಿದಾಸರು ಪುರಂದರದಾಸರು ಮುಂತಾದವರಲ್ಲಿ ಕಾಣುತ್ತೇವೆ ಉದಾಹರಣೆಗೆ

| | | |
|---|---|---|
| ೧ | ಸೇವಲ್ಲ ಸೂತ್ರಲ್ಲ ಬಾಹ್ಯನೋ ಟಿಕಿ ಅಲ್ಲ | ವಿ ವಿ ವಿ ವಿ |
| | ವ ಹಿಪತಿ ನಿನ್ನೊಳು ತಿಳಿವದು ಮಾ | ವಿ ವಿ ರು |
| | ಕೌತುಕ ವನುಕಂಡು ಮಹಗ ರು ಕೃಪೆಯಿಂದ | ವಿ ವಿ ವಿ ವಿ |
| | ಸಾಯೋಜ್ಯ ಸದ ತಿ ಪಡೆವದು ಮಾ | ವಿ ವಿ ರು |

[ಮಹೀಪತಿರಾಯರು ಏನೆಂದ್ಹೇಳಲಿ ಸ್ವಾನಂದ ಮಹಿಮೆಯು ]

ಇಲ್ಲಿ ಬ್ರಹ್ಮದ ಸ್ಥಾನದಲ್ಲಿ ರುದ್ರ ಬಂದಿದೆ ರುದ್ರವು ಎರಡು ಬ್ರಹ್ಮಗಳಾಗಿ ಒಡೆದರ ಇದೇ ಕಿರಿಸೀಸವೆನಿಸಿಕೊಳ್ಳುತ್ತದೆ

| | | |
|---|---|---|
| ೨ | ಪಾತ ಳ ಗಂಗೆಯ ಸ್ನಾನವ ಮಾಡಲು | ವಿ ವಿ ವಿ ವಿ |
| | ಪಾತಕ ವೆಲ್ಲ ಪರಿಹಾರವು | ವಿ ಬ್ರ ರು |
| | ಜ್ಯೋತಿ ರ್ಲಿಂಗನ ಧ್ಯಾನವ ಮಾಡಲು | ಬ್ರ ಬ ವಿ ವಿ |
| | ದ್ಯೋತಗ ಳಿಲ್ಲ ಅನುದಿನವು | ವಿ ಬ್ರ ರು |

[ಪುರಂದರದಾಸರು ನೆನೆವೆನನ್ನರ ಕಾಣೆನು ]

ಇಲ್ಲಿ ಆರು ಹದಿಮೂರರಲ್ಲಿ ವಿಷ್ಣುವಿಗೆ ಬದಲು ಬ್ರಹ್ಮವೂ [ಈ ಕೀರ್ತನೆಯ ಎಲ್ಲ ನುಡಿಗಳಲ್ಲೂ ಈ ಲಕ್ಷಣವಿದೆ] ಏಳು ಹದಿನಾಲ್ಕರಲ್ಲಿ ಬ್ರಹ್ಮಕ್ಕೆ ಬದಲು ರುದ್ರವೂ ಬಂದಿದೆ

ಗಣಾದೇಶಸ್ವಾತಂತ್ರ್ಯವನ್ನು ಬಳಸದೆ ಸಾಂಗತ್ಯದ ಇಡೀ ಬಂಧವನ್ನು ದ್ವಿಗುಣಗೊಳಿಸುವುದರ ಮೂಲಕ ರೂಪಿಸಬಹುದಾದ ಒಂದು ಸಮಚೌಪದಿಬಂಧವನ್ನು ಮಹೀಪತಿರಾಯರು ವಿಜಯ ದಾಸರು ಮುಂತಾದವರಲ್ಲಿ ಕಾಣುತ್ತೇವೆ ಮಾದರಿಗೆ

ನಾರದ ತುಂಬುರ ರೆಲ್ಲ ಗಾ ಯನದಲಿ ಮಾಡುವ ರಾನಂದ ಘೋಷ
ಇರುಳು ಹ ಗಲೆ ನಿಮ್ಮ ಹೊರಳುವ ಹಾಸಿಕೆ ದೋರುವ ಹರುಷತಾ ಶೇಷ
ಸುರಮುನಿ ಜನರೆಲ್ಲ ಚರಣ ಕ ಮ(ಽ)ಲಕೆ ಹಚ್ಚಿಹ ರು(ಽ)ನಿಜ ಧ್ಯಾಸ
ವರಣಿಸ ಲಾಗದು ಪರಿಪರಿ ಯಲಿ ನಿಮ್ಮ ಸಿರಿಲೋಲ ನೀಸ ರ್ವೇಶ
[ಮಹೀಪತಿರಾಯರು ಕಾಯೊ ಕಾಯೊ ಕಾಯೊ ಕಾಯೊ ದಯಾನಿಧಿ ]

ವಿ ವಿ ವಿ ವಿ ವಿ ಬ ಬ್ರ
ವಿ ವಿ ವಿ ವಿ ವಿ ವಿ ಬ್ರ
ವಿ ವಿ ವಿ ವಿ ವಿ ವಿ ಬ್ರ
ವಿ ವಿ ವಿ ವಿ ವಿ ಬ್ರ ಬ್ರ

ಇಂತಹ ಬಂಧವನ್ನು ದ್ವಿಸಾಂಗತ್ಯವೆಂದು ಕರೆಯಬಹುದು ಗಣಸಂಖ್ಯೆ ಮತ್ತು ಸಮಪಾದತ್ವಗಳ ದೃಷ್ಟಿಯಿಂದ ಇದು ಪಿರಿಯಕ್ಕರದ ವರ್ಗಕ್ಕೆ ಸೇರುತ್ತದೆ

ಹೀಗಲ್ಲದೆ ಪ್ರತ್ಯೇಕಗಣವನ್ನು ಬಳಸಿಕೊಂಡು ಚಿಕ್ಕಪಾದಗಳ ರಚನೆಯನ್ನು ಪುನರಾವರ್ತಿಸುವುದರ ಮೂಲಕ ಷಟ್ಪದಿ ಬಂಧವೊಂದನ್ನು ಕೂಡ ರೂಪಿಸಬಹುದು ಇಂತಹ ಒಂದು ಬಂಧವನ್ನು ವಾದಿರಾಜರ ರಚನೆಯೊಂದರಲ್ಲಿ ಗುರುತಿಸಬಹುದು ವಾದರಿಗೆ ಅದರ ಒಂದು ನುಡಿ

| | | |
|---|---|---|
| ಮಂದರ ಗಿರಿಯನು ಬೆನ ಲಿ ಪೊತ್ತಂಥ | ವಿ ವಿ ವಿ ವಿ | |
| ಇಂದಿರೆ ಯರಸನೆ ಭಾಮ [ನಾ | ವಿ ವಿ ಬ್ರ | [ಪ] |
| ನಿಂದಿರೆ ಯ ರಸನೆ ಭಾವೆ | ವಿ ವಿ ಬ್ರ | |
| ಇಂದು ನಿನ ಗಂತಹ ಭಾರಗ ಳಿಲ್ಲವು | ರು ವಿ ವಿ ವಿ | |
| ಸಿಂಧ ವಿ ನೊ(ಂ)ಳುನೀ ಪೋಗ್ಯೆ[ಕೃಷ್ಣ | ವಿ ವಿ ಬ್ರ | [ಪ್ರ |
| ಸಿಂಧುವಿ ನೊ(ಂ)ಳು ನೀ ಪೋಗ್ಯೆ | ವಿ ವಿ ಬ್ರ | |

[ವಾದಿರಾಜರು ನಾಗಶಯನನು ನಾ ನಿನಗಾಗಿ ಬಂದಿಹೆ ]

ಇದನ್ನು ವರ್ಧಿತಸಾಂಗತ್ಯವೆಂದು ಕರೆಯಬಹುದು

ಹೀಗೆ ಹಲವು ಪ್ರಕಾರದ ಅಂಶಬಂಧಗಳನು ಹರಿದಾಸರು ಬಳಸಿದ್ದಾರೆ ಇಲ್ಲ ಎಲ್ಲವನೂ ವಿವರಿಸುವುದು ಸಾಧ್ಯವ ಗಿಲ್ಲ ಕೈಗೆ ಸಿಲುಕುವ ಕೆಲವನು ಮಾತ್ರ ವಿವರಿಸಿದೆ ಇದು ಹೇಗೇ ಇದ್ದರೂ ಹರಿದಾಸರ ಕೃತಿಗಳು ಅಂಶ ಛಂದಸ್ಸಿನಲ್ಲಿ ಎಂತಹ ವೆ ವಿಧ್ಯಗಳನ್ನು ಪ್ರದರ್ಶಿಸ ತ್ತವೆ ಎಂಬುದರ ಸ್ಥೂಲ ಪರಿಚಯವಾದರೂ ಇದರಿಂದ ಆಗುತ್ತದೆ

**ಮಾತ್ರಾ ಬಂಧಗಳು** ಅಂಶಬಂಧಗಳಲ್ಲಿಯ ತೆಯೇ ಮಾತ್ರಾಬಂಧಗಳಲ್ಲಿ ಕೂಡ ಹರಿದಾಸರು ಹಲವು ವೈವಿಧ್ಯಗಳನ್ನು ಸಾಧಿಸಿದ್ದಾರೆ ಷಟ್ಪದಿಗಳು ಕುಸುಮಚೌಪದಿ ದ್ವಿಪದಿ ಇವನು ಬಳಸಿರ ವುದಂತೂ ತಿಳಿದೇ ಇದೆ ಇವನ್ನು ಬಿಟ್ಟು ಇವರು ಬಳಸಿದ ಇತರ ಕೆಲವು ಪ್ರಮುಖ ಬಂಧಗಳ ಒಗ್ಗೆ ಈಗ ನೋಡ ಬಹುದು

ಮಾತ್ರಾಲಯ ದ ಪಾದಗಳಲ್ಲಿ ಮ ಊರುಗಣಗಳವನ್ನು ಮೊದಲು ನೋಡ ಬೇಕಾಗುತ್ತದೆ ಗ ಗ ವ ಂ [ಗ=ಗಣ ಮು=ಮುಂಡಿ] – ಮಾದರಿಯ ಲ್ಲಿ ಮೂರು ಗಣಗಳಿರುವುದು ಇವುಗಳ ಮೂಲರಚನೆ ಎಂದು ಇಟ್ಟುಕೊಳ್ಳಬಹುದು ಇದಕ್ಕೆ ಪ್ರತ್ಯೇಕಗಣಗಳ ಕೂಡಿ ಹಾಕಿ ಒಂದು ಚೌಪದಿಯನ್ನು ನಿರ್ಮಿಸಬಹುದು ಅದರ ರಚನೆ ಹೀಗಿರುತ್ತದೆ

ಗ ಗ ಮು [ಪ್ರ
ಗ ಗ ಮು
ಗ ಗ ಮು [ಪ್ರ
ಗ ಗ ಮು

ಇದರಲ್ಲೇ ವಿವಿಧ ಲಯಗಳಿಂದ ವಿವಿಧ ಪ್ರಕಾರಗಳಾಗುತ್ತವೆ ಹರಿದಾಸರ ಕೃತಿಗಳಲ್ಲಿ ಉತ್ಸಾಹ ಮಂದಾನಿಲ ಮತ್ತು ಲಲಿತ ಈ ಮೂರು ಲಯಗಳಲ್ಲೂ ಇಂತಹ ಬಂಧಗಳು ಕಾಣಸಿಕ್ಕುತ್ತವೆ ಉದಾಹರಣೆಗೆ

೧ ಫಾಲ ಲೋಚ ನ [ವಿನುತ ೩ ೩ ಮು [ಪ್ರ
ಮೂಲ ರಾಮ ನ ೩ ೩ ಮು
ಶೀಲ ಸದ್ಗು ಣ [ನುತಿಪ ೩ ೩ ಮಂ [ಪ್ರ
ಮೇಲು ಭಕತ ನ ೩ ೩ ಮು
[ಜಗನ್ನಾಥದಾಸರು ಪೊಂದಿ ಒದುಕಿರೋ ರಾಘವೇಂದ್ರರಾಯರ ]

೨ ಸಮಚರ ಕಾಂಬುಜ ನ [ನಿಗಮಾ ೪ ೪ ಮು [ಪ್ರ
ಗಮತತಿ ಗೋಚರ ನ ೪ ೪ ಮು
ಅಮಿತ ಪ ರಾಕ್ರಮ ನ [ರ ಕ್ಮಿಣಿ ೪ ೪ ಮು [ಪ್ರ
ರಮ ಣ ರ ವೀಕ್ಷಣ ನ ೪ ೪ ಮು
[ಜಗನ್ನಾಥದಾಸರು ಕಂಡೆ ಪಂಢರಿರಾಯನ ]

೩ ವೈರ ಗ್ಯ ಪುಟ್ಟಲಿ ಲ್ಲ [ಘೋರಸಂ ೫ ೫ ಮು [ಪ್ರ
ಸಾರದೊಳು ಮಗ್ನನಾ ದೆ ೫ ೫ ಮು
ಸೂರಿಗಳ ವ ಧ್ಯದ ಲ್ಲಿ [ಬುಧನಂತೆ ೫ ೫ ಮು [ಪ್ರ
ತೋರುತಿದೆ ನೋಳ್ಪಜನ ಕೆ ೫ ೫ ಮು
[ಜಗನ್ನಾಥದಾಸರು ಶೇಷಪರ್ಯಂಕಶಯ ನ ]

ಭಾಮಿನೀಲಯದಲ್ಲಿ ಇಂತಹುದು ರಚಿತವಾಗಿಲ್ಲ ಅದಕ್ಕೆ ಕಾರಣ ಇಷ್ಟೆ ಆ ಲಯದ ಸ ಪ್ಪತೆಗೆ ಇಲ್ಲಿ ಅವಕಾಶವಿಲ್ಲ ಅದು ಸ್ಪಷ್ಟವಾಗಬೇಕಾದರೆ ಕೊನೆಯ ಪಕ್ಷ ನಾಲ್ಕು ಗಣಗಳಾದರೂ ಇರಬೇಕು ಆದರೆ ಇಲ್ಲಿ ಹಾಗಿಲ್ಲ ಕೇವಲ ಎರಡು ಮಾತ್ರ ಇವೆ ಸರಣಿಯಲ್ಲಿ ಮೂರನೆಯದು ಮುಡಿಯಾಗಿದೆ

ಈ ರಚನೆಯಲ್ಲಿಯೇ ಎರಡನೆಯ ಪಾದದ ಅಂತ್ಯದಲ್ಲಿಯೂ ಪ್ರತ್ಯೇಕಗಣ ವನು ತಂದು, ಮುಡಿಗೆ ಬದಲು ಪದ್ಯಗಣವನ್ನು ತಂದರೆ ಇನ್ನೊಂದು ಪ್ರಕಾರ ಸಿದ್ಧವಾಗುತ್ತದೆ ಆದಕ್ಕೆ ಈ ಉದಾಹರಣೆಯನ್ನು ನೋಡಬಹುದು

ಬದರಿಕಾ ಶ್ರಮಕೆ ನೀ ಪೋಗಿ [ಲಕ್ಷ್ಮೀ ೫ ೫ ಪ [ಪ್ರ
ಹೃದಯ ವಾ ಸನ ಪದಕೆ ಬಾಗಿ [ಭಾಷ್ಯ ೫ ೫ ಪ [ಪ್ರ

ಮುದದಿಂದ ಪೇಳ್ದಿ ಚೆ ನ್ನಾಗಿ [ಎನಗೆ ಶ ಶ ಪ [ಪ್ರ
ಅದರ ಭಾ ವವ ತಿಳಿಸೊ ಯೋಗಿ ಶ ಶ ಪ
[ಜಗನ್ನಾಥದಾಸರು ಶ್ರೀ ಮಾರುತಾತ್ಮ ಸಂಭೂತ ಹನುಮ]

ಎರಡು ಮತ್ತು ಮೂರುಗಣಗಳ ಪಾದಗಳನ್ನು ಹೊಂದಿಸಿ ಶರಾದಿ ಷಟ್ಪದಿ ಗಳನ್ನು ಹೋಲುವ ಬಂಧವೊಂದನ್ನು ವ್ಯಾಸರಾಯರು ಬಳಸಿದ್ದಾರೆ ಉದಾಹರಣೆ

ಇಂದುಕುಲ ಪಾವನನ ಶ ಶ
ಇಂದು ರವಿ ಲೋಚನನ ಶ ಶ
ಇಂದ ನೀ ಕರೆತಾರೆ ಗಿಣಿಯೆ ಶ ಶ ¬
ಇಂದುಶೇ ಖರನುತನ ಶ ಶ
ಇಂದಿರಾ ರಮಣನ (s) ಶ ಶ
ತಂದುಕೋ ರೇ ಪಂದ್ದು ಗಿಣಿಯೇ ಶ ಶ ಪ
[ವ್ಯಾಸರಾಯರು ಕಾಣದೆ ನಿಲ್ಲಲಾರೆ ಕಮನಿ ಯ ಮೂರುತಿಯ ]

ನಾಲ್ಕು ಗಣಗಳ ಪಾದರಚನೆಯಲ್ಲಿ ಮೊದಲು ಗಮನಿಸಬೇಕಾದದ್ದು ರಗಳೆ ಯದು ರಗಳೆಯ ಪಾದಗಳನು ಬಳಸಿಕೊಂಡು ದ್ವಿಪದಿ ಚೌಪದಿ ಅಷ್ಟಪದಿ ಗಳನು ಹರಿದಾಸರು ಬಳಸಿದ್ದಾರೆ ಮಾದರಿಗೆ

೧ ಕನಲಿದ ಜನಪನ ಅನ ನಯ ದಲಿನಿ ೪ ೪ ೪ ೪
ನ್ನಣುಗನ ಪಾಡಿದಿ ಘನತರ ಚರಿತಾ ೪ ೪ ೪ ೪
[ಜಗನಾ ಥದಾಸರು ರಾಘವೇಂದ್ರ ರಾಚಿತ ಗುಣಸಾಂದ್ರ ]

೨ ರಾಜ ಸೂಯ ಯಾಗ ದಲ್ಲಿ ೩ ೩ ೩ ೩
ರಾಜ ರಾಜ ರಿರಲು ಧರ್ಮ ೩ ೩ ೩ ೩
ರಾಜ ಸುತನು ಇವನೆ ಸಭಾ ೩ ೩ ೩ ೩
ಪೂಜೆ ಗರ್ಹ ನೆಂದು ಪೊಗಳ್ದ ೩ ೩ ೩ ೩
[ವಾದಿರಾಜರು ಲೋಕಚರಿತನೋ ಕೃಷ್ಣನೇಕಚರಿತನೋ ]

೩ ನೂರು ಪರ್ವತ ವರುಷ ಬಿಡದಲೆ ೩ ೪ ೩ ೪
ಚಾರು ವೃಂದಾ ವನದ ಲೀಲಿ ೩ ೪ ೩ ೪
ಸ್ಸಾರ ಆರಾ ಧನೆಯು ತೊಲಗದೆ ೩ ೪ ೩ ೪
ವಾರ ವಾರಕೆ ಅಗು ತಿಪ್ಪುದು ೩ ೪ ೩ ೪
ಸಾರೆ ಕಾರು ಣ್ಯದಲಿ ಲಕುಮಿಾ ೩ ೪ ೩ ೪

ನಾರ ಯಣಅಾ ಚಕ್ರ ರೂಪದಿ ಽ ೪ ಽ ೪
ಸಾರಿ ದವರಘ ಕಳೆದು ಇವರಿಗೆ ಽ ೪ ಽ ೪
ಕೀರು ತಿಯುತಂ ದಿಪ್ಪು ದನುದಿನ ಽ ೪ ಽ ೪
[ವಿಜಯದಾಸರು ನೋಡಿದೆ ಗ ರುಗಳ ನೋಡಿದ ]

ಇಂತಹ ಪಾದರಚನೆಯಲ್ಲೇ ನಾಲ್ಕನೆಯ ಗಣದ ಸ್ಥಾನದಲ್ಲಿ ಪದ್ಮಗಣವನು ತಂದು ಕೂಡ ದ್ವಿಪದಿ ಚೌಪದಿಗಳನ್ನು ರೂಪಿಸಿ ಬಳಸಿರುವುದುಂಟು ವಾದರಿಗೆ

ದ್ವಿಪದಿ ಸಾಧನ ಪಡೆವದು ಗುರುದೆಯ ಕರುಣ ೪ ೪ ೪ ಪ
ಸದಮಲ ಸುಖಸು ಜ್ಞಾನದ ಸ್ಫುರಣ ೪ ೪ ೪ ಪ
[ಮಹೀಪತಿರಾಯ ರು ಹರಿಹರಿಹರಿಹರಿ ಹರಿಯೆ ಎನ್ನಿ ]

ಚೌಪದಿ ವನಜಾಕ್ಷ ವಾಧವ(s) ವಸುದೇವ ತನಯ ೫ ೫ ೫ ಪ
ಸನಕಾದಿ ವ ುನಿವಂದ್ಯ ಸಾಧ ಜನ ಪ್ರಿಯ ೫ ೫ ೫ ಪ
ಇನಕೋಟಿ ಶತತೇಜ ಮುನಿಕಲ್ಪ ಭೂಜ ೫ ೫ ೫ ಪ
ಕನಕಾದ್ರಿ ನಿಲಯವೆಂ ಕಟರಾಯ ಜೀಯ ೫ ೫ ೫ ಪ
[ಕನಕದಾಸರು ಲಾಲಿ ಪಾವನ ಚರಣ ಲಾಲಿ ಅಘಹರಣ ]

ಇದು ವಾನೌಪಿ ಚೌಪದದ ಬಂಧವಾಗಿರುವುದನ್ನು ಗಮನಿಸಬೇಕು

ಈ ವರ್ಗದಲ್ಲಿಯೇ ಚತುರ್ಮಾತ್ರಾಲಯದ ರಚನೆಯ ಲ್ಲಿ ಪ್ರತ್ಯೇಕ ಗಣಗಳನ್ನು ಬಳಸಿ ಮತ್ತೊಂದು ರೀತಿಯ ಅರ್ಧಸಮ ಚೌಪದಿಯನು ರೂಪಿಸಲಾಗುತ್ತದೆ ವಾದರಿಗೆ ಇದನ್ನು ನೋಡಬಹುದು

ಅಂಡದ ತಂದಿಯ ಲಿ ನಮ್ಮೂ ರ [ಒದು ೪ ೪ ೪ ಮ [ಪ್ರ
ಕಂಡವ ರಿಲ್ಲವೊ ನಮ್ಮೂ ರು ೪ ೪ ೪ ಮಂ
ದಂಡೆಕಾಣದ (s) ನಮ್ಮೂ ರು [ನಡು ೪+೪ ೪ ಮಂ [ಪ್ರ
ಮಂಡೆ ಸ್ಥಳವೇ ನಮ್ಮೂ ರು ೪ ೪ ೪ ಮಂ
[ಪುರಂದರದಾಸರು ಯಾರೂ ಅರಿಯರೊ ನಮ್ಮೂರು ]

ಈ ಪೂರ್ಣ ಪಾದಗಳ ಸರಣಿಯ ಕೊನೆಗೆ ಒಂದು ಊನಪಾದವನ್ನು ತರ ವುದನ್ನು ಗೋವಿನ ಕಥೆಯ ಮಟ್ಟಿನಲ್ಲಿ ಕಾಣುತ್ತೇವೆ ಅದೇ ಮಾ‌ಽ ರಚನೆಯ ಆಧಾರದ ಮೇಲೆ ರಚಿತವಾದ ಚತುರ್ಮಾತ್ರಾಲಯದ ಬಂಧಕ್ಕೆ ಈ ಉದಾಹರಣೆಯನ್ನು ಗಮನಿಸಬಹುದು

ಹಿಡಿವರೆ ಭ್ರಾಂತಿಯ ಜಡಿವರೆ ವ ಮತೆಯ ೪ ೪ ೪ ೪
ನುಡಿವರೆ ಪುಸಿಯನು ಬಿಡುವರೆ ಸತ್ಯವ ೪ ೪ ೪ ೪
ಇಡ ವರೆ ದುರ್ಗುಣ ಸಿಡ ವರೆ ಬೊ ಧಕೆ ೪ ೪ ೪ ೪
ಕೆಡುವರೆ ವರವಿಲಿ ಮಡಿವರೆ ವ್ಯರ್ಥ ೪ ೪ ೪ ಪ

[ಮಹೀಪತಿರಾಯ ರ ಹೊಂದಿಸುಖಿಸು ಹರಿಯ ಪಾದ ]

ಚಿಕ್ಕ ಷಟ್ಪದಿಗಳ ಅರ್ಧ ಭಾಗದಲ್ಲಿ ಮೊದಲ ಎರಡು ಪಾದಗಳನು ಒಂದು ಪಾದವಾಗಿಯೂ ಮೂರನೆಯ ಪಾದವನ್ನು ಮತ್ತೊಂದು ಪಾದವಾಗಿಯೂ ರೂಪಿಸಿ ಅದೇ ರಚನೆಯ ನ್ನು ಪುನರಾವರ್ತಿಸಿದಾಗ – ಎಂದರೆ ಚಿಕ್ಕ ಷಟ್ಪದಿಯನ್ನು ನಾಲ್ಕು ಪಾದಗಳಾಗಿ ಬರೆದಾಗ ಒಂದು ರಿ ತಿಯ ಅರ್ಧ ಸಮಚತುಷ್ಪದಿ ರೂಪುಗೊಳ್ಳುತ್ತದೆ ಇಂತಹವನ್ನೂ ಇವುಗಳ ಎರಡರಷ್ಟಿರುವ ಅಷ್ಟಪದಿಗಳನ್ನೂ ಹರಿದಾಸರು ಬಳಸಿದ್ದಾರೆ ಉದಾಹರಣೆಗೆ ಇವನು ನೋಡಬಹ ದು

೧ ಧ್ಯಾನ ಮೌನ ಸ್ನಾನ ಸಂಧ್ಯ ೩ ೩ ೩ ೩
ಜ್ಞಾನ ಗುರುತು ಅರಿಯೆ ನಾ ೩ ೩ ೩ ಮು
ನ್ಯೂನ ಪೂರ್ಣ ನೋಡ ದೆನ್ನ ೩ ೩ ೩ ೩
ರಕ್ಷಿ ಸೋದ ಯಜಾನಿ ಧೇ ೩ ೩ ೩ ಮು

[ಮಹೀಪತಿರಾಯ ರು ಯುಕ್ತಿಯಿ ದ ಭಕ್ತಿ ಮಾಡಲಿಕ್ಕೆ ಶಕ್ಯನಲ್ಲನಾ ]

೨ ಅಂಜಿಕೆ ಯಿ ಲ್ಲದೆ ಗಿರಿಸಾ ರಿದ ಕಪಿ ೪ ೪ ೪ ೪
ಕುಂಜರ ರವಿಸುತ ಬಲ್ಲವ ನು ೪ ೪ ೪ ಮು
ಎಂಜಲ ಫಲಗಳ ಹರಿಗ ರ್ಪಿಸಿದಾ ೪ ೪ ೪ ೪
ಕಂಜಲೋಚನೆಯ ಕೇಳೆ ನು ೪+೪ ೪ ಮು

[ವಿಜಯ ದಾಸರು ರಾಮರಾಮ ಎಂಬೆರಡಕ್ಷರ ಪ್ರೇಮದಿ ಸಲಹಿತು

೩ ಏಕ ದಂತನೆ ಲೋಕ ಖ್ಯಾತನ ೩ ೪ ೩ ೪
ಏಕ ವಾಕ್ಯಪ್ರ ವೀಣ ನೆ ೩ ೪ ೩ ಮು
ಏಕ ವಿಂಶತಿ ಪತ್ರ ಪೂಜಿತ ೩ ೪ ೩ ೪
ನೇಕ ವಿಘ್ನವಿ ನಾಯ ಕ ೩ ೪ ೩ ಮು

[ಪುರಂದರದಾಸರು ಶರಣು ಶರಣು ]

೪ ಅಂತ ರಾತ್ಮದ ತಂತು ವಿಡಿಯದೆ ೩ ೪ ೩ ೪
ಗ್ರಂಥ ಪರಣಗ ಖ್ಯಾತ ಕೆ ೩ ೪ ೩ ಮು
ಕಂತು ಪಿತನಾ ರ್ಚನೆಯು ಮರಿಯದೆ ೩ ೪ ೩ ೪

ತಂತ್ರ ಮಂತ್ರಗ ಳಾ ತ ಕೆ ೩ ೪ ೩ ಮು
ಸಂತತ ಚಿಂತಾ ಯ ಕನ ನೆನೆಯದೆ ೩ ೪ ೩ ೪
ವ ಂತ್ರ ವಠಾತೆಗ ಳ್ಯಾತ ಕೆ ೩ ೪ ೩ ಮು
ಪಂಥ ವರಿಯದೆ ಪರಮ ಯೋಗದ ೩ ೪ ೩ ೪
ನಂತ ವ್ರತವಿದು ವ್ಯಾತ ಕೆ ೩ ೪ ೩ ಮು
[ಮಹೀಪತಿರಾಯರು ಆವಿತತ್ವದ ಸಾರ ತಿಳಿಯದೆ ಫೆ ದಾಭೆ ದವಿದ್ಯಾತಕಿ ]

[ಮೂರನೆಯ ಉದಾಹರಣೆಯಲ್ಲಿ ಎರಡನೆಯ ಪಾದದ ಎರಡನೆಯ ಗಣದಲ್ಲಿ ಕ್ಕ ಎಂ.ಎದನ್ನು ಮುಂದೆ ಒತ್ತಕ್ಷರವಿದ್ದರೂ ಲಘುವಾಗಿಯೇ ಪರಿಗಣಿಸಬೇಕು ಪ್ರ ಶಿಥಿಲೋಚ್ಚಾರಕ್ಕೊಳಪಡಬೇಕು ನಾಲ್ಕನೆಯ ಉದಾ ಯ ಐದನೆಯ ಪಾದದ ಆದಿಯ ಗಣವನ್ನು ತ್ರಿವಮಾತ್ರಾಗಣಕ್ಕೆ ಕುಗ್ಗಿಸಿ ಉಚ್ಚರಿಸಬೇಕು ]

೫ ತ್ರೇತೆಯ ಲಿ ರಘುಪತಿಯ ಸೇವೆ ಮಾ ಡುವೆ ನೆಂದು ೫ ೫ ೫ ೫
ವ ತಸಂತ ಹನುಮಂತ ನೆಂದೆನಿಸಿ ದ ೫ ೫ ೫ ಮು
ಪೋತಭಾ ಪದಿ ತರಣಿ ಬಿಂಬಕ್ಕೆ ಲಂಘಿಸಿದ ೫ ೫ ೫ ೫
ಈತಗೆಣೆ ಯಾರು ಮೂ ಲೋಕದೊಳ ಗೆ ೫ ೫ ೫ ಮು
[ಶ್ರೀಪಾದರಾಜರು ಜಯಜಯ ಜಗತ್ರಾಣ ಜಗದೊಳಗೆ ಸ ತ್ರಾಣ ]

೬ ಸಿರಿಸಕಲ ಪದವಿ ವ ಶ್ರೀ ಧರಂ ದೆನಲುತಾ ೫ ೫ ೫ ೫
ಹರುಷಗತಿ ನೀವ ಹೃಷಿ ಕೇಶನೆನ ಲು ೫ ೫ ೫ ಮು
ಪರಮ ಪಾ ತಕ ದೂರ ಪದ್ಮ ನಾ ಭೆಂದೆನಲು ೫ ೫ ೫ ೫

ದಾರಿದ್ರ್ಯ ಭಂಜನಾ ದಾ ಮೋದರೆನ ಲು ೫ ೫ ೫ ಮು
ಸುರಿಸು(ಽ)ವ ಅವ್ಯತವ(ಽ) ಸಂಕ ರುಷ ಣೆಂದನಲು ೫ ೫ ೫ ೫
ಹರೆವಧರೆ ಯೊಳು ವಾಸು ದೇವನೆನ ಲು ೫ ೫ ೫ ಮು
ಪರಿಪರಿಯ ಸಲಹುವ(ಽ) ಪ್ರದ್ಯುಮ್ನ ನೆಂದೆನಲು ೫ ೫ ೫ ಮು
ಅರಹುಗತಿ ನೀವ ಅನಿ ರ ದ್ದನೆನ ಲು ೫ ೫ ೫ ಮು
[ಮಹೀಪತೀರಾಯ ರು ಮುಂಜಾನೆ ಎದ್ದು ಮ ರಹರನ ಸ್ಮರಿಸಲಿ ಮನವೆ ]

[ನಾಲ್ಕನೆಯ ಪಾದದ ಭಂಜನದಾ ಎಂಬುದನ್ನು ದಾ ವನ್ನು ಹ್ರಸ್ವದಂತೆ ಉಚ್ಚರಿಸುವುದರ ಮೂಲಕ ಪಂಚಮಾತ್ರಾಮೌಲ್ಯಕ್ಕೆ ಹೊಂದಿಸಬೇಕು ]

ನಾಲ್ಕು ಗಣಗಳ ಪೂರ್ಣಪಾದಗಳ ಜೊತೆಗೆ ಮೂರು ಅಥವಾ ನಾಲ್ಕು ಗಣ ಗಳ ಊನಪಾದಗಳನ್ನು ವಿವಿಧ ರೀತಿಯ ಲ್ಲಿ ಜೋಡಿಸಿ ಚೌಪದಿ ಪಂಚಪದಿಗಳನ್ನು ರಚಿಸಿರುವುದಕ್ಕೆ ಕೆಲವು ಉದಾಹರಣೆಗಳು ಸಿಕ್ಕುತ್ತವೆ ಮೊದಲಿಗೆ ಇವನ್ನು ನೋಡಬಹ ದು

೧ ಕಾಯವು ಸ್ಥಿರವ ಲ್ಲ [ಎನ್ನೊಳು ೪ ೪ ಮು [ಪ್ರ
**ಮಾಯೆ ತುಂಬಿತ ಲ್ಲ** ೪+೪ ಮ

**ಪ್ರಾಯ ಮದದಿಪರ ಸ್ತ್ರೀಯರ ಕೂಡಾಡಿ** ೪+೪ ೪ ೪
ಕಾಯಜ ಜನಕನ ಗಾಯ ನ ಮಾಡದೆ ೪ ೪ ೪ ೪
[ಶ್ರೀಪಾದರಾಜರು ಕಾಯವು ಸ್ಥಿರವಲ್ಲ ]

[ಇಲ್ಲಿ ಎರಡು ಮೂರನೆಯ ಪಾದಗಳಲ್ಲಿ ಗಣಪರಿವೃತ್ತಿ ಬಂದಿದೆ ಅಂತೆಯೇ ಮೂರನೆಯ ಪಾದದ ಕೊನೆಯ ಗಣವನ್ನು ಚತುರ್ಮಾತ್ರಾಪ್ರಮಾಣಕ್ಕೆ ಕ ಗ್ಗಿಸಿ ಹೇಳ ಬೇಕು ]

೨ ಬಿಲ್ಲ ಹ ಬ್ಬವೆ ಸುಳ್ಳು ಬಿಸರು ಹಾ ಕ್ಷಿಯರಿಕ್ಷು ೫ ೫ ೫ ೫
ಬಿಲ್ಲಿನಂ ತ್ಸವ ನಿ ನ ೫ ೫ ಮು
ಖುಲ್ಲ ಆ ಕ್ರೂರನನು ಕಳುಹಿ ಕರೆ ಸಿದರಲ್ಲಿ ೫ ೫ ೫ ೫ ೫
ವಲ್ಲಭೆಯ ರನು ನೆರೆವೆ ನಮ್ಮೆಲ್ಲ ರನುಮರೆವೆ ೫ ೫ ೫ ೫ ೫
[ಶ್ರೀಪಾದರಾಜರು ಮಾನನಿಧಿ ಶ್ರೀಕೃಷ್ಣ ಮಧುರೆಗೈದುವನಂತೆ ]

೩ ಸಾರ ವಚನ ಕೇಳಿ ಭಾಮೆ ೩ ೩ ೩ ೩
ಮೋರೆ ಕೆಳಗೆ ಮಾಡು ತಿರಲು ೩ ೩ ೩ ೩
ನಾರಿ ರುಕ್ಮಿಣಿ ಭಾಮೆ ಯ ರನು ೩ ೩ ೩ ೩
ವೀರ ಕರೆದ ನು [ತಾ ೩ ೩ ಮು [ಪ್ರ
ಸೆ ರಿ ಮೆರೆದ ನು ೩ ೩ ಮು
[ಶ್ರೀಪಾದರಾಜರು ಕಂಜನೇತ್ರ ಶುಭ ಮಂಜುಳಗಾತ್ರ ]

[ಮೂರನೆಯ ಪಾದದ ಎರಡನೆಯ ಗಣವನು ತ್ರಿಮಾತ್ರಾಪ್ರಮಾಣಕ್ಕೆ ಹೊಂದಿಸಿ ಉಚ್ಚರಿಸಬೇಕು ]

೪ ರಥ ಸಮೂ ಹಗಳೇರಿ ನೀ ಪ್ರಕಾ ಶಿಪ ಬಗೆಯೊ ೫ ೫ ೫ ೫
ಸತಿಯಲಾ ವಣ್ಯಾತಿ ಶಯವನೋ ಡುವ ಬಗೆಯೊ ೫ ೫ ೫ ೫
ಮಿತಿಯಿಲ್ಲ ದಸುರರ ಉ ಪೇಕ್ಷೆ ಮಾ ಡುವಬಗೆಯೊ ೫ ೫ ೫ ೫

ಪತಿತ ಪಾ ವನಪೂರ್ಣ ಕಾಮ ನಿನ ಗೆ ೩ ೩ ೩ ವಂ
ನಂತಿಸಿ ಬಿ ನ್ನೈಸುವೆನು ಪೇಳೊ ಗುಣ ಧಾಮ ೩ ೩ ೩ ಷ
[ಜಗನ್ನಾಥದಾಸರು ನಾರಾಯ ಣದ್ರಿಕ್ಕೃತವಾಸಶರಣು ]

ವಿಳಂಗಣಗಳ ಪಾದಗಳ ಒಂಥವರ್ಗದಲ್ಲಿ ಭೋಗ ಪರಿವರ್ಧಿನಿ ಮತ್ತು ವಾರ್ಧಕ ಷಟ್ಪದಿಗಳ ದೀರ್ಘಪಾದಗಳಿಂದಾದ ಸಮಚೌಪದಿಗಳನ್ನು ಮೊದಲು ಗಮನಿಸಬೇಕಾಗುತ್ತದೆ ಇಂತಹವಕ್ಕೆ ಕ್ರಮವಾಗಿ ಇವು ಉದಾಹರಣೆಗಳು

೧ ದಾನ ವನಂ ಮಾಡ ದವನ ದ್ರವ್ಯ ವ್ಯಾತ ಕೆ ೩ ೩ ೩ ೩ ೩ ೩ ೩ ವಂ
ಸಾ ನ ವನು ಮಾಡ ದವನ ಮೌನ ವ್ಯಾತ ಕೆ ೩ ೩ ೩ ೩ ೩ ೩ ೩ ವ ಂ
ಮಾನಿ ನೀಯು ಇಲ್ಲ ದವನ ಬದ ಕು ಯಾತ ಕೆ ೩ ೩ ೩ ೩ ೩ ೩ ೩ ಮು
ಧ್ಯಾನ ವನ್ನು ಅರಿಯ ದವನ ಪೂಜೆ ಯಾತ ಕೆ ೩ ೩ ೩ ೩ ೩ ೩ ೩ ಮು
[ವಿಜಯದಾಸರು ವ ಧ್ವಮತವ ಪೊಂದದವನ ಭಕುತಿಯಾತಕೆ ]

೨ ಅನಿರು ದ್ಧನು ನಿಜ ವನಿತೆ ಸ ಹಿತ ತಾ ಧನಧಾ ನ್ಯದೊಳಿ ಪ್ಪಾ
ಅನುಬಂ ಧಿಗಳೊಳು ಕೃತಿಪತಿ ಪ್ರದ್ಯು ಮ್ನನು ಸುಖಿ ಗಳ ತೋ ರ್ಪಾ
ಗುಣಾವಂ ತರೊಳು ಜ ಯಾಪತಿ ಸ ಕರ್ಷಣಕ ರ್ವವ ಮಾ ಳ್ಪಾ
ಕಂನರರು ಮಾಡುವ ಧರ್ಮಕರ್ಮಗಳ ಕೊನೆಗೆ ತಾನು ಒ ಪ್ಪಾ
[ ಜಗನ್ನಾಥದಾಸರು ಒಯಂಸದಿರಹಿಕಸುಖಿಗಳನುದಿನ ]

೪ ೪ ೪ ೪ ೪ ೪ ಮು
೪ ೪ ೪ ೪ ೪೪ ವಂ
೪ ೪ ೪ ೪ ೪ ೪ ಮು
೪ ೪ ೪+೪ ೪+೪ ಮಂ

[ಇದು ಮಾತ್ರಾಲಯ ಕ್ಕೆ ತಿರುಗಿದ ಅಕ್ಕರಿಕೆಯಾಗಿದೆಯೆಂಬುದನ್ನು ಗಮನಿಸಬೇಕು ]

೩ ಗುರುಗಳನು ವಹಿಸಿ ಭೂ ಸುರರಿ (s)ಗೆ ಕರಿಣ ಉ ತ್ತರ ಪೇಳಿ ಸಾಗಿದ್ದೆನೋ
ವರಬ್ರಾಹ್ಮ ಣರ ತಪ್ಪು ಬಲು ಇರಲು ಇಲ್ಲದೇ ಸರಿಯೆಂದು ಸ್ಥಾಪಿಸಿದೆ ನೋ
ಮುರಿವು ಗ ಕೆ ಪೋಗಿ ಪುಸಿದ್ರವ್ಯ ವನೆ ಪೇಳಿ ಮರಳಿ ಪೂ ತಿಸಿ ಇದ್ದೆನೋ
ವರ ವಿಪ್ರ ರಿಗೆ ಪಥೆಯು ಬರಲು ಸಾ ಕ್ಷಿ (s)ಯಾಗಿ ಪರಿಹರಿಸಿ ಬಂದಿದ್ದೆನೋ
[ವಿಜಯದಾಸರು ಆವ ಜನುಮದ ಪಾಪವೊದಗಿತೋ ಎನಗಿಂದು ]

ಗಿ ಿ ಿ ಿ ಮು
ಗಿ ಿ ಗಿ ಿ ಗಿ ಗಿ ಮು
ಗಿ ಗಿ ಗಿ ಗಿ ಮು
ಗಿ ಗಿ ಗಿ ಗಿ ಮು

ಛಾಬುನಿ ಷಟ್ಪದಿಯ ದೀರ್ಘಪಾದಗಳಿಂದ ಇಂತಹವು ರಚಿತವಾದಂತೆ ತೋರು ವುದಿಲ್ಲ ಚತುರ್ಮಾತ್ರಾಲಯದ್ದರಲ್ಲಿ ಮಾತ್ರ ಅಂತ್ಯದ ಮುಡಿಗೆ ಬದಲು ಪದ್ಮ ಗಣ ತಂದಿರುವಂತಹ ಉದಾಹರಣೆಗಳೂ ಕ್ವಚಿತ್ತವೆ ಮಾದರಿಗೆ

ಈ ಪರಿ ಮಾಡೀ ಬಯಲ್ ತೋರೀ ಕರವನು ನೆತ್ತಿಯ ಲಿಟ್ಟ
ಭೂಪ ಪು ರಂದರ ವಿಠ ಲ ರಾಯನು ತಿರಿಗೆ ದಪ್ಪಣೆ ಕೊಟ್ಟ
[ಪುರಂದರದಾಸರು ಮಾಡಿದ ಯೇಸು ಫಕೀರನು ಸದ್ಗುರು ]

ಳ ಳ ಀ ಀ ೬ ಪ
ಳ ಳ ಀ ಀ ಀ ಀ ಪ

ಹೀಗೆ ಮುಡಿಯೇ ಬಂದಿರಲಿ ಪದ್ಮಗಣವೇ ಬಂದಿರಲಿ ಹಲವೊಮ್ಮೆ ಈ ವರ್ಗದ ದ್ವಿಪದಿಗಳನ್ನತೂ ಅಂತರಿಕಪ್ರಾಸದ ಜೋಡಣೆಯಿಂದ ಅರ್ಧಸಮಚೌಪದಿ ಯಾಗಿಯೇ ಒಡೆದಿಡಲಾಗುತ್ತದೆ

ಐದು ಮತ್ತು ಏಳು ಗಣಗಳ ಪಾದಗಳನ್ನು ಬೆರೆಸಿ ರೂಪಿಸಿದ ಒಂದು ವಿಶಿಷ್ಟ ಚೌಪದಿಯನ್ನು ವಿಜಯದಾಸರು ಬಳಸಿದ್ದಾರೆ ಮಾದರಿಗೆ

ಅನಘ ನಿನ ನೋಡಿ ಮೋಹಿ ಸಿ [ಅಂತ ರಾತ್ಮ ಇ ಇ ಇ ಇ ಮು[ಪ್ರ
ತನುವು ಮನವು ನಿನಗೆ ಅರ್ಪಿ ಸಿ ಇ ಇ ಇ ಇ ಮು

ಜನನ ಮರಣ ದಿಂದ ಜನರು ದಣಿವ ರೇನೊ
ಕಾಂತ ನಮ್ಮ ಇ ಇ ಇ ಇ ಇ ಇ ಇ ಇ

ಮನಸು ನಂತೆ ಒಲಿದು ಸಲಹೊ ವನಜ ನಾಭ
ವಿಜಯ ವಿಠಲ ಇ ಇ ಇ ಇ ಇ ಇ ಇ ಇ

[ವಿಜಯದಾಸರು ನಿನ ಗಲಿ ಪೋಗಲಾರೆವೊ ನೀರಜಾಕ್ಷ ]

ಇದರಲ್ಲಿ ಕೊನೆಯ ದ್ವಿಪದಿಯನ್ನು ಚತುರ್ಗಣಪಾದದ ಸಮಚೌಪದಿಯಾಗಿ ಕೂಡ ಒಡೆದಿಡಬಹುದು ಆದಿಪ್ರಾಸ ಕೂಡ ಅದಕ್ಕೆ ಪೋಷಕವಾಗಿದೆ

**ಉಪಸಂಹಾರ** ಇಂತಹ ಹಲವು ವೈವಿಧ್ಯಗಳ ಜೊತೆಗೆ ಎಳೆ ತ್ರಿಪದಿ ಸಾಂಗತ್ಯ ಷಟ್ಪದಿಗಳಂತಹ ಸಾಂಪ್ರದಾಯಿಕ ಬಂಧಗಳನ್ನು ಕೂಡ ಹರಿದಾಸರು ಬಳಸಿದ್ದಾರೆ ಆದರೆ ಅವೆಲ್ಲ ಪ್ರಸಿದ್ಧ ಬಂಧಗಳಾದ್ದರಿಂದ ಇಲ್ಲಿ ಕೇವಲ ಇಂತಹ ನೂತನ ಪ್ರಭೇದಗಳ ಬಗ್ಗೆ ಮಾತ್ರ ವಿಚಾರ ಮಾಡಲಾಗಿದೆ ಆ ಮೂಲಕ ಹರಿದಾಸರ ಕೃತಿಗಳ ಛಂದಸ್ಸು ಎಷ್ಟು ವೈವಿಧ್ಯಮಯವಾಗಿದೆಯೆಂಬುದರ ಪರಿಚಯವನ್ನು ಮಾಡಿಕೊಡಲಾಗಿದೆ ನಮ್ಮ ಛಂದಶ್ಶಾಸ್ತ್ರಜ್ಞರ ವಿವೇಚಿಸದೆ ಇರುವಂತಹ ಬಂಧಗಳೇ ಇಲ್ಲಿ ಹೆಚ್ಚಾಗಿರುವುದನ್ನು ಗಮನಿಸಬೇಕು

---

# ಕರ್ನಾಟಕ ಸಂಗೀತ ನೃತ್ಯ ನೃತ್ಯಕ್ಕೆ ಹರಿದಾಸರ ಕೊಡುಗೆ

**ಶ್ರೀನಿವಾಸ ಉಡುಪ**

ಮನದ ಭಾವನೆಗಳನು ಪ್ರಕಟಪಡಿಸಲು ಭಾಷೆಯ ಂತೆಯೇ ಸಂಗೀತವೂ ಒಂದು ಮಾಧ್ಯಮ ಭಾಷಾ ಮಾಧ್ಯಮದಿಂದ ಪ್ರಕಟವಾಗುವ ಭಾವನೆಗಳು ಸುಲಭವಾಗಿ ಸ ಷ್ಟವಾಗಿ ಬುದ್ಧಿಗಮ್ಯವಾಗ ತ್ತವೆ ಸಂಗೀತ ಮಾಧ್ಯಮದ ಮೂಲಕ ಪ್ರಕಟವಾಗ ವ ಭಾವನೆಗಳು ವೈಚಾರಿಕ ಕೊರತೆ ಇದ್ದರೂ ನೇರವಾಗಿ ಪರಿಣಾಮಕಾರಿಯಾಗಿ ಹ ದಯವನ್ನೇ ಮುಟ್ಟುತ್ತವೆ ಧ್ವನಿ ಅಥವಾ ನಾದಮೂಲವಾದ ಸಂಗೀತವ ತಾನಾಗಿಯೇ ಇತರ ಮಾಧ್ಯಮಗಳ ಸಹಾಯವಿಲ್ಲದೆಯ ಪರಿಪೂರ್ಣ ವಿಕಾಸವನು ಹೊಂದುವುದು ಸಾಧ್ಯ ಈ ವಿಕಸನಕ್ಕೆ ನುಡಿಯ ಅವಶ್ಯವಿಲ್ಲ ಆದರೆ ಧ್ವನಿ ಮಾಧ್ಯಮದ ಭಾವ ಪ್ರಕಟಣೆಯನ್ನು ಗ್ರಹಿಸಲು ಬುದ್ಧಿಗೆ ವಿಶಿಷ್ಟವಾದ ಸಂಸ್ಕಾರದ ಆವಶ ವಿದೆ ಸಾಮಾನ್ಯ ಸಂಸ್ಕಾರದ ಬುದ್ಧಿಗೆ ಈ ವಿಧಾನ ಸುಲಭ ಗ್ರಾಹ್ಯವಲ್ಲ

ಭಾರತೀ ಯ ಸಂಗೀತವು ನಾದಸಾಧನೆ ಸಿದ್ಧಿಗಳಲ್ಲಿ ಪರಿಪೂರ್ಣತೆಯನೇ ಪಡೆದಿದೆ ನಾದಾನುಸಂಧಾನದಿಂದ ಪರತತ್ತ್ವವನ್ನು ಅರಿತವರು ಹಲವರು ನಾದಸಿದ್ಧಿಯನು ಹೊಂದಿದವರಿಗೆ ನಮ್ಮದೇಶದಲ್ಲಿ ಕೊರತೆ ಇಲ್ಲ ಶುದ್ಧ ಸಂಗೀತಕ್ಕೆ ಧ್ವನಿ ವೈವಿಧ್ಯಗಳ ಸಂಯೋಜನೆಯೇ ಸಾಕು ಅಷ್ಟರಿಂದಲೇ ಭಾವವೈವಿಧ್ಯಗಳ ಪ್ರಕಟಣೆ ಸಾಧ್ಯ ಕೇವಲ ಸ್ವರಸಂಯೋಜನೆಯಿಂದಲೇ ಸಂಗೀತವು ಪರಿಪೂರ್ಣವಾಗಬಲ್ಲುದು ಆದರೆ ಸಾಹಿತ್ಯವನ್ನು ಸಂಗೀತದೊಂದಿಗೆ ಸಂಯೋಜಿಸಿದಾಗ ವೈಚಾರಿಕತೆಯ ಸಿದ್ಧಿಯಿಂದಾಗಿ ವಸ್ತು ಸುಲಭ ಗ್ರಾಹ್ಯವಾಗುತ್ತದೆ ಇನ್ನಷ್ಟು ರಮ್ಯತೆ ಪಡೆಯುತ್ತದೆ ಸಾಹಿತ್ಯ ಸಂಬಂಧಿಯಾದ ಸಂಗೀತ ತನ ಅಮೂರ್ತ ಸ್ವರೂಪವನ್ನು ಕಳೆದುಕೊಳ್ಳುತ್ತದೆ ಸುಲಭವಾಗಿ ಬುದ್ಧಿಗಮ್ಯವಾಗುತ್ತದೆ

## ಸಂಗೀತ ಇತಿಹಾಸ

ಭಾರತೀಯ ಸಂಗೀತದ ಇತಿಹಾಸವನ್ನು ಅಭ್ಯಾಸದ ಅನುಕೂಲತೆಗಾಗಿ ಮೂರು ಕಾಲಗಳಲ್ಲಿ ವಗೀ ಕರಿಸಬಹುದು ಏಳನೆಯ ಶತಮಾನದವರೆಗಿನ ಕಾಲವನ್ನು ಪ್ರಾಚೀನ ಎಂತಲೂ ಅನಂತರದ ಪುರಂದರದಾಸರವರೆಗಿನ ಕಾಲವನ್ನು ಮಧ್ಯಕಾಲೀನ ಎಂತಲೂ ಪುರಂದರರ ಅನಂತರದ ಇಂದಿನವರೆಗಿನ ಕಾಲವನ್ನು ಆಧುನಿಕ ಎಂತಲೂ ವಿಭಾಗಿಸಬಹುದು ಆಧುನಿಕಕಾಲದಲ್ಲಿ ತ್ಯಾಗರಾಜರ ಮೊದ

ಲಿನ ದಾಸಸಾಹಿತ್ಯದ ಕಾಲ ಮತ್ತು ತ್ಯಾಗರಾಜರ ಅನಂತರದ ಕಾಲ ಎಂಬ ಎರಡು ಬಗೆಗಳನ್ನು ಗುರುತಿಸಬಹುದು

ಪ್ರಾಚೀನ ಸಂಗೀತದ ಕುರುಹು ಇಂದು ನಮ್ಮಲ್ಲಿ ಉಳಿದಿರುವುದು ಕೇವಲ ಲಕ್ಷಣ ಗ್ರಂಥಗಳಲ್ಲಿ ಮಾತ್ರ ರಾಗಗಳ ಹೆಸರು ತಾಳಗಳ ಹೆಸರ ವೈವಿಧ್ಯಗಳೆಲ್ಲ ಸಾಕಷ್ಟು ವಿವರವಾಗಿ ಅಲ್ಲಿ ದೊರೆತರೂ ಅವುಗಳನ್ನು ಇಂದು ಮಗೆ ಉದಾಹರಣ ವಾಗಿ ವಿವರಿಸುವ ಲಕ್ಷ್ಯಮಾರ್ಗಗಳಿಲ ಸಂಗೀತವು ಲಕ್ಷ್ಯ ಪ್ರಧಾನವಾದುದರಿಂದ ಅಂದಿನ ಕಾಲದ ಗ್ರಂಥಗಳಲ್ಲಿ ಹೆಸರಿಸಿದ ರಾಗಗಳ ಪ್ರಬಂಧಗಳ ಹಾಡುವಿಕೆಯ ಸ್ವರೂಪವು ಹೇಗಿತ್ತು? ಎಂಬುದು ನಮಗೆ ತಿಳಿಯುವುದಿಲ್ಲ ಏನಿದ್ದರೂ ಇವುಗಳಿ ಗಾಗಿ ನಾವು ನಮ್ಮ ಊಹನೆಗಳಿಗೇ ಶರಣಾಗಬೇಕಾಗುತ್ತದೆ ಊಹನೆಗಳು ವರ್ತ ಮಾನ ಕಾಲದ ಪ್ರಯೋಗವಿಧಾನಗಳನು ಹೊಂದಿಕೊಂಡೇ ಮೂಡುವುದು ಸಹಜ ವಾದುದರಿಂದ ಅವುಗಳಿಗೆ ಆಧುನಿಕತೆಯ ಲೇಪನವಿಲ್ಲದಿರಲು ಸಾಧ್ಯವಿಲ್ಲ ದೇ ಗತಿ ಮಧ್ಯ ಕಾಲೀನ ಸಂಗೀತದ ಲಕ್ಷ್ಯ ಭಾಗಕ್ಕೂ ಒದಗಿದೆ ರಾಗ ತಾಳ ನಿರ್ದೇ ಶಿತವಾದ ಆಕಾಲದ ಪ್ರಬಂದಗಳು ನಮಗೆ ಸಾಕಷ್ಟು ದೊರೆತರೂ ಅವುಗಳ ಗಾನ ವಿಧಾನಕ್ಕೆ ಯಾವ ಪರಂಪರೆ ದೃಷ್ಟಾಂತಗಳೂ ಕಾಣದೆ ಹೋಗುವುದರಿಂದ ಆ ಬಗೆಗೆ ನಾವು ಕೇವಲ ಊಹನೆಗಳನ್ನೇ ಅವಲಂಬಿಸಬೇಕಾಗುತ್ತದೆ

**ಪರಂಪರೆ**

ಭಾರತೀಯ ಸಂಗೀತವು ವೇದಕಾಲದಿಂದಲೂ ಪ್ರಸಿದ್ಧ ವೇದವೇ ಭಾರತೀಯ ಪ್ರಾಚೀನ ಗ್ರಂಥ ಸಂಗೀತಕ್ಕೂ ವೇದವೇ ಮೂಲ ವೇದಗಳು ಹುಟ್ಟಿದುದು ಪರಮಾತ್ಮನಿಂಧ ಆದುದರಿಂದ ಸಂಗೀತದ ಹುಟ್ಟೂ ಪರಮಾತ್ಮನಿಂದಲೇ ಅದು ಅಂದಿನಿಂದ ಇಂದಿನವರೆಗೂ ಗುರು ಶಿಷ್ಯ ಸಂಬಂಧದಲ್ಲಿ ಮುಂದುವರಿಯುತ್ತ ಬಂದಿದೆ ಈ ಪರಂಪರೆ–ಎಂದರೆ ನಮ್ಮ ಸಂಗೀತ ಪ್ರಕಾರ ಅನಾದಿಯಿಂದ ನಡೆದು ಬಂದಂಥದು –ಎಂದು ಸಂಗೀತಗಾರರ , ಸಂಗೀತಾಭಿಮಾನಿಗಳು ಹೇಳುತ್ತಿರುವುದನು ನಾವು ಕೇಳುತ್ತೇವೆ ಆದರೆ ಹೀಗೆ ವಾದಿಸುವವರ ಸಂಗೀತಪರಂಪರೆಯು ಹಿನ್ನೂಟ 150ವರ್ಷಗಳಿಂತ ಹಿಂದೆ ಸಾಗುವುದಿಲ್ಲ ಎಂಬುದು ಖೇದದ ವಿಚಾರ ಆನಂದ ಭೈರವಿ ಸುರುಟಿ ನವರೋಜು ರಥುಂಜೂಟಿ ಮೊದಲಾದ ರಾಗಗಳೆಲ್ಲ ಬಹಳ ಹಿಂದಿನ ಕಾಲದಿಂದಲೂ ಲಕ್ಷಣ ಗ್ರಂಥಗಳಲ್ಲಿ ಕಾಣಿಸುತ್ತವೆ ಈಗಲೂ ಪ್ರಚಾರದಲ್ಲಿವೆ ಆದರೆ ಅವುಗಳನು ನಾವು ಇಂದು ನಿರ್ವಹಿಸುತ್ತಿದ್ದಂತೆಯೇ ಹಿಂದೆಯೂ ನಿರ್ವಹಿ ಸುತ್ತಿದ್ದರ ಎಂಬುದಕ್ಕೆ ಸಮರ್ಥನೆ ಏನು? ವೇದ ಮೂಲವಾದ ಪರಂಪರೆಯ ಕುರಿತು ಹೇಳುವವರೆಲ್ಲರ ಪರಂಪರೆ ತ್ಯಾಗರಾಜರ ಅಥವಾ ಅವರ ಸಮಕಾಲೀನರಾದ ದೀಕ್ಷಿ ತರ ಮತ್ತು ಶ್ಯಾಮಾಶಾಸ್ತ್ರಿಗಳ ಅಥವಾ ಅವರಿಗಿಂತ ಸ್ವಲ್ಪ ಹಿಂದಿನವರ ಶೈಲಿ, ಪ್ರಬಂಧಗಳ ಕುರಿತಲ್ಲದೆ ಬೇರೇನನ್ನೂ ಹೇಳುವುದಿಲ್ಲ ಹೆಚ್ಚೇಕೆ? ದಾಸರ ಕೀರ್ತನೆ

ಗಳನ್ನು ತಮಗೆ ಇಷ್ಟಬಂದ ರಾಗ ತಾಳಗಳಲ್ಲಿ ಸಂಯೋಜಿಸಿಕೊಂಡು ಹಾಡಿ ಹಲ ವೊಮ್ಮೆ ತ್ಯಾಗರಾಜರ ಕೃತಿಗಳ ಆನ ಕರಣೆಯನ್ನಾಗಿಸಿ ಹಾಡಿ ಅದನ್ನೇ ಪರಂಪರೆ ಎನು ತ್ತಾರೆ! ಧ್ವ ನಿ ಲೇಖನದ ವ್ಯವಸ್ಥೆ ಇಲ್ಲದಿದ್ದ ಆಕಾಲದಲಿ ಯಾವೊಂದು ಶ್ರಾವ್ಯ ಪರಂಪರೆಯೂ ಒಂಳ ಪಾತನ ಗುರುಗಿನ ಒಧವಾ ಶಿಷ್ಯಂದರೆ ಆತನ ಗುರುವಿನ ಗುರುವಿನ ಕಾಲಕ್ಕಿಂತ ಹಿಂದೆ ಹೋದಂತೆ ಕ ಣಿಸುವುದಿಲ್ಲ ಹ ಗಿರುವಲ್ಲಿ ಈಗ ನಾವು ಕೆ ಳುವ ಅಥವಾ ನಿರ್ವಹಿಸುವ ಸ ಗೀತಪದ್ಧತಿ ಪೂರ್ವ ಪರಂಪರೆಗೆ ಅನುಗುಣ ವಾಗಿಯೇ ಇದೆ-ಎ ಬ ವಾದಕ್ಕೆ ಆಧಾರವೇನು ?

ಈ ರೀತಿಯ ಲಘುವಾದ ಮಾತುಗಳಿಗೆ ಸಂಗೀತಗಾರರು ಮಾತ್ರ ಹೊಣೆಯಲ್ಲ ತಮ್ಮ ನಾಡಿನ ಕಲೆಗೆ ಆದಷ್ಟು ಹುಚ್ಚು ಪ್ರಾಚೀನತೆಯನು, ಪರಿಶುದ್ಧತೆಯನ್ನು ಆರೋಪಿಸಿದಾಗ ಮಾತ್ರ ಅದರ ಹಿರಿಮೆ ಯನು ಪ್ರದರ್ಶಿಸಿದಂತಾಗುತ್ತದೆ ಎಂಬ ಬಾಲಿಶ ಅಪರಧ್ದ ಎನೋ ಣ! ಆದರೆ ಸಂಗೀತಗಾರರಲ್ಲದವರು ತರ್ಕಬದ್ಧವಾಗಿ ವಿಚಾರ ಸಿದ್ಧಾಂತಗಳನು ಮಂಡಿಸಲು ಸಮರ್ಥರಾ ಗಿಸಿಗರೂ ಈ ರೀತಿಯ ಮಾತುಗಳನ್ನು ಹೇಳುತ್ತಿರುವುದನ್ನೂ ನಾವು ಕೇಳ ತ್ತೇವೆ

## ಸಂಗೀತದ ವೈಶಿಷ್ಟ್ಯ

ಸಂಗೀತ ಇತರ ಲಲಿತಕಲೆಗಳಂತಲ್ಲ ಚಿತ್ರಕಲೆ ಶಿಲ್ಪಗಳು ಕಣ್ಣಿಗೆ ಗೋಚರ ವಾಗುವಂಥವುಗಳು ಹಿ ದಿನ ಕಲಾವಿದರು ಗೋಡೆಯ ಮೇಲೆ ಅಥವಾ ಶಿಲಾಫಲಕ ಗಳ ಮೇಲೆ ರಚಿಸಿದ ಕಲಾ ಪ್ರಕಾರಗಳು ಕಾಲ ಬಾಧೆಯಿಂದ ಸ್ವಲ್ಪ ವಿರೂಪಗೊಂಡಿ ದ್ದರೂ ನಾಶವಾಗದೆ ನಮಗೆ ಕಾಣಲು ದೊರೆತಾಗ ಅವುಗಳ ಬಗೆಗೆ ಒಂದು ಕಲ್ಪನೆ ಯನು ಮಾಡಬಹುದಾಗುತ್ತದೆ ಸಾಹಿತ್ಯವೂ ಹಾಗೆಯೇ ಬರೆದಿರಿಸಿದುದು ಲಭ್ಯ ವಾದಾಗ ಅದನ್ನು ನೋಡಿ ನಮ್ಮ ಸಿದ್ಧಾಂತಗಳನು ರೂಪಿಸಿಕೊಳ್ಳಬಹುದಾಗಿದೆ ಸಂಗೀತ ಮಾತ್ರ ಹೀಗಲ್ಲ ಶಾಸ್ತ್ರವು ಗ್ರಂಥಸ್ಥವಾಗಿದ್ದರೂ ಅದಕ್ಕೆ ಪೂರಕವ ದ ಪ್ರಯೋಗವು ಕಿವಿಯಿಂದ ಮಾತ್ರ ಕೇಳಿ ತಿಳಿಯಲು ಸಾಧ್ಯವಾಗುವಂತಹದು ಕೇಳಿದು ದನ್ನು ನಾವು ಪುನಃ ನಿರೂಪಿಸುವಾಗ ಅದರಲ್ಲಿ ಕಲಾವಿದನ ಮನೊ ಧರ್ಮ ಸ್ವಲ್ಪ ವಾದರೂ ಮೂಡದಿರಲು ಸಾಧ್ಯವೇ ಇಲ್ಲ ಅದುದರಿಂದ ಶ್ರಾವ್ಯಪ್ರಧಾನವಾದ ಕಲೆ ನಾಲ್ಕಾರು ತಲೆಮಾರಗಳಿಗಳನು ದಾಟುವಲ್ಲಿ ಅದು ತನ್ನ ಮೊದಲಿನ ರೂಪವನ್ನು ಸಂಪೂರ್ಣ ಕಳೆದ ಕೊಂಡರೂ ಆಶ್ಚರ್ಯವಿಲ್ಲ ಹಾಗಾಗಿ ನಾವು ಕಾಣುವ ಸಂಗೀತದ ಪ್ರಸ್ತುತ ರೂಪವು ಪೂರ್ವ ಪರಂಪರೆಗೆ ಸಂಪೂರ್ಣನಾ ಗಿ ಹೊ ದಿಕೊಂಡಿದೆ-ಎನ್ನು ವುದು ಹೇಗೆ ಸಾಧ್ಯ ?

ಈಗ ಕಾಲ ಬದಲಾಗಿದೆ ಧ್ವನಿಯನ್ನು ಹಿಡಿದಿಡುವ ವೈಜ್ಞಾನಿಕ ಸಾಧನಗಳು ಬಳಕೆಯಲ್ಲಿವೆ ಅದುದರಿಂದ ಈ ಶತಮಾನದ ಸಂಗೀತದ ಸ್ವರೂಪ ಹೇಗಿದ್ದಿತು

ಎಂಬುದನು ಮುಂದಿನ ಜನಕ್ಕೆ ತಿಳಿಯಲು ಅವಕಾಶವಿದೆ ಆದರೆ ಇದು ಮಾತ್ರ ನಾವು ಯಾವುದನು ಅತಿಪ್ರಾಚೀನ ಎನು ತ್ತೆ ವೆಯೋ ಅದರ ಪ್ರಾಚೀನತೆ ನೂರಿ ನೂರಂ ವರ್ಷಗಳಿಗಿಂತ ಹಿಂದೆ ಸರಿಯುವುದಿಲ್ಲ ಎಂಬುದನು ಗಮನಿಸಬೇಕು

## ಹಿಂದುಸ್ತಾನೀ ಮತ್ತು ಕರ್ನಾಟಕೀ ಪದ್ಧತಿ

ಭಾರತೀಯ ಸಂಗೀತ ಹಿಂದುಸ್ತಾನೀ ಮತ್ತು ಕರ್ನಾಟಕೀ ಎಂಬ ಎರಡು ಪ್ರಭೇದಗಳಾಗಿ ರೂಪುಗೊಂಡುದು ಸುಮಾರು 14ನೆಯ ಶತಮಾನದ ಆರಂಭದಿಂದ 1309–1315ರ ಅವಕಾಶದಲ್ಲಿ ರಚಿತವಾದುದೆಂದು ಊಹಿಸಲಾದ ಹರಪಾಲನ ಸಂಗಿತ ಸುಧಾಕರದಲ್ಲಿ ಈ ಬಗೆಯ ಉಲ್ಲೇಖ ಮೊದಲ ಬಾರಿಗೆ ಕಾಣಿಸುತ್ತದೆ ದೆಹಲಿಯಲ್ಲಿ ಮುಸಲ್ಮಾನ ದೊರೆಗಳ ಆಳಿಕೆ ಆರಂಭವಾದಾಗ ಈ ಬೆ ದವು ಮೂಡಿತು ಭಾರತದ ಸಂಗಿತದ ಮೇಲೆ ಹೊರಗಿನ ದೇಶಗಳ ಸಂಗಿತದ ಪ್ರಭಾವ–ಎಂದರೆ ಪರ್ಷಿಯನ್ ಮತ್ತು ಅರೇಬಿಯನ ಸಂಗಿತಗಳ ಪ್ರಭಾವ–ಬಿದು ಹಿಂದುಸ್ತಾನೀ ಎಂಬ ಇನ್ನೊಂದು ಪ್ರಬೇದವು ಮೊಳಕೆಗೊಂಡಿತು ಭಾರತದಲ್ಲಿ ಹಿಂದಿನಿಂದಲೂ ಪ್ರಚಾರದಲ್ಲಿದ್ದ ಸಂಗೀತವು ದಕ್ಷಿಣದ ಪ್ರದೇಶಗಳಲ್ಲಿ ಉಳಿದುಕೊಂಡು ಕರ್ನಾಟಕೀ ಸಂಗೀತ ಎನಿಸಿತು

ಪ್ರಚಲಿತ ಕಾಲದಲ್ಲಿ ಅಶಾಸ್ತ್ರೀಯ ಎಂದು ಪರಿಗಣಿಸಲ್ಪಟ್ಟದ್ದುವೂ ಮುಂದೆ ಕಾಲಾಘಾತವನು ತಡೆದುಕೊಂಡರೆ–ಎಂದರೆ ಜನದಲ್ಲಿ ಆಸಕ್ತಿಯನ್ನು ಉಳಿಸಿಕೊಳ್ಳಲು ಸಮರ್ಥವಾದರೆ–ಮುಂದಿನ ಕಾಲದ ಜನ ಅದನೇ ಶಾಸ್ತ್ರೀಯ ಎಂದು ಒಪ್ಪಿಕೊಳ್ಳುತ್ತಾರೆ ಎಂಬುದಕ್ಕೆ ಹಿಂದುಸ್ತಾನೀ ಸಂಗೀತ ಒಳ್ಳೆಯ ಉದಾಹರಣೆ ಹಿಂದುಸ್ತಾನೀ ಸಂಗೀತ ರೂಪುಗೊಳ್ಳುತ್ತಿದ್ದ ಕಾಲದಲ್ಲಿ ಭಾರತೀಯ ಸಂಗಿತ ಪರಂಪರೆಯ ಪ್ರತಿಪಾದಕರು ಪಂಡಿತರು ಅಂತೆಯೇ ಅವರನ್ನು ಬೆಂಬಲಿಸುತ್ತಿದ್ದ ಜನಸಮೂಹ ಆ ಹೊಸ ಪದ್ಧತಿಯನ್ನು ಅಶಾಸ್ತ್ರಿಯ ಎಂದು ಅವಗಣಿಸಿರಲೇಬೇಕು ಆದರೆ, ಈಗ ನಾವು ಹಾಗೆನ ಲು ಸಾಧ್ಯವೆ ? ಈ ಮಾತನು ನಾವು ಇಂದಿನ ಕಾಲಕ್ಕೂ ಅನ್ವಯಿಸಿಕೊಳ್ಳಬಹುದು ಈಗ ನಾವು ಅಶಾಸ್ತ್ರೀಯ ಎಂದು ಸಂಗೀತದಲ್ಲಿ ಗುರುತಿಸುವ ಬಗೆಗಳು ಜನಪ್ರಿಯತೆಯನು ಉಳಿಸಿಕೊಳ್ಳಲು ಸಾಧ್ಯವಾದರೆ ಮುಂದೊಂದು ದಿನ ಆ ಬಗೆಯೇ ಶಾಸ್ತ್ರೀಯ ಎನಿಸಬಾರದೆಂದಿಲ್ಲ

ಭಾಷೆ, ಸಾಹಿತ್ಯಗಳ ಬೆಳವಣಿಗೆಯಲ್ಲೂ ಇದೇ ಪರಿಸ್ಥಿತಿಯನು ನಾವು ಗುರುತಿಸಲು ಸಾಧ್ಯ ಆದುದರಿಂದ ಶಾಸ್ತ್ರೀಯ ಅಶಾಸ್ತ್ರೀಯಗಳ ಮಧ್ಯೆ ರೇಖೆಯನ್ನು ಎಳೆಯುವ ಗೊಂದಲಿಯವ ವಿರಬ ಕಾದುದು ಅವಶ್ಯ ಇದರ ಪರಿ ಎಂದರೆ ಹಿಂದಿನ ಕಾಲದಿಂದ ನಡೆದುಬಂದ ಆದರೆ ಕಾಲದೇಶ ಪರಿಸ್ಥಿತಿಗೆ ಅನುಗುಣವಾಗಿ ಜನಜೀವನದೊಡನೆ ಹೊಂದಿಕೊಂಡು ಹರಿದುಬಂದ ಬಹುಜನ ಸಮ್ಮತವಾಗಿ ವರ್ತಮಾನ ಕಾಲದವರೆಗೆ ಅನ ಮೊದನೆಗೊಂಡು ಬಂದ ರಿತಿ ಅಲ್ಲದೆ ಹಿಂದೆ ಪ್ರಚಲಿತವ ಗಿದ್ದ ಸ್ಥಿತಿಯೇ ಅಲ್ಲ

ಹಿಂದೆ 12ನೆಯ ಶತಮಾನದಲ್ಲಿ ಜಯದೆ ವನ ಗಿ ತ ಗೊ ವಿಂದದ ರಚನೆಯಾ ದಾಗ ಭಾರತದಲ್ಲಿ ಒಬ್ಬಗೆಯ ಸಂಗೀತಕ್ರಮವಿರಲಿಲ್ಲ ಜಯ ದೇವ ಉತ ರ ಭಾರತದ ಕವಿಯಾಗಿದ್ದರೂ ದಕ್ಷಿಣ ದೇಶಗಳಲ್ಲಿ ಆತನ ಅಷ್ಟಪದಿಗಳ ಹಾಡುವಿಕೆ ಪ್ರಚಾರದಲ್ಲಿರಲು ದೇಶಾದ್ಯಂತ ಒಂದೆ ಸಂಗೀತಪದ್ಧತಿ ಪ್ರಚಾರದಲ್ಲಿದ್ದುದು ಕಾರಣ 13 14ನೆಯ ಶತಮಾನಗಳ ಅನಂತರ ರಚಿತವಾದ ಉತ್ತರ ಬಾರತದ ಸಂಗೀತ ಪ್ರಬಂಧಗಳ ಕರ್ನಾಟಕ ಸಂಗೀತದಲ್ಲಿ ಕಾಣಿಸುವುದಿಲ್ಲ ಅಂತೆಯೇ ದಕ್ಷಿಣಭಾರತದಲ್ಲಿ ಈ ಕಾಲದ ಅನಂತರ ರಚಿತವಾದ ಸಂಗಿ ತ ಪ್ರಬಂಧಗಳು ಉತ್ತರೇಯ ಸಂಗೀತ ಪದ್ಧತಿಯ ಲ್ಲಿ ಬಳಕೆಯಲ್ಲಿಲ್ಲ—ಎಂಬುದು ಗಮನಾರ್ಹ

## ಶುದ್ಧ ಸಂಗೀತ

ಧ್ವನಿ ಮೂಲವಾದ ಸ್ವರಸಂಯೋಜನೆಗಳಿಂದ ಮೂಡಿಬರುವ ಸಂಗೀತ ಶುದ್ಧ ಸಂಗೀತ ಇದಕ್ಕೆ ಎಂದು ಏಕೆ ಮತ್ತು ಹೆ ಗೆ ನುಡಿಯ ಸಂಯೋಜನೆ ಆರಂಭ ವಾಯಿತು ಎಂಬುದನು ಗಮನಿಸೋ ಣ ಮನುಷ್ಯನನ್ನು ಅಂತರ್ಮುಖಿಯನಾ ಗಿ ಸಲು ನಾದದಷ್ಟು ಸಫಲವಾದ ಮಾಧ್ಯಮ ಬೆ ರೊಂದಿಲ್ಲ ನಾದತನ್ಮಯತೆಯಲ್ಲಿ ಬಾಹ್ಯ ಪ್ರಪಂಚವನು ಮರೆತು ಸಮಾಧಿ ಸ್ಥಿತಿಯನು ಹೊಂದಲು ಸಾಧ್ಯವಿದೆ ಎಂದು ಮನಗಂಡ ಸಾಧಕರು ನಾದೋಪಾ ಸನ ಮಾರ್ಗವನು ಅವಲಂಬಿಸಿದರು ಆದರೆ ಮಾತು ಮೂಡಿಸಲಾಗದ ಸೂಕ್ಷ್ಮಾತಿಸೂಕ್ಷ್ಮ ಭಾವಗಳನ್ನು ಧ್ವನಿಯು ಮೂಡಿಸಿದರೂ ವಿವರಣಾತ್ಮಕ ಅವಶ್ಯಕತೆಗಳಿಗಾಗಿ ಸ್ವರಗಳಿಗೆ ನುಡಿಗಳ ಜೋಡಣೆ ಆರಂಭವಾಗಿರಬೇಕು ಈ ತೆರದ ಸಂಯೋಜನೆಯಿಂದ ದೊರೆತ ವೈಚಾರಿಕ ಸೌಲಭ್ಯ ಇನ್ನಷ್ಟು ಒಳಕೆಗೆ ಬಂದು ಪಾರಮಾರ್ಥಿಕ ತತ್ತ್ವ ನಿರೂಪಣೆಯಲ್ಲಿ ನ ಡಿಯೊಡ ಗೂಡಿದ ಧ್ವನಿ ಅಥವಾ ಸಾಹಿತ್ಯದೊಡಗೂಡಿದ ಸಂಗೀತ ಪ್ರಚಾರಕ್ಕೆ ಒಂದಿರಬೇಕು ಹಿ ಗೆ ಸಂಗೀತದಲ್ಲಿ ಸಾಹಿತ್ಯ ಸೇರಿದರೂ ಅದು ಮೊದಲಿಗೆ ಜನಸಾಮಾನ್ಯರ ತಡು ಭಾಷೆಯ ಲ್ಲಿರಲಿಲ್ಲ ಪಂಡಿತರ ಹಾಗೂ ಸಂಪನ್ನವರ್ಗದವರ ಆಸಕ್ತಿಯ ಕಲೆಯಾದ ಸಂಗೀತದ ಭ ಷೆಯೂ ದೇವಭ ಷೆಯಾದ ಸಂಸ್ಕೃತವೇ ಆಗಿತ್ತು ನಾಡುನುಡಿಗಳಲ್ಲಿ ಪದ್ಯ ಹಾಡು ಗೇಯ ಸಾಹಿತ್ಯಗಳಿದ್ದರೂ ಅವುಗಳ ನಿರೂಪಣಾ ವಿಧಾನ ಜಾನ ಪದ ಸಂಗೀತವಾಗಿತ್ತಲ್ಲದೆ ಶಾಸ್ತ್ರೀಯ ಸಂಗೀತವಲಯ ದಲ್ಲಿ ನಾಡುನುಡಿಯ ಗೀತ ಗಳಿಗೆ ಪ್ರವೇಶವಿರಲಿಲ್ಲ

## ದಾಸ ಪಂಥದ ಉಗಮ

ದಾಸ ಪಂಥದ ಆರಂಭ ಸ ಮಾರು 15ನೆಯ ಶತಮಾನದಿಂದ ಎಂದು ಹೇಳ ಬಹುದು ಸ್ವಾಮೀ ಶ್ರೀಪಾದರಾಜರೇ ದಾಸಪರಂಪರೆಯ ಆದ್ಯ ಪ್ರವರ್ತಕರು 13ನೆಯ ಶತಮಾನದಿಂದ ಭಾರತದಲ್ಲಿ ಭಕ್ತಿ ಪಂಥದ ಪ್ರಭಾವ ಬೆಳೆಯುತ್ತ ಒಂತು

ಆದೇ ಹೊತ್ತಿಗೆ ಕರ್ನಾಟಕದಲ್ಲೂ ದ್ವೈತಮತವು ಆರಂಭವಾದಕಾಲ ದಾಸರೆಲ್ಲರೂ ದ್ವೈತಿಗಳೇ ಆದುದರಿಂದ ದ್ವೈತಮತ ಸ್ಥಾಪಕರಾದ ಶ್ರೀ ಮಧ್ವಾಚಾರ್ಯರೇ ದಾಸ ಪಂಥದ ಮೂಲ ಪುರುಷರು ಎಂಬ ಒಂದು ಅಭಿಪ್ರಾಯ ವೂ ಇದೆ ಆದರೆ ಹದಿನೈದನೆಯ ಶತಮಾನದವರೆಗೆ ಕನ್ನಡ ಕೀರ್ತನೆಗಳ ರಚನೆಯಾದುದು ವಿರಳ ದೊರೆತ ಕೆಲವು ಕೃತಿಗಳ ಕಾಲನಿರ್ಣಯ ನಿಶ್ಚಿತವಾಗಿಲ್ಲ ವೀರಶೈವ ಪಂಥದವರು ತಮ್ಮ ಬೋಧನೆಗಳನ್ನು ಜನಸಾಮಾನ್ಯರಿಗೆ ತಲುಪಿಸುವ ಉದ್ದೇಶದಿಂದ ಕನ್ನಡದಲ್ಲಿ ವಚನ ಸಾಹಿತ್ಯ ನಿರ್ಮಾಣಕ್ಕೆ ಕಾರಣರಾದರು ಹನ್ನೆರಡನೆಯ ಶತಮಾನದಿಂದ ಎಂದರೆ ಶ್ರೀ ಬಸವಣ್ಣನವರಕಾಲದಿಂದ–ಕನ್ನಡನಾಡಿನಲ್ಲಿ ವಚನ ಸಾಹಿತ್ಯ ಧಾರಾಳ ಪ್ರಮಾಣದಲ್ಲಿ ರಚಿತವಾಗಿದೆ 15ನೆಯ ಶತಮಾನದವರೆಗೆ ವೀರಶೈವ ಪಂಥದವರ ವಚನ ಸಾಹಿತ್ಯದ ಹೊರತಾಗಿ ಇತರ ಭಕ್ತಿಪಂಥಗಳವರ ಸಾಹಿತ್ಯ ರಚನೆಗಳೂ ಸಂಗೀತದ ಸಾಹಿತ್ಯವೂ ಸಂಸ್ಕೃತದಲ್ಲೇ ಇದ್ದಂತೆ ಕಾಣಿಸುತ್ತದೆ

ಹದಿನೈದನೆಯ ಶತಮಾನದ ಆದಿಭಾಗದಲ್ಲಿ ಆಂಧ್ರಪ್ರದೇಶದಲ್ಲಿ ದೇಶಭಾಷೆಯಲ್ಲಿ ಕೀರ್ತನ ಸಾಹಿತ್ಯ ರಚನೆ ಆರಂಭವಾಯಿತು ಅನ್ನಮಾಚಾರ್ಯರು ತೆಲುಗಿನಲ್ಲಿ ಹಲವು ಕೀರ್ತನೆಗಳನ್ನು ರಚಿಸಿದರು 1450 ರ ಅವಕಾಶದಲ್ಲಿ ಸ್ವಾಮಿ ಶ್ರೀಪಾದ ರಾಜರು ದೇಶಭಾಷೆಯಲ್ಲಿ ಭಕ್ತಿಗೀತಗಳ ಹಾಗೂ ಭಜನಗಾನ ಕೀರ್ತನೆಗಳ ಅವಶ್ಯಕತೆಯನ್ನು ಕಂಡುಕೊಂಡರು ಉಪದೇಶವು ಜನಸಾಮಾನ್ಯರ ಆಡುಮಾತುಗಳಲ್ಲಿದ್ದಾಗಲೇ ಅದಕ್ಕೆ ಹೆಚ್ಚಾದ ಪ್ರಚಾರ ದೊರೆಯುತ್ತದೆ ಎಂದು ತಿಳಿದ ಸ್ವಾಮಿ ಶ್ರೀಪಾದ ರಾಜರು ಕನ್ನಡದಲ್ಲಿ ಕೀರ್ತನ ಸಾಹಿತ್ಯವನ್ನು ರಚಿಸಿದರು ಅಸಾಮಾನ್ಯ ಪಂಡಿತರಾಗಿದ್ದ ಅವರು ಸಂಗೀತ ನೃತ್ಯಗಳನ್ನು ಶಾಸ್ತ್ರೀಯವಾಗಿ ಅಭ್ಯಾಸ ಮಾಡಿದರು ಆ ತನಕ ಸಂಸ್ಕೃತದಲ್ಲಿದ್ದ ತತ್ವಶಾಸ್ತ್ರವನ್ನು ಕನ್ನಡದಲ್ಲಿ ಕೀರ್ತನೆಗಳಾಗಿ ಹಾಡಿದರು ಪಲ್ಲವಿ ಅನುಪಲ್ಲವಿ ಚರಣಗಳಿಂದ ಕೂಡಿದ ದೇವರ ನಾಮಗಳನ್ನು ರಚಿಸಿದರು ಉಗಾಭೋಗಗಳನ್ನು ಹಾಡಿದರು ಪೂಜಾಕಾಲದಲ್ಲಿ ಸಂಗೀತಸೇವೆ ನರ್ತನ ಸೇವೆಗಳು ಕನ್ನಡದಲ್ಲಿ ಆರಂಭವಾದುದು ಅವರ ಕಾಲದಿಂದ ಶ್ರೀಪಾದರಾಜರ ಭ್ರಮರಗೀತ ವೇಣುಗೀತ ಗೋಪೀಗೀತ ಮೊದಲಾದುವುಗಳು ಕನ್ನಡದಲ್ಲಿ ರಚಿತವಾದ ಲಾಲಿತ್ಯಪೂರ್ಣವಾದ ಸಾಹಿತ್ಯ ಸ್ವರ ಸಂಯೋಜನೆಯೊಂದಿಗೆ ಲಯಬದ್ಧವಾಗಿ ಹಾಡಲು ಅನುಕೂಲಿಸುವ ಅವರ ದೇವರ ನಾಮಗಳು ಹಾಡುವಿಕೆಗೆ ಚೆನ್ನಾಗಿ ಅನುಕೂಲಿಸುವ ಉತ್ತಮ ಸಂಗೀತ ಪ್ರಬಂಧಗಳು ಮುಂದೆ ವ್ಯಾಸರಾಜರು ಹಲವು ಕನ್ನಡ ಕೀರ್ತನೆಗಳನ್ನು ಹಾಡಲು ಅನುಕೂಲಿಸುವ ದೃಷ್ಟಿಯನ್ನಿರಿಸಿಕೊಂಡು ರಚಿಸಿದರು ಶ್ರೀಪಾದರಾಜರಾಗಲಿ ವ್ಯಾಸರಾಜರಾಗಲಿ ದಾಸರಲ್ಲ ಧರ್ಮ ಪೀಠಾಧಿಪತಿಗಳು ಸಂನ್ಯಾಸಿಗಳು ಆದುದರಿಂದ ವ್ಯಾಸರಾಜರ ಸಮಕಾಲೀನರೂ ಶಿಷ್ಯರೂ ಆದ ಪುರಂದರದಾಸರೇ ದಾಸಪಂಥದ ಅಗ್ರಗಣ್ಯರೆಂದು ಹೇಳಬೇಕಾಗುತ್ತದೆ

## ಉಪದೇಶ ಮಾಧ್ಯಮವಾಗಿ ಸಂಗೀತ

ತಮ್ಮ ಸುತ್ತಮ ತ್ತಲಿನ ಜನವರ್ಗವನು ತತ್ತ್ವೋಪದೇಶ ನೈತಿಕ ಉಪದೇಶ ಗಳ ಮೂಲಕ ಭಕ್ತಿಪಥದಲ್ಲಿ ತೊಡಗಿ ಬೇಕು ಎಂಬ ಆಸಕ್ತಿ ಮೂಡಿದ ಪುರಂದರ ದಾಸರಿಗೆ ತಾವು ಕಂಡುಕೊಂಡ ಸತ್ಯದ ನಿರೂಪಣೆಗಾಗಿ ಯೋಗ್ಯ ಮಾಧ್ಯಮ ವೊಂದನು ಆರಿಸಿಕೊಳ್ಳಬೇಕಾಯಿತು ಮಾಧ್ಯಮ ಕಾವ್ಯವ ದರೆ ಅದು ಪಂಡಿತರ ಸೊತ್ತಾಗಿ ಮಾತ್ರ ಉಳಿದೀತು ವಾತಾಡುಗಳಲ್ಲಿ ಹೇಳಿದರೆ ಅವುಗಳಿಗೆ ಂದು ಜನ ಪ್ರಿಯತೆ ಒದಗಿಸಿದರೂ ನಾಳೆಗೆ ಮರೆತು ಹೋಗುವಂತಹ ಕ್ಷಣಿಕತೆ ವ್ಯಾಪ್ತವಾದೀತು ಎಂದು ಭಾವಿ ದ ದಾಸರು ತಮ್ಮ ಬೊ ದನೆಗಳಿಗೆ ಸಂಗಿ ತ ಮಾಧ್ಯಮವನು ಆರಿಸಿ ಕೊಂಡರು ತಾವು ಹೇಳಬೇಕು ಎಂದು ತೋರಿದುದನ್ನು ಗೀತವಾಗಿ ಹಾಡಿದರು ರಾಗಲಯಬದ್ಧವಾದ ರಚನೆಗಳು ಕೇಳಿದೊಡನೆಯೇ ಪ ನಸ್ಸಿನ ೀ ಲೆ ಒಳ್ಳೆಯ ಪರಿಣಾಮ ಬೀರುವಂಥವುಗಳು ಅಪ್ರಯತ್ನವಾಗಿ ಜ್ಞಾಪಕದಲ್ಲಿ ಉಳಿಯುವಂಥ ವುಗಳು ಆಡಿಗಡಿಗೆ ಪುನರಾವರ್ತನೆಯ ಅರ್ಹತೆ ಪಡೆಯುವಂಥವುಗಳು ಎಂದು ತಿಳಿದ ದಾಸರು ತಾವು ವಾತನಾಡಲಿಲ್ಲ ಹಾಡಿದರು ಅವರ ಗೀತಗಳ ಭಾಷೆ ಭಾವನೆ ಶೈಲಿಗಳು ಕಾವ್ಯದಂತೆ ಕಠಿಣವಲ್ಲ ಮಾತಿನ ತೆ ನಿ ರಲ್ಲ ಒಮ್ಮೆ ಕೇಳಿ ಮರೆಯುವಂಥವುಗಳೂ ಅಲ್ಲ ಪದಲಾಲಿತ್ಯ ಪ್ರಾಸ ಹಾಸ್ಯ ಉಪಮೆಗಳಲ್ಲಿ ಹೆ ರಳವಾಗಿರುವ ನಿತ್ಯಜೀವನದ ದೃಷ್ಟಾಂತಗಳನ್ನು ಜನಸಾಮಾನ್ಯ ಉದಾಹರಣೆ ಗಳನು ವಿಷಯ ವಂರ್ಧನೆಗಾಗಿ ವಿಪುಲವಾಗಿ ಒದಗಿಸುವ ಹಾಡುಗಳು ಸಾಮಾನ್ಯರ ಮಟ್ಟಕ್ಕೆ ಸುಲಭವಾಗಿ ಎಟುಕಿದುವು ಅವರನು ರಂಜಿಸಿದವು ಅಂತರ್ಮುಖಿಗಳಾ ಗುವಂತೆ ಮಾಡಿದವು

## ಸಂಗೀತಾಭ್ಯಾಸಕ್ರಮದ ಪರಿಷ್ಕರಣೆ

ಹಿಂದುಸ್ತಾನಿ ಸಂಗೀತ ಮೊಗಲರ ಹಾಗೂ ಔತ್ತರೇಯ ರ ಆಶ್ರಯದಲ್ಲಿ ಬೆಳೆ ದಾಗ ಹಿಂದೀನಿಂಡಿ ಆ ಸಂಗೀತ ಪದ್ಧತಿಯಲ್ಲಿ ಬಂತು ಕರ್ನಾಟಕ ಸಂಗೀತದಲ್ಲಿ ಸಂಗೀತ ಸಾಹಿತ್ಯ ನಾಡನಿಂಡಿಗೆ ಕನ ಡಕೆ , ಧಾರಳವಾಗಿ ಪರಿವರ್ತನೆಗೊಂಡುದು ಪುರಂದರರ ಕಾಲದಲ್ಲಿ ಮುಂದೆ ದಾಸಪಂಥದವರಿಂದ ಸಂಗೀತದಲ್ಲಿ ಉಪಯೋಗಿ ಎದ ಭಾಷೆ ಮಾತ್ರ ಸಾಮಾನ್ಯ ಜನವರ್ಗಕ್ಕೆ ತಿಳಿಯುವಂತಿದ ರೆ ಸಾಕೆ ? ಅವರಿಗೆ ಅದನ್ನು ಹಾಡಲು ಾಧ್ಯವಾಗಬೇಡವೆ ? ಆತನಕ ಸಂಗೀತಾಭ್ಯಾಸಕ್ರಮ ನಡೆದು ಬಂದ ದಾರಿಯಿಂದ ಸಾಮಾನ್ಯನಿಗೆ ಸಂಗೀತದ ಅರಿವು ಮೂಡೀತೆ ? ಕಷ್ಟಸಾಧ್ಯ ಎನಿಸಿರಬೇಕು ಪುರಂದರರಿಗೆ ಹಾಗಾಗಿ ಅವರು ಸಂಗೀತಾಭ್ಯಾಸದ ಕ್ರಮವನ್ನೇ ಸಾಮಾನ್ಯನಿಗೆ ಸಾಧಿಸುವಂತೆ ಮಾಡಲು ಬದಲಿಸಿದರು

ಸಂಗೀತಾಭ್ಯಾಸಿಗಳಲ್ಲಿ ಸಿದ್ಧಿಸವೇಕಾದ ದು ಸ್ವರಗಳು ಮತ್ತು ಅವುಗಳ ವೈವಿಧ್ಯ ವೈಶಿಷ್ಟ್ಯಗಳಜ್ಞಾನ ಅಭ್ಯಾಸಿಗಳು ಪುರಂದರರ ಕಾಲಕ್ಕಿಂತ ಹಿಂದೆ ಅವು

ಗಳನ್ನು ಹೇಗೆ ಸಾಧಿಸುತ್ತಿದ್ದರು ಎಂಬುದು ನಮಗೆ ತಿಳಿದ ಬರುವುದಿಲ್ಲ ಕೆಲವರಿಗೆ ಸ್ವರಜ್ಞಾನ ಅಪ್ರಯತ್ನವಾಗಿ ಅಥವಾ ಸ್ವಲ್ಪ ಪ್ರಯತ್ನದಿಂದ ಇನು ಕೆಲವರಿಗೆ ಸತತ ಪ್ರಯತ್ನದಿಂದ ಸಾಧಿಸುತ್ತದೆ ಕೆಲವರಿಗೆ ಸತತ ಪ್ರಯತ್ನದಿಂದಲೂ ಸ್ವರ ಜ್ಞಾನ ಕೈಗೂಡದೇ ಹೋಗಬಹುದು

ಈಗ ಸಂಗಿ ತಾಭ್ಯಾಸವನು ತೊಡಗುವುದು ಸರಳೆವರಸೆಗಳು ಮತ್ತು ಜಂಟಿ ವರಸೆಗಳು ಎಂಬ ಸಪ್ತ ಸ್ವರಗಳ ವಿವಿಧ ರೀತಿಗಳ ಜೋಡಣೆಗಳಿಂದ ಕೂಡಿದ ತಾಳ ಬದ್ಧವಾದ ಅಭ್ಯಾಸಗಾನ ಪ್ರಕಾರಗಳಿಂದ ಈ ಸಂಪ್ರದಾಯ ಆರಂಭವಾದುದು ಪುರಂದರದಾಸರಿಂದ ಸ್ವರಪರಿಚಯಕ್ಕಾಗಿ ಮಾಯಾಮಾಳವಗೌಳ ರ ಗವನ್ನು ಉಪಯೋ ಗಿಸಿದವರೂ ಅವರೆ ಈ ರಾಗಕ್ಕೆ ಒಂದು ವಿಶಿಷ್ಟತೆ ಇದೆ ಸಂಗೀತ ದಲ್ಲಿ ಉಪಯೋಗಿಸುವ ಸ್ವರಗಳು ಏಳು ಇವುಗಳಲ್ಲಿ ಆಧಾರಸ್ವರ ಷಡ್ಜ ಷಡ್ಜಕ್ಕೆ ಸಂವಾದಿಯಾಗಿರ ವ ಸ್ವರ ಪಂಚಮ ಇವೆರಡು ಸ್ವರಗಳ ಹೊರತು ಉಳಿದ ಐದು ಸ್ವರಗಳಾದ ಋಷಭ ಗಾಂಧಾರ ಮಧ್ಯಮ ಧೈವತ ಮತ್ತು ನಿಷಾದಗಳು ಪ್ರತಿ ಯೊಂದು ಎರಡೆರಡು ಪ್ರಭೇದಗಳನು ಹೊಂದುತ್ತವೆ ಹೀಗಾಗಿ ಸಂಗೀತದಲ್ಲಿ ಉಪಯೋ ಗಿಸುವ ಸ್ವರಸ್ಥಾನಗಳು ಹನ್ನೆರಡು ಮಾಯಾಮಾಳವಗೌಳರಾಗ ಷಡ ಕ್ಕೆ ಸಮಿ ಪಸ್ಥವಾಗಿರುವ ಶುದ್ಧ ಋಷಭವನ್ನೂ ಷಡ್ಜಕ್ಕೆ ಸಂವಾದಿಯಾಗಿರುವ ಸ್ವರ ಮಧ್ಯಮ ಕ್ಕೆ ಕೆಳಗಿನಿಂದ ಸಮೀಪವಾಗಿರುವ ಅ ತರಗಾಂಧಾರವನ್ನೂ ಶುದ್ಧ ಮಧ್ಯಮವನೂ ಹೊಂದಿದೆ ಈ ಸ್ಥಿತಿಗೆ ಸಂವಾದಿಯಾಗಿ ಉತ್ತರಾರ್ಧದಲ್ಲಿ ಪಂಚಮ ಕ್ಕೆ ಸಮೀಪಸ್ಥವಾಗಿರುವ ಶುದ್ಧಧೈವತವನ್ನೂ ಮೇಲಿನ ತಾರಷಡ್ಜಸ್ಥಾನಕ್ಕೆ ಕೆಳಗಿನಿಂದ ಸಮೀಪವಾಗಿರುವ ಕಾಕಲಿನಿಷಾದವನೂ ಹೊಂದಿದೆ ಹಾಗಾಗಿ ಈ ರಾಗದ ದ್ವಿನಿಶ್ರೇಣಿಯು ಸಪ್ತಕದಲ್ಲಿ ಪೂರ್ವಾಂಗಕ್ಕೆ ಉತ್ತರಾಂಗವು ಸಂವಾದಿಯಾಗಿದೆ ಎಂದರೆ ಷಡ್ಜಕ್ಕೆ ಪಂಚಮವೂ ಶುದ್ಧ ಋಷಭಕ್ಕೆ ಶುದ್ಧ ಧೈವತವೂ ಅಂತರಗಾಂಧಾ ರಕ್ಕೆ ಕಾಕಲಿನಿಷಾದವೂ ಶುದ್ಧ ಮಧ್ಯಮ ಕ್ಕೆ ತ ರಷಡ್ಜವೂ ಸಂವಾದಿಗಳು ಆದುದ ರಿಂದ ಸ್ವರ ಪರಿಚಯವು ಈ ರಾಗದಲ್ಲಿ ಸಾಧಿಸಿದಂತೆ ಬೇರೆ ರಾಗಗಳಲ್ಲ ಸಾಧಿಸ ಲಾರದು ಎಂಬುದು ಪುರಂದರರ ಅಭಿಪ್ರಾಯವಾಗಿರಬಹುದು

ಪುರಂದರದಾಸರು ಆತನಕ ಬಳಕೆಯಲ್ಲಿದ್ದ ತಾಳ ವಿಧಾನಗಳನ್ನೂ ಬದಲಿಸಿ ಸುಲಭವಾಗಿಸಿದರು ಅಷ್ಟೋತ್ತರ ತಾಳಗಳ ಬದಲಾಗಿ ಸಪ್ತ ತಾಳಗಳನ್ನು ಬಳಕೆಗೆ ತಂದರು ಸಾವಧಾನ್ಯವಾಗಿ ಸಂಗೀತ ಪ್ರಬಂಧಗಳನೆ ಲ್ಲ ಸಪ್ತತಾಳಗಳ ಚೌಕಟ್ಟಿನಲ್ಲಿ ಇರಿಸಲು ಸಾಧ್ಯ ಎಂದು ತೋರಿಸಿದರು ಅವುಗಳ ವಿವರಣೆಗಾಗಿ ಅಲಂಕಾರಗಳು ಎಂಬ ಅಭ್ಯಾಸಗಾನ ಪಾಠಗಳನ್ನು ಸಂಯೋಜಿಸಿದರು

ಸಪ್ತತಾಳಗಳ ಮೂಲವನ್ನು ನ ವು ಜಾನಪದ ವಿಯದಲ್ಲಿ ಗುರುತಿಸಬಹುದು ಜಾನಪದ ತಾಳಗತಿಗಳು ಮೂರು ನಾಲ್ಕು ಐ ದು ಮತ್ತು ಏಳು ಎಂಬ ನಾಲ್ಕು

ರೀತಿಯ ಅಕ್ಷರಗಳ ಕ ಲಗತಿಗಳಲಿರುತ್ತದೆ ಅಕ್ಷರಗಳ ಕಾಲಪ್ರಮಾಣವನು ನಾಲ್ಕು ಪಾಲು ಹಿಗ್ಗಿ ದಿ ಘ ಗಿಸಿ ಪ್ತತಾಳಗಳಲ್ಲಿ ಅಳವಡ ದ ಎಂಬುದು ಗಮನಾರ್ಹ ಮೂರು ಅಕ್ಷರಗಳ ಕಾಲಪ್ರಮಾಣದ ತಿಶ್ರಗತಿಯನ್ನು ರೂಪಕ ತ ಿದ್ದೂ, ನಾಲ್ಕು ಅಕ್ಷರಗಳ ಕಾಲಪ್ರಮಾಣದ ಚತುರಶ್ರಗತಿಯನು ಏಕತಾಳ ದಲ್ಲೂ ಐದು ಅಕ್ಷರಗಳ ಕಾಲ ಪ್ರಮಾಣದ ಖಂಡಗತಿಯ ಎರಡು ವಿಧಾನ ಗಳನ್ನು ಝಂಪೆ ಮತ್ತು ವ ಠ್ಯತಾಳಗಳಲ್ಲೂ ಏಳು ಅಕ್ಷರಗಳ ಕಾಲಪ್ರಮಾಣದ ಮಿಶ್ರಗತಿಯ ಮೂರು ವಿಧಾನಗಳನ ತ್ರಿಪುಟತಾಳ ಅಟತಾಳ ಧ್ರುವತಾಳಗಳಲ್ಲೂ ಗುರುತಿಸಲು ಸಾಧ್ಯ

ಸಂಗೀತಾಭ್ಯಾಸಿಗಳು ಅಲಂಕಾರಗಳ ಅಭ್ಯಾಸದ ಬಳಿಕ ಗೀತೆಗಳು ಎಂಬ ಪ್ರಬಂದಗಳನು ಅಭ್ಯಸಿಸತೊಡಗುತ್ತಾರೆ ಗೀತೆ ಎಂಬುದಕ್ಕೆ ಹಾಡು ಅಥವಾ ಪದ್ಯ ಎಂಬ ಾವಕಾನ್ಯ ಅರ್ಥವಿದ್ದರೂ ಸಂಗೀತ ಪ್ರಬಂಧಗಳಲ್ಲಿ ಒಂದು ವಿಶಿಷ್ಟ ರೀತಿಯುವುಗಳಿಗೆ ಮಾತ್ರ ಈ ಹೆಸರಿದೆ ಪಲ್ಲವಿ ಮತ್ತು ಚರಣಗಳಿಂದ ಕೂಡಿದ ರಳವಾದ ಸ ಲಭವಾದ ಚಿಕ್ಕ ಚೊಕ್ಕ ಬಂಧಗಳು ಇವು ಸಂಗೀತ ಅಭ್ಯಾಸಿಗೆ ಅಷ್ಟರವರೆಗಿನ ಸ್ವರ ಸಾಧನೆಗಳ ಬಳಿಕ ಅಭ್ಯಾಸಕ್ಕೆ ಒಂದು ನಾವಿ ನ್ಯವನ್ನು ಇವು ಒದಗಿಸಿ ಕೊಡುತ್ತವೆ ಅಭ್ಯಾಸ ಪಥದಲ್ಲಿ ಮೊದಲಿಗೆ ದೊರೆಯುವ ಸಾಹಿತ್ಯ ಸಹಿತವಾದ ಗಾನಪ್ರಬಂಧಗಳು ಇವು ಅಷ್ಟರ ವರೆಗಿನ ಅಭ್ಯಾಸ ಕ್ರಮದ ಏಕತಾ ನತೆಯನು ದೂರ ಮಾಡುತ ವೆ

## ಗಣೇಶ ಗೀತೆಗಳು

ಸಾಮಾನ್ಯವಾಗಿ ಸಂಗೀತ ಪ್ರಬಂಧಗಳಲ್ಲಿ ಪಲವಿಯನ್ನು ಹಾಡಿದ ಬಳಿಕ ಅನು ಪಲ್ಲವಿ ಅಥವಾ ಚರಣಗಳನ ಹಾಡುವುದು ರೂಡಿ ಆದರೆ ಹಿಂದೆಯೂ ಇದೇ ಪರಿಪಾಠವಿತ್ತೇ ? ಎಂಬುದು ಸಂಶಯಾಸ್ಪದ ಏಕೆಂದರೆ ಜಯದೇವನ ಗೀತ ಗೋ ವಿಂದದ ಅಷ್ಟಪದಿಗಳಲ್ಲ ಪಲವಿಗಳನು ಚರಣಗಳ ಬಳಿಕ ಹಾಡುವುದು ಪದ್ಧತಿ ಹಿಂದಿನ ಸಂಪ್ರದಾಯದ ಅಭ್ಯಾಸ ಬ ದಿ ದ ಪುರಂದರರು ಸಂಗಿ ತಾಭ್ಯಾಸಿಗಳು ಮೊದಲಾಗಿ ಹಾಡ ಹಾಡು ಾಹಿತ್ಯ ಸಹಿತ ಪ್ರಬಂಧಗಳ ದ ಗೀತೆಗಳನ್ನು ಅದೇ ರಿ ತಿಯ ಲ್ಲಿ ರಚಿಸಿರಬಹುದು ಎಂದು ಹೇಳಬೇಕಾಗುತ್ತದೆ

ಶ್ರೀ ಗಣನಾಥ ಸಿಂಧೂರವರ್ಣ ಕರುಣ ಾಗರ ಕರಿವದನ ॥ ಚರಣ ೧ ॥
ಲಂಬೋದರ ಲಕುಮಿಕರಾ ಅಂಬಾಸುತ ಅಮರ ವಿನುತ ॥ ಪಲ್ಲವಿ ॥
ಸಿದ್ಧಚ ರಣ ಗಣಸೇವಿತ ಸಿದ್ಧಿ ವಿನಾಯಕ ತೇನ ಮೋನಮೋ ॥ ಚರಣ ೨ ॥
ಸಕಲವಿದ್ಯಾ ದಿಪೂಜಿತ ರ್ವೋತ ಮ ತೇ ನಮೋನಮೋ ॥ ಚರಣ ೩ ॥

ಇದು ಸಂಗೀತ ವಿದ್ಯಾರ್ಥಿ ಅಭ್ಯಾಸ ಮಾಡುವ ಮೊದಲಗೀತೆ ಅತ ಯಾವ ಪ್ರಾಂತದವನೇ ಆಗಿರಲಿ ಯಾವ ಭಾಷೆಯನ್ನೇ ಆಡುತ್ತಿರಲಿ ಕರ್ನಾಟಕ ಸಂಗೀತ

ವಿದ್ಯಾರ್ಥಿಯಾಗಿದ್ದರೆ ಈ ಗೀತೆಯನ್ನು ಹಾಡಿಯೆ ಹಾಡುತ್ತಾನೆ ಈ ಗೀತೆಯಲ್ಲಿ ಮೊದಲ ಸಾಲು ಚರಣ ಎರಡನೆಯ ಸಾಲು ಪಲ್ಲವಿ ಮೂರನೆಯ ಮತ್ತು ನಾಲ್ಕನೆಯ ಸಾಲುಗಳು ಚರಣಗಳು ಗೀತೆಯನು ಆರಂಭಿಸುವುದು ಚರಣದಿಂದ ಆ ಬಳಿಕ ಪಲ್ಲವಿಯನ್ನು ಹಾಡುವುದು ಕ್ರಮ ಮುಂದೆ ಪ್ರತಿಯೊಂದು ಚರಣವನ್ನೂ ಹಾಡಿದ ಬಳಿಕ ಪಲ್ಲವಿಯನ್ನು ಹಾಡುವುದು ಪದ್ಧತಿ

ಪುರಂದರರ ಎರಡನೆಯ ಗೀತೆ ಹೆ ಮಕೊಟ ಸಿಂಹಾಸನಾಧಿ ಶನಾದ ಹಂಪೆಯ ವಿರೂಪಾಕ್ಷನ ಸ್ತುತಿ ಮೂರನೆಯ ಗೀತೆಯಲ್ಲಿ ಪರಿಕರುಣದಿಂದ ಲಭ್ಯವಾದುದನೆಲ್ಲ ಹರಿಗೇ ಸಮರ್ಪಿಸಬೇಕು ಕೆರೆಯ ನೀರನು ಕೆರೆಗೆ ಚೆಲ್ಲಿ ವರವ ಪಡೆದಂತೆ ಎಂದಿದ್ದಾರೆ ನಾಲ್ಕನೆಯ ಗೀತೆ ಪದ್ಮನಾಭನಾದ ವಿಷ್ಣುಸ್ತುತಿ ಈ ನಾಲ್ಕು ಗೀತೆಗಳ ಗುಚ್ಛವನ್ನು ಗಣೇಶಗೀತೆಗಳು ಅಥವಾ ಪಿಳ್ಳಾರಿ ಗೀತೆಗಳು ಎಂದು ಕರೆಯುತ್ತಾರೆ ಕರ್ನಾಟಕ ಸಂಗೀತ ಅಭ್ಯಾಸ ಭಾಷೆ ಬಾರದಿದ್ದರೂ ಅರ್ಥ ತಿಳಿಯದಿದ್ದರೂ ಈ ಗೀತೆಗಳ ಅಭ್ಯಾಸ ಮಾಡದಿರುವುದಿಲ್ಲ ಎಂಬುದರಿಂದ ಪುರಂದರರು ತೋರಿಸಿದ ಸಂಗೀತಾಭ್ಯಾಸದ ನವ್ಯಮಾರ್ಗ ಆಕರ್ಷಣೀಯವಾಯಿತು ಎಲ್ಲರ ಮೆಚ್ಚುಗೆಗೆ ಪಾತ್ರವಾಯಿತು ಎಂಬುದು ನಿರ್ವಿವಾದ ಅಂತೆಯೇ ಅವರನ್ನು ಕರ್ನಾಟಕ ಸಂಗೀತದ ಆದಿಗುರುಗಳೆಂದೂ ಪಿತಾಮಹರೆಂದೂ ಕರೆದು ಗೌರವಿಸುದುದು ತೀರ ಉಚಿತ

ಸಂಗೀತ ಅಭ್ಯಾಸದ ಆಪಕ ಶದಲ್ಲಿ ಆರಂಭಿಕ ಪಾಠಗಳ ದ ಸರಳೆವರಸೆ ಜಂಟಿವರಸೆ ಅಲಂಕಾರಗಳನ್ನು ತಾಳಲಯ ಸಿದ್ಧಿಗೋಸ್ಕರ ಮೂರು ಕಾಲಗಳಲ್ಲಿ ಹಾಡುವುದು ಪದ್ಧತಿ ಈ ಪದ್ಧತಿಯನ್ನು ಗೀತೆಗಳಲ್ಲೂ ಅಳವಡಿಸಬಹುದು ಎಂಬ ಸೂಚನೆಯಾಗಿ ಪುರಂದರರು ತಮ್ಮ ನೊದಲಿನ ಎರಡು ರೂಪಕತಾಳದ ಗೀತೆಗಳಿಗೆ ಮೂರು ಮೂರು ಚರಣಗಳನ್ನು ಅಳವಡಿಸಿದರೆ ? ಅಂತೆಯೇ ಮುಂದಿನ ಎರಡು ತ್ರಿಪುಟತಾಳದ ಗೀತೆಗಳು ಎರಡು ಕಾಲಗಳಲ್ಲಿ ಹಾಡುವ ಉದ್ದೇಶದಿಂದ ರಚಿತವಾದವುಗಳೇ ಎಂದು ಯೋಚಿಸುವುದು ಗಮನಾರ್ಹ

ವಿವಿಧ ರಾಗತಾಳಗಳಲ್ಲಿನ ಗೀತೆಗಳ ಅಭ್ಯಾಸದ ಒಳಿಕ ವಿದ್ಯಾರ್ಥಿಗೆ ಸ್ವರಗರಿಚಯವು ಸ್ಥೂಲವಾಗಿ ದೊರೆತ ಬಳಿಕ ಶಾಸ್ತ್ರೀಯ ಸಂಗೀತಕ್ಕೆ ಪ್ರವೆಶ ಸ ಗಮವಾಗುತ್ತದೆ ಬೇರೆ ಬೇರೆ ರಾಗತಾಳಗಳಲ್ಲಿ ಹಾಡುಗಳನ್ನು ಹೇಳಲು ಸಾಧ್ಯವಾಗುತ್ತದೆ ಹಾಗೆ ಮಾಡಲು ಅನುಕೂಲವಾದ ಸುಲಭವಾದ ರಾಗತಾಳಗಳ ಸಂಯೋಜನೆಯಿಂದ ಕೂಡಿದ ಸರಳವಾದ ಹಲವು ಹಾಡುಗಳನ್ನು ಪುರಂದರರು ರಚಿಸಿದ್ದಾರೆ ಭಕ್ತಿಗಾನ ಪ್ರಬಂಧಗಳಾಗಿ ನಾಮಸಂಕೀರ್ತನೆಗಳಾಗಿ ಇವು ನಾಡಿನ ಉದ್ದಗಲದಲ್ಲಿ ಪ್ರಚಾರದಲ್ಲಿವೆ

**ಕೀರ್ತನೆಗಳ ಛಂದಸ್ಸು**

ನಾವು ಇಂದು ಸಂಗೀತದಲ್ಲಿ ಉಪಯೋಗಿಸುತ್ತಿರುವ ದೇವರ ನಾಮಗಳು ಅಥವಾ ದಾಸರ ಕೀರ್ತನೆಗಳು ಎಂದು ಗುರುತಿಸುವ ಪ್ರಬಂಧಗಳ ಛಂದಸ್ಸು, ಸಾಹಿತ್ಯ ಪ್ರಕಾರದ ಪದ್ಯಗಳ ಛಂದಸ್ಸಿನ ನಿಯಮಗಳಿಗೆ ಸಂಪೂರ್ಣವಾಗಿ ಹೊಂದಿಕೆಯಾಗುವುದಿಲ್ಲ. ಸಾಹಿತ್ಯದಲ್ಲಿನ ಪದ್ಯಗಳು ಅಥವಾ ವೃತ್ತಗಳು ಮಾತ್ರಾಗಣ ಅಥವಾ ಅಕ್ಷರಗಣ ಅಂಶಗಣಗಳ ನಿಯಮಗಳಿಗೆ ಒಳಗಾಗುವಂಥವುಗಳು. ದಾಸರ ಕೀರ್ತನೆಗಳು ಸಾಮಾನ್ಯವಾಗಿ ಮಾತ್ರಾಗಣ ನಿಯಮಗಳಿಗೆ ಅನುಸಾರವಾಗಿ ಇರುವಂತೆ ಕಂಡರೂ ಅವು ಸಂಪೂರ್ಣವಾಗಿ ಈ ನಿಯಮಗಳಿಗೆ ಹೊಂದಿಕೊಳ್ಳುವುದಿಲ್ಲ. ಸಂಗೀತದಲ್ಲಿ ಉಪಯೋಗಿಸುವ ಸಾಹಿತ್ಯಕ್ಕೆ ಮಾತುಗಳ ಅಥವಾ ನುಡಿಗಳ ಸುಲಭವಾದ ಲಯಬದ್ಧವಾದ ಸಂಯೋಜನೆ ಸಾಕಾಗುತ್ತದೆ. ಸಂಗೀತದಲ್ಲಿ ತಾಳಬದ್ಧವಾಗಿರುವುದು ಸ್ವರಸಂಯೋಜನೆ. ಈ ಸ್ವರ ಸಂಯೋಜನೆಗೆ ಹೊಂದಿಕೊಳ್ಳುವಂತೆ ಸಾಹಿತ್ಯವನ್ನು ಒದಗಿಸುವಾಗ ಸಾಹಿತ್ಯಾಕ್ಷರಗಳ ಕಾಲಪ್ರಮಾಣವನ್ನು ಹಿಗ್ಗಿಸುವ ಅಥವಾ ಕುಗ್ಗಿಸುವ ಸ್ವಾತಂತ್ರ್ಯ ವಾಗ್ಗೇಯಕಾರನಿಗೆ ಇದೆ. ಎಂದರೆ ಕೆಲವೊಮ್ಮೆ ದೀರ್ಘಾಕ್ಷರಗಳನ್ನು ಎರಡು ಹ್ರಸ್ವ ಅಕ್ಷರಗಳ ಕಾಲಪ್ರಮಾಣಕ್ಕೆ ಬದಲಾಗಿ ಮೂರು ನಾಲ್ಕು ಐದು ಅಥವಾ ಅದಕ್ಕಿಂತಲೂ ಹೆಚ್ಚು ಹ್ರಸ್ವಾಕ್ಷರಗಳ ಕಾಲ ಪ್ರಮಾಣದಲ್ಲಿ ಇರಿಸಿಕೊಳ್ಳುವುದೂ ಉಂಟು. ಹಾಗೆಯೇ ದೀರ್ಘಾಕ್ಷರಗಳನ್ನು ಎರಡು ಹ್ರಸ್ವಾಕ್ಷರಗಳ ಕಾಲ ಪ್ರಮಾಣದ ಬದಲಾಗಿ ಒಂದು ಅಥವಾ ಅರ್ಧ ಅಕ್ಷರಗಳ ಕಾಲಪ್ರಮಾಣಕ್ಕೆ ಇಳಿಸಿಕೊಳ್ಳುವುದೂ ಉಂಟು. ಸಂಗೀತ ಬಂಧಗಳಲ್ಲಿ ತಾಳಾಕ್ಷರದ ಕಾಲ ಪ್ರಮಾಣಕ್ಕೆ ಹೊಂದಿಕೆಯಾಗುವಂತೆ ಇರಬೇಕಾದುದು ಸ್ವರ ಸಂಯೋಜನೆಯೇ ಹೊರತು ಸಾಹಿತ್ಯವಲ್ಲ. ಎಂದುದರಿಂದ ಈ ರೀತಿ ಮಾಡಬಹುದಾಗುತ್ತದೆ. ಆದುದರಿಂದ ಅರ್ಥವರಿಯದೆ ಹಾಡನ್ನು ಹಾಡಿದಾಗ ಕೆಲವೊಮ್ಮೆ ಆಭಾಸಕ್ಕೆಡೆಯಾಗುವುದೂ ಉಂಟು.

ಅಭಿನವ ಪುರಂದರವಿಠಲ ಬಲ್ಲಿರೇ ರಾಮನಾಮ

ಎಂಬ ಪುರಂದರದಾಸರ ಗೀತೆಯ ಸಾಹಿತ್ಯವನ್ನು 7 ಅಕ್ಷರ ಕಾಲಗಳ ತ್ರಿಪುಟ ತಾಳದ ನಾಲ್ಕು ಆವರ್ತಗಳಿಗೆ ಸಮವಾದ 28 ಅಕ್ಷರ ಕಾಲಕ್ಕೆ ಹೊಂದಿಸಿಕೊಳ್ಳುವ ಸಲುವಾಗಿ

ಅಭಿನಾವಪು॥ ರಂದರಾ ವಿ॥ಠಾಲ್ಲ ಭಾಲ್ಲರೆ॥ ರಾಮನಾ ಮ॥

ಎಂದು ಕೆಲ ಗಾಯಕರು ಹಾಡುವುದನ್ನು ನಾವು ಕೇಳುತ್ತೇವೆ.

ದಾಸರ ಕೀರ್ತನೆಗಳು ಬಹುಸಂಖ್ಯೆಯಲ್ಲಿ ಇರುವುದು ಛಾಪುತಾಳಗಳಲ್ಲಿ. ಛಾಪು ತಾಳಗಳಲ್ಲಿ ಎರಡು ವಿಧ. ಐದು ಅಕ್ಷರಗಳ ಕಾಲ ಪ್ರಮಾಣದ ಆವರ್ತವಿರುವ ತಾಳವನ್ನು ಖಂಡಛಾಪು ಎಂತಲೂ ಏಳು ಅಕ್ಷರಗಳ ಕಾಲಪ್ರಮಾಣದ ಆವರ್ತವಿರುವ

ತಾಳವನು ಮಿಶ್ರಚಾಪು ಎಂತಲೂ ಕರೆಯುತ್ತಾರೆ. ಅಂತೆಯೇ ಆರು ಅಕ್ಷರಗಳ-
$3+3=6$ ಅಥವಾ $2+4=6$ ಕಾಲಪ್ರಮಾಣವಿರುವ ರೂಪಕ ತಾಳದ ಹಾಡು
ಗಳೂ, ನಾಲ್ಕು ಅಥವಾ ಎಂಟು ಅಕ್ಷರಗಳ ಕಾಲಪ್ರಮಾಣದ ಏಕತಾಳ ಅಥವಾ ಆದಿ
ತಾಳಗಳ ಹಾಡುಗಳೂ ಸಾಕಷ್ಟು ಸಂಖ್ಯೆಯಲ್ಲಿವೆ. ದಾಸರ ಕೀರ್ತನೆಗಳಲ್ಲಿ ಧ್ರುವ
ತಾಳ ಮತ್ತು ಅಟ್ಟತಾಳ ಎಂದು ನಿರ್ದೇಶಿಸಿದವುಗಳನು ತ್ರಿಪುಟ ತಾಳ ಅಥವಾ
ಮಿಶ್ರ ಛಾಪು ತಾಳಗಳಲ್ಲಿ ಹಾಡುವುದು ರೂಢಿ. ಹಾಗೆಯೇ ಮಠ್ಯತಾಳ ಮತ್ತು
ರಝಂಪೆ ತಾಳವೆಂದು ನಿರ್ದೇಶಿಸಿದವುಗಳನ್ನು ಖಂಡ ಚಾಪು ತಾಳದಲ್ಲಿ ಹಾಡುವುದನು
ಕೇಳುತ್ತೇವೆ. ಇದಕ್ಕೆ ಕಾರಣ ಧ್ರುವ ತಾಳ ಮತ್ತು ಅಟ್ಟತಾಳದ 14 ಅಕ್ಷರಗಳು
$7+7$ ಎಂಬ ರೀತಿಯ ವಿಭಜನೆಗೆ ಒಳಗಾಗುವುದೂ, ಮಠ್ಯತಾಳದ ಮತ್ತು ರಝಂಪೆ
ತಾಳದ 10 ಅಕ್ಷರಗಳು $5+5$ ಎಂಬ ರೀತಿಯ ವಿಭಜನೆಗೆ ಒಳಗಾಗುವುದೂ ಕಾರಣ.
ಇದರಿಂದಾಗಿಯೇ ಜಾನಪದ ಲಯಂವಾದ ಚಾಪುತಾಳಗಳಿಂದ ಸಪ್ತ ತಾಳಗಳನ್ನು
ಪುರಂದರರು ಉದ್ಧರಿಸಿದರು ಎಂದು ತಿಳಿಯಬಹುದಾಗಿದೆ.

## ಕೀರ್ತನೆಗಳ ವಸ್ತು

ದಾಸರ ಕೀರ್ತನೆಗಳ ಸಾಹಿತ್ಯದ ವಸ್ತುವನ್ನು ನಾವು ಸಾಮಾನ್ಯವಾಗಿ ಮೂರು
ತೆರದಲ್ಲಿ ವರ್ಗೀಕರಿಸಬಹುದು. ಮೊದಲನೆಯ ವರ್ಗ ನಾಮ ಸಂಕೀರ್ತನೆ. ಈ
ಹಾಡುಗಳಲ್ಲಿ ಪರಮಾತ್ಮನಾಮಾವಳಿಗಳನ್ನು ತಾಳಬದ್ಧವಾಗಿ ಪ್ರಾಸಸಹಿತವಾಗಿ
ಜೋಡಿಸಿದೆ. ದೇವತಾ ಸ್ತುತಿಯೇ ಈ ಹಾಡುಗಳ ಉದ್ದೇಶ. ಇಂತಹ ಹಾಡು
ಗಳಲ್ಲಿ ಕಾಣುವುದು ಸಂಸ್ಕೃತ ನಾಮಾವಳಿ. ಹಾಗಾಗಿ ಈ ಹಾಡುಗಳ ಭಾಷೆ ಸಂಸ್ಕೃತ
ದಂತೆಯೇ ಕಾಣಿಸುತ್ತದೆ. ಕ್ರಿಯಾಪದಗಳಾಗಿ ಮಾತ್ರ ಅಲ್ಲೊಂದು ಇಲ್ಲೊಂದು
ಕನ್ನಡ ಶಬ್ದಗಳನ್ನು ಕಾಣಬಹುದು, ಅಷ್ಟೇ. ದೇವಕಿ ನಂದನ ಮುಕುಂದ,
ಹರಿಗೋವಿಂದಾ ಹರಿಗೋವಿಂದಾ, ದಾಸೋಹಂ ತವ ದಾಸೋಹಂ, ಭಜರೇ
ಹನುಮಂತಂ ಮೊದಲಾದ ಹಾಡುಗಳನ್ನು ಈ ವರ್ಗದಲ್ಲಿ ಉದಾಹರಿಸಬಹುದು.

ಹಾಡುಗಳ ಪಲ್ಲವಿಗಳು ದೇವತಾಸ್ತುತಿರೂಪವಾಗಿದ್ದು ಮುಂದೆ ಅನುಪಲ್ಲವಿ
ಚರಣಗಳಲ್ಲಿ ಆತನ ಗುಣಗಾನ, ವಿವಿಧ ಅವತಾರಗಳ ವರ್ಣನೆಯಲ್ಲಿ ಆತನೆಸಗಿದ
ಸಾಹಸ, ದುಷ್ಟಶಿಕ್ಷಣ ಶಿಷ್ಟರಕ್ಷಣ ಕ್ರಮದ ವಿವರಣೆ ಮೊದಲಾದುವುಗಳನ್ನೊಳ
ಗೊಂಡವು ಎರಡನೆಯ ವರ್ಗದ ಹಾಡುಗಳು – ವಿವಿಧ ಭಕ್ತಿ ಪ್ರಕಾರಗಳ ವರ್ಣ
ಗಳನ್ನೂ ಇಂತಹ ಹಾಡುಗಳಲ್ಲಿ ಧಾರಾಳವಾಗಿ ಕಾಣಬಹುದು. ನಾಮ ಸಂಕೀರ್ತನೆ
ಅನುದಿನ ಮಾಳ್ಪಗೆ, ಕಥಾಶ್ರವಣ ಮಾಡೋ ನಿರಂತರ, ಎನ್ನ ಬಿಂಬ ಮೂರು
ತಿಯ ಪೂಜಿಪೆನು ನಾನು ; ಹೇಗೆ ಮೆಚ್ಚಿಸಲಿ ಅರ್ಚಿಸಲಿ ನಿನ್ನ ಮೊದಲಾದ
ಹಾಡುಗಳು ಈ ವರ್ಗದವುಗಳಿಗೆ ಉದಾಹರಣೆ.

~ನೋಪದೇಶಕ್ಕೆ ಸಂಬಂಧಿಸಿದ ಹ ಡುಗಳು ~ೂರನೆಯ ವರ್ಗದವುಗಳು ಸನ್ಮಾರ್ಗ ಸದಾಚಾರ ಪ್ರವರ್ತನ ದ ರವ್ಯಾ~ಗಳ ದೂಷಣ ನ್ಯಾಯ ಅನ್ಯಾಯ ಗಳ ವಿವೇಚನೆ ಶೀಲಸಂವರ್ಧನೆ ಜಗ್ಗ್ಗನಲ್ಲಿ ಕಾಣು~ ಒಳಿತು ಕೆಡುಕುಗಳ ವಿಮರ್ಶೆ ಲೌಕಿಕ ನಡೆ ~ುಡಿಗಳ ವಿಡಂಬನೆ ಪರಿಶುದ್ಧ ಜಿ ವನದ ಚಿತ್ರಣ ಪರೋಪಕಾರ ~ರ~ ಜೀವನದ ಸಂಪನ ತೆ ಮೊದಲಾದ ವೈವಿಧ್ಯಪೂರ್ಣ ವಿಷಯ ಗಳು ಈ ವರ್ಗಕ್ಕೆ ಸೆ ರುತ್ತವೆ ಕೊಡುವ ಕರ್ತೃ ಬೆ ರೆ ಇರಲು ಮನದಲಿ ಬಿಡು ಬಿಡು ಚಿಂತೆಯನು ಈ ಗ್ರಾ~ ದಲಿ ವಾ~ ಇರ ವುದೇ ಪ್ರಯೆಾಸ ಮಾಡು ದಾನ ಧರ್ಮ ಪರ ಉಪ ಕಾರವ ಅನ್ಯಾಯ ಮಾತುಗಳಾಡದಿರಿ ನೊ ಡದಿರು ಪರಸ್ತ್ರೀಯರ ಮೊದಲಾದ ಹಾಡುಗಳು ಈ ವರ್ಗಕ್ಕೆ ಸೆ ರುತ್ತವೆ

## ಕೀರ್ತನೆಗಳ ಶೈಲಿ

ಸಂಖ್ಯಾಬಾಹ ಲ್ಯದ ದೃಷ್ಟಿ ಯಿಂದ ನಮಗಿಂದು ದಾಸರ ಕೀರ್ತನೆಗಳು ವಿಪುಲ ವಾಗಿ ದೊರೆಯುತ್ತವೆ ನಾಲ್ಕೈದು ಶತಮಾನಗಳ ಕಾಲ ಅವು ಜನಪ್ರವಾಹದಲ್ಲಿ ತೇಲಿ ಬಂದ ಕಾರಣ ಕೆಲವೆಡೆ ವಿರೂಪಗೊಂಡಿರಬಹುದಾದರೂ ಕೆಲವು ಶಬ್ದಗಳ ಅರ್ಥ ತಿಳಿಯದಿರಬಹುದಾ ದರೂ ಅವು ಹೀಗೆಯೇ ಇದ್ದಿರಬೇಕು ಎಂದು ಪರಿಷ್ಕರಿ ಸಲು ಸಾಧ್ಯ ಆದರೆ ಹಾಡುವ ಶೈಲಿ ಮಾತ್ರ ತೀರ ನಶಿಸಿ ಹೋಗಿದೆ ಪರಂಪರಾ ಗತವಾಗಿ ಬಂದ ಹಾಡುವಿಕೆಯ ಶೈಲಿ ತಮಗೆ ಸ್ಪಷ್ಟವಾಗಿ ದೊರೆಯುವುದಿದ್ದರೆ ಅದು ಗಣೇಶಗೀತೆಗಳಲ್ಲಿ ಜೋಗುಳ ಹಾಡು ಉದಯರಾಗ ಮಂಗಳ ಗೀತ ಮೊದಲಾದ ಕೆಲವೇ ಬೆರಳೆಣಿಕೆಯ ಹಾಡುಗಳಲ್ಲಿ ಮತ್ತು ಸಂಗೀತ ಸಂಪ್ರದಾಯ ಪ್ರದರ್ಶನಿ ಗ್ರಂಥದಲ್ಲಿ ಸ್ವರ ಸಂಯೋಜನೆಗೊಂಡು ಪ್ರಕಾಶಿತವಾದ ಮೂರು ಹಾಡುಗಳಲ್ಲಿ ಮಾತ್ರ ಇನ್ನು ಸಾಮಾನ್ಯ ಜನ ವರ್ಗದ ಪೂಜಾರಿಗಳು ಭಜಕರು ಹರಿದಾಸರು ದಾಸ ಪಂಥಾವಲಂಬಿಗಳ ಮೊದಲಾದವರು ಹಾಡುತ್ತಿರುವ ಕೆಲವೊಂದು ಹಾಡಿನ ಧಾಟಿ ಶೈಲಿಗಳು ದೊರೆಯಬಹುದು ಈ ಮೂಲಗಳನ್ನು ನಾವು ಕೀರ್ತನ ಶೈಲಿ ಗಾಗಿ ಅವಲಂಬಿಸಿದರೆ ರಾಗತಾಳಗಳ ಲಿಖಿತನಾಮಕ್ಕೂ ನಿರೂಪಣ ವಿಧಾನಕ್ಕೂ ಸಾಕಷ್ಟು ವ್ಯತ್ಯಾಸ ಕಾಣಿಸುತ್ತದೆ ಹಾಡುಗಳಲ್ಲಿ ಮೂಡುವ ರಾಗವಿನ್ಯಾಸಗಳು ಶಾಸ್ತ್ರೀಯ ಸಿದ್ಧಾಂತಕ್ಕೆ ಇಂದಿನ ಪ್ರಯೋಗ ವಿಧಾನಕ್ಕೆ ಸರಿಹೊಂದುವುದಿಲ್ಲ

## ಕೃತಿಗಳು

ನಾವು ಶಾಸ್ತ್ರೀಯ ಸಂಗೀತ ಪ್ರಬಂದಗಳಾಗಿ ಕಾಣುವ ಕೃತಿಗಳೆಂಬ ರಚನೆಗಳು 19ನೆಯ ಶತಮಾನದ ಅನಂತರ ಪ್ರಚಾರಕ್ಕೆ ಬಂದವುಗಳು ಕೃತಿರಚನೆ ಮಾಡಿದವ ರಲ್ಲಿ ಸಂಗೀತ ತ್ರಿಮೂರ್ತಿಗಳೆಂದು ಪ್ರಸಿದ್ಧರಾದ ತ್ಯಾಗರಾಜ ದೀಕ್ಷಿತ ಮತ್ತು ಶ್ಯಾಮಾ ಶಾಸ್ತ್ರಿಗಳು ಅಗ್ರಗಣ್ಯರು ಈ ಕೃತಿ ಪ್ರಬಂಧಗಳಲ್ಲಿ ಸಾಹಿತ್ಯಕ್ಕೆ ಪ್ರಾಧಾನ್ಯ

ಕಡಮೆ ರಾಗದ ಸೊಬಗು ಪರಿಪೂರ್ಣವಾಗಿ ವಿಕಾಸವಾಗುವಂತೆ ರಚನೆಗೆ ಹಾಡುವ ಸೌಲಭ್ಯ ಒದಗಿಸುವ ಸಲುವಾಗಿ ಸಾಹಿತ್ಯವನ್ನು ಸ್ವರ ಪ್ರಬಂಧಕ್ಕೆ ಹೊಂದಿಸಿದ ರೀತಿಯೇ ಕೃತಿಗಳು ಈ ಕೃತಿಗಳನು ವಾದ್ಯಗಳಲ್ಲಿ ನುಡಿಸಿದಾಗ ಎಂದರೆ ಸಾಹಿತ್ಯ ವಿರಹಿತವಾದ ಪ್ರಬಂಧವಾಗಿ ಕಾಣಿಸಿದ ಗಲೂ–ಕೃತಿಕಾರನ ರಚನೆಯ ಉದ್ದೇಶ ಧ್ವನಿವರಾಘ್ಯವದ ಮೂಲಕ ಸಂಗೀತ ಸೌಂದರ್ಯ ಪ್ರತಿಪಾದನೆ–ಫಲಿಸುತ್ತದೆ ಗಾಯಕನ ಪ್ರೌಢಿಮೆಯನ್ನು ಗಾನಾವಕಾಶದಲ್ಲಿ ಧಾರಾಳವಾಗಿ ಕಾಣಿಸಲು ಈ ರಚನೆಗಳಲ್ಲಿ ಅನುಕೂಲವಿದೆ ಇರಬೇಕು ಎಂಬುದೇ ಕೃತಿಗಳ ಕೃತಿಕಾರನ–ವಾಗ್ಗೇಯಕಾರನ–ಉದ್ದೇಶ ಆದರೆ ಕೀರ್ತನೆಗಳ ದಾಸ ಸಾಹಿತ್ಯದ ಉದ್ದೇಶ ಇದಲ್ಲ ಭಕ್ತಿ ನಿರೂಪಣೆ ತಾವು ಹೇಳಬಯಸಿದ ವಿಚಾರಗಳನ್ನು ಸೌಂದರ್ಯ ಪೂರ್ಣವಾಗಿ ಕಾಣಿಸಲು ಮಾತ್ರ ದಾಸರು ಸಂಗೀತಕ್ಕೆ ಶರಣಾಗಿದ್ದಾರೆ ಮಾತನ್ನು ಸ್ಫುಟವಾಗಿ ಅರ್ಥವಾಗಿಸುವುದೇ ಕೀರ್ತನೆಗಳ ಉದ್ದೇಶ ಹಾಗಾಗಿ ಸಾಹಿತ್ಯರಾಹಿತ್ಯದಿಂದ ಅಥವಾ ಕೇವಲ ಧಾಟಿ ಮಾತ್ರದ ಎಂದರೆ ಸ್ವರಸಂಯೋಜನೆಯ–ನಿರೂಪಣದಿಂದ ಕೀರ್ತನೆಗಳು ಶೋಭಿಸವು ದೇವರ ನಾಮಗಳನ್ನು ವಾದ್ಯಗಳಲ್ಲಿ ನುಡಿಸಿದಾಗ ಹಾಡಿದಾಗ ಒದಗಿಬರುವ ವಾತಾವರಣ ನಿರ್ಮಾಣವಾಗುವುದಿಲ್ಲ ಎಂಬುದೇ ಈ ಮಾತಿಗೆ ಸಾಕ್ಷಿ

ಕರ್ನಾಟಕ ಸಂಗೀತದಲ್ಲಿ ಹಾಡುಗಾರಿಕೆಗೆ ಬೇರೆ ವಾದ್ಯ ಸಂಗೀತಕ್ಕೆ ಬೇರೆ ಎಂಬ ರಚನೆಗಳಿಲ್ಲ ಔತ್ತರೇಯ ಸಂಗೀತದಲ್ಲಿ ಹಾಗಲ್ಲ ಹಾಡಲು ಬಳಸುವ ಪ್ರಬಂಧಗಳನ್ನು ವಾದ್ಯ ಸಂಗೀತಕ್ಕೂ ವಾದ್ಯ ಸಂಗೀತ ಪ್ರಬಂಧಗಳನ್ನು ಹಾಡುಗಾರಿಕೆಗೂ ಅವರು ಉಪಯೋಗಿಸುವುದಿಲ್ಲ ಅವರ ವಾದ್ಯ ಸಂಗೀತ ಪ್ರಬಂಧಗಳಿಗೆ ಸಾಹಿತ್ಯವಿಲ್ಲ ಅದು ಕೇವಲ ತಾಳ ನಿಬದ್ಧ ಸ್ವರ ಸಂಯೋಜನೆಯಾಗಿಯೇ ಸಾಗುತ್ತದೆ ಆದರೆ ಇತ್ತೀಚೆಗೆ ಗಾನ ಪ್ರಬಂಧಗಳನ್ನು ವಾದ್ಯಗಳಲ್ಲಿ ಹಾಡುಗಾರಿಕೆಯ ಶೈಲಿಯಲ್ಲಿ ನುಡಿಸಲು ಆರಂಭಿಸಿದ್ದಾರೆ

## ಕೀರ್ತನೆ ಕೃತಿ

ಇಂದು ಕರ್ನಾಟಕ ಸಂಗೀತ ನಿರೂಪಣೆಯಲ್ಲಿ ಅತ್ಯಂತ ಪ್ರಮುಖಸ್ಥಾನದಲ್ಲಿ ಉಪಯೋಗವಾಗುತ್ತಿರುವ ಪ್ರಬಂಧಗಳು ಕೃತಿಗಳು ಈ ಕೃತಿಗಳ ಮೂಲವನ್ನು ನಾವು ಕೀರ್ತನೆಗಳಲ್ಲಿ ಕಾಣಬಹುದು ಆದರೆ ಈ ಕಾರಣದಿಂದಾಗಿ ಇಂದು ಪ್ರಚಲಿತವಾಗಿರುವ ಕೃತಿಶೈಲಿಯಲ್ಲಿ ದಾಸರಕೀರ್ತನೆಗಳನ್ನು ನಿರೂಪಿಸಬಹುದೆ ? ಅದು ಸಮಂಜಸವೆ ? ಎಂಬ ಪ್ರಶೆ ಮೂಡುತ್ತದೆ ಸಂಗೀತದ ಮೂಲ ವೇದಗಳಲ್ಲಿದೆ ಸಾಮವೇದದಲ್ಲಿದೆ ಎಂಬ ಕಾರಣದಿಂದ ವೇದ ಪಠಣವನ್ನೂ ಆಧುನಿಕ ಸಂಗೀತ ಶೈಲಿಗೆ ಅಳವಡಿಸಿಕೊಂಡರೆ ಸಮಂಜಸವೆನಿಸದಷ್ಟೆ ! ಅಂತೆಯೇ ಇದು ಕೂಡ ಎಂದು ತಿಳಿಯಬೇಕಾಗುತ್ತದೆ ಪುರಂದರ ಅಥವಾ ಇತರ ದಾಸರ ಕೀರ್ತನೆಗಳನು ಸಂಗೀತ

ತ್ರಿಮೂರ್ತಿಗಳ ಕೃತಿ ಶೈಲಿಯಲ್ಲಿ ಹಾಡಲು ಸಾಧ್ಯ ಎಂಬುದು ನಿರ್ವಿವಾದ ಆದರೆ ಅವುಗಳನು ಹಾಗೆ ಹಾಡುವುದು ಸರಿಯೆ ? ಅವಶ ವೆ ? ಎಂಬುದನ್ನು ಮಾತ್ರ ನಾವು ವಿಚಾರ ಮಾಡಿದಂತೆ ಕಾಣಲಿಲ್ಲ ಒಬ್ಬ ಕವಿ ಅಥವಾ ವಾಗ್ಗೇಯ ಕಾರ ತನ್ನ ಯಾವುದೋ ಒಂದು ನಿರ್ದಿಷ್ಟವಾದ ಉದ್ದೇಶ ಸಾಧನೆಗಾಗಿ ಮಾಡಿರಬಹುದಾದ ರಚನೆಯನ್ನು ಇನೊಬ್ಬ ತನಗೆ ಬೇಕಾದಂತೆ ತಿದ್ದುವುದಾಗಲಿ ಮಾರ್ಪಡಿಸ ವುದಾಗಲಿ ಸರಿಯೆ ? ಆ ಸ್ವಾತಂತ್ರ್ಯ ನವ ಗಿದೆಯೆ ? ಎಂಬ ದು ಇಲ್ಲಿನ ಮುಖ್ಯ ಪ್ರಶ್ನೆ ತ್ಯಾಗರಾಜರು ಅಥವಾ 19ನೆಯ ಶತಮಾನದ ಇತರ ವಾಗ್ಗೇಯಕಾರರು ಹಾಡಿದ ಕೃತಿ ನಿರೂಪಣಾ ಶೈಲಿ ಅವರ ಶಿಷ್ಯ ಪರಂಪರೆಯಿಂದ ಸ್ಥೂಲವಾಗಿಯಾದರೂ ನಮಗೆ ದೊರೆತಿವೆ ಅದನ್ನು ಬೇರೆ ರೀತಿಯಲ್ಲಾಗಲಿ ಬೇರೆ ರಾಗ ತಾಳಗಳ ಸಂಯೋಜನ ಮಾಡಿಯಾಗಲಿ ಹಾಡ ವುದು ತಪ್ಪು ಎನ್ನುತ್ತೇವೆ ನಾವು ಹಾಗಿರುವಲ್ಲಿ ಪುರಂದರರ ಅಥವಾ ಇತರ ದಾಸರುಗಳ ಶೈಲಿ ಪರಂಪರೆಯ ಮೂಲಕ ಇಂದಿನ ವರೆಗೆ ತಲುಪಲಿಲ್ಲ ಎಂಬ ಕಾರಣದಿಂದ ನಾವು ಸ್ವಾತಂತ್ರ್ಯ ವಹಿಸಿ ಇಷ್ಟಬಂದಂತೆ ಹಾಡ ವುದು ತಪ್ಪಾಗುತ್ತದೆ ದಾಸರ ಕೀರ್ತನೆಗಳ ಶೈಲಿಯ ಬಗ್ಗೆ ಸಂಶೋಧನೆ ನಡೆಯಬೇಕು ಉಳಿದ ಳಿದ ಪರಂಪರಾಗತವಾದ ಶೈಲಿಯನ್ನು ಲಕ್ಷಿಸಿ ನಮ್ಮ ಊಹನಾಬಲದಿಂದ ಮೂಲ ವ್ಯಕ್ತಿಗೆ ವಿರೋಧವ ಗದಂತಹ ಶೈಲಿಯನ್ನೂ ಕಲ್ಪಿಸಿಕೊಳ್ಳಬೇಕೇ ವಿನಾ ಸಂಗೀತ ತ್ರಿಮೂರ್ತಿಗಳ ಶೈಲಿಯ ಚೌಕಟ್ಟಿನಲ್ಲಿ ದಾಸರ ಕೀರ್ತನೆಗಳನು ಇರಿಸುವುದು ಸರಿಯಾಗದು ಆದ ದರಿಂದ ಇರಿಸಬಾರದು

## ಕೀರ್ತನೆಗಳ ರಾಗಗಳು

ದಾಸಸಾಹಿತ್ಯ ಆರಂಭವಾದ ಬೆಳೆದ ಕಾಲದಲ್ಲಿ ನಾವು ಇಂದು ಬಳಸಿಕೊಳ್ಳುವಷ್ಟು ರಾಗಗಳು ಉಪಯೋಗದಲ್ಲಿರಲಿಲ್ಲ ಒಂದು ವೇಳೆ ಉಪಯೋಗದಲ್ಲಿದ್ದುವು ಎಂದು ವ ದಿಸಿದರೂ ದ ಸರು ಅಷ್ಟೊಂದು ರಾಗಗಳನ್ನು ತಮ್ಮ ಕೀರ್ತನೆಗಳಿಗಾಗಿ ಬಳಸಲಿಲ್ಲ ಎಂಬುದಂತೂ ನಿಶ್ಚಯ ಇದಕ್ಕೆ ಕಾರಣ ತಾವು ಹಾಡಿದ ಹಾಡ ಗಳು ರಾಗ ಕ್ಲಿಷ್ಟತೆಯಿಂದಾಗಿ ಅಥವಾ ಅಪೂರ್ಣತೆಯಿಂದಾಗಿ ಜನಸಾಮಾನ್ಯರ ಮಟ್ಟವನ್ನು ಮೀರಬಾರದು ಎಂದಿರಬಹುದು ದಾಸ ಸಾಹಿತ್ಯದಲ್ಲಿ ಹೆಸರಿಸಿದ ರಾಗಗಳ ಸಂಖ್ಯೆ ಎಂದಿಗೂ ನೂರನು ಮೀರುವುದಿಲ್ಲ ಅವುಗಳಲ್ಲಿ ಆನಂದ ಭೈರವಿ ಕಾಂಭೋಜಿ ಭೈರವಿ ಮುಖಾರಿ ಧನ್ಯಾಸಿ ಕ ರಂಜಿ ನವರೋಜು ಝಂಜೂಟಿ ಮೊದಲಾದವುಗಳು ಜಾನಪದ ಗ ನ ಶೈಲಿಯ ನು ಮೂಲವಾಗಿ ಉಳ್ಳವುಗಳು ಇನ್ನು ಕೆಲವು ಬೇಹಾಗ್ ಕಾಫಿ ದ್ವಿಜಾವಂತಿ ಮೊದಲಾದ ಔತ್ತರೇಯ ಸಂಗೀತ ಪದ್ಧತಿಯಲ್ಲಿ ಪ್ರಚಲಿತವಾಗಿರುವ ರಾಗಗಳು ಅವರು ಅಂದು ಉಪಯೋಗಿಸಿದ ಈ ರಾಗಗಳ ಸಂಚಾರ ಮತ್ತು ನಿರ್ವಹಣ ಸ್ವರೂಪ ಅವರ ಕಾಲದಲ್ಲಿ ಹೇಗಿತ್ತು ? ಎಂಬುದೂ ನಮಗೆ ಸ್ಪಷ್ಟವಾಗಿ ತಿಳಿಯುವುದಿಲ್ಲ ರಾಗಗಳ ಹೆಸರುಗಳನ್ನು ಮಾತ್ರ ನಾವು

ಇಂದು ನಮಗೆ ದೊರೆಯುವ ಹಸ್ತಪ್ರತಿಗಳಲ್ಲಿ ದಾಸ ಕೀರ್ತನೆಗಳ ಸಾಹಿತ್ಯ ಮಾತ್ರವಾದ ಸಂಗ್ರಹಗಳಲ್ಲಿ ಕಾಣುತ್ತೇವೆಯೇ ವಿನಾ ಅವುಗಳ ನಿರ್ವಹಣ ರೀತಿಗಾಗಿ ಲಕ್ಷ್ಯ ಮಾರ್ಗದ ಉದಾಹರಣೆಗಳು ದೊರೆಯುವುದಿಲ್ಲ ಆದುದರಿಂದ ಆ ರಾಗಗಳನು ಸಾಧ್ಯವಾದಷ್ಟು ಮಟ್ಟಿಗೆ ಸರಳವಾದ ಸುಲಭವಾದ ಸ್ವರೂಪದ ಸಂಚಾರಗಳನ್ನು ಇರಿಸಿಕೊಂಡು ದಾಸ ಕೀರ್ತನೆಗಳನ್ನು ಹಾಡುವ ಪದ್ಧತಿಯನು ಬೆಳೆಯಿಸಿಕೊಳ್ಳುವುದು ಸೂಕ್ತ

ಇಂದು ನಾವು ದಾಸರ ಕೀರ್ತನೆಗಳನ್ನು ಹಲವಾರು ಆಧುನಿಕ ರಾಗಗಳಲ್ಲಿ – ಎಂದರೆ ದಾಸರುಗಳು ಉಪಯೊಗಿಸದ ರಾಗಗಳಲ್ಲಿ ಅಥವಾ ಅವರ ಕಾಲದಲ್ಲಿ ಪ್ರಚಾರದಲ್ಲಿರದ ರಾಗಗಳಲ್ಲಿ ನಿರೂಪಣೆಗೊಳ್ಳುತ್ತಿರುವುದನ್ನು ಕಾಣುತ್ತಿದ್ದೇವೆ ಒಂದೇ ಹಾಡನ್ನು ಹತ್ತು ಜನ ವಿದ್ವಾಂಸರು ಹತ್ತು ಬಗೆಗಳಲ್ಲಿ ಹಾಡುತ್ತಿರುವುದನ್ನೂ ಕೇಳುತ್ತಿದ್ದೇವೆ ಹಳೆಯ ಹಾಡುಗಳ ಹೊಸ ಹೊಸ ಬಗೆಯ ನಿರೂಪಣೆಯನ್ನು ಸಂಗೀತ ರಸಿಕರು ಮೆಚ್ಚಿಕೊಳ್ಳುತ್ತಲೂ ಇದ್ದಾರೆ ಪರಿಣಾಮವಾಗಿ ಕೃತಿಗಳೇ ಮುಖ್ಯಾಂಗವಾಗಿ ಇರುವ ನಮ್ಮ ಇಂದಿನ ಸಂಗೀತ ಕಛೇರಿಯ ಪದ್ಧತಿಯನು ಸಂಗೀತ ವಿದ್ವಾಂಸರು ದಾಸರ ಕೀರ್ತನೆಗಳಿಂದಲೇ ಪೂರೈಸುವುದು ಸಾಧ್ಯ ಎಂದೂ ತೋರಿಸಿಕೊಟ್ಟಿದ್ದಾರೆ ಈ ಸ್ಥಿತಿಗೆ ಪ್ರಾದೇಶಿಕ ಭಾಷಾಭಿಮಾನ ಒಂದು ಕಾರಣವಾಗಿರಬಹುದು ಆದರೆ ಕೃತಿ ಶೈಲಿಗೆ ಸರಿದೊರೆಯಾಗಿ ನಿಲ್ಲುವ ಕನ್ನಡ ಕೃತಿಗಳ ಸಂಖ್ಯೆ ಕಡಮೆ ಕನ್ನಡ ನಾಡಿನಲ್ಲಿ ಕಛೇರಿಯ ಅವಕಾಶದಲ್ಲಿ ಕನ್ನಡ ಕೃತಿಗಳ ನಿರೂಪಣೆಗೆ ಆದ್ಯತೆ ಇರಬೇಕು ಎಂಬ ಕಾರಣಕ್ಕಾಗಿ ಕನ್ನಡ ಭಾಷೆಯ ಕೃತಿಗಳ ಕೊರತೆಯನ್ನು ದಾಸರ ಕೀರ್ತನೆಗಳನ್ನು ಕೃತಿ ಶೈಲಿಗೆ ಪರಿವರ್ತಿಸಿ ತುಂಬಿಸಿಕೊಳ್ಳುವ ಬದಲಿಗೆ ಕನ್ನಡ ಕೀರ್ತನೆಗಳನ್ನೇ ವಿದ್ವಾಂಸರು ರಚಿಸಿ ಈ ಪರಿಸ್ಥಿತಿಯನ್ನು ಸುಧಾರಿಸಿಕೊಳ್ಳುವುದು ಉತ್ತಮ

## ಕೀರ್ತನ ಶೈಲಿಯ ಸಂಶೋಧನೆ

ದಾಸರ ಕೀರ್ತನೆಗಳಿಗೆ ಒಂದು ವಿಶಿಷ್ಟವಾದ ಶೈಲಿ ಇದ್ದಿತ್ತು ಎಂದು ಒಪ್ಪಿಕೊಂಡರೆ ಅದು ಹೇಗಿದ್ದಿರಬಹುದು ? ಎಂಬ ಪ್ರಶ್ನೆ ಮೂಡುತ್ತದೆ ಆ ಪ್ರಶ್ನೆಯನ್ನು ಹೀಗೆ ಉತ್ತರಿಸಲು ಯತ್ನಿಸಬಹುದು ಕೀರ್ತನೆಗಳು ಹಾಡುವ ಸಲುವಾಗಿಯೇ ರಚಿತವಾದ ಪ್ರಬಂಧಗಳು ಅವುಗಳಲ್ಲಿ ಸಂಗೀತಕ್ಕಿಂತ ಸಾಹಿತ್ಯಕ್ಕೆ ಪ್ರಾಧಾನ್ಯ ಹೆಚ್ಚು ಹೇಳುವ ರೀತಿಗಿಂತಲೂ ಹೇಳುವ ಮಾತಿಗೆ ಪ್ರಾಮುಖ್ಯ ಸಾಹಿತ್ಯಕ್ಕೆ ಸಂಗೀತವು ಕೇವಲ ನಿರೂಪಣಾ ಮಾಧ್ಯಮವಾಗಿರಬೇಕಲ್ಲದೆ ಅದಕ್ಕಿಂತ ಹೆಚ್ಚಿನ ಸ್ಥಾನವಲ್ಲದು ಸಾಮಾನ್ಯವಾಗಿ ಜನಪ್ರಿಯವಾದ ರಾಗಗಳಲ್ಲಿಯೇ ರಚನೆಗಳಿರಬೇಕು ಹೊರತು ಅಪೂರ್ವ ರಾಗಗಳಲ್ಲಾಗಲಿ ಸ್ವರಸಂಯೋಜನೆಯಲ್ಲಿ ಅಪೂರ್ವ

ಸಂಚಾರಗಳನಾ ಗಲಿ ನಿರೂಪಿಸುವ ಉದ್ದೇಶವಿರಬಾರದು ಸ ಲಕ್ಷಣವಾದ ನ ರವಾದ ರಂಜಕವಾದ ಕೇಳಿದ ಕೂಡಲೆ ಹಾಡಲು ಚಪಲ ಹುಟ್ಟಿಸುವ ರೀತಿಯ ಸ್ವರ ಯೋ ಜನೆಗಳಿರಬೇ ಕು ಸಾಹಿತ್ಯವು ಭಾವನಾಪೂರ್ಣವಾಗಿರುವುದರಿಂದ ಹಾಡುವಿಕೆಯಲ್ಲಿ ಅರ್ಥವ್ಯಾಪ್ತಿಗೆ ಹೆಚ್ಚಿಗೆ ಲಕ್ಷ್ಯವನ್ನು ನಿ ಡಬೇ ಕು ದಾಸ ರ ಕಿ ರ್ತನೆಗಳಲ್ಲಿ ಪಲ್ಲವಿ ಅನುಪಲ್ಲವಿಗಳಲ್ಲದೆ ಹೆ ಳ ವ ವಿಷಯ ನಿರೂಪಣೆಗೆ ಅನುಗುಣವಾಗಿ ಒಂದು ಅಥವಾ ಬಹುಚರಣ ಸ್ಥಿತಿ ಇರುತ್ತದೆ ಈ ಚರಣಗಳನ್ನೆಲ್ಲ ಒಂದುರೀತಿಯೇ ಇನ್ನೊಂದನ್ನು ಹಾಡುವ ಅಥವಾ ಪಲ್ಲವಿ ಅನ ಪಲ್ಲವಿಗಳಂತೆಯೇ ಚರಣಗಳನ್ನು ಹ ಡುವ ರೂಢಿ ನಡೆದುಬಂದಿದೆ ಲಲಿತವಾದ ನಡೆಗಳ ವಕ್ರಗತಿಗಳಿಲ್ಲದ ಲಯಗತಿಯೂ ತಾಳದ ಗತಿಗೆ ಹೊಂದಿಕೊಂಡು ಹೊ ಗುವ ತಾಳಾಂಗ ವಿಭಜನೆಗಳ ಅವಕಾಶದಲ್ಲಿ ಸಾಹಿತ್ಯದ ಅಕ್ಷರಗಳನ್ನು ತೊಡಕಾಗದಂತೆ ಹೇಳುವ ಸಾಹಿತ್ಯ ವಿನ್ಯಾಸಕ್ರಮ ದಾಸರ ಕೀರ್ತನೆ ಗಳಲ್ಲಿನ ವಿಶಿಷ್ಟತೆ ಇವುಗಳು ಹಾಡುವಿಕೆಯಲ್ಲಿ ರಂಜಿಸುವಂತೆ ಸಾಹಿತ್ಯ ವಿರಹಿತ ವಾಗುವ ವಾದ್ಯ ನಿರೂಪಣೆಗಳಲ್ಲಿ ರಂಜಿಸಲಾರವು

ತ್ಯಾಗರಾಜರ ರಚನೆಗಳಲ್ಲಿ ದಿವ್ಯನಾಮ ಸಂಕಿ ರ್ತನೆ ಎಂಬ ವರ್ಗದವುಗಳು ದಾಸರ ಕೀರ್ತನೆಗಳನ್ನು ಬಹುವಾಗಿ ಹೊ ಲುತ್ತವೆ ಅವುಗಳಲ್ಲೂ ಸಾಹಿತ್ಯದ್ದೇ ಪ್ರಧಾನಾಂಗ ಬಹುಚರಣಸ್ಥಿತಿ ಪ್ರಾಸ ಅನುಪ್ರಾಸ ಶಬ್ದ ಪುನರಾವರ್ತನ ವಿಚಾರ ಪುನರಾವರ್ತನ ರಾಗತಾಳಗಳ ಸರಳತೆ ಎಲ್ಲವೂ ದಾಸರ ಕಿ ರ್ತನೆಯ ದಾರಿ ಯಲ್ಲೇ ಸಾಗಿದಂಥವುಗಳು ಈ ದಿವ್ಯನಾಮ ಸಂಕಿ ರ್ತನಗಳನ್ನು ಹಾಡುವ ಶೈಲಿ– ಎಂದರೆ ಸಾಹಿತ್ಯ ಪ್ರಧಾನವಾಗಿ ಪರಿಗಣಿಸಿ ಸುಂದರವಾದ ರಂಜಕವಾದ ರಾಗತಾಳ ಗಳ ಸಂಯೋಜನೆಯ ಮೂಲಕ ನಿರೂಪಿಸುವ ರೀತಿ – ನಮಗೆ ತ್ಯಾಗರಾಜರ ಶಿಷ್ಯ ಪರಂಪರೆಯ ಮೂಲಕ ದೊರೆತಿದೆ ಈ ಶೈಲಿಯನ್ನೇ ಆವಶ್ಯಕ ಹಾಗೂ ವಿಚಾರ ಪೂರಿತ ಬದಲಾವಣೆಗಳೊಡನೆ ದಾಸರ ಕಿ ರ್ತನೆಗಳಿಗೆ ಹೊಂದಿಸಿಕೊಂಡು ಪ್ರಯೊ ಗಿಸಿ ನೋಡಬಹುದು ಇಂತಹ ಪ್ರಯೊ ಗಗಳನ್ನು ಗಾಯಕರು ವಿದ್ವಾಂಸರು ವ್ಯಯಕ್ತಿಕ ವಾಗಿ ಕೈಗೊಳ್ಳುವುದಕ್ಕಿಂತ ಸ ಮೂಹಿಕವಾಗಿ ವಿದ್ವನ್ಮಂಡಲಿಯ ಆಶ್ರಯದಲ್ಲಿ ಅಥವಾ ವಿಶ್ವವಿದ್ಯಾಲಯಗಳ ಸಂಗಿ ತ ವಿಭಾಗಗಳ ಆಶ್ರಯದಲ್ಲಿ ಅಥವಾ ಸಂಗಿ ತ ಅಕಾಡೆಮಿ ಗಾನಸಭೆಗಳ ಆಶ್ರಯದಲ್ಲಿ ಕೈಗೊಳ್ಳುವುದು ಉತ್ತಮ ಹಿ ಗೆ ಸ್ವರ ಸಂಯೋಜನೆಗೊಂಡ ಕಿ ರ್ತನೆಗಳನು ಸಂಗಿ ತಾಸಕ್ತರ ರಸಿಕರ ಮುಂದೆ ಪ್ರಯೋಗದ ಒರೆಗಲ್ಲಿಗೆ ಹಚ್ಚಬೆ ಕು ಅಲ್ಲಿ ಅವು ಯಶಸ್ವಿಯಾದರೆ ಮುಂದೆ ಆ ಕೀರ್ತನೆಗಳನ್ನು ಒಮ್ಮತವಾಗಿ ಒಪ್ಪಿದ ಸ್ವರ ಸಂಯೊ ಜನೆಗೆ ಬದ್ಧವಾಗಿ ಎಲ್ಲರೂ ಹಾಡಬೆ ಕು ಅಂತೆಯೇ ಪ ರ ಹೆ ಳಿ ಪ್ರಚಾರ ಮಾಡಬೇಕು ಎಂಬ ನಿಯ ಮವನ್ನು ಗಾಯ ಕರು ತವ ಗೆ ತಾವೇ ಹಾಕಿಕೊಂಡು ಪಾಲಿಸಬೇಕು ಹೀಗೆ ಮಾಡಿದಾಗ ಮಾತ್ರ ದಾಸ ಸಾಹಿತ್ಯವೆಂಬ ಅಪಾ ರ ಪ್ರಬಂಧರಾಶಿ ನಿರೂಪಣೆಯ ಲ್ಲಿ ಸುಸಂಬದ್ಧತೆಯನ್ನು ಹೊಂದೀತು ಪರಂಪರಾಗತವೆಂದು ಹೇಳಬಹುದಾದ ಶೈಲಿಯ ನ್ನು ಸ್ವಲ್ಪಮಟ್ಟಿ

ಗಾದರೂ ಉಳಿಸಿಕೊಳ್ಳಲು ಶಕ್ಯವಾದೀತು ಜನಮಾನ್ಯ ಸ್ಥಿತಿಯನ್ನು ಪಡೆದು ಸಂಗೀತ ಪ್ರಬಂಧಗಳಲ್ಲಿ ವಿಶಿಷ್ಟ ಸ್ಥಾನ ಪಡೆದೀತು

ಹಾಗಾದರೆ ಪ್ರಚಲಿತ ಕಾಲದ ಸಂಗೀತಕ್ಕೆ ಅನನ್ಯವಾಗಿರುವ ಕೃತಿ ಪ್ರಬಂಧ ಗಳಿಗೆ ಸಮಾನವಾದ ರಚನೆಗಳು ನಮಗೆ ಕನ್ನಡದಲ್ಲಿ ಬೇಡವೆ ? ಅಂತಹ ರಚನೆಗಳಿಗಾಗಿ ನಾವು ಕನ್ನಡಿಗರು ಅನ್ಯಭಾಷೆಯ ಕೃತಿಗಳಿಗೇ ಶರಣಾಗಬೇಕೆ ? ಎಂಬ ಪ್ರಶ್ನೆ ಮೂಡುತ್ತದೆ ಇದಕ್ಕೆ ಉತ್ತರ ಹೀಗೆ ಹೇಳಬೇಕಾಗುತ್ತದೆ ಕನ ಡ ಭಾಷೆಯಲ್ಲೇ ರಚಿತವಾದ ಕೃತಿ ಪ್ರಬಂಧಗಳು ನಮಗೆ ಅವಶ್ಯ ನಾಡಿನ ಭಾಷೆಯಲ್ಲಿರುವ ಪ್ರಬಂಧ ಗಳ ಮಹತ್ವ ಇತರ ಭಾಷಾ ಪ್ರಬಂಧಗಳಿಗೆ ಬರಲಾರದು ನಿಜ ಆದರೆ ಅದಕ್ಕೋಸ್ಕರ ಬೇರೆ ಉದ್ದೇಶಗಳಿಂದ ರಚಿತವಾದ ಬೇರೆಯೇ ಶೈಲಿಗಳನ್ನು ಹೊಂದಿರುವ ದಾಸರ ಕೀರ್ತನೆಗಳನ್ನು ಉಪಯೋಗಿಸುವುದು ಬೇಡ ಕನ್ನಡದಲ್ಲಿ ಸಂಗೀತ ತ್ರಿಮೂರ್ತಿಗಳ ರಚನೆಗೆ ಸರಿಮಿಗಿಲಾದ ಕೃತಿಗಳ ರಚನೆಯಾಗಬೇ ಕು ಇದಕ್ಕಾಗಿ ಕನ್ನಡ ನಾಡಿನ ವಿದ್ವಾಂಸರು ಯೋಗ್ಯ ಪ್ರಬಂಧಗಳ–ಎಂದರೆ ಇಂದಿನ ಶಾಸ್ತ್ರೀಯ ಸಂಗೀತ ಪದ್ಧತಿಗೆ ಬಳಸಿಕೊಳ್ಳಲು ಅರ್ಹವಾದ ಯೋಗ್ಯತೆಯ ಪ್ರಬಂಧಗಳ ರಚನೆಗೆ ತೊಡಗಬೇ ಕು ಹೊರತು ಪುರಂದರದಾಸರು ಸಂಗೀತ ಪಿತಾಮಹರು ಅವರ ಮತ್ತು ಇತರ ದಾಸರ ಕೀರ್ತನೆಗಳು ಯಾವ ದೃಷ್ಟಿಯಲ್ಲೂ ಕೃತಿಗಳಿಗಿಂತ ಕಡಿಮೆ ಅಲ್ಲ ಎಂದುಕೊಂಡು ಕೀರ್ತನೆಗಳನ್ನು ಕೃತಿಗಳ ಪಡಿಯಚ್ಚಿನಲ್ಲಿ ಇರಿಸಿ ನಿರೂಪಿಸುವುದು ನಮ್ಮ ಸಂಗೀತ ಪರಂಪರೆಗೆ ಭೂಷಣವಲ್ಲ

## ಸಂಗೀತ ಮತ್ತು ನೃತ್ಯ

ಗೀತಂ ವಾದ್ಯಂ ಚ ನೃತ್ಯಂ ಚ ತ್ರಯಂ ಸ ಗೀತಮುಚ್ಯತೇ ಎಂದು ಹಿಂದಿನ ಲಾಕ್ಷಣಿಕರು ಹೇಳಿದ್ದಾರೆ ಅವರು ಗೀತ ವಾದ್ಯಗಳೊಡನೆ ನೃತ್ಯವನ್ನೂ ಸಂಗೀತದ ಒಂದು ಅಂಗವಾಗಿಯೇ ಕಂಡರು ಎಂದರೆ ಗೀತಗಾನದಿಂದ ಮೂಡಿದ ಭಾವ ವಾದ್ಯಗಳ ಸಹಯೋಗದಿಂದ ವಿಕಸಿತವಾಗಿ ನೃತ್ಯದ ಮೂಲಕ ಸಂಪೂರ್ಣ ಅಭಿವ್ಯಕ್ತ ವಾಗುತ್ತದೆ ಎಂದು ಹೇಳಿದರು ಮುಂದೆ ಧ್ವನಿ ಮಾಧ್ಯಮದ ಅಭಿವ್ಯಕ್ತಿ ಸಂಗೀತ ವೆಂದೂ ಅಭಿನಯ ಮಾಧ್ಯಮದ ಅಭಿವ್ಯಕ್ತಿ ನೃತ್ಯವೆಂದೂ ಕಂಡುಕೊಂಡ ಪರಿಣಾಮ ವಾಗಿ ಸಂಗೀತ ನೃತ್ಯಗಳು ಎರಡು ಪ್ರತ್ಯೇಕ ಕಲೆಗಳಾಗಿ ಬೆಳೆದವು ಆದರೆ ನೃತ್ಯ ವಿರಹಿತವಾಗಿ ಸಂಗೀತವು ಬೆಳೆದರೂ ಸಂಗೀತ ವಿರಹಿತವಾದ ನೃತ್ಯವನ್ನು ಸಾಧಿಸ ಲಾಗಲಿಲ್ಲ

ಸಂಗೀತ ಪ್ರಬಂಧಗಳನ್ನು ಸಾಮಾನ್ಯವಾಗಿ ಹೀಗೆ ವರ್ಗೀಕರಿಸಬಹುದು ಸಾಹಿತ್ಯ ಸಹಿತವಾದ ಪ್ರಬಂಧ ಸಾಹಿತ್ಯ ವಿರಹಿತವಾದ ಪ್ರಬಂಧ ಸಾಹಿತ್ಯ ಪ್ರಾಧಾನ್ಯವಾದ ಕೀರ್ತನೆಗಳಂತಹ ಪ್ರಬಂಧ ಸಂಗೀತ ಪ್ರಾಧಾನ್ಯವಾದ ಕೃತಿ

ಗಳಂತಹ ಪ್ರಬಂಧ ಮತ್ತು ಸಾಹಿತ್ಯ ಸಂಗೀತ ಎರಡಕ್ಕೂ ಸಮಾನ ಪ್ರಾಧಾನ್ಯವಿರುವ ಪ್ರಬಂಧ ಹೀಗೆ ಐದು ವರ್ಗಗಳನು ಕಾಣಬಹ ದಾಗಿದೆ ಸಾಹಿತ್ಯ ವಿರಹಿತ ಪ್ರಬಂಧಗಳನು ನೃತ್ಯ ಮಾಧ್ಯಮದಲ್ಲಿ ನಿರೂಪಿಸಿದಾಗ ಅಲ್ಲಿ ನ ತ್ಯಕ್ಕೆ ಎಂದರೆ ವೈವಿಧ್ಯಪೂರ್ಣವಾದ ಪದಗತಿ ಚಲನಾ ವಿನ್ಯಾಸಕ್ಕೆ ಪ್ರಾಶಸ್ತ್ಯ ದೊರೆಯುತ್ತದೆ ಸಾಹಿತ್ಯ ಸಹಿತವಾದ ನೃತ್ಯ ನಿರೂಪಣೆಯಲ್ಲಿ ನಾಟ್ಯಕ್ಕೆ – ಎಂದರೆ ಅಭಿನಯ ಕ್ಕೆ ಪ್ರಾಶಸ್ತ್ಯ ಹೆಚ್ಚು ಸಾಹಿತ್ಯ ಸಂಗೀತ ಎರಡಕ್ಕೂ ಸಮಾನ ಪ್ರಾಶಸ್ತ್ಯವುಳ್ಳ ಪ್ರಬಂಧಗಳ ನಿರೂಪಣೆಯಲ್ಲಿ ನೃತ್ಯ ನಾಟ್ಯಗಳೆರಡಕ್ಕೂ ಸಮಾನ ಪ್ರಾಧಾನ್ಯ ದೊರೆತು ಅದು ನೃತ್ಯವೆನಿಸುತ್ತದೆ

## ಪದ ಕೀರ್ತನೆ

ಸಾಮಾನ್ಯವಾಗಿ ಪದ ಎಂಬ ಶಬ್ದವನ್ನು ಹಾಡು ಕೀರ್ತನೆ ಎಂಬ ಅರ್ಥದಲ್ಲಿ– ಉಪಯೋಗಿಸ ತ್ತೇವೆ ಆದುದರಿಂದಲೇ ದಾಸರ ಕಿ ರ್ತನೆಗಳನ್ನು ದಾಸರ ಪದ ಗಳು ಎಂದು ಕರೆಯುವ ರೂಢಿ ಬಂತು ಆದರೆ ಪದ ಎಂಬುದು ಸಂಗೀತ ಪ್ರಬಂಧಗಳಲ್ಲಿ ಒಂದು ವಿಶಿಷ್ಟವಾದ ರಚನೆ ಈ ಪ್ರಬಂಧವು ನೃತ್ಯದಲ್ಲಿ ವಿಶೆ ಷ ವಾಗಿ ರಂಜಿಸುವುದರಿಂದ ಇದು ನೃತ್ಯ ಪ ಬಂಧವೂ ಹೌದು ಪದಗಳು ನಾಯಕ ನಾಯಕೀ ಭ ವಗಳನ್ನು ವಿವಿಧ ರೀತಿಗಳಲ್ಲಿ ನಿರೂಪಿಸುತ್ತವೆ

ಶೃಂಗಾರ ಭಾವವನ್ನು ಪರಿಪೂರ್ಣ ಸ್ಥಿತಿಯ ಲ್ಲಿ ಕಂಡುಕೊಂಡುದು ಭಾರತದ ಸಂಸ್ಕೃತಿಯ ವೈಶಿಷ್ಟ್ಯ ಭಕ್ತಿಯಷ್ಟೇ ಶೃಂಗಾರಕ್ಕೂ ಇಲ್ಲಿ ಪ್ರಾಧಾನ್ಯವಿದೆ ಶೃಂಗಾರ ರಸವೊಂದರಲ್ಲೇ ನವರಸಗಳೂ ಪ್ರತಿಫಲಿಸ ತ್ತವೆ ಪ್ರಬಂಧಕಾರರು ನವವಿಧ ಭಕ್ತಿ ವೈವಿಧ್ಯಗಳನು ಚಿತ್ರಿಸಿದಂತೆಯೇ ನವರಸಾಂತರ್ಗತವಾದ ಶೃಂಗಾರದ ಬಹುಮುಖಗಳು ಪ್ರಬಂಧಗಳಲ್ಲಿ ಚಿತ್ರಿತವಾಗಿವೆ ಭಕ್ತಿ ಪಥದಲ್ಲಿ ಮುನ ಡೆದು ಪರಮಾತ್ಮನನ್ನು ಸಾಕ್ಷಾತ್ಕರಿಸಿಕೊಳ್ಳುವುದು ಕೀರ್ತನೆಗಳ ಗ ರಿ ಪದಗಳು ಅದೇ ಗುರಿಯ ನು ಪ್ರೀತಿ ಅಥವಾ ಶೃಂಗಾರ ಭಾವದ ಮೂಲಕ ಸಾಧಿಸುತ್ತವೆ ಭಾರತಿ ಯ ಚಿಂತನ ಮಾರ್ಗದಲ್ಲಿ ಮಧ ರ ಭಾವಕ್ಕೆ ವಿಶೇಷವಾದ ಸ್ಥಾನವಿದೆ ವಿಶ್ವಾತ್ಮನಲ್ಲಿ ವ್ಯಕ್ತಿಗತವಾದ ಆತ್ಮವು ಲೀನವಾಗುವ ಸ್ಥಿತಿ ಇದು ಪ್ರೇಮ ನಿರಿಕ್ಷಣ ಪ್ರೇಮ ಪೂಜನ ಪ್ರೇಮಚಿಂತನ ಪ್ರೇಮಾರಾಧನ ಪ್ರೇಮಾಪಿ ಲನ ಮೊದಲಾದವುಗಳ ನಿರೂಪಣೆ ಪದಗಳ ವಸ್ತು ದೇವತಾರಾಧನೆಯನ್ನು ನಾಯಕ ನಾಯ ಕೀ ಭಾವದಿಂದ ಸಾಧಿಸಿ ಕೃತಕೃತ್ಯತೆ ಪಡೆಯ ವುದು ಶ್ರೇಷ್ಠ ಮಾರ್ಗವೆಂದು ತಿಳಿದ ಪಂಥದವರಿಂದ ಬಹುಸಂಖ್ಯೆಯಲ್ಲಿ ಪದಗಳ ರಚನೆಯಾಗಿದೆ ಪದಗಳ ಪರಂಪರೆ ಜಯದೇವನಿಂದ ಆರಂಭವ ದರೂ ಕ್ಷೇತ್ರಜ್ಞ ನಾರಾಯಣತಿ ರ್ಥ ಮೊದಲಾದವರು ಪದ ರಚನೆಗೈದು ನಾಯ ಕ ನಾಯ ಕೀ ಭಾವದಲ್ಲಿ ಭಗವದಾರಾಧನೆ ಮಾಡಿ ಕೃತಕೃತ್ಯರಾದವರು

## ಭಕ್ತಿ ಪಂಥ

ದಾಸ ಪಂಥದವರ ಮಾರ್ಗವೂ ಭಕ್ತಿ ಪಥದಲ್ಲಿ ಪರಮಾತ್ಮ ಸಾಕ್ಷಾತ್ಕಾರವನ್ನು ಮಾಡಿಕೊಳ್ಳುವ ರೀತಿ ಈಶ್ವರನ ವಿಷಯ ಕವಾದ ಪ್ರೇಮ ಭಾವನೆಯೇ ಭಕ್ತಿ ಪಂಥದ ತಳಹದಿ ಪ್ರತಿಯೊರ್ವ ಮಾನವನಿಗೂ ಪ್ರೇಮ ಪರಿಚಯ ಇದ್ದದ್ದೇ ಸ್ವಾಭಾವಿಕವಾಗಿ ಎಲ್ಲರಲ್ಲೂ ಹರಿಯುತ್ತಿರುವ ಈ ಪ್ರೇಮ ಪ್ರವಾಹವನ್ನು ಪರಿಶುದ್ಧ ಮನಸ್ಸಿನಿಂದ ಏಕಾಗ್ರತೆಯಿಂದ ಭಗವಂತನಲ್ಲಿ ಕೇಂದ್ರೀಕರಿಸುವುದೇ ಭಕ್ತಿ ಸೂತ್ರ ಪರಮಾತ್ಮನನ್ನು ಸ್ವಾಮಿ ಒಡೆಯ ಎಂದು ಕಾಣುವ ಭಾವ ಆತನನು ಸ್ನೇಹಿತ ನೆಂದು ತಿಳಿಯುವ ಭಾವ ತಂದೆಯಾಗಿ ತಿಳಿದು ಗೌರವಾದರಗಳಿಂದ ಕಾಣುವ ಭಾವ ತನ್ನನ್ನು ಸ್ತ್ರೀಯಾಗಿಯೂ ಪರಮಾತ್ಮನನು ಪುರುಷನನ್ನಾಗಿಯೂ ಭಾವಿಸಿ ಆತನನ್ನು ಪ್ರೇಮ ದಿಂದ ಆರಾಧಿಸುವ ಭಾವ ಇವೆಲ್ಲವೂ ಭಕ್ತಿ ವೈರಾಗ್ಯಗಳಲ್ಲಿ ಅಂತರ್ಗತ ಈ ಭಾವಗ ನು ವಸ್ತುವಾಗಿ ತೆಗೆದ ಕೊಂಡು ದಾಸರು ಅಸಂಖ್ಯ ಕೀರ್ತನೆಗಳನ್ನು ರಚಿಸಿದಾ ರೆ ಆದುದರಿಂದಲೇ ಪದಗಳಿಗೂ ಕೀರ್ತನೆಗಳಿಗೂ ಹಲವೊಂದು ಭಾಗ ಗಳಲ್ಲಿ ವಿಶೇ ಷವಾದ ಸಾಮ್ಯವಿರುವುದನ್ನು ಕಾಣಬಹುದಾಗಿದೆ

ಈಶ್ವರನನ್ನು ಬ ದ್ಧಿಗಮ್ಯನೆಂದು ದಾಸರು ತಿಳಿಯಲಿಲ್ಲ ಆದುದರಿಂದ ತತ್ವ ಕ್ಕಿಂತಲೂ ಹೆಚ್ಚಾಗಿ ಅವರು ಅನುಭಾವದ ಮಾರ್ಗವನ್ನೇ ಹಿಡಿದರು ಆತನ ಕುರಿತು ತಮ್ಮ ಹ ದಯದಲ್ಲಿ ಉಕ್ಕಿ ಬಂದ ಭಾವನೆಗಳನ್ನೆಲ್ಲ ನಿಸ್ಸಂಕೋಚವಾಗಿ ಹಾಡಿದರು ವಿಶ್ವವು ನಾದಲಯ ಬದ್ಧತೆಯಿಂದ ಕೂಡಿರುವುದರಿ ದಲೇ ಆ ವಿಶ್ವಾತ್ಮನನ್ನು ಕುರಿತು ಪ್ರೇಮದಿಂದ ಭಕ್ತಿಯಿಂದ ಸ್ಫುರಿಸಿದ ಅವರ ಮಾತುಗಳೂ ರಾಗ ಲಯ ಬದ್ಧವಾದ ಸ ಂದರ ಸಂಗಿ ತವಾಗಿ ಹರಿದು ಬಂದರೆ ಆಶ್ಚ ರ್ಯವಿಲ್ಲ ಅಂತ ಕರಣದಲ್ಲಿ ಮೂಡಿದ ಭಾವವು ಲಲಿತ ಪದ ಪುಂಜಗಳ ರೂಪು ತಾಳಿತು ಸ್ವರ ಸಂಯೋಜನೆಯೊಡಗೂಡಿ ಹೊನಲಾಗಿ ಹೊರಹೊಮ್ಮಿತು

## ನೃತ್ಯಕ್ಕೊದಗುವ ಕೀರ್ತನೆಗಳು

ವೈವಿಧ್ಯಪೂರ್ಣ ಭಕ್ತಿ ನಿರೂಪಣೆಯ ದೃಷ್ಟಿಯಿಂದಲ್ಲಿ ದಾಸರ ಕೀರ್ತನೆಗಳು ಅನ ಪಮ ವಾಗಿದ ಒಮ್ಮೆ ಅವರು ದುಃಖ ಸಂತಪ್ತರಾಗಿ ಪರಮಾತ್ಮನ ಮೊರೆ ಹೊಕ್ಕಿದ್ದಾರೆ ಮತ್ತೊಮ್ಮೆ ತಾವು ಗೈದ ಪಾಪಕೃತ್ಯಗಳನ್ನು ನೆನೆದು ಕ್ಷಮಾಯಾಚನೆ ಮಾಡಿದ್ದಾರೆ ಮಗ ದೊಮ್ಮೆ ಆತನನು ಎಣೆ ಇಲ್ಲದ ದೈವವೆಂದು ದೀನರಾಗಿ ಆಶ್ರಯಿ ಸಿದ್ದಾರೆ ಪರಮಾತ್ಮನನ್ನು ಗೆಳೆಯ ನೆಂದು ಸಂಬೋಧಿಸಿದ್ದಾರೆ ಒಡೆಯ ನೆಂದು ತಲೆಬಾಗಿದ್ದಾ ರ ಗ ರುವೆಂದು ವಂದಿಸಿದ್ದಾರೆ ಆತನ ಅವತಾರಗಳನ್ನೆಲ್ಲ ಸುಂದರವಾಗಿ ವಿವರವಾಗಿ ಚಿತ್ರಿಸಿದ್ದಾರೆ ನಾನು ಸೇವಕ ನೀನು ಯಜಮಾನ! ನನ್ನನ್ನು ಕಾಪಾಡುವ ಕರ್ತವ್ಯ ನಿನ ದು ಎಂದು ದೇವರಿಗೆ ಕರ್ತವ್ಯ ಪ್ರಜ್ಞೆಯ ನ್ನು

ನೆನಪಿಸಿದ್ದಾರೆ ಭಕ್ತರಕ್ಷಕನೆಂದು ಒರದು ಹೊತ್ತ ನಿನಗೆ ನನನ್ನು ಕಾಪಾಡಲು ಸಾಧ್ಯವಿಲ್ಲವೆ ? ಎಂದು ರೇಗಿದ್ದಾರೆ ನೀನು ಮನೆಯಿಲ್ಲದವನು ನೆಲೆಯಿಲ್ಲದವನು ಹಾವಿನ ಮೇಲೆ ಮಲಗಿದವನು! ತಿರಿದು ಉಣ್ಣುವವನು! ಪಾಪ! ನನಗೇನು ನೀಡ ಬಲ್ಲೆ ? ಎಂದು ಹಂಗಿಸಿದ್ದಾರೆ ಆ ಕ್ಷಣದಲ್ಲೇ ಸರ್ವಶಕ್ತನಾದ ನಿನ್ನನು ಕಾಣದೆ ನಾನು ಹೇಗೆ ಬದುಕಿರಲಿ ? ಎಂದು ಹಂಬಲಿಸಿ ಕೊರಗಿದ್ದಾರೆ ಹಾಗೆಯೇ ನಿನ್ನನ್ನು ಕಂಡು ನಾನು ಕೃತಾರ್ಥನಾದೆ ನನಗಿಂತ ಧನ್ಯರು ಬೇರಾರು ಈ ಧರೆಯೊಳಗೆ ? ಎಂದಿದ್ದಾರೆ ಈ ಎಲ್ಲ ಮಾತುಗಳು ಕೇವಲ ಮಾತುಗಳಷ್ಟೆ ಆಗಿ ದಾಸರ ಬಾಯಿಂದ ಹೊರಬೀಳಲಿಲ್ಲ ಕೃತಕತೆಯಿಂದ ಕೂಡಲಿಲ್ಲ ಅವು ಭಾವದ ಭಾರದಿಂದ ಬಾಗಿ ಶಬ್ದ ಅರ್ಥ ಸ್ವರ ಲಯ ಗಳ ಸಮ್ಮಿಲನದಿಂದ ಹೊನಲಾಗಿ ಹರಿದಿವೆ

ವಾತ್ಸಲ್ಯಭಾವ ವ ಧುರಭಾವ, ದರ್ಶನ ಸಾಕ್ಷಾತ್ಕಾರದ ಹಾಡ ಗಳಲ್ಲಿ ದಾ ರು ಶ್ರೀಕೃಷ್ಣನ ಬಾ ಲೀಲೆ ಗೋಪಬಾಲರೊಡನೆ ಆತನ ಆಟ ಗೋಪಿಯಂ ರೊಡನೆ ಚೆಲ್ಲಾಟ ಯ ಶೋದೆ ಬಾಲಕೃಷ್ಣರ ಮಧುರ ಸಲ್ಲಾಪ ರಾಧೆಯೊಡನೆ ಪ್ರೆ ಮಾಲಾಪ, ಶ್ರೀಕೃಷ್ಣ ದರ್ಶನ ವೈಕುಂಠ ವೈಭವ ದರ್ಶನ ಭವ್ಯತೆ ಮೊದಲಾದ ವಿಷಯಗಳ ವೆ ಲೆ ಹಲವು ಹಾಡ ಗಳನ್ನು ರಚಿಸಿದ್ದಾರೆ ಅಂತೆಯೇ ಜಗತ್ತಿನ ರಿ ತಿ ನಿ ತಿ ಆಚಾರ ವಿಚಾರ ಸಿದ್ಧಾಂತ ಸಂಪ್ರದಾಯ ಮೂಢನಂಬಿಕೆಗಳನ್ನು ವಿಡಂಬನಾತ ಕವಾಗಿ ತಮ್ಮ ಹಾಡ ಗಳಲ್ಲಿ ಹೇಳಿದ್ದಾರೆ ಇವುಗಳನ್ನೆಲ್ಲ ಹೇಳುವ ಸಂದರ್ಭದಲ್ಲಿ ಪುರಾಣಗಳಿಂದ ಅವತಾರ ಕಥೆಗಳಿಂದ ಅಸಂಖ್ಯ ಉದಾಹರಣೆಗಳನ್ನು ನಿ ಡಿದ್ದಾರೆ

ಆಡಿದನೋ ರಂಗ ಅದ್ಭುತದಿಂದಲಿ ಎಂದಪ್ಪಿಕೊಂಬೆ ರಂಗಯ್ಯನ ಬಣ್ಣಿಸಿ ಗೊಪಿ ಹರಸಿದಳು ಕೊಳಳನೂದುವ ಚದುರನ್ಯಾರೆ ! ಎಲ್ಲ್ಯಾಡಿ ಓಡಿ ಬಂದೆ ರಂಗಯ್ಯ ? ಪೋಗದಿರಲೋ ರಂಗ ಬಾಗಿಲಿಂದಾಚೆಗೆ ನಂಬಿಸಿ ಪೊದ ರಂಗಯ್ಯ ನಿನ್ನ ನಗಲಿ ಪೋಗಲ ರೆವು ಸದ್ದು ಮಾಡಬೇಡ ನಿನ್ನ ಕಾಲಿಗೆ ಬಿದ್ದು ಬೇಡಿಕೊಂಬೆ ರಂಗಯ್ಯ ಮನೆಗೆ ಬಾರೋ ಕೃಷ್ಣಮೂರ್ತಿ ಕಣ್ಣ ಮುಂದೆ ನಿಂತಿದಂತಿದೆ ಕೃಷ್ಣಾ ನೀ ಬೇಗನೆ ಬಾರೋ ಧನ್ಯನಾದೆ ವಿರಲನ ಕಂಡು ಪರದೆ ಶಿ ನೀನು ಸ್ವದೇಶಿ ನಾನು ನಾ ನಿನ ಧ್ಯಾನದೊಳಿರಲು ಮಿಕ್ಕ ಮಾನವರೇನ ಮಾಡುವರೋ ಕರುಣಾಕರ ನೀನೆಂಬುವದೇತಕೋ ? ಮೊದಲಾದ ಹಾಡುಗಳು ನೃತ್ಯ ಸಂಯೋಜನೆಯಲ್ಲಿ ಅಪೂರ್ವವಾಗಿ ಶೋಭಿಸುತ್ತವೆ

ಪುರಂದರದಾಸರ ಹಾಡುಗಳೇ ಆಗಲಿ ಇತರ ದಾಸರ ಹಾಡುಗಳೇ ಆಗಲಿ ನೃತ್ಯೋದ್ದೇಶದಿಂದ ರಚಿತವಾದವುಗಳಲ್ಲ ಅವುಗಳ ಉದ್ದೇಶ ಭಗವನ್ನಾಮ ಸಂಕೀರ್ತನೆ ವಂದನೆ ಆರ ಧನೆ ಆದರೆ ಈ ಹಾಡುಗಳನ್ನು ಹಾಡುವಲ್ಲಿ ದಾಸರು ಕಾಲಿಗೆ ಗೆಜ್ಜೆ ಕಟ್ಟಿಕೊಂಡು ಭ ವಪರವಶರ ಗಿ ತಮ್ಮನ್ನು ತಾವು ಮರೆತು ಕುಣಿದರು

ಆದ ದರಿಂದ ಪದಗತಿಗೆ ಈ ಹಾಡ ಗಳ ಲಯ ತಾಳಗಳು ಅನನ್ಯವಾಗಿ ಹೊಂದಿಕೊಳ್ಳುತ್ತವೆ ವಿಷಯ ಗ್ರಹಣಕ್ಕೆ ಶ್ರವಣೇಂದ್ರಿಯವನ್ನು ಮಾತ್ರ ಅವಲಂಬಿಸುವುದರ ಬದಲು ನಾಟ್ಯವಾಗಿ ಕಾಣಿಸಿದಲ್ಲಿ ಚಾಕ್ಷುಷವಾಗಿ ಹೆಚ್ಚಿನ ಪ್ರಭಾವವನ್ನು ಮನಗಾಣಲು ಸಾಧ್ಯವಾಗ ತ್ತದೆ ಎಂಬುದರಿಂದ ನಾಟ್ಯವಿದರು ದಾಸರ ಹಾಡುಗಳನ್ನು ನೃತ್ಯ ಸಂಯೋಜನೆಗೆ ಬಳಸಿಕೊಂಡರು ಗೀತ ವಾದ್ಯಗಳ ಸಂಗೀತದಲ್ಲಿ ನೃತ್ಯವನ್ನೂ ಸೇರಿಸಿದರು ಆಗ ಕೀರ್ತನೆಗಳ ಭಾವ ಇನ್ನಷ್ಟು ಸಶಕ್ತವಾಗಿ ಅಭಿವ್ಯಕ್ತವಾಯಿತು ಪರಿಣಾಮ ಅಮೋಘವಾಯಿತು ದ ಸರ ಕೀರ್ತನೆಗಳೂ ನೃತ್ಯದಲ್ಲಿ ಬಳಕೆಯಾಗಿ ಅಲ್ಲಿ ತಮ್ಮ ಸ್ಥಾನವನ್ನು ಭದ್ರಪಡಿಸಿಕೊಂಡವು ಹಾಗಾಗಿ ಈಗ ದಾಸರ ಕೀರ್ತನೆಗಳು ನಾಟ್ಯ ಪ್ರದರ್ಶನದಲ್ಲಿ ಹೊರತು ಪಡಿಸಲಾರದ ಅಂಗವಾಗಿ ಸೇರಿಕೊಂಡ ದು ಮಾತ್ರವಲ್ಲ ಅತ್ಯಾವಶ್ಯಕವಾದ ಅಂಗವೂ ಆಗಿವೆ ಪರಿಣಾಮವಾಗಿ ಕೀರ್ತನೆಗಳು ನೃತ್ಯರಂಗಕ್ಕೆ ದಾಸರ ಅಪೂರ್ವ ಕೊಡ ಗೆಗಳಾಗಿ ಕಂಗೊಳಿಸುತ್ತಿವೆ

---

# ದಾಸಸಾಹಿತ್ಯ ಕೃತಿಗಳ ವಿಮರ್ಶೆ

**ಚಂದ್ರಮತಿ ಸೋಂದಾ**

ಕನ್ನಡ ಸಾಹಿತ್ಯದ ಈ ವರೆಗಿನ ಇತಿಹಾಸವನ್ನು ಗಮನಿಸಿದಾಗ ಅದು ಧರ್ಮದ ಅಂಗವಾಗಿಯೇ ಬೆಳೆಯುತ್ತ ಬಂದಿರುವುದನ್ನು ಕಾಣುತ್ತೇವೆ ಕನ್ನಡ ಸಾಹಿತ್ಯ ಆರಂಭದಿಂದ ಅಂದರೆ ಕ್ರಿ ಶ 10ರಿಂದ 12ನೇ ಶತಮಾನದ ವರೆಗೆ ಜೈನ ಧರ್ಮದ ಹಿನ್ನೆಲೆಯಲ್ಲಿ ರೂಪುಗೊಂಡಿತು ಅನಂತರದ ಶತಮಾನಗಳಲ್ಲಿ ವೀರಶೈವ ಹಾಗೂ ವೈಷ್ಣವ ಧರ್ಮಗಳು ಸಾಹಿತ್ಯಸೃಷ್ಟಿಗೆ ಮೂಲ ಪ್ರೇರಣೆಯನ್ನು ನೀಡುತ್ತ ಬಂದವು ಆ ದಿಶೆ ಆರಂಭದ ಕಾಲದಿಂದಲೂ ಧರ್ಮದೃಷ್ಟಿಯೇ ಸಾಹಿತ್ಯ ಸೃಷ್ಟಿಗೆ ಕಾರಕವೂ ಪ್ರೇರಕವೂ ಆಗುತ್ತ ಬಂದಿದೆ

ಈಗ ಉಪಲಬ್ಧವಿರುವ ಮಟ್ಟಿಗೆ ಕನ್ನಡ ಪ್ರಾಚೀನ ಕೃತಿಗಳು ಎಂದರೆ ಸುಮಾರು ಕ್ರಿ ಶ 850 ರ ಕವಿರಾಜಮಾರ್ಗ ಹಾಗೂ ಕ್ರಿ ಶ 920 ರ ವಡ್ಡಾರಾಧನೆ ಕವಿರಾಜಮಾರ್ಗ ಕಾವ್ಯ ತತ್ತ್ವಗಳನ್ನು ತಿಳಿಸುವಂತಹುದಾದರೆ ವಡ್ಡಾರಾಧನೆ ಹತ್ತೊಂಬತ್ತು ಜೈನ ಧಾರ್ಮಿಕ ಕತೆಗಳನ್ನೊಳಗೊಂಡ ಕೃತಿ ಅದಕ್ಕೂ ಹಿಂದಿನ ಶಾಸನ ಸಾಹಿತ್ಯ ಕೂಡ ಧರ್ಮದ ಅಂಗವಾಗಿಯೇ ರೂಪುಗೊಂಡಿದ್ದು ಈಗ ಉಪಲಬ್ಧವಿರುವಂತೆ ಕನ್ನಡದ ಮೊದಲ ಶಾಸನವಾದ ಕ್ರಿ ಶ 450 ರ ಹಲ್ಮಿಡಿ ಶಾಸನ ನಂತರದ ಬಾದಾಮಿ ಶಾಸನ (ಕಪ್ಪೆ ಅರಭಟ್ಟ) ಸಿರಿಗುಂದದ ಶಾಸನ ಕ್ರಿ ಶ 700ರ ಶ್ರವಣಬೆಳಗೊಳ ಶಾಸನ-27 ಮೊದಲಾದ ಶಾಸನಗಳ ಉದ್ದೇಶವೂ ಧರ್ಮವನ್ನು ನೆಲೆಗೊಳಿಸುವುದೇ

ಕ್ರಿ ಶ 940ರಲ್ಲಿ ಆಗಿಹೋದ ಪಂಪ ಕನ್ನಡದ ಆದಿಕವಿ ಪಂಪ ಹಾಗೂ ಅವನ ನಂತರದ 1150ರವರೆಗಿನ ಕವಿಗಳೆಲ್ಲ ಜೈನಧರ್ಮದ ಹಿನ್ನೆಲೆಯಲ್ಲೇ ಸಾಹಿತ್ಯವನ್ನು ಸೃಷ್ಟಿಸುತ್ತ ಬಂದವರು ಆ ಕಾಲವನ್ನು ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಚಂಪೂಯುಗವೆಂದು ಗುರುತಿಸಲಾಗಿದೆ ಆ ಚಂಪೂಯುಗದ ಸಾಹಿತ್ಯ ಕೃತಿಗಳೆಲ್ಲ ಮಹಾಭಾರತ ರಾಮಾಯಣ ತೀರ್ಥಂಕರರ ಚರಿತ್ರೆಯನ್ನು ಆಧಾರವಾಗುಳ್ಳ ಕೃತಿಗಳು ಅಂದರೆ ವಸ್ತುನಿಷ್ಠ ಕೃತಿಗಳು ಅಂತಹ ಕೃತಿಗಳಲ್ಲಿ ಕವಿಗೆ ಹೆಚ್ಚಿನ ಪ್ರತಿಭೆಗಾಗಲಿ ಸ್ವಾತಂತ್ರ್ಯಕ್ಕಾಗಲಿ ಅವಕಾಶವಿರಲಿಲ್ಲ ಆ ಮಿತ ಚೌಕಟ್ಟಿನೊಳಗೇ ಕವಿ ಏನಿದ್ದರೂ ತನ್ನ ಸ್ವೋಪಜ್ಞತೆಯನ್ನು ಮೆರೆಸಬೇಕಾಗಿತ್ತು ಪುರಾಣ ಕಾವ್ಯಗಳಲ್ಲಿ ಈ ಸ್ವಾತಂತ್ರ್ಯವೂ ಮೊಟಕಾಗುತ್ತಿತ್ತು ಇದಕ್ಕೆ ಪಂಪನ ಕೃತಿಗಳು ಉತ್ತಮ ನಿದರ್ಶನ ಪಂಪ ಭಾರತದಲ್ಲಿ ಅವನು ಏರಿದ ಎತ್ತರವನ್ನು ಆದಿಪುರಾಣ

ದಲ್ಲಿ ಏರಲಾಗಿಲ್ಲ. ಆ ಕಾಲದ ಎಲ್ಲ ಸಾಹಿತ್ಯ ಕೃತಿಗಳನ್ನು ಗಮನಿಸಿದಾಗ ನಮಗೆ ಈ ಮಾತು ಇನ್ನಷ್ಟು ಸ್ಪಷ್ಟವಾಗುತ್ತದೆ.

ಆ ನಂತರದ ದಿನಗಳಲ್ಲಿ ಚಂಪೂಯುಗದ ಶೈಲಿ ಗ್ರಾಂಥಿಕ, ಕೃತಕ ಎನಿಸಿದ್ದರಿಂದ ಸಾಹಿತ್ಯ ಕ್ಷೇತ್ರದಲ್ಲಿ ಮಹತ್ತರವಾದ ಅಷ್ಟೇ ಕ್ರಾಂತಿಕಾರಕವಾದ ಬದಲಾವಣೆ ಆಯಿತು. ಕ್ರಿ.ಶ. 1150 ರ ನಂತರದಲ್ಲಿ ಅನುಭಾವ ಸಾಹಿತ್ಯದ ಸೃಷ್ಟಿಯಾಯಿತು. ಈ ಅನುಭಾವ ಸಾಹಿತ್ಯ ಧಾರ್ಮಿಕ, ಸಾಮಾಜಿಕ, ಭಾಷಿಕ ಹಾಗೂ ಛಂದಸ್ಸಿನ ಕ್ರಾಂತಿಯ ಅಂಗವಾಗಿ ಉದಯಿಸಿದ್ದು. ಈ ಸಾಹಿತ್ಯ ಆದುವರೆಗೆ ಉಚ್ಛ್ರಾಯ ಸ್ಥಿತಿಯಲ್ಲಿದ್ದ ಜೈನ ಧರ್ಮವನ್ನು ಹಿಮ್ಮೆಟ್ಟಿಸಿ ವೀರಶೈವ ಧರ್ಮವನ್ನು ಎತ್ತಿ ಹಿಡಿಯಿತು. ಸಮಾಜದಲ್ಲಿದ್ದ ಮೇಲು ಕೀಳು ಭಾವನೆಯನ್ನು ತೊಲಗಿಸಿ ಸರ್ವೋದಯದ ತತ್ತ್ವವನ್ನು ಪಾಲಿಸಿತು. ಪಾಂಡಿತ್ಯಪೂರ್ಣವಾದ ಚಂಪೂಶೈಲಿಯಿಂದ ಬಿಡಿಸಿಕೊಂಡು ಸಾಮಾನ್ಯರಿಗೂ ಅರ್ಥವಾಗುವಂತಹ ವಚನ, ರಗಳೆ, ಷಟ್ಪದಿಗಳನ್ನು ಮಾಧ್ಯಮವಾಗಿ ಅಳವಡಿಸಿಕೊಂಡಿತು. ಸಂಸ್ಕೃತ ಭೂಯಿಷ್ಠ ಪ್ರೌಢ ಭಾಷೆಯಿಂದ ಸರಳ ಕನ್ನಡಕ್ಕೆ ಮಾರ್ಪಾಡಾಯಿತು. ಮಾರ್ಗಶೈಲಿಗೆ ಬದಲು ದೇಸೀ ಶೈಲಿ ರೂಪುಗೊಂಡಿತು. ವಸ್ತುನಿಷ್ಠತೆಯಿಂದ ವ್ಯಕ್ತಿನಿಷ್ಠತೆಗೆ ಪ್ರಾಧಾನ್ಯ ದೊರಕಿತು. ಈ ಕಾರಣಗಳಿಂದಾಗಿ ಪಂಡಿತ ಮಂಡಲಿಯ ಸ್ವತ್ತಾಗಿದ್ದ ಸಾಹಿತ್ಯ ಜನತೆಯನ್ನು ತಲುಪುವಂತಾಯಿತು. 'ಲಿಂಗಾನುಭವಿಗಳ ಸಂಗದಿಂದಾನು ಕೆಟ್ಟೆರೆದೆನು' ಎಂದು ಪ್ರಭುದೇವ. 'ಎನಗೆ ನಮ್ಮ ಕೂಡಲ ಸಂಗಮ ದೇವರ ನೆನೆವ ಚಿಂತೆ' ಎನ್ನುವ ಬಸವಣ್ಣ. 'ಚೆನ್ನಮಲ್ಲಿಕಾರ್ಜುನನಲ್ಲದೆ ಅನ್ಯಕ್ಕೆಳಸದು ಎನ್ನ ಮನ' ಎಂದ ಮಹಾದೇವಿಯಕ್ಕ ಮೊದಲಾದವರೆಲ್ಲ ಅನುಭಾವ ಸಾಹಿತ್ಯ ರಚಿಸಿದ ಶಿವಶರಣ ಶರಣೆಯರು. ಇವರ ಸಾಹಿತ್ಯವೆಲ್ಲ ವಚನದ ರೂಪದಲ್ಲಿರುವುದರಿಂದ ಅದಕ್ಕೆ ವಚನ ಸಾಹಿತ್ಯ ಎಂಬ ಹೆಸರೇ ರೂಢಿಯಲ್ಲಿದೆ. 'ಈಶ್ವರಂಗೆಯ್ದ ನಾಲಿಗೆಯ ಂ ಪಕಾರಿದಂ' ಎಂದ ರಗಳೆಯ ಕವಿ ಹರಿಹರ. 'ಹಂಪೆಯರಸನ ಹೊಗಳುವ ನಾಲಿಗೆಯಿಂ ಅನ್ಯದೈವವ ಭವಿಗಳಂ ಕೀರ್ತಿಸಿದೆನಾದೊಡೆ ಮಸಿ ಜಾರಿಯ ಭಕ್ತನಲ್ಲಿ' ಎಂದ ಷಟ್ಪದಿ ಜನಕ ರಾಘವಾಂಕ ಈ ಕಾಲದ ಮಹತ್ತರ ಕವಿಗಳು. ಮುಂದೆ 15-16ನೇ ಶತಮಾನಗಳಲ್ಲಿ ಹರಿದಾಸರು ಯಾವ ಕೀರ್ತನ ಸಾಹಿತ್ಯ ಪ್ರಕಾರದಿಂದ ಇಡೀ ಭಾರತದ ಸಂಗೀತ ಮತ್ತು ಸಾಹಿತ್ಯ ಪ್ರಪಂಚಗಳೆರಡರಲ್ಲೂ ಅದ್ವಿತೀಯ ಕೀರ್ತಿಯನ್ನು ಗಳಿಸಿದರೋ ಆ ಕೀರ್ತನ ಪ್ರಕಾರಕ್ಕೆ 12ನೇ ಶತಮಾನದ ಬಸವಾದಿ ಶಿವದಾಸರ ಈ ದೀತಾ (ಹಾಡುಗಳು) ಪ್ರಕಾರವು ಮೂಲವೂ ಮಾದರಿಯೂ ಆಗಿದ್ದವು.[1]

## ದಾಸ ಸಾಹಿತ್ಯದ ಹಿನ್ನೆಲೆ ಮತ್ತು ಉಗಮ

ಮಧ್ವಾಚಾರ್ಯರ ಉಪದೇಶ ಪರಂಪರೆಗೆ ಮತ್ತು ತತ್ತ್ವ ಸಿದ್ಧಾಂತಕ್ಕೆ ಆಯಾ ಕಾಲದ ಸಾಮಾಜಿಕ ಸನ್ನಿವೇಶಗಳೇ ಪ್ರಬಲ ಕಾರಣ. ಮಧ್ವ ಮತವೂ ಕೂಡ ಈ

ದಿಶೆಯಲ್ಲೇ ಜನ್ಮ ತಾಳಿದ್ದು ಬೌದ್ಧ ಹಾಗೂ ಜೈನ ಸಿದ್ಧಾಂತದ ಪ್ರವಾಹದೆದುರು ವೈದಿಕ ಸಿದ್ಧಾಂತವನ್ನು ನಿಲ್ಲಿಸಲಿಕ್ಕಾಗಿ ಹುಟ್ಟಿ ಬಂದವು ಮಧ್ವ ಹಾಗೂ ರಾಮಾನುಜ ಸಿದ್ಧಾಂತಗಳು ವಿಷ್ಣುವೇ ಅವೇ ಬೆಳೆದು ಒಂದು ಪಂಥವಾಗಿ ಭಕ್ತಿ ಪಂಥದ ಹೆಸರನ್ನು ಪಡೆದವು ರಾಮಾನುಜರು ನಾರಾಯಣನೇ ಸರ್ವೋತ್ತಮನೆಂದೂ ನಿಂಬಾರ್ಕನು ಕೃಷ್ಣನೇ ದೇವತೆಯೆಂದೂ ಆನಂದತೀರ್ಥರು ವಿಷ್ಣುವೇ–ಹರಿಯೇ ಪರತರ ವಸ್ತುವೆಂದು ಘೋಷಿಸಿದ ಮೇಲೆ ಮಧ್ವಾಚಾರ್ಯರು ಕೃಷ್ಣನನ್ನು ಉಡುಪಿಯಲ್ಲಿ ನಿಲ್ಲಿಸಿದ ಮೇಲೆ ಭಕ್ತಿ ಪಂಥ ಸೆಲೆಯೊಡೆದು ದೇಶದ ನಾನಾ ಮೂಲೆಗಳಿಗೆ ಹರಿದು ವಿಷ್ಣು ಸ್ವರೂಪಿಯಾದ ಕೃಷ್ಣರಾಯರ ಪೂಜೆ–ಉಪಾಸನೆ ವ್ಯಾಪಿಸಿತು [2] ಹೀಗೆ ಕರ್ನಾಟಕದಲ್ಲಿ ಭಕ್ತಿ ಪಂದದ ಸಾಹಿತ್ಯವಾಗಿ ಸುಮಾರು 15 ನೇ ಶತಮಾನದಲ್ಲಿ ಜನಿಸಿದ್ದು ದಾಸಸಾಹಿತ್ಯ

ವಚನ ಸಾಹಿತ್ಯದ ನಂತರದಲ್ಲಿ ಬಂದ ದಾಸ ಸಾಹಿತ್ಯ ಹಾಗೂ ವಚನ ಸಾಹಿತ್ಯಗಳ ನಡವೆ ಕೆಲವಂಶಗಳಲ್ಲಿ ಸಾಮ್ಯತೆಯಿದ್ದರೂ ಮೂಲ ಭೂತವಾದ ವ್ಯತ್ಯಾಸವಿದೆ ವಚನ ಸಾಹಿತ್ಯ ಧರ್ಮ ಸಮಾಜ ಮೂಢನಂಬಿಕೆ ವ್ಯವಸ್ಥೆಗಳ ವಿರುದ್ಧದ ಹೋರಾಟದ ಹಿನ್ನೆಲೆಯಿಂದ ಹುಟ್ಟಿದ್ದು ಆದರಿಂದಾಗಿ ಎಲ್ಲ ವರ್ಗಗಳ ಜನರ ಭಾವನೆಗಳಿಗೆ ಸಮರ್ಥ ಅಭಿವ್ಯಕ್ತಿ ದೊರೆತಿದೆ ಆದರೆ ದಾಸ ಸಾಹಿತ್ಯ ಮಾಧ್ವತತ್ತ್ವಗಳ ಹಿನ್ನೆಲೆಯಿಂದ ಜನಿಸಿದ್ದರಿಂದ ಇಲ್ಲಿ ಕೇವಲ ಮೇಲು ವರ್ಗದ ಜನರ ಅಭಿವ್ಯಕ್ತಿಗಷ್ಟೇ ಅವಕಾಶ ದೊರಕಿದೆ (ಕನಕದಾಸರೊಬ್ಬರನ್ನು ಬಿಟ್ಟು) ಮಧ್ವಾಚಾರ್ಯರು 13 ನೇ ಶತಮಾನದಲ್ಲೇ ಆಗಿ ಹೋದವರಾದರೂ ಅವರ ತತ್ತ್ವ ಹೆಚ್ಚು ಪ್ರಚಾರಕ್ಕೆ ಒಂದಿದ್ದು 15–16ನೇ ಶತಮಾನಗಳ ಕನ್ನಡ ಸಾಹಿತ್ಯದಲ್ಲಿ 13–14 ನೇ ಶತಮಾನಗಳಲ್ಲಿ ಅವರ ತತ್ತ್ವಗಳನ್ನು ಕುರಿತ ಟೀಕೆ ಟಿಪ್ಪಣಿಗಳು ಸಿದ್ಧಾಂತಗಳು ಖಂಡನೆ ಮಂಡನೆಗಳು ಸಂಸ್ಕೃತದಲ್ಲಿ ಸಾಕಷ್ಟು ಪ್ರಮಾಣದಲ್ಲಿ ನಡೆದಿದ್ದವು ಹರಿಯೇ ಸರ್ವೋತ್ತಮ ಎಂದು ನಂಬಿದ ಹರಿದಾಸರಿಗೆ ತಿಳಿಯಿ ಹೇಳುವ ಕೃಷ್ಣಚರಿತೆಯು ಎಂದು ಕನ್ನಡದಲ್ಲಿ ಕೃತಿ ರಚನೆ ಮಾಡಿದ ಕುಮಾರವ್ಯಾಸನ ಕೃತಿಯ ಎತ್ತರ ಬಿತ್ತರಗಳೂ ಮಹತ್ವಾ ಗೋಚರಿಸಿರಬೇಕು ಹಾಗಾಗಿ ಇವರೂ ಆ ನಂತರದಲ್ಲಿ ಕನ್ನಡದಲ್ಲಿ ಕೃತಿ ರಚನೆಗೆ ತೊಡಗಿರಬೇಕು

ಹೀಗೆ ರಚನೆಗೊಂಡ ಸಾಹಿತ್ಯ ಪ್ರಕಾರಕ್ಕೆ ದಾಸರ ಪದಗಳು ಅಥವಾ ಕೀರ್ತನೆಗಳೆಂಬ ಹೆಸರು ಬಂತು ಕನ್ನಡದಲ್ಲಿ ಕೀರ್ತನೆ ಅಥವಾ ಪದ ಎಂಬ ದೇನೂ ಹೊಸದಲ್ಲ ವೈದಿಕ ಪರಂಪರೆಯಿಂದ ಅದು ಬಂದದ್ದೆಂಬುದು ದೂರದ ಮಾತು ಕನ್ನಡದ ಮಟ್ಟಿಗೆ ಹಾಡು ಮೆಲ್ವಾಡು ಬಾಜನೆಗಬ್ಬಗಳಿದ್ದುವು ಆಮೇಲೆ ಶಿವಶರಣರಲ್ಲಿ ಕೆಲವರು ಪದಗಳನ್ನು ಹಾಡಿದರು ಅದೇ ಹರಿದಾಸರ ಬಾಯಲ್ಲಿ ಕೀರ್ತನೆ ಅಂದರೆ ಹರಿಸ್ತುತಿ ಪರವಾದ ಹಾಡಾಯಿತು ಸಂಗೀತದಲ್ಲಿ ಪ್ರಮಾಣ ಸ್ವರೂಪ ಪಡೆಯಿತು [3]

## ದಾಸ ಸಾಹಿತ್ಯದ ಸ್ವರೂಪ

ವೇದ ಉಪನಿಷತ್ತು ಶಾಸ್ತ್ರ ಸಂಸ್ಕೃತ ಸುಭಾಷಿತಗಳಲ್ಲಿರುವ ತತ್ತ್ವಗಳನ್ನು ಜನಸಾಮಾನ್ಯರಿಗಾಗಿ ಸರಳವಾದ ಶೈಲಿಯಲ್ಲಿ ಕನ್ನಡದಲ್ಲಿ ತಿಳಿಸಲು ರೂಪುಗೊಂಡಿದ್ದು ದಾಸ ಸಾಹಿತ್ಯ ಹರಿದಾಸರೆಲ್ಲ ಮಧ್ವಾಚಾರ್ಯರ ತತ್ತ್ವಗಳ ಹಿನ್ನೆಲೆಯಿಂದ ಬಂದು ಹರಿಯೆ ಸರ್ವೋತ್ತಮ ಎಂದು ನಂಬಿದ್ದರಿಂದ ಭಗವದ್ಭಕ್ತಿ ಈ ಸಾಹಿತ್ಯದ ಪ್ರಧಾನ ಗುಣವಾಗಿದೆ ಹರಿದಾಸರ ಕೀರ್ತನೆಗಳೆಲ್ಲ ಸಾಹಿತ್ಯ ರಚನೆಯ ಉದ್ದೇಶದಿಂದ ರಚನೆಯಾದವಲ್ಲ ಅವೆಲ್ಲ ದೈನಂದಿನ ಆಗುಹೋಗುಗಳಿಗೆ ಪಡಿಮಿಡಿದ ಪ್ರತಿಕ್ರಿಯೆಗಳ ಆಶು ಕವಿತೆಗಳು ಸಮಾಜದ ಹಿತ ಕನ್ನಡ ಕೀರ್ತನಕಾರರ ಸಾಹಿತ್ಯೋದ್ದೇಶದ ಪ್ರಮುಖ ಸ್ಫೂರ್ತಿ ಹೇಗೆ ಬದುಕಿದರೆ ಹಿತ ಎಂಬುದನ್ನು ಇಡೀ ಸಮಾಜಕ್ಕೆ ಬೋಧಿಸುವ ಅನಿವಾರ್ಯತೆ ಸೂಕ್ಷ್ಮರೂ ಭಾವುಕರೂ ವಿಚಾರಿಗಳೂ ಆದ ಅವರ ಸೃಷ್ಟಿ ಶಕ್ತಿಯ ಮುಖ್ಯವಾದ ಪ್ರಚೋದನ ಶಕ್ತಿಯಾಗಿ ಒದಗಿತು ' ಕೀರ್ತನೆ ಸುಳಾದಿ ಉಗಾಭೋಗಗಳನ್ನು ಅವರು ತಮ್ಮ ಮಾಧ್ಯಮವಾಗಿ ರೂಢಿಸಿಕೊಂಡು ಲಲಿತ ಮಂದಾನಿಲ ಉತ್ಸಾಹ ಲಯಗಳಲ್ಲಿ ಗೀತೆಗಳನ್ನು ರಚಿಸಿದರು ಅಲ್ಲಲ್ಲಿ ಆದಿಪ್ರಾಸದ ಶೈಥಿಲ್ಯವಿದ್ದರೂ ಅಂತ್ಯಪ್ರಾಸ ಸಾಮಾನ್ಯ ಈ ಹಾಡುಗಳ ಭಾಷೆಯೂ ಕೂಡ ಆಡುನುಡಿಗೆ ಸಮೀಪವಾದ್ದು ದಾಸಸಾಹಿತ್ಯ ಕೀರ್ತನೆ ಸುಳಾದಿ ಉಗಾಭೋಗ ಈ ಮುಖ್ಯರೂಪಗಳಲ್ಲಿವೆ ವಿಷಯಾನುಗುಣವಾದ ರೂಪವನು ಆಯ್ದುಕೊಳ್ಳುವ ರೀತಿಯಲ್ಲಿ ಅದು ಭಾವಗೀತೆಯ ಲಕ್ಷಣವನ್ನು ಸ್ವೀಕರಿಸಿದೆ ಸ್ವಯಂಪೂರ್ಣವಾದ ಏಕಮೇವ ಭಾವದ ನಿರೂಪಣೆಯಿಂದಲೂ ಭಾವಗೀತೆಯ ಸ್ವರೂಪ ತಾಳಿದೆ ಕೀರ್ತನೆಯಲ್ಲಿ ರಾಗ–ತಾಳ ಬದ್ಧವಾಗಿ ಪಲ್ಲವಿ ಅನುಪಲ್ಲವಿ ನುಡಿಗಳ ಯೋಜನೆಯಿರುತ್ತದೆ ಕೊನೆಯ ನುಡಿಯಲ್ಲಿ ದಾಸನ ಅಂಕಿತವಿರುತ್ತದೆ ಮಾತ್ರೆಗಿಂತ ಲಯಕ್ಕೆ ಪ್ರಾಧಾನ್ಯವಿದ್ದರೂ ಕೆಲವು ಸಲ ಎರಡೂ ಹೊಂದಿಕೊಳ್ಳಬಹುದು

ಹರಿಯೇ ಪರದೈವವೆಂದು ನಂಬಿದ ಹರಿದಾಸರ ಕೃತಿಗಳಲ್ಲಿ ಹರಿಸರ್ವೋತ್ತಮತ್ವ ಹರಿನಾಮ ಮಹತ್ವ ಹರಿದಾಸರ ಮಹಿಮೆ ಹಾಗೂ ಆತ್ಮಶೋಧನೆ ಮುಖ್ಯವಾದ ಅಂಶಗಳು ಹೀಗೆ ದಾಸರು ಹರಿಯನ್ನು ಹಾಡಿಹೊಗಳಿದ ಬಗೆಯನ್ನು ವಿದ್ವಾಂಸರು ಪಂಚಭಾವಗಳೆಂದು ಗುರುತಿಸಿದ್ದಾರೆ ಈ ಪರಿಯ ಸೊಬಗಾವ ದೇವರಲಿ ನಾ ಕಾಣೆ ಎಂದು ಪರಿಭಾವಿಸುವ ಶಾಂತ, ಎನಗೂ ಆಣೆ ರಂಗ ನಿನಗೂ ಆಣೆ ಎಂದು ಸಮಾನವಾಗಿ ಕಾಣುವ ಸಖ್ಯ ದಾಸನ ಮಾಡಿಕೊ ಎಂದು ದೈನ್ಯದಿಂದ ಬೇಡುವ ದಾಸ್ಯ ಎತ್ತ ಪೋದನೆ ಗೆಳತಿ ಚಿತ್ತಚೋರ ಚೆಲುವರಸ ಎನ್ನುವ ಮಧುರ ಪೋಪು ಹೋಗೋಣ ಬಾರೊ ರಂಗ ಎನ್ನುವಂತಹ ಯಶೋದ ಕೃಷ್ಣರ ವಾತ್ಸಲ್ಯ ಇವೇ ಆ ಪಂಚಭಾವಗಳು

ದಾಸ ಸಾಹಿತ್ಯದ ಪರಂಪರೆಯಲ್ಲಿ ನೂರ ರು ಜನ ಹರಿದಾಸರು ಆಗಿಹೋಗಿದ್ದಾರೆ ಅವರೆಲ್ಲರ ಕೃತಿಗಳೂ ಈಗ ಉಪಲಬ್ಧ ವಿಲ್ಲ ಈಗ ವಿಸಲಬ್ಧ ವಿರುವ ದಾ^ರ ಕೃತಿಗಳಲ್ಲಿ, ಹತ್ತು ಹನೆ ರಡು ದಾಸರ ಕೃತಿಗಳನ್ನು ಮಾತ್ರ ಪ್ರಾತಿನಿಧಿಕವಾಗಿ ಆರಿಸಿಕೊಳ್ಳಲಾಗಿದೆ ಅಭ್ಯಾಸದ ಅನ ಕೂ೨ದ ದೃಷ್ಟಿಯಿಂದ ಈ ಪರಂಪರೆಯನ್ನು ಎರಡು ಘಟ್ಟಗಳಲ್ಲಿ ವಿಂಗಡಿಸಿಕೊಳ್ಳಲಾಗಿದೆ

ದಾಸ ಸಾಹಿತ್ಯದ ಮೂ೨ ಪುರ ಷರನ್ನು ಕುರಿತಂತೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯವಿದೆ 13ನೇ ಶತಮಾನದ ಕೊನೆಯ ಭಾಗದಲ್ಲಿ ಆಗಿಹೋದ ನರಹರಿ ತೀರ್ಥರೇ ದಾಸಸಾಹಿತ್ಯದ ಮೂಲ ಪುರುಷರು ಎಂಬುದು ಕೆಲವು ವಿದ್ವಾಂಸರ ಅಭಿಪ್ರಾಯ ಎಂತು ವ ರ ಳಾದೆ ನಾನೆಂತು ಮರುಳಾದೆ ಹರಿಯೆ ಇದು ಸರಿಯೆ ಎಂದು ಪ್ರಾರಂಭವಾಗುವ ಎರಡು ಕಿ ರ್ತನೆಗಳು ನರಹರಿ ತೀರ್ಥರದೆಂದು ಬೇಲೂರು ಕೇಶವದಾಸರ ಅಭಿಪ್ರಾಯ[೬] ಮೊದಲ ಕೀರ್ತನೆಗೆ ರಘು ಪತಿ ಎಂದೂ ಎರಡನೇ ಕೀರ್ತನೆಗೆ ನರಹರಿ ಎಂದೂ ಅಂಕಿತವಿದೆ ಈ ಕೀರ್ತನೆಗಳ ಜೊತೆ ತಿಳಕೋ ನಿನ್ನೊಳಗೆ ನೀನೆ ವ ರ ಳೆ ಹಾಗೂ ಎದುರ್ಯಾರೋ ಗ ರ ವೆ ಸಮರ್ಯಾರೂ ಎಂಬ ಕೀರ್ತನೆಗಳೂ ಅವರದೇ ಎಂಬುರು ದಿ ಗೊರಬಾಳು ಹನುಮಂತರಾಯರ ಅಭಿಪ್ರಾಯ ಈ ಇಬ್ಬರು ವಿದ್ವಾಂಸರ ಅಭಿಪ್ರಾಯ ಗಳನೂ ಸಕಾರಣವಾಗಿ ಅಲ್ಲಗಳೆದ ಜಿ ವರದರಾಜರಾಯರು ಶ್ರೀಪಾದ ರಾಯ ರೇ ಹರಿದಾಸ ಸಾಹಿತ್ಯಪರಂಪರೆಯ ಮೂಲಪುರುಷರೆಂದು ಸ್ಥಾಪಿಸಿದ್ದಾರೆ [೭] ಅದಕ್ಕೆ ಅವರು ನೀಡಿರುವ ಕಾರಣಗಳು

1 ಈ ಹಾಡುಗಳಲ್ಲಿ ಪಲ್ಲವಿ ಅನುಪಲ್ಲವಿಗಳಿರ ವುದರಿಂದ ಇದು ನರಹರಿ–ತೀರ್ಥರದಲ್ಲ ಕಾರಣ ಅದು ವರೆಗಿನ ಕನ್ನಡ ತೆಲ ಗುಗಳ ಕೃತಿಗಳಲ್ಲಿ ತಮಿಳಿನ ತೇವಾರಂ ಮತ್ತು ಪ್ರಬಂಧಗಳಲ್ಲಿ ಜಯದೇವನ ಗೀತಗೋವಿಂದಗಳಲ್ಲಿ ಈ ಪ್ರಯೋಗವಿಲ್ಲ 15ನೇ ಶತಮಾನದಲ್ಲಿ ತೆಲುಗಿನ ತಾಳ್ಲಪಾಕಂ ಅನ್ನಮಾಚಾರ್ಯರ ಕೃತಿಗಳಲ್ಲಿ ಇದು ಮೊದಲಬಾರಿಗೆ ಕಂಡುಬರುತ್ತದೆ ಒಮ್ಮೆ ನರಹರಿತೀರ್ಥರಿಂದ ಪ್ರಯೊ ಗವಾಗಿದ್ದರೆ ಅಂದು ಇತರರ ಗಮನಕ್ಕೆ ಬಾರದೆ ಹೊ ಗುತ್ತಿರಲಿಲ್ಲ

2 ಯಾವ ಹರಿದಾಸರೂ ಪೂರ್ವ ರ್ಚಾರ್ಯರನು ಸ್ಮರಿಸುವಲ್ಲಿ ನರಹರಿ ತೀರ್ಥರನ್ನು ಸ್ಮರಿಸಿಲ್ಲ ನಂತರದವರನ್ನು ಸ್ಮರಿಸಿದ್ದಾರೆ

3 ಹರಿದಾಸರಲ್ಲಿ ಪುರಂದರ ದಾಸರೊಬ್ಬರು ನರಹರಿ ತೀರ್ಥರನ್ನು ಸ್ಮರಿಸಿದ್ದಾರೆ ಈ ಸ್ಮರಣೆಯಲ್ಲಿ ಅವರು ದ್ವೈತವೇದಾಂತದ ಸಾಮ್ರಾಜ್ಯದಲ್ಲಿ ಉನ್ನತಸ್ಥಾನ ಗಳಿಸಿದ್ದರ ಪ್ರಸ್ತಾಪವಿದೆಯೇ ವಿನಾ ಕನ್ನಡದಲ್ಲಿ ಕೃತಿ ರಚಿಸಿದ್ದರೆಂಬುದರ ಉಲ್ಲೇಖವಿಲ್ಲ

4 ನರಹರಿ ತೀರ್ಥರೇ ಆದ್ಯರಾಗಿದ್ದರೆ ಶ್ರೀಪಾದರಾಯ ರ ವರೆಗೆ ಈ ಪರಂಪರೆ ಏಕೆ ಸ್ಥಗಿತವಾಗಿತ್ತು ನಂತರದಲ್ಲಿ ಆದ ವಿಜಯದಾಸರು ಕೆಲವರನ್ನು ಆದ್ಯರೆಂದು ಹೆ ರಿಸಿದ್ದರೂ ಅವರೆಲ್ಲ ಪುರಂದರದಾಸರ ಸಮಕಾ ಲಿ ನರೆ ಆಗಿರಬಹ ದು ದ್ವಿತೀಯ ಘಟ್ಟದ ವಿಜಯದಾಸರಿಗೆ ಅವರು ಆದ್ಯರು ಅಷ್ಟೆ

ಈ ದೃಷ್ಟಿಯಿಂದ ಹರಿದಾಸ ಸಾಹಿತ್ಯದ ಎಲ್ಲ ಪ್ರಕಾರಗಳನೂ ಪ್ರಯೋಗ ನಡೆಸಿ ಜಯ ಶಾಲಿಗಳಾದ ಶ್ರೀಪಾದರಾಯರನ್ನು ಹರಿದಾಸ ಸ ಹಿತ್ಯದ ಮೂಲ ಪುರ ಷರೆ ದು ತೀರ್ಮಾನಿಸಲಾಗಿದೆ

## ಶ್ರೀಪಾದರಾಯರು — ಸು ಕ್ರಿ ಶ 1450

ಹರಿದಾಸ ಸಾಹಿತ್ಯದ ಪ್ರವರ್ತಕರಾದ ಶ್ರೀಪಾದರಾಯ ರು ಈ ಪರಂಪರೆಗೆ ಎಲ್ಲ ರೀತಿಯ ಸೂದರಿಗಳನ್ನೂ ರಚಿಸಿ ರಾಜಮಾರ್ಗವನ್ನು ನಿರ್ಮಿಸಿದವರು ಶ್ರೀಪಾದರಾಯ ರು ಮಾಧ್ವ ಪ ರಸ್ಥರಾದ ಯತಿಗಳ ಹರಿಸ್ತುತಿ ಭಕ್ತಿ ಪಾರಮ್ಯ ನಿ ತಿಬೋಧೆ ತತ್ತ್ವಪ್ರಚಾರಗಳು ಇವರ ಕೃತಿಗಳ ಮುಖ್ಯ ಲಕ್ಷಣ ಅವರು ಕೃಷ್ಣನ ಮಹಿಮೆಯನ್ನು ಕುರಿತಂತೆ ಗೋಪೀ ಗೀತ ವೇಣುಗೀತ ಭ್ರಮರಗೀತೆಗಳನ್ನೂ (ಭ್ರಮ ರ ಗೀತೆಯನೂ ಕುರಿತು ಭಿನಾ ಭಿಪ್ರಾಯವಿದೆ) ಮಧ್ವಾಚಾರ್ಯರನ್ನು ಕು ರಿತ ಮಧ್ವನಾಮ ವನ್ನೂ ರಚಿಸಿದ್ದಾರೆ ಕೀರ್ತನೆ ದಂಡಕ ಸು ಳಾದಿ ವೃತ್ತ ನಾಮ ಇವು ಅವರು ಆರಿಸಿಕೊಂಡ ಮಾಧ್ಯಮಗಳು ಪರಮಾತ್ಮನನ್ನು ತೊಟ್ಟಿಲಲ್ಲಿ ಮ ಲಗಿಸಿ ಹಾಡುವ ದೇವತೆಗಳ ವರ್ಣನೆ ಹರಿಯ ದಶಾವತಾರ ವರ್ಣನೆಗಳಿಂದ ಕೂಡಿದ ಲಾಲಿ ಪದವೂ ಅವರದೇ

ಕಂಗಳಿದ್ಯಾತಕೆ ಕಾವೇರಿ ರಂಗನ ನೋಡದ ಎಂದು ಹರಿಯ ರೂಪವನ್ನು ವರ್ಣಿಸಿರುವ ರಾಯರ ಭೂಷಣಕೆ ಭೂಷಣ ಇದು ಭೂಷಣ ಎನ್ನುವ ಹಾಡಿನಲ್ಲಿ ಹರಿನಾಮದಿಂದ ನಾಲಿಗೆ, ಹರಿಕೀರ್ತನೆಯಿಂದ ಕಿವಿ ಹೀಗೆ ಒಂದೊ ದೇ ಅಂಗಗಳು ನಾಮ ರೂಪ ಕೀರ್ತನೆಗಳಿಂದ ಪಡೆಯುವ ಸಾರ್ಥಕ್ಯವನ್ನು ತಿಳಿಸುತ್ತಾರೆ ಹರಿಭ ಕ್ತರ ಬಗೆಗೂ ಅಷ್ಟೇ ಅಭಿಮಾನ ಹಾಗಾಗಿ ಉತ್ತಮರ ಸಂಗ ಎನಗಿತ್ತು ಸಲಹೊ ಎಂಬ ಬೇಡಿಕೆ ದಾಸ ದೇವ ನಿನ್ನ ಮರ್ಮ ಕರ್ಮಂಗಳ ದೇಶದೇಶದಲ್ಲಿ ಪ್ರಕಟಿ ಸಲೆ ಎಂದು ಹರಿಗೇ ಸವಾಲೆಸೆಯ ುವ ಅವರು ನೀನೇ ಬಲ್ಲಿದನೊ ರಂಗ ನಿನ್ನ ದಾಸರು ಬಲ್ಲಿದರೊ ಎಂದು ಭಕ್ತರಾಧೀನನಾಗಿ ಹರಿ ಮಾಡಿದ ಕೆಲಸಗಳನ್ನು ಟೀಕಿಸು ವುದರ ಮೂಲಕ ದೇವನ ಮ ಹಿಮೆಯನು ಕೊಂಡಾಡುವ ರೀತಿ ವಿಶಿಷ್ಟವಾಗಿದೆ ಎಲ್ಲಾಡಿ ಬಂದ್ಯೋ ಎನ್ನ ರಂಗಯ್ಯ ಪೋಪು ಹೋಗೋಣ ಬಾರೊ ಮನೆಗೆ ಗೋವಿಂದ ಮೊದಲಾದ ಗೀತೆಗಳಲ್ಲಿ ಯಶೋ ದೆ ಕೃಷ್ಣರ ವಾತ್ಸಲ್ಯ ಕಾಣದೆ ನಿಲ ಲಾರೆ ಕಮನೀಯ ಮೂರುತಿ ಕೊಂಬು ಕೊಳಲನೂದುತ್ತ ನಂಬಿಸಿ ಪೋದನೆ

ಯವ್ವಾ ದಂತಹ ಗೀತೆಗಳಲ್ಲಿ ವ ಧುರ ಭಾವ ಚೆನಾ ಗಿ ಬಿಂಬಿತವಾಗಿದೆ ಅವರ ಭ್ರಮರ ಗೀತೆ ಕೃಷ್ಣ ಮಧ ರೆಗೆ ಹೋದ ವಿರಹದಲ್ಲಿದ್ದ ಗೋಪಿಕೆಯರು ಉದ್ಧವ ನನ್ನು ಅಕ್ರೂರನೆಂದು ಭಾವಿಸಿ ಆ ಮೇಲೆ ನಿಜವನ್ನು ಅರಿತು ಅವನೊಂದಿಗೆ ಸಂಭಾ ಷಿಸುತ್ತಿರುವಾಗ ಅಲ್ಲಿಗೆ ದುಂಬಿಯೊಂದು ಬರುತ್ತದೆ ಅದನು ಕೃಷ್ಣನ ದೂತನೆಂದೇ ಭಾವಿಸಿ ಗೋಪಿಕೆಯರು ತಮ್ಮ ವಿರಹ ನೊ ವುಗಳನ್ನು ತೊ ಡಿಂಕೊಳ್ಳುವ ಗಿ ತೆ

ಅಕಟಕಟ ಸಂಸಾರವನು ನೆಚ್ಚಿ ಕೆಡಬೇಡ ಕಾಳ ಬೆ ದಿಂಗಳು ಈ ಸಂಸಾರ ಕತ್ತಲು ಮುಂತಾದ ಗಿ ತೆಗಳಲ್ಲಿ ಸಂಸಾರದ ಕ್ಷಣಿಕತೆಯನ್ನು ಹೆ ಳಿದ್ದರೂ ಬದುಕನ್ನು ಸಂಪೂರ್ಣವಾಗಿ ತ್ಯಜಿಸಲಿಲ್ಲ ಗಳೆದವರಲ್ಲ ಸಂಸಾರದಲ್ಲಿ ಹೇಗೆ ಬದುಕಬೇಕು ಎಂದರೆ ಭಕ್ತಿ ಬೆ ಕು ವಿರಕ್ತಿ ಬೆ ಕು ಎಂದು ಸಂಸಾರಕ್ಕೆ ಪೂರ್ತಿಯಾಗಿ ಅಂಟಿಕೊಳ್ಳದೆ ಪರಿಶುದ್ಧತೆ ಯ ತ್ತ ಮುಖವಾಡಿ ವಹಾತೂ ಮನಸೂ ಒಂದಾಗಿ ಬಾಳಬೇಕು ಎಂದಿದ್ದಾರೆ

ಅವರ ಹ ಡುಗಳ ಪ್ರಧಾನ ಗುಣ ಭಾವ ನಿರ್ಭರತೆ ಸರಳತೆ ಸೂಕ್ಷ್ಮವಾದ ಭಾವಸ್ಪಂದನ ಹಾಗೂ ಕಾವ್ಯದ ಯತಿ ಆದರೂ ಪುರಂದರದಾಸರು ಹಾಗೂ ಕನಕ ದಾಸರ ಕೃತಿಗಳಲ್ಲಿ ಕಾಣ ವ ಸಾಹಿತ್ಯಿಕ ಸತ್ವವನ್ನು ಇಲ್ಲಿ ಕಾಣಲಾ ವು ಉಪಲಬ್ಧ ಕೃತಿಗಳಲ್ಲಿ ಅವನ ವ್ಯಕ್ತಿತ್ವ ಮಹಿಮೆಯ ಅಷ್ಟು ಮೂಡಿದೆಯಾದರೂ ಸಾಹಿತ್ಯದೃಷ್ಟಿ ಯಿಂದ ಅವು ಹಿರಿದಾಗಿದೆ ಎಂದು ಹೇಳಲಾಗದು • ಪ್ರಾಯಃಶಃ ಇದಕ್ಕೆ ಶ್ರೀ ಪಾದರಾಯ ರು ಭಜನೆಯ ಸಲ ವಾಗಿ ಕೀರ್ತನೆಗಳನು ರಚಿಸಿ ಹಾಡಿದ್ದು ಕಾರಣವಿರ ಬಹುದು ಆದರೂ ಪೂಜಾ ಕಾಲಕ್ಕೆ ಕನ್ನಡ ದೇವರನಾಮ ಹಾಡ ವುದನ್ನು ಬಳಕೆಗೆ ತಂದ ಹಿರಿಮೆ ಅವರದು

## ವ್ಯಾಸರಾಯರು —1500

ಶ್ರೀಪಾದರಾಯರ ಶಿಷ್ಯರಾಗಿ ಅವರಿಂದ ಮಧ್ವಮತದ ಸಾರವನು ತಿಳಿದು ಮರಸ್ಥರಾದ ವ್ಯಾಸರಾಯರು ದಾಸಕೂಟವನ್ನು ನಿರ್ಮಿಸ ವುದರ ಮೂಲಕ ಮಹ ತ್ವನ್ನೂ ಸಾಧಿಸಿದರು ದಾಸಕೂಟದ ಮೂಲಕ ಲೌಕಿಕರ ಅಸಾಮಾನ್ಯ ವ್ಯಕ್ತಿತ್ವದ ಹಿರಿಮೆಯನ್ನೂ ಪ್ರತಿಭಾ ಪ್ರಕಾಶವನ್ನೂ ಧರ್ಮ ಸಾಧನೆಗೆ ಬಳಸಿಕೊಂಡರು

ಶ್ರೀಪಾದರಾಯರಿಂದ ಪ್ರಾರಂಭವಾದ ವೃತ್ತನಾಮ ವನ್ನು ಸರಳವ ದಭಾಷೆ ಯಲ್ಲಿ ಭಗವದ್ಗೀತೆಯನ್ನು ರಚಿಸುವುದರ ಮೂಲಕ ಹೆಚ್ಚು ರೂಢಿಗೆ ತಂದರು ತಮ್ಮ ಗುರು ಶ್ರೀಪಾದರಾಯರಂತೆಯೇ ದಾಸಸಾಹಿತ್ಯದ ಎಲ್ಲ ಪ್ರಕ ರಗಳಲ್ಲಿಯೂ ಕೃತಿ ರಚನೆ ಮಾಡಿದ್ದಾರೆ ಅಂತರಂಗದಲಿ ಹರಿಯ ಕಾಣದವನೆ ಹುಟ್ಟು ಕುರುಡನೊ [10] ಎಂದು ಬಾಹ್ಯಕ್ಕಿಂತ ಅಂತರಂಗಕ್ಕೆ ಹೆಚ್ಚು ಮಹತ್ವ ನೀಡಿದ್ದಾರೆ ಪಂಚೇಂದ್ರಿಯ ಗಳು ಬೆ ರೇನನ್ನೋ ಈಕ್ಷಿಸಿ ಆಲಿಸಿ ಘ್ರಾಣಿಸಿ, ಸ್ವಾದಿಸಿ ಸ್ಪರ್ಶಿಸುತ್ತವೆಂದು ಅವು ಗಳನ್ನು ನಿನ್ನಲ್ಲಿ ನಿಲಿಸಿ ಕಾಯೊ ಎಂದು ಬೇಡುವ ಅವರು ಸಂಸಾರವೆಂದೆಂಬ

ಮೊರಿಗೆ ಸಿಲ ಕಿದೆ ಕಂಸಾರಿ ಕರುಣದಿಂದೆನ್ನ ನೋಡಯ್ಯ ಎಂದು ಆರ್ತರಾಗಿ ಕೇಳು ವಲ್ಲಿ ದಾಸಭಾವ ವ್ಯಕ್ತವಾಗುತ್ತದೆ ವ್ಯಾಸರಾಯರಿಗೆ ಹರಿಯ ಷ್ಟೇ ಅಭಿಮಾನ ಹರಿದಾಸರ ಬಗೆಗೂ ಹಾಗಾಗಿ ಹರಿದಾಸರ ಸಂಗಕ ಏನ್ಯೋಣಂಟೆ ನಿನಿ ಂದ ನಿನ ದಾಸರೆ ಮಿಗಿಲೊ ಎಂದು ದಾಸರ ಶ್ರೇಷ ತೆಯನು ಎತ್ತಿ ಹಾಡಿದ್ದಾರೆ ಆ ಕಾರಣ ದಿಂದಲೇ ಪುರಂದರ ದಾಸರನ ದಾಸರೆಂದರೆ ಪುರಂದರದಾಸರಯ್ಯ ಎಂದು ಹಾಡಿ ಹೊಗಳಿರುವುದು ಕೃಷ್ಣಲೀಲೆ ಭಕ್ತನ ದೈನ್ಯ ವೆ ರಾಗ್ಯ ಸತ್ಕರ್ಮದ ಆವಶ್ಯಕತೆ ಸಜ ನಸ ಗ ಧ್ಯಾನಾದಿಗಳ ವಿಷಯು ಸಿದ್ಧಾಂತ ರೀತ್ಯಾ ಪ್ರವೆ ೀಯ ಬದ್ಧ ಹರಿಪೂಜಾದಿಗಳು ಭಗವಂತನ ಅನುಗ್ರಹಕ್ಕೆ ಮೊರೆ ಆಚಾರ್ಯರ ಸ್ತೋತ್ರ ಸಿದ್ಧಾಂತದ ದೀಕ್ಷೆ ಶಿವಗಣೆ ಶಾದಿಗಳ ಸ್ತೋತ್ರ ಶಿಷ್ಯರಾದ ಪುರಂದರದಾಸರ ಪ್ರಶಂಸೆ [11] ಇವೆಲ್ಲ ಅವರ ಕೃತಿಗಳಲ್ಲಿ ಅಡಕವಾಗಿವೆ

ವ್ಯಾಸರಾಯ ರು ತಾವು ಬರೆದಿದ್ದಕ್ಕಿಂತಲೂ ಹೆಚ್ಚಾಗಿ ದಾಸಕೂಟವನ್ನು ಸ್ಥಾಪಿಸಿ ಪುರಂದರ ದಾಸರು ಮತ್ತು ಕನಕದಾಸರಂಥವರ ಸೃಜನ ಶೀಲತೆಗೆ ಅವಕಾಶ ಕಲ್ಪಿಸಿಕೊಟ್ಟುದು ಕನ್ನಡ ಸಾಹಿತ್ಯ ಹಾಗೂ ಸಂಸ್ಕೃತಿಗೆ ಅವರ ಮಹತ್ತರ ಕಾಣಿಕೆ ಯಾಗಿದೆ

## ಪುರಂದರ ದಾಸರು —1484–1564

ಪುರಂದರ ದಾಸರು ದಾಸಸಾಹಿತ್ಯದ ಅಗ್ರಗಣ್ಯರು ವ್ಯಾಸರಾಯ ರಿಂದ ದೀಕ್ಷೆ ಪಡೆದು ಪುರಂದರ ವಿಠಲ ಎಂಬ ಅಂಕಿತವನ್ನು ಪಡೆದ ಪುರಂದರ ದಾಸರು ತಮ್ಮ ಪರಂಪರೆಯ ಶ್ರೀಪಾದರಾಯ ರು ವ್ಯಾಸರಾಯ ರಂತೆ ಮಧ್ವಮತಾನುಯಾಯಿ ಯಾಗಿದ್ದರೂ ವಿಶಾಲವಾದ ಭಾಗವತ ಧರ್ಮವನ್ನು ಬೆಳೆಸಿಕೊಂಡವರು

ಪುರಂದರ ದಾಸರು ನಾಲ್ಕು ಲಕ್ಷದ ಎಪ್ಪತ್ತೈದು ಸಾವಿರ ಕೃತಿಗಳನ್ನು ರಚಿಸಿ ರುವರೆಂಬ ಹೇಳಿಕೆಯಿದೆ

ಗುರುವ್ಯಾಸರಾಯ ರಿಂದುಪದೇಶಗೊಂಡೆ। ಎರಡೆರಡು ಲಕ್ಷದೆಪ್ಪತ್ತೈದು ಸಾವಿರ ವರನಾಮಾವಳಿ ಮಾಡಿ ಹರಿಗೆ ಅರ್ಪಿಸಿದೆ।।

ಎಂದು ವಿಜಯದಾಸರು ಹಾಡಿರುವುದಾಗಿ ಆರ್ ಎಸ್ ಪಂಚವ ುಖಿಯವರು ತಿಳಿಸಿರುತ್ತಾರೆ [12] ಆದರೆ ಈ ವರೆಗೆ ದೊರೆತು ಪ್ರಕಟವಾಗಿರುವ ಕ ತಿಗಳ ಸಂಖ್ಯೆ ಸಾವಿರಕ್ಕೂ ಅಧಿಕ ಅವರು ಕೀರ್ತನೆ ಸ ಳಾದಿ ಉಗಾಭೋಗಗಳನು ರಚಿಸಿದ್ದಾರೆ ಪುರಂದರ ಕೃತಿಗಳಲ್ಲಿ ಹರಿಭಕ್ತಿಯ ಪಾರಮ್ಯತೆಗೆ ಸಿಕ್ಕಿರ ವಷ್ಟೇ ಪ್ರಾಧಾನ್ಯ ಸಾರ್ವಜನಿಕ ವಿಷಯ ಗಳಿಗೂ ಸಿಕ್ಕಿವೆ ಅಂದರೆ ಅವರ ವ್ಯಕ್ತಿತ್ವಕ್ಕೆ ಎರಡು ರೇಖೆ ಒಂದು ತಮಗೂ ತಮ್ಮ ಭಗವಂತನಿಗೂ ಇರುವ ಸಂಬಂಧ ಇನ್ನೊಂದು ತಮಗೂ ತಮ್ಮ

ಸುತ್ತಣ ಲೋಕಕ್ಕೂ ಇರುವ ಸಂಬ ಧ ಈ ಎರಡು ಸಂಬಂಧಗಳೂ ಹೊರಡುವ ಒಂದು ಬಿಂದುವಿನಲ್ಲಿದೆ ಇವರ ವ್ಯಕ್ತಿತ್ವ [13]

ಕೃಷ್ಣನ ಬಾಲಲೀಲೆಗಳನು ವಾತ ಲ್ಯ ಭಾವದ ಗೀತೆಗಳನು ಬರೆದ ಕೀರ್ತನ ಕಾರರಲ್ಲಿ ಪುರಂದರ ದಾಸರಿಗೆ ಪ್ರಧವ ಸ್ಥಾನ ಸಲ್ಲ ತ್ತದೆ ಆಡಿದನೋ ರಂಗ ಅದ್ಭುತದಿಂದಲಿ [14] ಆಡಿ ದಳಿಶೋದ ಹರಿ ಕುಣಿದ ಮೊದಲಾದ ವು ಅವನ ಬಾಲಲೀಲೆಗಳನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸುವ ಗೀತೆಗಳಾದರೆ ಗುವ್ಮ ನ ಕರೆಯು ದಿರೆ ಪೊ ಗದಿರಲೊ ರಂಗ ಮನೆಯೊಳಗಾಡೋ ಗೊ ವಿಂದ ಆಡ ಹೋದಲ್ಲಿ ಮಕ್ಕಳು ಗೀತೆಗಳು ತ ಯಿ ಮಗುವಿನ ವಾತ್ಸಲ್ಯಭಾವವನ್ನು ಕಂಡರಿಸುತ್ತವೆ ದ ಸನ ಮಾಡಿಕೋ ಕಂಡು ಕಂಡು ನೀಯನ್ನ ಕೈ ಬಿಡುವರೆ ತೇಲಿಸೊ ಇಲ್ಲ ಮ ಳುಗಿಸೊ ಎಂದು ಒವ್ಮೆ ಹರಿಯನು ಆರ್ತತೆಯಿಂದ ಬೇಡುವ ದಾಸರು ಇನ್ನೊವ್ಮೆ ನೀನ್ಯಾಕೊ ನಿನ್ನ ಹಂಗ್ಯಾಕೊ ಎನಗೂ ಆಣೆ ರಂಗ ನಿನಗೂ ಆಣೆ ಎಂದೇ ಸವಾಲೆಸೆಯ ತ್ತಾರೆ ಕಣ್ಣಾರೆ ಕಂಡೆ ಅಚ ್ಯತನ ಕೃಷ್ಣಮೂರ್ತಿ ಕಣ್ಣುಮುಂದೆ ನಿಂತಿದಂತಿದೆ ಅವ್ಮ ನಿವ್ಮ ಮನೆಗಳಲ್ಲಿ ಮುಂತಾದ ಹಾಡುಗಳಲ್ಲಿ ಹರಿಯ ಸಾಂಪ ದಾಯಿಕ ರೂಪವನ್ನೇ ವರ್ಣಿಸಲಾಗಿದೆ

ಸಂಸಾರದ ನಿಸ್ಸಾರತೆ ಐಹಿಕ ಭೊ ಗದ ನಶ್ವರತೆಯನ್ನು ಕುರಿತೂ ಪುರಂದರ ದಾಸರು ಸಾಕಷ್ಟುಗೀತೆಗಳನ್ನು ರಚಿಸಿದ್ದಾರೆ ಆರು ಹಿತವರು ನಿನಗೆ ಆರೇನಂ ಮಾಡುವರು ಸಾಕು ಸಾಕಿನು ಸಂಸಾರ ಸುಖವು ಅನಂಗಾಲವು ಚಿಂತೆ ಯಾರ ಹಾರೈಸಿದರೇನುಂಟು ಎಂದು ಹೆ ಳಿದ್ದರೂ ಬದುಕಿಗೆ ವಿಮುಖರಾಗಬೇಕೆಂದು ಹೇಳಿ ದವರಲ್ಲ ಮಾನವ ಜನ್ಮ ದೊಡ್ಡದು ಅದನು ಹಾನಿ ಮಾಡಬೆ ಡಿ ಹುಚ್ಚಪ್ಪಗಳಿರಾ ಎಂದು ಎಚ್ಚರಿಸಿ ನರಜನ್ಮ ಬಂದಾಗ ನಾಲಿಗೆ ಇರುವಾಗ ಕೃಷ್ಣ ಎಂದು ಬದುಕ ಬೇಕು ಸಂಸಾರಸಾಗರವನ್ನು ಈಸಬೇಕು ಇದ್ದು ಜೈಸಬೇಕು ಎಂದು ಬೋಧಿಸು ತ್ತಾರೆ ಅಂತಕನ ದೂತರಿಗೆ ಕಿಂಚಿತ್ತು ದಯವಿಲ್ಲ ದ್ದರಿಂದ ಸಂಸಾರದ ಚಿಂತೆ ಯಲ್ಲೇ ಮುಳುಗಿರದೆ ಬಂದದ್ದೆಲ್ಲ ಬರಲಿ ಗೋವಿಂದನ ದಯವೊಂದಿರಲಿ ಎಂದು ಹರಿನಾಮಸ್ಮರಣೆ ಮಾಡುತ್ತ ಬದುಕನ್ನು ಸಾರ್ಥಕಪಡಿಸಿಕೊಳ್ಳಿ ಎನ್ನುವ ಮಾರ್ಗದ ದರ್ಶನ ನೀಡಿದವರು ಪುರಂದರದಾಸರು

ಕರುಣಾಕರ ನೀನೆಂಬುವುದೇತಕೊ ಏನು ಮಾಡಿದರೇನು ಭವ ಹಿಂಗದು ಬಿನ್ನಹಕೆ ಬಾಯಿಲ್ಲವಯ್ಯ ಮುಂತಾದ ಕೃತಿಗಳಲ್ಲಿ ಮಾನವ ಸಹಜವಾದ ದೌರ್ಬಲ್ಯ ಗಳನ್ನು ವೆ ಟ್ಟನಿಲ್ಲುವ ಪ್ರಯತ ವಿದೆ ಇಂತಹ ಅತ್ಮ ನಿವೆ ದನೆಯ ಗೀತೆಗಳಲ್ಲಿ ಬದುಕಿನಿಂದ ಬಿಡಿಸಿಕೊಳ್ಳವೆ ಕೆಂದ–ಹೊಯ್ದಾಟ ಭಗವಂತನನ್ನು ಸೇರಬೇಕೆಂಬ ತ ಡಿತ ಇದು ವಿಷಾದ ಸ್ಥಾಯಿಯಾಗಿ ನಿಲ್ಲುತ್ತದೆ ಪುರಂದರದಾಸರಲ್ಲಿ ಕಾಣ ಬರುವಷ್ಟು ಪ್ರಮಾಣದಲ್ಲಿ ಸಾಮಾಜಿಕ ಪ್ರಜ್ಞೆ ದಾಸರಲ್ಲಿ ಕನಕದಾಸರನ್ನು ಬಿಟ್ಟರೆ

ಉಳಿದವರಲ್ಲಿ ಕಂಡುಬರುವುದಿಲ್ಲ ಡಾಂಭಿಕತೆಯನ್ನು ಟೀಕಿಸುವ ಉದರ ವೈರಾಗ್ಯ ವಿದು ನಗೆಯ ಬರುತಿದೆ ಇಕ್ಕಲಾರದ ಕೈ ಎಂಜಲು ಎನ್ನುವ ಹಾಡುಗಳಲ್ಲಿಯ ಮೊನಚು ಧರ್ಮಕ್ಕೆ ಕೈ ಬಾರದೀಕಾಲ ಸತ್ಯವಂತರಿಗಿದು ಕಾಲವಲ್ಲ ಡೊಂಕು ಬಾಲದ ನಾಯಕರೆ ರಮಣನಿಲ್ಲದ ನಾರಿ ಮೊದಲಾದ ಹಾಡುಗಳ ವ್ಯಂಗ್ಯ ಅವರಿಗೆ ವಿಶಿಷ್ಟವಾದ್ದು ಲೋಕದ ಅಂಕು ಡೊಂಕುಗಳನು ತಿದ್ದಲು ಅವರು ಮಾಡಿದ ಪ್ರಯತ್ನಕ್ಕೆ ಇವು ಒಳ್ಳೆಯ ಉದಾಹರಣೆಗಳು ಮುಪ್ಪಿನ ಗಂಡನ ಒಲ್ಲೆನು ನಾನು ಬಲ್ಲೆನಾ ವೈದಿಕ ಕಂಡನ ಎನ್ನುವ ಹಾಡುಗಳಲ್ಲಿ ಅಂತಹ ಹೆಣ್ಣು ಮಕ್ಕಳ ಬಗೆಗೆ ಅವರಿಗಿದ್ದ ಅನುಕಂಪ ಅವರು ತಮ್ಮ ಸುತ್ತಮುತ್ತಲಿನ ಆಗು ಹೋಗುಗಳಿಗೆ ಹೇಗೆ ಸ್ಪಂದಿಸುತ್ತಿದ್ದರೆಂಬುದೂ ವ್ಯಕ್ತವಾಗುತ್ತದೆ

ಹೊಲೆತನವನ್ನು ಕುರಿತಂತೆ ಅವರು ಒಂದು ಕೀರ್ತನೆ ಹಾಗೂ ಒಂದು ಉಗಾಭೋಗ ರಚಿಸಿದ್ದಾರೆ ಹೊಲೆಯ ಹೊರಗಿಹನೆ ಎಂದು ಪ್ರಾರಂಭವಾಗುವ ಕೀರ್ತನೆ

ಹೊಲೆಯ ಬಂದನೆಂದು ಒಳಗೆ ದೇವರ ಮಾಡಿ
ಗಣಗಣ ಗಂಟೆ ಬಾರಿಸುವರಯ್ಯ
ತನುವಿನ ಕೋಪವು ಹೊಲೆಯಲ್ಲವೆ ?
ಪರಧನ ಪರಸತಿ ಹೊಲೆಯಲ್ಲವೆ ?
ಹೊರಗಿದ್ದ ಹೊಲೆಯನ ಒಳಗೆ ಬಚ್ಚಿಟ್ಟರೆ
ಇದಕೇನು ಮದ್ದೋ ಪುರಂದರ ವಿಠಲ ।।

ಎಂಬ ಉಗಾಭೋಗ ಈ ಎರಡರಲ್ಲೂ ನಡೆ ನುಡಿಯಿಂದ ಹೊಲೆತನ ಬರುವಂತಹುದೇ ವಿನಾ ಹುಟ್ಟಿನಿಂದಲ್ಲ ಎಂದು ಪ್ರತಿಪಾದಿಸಿದ್ದಾರೆ ಇಲ್ಲಿ ಅವರು ವ್ಯವಸ್ಥೆಯ ವಿರುದ್ಧ ದನಿ ಎತ್ತಿದವರಲ್ಲ ಯಾರು ಹೊಲೆಯ ಎಂಬ ಕಡೆ ಅವರ ಗಮನವಿದೆಯೇ ವಿನಾ ಹೊಲೆಯನ್ನೇ ಪ್ರಶ್ನಿಸುವುದರಲ್ಲಿಲ್ಲ ಅಂದರೆ ಸಮಾಜದ ಹೊಲಸನ್ನು ತೊಡೆಯಬೇಕೆಂಬ ನೈತಿಕ ದೃಷ್ಟಿ ಅವರದು

ಅಮ್ಮ ನಿಮ್ಮ ಮನೆಗಳಲ್ಲಿ ನಮ್ಮ ರಂಗನ ಕಾಣಿರೇನೆ ಎನ್ನುವ ಕೃಷ್ಣನ ವರ್ಣನೆ ರಾಮಕೃಷ್ಣರು ಮನೆಗೆ ಬಂದರು ಬಾಗಿಲು ತೆರೆಯಿರೆ ಎನ್ನುವಲ್ಲಿ ಅವರ ಹುಡುಗಾಟ ಲಾಲಿಸಿದಳು ಮಗನ ಯಶೋದೆ ಯಲ್ಲಿ ತಾಯಿ–ಮಗುವಿನ ವಾತ್ಸಲ್ಯ ಹೀಗೆ ವಿವಿಧ ಭಾವಗಳನ್ನು ಚಿತ್ರಿಸುವ ಸ್ವಭಾವೋಕ್ತಿಗಳು ನಮ್ಮನ್ನು ಬೆರಗುಗೊಳಿಸುತ್ತವೆ ಇಲ್ಲೆಲ್ಲ ಅವರು ಜನಸಾಮಾನ್ಯರ ಬದುಕಿನ ಸಂದರ್ಭವನ್ನು ವಸ್ತುವಾಗಿಸಿಕೊಂಡುದರಿಂದ ಇವೆಲ್ಲ ಕೇಳುಗನ ಅನುಭವದ ಪದರವನ್ನು ಮುಟ್ಟುತ್ತವೆ

ಅವರ ಕೀರ್ತನೆಗಳಲ್ಲಿ ಗಿಳಿಯು ಪಂಜರದೊಳಿಲ್ಲ ನಾ ಡೊಂಕಾದರೆ ಅಮ್ಮ ಗುಮ್ಮನ ಕರೆಯದಿರೆ ಹರಿಕುಣಿದ ಡೊಂಗು ಬಾಲದ ನಾಯಕರೆ ಮುಂತಾದ ಕೃತಿಗಳು ತಮ್ಮ ಸಾಂಕೇತಿಕತೆ ಪ್ರತಿಮಾನಿಷ್ಠತೆ ಚಿತ್ರಣ ಸಾಮರ್ಥ್ಯ

ದಿಂದ ಅತ್ಯಂತ ಯಶಸ್ವಿಯಾದ ಕೀರ್ತನೆಗಳು ಈ ಒಂದೊಂದೂ ಉತ್ತಮವಾದ ಭಾವಗೀತೆಗಳು ಗಿಳಿಯು ಪಂಜರದೊಳಿಲ್ಲ ಗೀತೆ ಗಿಳಿ ಹಾಗೂ ನಿವೇದಕನ ಆತ್ಮೀಯ ಸಂಬಂಧವನು ಗಿಳಿಯ ಅಗ_ವಿಕೆಯಿಂದ ಅವನಿಗ ಂಟಾದ ನೋವನ್ನು ಹಂತ ಹಂತವಾಗಿ ಪರಿಚಯಿಸುತ್ತ ತನ ಅರ್ಥ ಸಾಧ್ಯತೆಗಳನು ಕೊನೆಯವರೆಗೂ ಕಾಯ್ದು ಕೊಳ್ಳುತ್ತದೆ ತನ್ನ ಭಾವನಿಬಿಡತೆಯಿಂದ ಓದು ಉಂಟುಮಾಡುವ ಪರಿಣಾಮ ಗಾಢ ವಾದದ್ದು ಡೊಂಕು ಬಾಲದ ನಾಯಕರೆ ಸಾಮಾಜಿಕ ವಿಡಂಬನೆಯ ಕವನವಾ ದರೂ ಎಲ್ಲಾ ವಾಚ್ಯತೆಗೆ ಎಡೆಮಾಡಿಕೊಡದೆ ಉದ್ದಕ್ಕೂ ಸಾಂಕೇತಿಕತೆಯನ್ನು ಕಾಪಾಡಿಕೊಳ್ಳುವಲ್ಲಿ ಸಮರ್ಥವಾಗಿದೆ ಇಲ್ಲಿ ಬರುವ ನಾಯಕರ ಆಸೆಬ ರುಕತನ ಭೋಗಾಸಕ್ತಿ ಅಲ್ಪತನ ತ ಚ್ಛತೆ ಹೆ ಡಿತನ ವ್ಯರ್ಥ ಬದುಕನ್ನು ಇದಕ್ಕಿಂತ ಸಾಂಕೇತಿಕವಾಗಿ ಧ್ವನಿಪೂರ್ಣವಾಗಿ ಕೊನೆಗೆ ತಿರಸ್ಕಾರದಿಂದ ಅನ ಕಂಪಕ್ಕೆ ತಿರುಗುವ ವಿಶಿಷ್ಟಧ ಓಯಲ್ಲಿ ಹೇಳುವ ಬೆ ರೆ ಹಾಡು ದ ಸಸಾಹಿತ್ಯದಲ್ಲಿ ಇಲ್ಲ [1] ಎನ್ನುವ ಮಾತು ಅರ್ಥಪೂರ್ಣ

ಕಲ್ಲು ಸಕ್ಕರೆ ಕೊಳ್ಳಿರೋ ಹಣ್ಣ ಬಂದಿದೆ ಕೊಳ್ಳಿರೊ ಮುತ್ತು ಕೊಳ್ಳಿರೊ ಇಂತಹ ಹಾಡುಗಳು ಕೆಲವೆಡೆ ವಾಚ್ಯವಾಗ ವುದರಿಂದ ಅವುಗಳ ಅರ್ಥ ಪೂರ್ಣತೆಯನ್ನು ಕಳೆದುಕೊಂಡು ತೆಳ್ಳಗಾಗುತ್ತದೆ

ದಾಸರೆಂದರೆ ಪುರಂದರದಾಸರಯ್ಯ ಎಂದು ತಮ್ಮ ಗುರ ವಿನಿಂದಲೇ ಹೊಗಳಿಸಿಕೊಂಡ ಪುರಂದರದಾಸರು ತಮ್ಮ ಸರಳ ಶೈಲಿಯಿಂದ ಸಂಗೀತ ಮಾಧ ಯ ರ್ದಿಂದ ವಸ್ತುವಿನ ವೈವಿಧ್ಯತೆಯಿಂದ ಜನಮನವನ್ನು ಸೂರೆಗೊಂಡ ದಾಸಶ್ರೇಷ ರು ಪುರಂದರದಾಸರ ಪ್ರಸನ್ನವಾಣಿ ದಾಸಸಾಹಿತ್ಯಕ್ಕೆ ಅಮರತ್ವ ವನ್ನೂ ವೈವಿಧ್ಯವನ್ನೂ ವೈಶಿಷ್ಟ್ಯವನೂ ವೈಶಾಲ್ಯವನ್ನೂ ದೊರಕಿಸಿಕೊಟ್ಟಿತು ಹಿರಿಯ ರಾದ ಶ್ರೀಪಾದರಾಯರ ಮತ್ತು ಶ್ರೀವ್ಯಾಸರಾಯರ ದಾರಿಯಲ್ಲೇ ಮ ಂದುವರಿದು ಆತ್ಮಾನುಭವವನ್ನೂ ಭಕ್ತಿ ವೈಭವವನ್ನೂ ವಿಶದಪಡಿಸಿದರಲ್ಲದೆ ಜನ ಜೀವನದ ವಿವಿಧ ಮುಖಗಳನ್ನು ಪರಿಚಯ ಮಾಡಿಕೊಡುವ ಪುರಂದರದಾಸರ ಲೋಕಾನುಭವ ತ ಂಬ ಅಸದೃಶವಾದದ್ದು ಪುರಂದರದಾಸರ ರಚನೆಗಳಲ್ಲಿ ಸಂಗೀತದ ಮಾಧ ರ್ಯವೂ ಸಾಹಿತ್ಯದ ಸ್ವಾರಸ್ಯವೂ ಧರ್ಮದ ಸಂದೇಶವೂ ಸರಿಸಮ ವಾಗಿ ಬೆರೆತು ಎಲ್ಲರಿಗೂ ಪ್ರಿಯ ವಾದವು [16] ಅವರ ಇಂತಹ ಸಿದ್ಧಿಗೆ ಕಾರಣ ಪುರಂದರದಾಸರು ಜನಸಾಮಾನ್ಯರ ಭಾಷೆಯ ನ್ನು ಬಳಸಿದರು ಗಾಯನ ನರ್ತನಗಳ ಮೋಹಕ ಗ ಣವನ್ನು ತಮ್ಮ ಕೃತಿಗಳನ್ನು ಜನತೆಗೆ ಮೆಚ್ಚಿಸಲು ಸಮೂಹ ಮಾಧ್ಯಮಗಳ ಗಿ ರೂಪಿಸಿದರು ಉಪನಿಷತ್ತಿನ ಗಹನ ತತ್ತ್ವಗಳನ್ನು ಕನ ಡಿಸಿದ್ದು ಮಾತ್ರವಲ್ಲ ಆ ತತ್ತ್ವಗಳನ್ನು ಸ್ವೀಕರಿಸಬಲ್ಲ ಒಂದು ಸಾಮಾಜಿಕ ಸ್ಥಿತಿಯನ್ನು ಸಿದ್ಧ ಮಾಡುವುದಕ್ಕಾಗಿ ಜನತೆಯ ಮೌಢ್ಯ ಕುಂದು ಕೊರತೆ ಲೋಪ ದೋಷಗಳನ್ನು

ಕಟೂಕ್ತಿಯಿಂದ ಖಂಡಿಸಿ ತಿಳಿಹೇಳಿ ಅಸಾಮಾನ್ಯ ನೈತಿಕ ಧೈರ್ಯವನ್ನೂ, ಸಾಮಾಜಿಕ ಪ್ರಜ್ಞೆಯನ್ನೂ ವ್ಯಕ್ತಪಡಿಸಿದರು [17]

**ಕನಕದಾಸರು 1500**

ದಾಸ ಸಾಹಿತ್ಯ ಪರಂಪರೆಯಲ್ಲಿ ಕನಕದಾಸರ ಕೃತಿಗಳು ಪುರಂದರದಾಸರ ಕೃತಿಗಳಷ್ಟೇ ಔನ್ನತ್ಯವನ್ನು ಪಡೆದಿವೆ ಪುರಂದರದಾಸರ ಸಮಕಾಲೀನರೇ ಆಗಿರುವ ಕನಕದಾಸರು ದಾಸರಲ್ಲಿ ಕವಿ ಎಂಬ ಪ್ರಶಸ್ತಿ ಪಡೆದವರು ಕನಕದಾಸರು ರಾಮಧಾನ್ಯ ಚರಿತೆ ನಳಚರಿತ್ರೆ ಮೋಹನ ತರಂಗಿಣಿ ಹರಿಭಕ್ತಿಸಾರ ಎಂಬ ಕೃತಿಗಳನ್ನು ರಚಿಸಿ ಕವಿಯೂ ಆಗಿ ಕೀರ್ತನೆಗಳನ್ನು ರಚಿಸಿ ಕೀರ್ತನಕಾರರೂ ಆಗಿದ್ದವರು ಹೀಗೆ ವಸ್ತುನಿಷ್ಠ ವಾದ ಮತ್ತು ವ್ಯಕ್ತಿನಿಷ್ಠ ವಾದ ಕೃತಿಗಳೆರಡನ್ನೂ ರಚಿಸಿದ ಹಿರಿಮೆ ಅವರದು ಪುರಂದರದಾಸರಂತೆ ಕನಕದಾಸರೂ ಕೂಡ ವ್ಯಾಸರಾಯ ರಿಂದ ದೀಕ್ಷೆ ಪಡೆದು ಕಾಗಿನೆಲೆ ಆದಿ ಕೇಶವ ಅಂಕಿತದಿಂದ ಕೃತಿ ರಚನೆಗೆ ತೊಡಗಿದವರು

ರಾಮಧಾನ್ಯ ಚರಿತೆ ಯ ಲ್ಲಿ ರಾಮನಕತೆ ರಾಮಧಾನ್ಯದ ಕಥೆ ಒಟ್ಟೊಟ್ಟಾಗಿ ಸಾಗುತ್ತದೆ ರಾಗಿ ಮತ್ತು ಭತ್ತದ ಸಂವಾದದಲ್ಲಿ ಜಾತಿ ವೈಷಮ್ಯದ ಸೂಕ್ಷ್ಮ ಎಳೆ ಇದೆ ಆತೆ ವಾಳರು ಬುಧರು ಜರೆದು ನಿರಾಕರಿಸಿ ಬಿಡಲಂತು ನೀ ಶೂದ್ರಾನ ಪಾದೆ ರಾಗಿಯನ್ನು ಜರಿದರೆ ಹೆಣದ ಬಾಯಿಗೆ ತಂತು ಏನೆಹೆ ಎಂದು ರಾಗಿ ಭತ್ತದ ವಿರುದ್ಧ ದನಿ ಎತ್ತುತ್ತದೆ ಕ್ಷಾಮ ತಲೆದೋರಿದಾಗ ಮನುಕುಲ ಬದುಕಲು ತಾನೇ ಬೇಕೆಂಬಲ್ಲಿ ಆತ್ಮ ವಿಶ್ವಾಸವಿದೆ ಸ್ವಂತ ನೋವಿನ ತುಮಲದ ಆನ ಭವಕ್ಕೆ ಇಲ್ಲಿ ಅಭಿವ್ಯಕ್ತಿ ದೊರಕಿದೆ ದೇವನಾದ ರಾಮನ ದೃಷ್ಟಿಯಲ್ಲಿ ಬಡವ ಬಲ್ಲಿದ ಮೇಲು ಕೀಳೆಂಬ ಭೇದವಿಲ್ಲದೆ ಸರ್ವೋದಯದ ತಾತ್ವಿಕ ನೆಲೆಯಲ್ಲಿ ಕಾವ್ಯ ಮುಗಿಯುತ್ತದೆ

**ನಳಚರಿತ್ರೆ** ಭಾಮಿನಿ ಷಟ್ಪದಿಯಲ್ಲಿರುವ ಕೃತಿ ಅರಣ್ಯದಲ್ಲಿ ಕಂಗೆಟ್ಟಿದ್ದ ಧರ್ಮರಾಯನಿಗೆ ಋಷಿಗಳು ಈ ಕಥೆಯ ನು ಹೇಳುತ್ತಾರೆ ಸಕಲ ವೈಭವದಿಂದಿದ್ದ ನಳದೇವಿ ದುರ್ವಿಪಾಕಕ್ಕೆ ಸಿಕ್ಕು ರಾಜ್ಯ ಮಡದಿ ಮಕ್ಕಳನ್ನು ಕಳೆದ ಕೊಂಡು ಅನ್ಯರ ಮನೆಯ ಸೇವಕನಾಗಿ ಹರಿಯ ಕರುಣೆಯಿಂದ ಎಲ್ಲವನ್ನೂ ಪ ರಳಿ ಪಡೆಯುವುದು ಇಲ್ಲಿಯ ಕಥಾವಸ್ತು ವಿಧಿ ವಿಲಾಸದೆದುರು ಮನುಷ್ಯ ಎಷ್ಟರವನು ದೈವಾನುಗ್ರಹ ಸಂತೃಪ್ತ ಬದುಕಿಗೆ ಎಷ್ಟು ಆವಶ್ಯಕ ಎಂಬುದನ್ನು ಈ ಕೃತಿ ಧ್ವನಿಸುತ್ತದೆ ಹರಿಯು ನೆಲೆಗೆಡಿಸಿದನು ಪರಮೇಶ್ವರನ ಭಿಕ್ಷವನೆತ್ತಿಸಿದ ಸರ । ಸಿರುಹಭವತಾ ಶಿರವ ಹೋಗಾಡಿದನು ಪೂರ್ವದಲಿ ॥ ಹರಿಹರ ಬ್ರಹ್ಮಾದಿಗಳಿಗೇ ಹೀಗಾದ ಮೇಲೆ ಇನ್ನು ಸಾಮಾನ್ಯರ ಪಾಡೇನು ಎಂದು ವಿಧಿಯವಿಲಾಸದ ಮೇಲ್ಮೆಯನ್ನು ಹೇಳಿದ್ದಾರೆ

**ಮೋಹನ ತರಂಗಿಣಿ** ಕೃತಿಕಾರರೇ ಹೇಳಿರುವಂತೆ ಇದು ಕೃಷ್ಣಚರಿತೆ ಕೇಳ್ವರಿಗಿದು ತನಿ ಬೆಲ್ಲದಚ್ಚು ಎಂದು ಕವಿ ಕನಕದಾಸರು ಹೇಳಿಕೊಂಡಿದ್ದರೂ ಇಲ್ಲಿಯ ಕಥೆ ಹದಿನೆಂಟು ವರ್ಣನೆಗಳ ತೊಡಕಿನಲ್ಲಿ ಸಿಕ್ಕು ನರಳುತ್ತದೆ ಕಾಮದ ಹನ ಉಷಾ ಅನಿರ ದ್ಧರ ಪ್ರಣಯಪ್ರಸಂಗ ಹರಿಹರಸಮಾನತೆಗಳನ್ನು ಸಾಂಗತ್ಯ ದಲ್ಲಿ ಬರೆದ ಕೃತಿ ನಳದಮಯಂತಿಯಲ್ಲಿ ತ್ಯಾಗ ಮೂಲ ಪ್ರೇಮದಿಂದ ಮಾನ ವರು ದೈವತ್ವಕ್ಕೇರಿದ್ದರೆ ಇಲ್ಲಿ ಭೋಗಾಸಕ್ತಿಯಿಂದ ದೈವೀ ಪುರುಷರು ಮಾನವರಾಗಿ ದ್ದಾರೆ ಈ ಕೃತಿಯ ಕಥಾನಕ ಹಾಗೂ ಪಾತ್ರಗಳಲ್ಲಿ ಮಾನವತೆಯ ಗಾಢ ಸಂಪರ್ಕವಿಲ್ಲ ಸಾಂಗತ್ಯರಚನೆ ವರ್ಣನೆ ಶೈಲಿಗಳಲ್ಲಿ ಮಾತು ಮೇಲ್ಮೆ ತೋರಿದೆ [18]

**ಹರಿಭಕ್ತಿಸಾರವು** ಭಾಮಿನಿಯ 110 ಪದ್ಯಗಳ ಹರಿನಾಮಸ್ತವ ಪ್ರಾರ್ಥನೆ ಗಳನ್ನು ಒಳಗೊಂಡಿದೆ ಇದು ಕವಿಯ ಆತ್ಮನಿವೇದನೆಯ ಕೃತಿ ರಾಮಾಯಣ ಭಾರತ ಭಾಗವತ ಪುರಾಣ ಭಕ್ತರ ಚರಿತ್ರೆಗಳ ಸ್ಫೂರ್ತಿಯ ಹಿನ್ನೆಲೆಯಿದೆ ಸರಳತೆ ಆರ್ದ್ರತೆಗಳು ಈ ಕೃತಿಯ ಜೀವಾಳ

ಈ ಎಲ್ಲ ಕೃತಿಗಳ ಜೊತೆಗೆ ಅನೇಕ ಕೀರ್ತನೆಗಳನ್ನು ರಚಿಸಿ ಹರಿದಾಸರ ಪರಂಪರೆಗೆ ಸಂದವರು ಕನಕದಾಸರು ಪುರಂದರದಾಸರ ಕೀರ್ತನೆಗಳ ಸಂಖ್ಯೆಗೆ ಹೋಲಿಸಿದರೆ ಕನಕದಾಸರ ಕೀರ್ತನೆಗಳು ಅತ್ಯಲ್ಪವಾಗಿ ಕಾಣುತ್ತವೆ ಆದರೆ ಕನಕ ದಾಸರ ಕೀರ್ತನೆಗಳ ಸತ್ವವನ್ನು ಗಮನಿಸಿದರೆ ಅವು ಪುರಂದರದಾಸರ ಕೀರ್ತನೆಗಳ ಸತ್ವದೊಂದಿಗೆ ಸಮಸ್ಪರ್ಧಿಯಾಗಬಲ್ಲವು ಹಾಗೆ ನೋಡಿದರೆ ಪುರಂದರದಾಸರ ಕೀರ್ತನೆಗಳಿಗಿಂತ ಕನಕದಾಸರ ಕಿ ರ್ತನೆಗಳಲ್ಲಿ ಕಾವ್ಯಗುಣ ಒಂದು ಕೈ ಮಿಗಿಲಾಗಿಯೇ ಇರುವಂತೆ ತೋರ ತ್ತದೆ [19] ಕನಕದಾಸರ ವ್ಯಕ್ತಿತ್ವ ದಾಸ ಪರಂಪರೆಯ ಭಕ್ತಿ ಪ ಙ್ಕ್ತಿಗೆ ಒಳಗಾದರೂ ಅವರ ಭಕ್ತಿ ಭಾವ ಕಾವ್ಯಪ್ರಜ್ಞೆಗೆ ಭಿತ್ತಿಯಾಗಿ ಪರಿಣಮಿಸಿತು [20]

ಕನಕದಾಸರು ಪುರಂದರದಾಸರಷ್ಟೇ ವ್ಯಕ್ತಿತ್ವವುಳ್ಳವರಾಗಿದ್ದರೂ ಅವರ ಬಂದ ವರ್ಗದ ದೃಷ್ಟಿಯಿಂದ ಅವರ ಸಿದ್ಧಿ–ಸಾಧನೆಗಳು ಆ ಕಾಲಕ್ಕೆ ಹೆಚ್ಚು ಮಹತ್ವ ಪೂರ್ಣವೆನಿಸುತ್ತವೆ ಹಾಗಾಗಿ ಅವರ ಸಾಮಾಜಿಕ ವಿಡಂಬನಾ ಕೃತಿಗಳಲ್ಲಿ ನೋವೂ ಜೀವಂತಿಕೆಯೂ ಕಾಣಬರ ತ್ತದೆ ಅವರ ವಿಡಂಬನೆ ಖಾರವೂ ತೀವ್ರವೂ ಆಗಿರು ತ್ತದೆ

ತಲ್ಲಣಿಸದಿರು ಕಂಡ್ಯ ತಾಳು ಮನವೆ [21] ಗೀತೆಯ ಭಕ್ತಿಯ ತೀವ್ರತೆ ತನು ನಿನ ದು ಜೀವನ ನಿನ್ನದು ಗೀತೆಯ ಸಮರ್ಪಣ ಭಾವ ಬಾಗಿಲನು ತೆರೆದು ಸೇವೆಯ ನು ಕೊಡು ಹರಿಯೆ ಹಾಡಿನ ಭಗವಂತನ ಮೊರೆ ಇವೆ ಲ್ಲ ಅವರ ಸರ್ವಾ ರ್ಪಣಭಾವ ದೈವಶ್ರದ್ಧೆ ಸೂಕ್ಷ್ಮ ಚಿಂತನೆಗಳು ಕಾಣಬರುತ್ತವೆ ಸಂಸಾರದ

ನಿಸ್ಸಾರತೆಯನು ಕ ರಿತು ನೆಚ್ಚದಿರು ಸಂಸ ರ ಡಿಂಬ ದೊಳಿರುವ ಪ್ರಾಣ ಕಂಬ ಸೂತ್ರಗೊಂಬೆಯ ಂತೆ ಹಾಡುಗಳ ಅವರ ದ ಷ್ಟಿಯ ನು ಸ್ಪಷ್ಟಪಡಿಸುತ್ತವೆ ಕಣಿಯ ಹೆ ಳ ಬಂದೆ ಎಲ್ಲರೂ ಮಾಡುವುದು ಹೊಟ್ಟೆಗಾಗಿ ಕಲ್ಲನಾಗರ ಕಂಡರೆ ಹಾಲೆರೆವರು ಕುಲಕುಲವೆನು ತಿಹರು ಮು ಂತಾದ ಹಾಡುಗಳಲ್ಲಿ ಜನತೆಯ ಮೌಢ್ಯ ಪೊಳು ನಂಬಿಕೆ ಕಂದಾಚಾರ ವರ್ಣವ್ಯವಸ್ಥೆಯ ರಕ್ಕನ್ನು ಕಟ ವಾಗಿ ತೀವ್ರವಾಗಿ ಖಂಡಿಸುತ್ತಾರೆ ತೀರ್ಥವನು ಪಿಡಿದವರೆಲ್ಲ ತಿರುನಾಮಧಾರಿಗಳೆ ಧಾಂಬಿಕತೆಯನ್ನು ಟೀಕಿಸುವ ಪದ್ಯ

ಕುಲಕುಲವೆನು ತಿಹರು
ಕ ಲವಾವುದು ಸತ್ಯ ಸ ಜನರಿಗೆ ?

ಎನ್ನುವ ಹಾಡಿನಲ್ಲಿ ಕನಕದಾಸರು ಹುಟ್ಟಿನಿಂದಾದ ಕುಲ ಕುಲವಲ್ಲವೆ ದು ಸಾಧಿಸು ತ್ತಾರೆ ಮೊದಲು ತಾವರೆ ಹಾಲು ಮುಂತಾದ ವನ್ನು ಹೆಸರಿಸಿ ನಂತರ ಪರಾಶರ ವಸಿಷ್ಟ ನಾರದರನ್ನು ಉದಹರಿಸಿ ಜಾತಿ ಹುಟ್ಟಿನಿಂದಲ್ಲ ಎಂಬುದನ್ನು ಸಮ ರ್ಥಿಸು ತ್ತಾರೆ ಅವರ ದೃಷ್ಟಿಯ ಲ್ಲಿ ಕಾಗಿನೆಲೆ ಆದಿಕೇಶವನೊಲಿದ ಭಕ್ತರಿಗೆ ಕುಲ ವಾವುದು ಕನಕದಾಸರು ಕೂಡ ಪುರಂದರದಾಸರಂತೆ ಜಾತಿ ವ್ಯವಸ್ಥೆಯನ್ನು ಪ್ರಶಿ ಸಿದವರಲ್ಲ ಪುರಂದರದಾಸರ ದೃಷ್ಟಿ ಎಂಥವನು ಹೊಲೆಯ ಎನ್ನುವುದರ ಕಡೆಗಿದ್ದರೆ ಕನಕದಾಸರ ದೃಷ್ಟಿ ಹ ಟ್ಟಿನಿಂದಾದ ಕುಲ ಕುಲವಲ್ಲ ಎಂಬ ಕಡೆಗೆ ಇದಕ್ಕೆ ಅವರವರು ನಂಬದ ಧಾರ್ಮಿಕ ಚೌಕಟ್ಟು ತಾತ್ತ್ವಿಕ ಹಿನ್ನೆಲೆ ಕಾರಣವಾಗಿರ ಬಹುದು

ಕನಕದಾಸರ ಕೃತಿಗಳಲ್ಲಿ ದಾಸ ದಾಸರ ಮ ನೆಯ ದಾಸಿಯ ಮಗ ನಾನು ಎನ್ನುವಂತಹ ದೀನ ಭಾವದ ಗಿ ತೆಗಳು ಅಪರೂಪ ನೋಡು ನೋಡು ಗೋಪಿ ನಿನ ಮಗನ ಲೂಟಿಯ ರೀತಿಯ ವಾತ್ಸಲ್ಯದ ಗೀತೆಗಳೂ ಕಡಿಮೆಯೇ ಆದರೆ ಹರಿಯ ಮಹಿಮೆಯನ್ನು ಸಾರುವಂತಹ ಗೀತೆಗಳು ಸಾಕಷ್ಟು ಪ್ರಮಾಣದಲ್ಲಿವೆ ಬೊಂಬೆಯಾಟವನಾಡಿಸಿದೆ 'ಮುಟ್ಟಬೆ ಡ ಮುಟ್ಟಬೆ ಡ ಮ ರಹರನ ಭಕುತರನು ಇಂತಹ ಗೀತೆಗಳು ಕನಕದಾಸರ ಉತ್ಕಟವಾದ ಭಕ್ತಿಗೆ ಉತ್ತಮ ಉದಾಹರಣೆಗಳು

ಕನಕದಾಸರು ತಮ್ಮ ಕೀರ್ತನೆಗಳಲ್ಲಿ ಒಳಸಿದ ರೂಪಕ ಭಾಷೆ ಉದಾಹರಣೆ ಗಳು ಸಾಮಾನ್ಯರ ಬದುಕಿನಿಂದ ಬಂದಂತಹವು ನಾರಾಯಣ ನಿನ್ನ ನಾಮದ ಬೀಜವ ಹಾಡಿನಲ್ಲಿ ಬೇಸಾಯದ ರೂಪಕವಿದೆ ಹರಿಭಕ್ತಿಯನ್ನು ವೃದ್ಧಿಸುತ್ತ ಹೋಗಿ ಆತ್ಮೋದ್ಧಾರ ಮಾಡಿಕೊಳ್ಳಬಹುದೆಂಬುದನ್ನು ಅರ್ಥವತ್ತಾಗಿ ಚಿತ್ರಿಸಿ ದ್ದಾರೆ ದೇವಿ ನಮ್ಮ ದ್ಯಾವರು ಬಂದರು ಬನಿ ರೇ ಹ ಡಿನಲ್ಲಿ ಗ್ರಾಮ್ಯ ಭಾಷೆಯ ಬಳಕೆಯಿದ್ದು ಅದರ ಚಿತ್ರಣ ಶಕ್ತಿಯಿಂದಾಗಿ ಉತ್ತಮ ಗೀತೆಯಾಗಿದೆ ಕನಕ ದಾಸರ ಅತ್ಯುತ್ತಮ ಕೃತಿಗಳು ತಮ್ಮ ಪ್ರಾಮಾಣಿಕವಾದ ಭಾವದ ತುಂಬು ಮೊರೆ

ಯಿಂದ ಕೆಲವು ಅರ್ಥವತ್ತಾದ ಉಪಮಾನಗಳ ಸಹಾಯದಿಂದ ಸೂಕ್ಷ್ಮವಾದ ಚಿಂತನೆಗಳ ಗ್ರಹಿಕೆಯಿಂದ ತಮ್ಮಷ್ಟಕ್ಕೇ ಬಂದು ಒಟ್ಟಾದ ಅಖಂಡತೆಯನ್ನು ಸಾಧಿಸಂವುದಾದರೂ ಪುರಂದರದಾಸರ ಗಿಳಿಯು ಪಂಜರದೊಳಿಲ್ಲ ಹರಿ ಕುಣಿದ ಗುಮ್ಮನ ಕರೆಯದಿರೆ ಕದವಮ ಚ್ಚಿದಳಿದಕೋ ಮೊದಲಾದ ಕೃತಿಗಳಂತೆ ತವ್ಭ ಪ್ರತಿಪಾನಿಷ ತೆಯಿಂದ ಅರ್ಥನಾದವನ್ನು ಆಕಾರಗೆಡದಂತೆ ಹಿಗ್ಗಿಸಿಕೊಳ್ಳಬಲ್ಲ ಸಾಮರ್ಥ್ಯವನು ಪಡೆಯಿದೇ ಹೋಗುತ್ತವೆ ೫೫

ಕನಕದಾಸರು ಕನಕನ ಮುಂಡಿಗೆ ಎಂಬ ಒಂದು ಬಗೆಯ ಹಾಡುಗಳನ್ನು ರಚಿಸಿದ್ದಾರೆ ಬೆಡಗಿನ ವಚನಗಳಂತೆ ಅವುಗಳನ್ನು ಅರ್ಥೈಸುವುದು ಕಷ್ಟ ಈ ಪರಂಪರೆಯ ಲ್ಲಿ ಮಹಿಪತಿದಾಸರೊಬ್ಬರನ್ನು ಬಿಟ್ಟರೆ ಮತ್ಯಾರೂ ಈ ಬಗೆಯ ಹಾಡುಗಳನ್ನು ರಚಿಸಿದಂತೆ ಕಾಣುವುದಿಲ್ಲ

## ವಾದಿರಾಜರು 1480

ಪುರಂದರದಾಸರು ಮತ್ತು ಕನಕದಾಸರಂತೆ ವ್ಯಾಸರಾಯರ ಶಿಷ್ಯರಾಗಿದ್ದವರು ವಾದಿರಾಜರು ಮ ಠಾಧೀಶರಾಗಿದ್ದ ವ ದಿರಾಜರು ಸಂಸ್ಕೃತದಲ್ಲಿ 16 ಗ್ರಂಥಗಳನ್ನು ಕನ್ನಡದಲ್ಲಿ ವೈಕುಂಠ ವರ್ಣನೆ ಲಕ್ಷ್ಮೀಶೋಭನೆ ಸ್ವಪ್ನಪದ ಗುಂಡಕ್ರಿಯೆ ಎಂಬ ಕೃತಿಗಳನೂ ಹಯವದನ ಎಂಬ ಅಂಕಿತದಲ್ಲಿ ಕೀರ್ತನೆ ಸುಳಾದಿ ಉಗಾಭೋಗಗಳನ್ನು ರಚಿಸಿದ್ದಾರೆ ಲಕ್ಷ್ಮೀಶೋಭನೆ 113 ಪದ್ಯಗಳ ಸಾಂಗತ್ಯಕೃತಿ ಇಲ್ಲಿ ಹರಿಯ ಸರ್ವೋತ್ತಮತ್ವವನು ವರ್ಣಿಸಲಾಗಿದೆ ತತ್ತ್ವಪದಗಳಿಗೆ ಉಪಯೋಗಿಸ ವ ವೃತ್ತದಲ್ಲಿರುವ ಗ ಂಡಕ್ರಿಯೆ ಚ ರ್ವಾಕ ಬೌದ್ಧ ಜೈನ ಅದ್ವೈತ ಮೀಮಾಂಸಕರನ್ನು ಖಂಡಿಸಿ ಮ ಧ್ವ ತತ್ತ್ವವೇ ಸಕಲ ಶಾಸ್ತ್ರ ಸಮ್ಮತವಾದದ್ದು ಪುರ ಷಾರ್ಥವನ್ನು ಗಳಿಸಲು ಮಾರ್ಗದರ್ಶಿ ಎಂದು ವಾದಿಸಿದ್ದಾರೆ ಭಾಮಿನೀ ಷಟ್ಪದಿಯ ಲ್ಲಿರ ವ ಸ್ವಪ ಪದ ಹರಿಪಾರಮ್ಯಗಳನು, ಮಾಧ್ವ ತತ್ತ್ವಗಳನ್ನು ಒಳಗೊಂಡ ಕೃತಿ 388 ಪದ್ಯಗಳಿರುವ ವೈಕುಂಠವರ್ಣನೆ ಶ್ರುತಿ ಪುರಾಣಗಳ ತಾತ್ತ್ವಿಕ ಸಾರವನೆ ಲ್ಲ ಹೇಳುವ ಕೃತಿ ಕನ ಡಿಯೊಳಿಪ್ಪಂತ ಪೂರ್ಣಪ್ರಜ್ಞರ ಮತದುನ ತ ತತ್ತ್ವಸಾರವನು ಕನ ಡದಿ ಬಣ್ಣಿಸಿದ ಸಿರಿ ವಾದರಾಜವ ನಿಯ ಬಿನ್ನಪನೆಲ್ಲರು ಎಂದು ಉಪೋದ್ಘಾತದಲ್ಲಿ ಅವರೇ ಹೇಳಿದ್ದಾರೆ ಅವರ ಈ ಎಲ್ಲ ಕೃತಿಗಳೂ ಸಾಹಿತ್ಯಕ್ಕಿಂತ ತಾತ್ತ್ವಿಕತೆಯ ಕಡೆಗೇ ಮುಖಮಾಡಿದವು ಶಾಸ್ತ್ರೀಯ ಯುಕ್ತಿಗಳನ್ನು ಸಾಹಿತ್ಯ ಮುದ್ರೆಯಿಂದ ಮನಸ್ಸಿಗೆ ನಡ ಪಂತೆ ಸರಳವಾದ ಪ್ರೌಢ ಕನ ಡ ನುಡಿಯಲ್ಲಿ ಮುಖ್ಯ ಪ್ರಮೇಯವಾದ ಭಕ್ತಿಯಿಂದ ಶ್ರೀಹರಿಯನ್ನು ಒಲಿಸಿ ಮುಕ್ತಿಯನು ಪಡೆಯ ಬೇಕೆಂಬುದನ್ನು ಸಿದ್ಧಾಂತಿಸಿದ್ದಾರೆ ಇವರ ಕೃತಿಗಳಿಗೆ ಶಾಸ್ತ್ರಸ ಹಿತ್ಯವೆನ್ನಬಹುದು ೫೫

ಪ ವನ ಮಾಡುವುದು ನಾವಮಾವ ತರಸ [೨] ಎಂಬಲ್ಲಿ ಹರಿನಾಮದ ಶ್ರೇಷ ತೆಯನ್ನು ಹೊಗಳಿದ್ದಾರೆ ನಾಮ ಎಾ.ಎ ರಸ ಹಣ್ಣು ಕೆನೆವಾಲುಗಳಿಗಿಂತಲೂ ಉತ್ತಮವಾದ್ದು ಜೇನ ತುಪ್ಪದಂತೆ ಸವಿಯಾದ್ದು ಎಾದು ನಾಮದ ಸವಿಯನ್ನು ನೀಡಿದ್ದಾರೆ ಲೋಕ ಭರಿತನೊ ರಂಗ ಅನೆ ಕ ಚರಿತನೊ ಸೆ ವಕನೆಂತೊ ನಾನು ನಿನ್ನಯ ಪಾದಸೇವೆ ನೀಡೆಲೊ ನೀನು ಗೀತೆಗಳು ಹರಿಯ ಮಹಿಮೆ ಯನ್ನು ಭಕ್ತನ ದಾಸ್ಯವನ್ನು ಚಿತ್ರಿಸುವಂಥವು ಕುದುರೆ ಬಾದಿದೆ ಚಿಪ್ವ ಕುದುರೆ ಬಾದಿದೆ ಎಂಬಲ್ಲಿ ಪರಮಾತ್ಮನ ಅನ ಗ್ರಹ ಪಡೆದಾಗಿನ ಅವರ ಧನ್ಯಭಾವ ವ್ಯಕ್ತವಾಗಿವೆ ಅವರ ಗೀತೆಗಳಲ್ಲಿ ದಾಸ್ಯಭಾವವೇ ಅಧಿಕವಾಗಿದ್ದರೂ ಏಸು ಸುಕೃತವ ಮಾಡಿದಳೊ ಯಶೋದೆ ಯಂತಹ ವಾತ್ಸಲ್ಯ ಗೀತೆಗಳೂ ವೇಣಿ ಮಾಧವನ ತೋರಿಸೆ ರಂಗ ನ್ಯಾಕೆ ಬಾರ ತಂಗಿ ಯಂತಹ ಗೋಪಿಯರ ವಿರಹ ಗೀತೆಗಳೂ ವಿರಳವಾ ಗಿ ಇವೆ ವಿಷಯಾಸೆ ಬಿಡಲೊಲ್ಲದೊ ದೇವ । ವಸ ದೆ ವ ಸ ತ ನಿನ ವಶವಾಗೊ ತನಕ । ಬಿಟ್ಟು ಬನ್ನಿರೋ ಸಂಸಾರದ್ವಂಒಲ ಎನು ವಂತಹ ಕೆಲವು ಸಾಮಾಜಿಕ ಗಿ ತೆಗಳೂ ಇವೆ ಈ ಹ ಡಿನಲ್ಲಿ ಒಣಪ್ರತಿಷ ವಿಷಯಾಭಿಲಾಷೆಯಿಂದ ಹದಗೆಟ್ಟ ಬದುಕಿನ ಚಿತ್ರವಿದೆ ಹಣವೆ ನಿನ್ನಯ ಗ ಣವೆನಿತು ಬಣ್ಣಿಸೆನಯ್ಯ ಈ ಗೀತೆಯಲ್ಲಿ ಹಣದ ಮಹಿಮೆಯನ್ನು ವ್ಯಂಗ್ಯವ ಗಿ ವರ್ಣಿಸಲಾಗಿವೆ ಹಣದಿಂದ ಮನುಷ್ಯ ಎಂತಹ ಕೆಲಸವನ್ನಾದರೂ ಸಾಧಿಸ.ಲ್ಲ ಎಂಬ ಸಾರ್ವಕಾಲಿಕಸತ್ಯ ವಿಡಂಬನಾತ್ಮಕವಾಗಿ ಅರ್ಥ ಪೂರ್ಣತೆಯನ್ನು ಪಡೆದ ಕೊಳ್ಳುತ್ತದೆ ತಾಳ್ಮೆಯ ಅವಶ್ಯಕತೆಯನ್ನು ತಿಳಿಸುವ ತಾಳುವಿಕೆಗಿಂತ ತಪವು ಇಲ್ಲ ಎಂಬ ಗೀತೆ ಅವರ ಕೀರ್ತನೆಗಳಲ್ಲಿ ತ ಂಬಾ ಪ್ರಸಿದ್ಧಿ ಯನ್ನು ಪಡೆದಿರುವಂಥದು ಇಲ್ಲಿ ತ ಳ್ಮೆ ಒಂದು ತಪ ಎಂದು ಹೇಳಿ ಮನುಷ್ಯ ತಾಳ್ಮೆಗೆಡಬಹುದಾದ ಸಂದರ್ಭವನ್ನು ಹೇಳಿ ಆಗೆಲ್ಲ ತಾಳ್ಮೆ ವಹಿಸು ಎಂದು ಹೇಳಿ ರುವುದರಿಂದ ಇದು ಜನಸ ಮಾನ್ಯರನ್ನು ತಲುಪುವ ಕಸುವು ಪಡೆಯುತ್ತದೆ

**ದ್ವಿತೀಯ ಘಟ್ಟದ ದಾಸರು** ಪುರಂದರದಾಸರ ನಂತರ ದಾಸಪರಂಪರೆ ಸುಮಾರು ನೂರು ವರ್ಷ ತಟಸ್ಥವಾಗಿತ್ತು ವಿಜಯದಾಸರ ಕಾಲದಲ್ಲಿ ಹರಿದಾಸ ಸಾಹಿತ್ಯ ತನ್ನ ಹಿಂದಿನ ಪ್ರಕಾಶದೊಂದಿಗೆ ಪುನಃ ಪ್ರಕಟವಾಯಿತು ಆದ್ದರಿಂದ ವಿಜಯದಾಸರನ್ನು ದಾಸಸಂಪ್ರದಾಯ ವನ್ನು ಪುನರ ಜ್ಜೀವನ ಮಾಡಿದ ಮ ಹಿಮ ರೆಂದು ಹೇಳಲು ಯಾವ ಅಡ್ಡಿಯೂ ಇಲ್ಲ [೨] ಶ್ರೀ ರಾಘವೇಂದ್ರತೀರ್ಥರು ಪುರಂದರದಾಸರ ಗುಂಪಿಗೂ ವಿಜಯದಾಸರ ಹರಿಭಕ್ತರ ಗುಂಪಿಗೂ ಮಧ್ಯವರ್ತಿ ಗಳಾಗಿದ್ದು ಪರಂಪರೆಯಿ ಂದ ಒಂದ ದಾಸ-ವ್ಯಾಸಕೂಟಗಳ ತಿರ ಳನ್ನು ಮುಂದಿನ ಭಕ್ತವೃಂದಕ್ಕೆ ನೀಡುವ ಜೀವನಳಿಕೆಯಂತೆ ಇದ್ದರು [೨೦] ಈ ಎರಡೂ ಘಟ್ಟಗಳ ನಡುವೆ ಆಗಿ ಹೋದವರು ಮಹಿಪತಿದಾಸರು ತಟಸ್ಥಕಾಲವೆಂದು ಪರಿಗಣಿತವಾದ ಸಂದಿಗ್ಧವಾದ ಕಾಲದಲ್ಲಿ ಕೀರ್ತನರಚನೆಗೆ ತೊಡಗಿದ್ದರಿಂದಲೋ ಏನೋ ಅವರು ತಮ್ಮ ಪರಂಪರೆಯನ್ನು ನೆನೆದಂತೆ ಕ ಣ ವುದಿಲ್ಲ

ಮಹಿಪತಿದಾಸರು 17 ನೆ ಶತಮಾನದ ಮಧ್ಯಭಾಗದಲ್ಲಿ ಬಿಜಾಪುರ ಜಿಲ್ಲೆಯ ಲ್ಲಿ ಆಗಿ ಹೋ ದವರು ವ ಹಿಪತಿದಾಸರು ತಮ್ಮ ಪರ ಪರೆಯ ಪುರಂದ ರಾದಿ ದಾಸರಂತೆ ಹರಿಸ್ತುತಿ ಹರಿಲೀಲೆ ಸಂಸಾರದ ನಶ್ವರತೆ ಇವುಗಳನ್ನು ಕುರಿತಂತೆ ಕೀರ್ತನೆ ಸುಳಾದಿ ಉಗಾಭೋಗಗಳನು ಕೋಲಾಟದಪದ ಸ ವ್ವಾದ ಶೋಭಾನೆ ಪದ ಜೋ ಜೋ ಕೊರವಂಜಿ ಪದಗಳನ್ನು ರಚಿಸಿದ್ದಾರೆ

ಪರಮ ಸ ಜೀವನವು ಗ ರು ನಿಮ್ಮ ನಾಮ ಎಂದು ಹರಿನಾಮವನ್ನು ನೆನೆದು ಪರಮ ಪದವಿ ಪಡೆದ ಪ್ರಹ್ಲಾದ ಅಜವಿ ಳ ದ್ರೌಪದಿ ಗಜೇಂದ್ರ ಸುಧಾಮ ಮೊದಲಾದ ಭಗವದ್ಭಕ್ತರನ್ನು ನೆನೆದಿದ್ದಾರೆ ಇಂಥ ಹರಿ ಭಕ್ತರ ಸಂಗ ಸ್ನಾನ ಗಂಗ ತುಂಗ ಎಂಬಲ್ಲಿ ಭಕ್ತರ ಮಹಿಮೆಯನ್ನು ಹೇಳುತ್ತಾರೆ ಇಂದು ಶ್ರೀ ಗ ರುಪಾದ ಪದ್ಮ ನೋಡ ವ ಈಶನೀಗ ಕೃಷ್ಣನಾಥನು ಈ ವ ಹಿಮೆಗೆ ಏನೇನಬಹುದು ಎಂಬ ಹಾಡುಗಳಲ್ಲಿ ಹರಿಯ ವ ಹಿಮೆ ವರ್ಣಿತವಾಗಿದೆ ಆಲದಲೆಯಮ್ಯಾಲೆ ಹಾಡಿನಲ್ಲಿ ಹರಿಯ ಸಾಂಪ್ರದಾಯಿಕ ರೂಪವನು ದಶಾವ ತಾರವನ್ನು ವರ್ಣಿಸಲಾಗಿದೆ ಉಂಬುವ ಬನಿ ರೊ ಆನಂದದೂಟವ ಉಂಬುವ ಬನಿ ರೋ ನೀಟ ಅನುಭವದೂಟ ಕೃತಿಗಳು ಹರಿಯ ನಾಮಸ್ಮರಣೆಯಿಂದ ಪಡೆ ಯುವ ಆನಂದವನು ಗಳಿಸಿದೆನು ಗಳಿಸಿದೆನು ಘಳಿಗೆಯೊಳಗೆ ಗುರುವಿನಧ್ಯಾನ ಧಾರಣಗಳ ಮೂಲಕ ಸಾಯುಜ್ಯ ಸಾಧ್ಯವೆಂಬುದನ್ನೂ ಅರ್ಥವತ್ತಾಗಿ ವಿವರಿಸ ತ್ತದೆ ಏನು ಸಾಧಿಸುವುದೇನರಿದು ಹಾಡು ವ ನ ಷ್ಟ ವಿದ್ಯೆ ಜ್ಞಾನ ಹಣ ಸ ಖ ಅಧಿ ಕಾರ ವೈರಾಗ್ಯಗಳನು ಸ ಲಭವಾಗಿ ಗಳಿಸಬಲ್ಲ ಆದರೆ ಮೂಢ ಮಹಿಪತಿ ಒಡೆಯ ನ ಕೃಪೆ ಪಡೆಯಂವುದೇ ದುರ್ಲಭ ಎಂದು ವಿವರಿಸುತ್ತದೆ ಮಹಿಪತಿ ದಾಸರ ಸಂಸಾರವನ್ನು ತ್ಯಜಿಸಬೇಕೆಂದು ನುಡಿದವರಲ್ಲ ಅಲ್ಲಿ ಹೇಗಿರಬೇಕೆಂದರೆ ಅರ್ತರಿಯ್ಯದ್ದಾಂಗೆ ಇರಬೇಕು ಮರ್ತ್ಯದೊಳಗೆ ಇದ್ದರಿರಬೇಕು ಸಂಸಾರ ಸುಖ ದಲ್ಲೀಗೆ ಪದ್ಮ ಪತ್ರವು ಜಲದೊಳಗಿದ್ದಾಂಗೆ ಎಂದು ಉಪಮೆಗಳ ಮೂಲಕ ಸ್ಪಷ್ಟಪಡಿಸುತ್ತಾರೆ ಏನಗಳಿಸಿದ್ಯೊ ಪ್ರಾಣಿ । ಜ್ಞಾನತ ಮಾಡಿ ನೀ ಹಾನಿ ತತ್ತ್ವ ತಿಳಿಯದು ಅಹಮತ್ವ ತಿಳಿಯದನಕ ಏನು ವಂತಹ ಆತ್ಮ ನಿರೀಕ್ಷಣೆಯಂ ಗೀತೆಗಳ ವ ೂಲಕ ತಮ್ಮನೇ ತಾವು ಅರಿಯಲು ಪ್ರಯತ್ನಿ ಸಿದ್ದಾರೆ

ಮಹಿಪತಿದಾಸರ ಕಿ ರ್ತನೆಗಳಲ್ಲಿ ವಾತ್ಸಲ್ಯ ಭಾವದ ಕೀರ್ತನೆಗಳು ಕಡಿಮೆ ಎಂಥ ಮಗನೆ ನಿಮ್ಮ ಗೋಪವ್ವ ಇವ ನೊ ಡವ್ವ ನವನೀತಚೋರ ಎಂದು ಗೋಪಿಯ ರು ಕೃಷ್ಣನನ್ನು ದೂರ ವಲ್ಲಿ ಅವನ ಬಾಲಲೀಲೆಗಳು ವ್ಯಕ ವಾಗಿವೆ ಇನು ಕೆಲವು ಗೀತೆಗಳನು ನೋಡಿದಾಗ ಪುರ ದರ ಹಾಗೂ ಕನಕದಾಸರ ಪ್ರಭಾವ ಅವರ ಮೇಲೆ ಗ ಢವಾಗಿತ್ತೆಂಬ ದು ತಿಳಿಯುತ್ತದೆ ಉದಾ ; ಜೀವ ನಿನ ದೋ ಗುರುಭಾವ ನಿನ್ನದೋ ಏನ ಪರ ಧವೇನು ನಿನ್ನ ಸೂತ್ರಾಡಿಸಿದ್ದಾಂಗ ಆಡುವೆ ಸಕಲವೆನಗೆ ನೀನೆ ಶ್ರೀಹರಿ ಬಾರೋ ಬಾರೋ ರಂಗ ಬಾರೋ ಕೃಷ್ಣ

ಮುಂತಾದುವು ಕನಕದಾಸರ ನಂತರದಲ್ಲಿ ಅವರಂತೆ ಮುಂಡಿಗೆಯನ್ನು ರಚಿಸಿದವರು ಮಹಿಪತಿದಾಸರೊಬ್ಬರೇ ಆದರೆ ಅವುಗಳನ್ನು ಅರ್ಥೈಸುವುದು ಕಷ್ಟ

**ವಿಜಯದಾಸರು**

18 ನೇ ಶತಮಾನದ ಪೂರ್ವಭಾಗದಲ್ಲಿ ಆಗಿ ಹೋದ ವಿಜಯದಾಸರು ಅದುವರೆಗೆ ಸ್ಥಗಿತವಾಗಿದ್ದ ದಾಸಪರಂಪರೆಯನು ಮುಂದುವರಿಸಿದವರು ಅವರು ತಾವು ಕೃತಿಗಳನ್ನು ರಚಿಸುವುದರೊಂದಿಗೆ ಗೋಪಾಲದಾಸರು ಜಗನ್ನಾಥದಾಸರು ಮೊದಲ ದ ಶಿಷ್ಯರನ್ನು ಹೊಂದಿದ್ದು ಅವರ ಮೂಲಕ ಪರಂಪರೆಯು ಮುಂದುವರಿಕೆಗೆ ಕಾರಣರಾದರು ದಾಸರ ಕೀರ್ತನೆಗಳಲ್ಲಿ ಪುರಂದರದಾಸರ ಮತ್ತು ಕನಕದಾಸರ ಕೀರ್ತನೆಗಳ ನಂತರ ಅಷ್ಟೇ ಜನಪ್ರಿಯತೆಯನ್ನು ಪಡೆದದ್ದು ಜನರ ನಾಲಿಗೆಯಲ್ಲಿ ನಲಿದದ್ದು ವಿಜಯದಾಸರ ಕೀರ್ತನೆಗಳು ಉದಾ ಕೈಲಾಸವಾಸಗೌರೀಶ ಈಶ ಸದಾ ಎನ್ನ ಹೃದಯದಲ್ಲಿ ವಾಸ ಮಾಡು ಶ್ರೀಹರಿ ಮುಂತಾದವು

ನಿನ್ನ ಚಿತ್ತಕ್ಕೆ ಬಂದಂತೆ ಮಾಡೋ ಸರ್ವೇಶಾ [27] ದುರಿತ ರಾಶಿಯ ಬಿಡಿಸು ದುಸ್ಸಂಗವನು ಕೆಡಿಸು ಎನು ವ ಗೀತೆಗಳಲ್ಲಿ ದಾಸ್ಯ ಭಾವವನ್ನು ತಾಳಿದ ದಾಸರು ನಿನ್ನ ದಾಸರು ಪೊದ್ದ ವಸನವೇ ಎನಗಾಗಲಿ ನಿನ್ನ ದರುಶನಕೆ ಒಂದವನಲ್ಲವೊ ಭಕುತ ಜನ ವ ಎಂದೆ ನೀನವರ ಹಿಂದೆ ಎನ್ನುವಂತಹ ಗೀತೆಗಳಲ್ಲಿ ಹರಿಗಿಂತ ಹರಿಯ ಭಕ್ತರೆ ಶ್ರೇಷ್ಠ ಎಂದು ಹರಿಭಕ್ತರ ಹಿರಿಮೆ ಯನ್ನು ಕೊಂಡಾಡಿದ್ದಾರೆ ಮನ ನಲಿಸು ವುದು ಬಹಳ ಕಷ್ಟ ಯಾಕೆ ಬಂದಿ ಜೀವ ಯಾಕೆ ಬಂದಿ ಪಾಪವೆಂಬುದು ಹೊರಗಿಹುದೆ ತನ್ನ ಕೋಪವಲ್ಲದೆ ಬೇರೆ ಹೊಸತಾಗಿ ಒಹುದೆ ಇವೆಲ್ಲ ಲೌಕಿಕ ವಿಷಯಗಳನ್ನು ಕ ರಿತಂತೆ ಅವರ ಅಭಿಪ್ರಾಯವನ್ನು ತಿಳಿಸುವಂತಹ ಕೀರ್ತನೆಗಳು

ಗ ರು ಪುರಂದರದಾಸರೇ ನಿಮ್ಮ ಚರಣಸರಸಿಜ ನಂಬಿದೆ ಎಂದು ತಮ್ಮ ಗುರುಪರಂಪರೆಯನ್ನು ಸ್ಮರಿಸುವ ವಿಜಯ ದಾಸರ ಕೃತಿಗಳಲ್ಲಿ ಪುರಂದರದಾಸರ ಪ್ರಭಾವ ಗಾಢವಾಗಿ ಆಗಿದೆ ಪುರಂದರದಾಸರನು ಕುರಿತು ಹಾಡಿರುವ ದಾಸರ ಭಾಗ್ಯವಿದು ಎಂಬ ಹಾಡು ಪುರಂದರದಾಸರ ಗೋಪಿಯ ಭಾಗ್ಯವಿದು ಹಾಡನ್ನು ನೆನಪಿಗೆ ತರ ತ್ತದೆ ಆದರೆ ಅದು ಪುರಂದರದಾಸರನೇ ಕುರಿತ ಹಾಡಾಗಿದ್ದುದರಿಂದ ಅದಕ್ಕೆ ಒಂದು ವಿಶಿಷ್ಟತೆಯೂ ದೊರೆತಂತಾಗಿದೆ ಹೊಲೆಯ ನಾವನೊ ಈ ಕಲಿಯುಗದೊಳಗೆ ಹಾಗೂ ಹೊಲತಿಯ ನ್ನು ಕುರಿತ ಸ ಳಾದಿ ಈ ಎರಡೂ ಪುರಂದರದಾ ರ ಹೋಲಿಯು ಊರೊಳಗಿಹನೆ ಎಂಬ ಗೀತೆಯ ದೃಷ್ಟಿಯನ್ನೇ ಹೊಂದಿರುವಂಥವು ಆ ಗೀತೆಯ ಂತೆ ಇಲ್ಲೂ ವ್ಯವಸ್ಥೆಯ ನು ಪ್ರಶ್ನಿಸದೆ ಹೊಲೆಯ ಎಂದರೆ ಯಾರು ಎಂಬ ಕಡೆಗೇ ವಿಜಯ ದಾಸರ ಗಮನವೆಲ್ಲ ಹೊಲೆತನ ಜಾತಿಯಿಂದ ಬರುವಂತಹುದಲ್ಲ ನಡತೆಯಿಂದ ಬರ ವಂತಹ ದು ಎಂದೇ ವ್ಯಾಖ್ಯಾನಿಸಲಾಗಿದೆ

ಮಧ್ವಮತ ಪೊಂದದವನ ಭಕುತಿಯಾತಕೆ ಊರ್ಧ್ವ ಪುಂಡ್ರ ತಿದ್ದದವನ ಕರ್ಮ ವ್ಯಾತಕೆ ಎನು ಮಂತಹ ಮತ ಭಿಮಾನದ ಗೀತೆಗಳೂ ಕೆಲವು ಇವೆ ಅವರ ರಚನೆ ಗಳಲ್ಲಿ ಅವರದೆ ಆದಂತಹ ವಿಶಿಷ್ಟತೆಯನ್ನು ಕಾಪಾಡಿಕೊಂಡಿದ್ದಾರೆ ಶುದ್ಧ ಕನ ಡ ಶಬ್ದಗಳ ಸಂಯೊ ಜನೆಯಿದ್ದರೂ ವಿಜಯದಾಸರ ಶೈಲಿಯ ಲ್ಲಿ ಒಂದು ಬಗೆಯ ಬಿಗಿ ಯ ರುತ್ತದೆ ಶಬ್ದ ಶಬ್ದಗಳ ಉಚಿತ ಜೋಡಣೆ ಆದಿ ಅಂತ್ಯ ಪ್ರಾಸಗಳ ನಿಯತತೆ ಉಚಿತ ಉಪಮೆಗಳ ಸಾಲುಗಳು ಸಾಮಾನ್ಯ ಜನರ ಮನಸ್ಸಿಗೆ ಮುಟ್ಟುವಂತೆ ತಮ್ಮ ಅಭಿಪ್ರಾಯ ವನ್ನು ಕೀರ್ತನೆ ಸ ಳಾದಿ ಉಗಾಭೋಗಗಳ ಮೂಲಕ ವ್ಯಕ್ತಪಡಿಸುವ ಸಾಮರ್ಥ್ಯ ದಾಸರಿಗಿದೆ [28]

ಪುರಂದರದಾಸರ ನಂತರದಲ್ಲಿ ಹೆಚ್ಚು ಸುಳಾದಿಗಳನು ರಚಿಸಿದ ಹಿರಿಮೆ ವಿಜಯದಾಸರದು ದಾಸ ಸ ಹಿತ್ಯ ಸಮೂಹದಲ್ಲಿ ಇವರ ಸುಳಾದಿಗಳಿಗೆ ವಿಶೆ ಷ ಮಹತ್ತರ ಸ್ಥಾನವುಂಟು ಭಕ್ತಿ ಜ್ಞಾನ ವೈರಾಗ್ಯ ಭೋಧಕವಾದ ಅಥವಾ ಯಾವುದೊಂದು ನಿ ತಿ ಬೋಧಕವಾದ ಅಥವಾ ಭ ಗವತ ಸ್ತೋತ್ರಪರವಾದ ಹೀಗೆ ಯಾವ ವಿಚ ರವನ್ನು ತೆಗೆದುಕೊಂಡರೂ ಅದರ ಕೂಲಂಕಷ ವಿಚಾರವನ್ನು ಸಂಪೂರ್ಣ ತತ್ತ್ವಗಳನ್ನೂ ಸುಲಲಿತ ತಿಳಿಗನ ಡ ಮಾತುಗಳಲ್ಲಿ ವರ್ಣಿಸುವ ಇವರ ಸುಳಾದಿಗಳು ಬಹುತತ್ತ್ವ ಬೋಧಕವಾಗಿವೆ ಮಾತ್ರವಲ್ಲ ಅರ್ಥ ನ ಕರಣ ಮಾಡು ವಲ್ಲಿ ಅದ್ವಿತೀಯವೆನಿಸುವ ಇವರ ಶಬ್ದ ಸಂಯೋಜನೆಯೂ ಕರ್ನಾಟಕ ಸಾಹಿತ್ಯಕ್ಕೇ ಭೂಷಣ ಪ್ರದವಾಗಿದೆ [9] ಅಲ್ಲದೆ ಅವರ ಸುಳಾದಿಗಳು ವಸ್ತು ವೈವಿಧ್ಯತೆಗೆ ವಸ್ತು ಪ್ರತಿಪಾದನೆಗೆ ಸುಭಗತೆಗೆ ಹೆಸರಾಗಿದೆ

## ಗೋಪಾಲದಾಸರು—*1750*

ಗೋಪಾಲದಾಸರು ವಿಜಯದಾಸರ ಶಿಷ್ಯರಾಗಿ ಗೋಪಾಲವಿಠಲ ಅಂಕಿತ ದೊಂದಿಗೆ ಕೀರ್ತನೆಯ ರಚನೆಗೆ ತೊಡಗಿದರು ವಿಜಯದಾಸರಿಗಿಂತ ಗೋಪಾಲ ದಾಸರ ಕೃತಿಗಳು ಹೆಚ್ಚು ಶಾಸ್ತ್ರ ಸಿದ್ಧಾಂತ ತತ್ತ್ವಗಳ ಕಡೆ ವಾಲಿದೆ ಭಕ್ತಿ ಪರ ವಾದ ಗೀತೆಗಳು ಹೇರಳವಾಗಿವೆ ಆದರಿಂದಲೇ ಇರಬೇಕು ಅವರಿಗೆ ಭಕ್ತಿಯಲ್ಲಿ ಭಾಗಣ್ಣ ಎಂಬ ಹೆಸರು ಗ ರಂವಿನಿಂದಲೇ ಬಂದಿದ್ದು ಹಾಗಾಗಿ ವಾತ್ಸಲ್ಯ ಮಧುರ ಸಖ್ಯ ಭಾವಗಳಿಗಿಂತ ಶಾಂತ ದಾಸ್ಯ ಭಾವಗಳದೇ ಪ್ರಾಬಲ್ಯ ಅವರ ರಚನೆ ಗಳಲ್ಲಿ

ಎಲ್ಲಿ ನೋಡಲಂ ನೀನಿಲ್ಲದ ಸ್ಥಳವಿಲ್ಲ [30] ನಿನ್ನ ನಾಮಸ್ಮರಣೆ ಎನಗೆ ತೀರ್ಥ ಯಾತ್ರೆಗಳಯ್ಯ ಬರುವುದೆಲ್ಲ ಬರಲಿ ಶ್ರೀಹರಿಯಂ ಕರ ಣ ಇರಲಿ ಬೋಗ ತೀರಿಸಿ ದಾಸನಾಗ ಮಾಡೋ ಮೊದಲಾದ ಸ ಳಾದಿಗಳಲ್ಲಿ ಭಕ್ತಿಯು ಗಾಢತೆಯಿದೆ ಮಡಿ ಮಾಡ ಬೇಕು ಒಳ್ಳೆ ನಡತೆ ಕಲಿಯಬೇಕು ಎನು ವಲ್ಲಿ ವಿರಲನ ನುಡಿ ಯೇ

ವ ಡಿ ಮಾಡುತ್ತದೆ ಎ ದು ಲೌಕಿಕರಿಗೆ ಉಪದೇಶ ೧ ಡುವ ಅವರು ಚ್ಯುತ ರಹಿತ ವಾದಂಥ ಗತಿಯು ಬೇಕೆಂಬುವರಿಗೆ ಎಂಬ ರಚನೆಯಲ್ಲಿ ಮನ ಪ್ಕ ಅತ ಪ್ರನಾಗದೆ ಹಿತಾಹಿತಗಳನು ಅರಿತು ಮೋಹವನ್ನು ತೊರೆದು ಪತಿತ ಪಾವನ ಗೋಪಾ ವಿಠ ನಲ್ಲಿ ರತಿ ಉಳ್ಳವನಾದರೆ ಅವನಿಗೆ ಸದ್ಗತಿ ದೊರಕುತ್ತದೆ ಎಂದು ಸಲಹೆ ನೀಡುತ್ತಾರೆ

ಸಂಸಾರದ ಜಂಜಾಟವನ್ನು ತಪ್ಪಿಸಿ ತನ ನು ಪಾರು ಮಾಡಬೆ ಕೆಂದು ಬೇಡುವ ರಚನೆಗಳೂ ಹಲವಿವೆ ಏನ ಬೇಡಲೋ ನಿನ್ನ ಒಳಿಗೆ ಬಂದು ಬೆ ಡದಂದಲಿ ಪಾರು ಮಾಡು ಸಾಕು ಸಾಕು ದುರ್ವಿಷಯ ಕ್ಕರಗಿಸದೆ ಆವರೊ ಗ ಎನಗೆ ದೇವ ಧನ್ವಂತ್ರಿ ಈ ಪರಿಯ ಅಧಿಕಾರ ಒಲ್ಲೆ ನಾನು ಮುಂತಾದವು ವಿಶ್ವತೋ ವ ಖ ನೀನೆ ವಿಶ್ವತೋ ಚಕ್ಷು ನೀನೆ ಎನು ವಂತಹ ಗೀತೆಗಳು ಸಂಸ್ಕೃತದಿಂದ ನೇರ ವಾಗಿ ಅನ ವಾದಗೊಂಡಂತಹವು ಸಪ್ತಾ ವರಣ ಶರೀರಕೆ ದಶಸಪ್ತದ್ವಿಸಹಸ್ರ ನಾಡಿಯ ಲಿ ಆಂತಹ ರಚನೆಗಳು ಸಂಸ್ಕೃತ ಭೂಯಿಷ್ಠ ವಾದವುಗಳು ಇತರ ಎಲ್ಲ ದಾಸರಿಗಿಂತ ಗೋಪಾಲದಾಸರ ಕೃತಿಗಳಲ್ಲಿ ಭಾಷೆಯ ಜಟಿಲತೆ ತಾತ್ತ್ವಿಕತೆ ಹೆಚ್ಚು ನಡೆದು ಬ ರಯ್ಯ ನೀನು ವೆಂಕಟರಾಯ ಎನು ವಂತಹ ಸರಳ ಕನ ಡದ ರಚನೆ ಗಳೂ ಅಲ್ಲಲ್ಲಿ ಇವೆ

### ಜಗನ್ನಾಥದಾಸರು

ಸು ಕ್ರಿ ಶ 1750ರ ನಂತರ ಆಗಿ ಹೋದ ಜಗನ್ನಾಥದಾಸರು ವಿಜಯ ದಾಸರ ಶಿಷ್ಯರಲ್ಲಿ ಮುಖ್ಯರಾದವರು ವಿಜಯದಾಸರನ್ನು ರತುನ ದೊರೆಕಿತಲ್ಲ ಎಂದಿರುವ ಶಿಷ್ಯರು ಮೊದಲು 30 ವರ್ಷಗಳ ಕಾಲ ಗಿ ರ್ವಾಣ ಭಾಷಾ ಪಂಡಿತ ರಾಗಿದ್ದು ವಿಜಯದಾಸರ ಶಿಷ್ಯರ ದ ಮೇಲೆ ಕನ್ನಡಾಭಿಮಾನದಿಂದ ಕನ್ನಡದಲ್ಲಿ ಕೃತಿ ರಚಿಸಿರ ವುದ ಗಿ ತಿಳಿದು ಬರ ತ್ತದೆ

ಜಗನಾ ಥದಾಸರು ತತ್ತ್ವ ಸುವಾಲಿಗಳನ್ನು ದೆ ಸಿ ಛಂದಸ್ಸಾದ ತ್ರಿಪದಿಯಲ್ಲಿ ರಚಿಸಿದ್ದಾರೆ ಬ್ರಹ್ಮ ಸೂತ್ರ ಭಾಷ್ಯ ಭಾಗವತ ಉಪನಿಷತ್ತುಗಳು ತಾತ್ಪರ್ಯ ನಿರ್ಣಯ ತಿ ರ್ಥ ಪ್ರಬಂಧ ವಾವ ನ ಗರುಡ ಬ್ರಹ್ಮಾಂಡ ಬ್ರಹ್ಮತರ್ಕ ಪುರಾಣ ಗಳು ಯ ಕ್ತಿವ ಲ್ಲಿಕಾ ವಿಷ್ಣು ರಹಸ್ಯ ಸತ್ತತ್ತ್ವರತ ಮಾಲೆ ಸುಮಧ್ವ ವಿಜಯ ಅನುವ್ಯಾಖ್ಯಾನ ಹರಿವಂಶ ಮೊದಲ ದ ಪ್ರಸಿದ್ಧ ಗ್ರಂಥಗಳಲ್ಲಿ ಅಡಕವ ಗಿರುವ ಪ್ರಮೇಯಗಳ ಸ ರವನ್ನು ಸರಳ ಕನ ಡದಲ್ಲಿ ಭಟ್ಟಿ ಇಳಿಸಿದ್ದಾರೆ ಸುವ ಲಿಗಳಲ್ಲಿ [81] ಪರಂಪರೆಯ ಸ್ಮರಣೆ ಒ ಮ ನೆ ಪುಷ್ಕರಣಿ ತೀರ್ಥಕ್ಷೇತ್ರಗಳ ವ ಹಿಮೆಯನ್ನು ತಮ್ಮ ಕೀರ್ತನೆಗಳಲ್ಲಿ ಮಾಡಿದ್ದಾರೆ ಕಂಡೆ ಕಂಡೆ ಕೃಷ್ಣನ [82]ದಲ್ಲಿ ಹರಿಯ ಸಾಂಪ್ರದ ಯಿಕ ರೂಪವನ್ನು ವಾರಿಜಾನನು ಇವನ್ಯಾರು ಹೇಳಮ್ಮ ಗಿ ತೆಯ ಲ್ಲಿ

ಅವನ ಮಹಿಮೆಯನ್ನು ಹೇಳಿರುವ ದಾಸರು ಪಾಹಿ ಪಂಕೇರುಹೇಕ್ಷಣ ಸರ್ವ ಕಾಮದ ಕೀರ್ತನೆಯಲ್ಲಿ ವಿಷ್ಣುವಿನ ಮಹಿಮೆಗಳನ್ನು ವರ್ಣಿಸಿದ್ದಾರೆ

ಗತಿಯಾವುದೆನಗೆ ಶ್ರೀಪತಿಯೆ ಪೇಳೊ ಎನು ವಲ್ಲಿ ನೀನೇ ಕಾಯ ದಿರೆ ನಾನಂ ಈ ಐಹಿಕ ಭೋಗಗಳಲ್ಲಿ ಮುಳುಗಿ ಹಾಳಾಗ ವೆ ಎಂದಂ ಬೇಡುವ ದಾಸರು ಶ್ರೀ ವೆಂಕಟಾಚಲ ನಿವಾಸಾ ನಿನ ಸೇವಾನುಸೇವಕರ ದಾಸ ಎಂದು ದೀನವಾಗಿ ಹೇಳಂ ತ್ತಾರೆ ಜಗನಾ ಥದಾಸರ ಕೀರ್ತನೆಗಳಲ್ಲಿ ಭಾವವೈವಿಧ್ಯ ಕಡಿಮೆ

ಹರಿಕಥಾಮೃತ ಸಾರ 32 ಸಂಧಿಗಳ ಸುಮಾರು ಸಾವಿರದಷ್ಟು ಭಾಮಿನೀ ಷಟ್ಪದಿಯ ಪದ್ಯವುಳ್ಳ ಕೃತಿ ಮಧ್ವಮತದ ತತ್ತ್ವಗಳನು ಪರಮ ಭಗವದ್ಭಾಸ ರಿಗೆ ತಿಳಿಸುವುದಂ ಅವರ ಉದ್ದೇಶ ಅವರ ನಿರೂಪಣೆ ಸರಳವಾಗಿದ್ದರೂ ಶಾಸ್ತ್ರದ ಭಾಗದಲ್ಲಿ ಗಡುಸಾಗುವುದಂ ಸಹಜವೇ ಹರಿಯ ಮಹಿಮೆಯನು ಹೇಳುವ ಸರಳ ಶೈಲಿಯ ಪದ್ಯ ಇದು

> ಮಲಗಿ ಪರಮಾದರದಿಪಾಡಲು
> ಕುಳಿತು ಕೇಳುವ ಕುಳಿತು ಪಾಡಲು
> ನಿಲುವ ನಿಂತರೆ ನಲಿವ ನಲಿದರೆ ಒಲಿವ ನಿಮಗೆಂಬ ॥

ಎಲ್ಲರೊಳು ತಾನಿಪ್ಪ ತನ್ನೊಳಗೆಲ್ಲರನು ಧರಿಸಿಹನಂ ಅಂತಹ ಪರಮಾತ್ಮನ ಮಹಿಮೆ ಯನ್ನು ದಾಸರಿಗೆ ವರ್ಣಿಸಿದಷ್ಟು ಕಡಿಮೆಯೇ ಅಂತಹ ದೈವವನ್ನು ನೆನೆದವರಿಗೆ ಈ ಭವದ ದುಃಖವೇ ಇಲ್ಲ ಎಂಬುದು ಜಗನ್ನಾಥದಾಸರ ಅಭಿಪ್ರಾಯ

> ಆವಕುಲದವನಾದಡೇ ನಿ
> ನಾ ವ ದೇಶದೊಳಿದ್ದರೇ ನಿ
> ನಾ ವ ಕರ್ಮವ ಮಾಡಲೇನಿನ್ನಾವ ಕಾಲದಲಿ ॥
> ಶ್ರೀವರನ ಸರ್ವತ್ರರಲಿ ಸಂ
> ಭಾವಿಸುತ ಪೂಜಿಸುತ ಮೋದಿಪ
> ಕೋವಿದರಿಗುಂಟೇನು ಭವದುಃಖಾದಿ ದೋಷಗಳು ॥ (೧೩. ೪)

ಈ ಕೃತಿಯಲ್ಲಿ ತತ್ತ್ವಗಳನ್ನು ತಿಳಿಸಿ ಹೇಳುವುದರಲ್ಲಿ ಸಾಹಿತ್ಯ ದೃಷ್ಟಿಯೊಂದಿಗೆ ಅರಿಯದವರಿಗೂ ತಿಳಿಸಿಕೊಡಬೇಕೆಂಬ ಉದ್ದೇಶವೂ ಇದೆ ಅವರ ಕಾವ್ಯ ರಚನೆ ಯಲ್ಲಿ ಪಾಂಡಿತ್ಯ ಶಬ್ದ ಸಂಯೋಜನೆಯ ಸೌಂದರ್ಯ ಕವಿತಾ ರಚನೆಯ ಅಪೂರ್ವ ಕೌಶಲಗಳನ್ನು ಕಾಣುವ ಕೃತಿಗಳೂ ಸಾಮಾನ್ಯರಿಗೆ ಸುಲಭವಾಗಿ ಅರ್ಥವಾಗುವ ತತ್ತ್ವಾರ್ಥಗಳು ಸ್ಫುಟವಾಗಿ ಹೊಳೆಯುವ ವಿಷಯ ತಟ್ಟನೆ ಮನಸ್ಸನ್ನು ಹೊಕ್ಕು ಬೋಧಿಸಿ ಮನ ತಿರುಗಿಸುವ ಶಕ್ತಿಯನ್ನು ತೋರ ವ ಕೃತಿಗಳೂ ಇವೆ [53]

## ಪ್ರಸನ್ನ ವೆಂಕಟದಾಸರು

17ನೇ ಶತಮಾನದ ಕೊನೆಯಭಾಗದಲ್ಲಿ ಆಗಿ ಹೋದ ಪ್ರಸನ ವೆಂಕಟದಾಸರು ಬಿಜಾಪುರದ ಬಾಗಿಲಕೋಟೆಯವರು ಅವರು ಆರು ಕೃತಿಗಳನು ಮತ್ತು ಹಲವು ಕೀರ್ತನೆಗಳನೂ ರಚಿಸಿದ್ದಾರೆ ಸಮಸ್ತ ನಾಮ ವ ಣಗಣ ಷಟ್ ಚರಣ ಪದ್ಯ ಮಾಲಾ ಶಾಸ್ತ್ರದ ಸಾರವನು ಹೇಳ ವಂತಹ 71 ನುಡಿಗಳ ಭಾಮಿನಿ ಷಟ್ಪದಿಯಲ್ಲಿ ರುವ ಕೃತಿ ನಾರದರು ಕೊರವಂಜಿಯಾಗಿ ವೇಷತಾಳ್ದ ಚರಿತ್ರೆ ನಾರದರು ಕೊರವಂಜಿಯಾಗಿ ರುಕ್ಮಿಣಿಯಲ್ಲಿಗೆ ಹೋಗಿ ಕಣಿ ಹೇಳಿದ ಸಂಗತಿಯನ್ನು ಒಳಗೊಂಡಿದೆ 29 ನುಡಿಗಳ ಶ್ರೀಕೃಷ್ಣ ಪಾರಿಜಾತ ಶ್ರೀಕೃಷ್ಣನಿಗೂ ಅವನ ಭಾವೆಯರಿಗೂ ಪಾರಿಜಾತವನು ಕುರಿತು ನಡೆದ ಸಂವಾದವನು ಚಿತ್ರಿಸುತ್ತದೆ ಅವನ ಭಾಮೆಯರ ಸವತಿ ಮಾತ್ಸರ್ಯದ ಚಿತ್ರಣ ಜೀವಂತವಾಗಿದೆ ಗೋಪಿಯರು ಉದ್ಧವನೊಂದಿಗೆ ಮಾತಾಡುವಾಗ ಅಲ್ಲಿಗೆ ಬಂದ ದುಂಬಿಯೊಂದಿಗೆ ಕೃಷ್ಣನ ವಿರಹವನು ತೋಡಿಕೊಳ್ಳುವ ಭ್ರಮರಗೀತೆ ಭಾಗವತದಿಂದ ಪ್ರೇರಿತವಾದದು ಆದರೆ ಈ ಕೃತಿಯ ಲೇಖಕರನ್ನು ಕುರಿತು ಭಿನ್ನಾಭಿಪ್ರಾಯವಿದೆ ನಾರಾಯಣ ಪಂಜರ ದಲ್ಲಿ ಸ್ತೋತ್ರರೂಪವಾದ 40 ಪದ್ಯಗಳಿವೆ ಪ್ರಸನ್ನ ವೆಂಕಟ ಭಾಗವತ ಭಾಗವತದ ದಶಮಸ್ಕಂದದಲ್ಲಿರುವ ಕೃಷ್ಣನ ಬಾಲಲೀಲೆಯ ಆಯ್ದಭಾಗ

ತಂದೆ ಪುರಂದರದಾಸರ ಸ್ಮರಿಸುವೆ ಎಂದು ಪರಂಪರೆಯನ್ನು ನೆನೆದ ವೆಂಕಟದಾಸರು ಸಖ್ಯವಿರಬೆಕು ಹರಿಭಕ್ತಜನಕೆ ಪಾರ್ಥಸಖನ ತಾರಾಬ್ಧದಲಿ ಎಂದು ದೇವನನ್ನು ಆತ್ಮೀಯವಾಗಿ ಕಾಣುತ್ತಾರೆ ಸುಳಿದನ್ಯಾರೆ ಈಗ ಸುಳಿದನ್ಯಾರೆ ಬಾಲನ ಮೆಲೆ ನಿನ ಮೋಹವಮ್ಮಾ ಆರಬಾಲಕನೆ ಚಾರನಿವ ಗೀತೆಗಳು ಕೃಷ್ಣನ ಬಾಲಲೀಲೆಗಳನ್ನು ಸೊಗಸಾಗಿ ಚಿತ್ರಿಸತ್ತವೆ ಮರೆಯದಿರು ಮನವೆ ಮಾಧವನಾ ಚಂಚಲಿಸದೆ ನೀನು ಚತರನಾಗು ಎಂದು ತಮ್ಮ ಮನಕ್ಕೆ ಬೋಧನೆ ನೀಡುತ್ತ ಮನಸಿನ ಚಾಂಚಲ್ಯವನ್ನು ಸಾರ್ವತ್ರಿಕಗೊಳಿಸುತ್ತಾರೆ ಏನು ಗತಿಯೋ ರಂಗಾ ನಿನ ವ ನಾನಾಗಿ। ಜ್ಞಾನದಂತಿರಲಿಲ್ಲವೋ ಎನ್ನುವಂತಹ ಗೀತೆಗಳಲ್ಲಿ ಆತ್ಮನಿವೇದನೆಯಿದೆ ಅವರ ಕೃತಿಗಳಲ್ಲಿ ಭಾಷೆಯ ಆಡಂಬರವಿಲ್ಲ ಶಬ್ದಗಳಲ್ಲಿ ಕಾಠಿಣ್ಯವಿಲ್ಲ ಕರ್ಕಶವರ್ಣಗಳಿಲ್ಲ ದಾಸರ ಮೃದು ಮಧುರವಾದ ಹೃದಯಕ್ಕೆ ತಕ್ಕಂತೆ ಕಿರಿದಾದ ಮತ್ತು ನಯವಾದ ನುಡಿ ನುಡಿದಂತೆ ನಡೆ ಅಂತೆಯೇ ಅವರ ಕೃತಿಗಳ ತುಂಬ ಮಾತನಾಡುವ ಮೃದು ಭಾಷೆಯು ಕಂಡು ಬರುತ್ತದೆ [೬]

## ಹೆಳವನಕಟ್ಟೆ ಗಿರಿಯಮ್ಮ

ಹೆಳವನಕಟ್ಟೆ ರಂಗಯ್ಯ ಎಂಬ ಅಂಕಿತದಿಂದ ಕೃತಿ ರಚಿಸಿರುವ ಗಿರಿಯಮ್ಮ ದಾಸ ಸಾಹಿತ್ಯ ಪರಂಪರೆಯಲ್ಲಿ ಬಂದ ಪ್ರಥಮ ಮಹಿಳೆ ಆಕೆ 18ನೆ ಶತಮಾನದಲ್ಲಿ

ಬದುಕಿದ್ದವಳು ಕೃಷ್ಣ ಕೊರವಂಜಿ ಕೃಷ್ಣ ಕೊರವಂಜಿಯಾಗಿ ತನ್ನ ವರಿಸ ಬೇಕೆಂದಿರುವ ರುಕ್ಮಿಣಿಗೆ ಕಣಿ ಹೇಳುವ ಕತೆ ಇಲ್ಲಿ ಪರಮಾತ್ಮನ ವರ್ಣನೆಯನ್ನು ಭಕ್ತಿಪೂರ್ವಕವಾಗಿ ಮಾಡಲಾಗಿದೆ ಬ್ರಹ್ಮಕೊರವಂಜಿ ಸೆರೆಯಲ್ಲಿರುವ ದೇವಕಿಗೆ ಬ್ರಹ್ಮ ಕೊರವಂಜಿಯಾಗಿ ಒಂದು ಶಕುನ ಹೇಳಿದ್ದು ಈ ಎರಡೂ ಪೌರಾಣಿಕ ಆವರಣವಿರುವ ಕಥೆಗಳು ಲವ ಕುಶರ ಕಾಳಗದಲ್ಲಿ ಶೂರ್ಪನಖಿ ಕೊರವಂಜಿಯಾಗಿ ಬಂದು ಸೀತೆಯಿಂದ ರಾವಣನ ಪಟ ಬರೆಸಿ ಅವಳ ಪರಿತ್ಯಾಗಕ್ಕೆ ಕಾರಣವಾಗುವ ನವೀನ ತಂತ್ರವನ್ನು ಬಳಸಲಾಗಿದೆ 87 ಪದ್ಯಗಳ ಸೀತಾ ಕಲ್ಯಾಣ ಸೀತಾ ರಾಮರ ವಿವಾಹ ವರ್ಣನೆಯನು ರಾಮನ ಅವತಾರದ ವರ್ಣನೆಯನ್ನು ಒಳಗೊಂಡಿದೆ ರಾಮನ ಅವತಾರವರ್ಣನೆಯಲ್ಲಿ ಭಕ್ತಿ ವಿನಮ್ರತೆಗಳಿವೆ ಕವನ ಗರ್ವವನು ಶಂಕರನು ಭಂಗಿಸಿದ್ದು ಶಂಕರ ಗಂಡನ ಹಾಡು ಈ ಕಥೆಯಲ್ಲಿ ರತಿ ಶಂಕರನ ತಂಗಿ ಲಕ್ಷ್ಮೀಶ ಕವಿಯು ಜೈಮಿನಿಯನ್ನು ಆಧರಿಸಿದ ನಾಲ್ಕು ಸಂಧಿಯ ಸಾಂಗತ್ಯ ಕೃತಿ ಚಂದ್ರಹಾಸನ ಕಥೆ ಕಾವ ಕೊಲ್ಲುವ ಶ್ರೀಹರಿಯಲ್ಲದೆ । ಭೂವಲಯದೊಳು ಬೇರುಂಟೆ ಎಂಬುದು ಕೃತಿಯ ಆಶಯ ಈ ಎಲ್ಲ ಕೃತಿಗಳಲ್ಲೂ ಹರಿಯ ಮಹಿಮೆಯನ್ನು ಅಪಾರ ಭಕ್ತಿಯಿಂದ ವರ್ಣಿಸಲಾಗಿದೆ

ಹೆಳವನಕಟ್ಟೆ ಗಿರಿಯಮ್ಮನನು ಕುರಿತು ಅನೇಕ ಪವಾಡಗಳ ಕಥೆಗಳಿವೆ ಆಕೆಯ ಕೀರ್ತನೆಗಳಲ್ಲಿ ಅಂತಹ ಸಂದರ್ಭದಿಂದ ರಚನೆಗೊಂಡ ಕೀರ್ತನಗಳೆಂದು ಹಲವಾರು ಕೀರ್ತನಗಳಿಗೆ ಹಿನ್ನೆಲೆಯಿದೆ ಮಳೆಯ ದಯಮಾಡೋ ಶ್ರೀರಂಗಾ ದಂತಹ ಗೀತೆಗಳು ಹೆಳವನಕಟ್ಟೆ ಗಿರಿಯಮ್ಮನ ಹಾಡುಗಳು ವಿದ್ಯಾವಂತ ವರ್ಗಕ್ಕಿಂತ ಹೆಚ್ಚಾಗಿ ಹಳ್ಳಿಯ ಹೆಣ್ಣುಮಕ್ಕಳ ಬಾಯಲ್ಲಿ ನಲಿಯುತ್ತಿರುವಂಥವು

ಈ ಎಲ್ಲ ದಾಸರಲ್ಲದೆ ಮೋಹನದಾಸರು ತಿಮ್ಮಪ್ಪದಾಸರು ಹರಪನಹಳ್ಳಿ ಭೀಮವ್ವ ಮುಂತಾದ ಅನೇಕ ಜನ ಕೀರ್ತನಕಾರರು ಈ ಪರಂಪರೆಯಲ್ಲಿ ಆಗಿಹೋಗಿದ್ದಾರೆ ಕೊರಟಿ ಶ್ರೀನಿವಾಸರಾಯರು ಅವರ ಹರಿದಾಸ ಸಾಹಿತ್ಯ ಪರಂಪರೆಯಲ್ಲಿ ೩೦೩ ದಾಸರ ಹೆಸರನ್ನು ಪಟ್ಟಿಮಾಡಿದ್ದಾರೆ ಇದನ್ನು ನೋಡಿದಾಗ ಈ ದಿಸೆಯಲ್ಲಿ ಆಗಬೇಕಾದ ಕೆಲಸಗಳ ಅವಶ್ಯಕತೆ ಎಷ್ಟೆಂಬುದು ಮನದಟ್ಟಾಗುತ್ತದೆ

ಈ ಸಾಹಿತ್ಯವನ್ನು ಶುಷ್ಕವಾದ ಮತೀಯ ವಾಙ್ಮಯವೆಂದು ದೂರವಿಡುವಂತಿಲ್ಲ ಮತವನ್ನು ಮೀರಿದ ತತ್ತ್ವ ಸರ್ವಜನ ಹೃದಯಾನಂದಕರವಾದ ಕಾವ್ಯ ಎರಡನ್ನೂ ಒಳಗೊಂಡ ಈ ಹರಿದಾಸ ಸಾಹಿತ್ಯ ಸರ್ವಕಾಲಿಕ ಸರ್ವದೇಶಿಕ ತತ್ತ್ವ ನೀತಿ ಧರ್ಮ ಜೀವನ ಮೌಲ್ಯಗಳನ್ನರಿತ ದಾಸರು ನಿರ್ಮಿಸಿದ ಸಾಹಿತ್ಯ ಯಾವ ಒಂದು ಮತದ ಸ್ವತ್ತಲ್ಲ ಕನ್ನಡಿಗರೆಲ್ಲರ ಹೃದಯ ಶ್ರೀಮಂತಿಕೆಯನ್ನು ಹೆಚ್ಚಿಸುವ

ಕಾವ್ಯ ಭಂಡಾರ [36] ಈ ಹಿರಿಮೆ ಯನ್ನು ಅರಿತ ರಂಗನಾಥ ದಿವಾಕರರು ತತ್ತ್ವ ಪ್ರಚಾರ ಭಕ್ತಿ ಭಾವ ಪ್ರಕಟಣೆ ಇವೆಲ್ಲವುಗಳಿಂದಲೂ ಬೇರ್ಪಡಿಸಿ ಕೇವಲ ಸಾಹಿತ್ಯ ದೃಷ್ಟಿಯೊಂದರಿಂದಲೇ ದಾಸವಾಙ್ಮಯವನು ನೋಡಿದರೂ ಅಲ್ಲಿ ಕೆಲವು ಅತ್ಯುಚ್ಚ ಗುಣಗಳು ಕಂಡ ಬರುವವು ಮನುಷ್ಯ ಸ್ವಭ ವದ ಉತ್ತಮ ವರ್ಣನೆ ಅತ್ಯಂತ ಸುಲಭ ಮತ್ತು ಸರಳ ಭಾಷೆಯ ಲ್ಲಿ ಅಂತಃಕರಣದಲ್ಲಿಯ ಸೂಕ್ಷ್ಮಾತಿಸೂಕ್ಷ್ಮ ಭಾವ ಗಳನ್ನು ಸಹಜ ಮತ್ತು ಮನೋಹರ ರಿ ತಿಯಿಂದ ವ್ಯಕ್ತಮಾಡ ವ ದಾಸರ ಸಾಮರ್ಥ್ಯ ಪ್ರಸಾದ ಗುಣ ದೇವರ ಅವತಾರಗಳನ್ನು ಬಣ್ಣಿಸ ವುದರಲ್ಲಿ ಅವರು ತೋರಿದ ಚಮತ್ಕೃತಿ ರೂಪಕ ಉತ್ಪ್ರೇಕ್ಷಾದಿ ಅಲಂಕಾರಗಳನು ಉಪಯೋಗಿಸು ವಾಗ ದಾಸರು ವ್ಯಕ್ತಪಡಿಸಿದ ಕಲ್ಪಕತೆ ಕಿವಿಗಿಂಪಾಗುವಂತೆ ಅವರು ಮಾಡಿದ ಶಬ್ದ ರಚನೆ ಈ ವ ಒಂತ ದ ಉತ್ತಮ ಕಾವ್ಯ ಲಕ್ಷಣಗಳು ಪ್ರತಿಭೆಯ ಕುರ ಹುಗಳು ದಾಸರ ಕೃತಿಗಳಲ್ಲಿ ಒಡೆದುಕಾಣಿಸುತ್ತದೆ [37]

ಕನ್ನಡ ಸಾಹಿತ್ಯದಲ್ಲಿ ದಾಸ ಸಾಹಿತ್ಯದ ಸ್ವರೂಪ ಅವುಗಳ ತೌಲನಿಕ ಅಧ್ಯಯನ—ಸಾಹಿತ್ಯಿಕ ಒದ್ಯಯ ನಗಳು ನಡೆಯಬೇಕಾಗಿದೆ ಈ ವರೆಗೆ ಆ ದಿಸೆಯ ಲ್ಲಿ ಅಷ್ಟೊಂದು ಕೆಲಸಗಳು ನಡೆದಿಲ್ಲ ಕಾರಣ ಆ ಕಾಲದಲ್ಲಿ ದಾಸರ ಹಾಡುಗಳನ್ನು ಸಾಹಿತ್ಯವೆಂದು ವಿಮರ್ಶಕರು ಮತ್ತು ವಿದ್ವಾಂಸರು ಮನ್ನಣೆಯಿ ರಲಿಲ್ಲ ಯಾವ ದಾಸರೂ ತಮ್ಮನು ಕವಿಗಳೆಂದು ಘೋಷಿಸಿಕೊಳ್ಳಲಿಲ್ಲ ಜೊತೆಗೆ ದಾಸ ಸಾಹಿತ್ಯ ಗ್ರಂಥಸ್ಥವಾಗಿ ಉಳಿದಿರುವುದಕ್ಕಿಂತಲೂ ಮುಖ್ಯಸ್ಥವಾಗಿರುವುದೇ ಹೆಚ್ಚು ಅದ ರಿಂದಾಗಿ ಇಂತಹ ಕೃತಿಗಳ ಸಂಪಾದನೆಯ ಕಾರ್ಯ ವಿಪುಲವಾಗಿ ನಡೆದ ಹೊರತು ದಾಸ ಸಾಹಿತ್ಯದ ಶಾಸ್ತ್ರೀಯ ಅಧ್ಯಯನ ಸರಿಯಾದ ರೀತಿಯಲ್ಲಿ ನಡೆಯುವುದಕ್ಕ ಸಾಧ್ಯವಾಗುವುದಿಲ್ಲ

## ಅಡಿ ಟಿಪ್ಪಣಿಗಳು

1 ಎಲ ಬಸವರಾಜು—ಶಿವದಾಸ ಗೀತಾಂಜಲಿ ಪುಟ ೭೭
2 ಆರ್ ಎಸ್ ರಾಮರಾವ್—ಭ ರತೀಯ ಸಂಸ್ಕೃತಿ ದರ್ಶನ ಸಂ ಅ ನ ಕೃ ಪುಟ 287
3 ರಂ ಶ್ರೀ ಮುಗಳಿ—ಕನ ಡ ಸಾಹಿತ್ಯ ಚರಿತ್ರ (1871)
4 ಎಚ ಎಸ್ ವೆಂಕಟೇಶ ಮೂರ್ತಿ—ಕೀರ್ತನಕಾರರು (1975) ಪುಟ 21
5 ರಂ ಶ್ರೀ ಮುಗುಳಿ—ಕನ್ನಡ ಸಾಹಿತ್ಯ ಚರಿತ್ರ (1971) ಪುಟ 278
6 ಬೇಲೂರ ಕೇಶವದಾಸರು— ಶ್ರೀ ಕರ್ನಾಟಕ ಭಕ್ತ ವಿಜಯ
7 ಜಿ ವರದರಾಜರಾವ್—ಶ್ರೀಪಾದರಾಜರ ಕ ತಿಗಳು ಪೀಠಿಕೆ ಪಂಡಿತ ಆವೃತ್ತಿ
8 ಎಲ್ಲ ಹಾಡುಗಳಿಗೂ ಜಿ ವರದರಾಜರಾವ ಸಂಪಾದಿಸಿದ ಶ್ರೀಪಾದರಾಜರ ಕ ತಿಗಳು ಆಧಾರ
9 ರಂ ಶ್ರೀ ಮು ಗ ಳಿ—ಕನ ಡ ಸಾಹಿತ್ಯ ಚರಿತ್ರ (1911) ಪುಟ 261

10 ಎಲ್ಲ ಹಾಡುಗಳಿಗೂ ಕಾವ್ಯಪ್ರೇಮಿಯವರು ಸಂಪಾದಿಸಿದ ವ್ಯಾಸರಾಯರ ಹಾಡುಗಳು ಆಧಾರ
11 ಎಚ ಕೆ ವೇದವ್ಯಾಸಾಚಾರ್ಯ—ಕರ್ನಾಟಕ ಹರಿದಾಸರು (1955) ಪುಟ 267
12 ರಾ ಸ್ವಾ ಪಂಚಮುಖಿ—ಪುರಂದರ ಸಾಹಿತ್ಯ ವಿಮರ್ಶೆ (1957) ಪುಟ 7
13 ಜಿ ಎಸ ಶಿವರುದ್ರಪ್ಪ—ಪರಿಶೀಲನ (1972) ಪುಟ 79
14 ಎಲ್ಲ ಹಾಡುಗಳಿಗೂ ಸುಬೋಧ ರ ಮರಾವ ಸಂಪಾದಿಸಿದ ಶ್ರೀ ಪುರಂದರದಾಸರು (1964) ಕೃತಿ ಆಧಾರ
15 ಎಚ ಎಸ್ ವೆಂಕಟೇಶಮೂರ್ತಿ—ಕೀರ್ತನಕಾರರು ಪುಟ 89
16 ಜಿ ವರದರಾಜರಾವ—ಹರಿದಾಸ ಹೃದಯ (1961) ಪುಟ 148
17 ಎಚ ಎಸ್ ವೆಂಕಟೇಶಮೂರ್ತಿ—ಕೀರ್ತನಕಾರರು ಪುಟ 29–30
18 ರಂ ಶ್ರೀ ಮುಗಳಿ—ಕನ್ನಡ ಸಾಹಿತ್ಯ ಚರಿತ್ರೆ (1961) ಪುಟ 271
19 ಜಿ ಎಸ ಶಿವರುದ್ರಪ್ಪ—ಪರಿಶೀಲನ (1972) ಪುಟ 96
20 ಅಲ್ಲೇ
21 ಎಲ್ಲ ಹಾಡುಗಳಿಗೂ ಬಿ ಶಿವಮೂರ್ತಿಶಾಸ್ತ್ರಿ ಮತ್ತು ಡಾ॥ ಕೆ ಎಂ ಕೃಷ್ಣರಾವ ಸಂಪಾದಿಸಿದ ಕನಕದಾಸರ ಕೀರ್ತನೆಗಳು
22 ಎಚ ಎಸ ವೆಂಕಟೇಶಮೂರ್ತಿ—ಕೀರ್ತನಕಾರರು (1975) ಪುಟ 95
23 ರಾ ಸ್ವಾ ಪಂಚಮುಖಿ—ಹರಿದಾಸ ಸಾಹಿತ್ಯ ಪುಟ 157
24 ಎಲ್ಲ ಹಾಡುಗಳಿಗೂ ಟಿ ಎನ್ ನಾಗರತ್ನ ಸಂಪಾದಿಸಿದ ಶ್ರೀ ವಾದಿರಾಜರ ಕೃತಿಗಳು ಜನಪ್ರಿಯ ಆವೃತ್ತಿ ಕೃತಿ ಆಧಾರ
25 ಜಿ ವರದರಾಜರಾವ—ವಿಜಯದಾಸರು ದಾಸ ಸಾಹಿತ್ಯದ ದ್ವಿತೀಯ ಘಟ್ಟದ ಸಾಧನೆ (1970) ಪುಟ 2
26 ರಾ ಸ್ವಾ ಪಂಚಮುಖಿ—ಹರಿದಾಸ ಸಾಹಿತ್ಯ (1952) ಪುಟ 68
27 ಎಲ್ಲ ಹಾಡುಗಳಿಗೂ ಜಿ ವರದರಾಜರಾಯರು ಸಂಪಾದಿಸಿದ ಶ್ರೀ ಮಹಿಪತಿರಾಯರ ಕೃತಿಗಳು ಆಧಾರ
28 ಎನ್ ಗೋಪಾಲಕೃಷ್ಣ—ಕ ಸಾ ಪ ಪ ಡಿ 1963 ಸಂ 48 ಸಂ 2 ಪುಟ 14
29 ಎಂ ರಾಮರಾವ—ವಿಜಯದಾಸರ ಕೃತಿಗಳು
30 ಎಲ್ಲ ಹಾಡುಗಳಿಗೂ ಟಿ ಎನ ನಾಗರತ್ನ ಅವರು ಸಂಪಾದಿಸಿದ ಗೋಪಾಲದಾಸರ ಕೃತಿಗಳ ಜನಪ್ರಿಯ ಆವೃತ್ತಿ ಆಧಾರ
31 ಡಾ॥ ಕೆ ಎಂ ಕೃಷ್ಣರಾವ್—ಜಗನ್ನಾಥದಾಸರ ಕೃತಿಗಳು ಪೀಠಿಕೆ vii
32 ಎಲ್ಲ ಹಾಡುಗಳಿಗೂ ಡಾ॥ ಕೆ ಎಂ ಕೃಷ್ಣರಾವ್ ಅವರು ಸಂಪಾದಿಸಿದ ಜಗನ್ನಾಥದಾಸರ ಕೃತಿಗಳು ಆಧಾರ
33 ಅಲ್ಲೇ ಪುಟ 329
34 ಎಲ್ಲ ಕೃತಿಗಳಿಗೂ ಕಾವ್ಯಪ್ರೇಮಿಯವರು ಸಂಪಾದಿಸಿದ ಪ್ರಸನ್ನ ವೆಂಕಟದಾಸರು ಕೃತಿ ಆಧಾರ
35 ಬರ್ಲಿ ಬಿಂದುಮಾಧವ—ಶ್ರೀ ಪ್ರಸನ್ನ ವೆಂಕಟದಾಸರು ಮತ್ತು ಅವರ ಕೃತಿಗಳು ಮಿಂಚಿನ ಬಳ್ಳಿ ಪುಟ 137
36 ಜಿ ವರದರಾಜರಾವ—ದಾಸ ಸಾಹಿತ್ಯದ ದ್ವಿತೀಯ ಘಟ್ಟದ ಸಾಧನೆ
37 ರಂ ರಾ ದಿವಾಕರ—ಹರಿಭಕ್ತಿಸುಧೆ ಪುಟ 12

# ಭಾರತೀಯ ತತ್ವಶಾಸ್ತ್ರದ ಬೆಳಕಿನಲ್ಲಿ ದಾಸಸಾಹಿತ್ಯ

—ಬಿ ಜಿ ಸತ್ಯಮೂರ್ತಿ

ಈ ಜೀವನದ ಮತ್ತು ಇರುವಿನ ಅರ್ಥವನ್ನು ಹುಡುಕ ಹೊರಟಾಗ ಜೀವನವೆಂದರೇನು ಮತ್ತು ಈ ವಿಶ್ವದ ಸ್ವರೂಪ ಎಂದಹದು ಎಂಬ ಜಿಜ್ಞಾಸೆ ಉಂಟಾಯಿತು ಬೌದ್ಧಿಕ ಮಾರ್ಗದಲ್ಲಿ ಅನೇಕ ಜಿಜ್ಞಾಸುಗಳು ಈ ಬಗ್ಗೆ ಅನ್ವೇಷಣೆ ಪ್ರಾರಂಭಿಸಿದರು ಇದು ಮ ಟ್ಟದ ಒಂದು ಹಂತವೇ ತತ್ವಶಾಸ್ತ್ರದ ಉದಯ

ವೇದಗಳಿಂದಲೇ ತತ್ವ ಜಿಜ್ಞಾಸೆ ಪ್ರಾರಂಭವಾಗುವುದರಿಂದ ಪ್ರಪಂಚದ ತತ್ವಶಾಸ್ತ್ರ ಚರಿತ್ರೆಯ ಪ್ರಾರಂಭಿಕ ಪುಟಗಳು ಭಾರತದಿಂದಲೇ ಶುರುವಾಗುತ್ತವೆ ಅವೈದಿಕವಾದ ಬೌದ್ಧ ಜೈನ ಧರ್ಮಗಳು ಈಶ್ವರನ ನೆಲೆಯನ್ನು ಹುಡುಕುವ ಬದಲಿಗೆ ಬದುಕಿನ ಸಮಸ್ಯೆಗಳತ್ತ ಬೆರಳು ಮಾಡಿದರೂ ತತ್ವಶಾಸ್ತ್ರದ ಭೂಮಿಕೆಯನ್ನು ಬಿಟ್ಟು ಹೋಗಿಲ್ಲ ಭಾರತೀಯರಿಗೆ ಶ್ರುತಿ ಮತ್ತು ಸ್ಮೃತಿಗಳ ಧರ್ಮ ಎಷ್ಟು ಮುಖ್ಯವೋ ವಿಚಾರಗಳ ಸ್ವತಂತ್ರ ಪ್ರವೃತ್ತಿಯಿಂದ ಹುಟ್ಟುವ ತತ್ವಜ್ಞಾನವೂ ಅಷ್ಟೇ ಮುಖ್ಯವಾಯಿತು ಪರರ ದಾಳಿಯಿಂದ ನಶಿಸುವ ಹಂತ ಮುಟ್ಟಿದರೂ ಆರ್ಯ ಸಂಸ್ಕೃತಿ ಭಾರತದಲ್ಲಿ ಆಗಿಂದಾಗ್ಗೆ ಪುನರುಜ್ಜೀವನಗೊಳ್ಳುತ್ತಲೇ ಹಿಂದೂ ಧರ್ಮವನ್ನೂ ಎತ್ತಿ ಹಿಡಿಯುತ್ತ ಬಂತು ನಾನು ಹೇಳುತ್ತಿರುವ ಈ ಹಿಂದೂ ಧರ್ಮ ಸಮಷ್ಟಿ ರೂಪದ್ದು ಈ ಧರ್ಮದ ಒಟ್ಟು ಸ್ವರೂಪದಲ್ಲಿರುವ ಅಂತರಂಗದ ಅಂಗಾಂಗಗಳು ಬೇರೆ ಬೇರೆ ಹೆಸರಿನಿಂದ ಕರೆಯಲ್ಪಟ್ಟರೂ ಬಾಹ್ಯರೂಪ ಮಾತ್ರ ಒಂದೇ

ಈ ಪ್ರಬಂಧದಲ್ಲಿ ಭಾರತೀಯ ತತ್ವಶಾಸ್ತ್ರದ ಬೆಳಕಿನಲ್ಲಿ ದಾಸಸಾಹಿತ್ಯವನ್ನು ಕಾಣುವ ಪ್ರಯತ್ನಕ್ಕೆ ತೊಡಗಿರುವುದರಿಂದ ದಾಸ ಸಾಹಿತ್ಯದ ಹುಟ್ಟು ಬೆಳವಣಿಗೆಯ ಬಗ್ಗೆ ಸ್ವಲ್ಪ ಅಳುಕಿಲ್ಲದೆ ಹೇಳುವುದು ಅನಿವಾರ್ಯವಾಗಿದೆ ಮತ್ತು ಆಯಾ ಕಾಲದ ವಾಙ್ಮಯ ವಿಮರ್ಶೆಗೆ ಅದು ಹುಟ್ಟಿ ಬೆಳೆದ ಸಾಮಾಜಿಕ ರಾಜಕೀಯ ಮತ್ತು ಧಾರ್ಮಿಕ ಸ್ಥಿತಿಗಳೂ ಅತಿ ಮುಖ್ಯ

ದಾಸ ವಾಙ್ಮಯವು ಹೆಚ್ಚಾಗಿ ವ್ಯಾವಹಾರಿಕ ಭಾಷೆ – ಜನ ಭಾಷೆಯಲ್ಲಿ ರಚಿತವಾಗಿರುವುದರಿಂದ ಕ್ರಿ ಶ 13ನೇ ಶತಮಾನದಿಂದ 16 17 18ರ ವರೆಗಿನ ಕನ್ನಡ ಭಾಷಾ ಸ್ವರೂಪ ರಾಜಕೀಯ ಸಾಮಾಜಿಕ ಮತ್ತು ಧಾರ್ಮಿಕ ಪದ್ಧತಿಗಳನ್ನು ತಿಳಿಯಲು ಒಂದು ಗ್ರಂಥ ಭಂಡಾರವನ್ನೇ ನಮಗೆ ಒದಗಿಸುತ್ತದ

## ಭಕ್ತಿಯ ಸ್ಥಾನ

ದಾಸಸಾಹಿತ್ಯದ ಪ್ರಾಚೀನತೆಯನು ಗುರುತಿಸಬೇಕಾದರೆ ಅದನು ವೈಜ್ಞಾನಿಕ ಅಧ್ಯಯನಕ್ಕೆ ಒಳಪಡಿಸಬೇಕು ಹೀಗೆ ಒಳಪಡಿಸಿದಾಗ ಕಂಡುಬರುವ ಆಂತರಿಕ ಬಾಹ್ಯ ಪ್ರಮಾಣಗಳ ಆಧಾರಗಳಿಂದ ಪ್ರಾಚೀನತೆಯನ್ನು ಪತ್ತೆ ಹಚ್ಚುವುದು ಸುಲಭವಾಗುತ್ತದೆ

ಹಲವಾರು ವಿದ್ವಾಂಸರು ಈಗಾಗಲೇ ಈ ದಿಸೆಯಲ್ಲಿ ಕೆಲಸ ಮಾಡಿದ್ದಾರೆ ಪ್ರಾಗೈತಿಹಾಸಿಕ ವಸ್ತುಗಳ ಶಾಸನಗಳ ನಾಣ್ಯಗಳ ವಿಗ್ರಹಗಳ ಹಾಗೂ ವಾಙ್ಮಯದ ಶೋಧನೆಯನೂ ಮಾಡಿಯಾಗಿದೆ

ವೈದಿಕ ಧರ್ಮದ ನೆಲೆಯಾದ ಭಾರತದಲ್ಲಿ ಪ್ರಾಚೀನ ಕಾಲದಿಂದಲೂ ಭಕ್ತಿ ಪರಿಚಯದಲ್ಲಿರುವ ಪ್ರಚಾರದಲ್ಲಿರುವ ಪರಿಭಾಷೆ ಭಕ್ತಿಯ ಪಂಥಗಳು ನಾನಾ ಮುಖವಾಗಿರಬಹುದು ಅಂತ್ಯೂ ಭಕ್ತಿ ಪಂಥ ಹೊಸದಲ್ಲ ಯಾವುದೇ ಧರ್ಮಕ್ಕಾದರೂ ಈ ಭಕ್ತಿ ಅವಶ್ಯವಾಗಿರುವುದನು ನಾವು ಕಾಣುತ್ತೇವೆ ತುಂಬ ಹಿಂದಿನಿಂದಲೂ ವಿಷ್ಣು ಭಕ್ತಿ ಪ್ರಚಾರದಲ್ಲದೆ ನಂತರ ಬಂದದ್ದು ಶಿವಭಕ್ತಿ ಭಕ್ತನಲ್ಲಿ ಭಕ್ತಿ ನೆಲೆ ನಿಲ್ಲಲು ಅಥವಾ ಭಕ್ತಿ ಹೊರಹೊಮ್ಮಲು ಅವನಿಗೊಂದು ಮೂರ್ತರೂಪ ಕಾಣಬೇಕು ಈ ಕಾರಣದಿಂದಲೇ ಜಗತ್ತಿನ ನಾನಾ ಭಾಗಗಳಲ್ಲಿ ಅನಾದಿ ಕಾಲದಿಂದಲೂ ಮೂರ್ತಿ ಪೂಜೆ ಪ್ರಚಾರಕ್ಕೆ ಬಂತು ವೇದಕಾಲೀನ ಮುನಿಗಳೂ ಕಣ್ಣಿಗೆ ಕಾಣುವ ಸೂರ್ಯ ಅಗ್ನಿ ಭೂಮಿ ಮಳೆ ಇತ್ಯಾದಿಗಳನು ಆರಾಧಿಸುವ ಪ್ರಕೃತಿ ಆರಾಧಕರಾಗಿದ್ದರೆಂಬ ಅಂಶ ಋಗ್ವೇದದಿಂದ ತಿಳಿದು ಬರುತ್ತದೆ

ಪ್ರಾಗೈತಿಹಾಸಿಕ ಕ್ಷೇತ್ರಗಳಾದ ಹರಪ್ಪಾ – ಮೊಹೆಂಜದಾರೋ ಪ್ರದೇಶಗಳ ಉತ್ಖನನದಿಂದಲೂ ಈ ಬಗ್ಗೆ ಹಲವಾರು ಆಧಾರಗಳು ಸಿಕ್ಕಿವೆ ಕ್ರಿ ಪೂ 3ನೇ ಶತಮಾನದ ಹಾಥಿಗುಂಫ ಶಾಸನವೂ ವಿಷ್ಣುಭಕ್ತಿಯ ಅಸ್ತಿತ್ವಕ್ಕೆ ಒತ್ತು ನೀಡುತ್ತದೆ ಕ್ರಿ ಪೂ 4ನೇ ಶತಮಾನದಲ್ಲಿ ಬಂದಿದ್ದ ಮೆಗಾಸ್ತನೀಸನಿಂದಲೂ ಮೂರ್ತಿ ಪೂಜೆಯ ಉಲ್ಲೇಖ ತಿಳಿದು ಬರುತ್ತದೆ ಕ್ರಿ ಶ 5ನೇ ಶತಮಾನದಲ್ಲಿದ್ದ ತ್ರೈಕೂಟ ಅರಸನಾದ ದಹ್ರಸೇನ ಮತ್ತು ಕೆಲವು ಗುಪ್ತರಾಜರು ಭಾಗವತಪಂಥದವರಾಗಿದ್ದರು ವಲಭೀ ರಾಜರು ವೈಷ್ಣವರು ಕದಂಬ ಗಂಗ ಚಾಲುಕ್ಯ ರಾಜರಗಳ ಕಾಲದಲ್ಲೂ ಕರ್ನಾಟಕದಲ್ಲಿ ಕೃಷ್ಣ ಭಕ್ತಿ ಪ್ರಚಾರದಲ್ಲಿತ್ತು

ಈ ಧರ್ಮ ಧರ್ಮಗಳ ಸಂಘರ್ಷ ವಿಶ್ವದ ಎಲ್ಲ ಕಡೆಗಳಲ್ಲಿ ಕಾಲಕಾಲಕ್ಕೆ ನಡೆಯುತ್ತ ಬಂದಿದ್ದರೂ ಭಾರತದಲ್ಲಿರುವಷ್ಟು ಆಂತರಿಕ ವಿಭೇದ ಬೇರೆ ಯಾವ ದೇಶದಲ್ಲೂ ಯಾವ ಕಾಲದಲ್ಲೂ ಇರಲಿಲ್ಲ ಈ ಭೇದ ವೇದ ಕಾಲದಲ್ಲೇ ಪ್ರಾರಂಭವಾಯಿತೆಂಬ ಸುಳಿವು ವೇದಸಂಹಿತೆ ಹಾಗೂ ಉಪನಿಷತ್ತುಗಳಿಂದಲೇ ತಿಳಿದು ಬರುತ್ತದೆ

ವೇದ ಕಾಲದಲ್ಲೇ ಪ್ರಾರಂಭವಾದ ಈ ಧರ್ಮ ಎಂಟನೇ ಕ್ರಿ ಶ ದಲ್ಲಿ ಹುಟ್ಟಿದ ಬೌದ್ಧ ಜೈನ ಧರ್ಮದೊಂದಿಗೆ ಹೆಚ್ಚಿನ ಎಣಸಾಟವಾಡಿ ಕ್ರಿ ಶ 12ನೇ ಶತಮಾನದಲ್ಲಿ ಅನ್ಯಧರ್ಮಗಳ ದಾಳಿಗೆ ಸಿಕ್ಕಿ ಸಂಪೂರ್ಣ ರನ ವರ್ಚಸ ನ್ನು ಕಳೆದು ಕೊಂಡಿತು ಆ ನಂತರ ವಿಪ್ಲ ದರ್ಮವನ್ನು ಪುನರುಜ್ಜೀವನಗೊಳಿಸದಿದ್ದರೆ ಭಾರತದಲ್ಲಿ ಅದರಲ್ಲೂ ದಕ್ಷಿಣದಲ್ಲಿ ವ್ಯಾಸ ದಾಸಕೂಟಗಳ ಸಾಹಿತ ಸೃಷ್ಟಿಯಾಗು ತ್ತಿತ್ತೋ ಇಲ್ಲವೊ ಇದಕ್ಕೂ ಹಿಂದೆ ಹಿಂದೂ ಧರ್ಮವನ್ನು ಅನ್ಯದರ್ಮ ದಾಳಿ ಯಿಂದ ರಕ್ಷಿಸಿದ್ದ ಶಂಕರಾಚಾರ್ಯರ ಸೋಹಂ ಸಿದ್ಧಾಂತವನು ಬಿಟ್ಟು ತಮ್ಮದೇ ಆದ ಮತ್ತೊಂದು ಸಿದ್ಧಾಂತವನು ಪರಂಪರೆಯಾಗಿ ಬಂದ ಚಿಂತನಗಳ ಆಧಾರದ ಮೇಲೆ ಪ್ರತಿಷ್ಠಾಪಿಸಿದ ರಾಮಾನುಜರ ಸೇವೆಯೂ ಕಡಿಮೆಯೇನಲ್ಲ

ಈ ಎಲ್ಲ ಧರ್ಮಗಳ ಸಾರವನೂ ಗ್ರಹಿಸಿ ತಮ್ಮದೇ ಆದ ಮತ್ತೊಂದು ಸಿದ್ಧಾಂತವನ್ನು ಆಚರಣೆಗೆ ತಂದವರು ಶ್ರೀ ಮಧ್ವಾಚಾರ್ಯರು ಕ್ರಿ ಶ 13ನೇ ಶತಮಾನದಲ್ಲಿ ದ್ವೈತ ಸಿದ್ಧಾಂತವನ್ನು ಸ್ಥಾಪಿಸಿ ಪ್ರಚಾರಕ್ಕೆ ತಂದ ಆಚಾರ್ಯರು ವಿಷ್ಣು ಭಕ್ತಿಯ ಶುದ್ಧ ರೂಪದ ಪ್ರಚಾರಕ್ಕಾಗಿಯೆ ಸಂಸ್ಕೃತದಲಿ ಗ್ರಂದರಾಶಿಯನ್ನು ಸೃಷ್ಟಿಸಿದರು

ವ್ಯಾಸ__ದಾಸ ಕೂಟಗಳು ತಮ್ಮ ಧರ್ಮ ಪ್ರಚಾರವನ್ನು ಇಷ್ಟೊಂದು ವ್ಯಾಪಕವಾಗಿ ಬೃಹತ್ತಾಗಿ ಮಹತ್ತಾಗಿ ರಚಿಸಿ ಜನಾದರಣೀಯಗೊಳಿಸಲು ಪರೋಕ್ಷ ವಾಗಿ ಅವೈದಿಕ ಧರ್ಮಗಳಾದ ಬೌದ್ಧ—ಜೈನ ಮತಗಳೇ ಕಾರಣವೆನ್ನಬೇಕು ಈ ಮತಗಳು ತಮ್ಮ ಧರ್ಮಗಳ ರಕ್ಷಣೆಗಾಗಿ ಮತ ಪ್ರಚಾರಕ್ಕಾಗಿ ಅನುಸರಿಸಿದ ಕಾರ್ಯ ಗಳು ಹಲವು ಹತ್ತು ಬಗೆಯವು ಶ್ರೀಸಾಮಾನ್ಯನ ಪ್ರಚಲಿತ ದೇಶ ಭಾಷೆಗಳಲ್ಲಿ ಪ್ರಚಾರವನು ಮಾಡಿದರು ಗ್ರಂಥಗಳನ್ನು ರಚಿಸಿದರು ಈ ಪ್ರಚಾರ ಕಾರ್ಯ ಇಬ್ಬಗೆಯ ಫಲ ನೀಡುತ್ತಿತ್ತು ಒಂದು ಸ್ವಮತ ಪ್ರಚಾರ ಎರಡು ಅನ್ಯಮತ ಖಂಡನೆ ಹೀಗೆ ಅನ್ಯ ಧರ್ಮಗಳನು ಹತ್ತಿಕ್ಕುವುದು ಹಾಗೂ ತಮ್ಮ ಮತ ಅನು ಯಾಯಿಗಳನು ಹೆಚ್ಚಿಸದೆ ಯಾವ ಮತವೂ ಉಳಿಯದೆಂಬ ವಿಚಾರವನ್ನೂ ತಿಳಿದಿ ದ್ದರು ಸಾಮಾನ್ಯರೇ ಮತ ಪೋಷಕರು ಯಾವುದೇ ಧರ್ಮ ನೆಲೆ ನಿಲ್ಲಲು ಆ ಮತದ ಧರ್ಮದ ತತ್ವಗಳು ಮೊದಲು ಪಾಮರರಲ್ಲಿ ಪ್ರಚಾರವಾಗಬೇಕು ಇಂಥ ಸ್ಥಿತಿಗೆ ಸಿಕ್ಕ ಅಂದಿನ ಜನ ಹಿಂದೂ ಧರ್ಮದ ಬಿಗಿ ಬಂಧನಗಳಿಂದ ಬಿಡಿಸಿಕೊಂಡು ಸಂಲಚಿವಾಗಿ ಮತಾಂತರವಾಗುವ ಗಂಡಾಂತರ ಪರಿಸ್ಥಿತಿ ದೇಶದಾದ್ಯಂತ ನೆಲೆಸಿತ್ತು

ಶೈವ ವೈಷ್ಣವರ ಒಳಜಗಳಗಳೇನೇ ಇರಲಿ ಇಂಥ ಸಂದರ್ಭವನ್ನು ಉಪ ಯೋಗಿಸಿಕೊಂಡ ಅನ್ಯಧರ್ಮ ತಾನು ತಳ ಊರುವ ಅಪಾಯವನ್ನು ಗಣರಿಸಿ ಹಿಂದೂ ಧರ್ಮವನ್ನು ಜ್ಞಾಪಿಸಿ ಜನ ಜಾಗೃತಿ ಉಂಟು ಮಾಡಿದವರು ಆಚಾರ್ಯ ತ್ರಯರು ಬೌದ್ಧರ ಪಾಳಿ ಜೈನರ ಕನ್ನಡ ಪ್ರಚಾರ ಪ್ರಾಧ್ಯಮವಾಗಿ ಹೆಚ್ಚು

ಜನಪ್ರಿಯವಾಗಿದ್ದುದರಿಂದ ಮತ್ತು ವೈದಿಕ ಬಾಸೆಯಾದ ಸಂಸ್ಕೃತವೇ ಹಿಂದೂ ಧರ್ಮದ ಪ್ರತೀಕವಾದ್ದರಿಂದ ಆಚಾರ್ಯರುಗಳು ತಮ್ಮ ಪ್ರಚಾರಗಳನ್ನೂ ಸಂಸ್ಕೃತ ಗ್ರಂಥ ರಚನೆಯಿಂದಲೆ ಮಾಡುವುದು ಅನಿವಾರ್ಯವಾಯಿತು ಸಂಸ್ಕೃತ ಕರ್ನಾಟಕದಲ್ಲಿ ಜನ ಸಾಮಾನ್ಯರ ಆಡುಬಾಸೆಯಾಗಿ ದೇಶ ಭಾಷೆಯಾಗಿ ಪ್ರಚಾರಕ್ಕೆ ಯಾವ ರಾಜನ ಕಾಲದಲ್ಲಿಯೂ ಬರಲೇ ಇಲ್ಲ ಆಸ್ಥಾನ ಪಂಡಿತರ ಶಾಸನಗಳ ಶಾಸ್ತ್ರಗಳ ಶಿಕ್ಷಣ ಮಾಧ್ಯಮದ ಪಾಂಡಿತ್ಯ ಪ್ರದರ್ಶನ ಭಾಷೆಯಾಗಿಯೆ ಉಳಿದು ಬಿಟ್ಟಿತು

ಕರ್ನಾಟಕದಲ್ಲಿ ಜನ ಜನಿತವಾದ ದೇಶ ಭಾಷೆ—ಕನ್ನಡ ಈ ಕನ್ನಡವನ್ನು ಜೈನರಂತೆ ನಾವು ಯಾಕೆ ಸಾಮಾನ್ಯರಿಗಾಗಿ ಉಪಯೋಗಿಸಿಕೊಳ್ಳಬಾರದೆಂಬ ಸೂಕ್ಷ್ಮ ಮೊದಲು ಹೊಳೆದದ್ದು ಬಸವಣ್ಣನವರಿಗೆ ಸಾಹಿತ್ಯವನು ಸಾಮಾನ್ಯನಿಗಾಗಿ ಅನುಪಾನಕ್ಕೆ ತಂದ ಬಸವಣ್ಣನವರು ಹೊಸ ಪಂದವಾದ ವೀರಶೈವ ಧರ್ಮವನ್ನು ಸ್ಥಾಪಿಸಿದರು ಈ ಹೊಸ ದರ್ಮ ವೈದಿಕ ನಿರ್ಬಂಧಗಳನ್ನೆಲ್ಲ ಕಳಚಿ ಜೈನ ಬೌದ್ಧ ಮತಗಳು ಏನು ಮಾಡಿದವೋ ಹಾಗೇ ನೀತಿ ಮತ್ತು ಶೀಲಗಳಷ್ಟನ್ನೇ ಮುಖ್ಯವಾಗಿ ಯಾಗಿಟ್ಟುಕೊಂಡು ಪ್ರಚಾರಕ್ಕಿಳಿಯಿತು ವೈದಿಕ ಮತದ ಬಿಗಿ ನಿಯಮ ಅರ್ಥವಾಗದ ಸಂಸ್ಕೃತಗಳಿಂದ ಬೇಸತ್ತಿದ್ದ ಜನಕ್ಕೆ ದಿಕ್ಕು ತಪ್ಪಿದ್ದ ಕಾಲವಿದು

ಇದೇ ಕಾಲದಲ್ಲೇ ಬೌದ್ಧ—ಜೈನ ಧರ್ಮಗಳೂ ತಮ್ಮ ಮತಕ್ಕೆ ಸೇರಲು ಜನರನ್ನು ಕೈ ಮಾಡಿ ಕರೆಯುತ್ತಿದ್ದವು ಇದೇ ಸಂದರ್ಭದಲ್ಲೇ ವೀರಶೈವ ಮತವೂ ಕೈ ಬೀಸತೊಡಗಿತು ಏನೋ ಒಂದು ಹೊಸದನು ಕಾಣುವ ಆತುರದಲ್ಲಿ ಜನ ಈ ಕಡೆ ಧಾವಿಸಿದ್ದರಲ್ಲಿ ಆಶ್ಚರ್ಯವಿಲ್ಲ

ಇಷ್ಟು ಹೊತ್ತಿಗಾಗಲೇ ಎಲ್ಲ ಮತದವರಿಗೂ ತಮ್ಮ ಧರ್ಮ ಸ್ಥಿರವಾಗಿ ಉಳಿಯಲು ಹೆಚ್ಚಿನ ಪ್ರಚಾರ ಅಗತ್ಯವೆಂದೂ ಕಂಡು ಬಂತು ಆ ಪ್ರಚಾರ ದೇಶ ಭಾಷೆ ಅದೂ ಜನ ಸಾಮಾನ್ಯರ ಭಾಷೆಯೆ ಆಗಬೇಕೆಂಬ ರಹಸ್ಯ ಹಿಳಿದಿದ್ದ ಸಂದರ್ಭ ಮತ ಪ್ರಚಾರಕ್ಕೆ ಇಷ್ಟೇ ಆದರೂ ಸಾಲದು ಇದೆಲ ಹೊಸ ಹೊಸ ವಿಧಾನದಲ್ಲಿ ಆಗಬೇಕು ಆಕರ್ಷಣೆಯೂ ಅನುಭವವಾಗಿರಬೇಕು ತಮ್ಮ ಧರ್ಮ ಯಾವುದೇ ಗಹನ ತತ್ತ್ವಗಳಿಂದ ಕೂಡಿರಲಿ ಆದರೆ ಆ ತತ್ತ್ವಗಳ ಸಾರ ಅರ್ಥವಾಗುವ ತಿಳಿ ಭಾಷೆಯದಾಗಿರಬೇಕು ಜನರಿಗೆ ಮುಟ್ಟಬೇಕು ಅಶಿಕ್ಷಿತ ಜನರಿಗೂ ಅರ್ಥವಾಗಬೇಕು ಅದು ದೇಶ ಭಾಷೆಯಾದರೆ ಪ್ರಚಾರಕ್ಕೂ ಸುಲಭ ಎಂತಲೇ ಸಾಹಿತ್ಯದ ಹೊಸ ಅಲಂಕಾರಗಳ ಹುಡುಕಾಟಕ್ಕೂ ತೊಡಗಿಸಿತು ಹೊಸ ಶೈಲಿಯನ್ನು ಹುಡುಕಲೂ ಹಚ್ಚಿತು ಈ ಮುಪ್ಪುರಿಯ ಕ್ರಾಂತಿ ರಾಜಕೀಯ ಸಾಮಾಜಿಕ ಮತ್ತು ಧಾರ್ಮಿಕ ಕ್ಷೇತ್ರಗಳನ್ನು ಗಾಢವಾಗಿ ಆವರಿಸಿತು

ಮತ—ಧರ್ಮಗಳು ಒಳಪದರ ಕಡೆ ಕಣ್ಣು ಬಿಟ್ಟು ನೋಡುವಂತಾದ ಈ ಕಾಲ ಕರ್ನಾಟಕ ಜನ ಜೀವನ ಕ್ಷೇತ್ರದಲ್ಲಾದ ಮಹತ್ತರ ಬದಲಾವಣೆಗೆ ಕಾರಣವಾಯಿತು

ಆದ ವರೆಗೂ ಕವಿಗಳು ಹೆಚ್ಚಾಗಿ ಬಳಸುತ್ತಿದ್ದ ಛಂದೋಮಾರ್ಗವೂ ಬದಲಾಗಿ ತ್ರಿಪದಿ ಷಟ್ಪದಿ ರಗಳೆಗಳ ಛಂದಸ್ಸುಗಳಲಿ ಕಾವ್ಯಗಳೂ ರಚಿಸಲಾಗತೊಡಗಿದುವು

ವೀರಶೈವಧರ್ಮ ರಗಳೆ ತ್ರಿಪದಿಗಳನು ಬಳಸಿ ಗದ್ಯ ರೂಪದ ವಚನಗಳಲ್ಲಿ ಸಾಹಿತ್ಯದ ರಚನೆಗೆ ತೊಡಗಿದರೆ (ಇವನ್ನು ಹಾಡುತ್ತಿದ್ದುದೂ ಉಂಟು) ಹರಿದಾಸ ಪಂಥ ಮತ್ತೊಂದಷ್ಟು ಮುಂದೆ ಹೋಗಿ ಜನರ ಕಿವಿಗೆ ಇಂಪಾಗಿ ಉಗಾಭೋಗಗಳಂಥ ಸಂಗೀತ ಪ್ರಧಾನವಾದ ಹೊಸ ಮಟ್ಟುಗಳನ್ನು ಶೋಧಿಸಿ ಸಾಹಿತ್ಯ ರಚನೆಗೆ ತೊಡಗುವಂತೆ ಮಾಡಿತು

ಕರ್ನಾಟಕದಲ್ಲಿ ವ್ಯಾಪಕವಾಗಿ ಮೊದಲು ವಿಷ್ಣುಭಕ್ತಿ ಪ್ರಾರಂಭವಾದದ್ದು ಹರಿದಾಸರಿಂದಲೇ ಹರಿದಾಸರು ದ್ವೈತ ಸಿದ್ಧಾಂತ ಮತ ಪ್ರಾಚಾರ್ಯರ ಶಿಷ್ಯರಾದ್ದರಿಂದ ಅವರ ಮತ ಪ್ರಚಾರದ ಪ್ರಮೇಯಗಳಲ್ಲೂ ದ್ವೈತ ಸಿದ್ಧಾಂತ ತತ್ತ್ವಗಳೇ ಹಾಸು ಹೊಕ್ಕಾಗಿರುವುದು ಸಹಜ ಕ್ರಿಯೆ ದಾಸ ಕೃತಿಗಳ ಮೂಲಾಧಾರವೂ ಇದೇ

ಪರತತ್ತ್ವವನು ಸಾಕ್ಷಾತ್ಕರಿಸಿ ಲೋಕೋಪಕಾರಕ್ಕೆ ತಮ್ಮ ಅನುಭವವನ್ನು ಹಾಡುಗಳ ಮೂಲಕ ಪದ್ಯ ರಚಿಸಿ ಹಾಡಿದ ದಾಸರ ಅಪರೋಕ್ಷ ಜ್ಞಾನಿಗಳು ಎನಿಸಿದ್ದಾರೆ

ಬ್ರಹ್ಮಸೂತ್ರದ ಸಮನ್ವಯಾಧಿಕರಣದಿಂದ ಪರಬ್ರಹ್ಮನಾದ ವಿಷ್ಣುವಿನ ಸರ್ವೋತ್ತಮತ್ವವಾದ ಪ್ರತಿಪಾದನೆಯೆ ಸರ್ವ ಶಾಸ್ತ್ರಗಳ ಮಹಾತಾತ್ಪರ್ಯವೆಂದು ಗೊತ್ತಾಗುತ್ತದೆ, ಎಂದು ತಿಳಿದಿದ್ದ ದಾಸರು ತಮ್ಮೆಲ್ಲ ರಚನೆಗಳಲ್ಲಿಯೂ ಈ ಸೂತ್ರಗಳನೆ ಸಾಧಾರಣ ಕರಿಸಿಕೊಂಡಿರುವುದನು ಕಾಣಬಹುದು ಇತಿಹಾಸ ಪುರಾಣಗಳಲ್ಲಿ ಅಬಾಧಿತವಾಗಿ ತೋರುವ ಅರ್ಥವೇ ಸೂತ್ರಾರ್ಥ ಈ ತತ್ತ್ವ ರಹಸ್ಯವನ್ನು ದಾಸರ ಮೂಲ ಕೃತಿಗಾಗಲಿ ಮೂಲ ಪ್ರತಿಗಾಗಲಿ ಯಾವ ಲೋಪವೂ ಬಾರದಂತೆ ತಮ್ಮ ಶೈಲಿಯಲ್ಲಿ ಪುನರ್ರಚಿಸಿಕೊಂಡ ಜನ ಸಾಮಾನ್ಯರಿಗೆ ಮುಟ್ಟಿಸುವ ಧರ್ಮವರ್ತಿಗಳಾದರು

ಭಕ್ತನ ಭಕ್ತಿ ಪ್ರಕಟವಾಗಲು ಆರಾಧಿಸಲು ಮುಂದೆ ವಿಗ್ರಹ ಇರಬೇಕು ಪೌರಾಣಿಕರೆಲ್ಲ ಭಕ್ತಿ ಮಾರ್ಗಪ್ರಧಾನಿಗಳಾಗಿದ್ದರು ಅಜ್ಞನಿಗೆ ವಿಗ್ರಹವಿಲ್ಲದೆ ಭಕ್ತಿ ಮಾಡುವುದೆಂತು ?

ಋಗ್ವೇದದ ಶ್ರದ್ಧಾ ಮಂತ್ರದಲ್ಲಿ ಶ್ರದ್ಧೆಯೇ ದೇವತೆಯೆಂದು ವರ್ಣಿಸಿದೆ ಇದರಿಂದ ಶ್ರದ್ಧಾ ವಂದನಾ ಅರ್ಚನಾ ಭಜನೆಗಳು ಭಕ್ತಿಗೆ ಅವಶ್ಯವೆಂಬ ಅಂಶವನ್ನು ದಾಸರು ಕಂಡುಕೊಂಡರು ಈ ನಾಲ್ಕು ವಿಧಾನಗಳಿಂದ ಉಪಾಸನೆ ಮಾಡುವ

ರೀತಿ ಾ ್ಯಸರಿಗಾಗಲೀ ದಾಸರಿಗಾಗಲೀ ಸಾವಮಾನ್ಯನಿಗಾಗಲೀ ಹೆಚು ಹಿತ ಕೊಡುತ್ತ ದೆಂಬ ಮಾತೂ ುನ್ಯ ದಾಸರು ತತ್ತ್ವ ಆತ್ಮ ಸಾಕ್ಷಾತ್ಕಾರಕ್ಕಾಗಿ ಕಂಡ ಕೊಂಡ ಭಕ್ತಿಯಿಂ ಈ ವಿಧಿ ಾಮಾನ್ಯನ ಆತ್ಮ ಸಂತೋಷಕ್ಕೂ ಹೆಚ್ಚು ಇಂಬ ಕೊಟ್ಟಿತು

ವಿಷ್ಣು ಮತ್ತು ಇತರ ದೇವತೆಗಳ ಭಕ್ತಿ ಅಧಿಕಾರ ಪುರಂಷನ ಯೋಗ್ಯತೆಗೆ ಅನುಸಾರವಾಗಿ ಅನಾದಿಕ ಲದಿಂದಲೂ ಇದೆ ವಿಷ್ಣು ನಾರಾಯ ಣ ವಾಸುದೇವ ಮತ್ತು ಕೃಷ್ಣ ಭಕ್ತಿಯು ವೆ ದ ಕಾಲದಲ್ಲಿ ಹೆಚ್ಚ ಪ್ರಚಾರಕ್ಕೆ ಬಂದಿರಬೇಕು ವೇದಗಳಲ್ಲಿ ವಿಷ್ಣುವಿಗೆ ಕೊಟ್ಟ ಪ್ರಾಧಾನ್ಯವೇ ಬಹುಶಃ ಮಹಾ ಭಾರತದಲ್ಲಿ ಕ ಷ್ಣ ನಿಗೆ ಕೊಟ್ಟ ಹಾಗೂ ದೇವರು ಪುರೋಹಿತಶಾಹಿಯನ ಬಿಟ್ಟು ಜನ ಸಾಮಾನ್ಯರ ಕಡೆಗೆ ಬಂದ ಮೊದಲ ಹಂತವಾಗಿರಬೇಕು ಪುರಾಣ ಲೀವರುಗಳೂ ಜನರಿಂದ ದೂರವಾಗಿಯೇ ಇದ್ದರೂ ವೇದ ಕಾಲದಲ್ಲಿ ವಿಷ್ಣು ಭಕ್ತರಾಗಿದ ವರಲ್ಲಿ ಹೆಚ್ಚಿನವ ರೆಲ್ಲ ಪಾತಂಜಲಿಯ ಕಾಲಕ್ಕೆ ಕೃಷ್ಣಭಕ್ತರಾದರು

ಅವತಾರಗಳ ಕೃಷ್ಣ ನೂ ವ ಹಾ ಭಾರತದಲ್ಲಿ ಬರುವ ಕೃಷ್ಣ ನೂ ಒಬ್ಬನೇ ಅಥವಾ ಬೇರೆ ಬೇರೆಯೆ ೕ ಎಂಬ ಒಂದು ವಾದವಿದೆ ವಾದ ಏನೇ ಇದ್ದರೂ ಜನ ರಿಂದ ದೂರವಾಗಿ ಪುರೋ ಹಿತರಿಗಷ್ಟೇ (ಕಾಣದಿದ್ದರೂ) ಇದ್ದಾನೆಂಬ ವಿಶ್ವಾಸ ಮೂಡಿಸಿದ್ದ ದೇವರನು ಜನರ ಹಿತಕ್ಕಾಗಿ ನ್ಯಾಯ—ಧರ್ಮಗಳ ಪರವಾಗಿ ನಿಲ್ಲಲಂ ಯುಗ ಯುಗಗಳಲ್ಲೂ ಅವತರಿಸ ವ ಮಹಾಭಾರತದ ಕೃಷ್ಣ ಜನರ ಮಧ್ಯೆ ಕಾಣಿಸಿ ಕೊಂಡಿದ್ದಾನೆ ನಾ ಯ ಎತ್ತಿ ಹಿಡಿದಿದ್ದಾನೆ ಧರ್ಮರಕ್ಷನಾಗಿದ್ದಾನೆ ದ್ವಾಪರದ ಜನಸಮು ದಾಯದ ವ ಸ್ಸಿನಲ್ಲಿ ಪ್ರತಿಬಿಂಬ ಮೂಡಿಸಿ ಬಿಂಬವಾಗಿ ದೂರ ನಿಂತಿ ದ್ದಾನೆ ಉತ್ತಮ ಜೀ ನಕ್ಕೊಂದು ಪ್ರೇರಕ ಶಕ್ತಿಯಾಗಿದ್ದಾನೆ ಅವಸಾನವೀಯಂ ಜೀವನಕ್ಕೆ ಭೀತಿಯ ೂ ಆಗಿದ್ದಾನೆ

ಕ್ರಿ ಶ 5ನೇ ಶತಮಾನದಿಂದ ೧ನೇ ಶತಮಾನದ ವರೆಗೆ ಅವಿಚ್ಛಿನ ಾಗಿ ಕೃಷ್ಣಭಕ್ತಿ ಅವನ ಅವತಾರ ಭೂಮಿಯಾದ ವ ಥುರಾ ಪ್ರಾಂತದಲ್ಲಷ್ಟೇ ಅಲ್ಲ ಗುಜರಾತ ಾಸಿಕ ನಾ ಘಟ ಇತ್ಯಾದಿ ಪ್ರದೇಶಗಳಲ್ಲಿ ವ್ಯಾಪಿಸಲೂ ಮಹಾ ಭಾರತದ ಕೃಷ್ಣನ ನೆರಳೆ, ಕಾರಣವೆಂದು ನಿಸ್ಸಂದೆ ಹವಾಗಿ ಹೇಳಬಹುದ

ಉತ್ತರ ಭಾರತದ ಅನೇಕ ಶಿ ಾ ಮತ್ತು ತಾಮ್ರ ಶಾಸನಗಳಿಂದಲೂ ಈ ವಿಚಾರ ತಿಳಿದು ಬರ ತ್ತದೆ ವಿಷ್ಣ ಾಸ ದೇವ ಮತ್ತು ಕೃಷ್ಣಭಕ್ತಿಯನ್ನು ಸಾರುವ ಆಧಾರಗಳು ಬೇಕಾದಷ್ಟಿವೆ ವೈದಿಕ ಧರ ್ದ ಪ್ರತೀಕಗಳಾದ ಭಗವನ್ ಮತ್ತು ಭಕ್ತಿ ಶಬ್ದಗಳು ಹಾಗೂ ವ ೂರ್ತಿಪೂಜೆಗಳೇ ಬೌದ್ಧ ಜೈನ ಧರ್ಮಗಳಿಂದ ಪ್ರತ್ಯೇಕವ ಗಿಡಲ ಕ ರಣವಾದ ಆಚರಣೆಗಳ ಕರ್ನಾಟಕದ ರಾಜ ಮನೆತನಗಳಲ್ಲೂ ಭಕ್ತಿಯ ಬೆಳವಣಿಗೆಯ ವೆ ಟ್ಟಿಲ ಗಳನು ಗುರುತಿಸಬಹುದು ಕದಂಬ ಮತ್ತು

ಗಂಗರಸರು ಇಟ್ಟುಕೊಳ್ಳುತ್ತಿದ್ದ ಹೆಸರುಗಳಿಂದಲೇ ಅವರಿಗೆ ವಿಷ್ಣು—ಕೃಷ್ಣಭಕ್ತಿಯು ಕಡೆಗಿದ್ದ ಒಲವನ್ನು ಗುರುತಿಸಬಹುದಾಗಿದೆ ಚಾಲುಕ್ಯರ ಕಾಲದಲ್ಲಿಯಂತೂ ಕೃಷ್ಣ ಭಕ್ತಿಯು ರಾಜಘೋಷಣೆಯನ್ನು ಪಡೆದಿತು

ವೈದಿಕ ಧರ್ಮ ಶಿಥಿಲವಾಗುತ್ತ ಬಂದಂತೆ ಅನೇಕ ಧರ್ಮಗಳು ತಲೆ ಎತ್ತಲು ಅವಕಾಶವಾಯಿತು ಧಾರ್ಮಿಕ ಭೂಮಿಕೆಯಲ್ಲಿ ಕೆಲವು ಮಹಾ ಪುರುಷರು ಸರ್ವ ಧರ್ಮ ಸಮನ್ವಯದ ಬಗ್ಗೆಯೂ ಪ್ರಚಾರ ಮಾಡಿ ಒಂದು ಹೊಸ ಸಾಧನೆಯನ್ನು ಸಾಧಿಸಲು ಪ್ರಯತ್ನಿಸಿದ್ದೂ ಇದೇ ಕಾರಣದಲ್ಲಿಯೇ ಶೈವ ಬೌದ್ಧ ಜೈನ ಇತ್ಯಾದಿ ಮತಗಳ ಸಂಘರ್ಷದಿಂದ ಧಾರ್ಮಿಕ ಭಾವನೆ ಮತ ತತ್ವ ವಿಚಾರಗಳಲ್ಲಿ ಶಿಥಿಲತೆ ಉಂಟಾಗಿ ಅದುವರೆವಿಗೂ ರೂಢಮೂಲವಾಗಿದ್ದ ವಿಷ್ಣು ಸರ್ವೋತ್ತಮತ್ವದಲ್ಲಿ ಇದ್ದ ಏಕತೆಯು ಒಡೆದು ಅನ್ಯ ದೇವತೆಗಳ ಸಾಮ್ಯದಿಂದ ಮೂಲ ಸ್ವರೂಪದಲ್ಲಿಯೂ ವ್ಯತ್ಯಾಸ ಉಂಟಾಯಿತು

ಕ್ರಿ ಶ 12 ನೇ ಶತಮಾನದ ಹೊತ್ತಿಗೆ ಉತ್ತರದಲ್ಲಿ ಪ್ರಚಾರದಲ್ಲಿದ್ದ ಶೈವ ಸಂಘಗಳೂ ತಮ್ಮ ಧರ್ಮದ ತತ್ವಗಳ ಪ್ರಚಾರದಲ್ಲಿ ತೊಡಗಿದವು ಈಗ ವಿಷ್ಣು ಭಕ್ತಿ ಬೆಳೆದು ಬಂದಿದ್ದ ಧರ್ಮ ಕ್ಷೇತ್ರವು ಅನ್ಯ ಧರ್ಮೀಯರ ದಾಳಿಗೆ ಒಳಗಾಗಬೇಕಾಯಿತು ಈ ಸಮಯಕ್ಕಾಗಲೇ ಏಕರೂಪತೆಯನ್ನು ಕಳೆದುಕೊಂಡಿದ್ದ ವಿಷ್ಣು ಉಪಾಸನೆಯ ಭಕ್ತಿ ಈಗ ಮತ್ತಷ್ಟು ಕುಂದುವಂತಾಯಿತು ಹೀಗೆ ಅನ್ಯ ಧರ್ಮಗಳ ತುಳಿತಕ್ಕೆ ಸಿಕ್ಕಿ ಕ್ರಮೇಣ ಕಣ್ಮರೆಯಾಗಿಯೇ ಹೋಗುವ ಸ್ಥಿತಿಯನ್ನು ಮುಟ್ಟಿದ್ದ ವಿಷ್ಣು ಭಕ್ತಿಯನ್ನು ಹಿಡಿದು ನಿಲ್ಲಿಸಿ ಮತ್ತೊಮ್ಮೆ ವ್ಯಾಪಕ ಪ್ರಚಾರಕ್ಕೆ ತಂದು ಈ ಧರ್ಮವನ್ನು ಜನ ಸಾಮಾನ್ಯರ ಧರ್ಮವಾಗಿ ಮಾಡಿದವರು ವ್ಯಾಸ–ದಾಸ ಕೂಟದವರು

ಕ್ರಿ ಶ 8ನೇ ಶತಮಾನದಲ್ಲಿ ವಿಷ್ಣೋಪಾಸಕರಾಗಿದ್ದ ಶ್ರೀ ಶಂಕರಾಚಾರ್ಯರು ತಂದ ಜೀವ ಬ್ರಹ್ಮೈಕ್ಯವಾದ ವಿಷ್ಣುಭಕ್ತರಿಗೆ ಹಿಡಿಸದಾಯಿತು

ತಮಿಳು ನಾಡಿನಲ್ಲಿ ವೈಷ್ಣವ ಆಳ್ವಾರರೂ ಅನಂತರ ಬಂದ ಶ್ರೀರಾಮಾನುಜಾಚಾರ್ಯರು ವೈಷ್ಣವ ಧರ್ಮ ಪ್ರಚಾರಕ್ಕೆ ವಿಶೇಷವಾಗಿ ಕಾರಣರಾದರು

ಜೈನ ಮತ್ತು ಶೈವ ಮತಗಳ ಪ್ರಬಲ ವಿರೋಧದ ಮಧ್ಯೆ ಸಿಕ್ಕಿಕೊಂಡ ವೈಷ್ಣವ ಪಂಥ ತನ್ನ ವಿಷ್ಣು ಭಕ್ತಿಯನ್ನು ಪ್ರಚಾರಗೊಳಿಸಬೇಕಾಗಿ ಬಂದಾಗ ಅನೇಕ ವೇದಾಂತ ಗ್ರಂಥಗಳನ್ನೂ ರಚಿಸಿ ವಿಷ್ಣು ಭಕ್ತಿಯನ್ನು ಸಾಮಾನ್ಯನಿಗೆ ಮುಟ್ಟಿಸುವ ಕಾರ್ಯವನ್ನೂ ಮಾಡಿತು

ಆದರೆ ವಿಷ್ಣುಭಕ್ತಿ ಮೊಟ್ಟಮೊದಲಿಗೆ ತನ್ನ ಶುದ್ಧ ರೂಪದೊಂದಿಗೆ ಪ್ರಚಾರಕ್ಕೆ ಬಂದದ್ದು ಶ್ರೀ ಮಧ್ವಾಚಾರ್ಯರ ಕಾಲದಲ್ಲಿ ಕ್ರಿ ಶ 13ನೇ ಶತಮಾನ

ದಲ್ಲಿ ಉದಯಿಸಿದ ಈ ಮತ ಮುಂದೆ ಹಲವಾರು ವರ್ಷ ಯಾವ ಅಡೆ-ತಡೆಯೂ ಇಲ್ಲದೆ ವ್ಯಾಸಕೂಟ-ದಾಸಕೂಟಗಳ ಮೂಲಕ ಜನಸಾಮಾನ್ಯರಿಗೆ ತತ್ವ ದರ್ಶನ ವನ್ನು ಮಾಡುತ್ತ ಬಂತು

ಶಾತವಾಹನರ ಪ್ರಾಬಲ್ಯ ಕಡಿಮೆಯಾಗಿ ರಾಜಾಶ್ರಯ ತಪ್ಪಿದ ಮೇಲಂತೂ ಬೌದ್ಧಮತದ ವರ್ಚಸ್ಸು ಕಡಿಮೆ ಯಾಗಂತ್ತ ಒಂತು ಕದಂಬ ಚಾಲುಕ್ಯರ ಘೋಷಣೆ ಯ ಲ್ಲಿ ವೈದಿಕ ಧರ್ಮವೂ ಗಂಗರ ಕಾಲದಲ್ಲಿ ಜೈನ ಧರ್ಮವೂ ಪ್ರಚಾರಕ್ಕೆ ಬಂದದ್ದ ರಿಂದ 13 ನೆ ಶತಮಾನದ ವರೆಗೆ ಧಾರ್ಮಿಕ ಕ್ಷೇತ್ರದಲ್ಲಿ ಭದ್ರವಾಗಿ ನೆಲೆಯೂರುವ ಗಟ್ಟಿತನ ಯಾವ ಧರ್ಮಕ್ಕೂ ಸಿಕ್ಕಿರಲಿಲ್ಲ ಆ ಸ್ಥಾನವನು ಈಗ ಮೊದಲನೆ ಗಲ ಗಳಿಸಿದವರು ಶ್ರೀ ಮಧ್ವಾಚಾರ್ಯರು

ಮೇಲಿಂದ ಮೇಲೆ ಉಂಟಾಗುತ್ತಿದ್ದ ಈ ಮಂತೀಯ ಸಂಘರ್ಷದಲ್ಲಿ ಸಿಕ್ಕಿ ಸಾಮಾನ್ಯ ದಿಗ್ಭ್ರಮೆಗೊಂಡಿದ್ದ ರಾಷ್ಟ್ರಕೂಟರ ಕಾಲದಲ್ಲಿ ಒಮ್ಮೆಲೇ ಬೌದ್ಧರ ಮೇಲೆ ಬಿದ್ದ ಜೈನರು ಬೌದ್ಧ ಮತ ಪ್ರಾಬಲ್ಯವನ್ನು ನಾಮಾವಶೇಷಗೊಳಿಸಿದರು ನಂತರ ಜೈನಮತವೂ ಕ್ರಮೇ ಣ ತನ ಜನಾದರಣೆಯನ್ನು ಕಳೆದುಕೊಳ್ಳುವಂತಾಯಿತು ಆದರೂ ಅಳಿದುಳಿದಿದ್ದ ಜೈನಮತ ವೈಷ್ಣವ ವ ತ್ತು ಶೈವ ಮಾರ್ಗಗಳೊದಿಗೆ ಸ್ಪರ್ಧೆಗೆ ನಿಂತು ರಾಜಾಶ್ರಯವನ್ನೂ ಪಡೆದು ಹೋರಾಡುತ್ತಿದ್ದದ್ದು ದ್ವೈತಮತ ಸ್ಥಾಪನೆಯ ನಂತರದಲ್ಲಿ ಅಲ್ಪ ಕಾಲದಲ್ಲೇ ಪೂರ್ಣವಾಗಿ ತನ ವರ್ಚಸ್ಸನ್ನು ಕಳೆದುಕೊಂಡಿತು

ಕರ್ನಾಟಕದಲ್ಲಿ ಶ್ರೀ ರಾಮಾನುಜಾಚಾರ್ಯರಿಂದ ಪ್ರಸಿದ್ಧಿಗೆ ಬಂದ ವಿಶಿಷ್ಟಾ ದ್ವೈತ ತಮಿಳು ನಾಡಿನಲ್ಲಿ ಕ್ರಿ ಶ 9ನೇ ಶತಮಾನದಲ್ಲೇ ಆಳ್ವಾರುಗಳಿಂದ ಪ್ರಸಿದ್ಧಿಗೆ ಬಂದು ಕ್ರಿ ಶ 11ನೇ ಶತಮಾನದಲ್ಲಿ ಬಂದ ಯಾಮುನಾಚಾರ್ಯರಿಂದ ಆಚಾರ್ಯ ಪರಂಪರೆಗೆ ನಾಂದಿಯಾಯಿತು ದಕ್ಷಿಣದ ಭಾವನಾ ಪ್ರಧಾನರಾದ ಆಳ್ವಾರ್‌ಗಳ ಮೇಲೆ ಪ್ರಭಾವ ಬೀರಿದ ಉತ್ತರದ ಶ ದ್ಧ ವೈಷ್ಣವ ಸಂಪ್ರದಾಯವೇ ಮುಂದೆ ಕರ್ನಾಟಕದಲ್ಲಿ ಯುಕ್ತಿ ಪ್ರಧಾನ ಆಚಾರ್ಯರುಗಳಿಂದ ಹರಿಭಕ್ತಿ ಬೆಳೆಯಲು ಕಾರಣವಾಯಿತು ಆಚಾರ್ಯರುಗಳೂ ಪ್ರಮೇಯಗಳಲ್ಲಿ ಅಡಗಿದ್ದ ಶಾಸ್ತ್ರ ಪ್ರಮಾಣವನ್ನು ಶಾಸ್ತ್ರೀಯವಾಗಿ ವಿವೇಚಿಸಿದ್ದರಿಂದ ಅವರ ಉಪದೇಶಗಳನೂ ಜನಮೆಚ್ಚುವಂತಾಯಿತು

ಆಚಾರ್ಯರುಗಳ ಪರಂಪರೆಯಲ್ಲಿಯೇ ಬಂದರೂ ರ ಮಾನ ಜಾಚ ರ್ಯರು ಉಪದೇಶಿಸಿದ ವಿಶಿಷ್ಟಾದ್ವೈತ ತತ್ವಗಳು ಸರಳವಾಗಿದ್ದರೂ ಪರಿಣಾಮಕಾರಿ ಯಾಗಿತ್ತು ಕರ್ನಾಟಕದಲ್ಲಿ ತನ್ನ ವರ್ಚಸ್ಸನ್ನು ಬೆಳೆಸಿಕೊಂಡಿದ್ದ ಜೈನಧರ್ಮ ಈಗ ಶೈವ ವ ತ್ತು ವೈಷ್ಣವ ಮತಗಳನ್ನು ಎದುರಿಸಬೇಕಾಯಿತು

ದ್ರಾವಿಡದಿಂದ ಕರ್ನಾಟಕಕ್ಕೆ ಬಂದ ಜೈನಧರ್ಮ ತನ ಇಳಿಗಾಲ ಎಂದಾಗ ದಕ್ಷಿಣ ಕನ್ನಡ ಸೆ ರಿತು ಮುಂದೆ ಉತ್ತರ ಕರ್ನಾಟಕಕ್ಕೂ ಹೋಯಿತು 16 17ನೇ ಶತಮಾನದಲ್ಲಿ ಕೊನೆಯಾಗಿ ತನ ವ್ಯಾಪಕತೆಯನು ಕಳೆದುಕೊಳ್ಳಬೇಕಾಯಿತು ಜೈನ್ಯದರ್ಮದ ನಿರ್ಗಮದಿಂದ ನಂತರ ಕರ್ನಾಟಕದಲ್ಲಿ ಈಗ ಉಳಿದದು ಶೈವ ಮತ್ತು ವೈಷ್ಣವ ಧರ್ಮಗಳಿರಡೇ ಇವೆರಡರಲ್ಲೇ ಈಗ ಪ್ರಬಲ ಪ್ರತಿಸ್ಪರ್ದೆ ಇವೆರಡು ಮತಗಳಲ್ಲಿಯೂ ಅಂತರಿಕ ಪ್ರಬೇದವಿದೆ ಉತ್ತರದಿಂದ ಬಂದ ಶೈವ ಪಂಥ ಕಳಚುರ್ಯರ ಕಾಲದಲ್ಲಿ ಅಂದರೆ ಕ್ರಿ ಶ 12 ನೇ ಶತಮಾನದಲ್ಲಿ ಶ್ರೀಬಸವೇಶ್ವರರ ಹೊಸ ಕ್ರಾಂತಿಗೆ ಆಹ್ವಾನ ಕೊಟ್ಟಿತು ಎಲ್ಲ ಶೈವ ಮತಗಳನೂ ಒಂದುಗೂಡಿಸಿದ ವೀರಶೈವ ಧರ್ಮ ಸಂಸ್ಥಾಪನೆಯಾಯಿತು ಜನಸಾಮಾನ್ಯರಿಗೆ ಸ ಲಭವಾಗಿ ಅರ್ಥವಾಗುವ ಸರಳಗನ ಡದಲ್ಲಿ ರಚನೆಯಾದ ಧಾರ್ಮಿಕ ವಿಚಾರಗಳಿಗೆ ದೇಶದ ಜನ ಸುಲಭವಾಗಿ ಾರು ಹೋದರು ಮತತತ್ವಗಳು ಹೆಚ್ಚು ಹೆಚ್ಚಾಗಿ ಪ್ರಚಾರವಾಗತೊಡಗಿದುವು ಅದೇ ಪ್ರಮಾಣದಲ್ಲಿ ಸಾಹಿತ್ಯವೂ ಸೃಷ್ಟಿಯಾಗ ತೊಡಗಿರ

ಎಂಟು ಹತ್ತನೇ ಶತಮಾನದಲ್ಲಿ ಆಳ್ವಾರುಗಳು ಹೇಗೆ ವಿಷ್ಣು ಭಕ್ತಿಯ ಪ್ರಭಾವಕ್ಕೊಳಗಾಗಿ ಜನಸಾಮಾನ್ಯರನು ಮನಟ್ಟುವ ಸರಳ ಶೈಲಿಯಲ್ಲಿ ಸಾಹಿತ್ಯ ರಚಿಸಿ ಪ್ರಚಾರ ಕಾರ್ಯವನ್ನು ಮಾಡಿದರೋ ಹಾಗೆ ಈಗ ಬಸವಣ್ಣನವರ ವೀರ ಶೈವ ಧರ್ಮದ ಪ್ರಚಾರಕ್ಕೆ ಸರಳಗನ್ನಡವನ್ನು ಒಳಕೊಳ್ಳುತ್ತ ಬಂದರು ತಮಿಳು ನಾಡಿನಲ್ಲೂ ಶೈವ ಮತವಿತ್ತು ಅಲ್ಲಿಯ ಶಿವಭಕ್ತರೂ ಶೈವ ಮತಕ್ಕೆ ಸಂಬಂಧಿಸಿದ ಹಾಡುಗಳನು ಕಟ್ಟಿ ಹಾಡುತ್ತ ಶೈವ ಮತ ಪ್ರಚಾರದಲ್ಲಿ ತೊಡಗಿದ್ದರು

ಮಧ್ವಾಚಾರ್ಯರು ಮತ್ತು ರಾಮಾನುಜಾಚಾರ್ಯರೂ ಶೈವ ಮತವನ್ನು ಬಲವಾಗಿ ಖಂಡಿಸಿದರು ಆಳ್ವಾರುಗಳ ಕಾಲದಲ್ಲಿ ವಿಶಿಷ್ಟಾದ್ವೈತ ತತ್ವಗಳು ಮೊದಲ ಬಾರಿಗೆ ಸರಳೀಕೃತಗೊಂಡು ಪ್ರಚಾರಕ್ಕೆ ಬಂದಿದ್ದರಿಂದ ಜನಸಾಮಾನ್ಯರನ್ನು ಬೇಗ ಮುಟ್ಟುವಂತಾಯಿತು ತಮಿಳು ನಾಡಿನಲ್ಲಿ ಪರಿಣಾಮ ಬೀರುವಂತಾದ ಶೈವ ವೈಷ್ಣವ ಮತ ಪ್ರಚಾರದ ರೀತಿಯಲ್ಲೇ ಕನ್ನಡದಲ್ಲೂ ಶೈವಮತ ಪ್ರಚಾರವಾಯಿತು

ಏನೇ ಆದರೂ ಶೈವಮತ ಜನಾದರಣೆಗಳಿಸಲು ಅಥವಾ ಶಾಶ್ವತ ರಾಜಾಶ್ರಯ ಗಳಿಸಿಕೊಳ್ಳಲೂ ಮೊದಲು ಸಾಮಾನ್ಯನ ಒಲವು ಗಳಿಸಿಕೊಳ್ಳಬೇಕಾಗಿತ್ತು ಇದೇ ಕಾರಣಕ್ಕಾಗಿಯೇ ತಮಿಳುನಾಡಿನ ಶೈವರು ಕರ್ನಾಟಕದಲ್ಲಿಯೂ ಶರಣತತ್ವ ನೀತಿ ಗಳನು ಉಪದೇಶಿಸಬೇಕಾಗಿತ್ತು ಲಿಂಗಧಾರಿಗಳಾದ ಶೈವರು ಶಿವೋಪಾಸಕರು

ಹೀಗೆ ಧರ್ಮ ಜನರನ್ನು ಮುಟ್ಟಬೇಕಾದರೆ ಜನರ ಭಾಷೆಯಲ್ಲೇ ಆಯಾ ಮತಪ್ರಚಾರ ಅನಿವಾರ್ಯವಾಯಿತು ಬಸವಣ್ಣನವರಿಗೂ ಹಿಂದಿನ ಶಿವಭಕ್ತರು

ಪರಿಣಾ ಮ ಕಾರಿಯಾಗಿ ಮಾಡದಿದ್ದ ಮತಪ್ರಚಾರವನ್ನು ಸಮಷ್ಟಿಯನ್ನೇ ದೃಷ್ಟಿಯಲ್ಲಿಟ್ಟುಕೊಂಡ ಮಾಡ ಕೇ ರವೆ ಕು ಇಷ್ಟೇ ಪರಿಣಾಮಕಾರಿಯಾಗಿ ವೈಷ್ಣವ ಮತ ಪ್ರಚಾರಕ್ಕೆ ತೊಡಗಿದವರು ದಾಸಕೂಟದ ದಾಸರುಗಳು ಜನಸಾಮಾನ್ಯರ ಭಾಷೆಯ ಲ್ಲಿ ಸರಳವಾಗಿ ಹೇಳಲು ಬರ ವಂಥ ಕೀರ್ತನೆಗಳಲ್ಲಿ ಉಪದೇಶ ಮಾಡಿದ್ದು ದಾಸಕೂಟದ ಕ್ರಾಂತಿಯೊಂದೇ ಎ ದು ಹೇಳಬೇಕು

ಹೀಗೆ ದೇವತಾ—ಆಕ ರ ಕ ನೆಯ ವೃದ್ಧಿಯ ಹಿಂದೂ ಧರ್ಮದಲ್ಲಿ ಭಕ್ತಿ ಸಿದ್ಧಾಂತದ ಬೆಳವಣಿಗೆಗೆ ಸಹಾಯಕ ವಾದಂತೆ ದಾಸ ಸಾಹಿತ್ಯ ಸೃಷ್ಟಿಗೂ ಭಾರತೀಯ ತತ್ವದರ್ಶನ ವಿಶೇಷವಾಗಿ ಸಹಾಯಕವಾಗಿದೆ ಮೇಲು ನೋಟಕ್ಕೆ ತುಂಬ ಸರಳವಾಗಿ ಕಂಡು ಬಂದರೂ ದಾಸರ ಕೃತಿಗಳಲ್ಲಿ ವಿಶೇಷ ಗೂಢಾರ್ಥಗಳಡಗಿವೆ ವೇದ ವೇದಾಂಗ ಪುರಾಣ ಸ್ಮೃತಿ ಶೃತಿಗಳನೆ ಲ ಅಭ್ಯಾಸ ಮಾಡಿರುವುದರಿಂದಲೇ ವೇದಗಳಲ್ಲಿಯೂ ವಿಶೇಷವಾಗಿ ವರುಣ ಸೂಕ್ತಗಳಲ್ಲಿ ಭಕ್ತಿಯ ಪ್ರಸ್ತಾಪವಿರುವುದು ದಾಸರಿಗೂ ತಿಳಿದ ವಿಷಯವೇ ಆಗಿತ್ತು

ವೇದಾಧ್ಯಯನದಿಂದ ದೆ ವತಾಯೋಗವನ್ನು ಗಳಿಸಿದವರು ವೈದಿಕ ಋಷಿಗಳು ಅದೇ ಸ್ಥಾನದಲ್ಲ ನಿಂತ ಭಕ್ತ ಮಾಡಿದ್ದೇನು? ಭಕ್ತಿಯಿಂದ ದೇವತೆಗಳನ್ನು ಪೂಜೆ ಮಾಡ ವ ಶರಣಾಗತಿಯೊಂದಿಗೆ ಭಕ್ತ — ಶರಣಾಗತ ನಾದ ಈ ಭಕ್ತನ ಭಕ್ತಿಯ ಶರಣಾಗತಿಯೇ ಮುಂದೆ ಅವನಿಂದ ದೇವತೆಗಳ ಪರಂಪರೆಯನೂ ದೇವಾಲಯಗಳ ಸೃಷ್ಟಿಯನ್ನೂ ಮಾಡಿಸುವ ಪ್ರಸಂಗಕ್ಕೆ ಕಾರಣವಾಯಿತು

ಭಕ್ತಿಯು ಒಂದಲ್ಲ ಒಂದು ರೀತಿಯಲ್ಲಿ ಅತಿ ಪ್ರಾಚೀನ ಕಾಲದಿಂದಲೂ ಪ್ರಚಾರದಲ್ಲಿ ಇದ್ದೇ ಇರುವುದನ್ನು ನಾವು ಗಮನಿಸುತ್ತ ಬಂದಿದ್ದೇವೆ ಮೊದ ಮೊದಲು ಶಿವ ವಿಷ್ಣುಪರಗಳಾಗಿದ್ದದ್ದು ಮುಂದೆ ಅವೈದಿಕ ಧರ್ಮಗಳಾದ ಜೈನ ಬೌದ್ಧ ಧರ್ಮಗಳ ಮೇಲೂ ಪರಿಣಾಮ ಬೀರಿದ್ದನ್ನು ನಾವು ಧರ್ಮ ಚರಿತ್ರೆಯಿಂದ ತಿಳಿಯುತ್ತೇವೆ

ಶ ಕ್ತ ಪಾಶುಪತ ಮತಗಳ ಮೇಲೆ ಏರಿದ ಹರಯೋಗದ ಪ್ರಭಾವವು ವಾಮಾಚಾರಗಳಿಗೆ ತಿರುಗಿದ್ದರಿಂದ ಶಿವಭಕ್ತಿಗೆ ಹೆಚ್ಚು ಪ್ರಾಶಸ್ತ್ಯ ಸಿಗಲಿಲ್ಲ 12ನೇ ಶತಮಾನದ ಮಧ್ಯಭಾಗದಲ್ಲಿ ಶೈವರಲ್ಲಿ ಶ್ರೀ ಬಸವೇಶ್ವರರು ಒಂದು ಹೊಸ ಪಂಥವನ್ನು ಪ್ರಸ್ತಾಪಿಸಿದರು ಮು ಂದೆ ವೀರಶೈವ ಮತವ ಗಿ ಪ್ರಸಿದ್ಧವಾದ ಇಂಥ ಅವೈದಿಕ ಮತ ತತ್ವಗಳನು ಖಂಡಿಸಿ ವೈದಿಕ ಮ ತ ಸಿದ್ಧಾಂತವನ್ನು ಪ್ರತಿಷ್ಠೆಗೊಳಿಸಿದ್ದು ದಾಸರಿಗೆ ದ್ವೈತಮ ತ ತತ್ವ ಪ್ರಚಾರಕ್ಕೆ ಹೆಚ್ಚು ಅನುಕೂಲವಾತಾವರಣವನ್ನುಂಟು ಮಾಡಿತು ದ್ವೈತ ಸಿದ್ಧಾಂತವು ಹಿಂದೆ ಆಗಿ ಹೋದ ಎಲ್ಲ ಮತಗಳ ದೋಷಗಳನೂ ನಿರಾಕರಿಸಿ ಅಬಾಧಿತವಾದ ವೈದಿಕ ತತ್ವಜ್ಞಾನವನು ವಿಷ್ಣುಭಕ್ತಿ

ಯೆನೂ ಉಪದೇಶಿಸಿರುವುದರಿಂದ ಇದೇ ಹಿಂದೂಸ್ಥಾನ ಆಧ್ಯಾತ್ಮ ವಿಚಾರ ಶಾಸ್ತ್ರದ ಕಡೆಯ ಮತ್ತು ಶಾಶ್ವತ ಮೆಟ್ಟಿಲು ಆಯಿತೆಂದು ಹೇಳುವುದರಲ್ಲಿ ವಿಶೇಷೋಕ್ತಿ ಏನೂ ಇಲ್ಲ

ಪಂಡರಪುರ ಮೊದಲಿನಿಂದಲೂ ಭಾಗವತ ಧರ್ಮದ ಕ್ಷೇತ್ರವಾಗಿದೆ ವಿಷ್ಣು ಭಕ್ತಿ ಉತ್ತರ ಭಾರತದಲ್ಲಿದ್ದರೂ ಹೆಚ್ಚಿನ ಪ್ರಚಾರ ದೊರೆತಿದ್ದು ದಕ್ಷಿಣದಲ್ಲೇ ಮಹಾರಾಷ್ಟ್ರದಲ್ಲಿ ಭಾಗವತ ಧರ್ಮ ಅತ್ಯಂತ ಹಿಂದಿನಿಂದ ಪ್ರಚಾರದಲ್ಲಿದ್ದರೂ ಇಲ್ಲಿ ರಾಜಾಶ್ರಯ ಪಡೆದಿದ್ದ ಜೈನ ಬೌದ್ಧ ಮತ್ತು ಶೈವ ಧರ್ಮಗಳೊಂದಿಗೆ ಭಾಗವತ ಧರ್ಮವೂ ಹೋರಾಟಕ್ಕೆ ನಿಲ್ಲಬೇಕಾಯಿತು

ಪುರಂದರದಾಸರೇ ಹೇಳುವ ಹಾಗೆ ಹರಿಭಕ್ತಿ ನಾರದ ಬಿತ್ತಿದ ಧರೆಯೊಳಗೆ ಎನ್ನುವುದನ್ನು ನೋಡಿದರೆ ಬಳ್ಳಿಯ ಹುಟ್ಟು ತೀರ ಹಿಂದಕ್ಕೆ ಹೋಗುತ್ತದೆ ಇದರಿಂದ ಹರಿಭಕ್ತಿ ಹರಿದಾಸದೀಕ್ಷೆ ಇವುಗಳ ಚರಿತ್ರೆಯನ್ನು ಪುರಾಣೇತಿಹಾಸಗಳಿಂದ ಕ್ರಮಬದ್ಧಗೊಳಿಸಿ ನಿರೂಪಿಸಿದ್ದು ಅರ್ವಾಚೀನ ಸಂಶೋಧನೆಯನ್ನು ಬೆರಗುಗೊಳಿಸುತ್ತದೆ ಎನ್ನುವ ಹೇಳಿಕೆ ನಿಜ

12 13ನೇ ಶತಮಾನದಲ್ಲಿ ಉಡುಪಿಯಲ್ಲಿ ಬ್ರಾಹ್ಮಣ ಮತ್ತು ಬ್ರಾಹ್ಮಣೇತರರ ಹಾಗೂ ಶ್ರೀ ಸಾಮಾನ್ಯನ ಭಾಷೆ ತುಳು ಆಗಿತ್ತು ಹರಿಭಕ್ತಿಸಾರ ಶ್ರೀಸಾಮಾನ್ಯನಿಗೆ ಮುಟ್ಟಬೇಕಾದರೆ ಅದಕ್ಕೆ ಅವನದೇ ಭಾಷೆಯಾದ ತುಳುವೇ ಆಗಬೇಕೆಂದು ಆಚಾರ್ಯಮಧ್ವರು ತತ್ವೋಪದೇಶಗಳನ್ನು ತುಳುಭಾಷೆಯಲ್ಲೇ ಮಾಡಿದರು ಅನ್ಯಮತ ಪ್ರಚಾರಗಳನ್ನೂ ವಿಚಾರಿ ಕರ್ನಾಟಕದಲ್ಲೆಲ್ಲಾ ದಾಸಕೂಟ ಹರಿಭಕ್ತಿ ಮಹಿಮೆಯನ್ನು ಸರಳಗನ್ನಡದಲ್ಲಿ ಜನರ ಮನಮುಟ್ಟುವಂತೆ ಪದಗಳನ್ನು ರಚಿಸಿದ ಪುರಂದರದಾಸರಲ್ಲಿ ಉಜ್ವಲವಾದ ವಿಷ್ಣುಭಕ್ತಿಯಿತ್ತು

ಅನಂತರ ಬಂದ ಕನಕದಾಸ ವಿಜಯದಾಸರ ಸೇವೆಯಾಗಲೀ ಪ್ರಾಣೇಶರಾಯರು ಗುರು ಪ್ರಾಣೇಶರಾಯರು ಕದರ ಮಂಡಲಗಿ ದಾಸರುಗಳು ಇತ್ಯಾದಿ ದಾಸಕೂಟವೆಲ್ಲ ಮಾಡಿದ ಸೇವೆ ಕಡಿಮೆಯದಲ್ಲ ಭಜ ದಾತುವಿನಿಂದ ಹುಟ್ಟಿದ ಭಕ್ತಿ ಅಥವಾ ಭಜ ಎಂದರೆ ಆಶ್ರಯಿಸು ಎಂಬರ್ಥ ಬರುವ ಸ್ವರೂಪ ಭೂತವಾದ ಭಕ್ತಿ ರಸದಲ್ಲಿ ದಾಸ ಕೂಟಕ್ಕೆ ದಾಸಕೂಟವೇ ಎಂದು ಈಜಾಡಿದೆ ಮತ್ತು ಈ ಭಕ್ತಿಯು ಜ್ಞಾನ ಮತ್ತು ಇಚ್ಛೆಗಳನ್ನೊಳಗೊಂಡ ಮನಸ್ಸಿನ ಒಂದು ವಿಶಿಷ್ಟ ಶಕ್ತಿ ಚಿತ್ತ ಚಾಂಚಲ್ಯವನ್ನು ನಿಗ್ರಹಿಸಿ ಸ್ವರೂಪ ಮನಸ್ಸಿನಿಂದ ಇಂದ್ರಿಯಗಳನ್ನು ಹತೋಟಿಗೆ ತಂದುಕೊಂಡಾಗ ಉಂಟಾಗುವ ಭಾವವೇ ಭಕ್ತಿಯ ಸ್ವರೂಪವಾಗುತ್ತದೆ ವ್ಯಾಸ ದಾಸಕೂಟಗಳನ್ನೂ ಒಳಗೊಂಡಂತೆ ಈ ನಿಜವಾದ ಭಕ್ತಿ ಸ್ವರೂಪವನ್ನು ಕಂಡವರು ತೀರ ವಿರಳ ಕಾರಣ ಈ ಹಿಂದೆಯೇ ಹೇಳಿದಹಾಗೆ ಈ ವಿಶಿಷ್ಟ

ಶಕ್ತಿಯನು ಗಳಿಸಲು ಪ್ರಚಿತ್ತ ಅವಶ್ಯ ಈ ನಿಜವಾದ ಭಕ್ತಿ ಹುಟ್ಟಿದರೆ ಜೀವ ಪರಮಾತ್ಮ ಸ್ವರೂಪಿ ಶ್ರೀಹರಿಯ ಸ್ಮರಣೆಗೆ ಭಕ್ತಿಯೇ ಮುಖ್ಯ ಮಾಧ್ಯಮ ರಜಸ್ಸುತಮೋಗುಣ ವಿಸರ್ಜನೆ ಆದ ಹೊರತು ಸತ್ವ ಗುಣವನು ಗಳಿಸಿಕೊಂಡಹೊರತು ಭಕ್ತಿ ಮಾರ್ಗ ಸಾಗಲಾರದು ಸಾತ್ವಿಕ ಜೀವಿಗಳಿಗೆ ಮಾತ್ರ ಸತ್ವಗುಣ ವಿರಲು ಸಾಧ್ಯ

ಹರಿದಾಸರಿಗೆ ಭಕ್ತಿಯ ಒಂಬತ್ತು ವಿಧಗಳೂ ತಿಳಿದಿತ್ತು ಶ್ರವಣ ಕೀರ್ತನೆ, ಸ್ಮರಣ ಪಾದಸೇವನೆ ಅರ್ಚನ ವಂದನ ದಾಸ್ಯ ಸಖ್ಯ ಮತ್ತು ನಿವೇದನ ಪದ್ಧತಿ ಗಳನ್ನೆಲ್ಲ ಇವರು ನಿತ್ಯದಲ್ಲಿ ಆಚರಿಸುತ್ತಿದ್ದರು ಭಕ್ತನಿಗೆ ಹರಿಯೇ ಬಿಂಬ ಆವನೇ ಈ ಸರ್ವ ಜಗತ್ ನಿಯಾಮಕ ಈ ಸಂಸಾರ ಅನಿತ್ಯ ಅಸಾರ ಎಂದೆಲ್ಲ ಸಾಮಾನ್ಯರಿಗೆ ಬೋಧಿಸಿದ ದಾಸರು ವಿರಕ್ತಿ ಭಾವವನ್ನು ಹುಟ್ಟಿಸಿ ನಂತರ ಭಕ್ತಿಯ ಮಾರ್ಗವನು ತೋರಿಸಿಕೊಟ್ಟರು ವಿರಕ್ತಿಯಿಲ್ಲದೆ ಭಕ್ತಿ ಹುಟ್ಟದು ಇದೆಲ್ಲದರ ಸ್ವಯಮನುಭವವುಳ್ಳ ಪುರಂದರದಾಸರು

ವಿರಕ್ತಿಯೆಂಬುವ ಮಡಿಯನುಟ್ಟು ಪೂರ್ಣ
ಹರಿಭಕ್ತಿಯೆಂಬ ನೀರಿನ್ನ್ಸರಿಟ್ಟು
ಅರಿವೆಂಬ ಬೆಂಕಿಯ ಕೊಟ್ಟು ಮಾಯಾ
ಮರೆಯೆಂಬ ಕಾಷ್ಟವ ಮುಂದದಿಂದ ಸುಟ್ಟು

ಎಂದೆಲ್ಲ ಮಾಡಿದರೆ ಯಾವ ಧರ್ಮದ ಮನುಷ್ಯನಾದರೇನು ? ಮೋಕ್ಷ ಪಡೆಯುವ ವಿರಕ್ತಿ ಹುಟ್ಟಿ ಭಕ್ತನಾಗಲಾರನೇ ? ಇತಿಹಾಸ ಹಿಂದೂ ಧರ್ಮದಲ್ಲಿ ಪ್ರಾರಂಭದಿಂದಲೂ ಒಂದಲ್ಲ ಒಂದು ರೀತಿಯಲ್ಲಿ ಹಾಸು ಹೊಕ್ಕಾಗಿರುವ ಭಕ್ತಿ ಗೂ ವೇದಕಾಲೀನ ದಾರ್ಶನಿಕನಿಗೂ ಅವಿನಾಭಾವ ಸಂಬಂಧ ಇರುವುದನ್ನು ನಾವು ಕಾಣು ತ್ತೇವೆ ಇದನ್ನೇ ಮಧ್ವಾಚಾರ್ಯರು ತೋರಿಸಿಕೊಟ್ಟರು

ಸಿಂಧು ಪ್ರಾಂತದಲ್ಲಿ ದೊರೆತ ವಸ್ತುಗಳ ಅವಶೇಷಗಳು ಇವುಗಳಿಂದ ಕ್ರಿ ಪೂ 3250 ಅಂದರೆ 5000 ವರ್ಷಗಳಷ್ಟು ಹಿಂದೆಯೇ ಭಾರತದಲ್ಲಿದ್ದ ಧರ್ಮದ ಸ್ವರೂಪ ವನ್ನು ತಿಳಿಸುತ್ತವೆ ದಕ್ಷಿಣ ಭಾರತದಲ್ಲಿ ಶೋಧಿಸಲ್ಪಟ್ಟ ಪುರಾತನ ವಸ್ತುಗಳ ಭೂ ಪ್ರದೇಶಗಳಿಂದಲೂ ನಮಗೆ ಹೊಸ ಸಂಗತಿಗಳು ತಿಳಿದು ಬರುತ್ತವೆ ಕ್ರಿ ಪೂ 4 5 ನೇ ಶತಮಾನದ ಈಚಿನ ಶಾಸನಗಳಿಂದಲೂ ಪ್ರಾಚೀನ ನಾಣ್ಯಗಳೂ ಕೂಡ ದೇಶದಲ್ಲಿ ಪ್ರಚಲಿತವಿದ್ದ ಧಾರ್ಮಿಕ ಪ್ರವೃತ್ತಿ ಕಲಾ ಮತ್ತು ಕಂಚಿನ ವಿಗ್ರಹಗಳು ಪ್ರಾಚೀನ ದೇವಾಲಯಗಳು ಇವುಗಳಿಂದಲೂ ವಿಷ್ಣುವಿನ ವಿವಿಧ ಅವತಾರಗಳ ಕಲ್ಪನೆ ಆಯಾ ಮೂರ್ತಿಗಳ ಪೂಜೆಯ ಪ್ರಾಚೀನತೆಯ ಐತಿಹಾಸಿಕತೆಯನ್ನೂ ತಿಳಿಯಬಹು ದಾಗಿದೆ

ಹರಿದಾಸರ ಕೃತಿಗಳ ಮೇಲೆ ವೇದ ಕಾಲೀನ ವಾಙ್ಮಯ ಬೀರಿರುವ ಗಾಢವಾದ ಪ್ರಭಾವವೇ ಆ ಕೃತಿಗಳ ಜನಪ್ರಿಯತೆಗೆ ಕಾರಣವಾಗಿದೆ. ಅಪೌರುಷೇಯವಾದ ಈ ವೇದ ವಾಙ್ಮಯವನ್ನು ಶ್ರೀಮದಾಚಾರ್ಯರುಗಳೂ ತಮ್ಮ ತಮ್ಮ ಮತ ಪ್ರಚಾರಗಳಿಗೆ ಉಪಯೋಗಿಸಿಕೊಂಡಿರುವುದನ್ನು ಕಾಣುತ್ತೇವೆ. ವೇದ ವಾಕ್ಯಗಳನ್ನೇ ಪ್ರಮಾಣಗಳಾಗಿ ಉಪಯೋಗಿಸಿಕೊಂಡಿರುವ ದಾಸಪದಗಳಲ್ಲಿ ಹುದುಗಿರುವ ಧ್ವನಿಯೆಲ್ಲ ಸಾಮಾನ್ಯನಿಗೂ ಅರ್ಥವಾಗುತ್ತದೆ.

ಭಕ್ತಿಯನ್ನು ಮತ ಪ್ರಚಾರಕ್ಕೆ ಉಪಯೋಗಿಸಿಕೊಂಡ ಯಾವುದೇ ಮತಧರ್ಮ ತಮ್ಮ ಮತ ತತ್ವಗಳನ್ನು ಜನ ಸಾಮಾನ್ಯರಿಗೆ ಮುಟ್ಟಿಸಲು ತತ್ತ್ವೋಪದೇಶಗಳ ಹಿನ್ನೆಲೆಯಲ್ಲಿ ಕೆಲಸ ಮಾಡುತ್ತಿರಬೇಕಾಗುತ್ತದೆ. ವೈದಿಕ ಮತದ ಕಟ್ಟುಪಾಡುಗಳನ್ನು ಬಿಗಿಬಂಧಗಳನ್ನು ಎದುರಿಗೆ ಸ್ವೀಕರಿಸಲು ಹಿಂಜರಿಯುವ ಅದೇ ಜನ ದಾಸರ ಪದಗಳ ಹಿನ್ನೆಲೆಯಲ್ಲಿ ಧ್ವನಿಸುತ್ತಿದ್ದ ತತ್ತ್ವಗಳ ಸರಳೀಕೃತ ರೂಪಗಳನ್ನು ತುಂಬು ಹೃದಯದಿಂದ ಮುಂದೆ ಬಂದು ಸ್ವೀಕರಿಸಿದರು. ಸಾಮಾನ್ಯರಿಗೆ ಅರ್ಥವಾಗದ ಈ ವೇದೋಪನಿಷತ್ತಿನ ತತ್ತ್ವಗಳ ಬಿಗಿ ಬಂಧವನ್ನು ಕಳಚಿ ಹೊರಬಂದ ಜೈನ ಬೌದ್ಧ ಮತ್ತು ವೀರಶೈವ ಮತಗಳು ಮಾಡಿದ್ದೂ ಇದನ್ನೇ. ತಮ್ಮ ಮತಾನುಯಾಯಿಗಳನ್ನು ಹೆಚ್ಚಿಸಲು ವೈದಿಕ ಮತ ತತ್ತ್ವಗಳನ್ನು ತೀವ್ರವಾಗಿ ಖಂಡಿಸುವುದು ಅನಿವಾರ್ಯವಾಯಿತು. ಪಾಮರರಿಗೆ ವೈದಿಕ ಧರ್ಮಾನುಚರಣೆ ಕಷ್ಟಸಾಧ್ಯವಾಗಿತ್ತು. ಭಾಷೆಯೂ ಸಂಸ್ಕೃತ ಭೂಯಿಷ್ಠ. ಇದನ್ನೆಲ್ಲ ತಿಳಿದಿದ್ದರಿಂದಲೇ ದಾಸರು ಜನರಿಗೆ ತೀರ ಹತ್ತಿರವಾದ ಭಾಷೆಯನ್ನೇ ಬಳಸಬೇಕಾಯಿತು. ಧರ್ಮ ತತ್ತ್ವಗಳನ್ನು ಸರಳೀಕರಿಸಿ ಸುಲಭವಾಗಿ ಆದ್ಯಂತ ಪ್ರತಿಪಾದಿಸಿದ ಹೊರತು ಯಾವ ಕೃತಿಯೂ ಅವರನ್ನು ಮುಟ್ಟಲಾರದೆಂಬ ಸತ್ಯ ಕಂಡುಕೊಂಡರು.

ಈ ದೃಷ್ಟಿಯಿಂದಲೇ ವಚನಕಾರರು ಮತ್ತು ದಾಸಕೂಟದವರು ತಮ್ಮ ಕೃತಿರಚನೆಗಾಗಿ ಹೊಸ ಛಂದಸ್ಸು, ತಾಳ ಮಟ್ಟು, ರಾಗಗಳ ಸೃಷ್ಟಿ ಮಾಡಬೇಕಾಗಿ ಬಂದದ್ದೂ ಕೂಡ.

13ನೇ ಶತಮಾನದಲ್ಲಿ ಧರ್ಮ ಮತ್ತು ವೇದಾಂತಗಳ ಕೇಂದ್ರವಾಗಿದ್ದ ಉಡುಪಿಯಲ್ಲಿ ಶ್ರೀಮಧ್ವಾಚಾರ್ಯರು ವೈದಿಕ ತತ್ತ್ವವಾದವನ್ನು ಮತ್ತು ಹರಿಭಕ್ತಿಯನ್ನು ಪ್ರಚಾರ ಮಾಡತೊಡಗಿದ್ದು ವ್ಯಾಸಕೂಟ ಸೃಷ್ಟಿಗೆ ಕಾರಣವಾಯಿತು.

ಅನಿತ್ಯವಾದ ಈ ಪ್ರಪಂಚದ ಬಗೆಗೆ ಇರುವ ಮಮಕಾರಗಳನ್ನು ಬಿಟ್ಟು ವಿರಕ್ತಿಭಾವ ತಾಳಿ ಶ್ರೀಹರಿಯನ್ನು ಸ್ಮರಿಸಿ ಶ್ರೀಹರಿಯ ಮಹಿಮೆಯನ್ನು ತಿಳಿದು ಅವನಲ್ಲಿ ನಿರವಧಿಕ ಸರ್ವೋತ್ತಮ ತತ್ತ್ವಜ್ಞಾನದಿಂದ ವಿಹಿತವಾದ ಕರ್ಮಗಳನ್ನು ಮಾಡುತ್ತ ಕರ್ತೃತ್ವವನ್ನು ಅವನಿಗೇ ಸಮರ್ಪಿಸಿ ಬಾಳ್ವೆಯೆಲ್ಲ ಸರ್ವನಿಯಾಮಕವಾದ ಆ ಪರ

ವಾಸ್ಯ್ತ ಪೂಜಾ ರೂಪವೆಂದು ಬಗೆಯಬೇಕೆಂದು ಉಪದೇಶಿ ದರು ಕರ್ಮ ಯೋಗಕ್ಕೆ ಪ್ರಚೋದನೆಯಾದ ಈ ಉಪದೇಶದಿಂದಾಗಿ ವೈದಿಕ ತತ್ವವ ದ ಸಂಪ್ರದಾಯಿ ಜನರ ವ ನಸ್ಸನೂ ಆಕರ್ಷಿಸಿತು ಯತಿಗಳು ದಾಸರು ವಿಷ್ಣು ಮತ್ತು ಕೃಷ್ಣ ಭಕ್ತಿ ಪಂಥದ ಪ್ರಚಾರಕರಾಗಿ ಪಂಡರಾಪುರ ತಿರುಪತಿ ಕ ಂಭಕೋಣ ಮತ್ತು ಶ್ರಿ ರಂಗಗಳನ್ನು ಕೇಂದ್ರಗಳನಾ ಗಿ ಮಾಡಿಕೊಂಡರು

ಮಹಾರಾಷ್ಟ್ರದಲ್ಲಿ ವರ್ಣಾಶ್ರಮಧರ್ಮಗಳನು ಉಲ್ಲಂಘಿಸಿ ಅದ್ವೈತದ ತಳಹದಿಯ ಮೇಲೆ ಸಂತರು ಭ ್ತ ಪಂಥವನ್ನು ನಿಲ್ಲಿಸಿದರೆ ಶ್ರೀ ವೈಷ್ಣವ ಆಳ್ವಾರರು ಇದೇ ಮ ರ್ಗವನ್ನು ಅನ ಸರಿಸಿ ವೈಷ್ಣವ ಭಕ್ತಿಯನು ಅವಲಂಬಿಸಿದರು ನಿಜವ ದ ವೈದಿಕ ತಳಹದಿಯ ವ ೕಲೆಯೇ ಗಿಂತು ವಿಷ್ಣು ಭಕ್ತಿಯ ನ ೨ ಒಪ್ಪಿಕೊಂಡು ಭಾಗವತ ಧರ್ಮಕ್ಕೆ ಹೊಸ ಚೇತನ ತ ಂಬಿದವರೆಂದರೆ ಶ್ರೀಮಧ್ವಾಚಾರ್ಯರೊಬ್ಬರೇ

ಶ್ರಿ ಮಧ್ವಚಾರ್ಯರು ತಮ್ಮ ತತ್ವ ವಾದದಲ್ಲಿ ಪ್ರವಾಣ ಪ್ರಮೇಯಂಗಳನು ಪ್ರತಿಪಾದಿಸಿದರು ಪ್ರಮಾಣಗಳ ಸ್ವರೂಪ ಇವುಗಳಿಂದ ದ್ವೈತ ಸಿದ್ಧಾಂತಕ್ಕಾದ ದಿಗ್ದರ್ಶನ ಭಕ್ತಿಯ ಲಕ್ಷಣ ್ರೈವಿಧ್ಯಗಳನೆ ಲ್ಲಾ ವ್ಯಾಸ ಕೂಟದಿಂದ ತಿಳಿದ ದಾ¬ ಕೂಟ ಮುಂದೆ ಪ್ರಚಾರಕ್ಕೆ ಉಪಯೋಗಿಸಿಕೊಂಡ ಪದಗಳಲ್ಲೆಲ್ಲಾ ಈ ತಿರುಳನ್ನೇ ಅಳವಡಿಸಿಕೊಂಡಿರುವುದನು ಕಾಣುತ್ತೇವೆ

ಈ ದೃಷ್ಟಿಯಿಂದ ದ ಸ ಸಾಹಿತ್ಯವನು ವಿಶ್ಲೇಷಿಸಿ ನೋಡಿದಾಗ ಇಷ್ಟೊಂದು ಸರಳ ಸುಂದರ ಶೈಲಿಯಲ್ಲಿ ಜಗತ್ತಿನ ಅತ್ಯಂತ ಗಹನಗೊಂಡ ವಿಚಾರಗಳ ಸಾರವನು ಅಚ್ಚುಕಟ್ಟಾಗಿ ಅಳವಡಿಸಿಕೊಂಡಿರುವ ವಾಙ್ಮಯ ಮತ್ತೆಲ್ಲೂ ಕಂಡುಬರುವುದಿಲ್ಲ

ಆಚಾರ್ಯರು ತಮ್ಮ ಪ್ರೌಢ ಗ್ರಂಥಗಳಲ್ಲಿ ಅಳವಡಿಸಿಕೊಂಡ ಭಾಗವತ ಶಾಂಡಿಲ್ಯ ನಾರದ ಭಕ್ತಿ ಸೂತ್ರ ವೇದಾಂತಸಾರ ಭಾಷ್ಯಕಾರರ ವ್ಯಾಖ್ಯಾನಗಳನ್ನು ಹರಿದಾಸರು ಪ್ರಮೇಯಗಳಾಗಿ ತಮ್ಮ ಕೃತಿಗಳಲ್ಲಿ ಜಗತ್ತು ಜೀವ ಈಶ್ವರ ಮೋಕ್ಷ ಅದರ ಸಾಧನಗಳು ಇತ್ಯಾದಿಗಳನ್ನು ಭಕ್ತಿಯೋಗದ ಚಿಕಿತ್ಸೆಗೊಳಪಡಿಸಿ ಬದುಕನ್ನು ಪರಿಶುದ್ಧ ಮಾಡಿಕೊಳ್ಳುವ ಆರೋಗ್ಯಮಾರ್ಗ ದರ್ಶನ ಮಾಡಿದ್ದಾರೆ

ಪ್ರಕೃತಿ ಸಂಬಂಧವನ್ನು ತಪ್ಪಿಸಿ ಆತ್ಮನಿಗೆ ತನ ಯಥಾರ್ಥ ಸ್ವರೂಪದ ಜ್ಞಾನವನ್ನುಂಟು ಮಾಡುವ ಧ್ಯೇಯವುಳ್ಳ ಆಧ್ಯಾತ್ಮಿಕತೆಯೇ ವ್ಯಾಸ–ದಾಸ ಕೂಟಗಳ ಗುರಿ

ಭಾರತೀಯ ಆಧ್ಯಾತ್ಮಿಕ ತತ್ವ ವಿವೇಚನೆಗೆ ಹರಿದಾಸರ ಕೊಡುಗೆ ವಿಶಿಷ್ಟವಾದದ್ದು ಪ್ರಾಯಶಃ ಜಾಗತಿಕ ವೇದಿಕೆಯಲ್ಲಿ ಇಂಥದ್ದೊಂದು ಅಪೂರ್ವ ಸಾಹಿತ್ಯ ಸೃಷ್ಟಿ ಬೇರೆ ಯಾವ ದೇಶದ ತತ್ವ ಚಿಂತನೆಯಲ್ಲೂ ನಡೆದಿಲ್ಲ ಶ್ರೀಅರವಿಂದರು ಹೇಳುವ ಹಾಗೆ ಭಾರತೀಯ ಧಾರ್ಮಿಕ ದರ್ಶನದ ಮುಖ್ಯ ಆಧಿಭೌತಿಕ ಸತ್ಯಗಳ

ವಿಶಾಲ ಭಾವನಾತ್ಮಕ ರೂಪಗಳಲ್ಲಾಗಲಿ ಗಂಭೀರ ಕಾವ್ಯ ರೂಪದಲ್ಲಾಗಲೀ ಓಜಃ ಪೂರ್ಣ ವರ್ಣನೆಯ ರೂಪದಲ್ಲಾಗಲಿ ಜನತೆಯ ಸಾಮಾನ್ಯ ಮನ ಪಟಲದಲ್ಲಿ ಮುದ್ರಿತವಾಗಿದೆ ಮಹಾಯಾತ್ಮ್ಯ ಲೀಲಾತತ್ವ ಭಗವಂತನ ಸರ್ವಾಂತರ್ಯಾಮಿ ತತ್ವಗಳು ಏಕಾಂತ ಪ್ರಿಯನಾದ ದಾರ್ಶನಿಕನಿಗೆ ಹೇಗೋ ಮಠದೊಳಗಿನ ಸಂನ್ಯಾಸಿಗೆ ಹೇಗೋ ಕುಟೀರವಾಸಿಯಾದ ಸಂತ ಪುರುಷನಿಗೆ ಹೇಗೋ ಹಾಗಿಯೇ ಸಾಮಾನ್ಯ ಮನುಷ್ಯನಿಗೂ ಗುಡಿಯ ಪೂಜಾರಿಗೂ ಚಿರಪರಿಚಿತವಾಗಿದ್ದವು ಎಸಿಂ ವ ಮಹಾತಿನ ಮಥಿತಾರ್ಥವೇ ದಾಸರ ಕೃತಿಗಳಲ್ಲೂ ಅಡಗಿರುವ ನಿತ್ಯಸತ್ಯವನು ಮನಗಾಣಬಹುದು ಇದೇ ದಾಸರು ಸಾಮಾನ್ಯನಿಗೆ ತಿಳಿಸುವ ಭಾರತೀಯ ತತ್ವದರ್ಶನದ ಮುತ್ತೊಂದು ಮುಖ

ಉಪನಿಷದ್ವಾಕ್ಯಗಳಿಂದ ಮತ್ತು ಸಿದ್ಧಾಂತಗಳಿಂದ ಯುಕ್ತಿ ಪುರಸ್ಸರ ಬ್ರಹ್ಮ ಸೂತ್ರಗಳಿಂದ ಏಕದೇವತಾ ಮತ್ತು ಬಹುದೇವತಾ ವಾದಗಳೆಲ್ಲ ಪ್ರಾಚೀನ ತತ್ವ ಜ್ಞಾನಿಗಳ ಅಭಿಪ್ರಾಯವಾಗಿತ್ತು

ಅರವಿಂದರು ಹೇಳುವ ಹಾಗೆ ಭಾರತೀಯ ಜನತೆ ಅಜ್ಞಾನಿ ಜನಸಾಮಾನ್ಯರು ಸಹ ಶತಮಾನಗಳ ಕಾಲ ಪಡೆದ ಶಿಕ್ಷಣ ಬಲದಿಂದಾಗಿ ಬೇರೆಡೆಯ ಜನಸಾಮಾನ್ಯರಿಗಿಂತ ಸುಸಂಸ್ಕೃತ ಗಣ್ಯರಿಗಿಂತಲೂ ಸಹ ಅಂತರಿಕ ಸತ್ಯಗಳಿಗೆ ಇನ್ನಷ್ಟು ಸಮೀಪ ವಾಗಿರುವ ವಿಚಾರ ವ್ಯಾಸಕೂಟ ದಾಸಕೂಟದವರಿಗೂ ತಿಳಿದಿತ್ತು ಹಾಗಾಗಿಯೇ ಹರಿಭಕ್ತಿ ಸಾರವನ್ನು ಜನ ಸಾಮಾನ್ಯರಿಗೆ ಮುಟ್ಟಿಸುವುದು ಹೆಚ್ಚು ಕಷ್ಟವಾಗಲಿಲ್ಲ ಮತ್ತು ಉಪಾಸಕರಿಗೂ ಹರಿದಾಸ ದೀಕ್ಷೆಯನ್ನು ಪಡೆಯಲು ಅನುಕೂಲವಾಗುವಂತೆ ವೇದ ವೇದಾಂಗಗಳನು ಲೌಕಿಕ ಸಾಹಿತ್ಯದಲ್ಲಿ ಅದರಲ್ಲೂ ತಿಳಿಗನ್ನಡದಲ್ಲಿ ರಚಿಸು ವಂತಾಯಿತು ಶ್ರೀ ನರಸಿಂಹತೀರ್ಥರು ಮಾಡಿದ ಕೆಲಸವೂ ಇದೆ ಇವರು ಕನ್ನಡ ದಲ್ಲಿ ರಚಿಸಿ ಪ್ರಚುರಪಡಿಸಿದ ಕೃತಿಗಳಿಂದಲೇ ಇವರು ದಾಸಕೂಟ ಮೂಲ ಪುರುಷರ ಕೀರ್ತಿಗೆ ಭಾಜನರಾಗಿದ್ದಾರೆ ತತ್ವಚಿಂತನೆ ಭಾರತೀಯ ತತ್ವ ಚಿಂತನೆಗೆ ಅರಣ್ಯಕಗಳ ಪಾತ್ರ ವಿಶಿಷ್ಟವಾದದ್ದು ದಾರ್ಶನಿಕ ಚಿಂತನಾಪದ್ಧತಿ ಹೆಚ್ಚಾಗಿ ಬೆಳೆದದ್ದೇ ಋಷ್ಯಾಶ್ರಮಗಳಲ್ಲಿ ಉಪನಿಷದ್ ಕಾಲಕ್ಕೂ ಮೊದಲು ಅರಣ್ಯಕಗಳ ರಚನೆಗಿಂತ ಪೂರ್ವದಲ್ಲಿ ಋಗ್ವೇದದ ಋಷಿಗಳು ನಗರವಾಸಿಗಳಾಗಿದ್ದರು ಆಗಿನ್ನೂ ಜ್ಞಾನಕಾಂಡ ಸೃಷ್ಟಿಯಾಗಿರಲಿಕ್ಕಿಲ್ಲ ಡಾ॥ ರಾಧಾಕೃಷ್ಣನ್ ಹೇಳುವ ಹಾಗೆ ದರ್ಶನ ಅಭಿವೃದ್ಧಿಗೆ ಪ್ರಬಲ ಪ್ರಭಾವ ಬೀರಿದ ಎರಡು ಅವೈದಿಕ ಮೂಲವುಳ್ಳ ಅಂಶಗಳನ್ನು ಧ್ಯಾನಕ್ಕೆ ಮತ್ತು ಗಾಢ ಚಿಂತನೆಗೆ ಅರಣ್ಯಗಳೇ ಬೇಕಾಯಿತೆಂಬುದು ನಿಜ

ಕ್ರಿ ಪೂ ಸುಮಾರು ಒಂದನೇ ಶತಮಾನದ ಪ ಧುರೆ ಹತ್ತಿರದ ಮೋರಾಶಿಲಾ ಶಾಸನದಲ್ಲಿ ಭಾಗವತೋ ವೃಷ್ಣೇಃ ಪಜ್ಚಾ ವೀರಾಣಾಂ ಪ್ರತಿಮಾ ಎಂದಿದೆ

ಬಗವಾನ ವೃಷ್ಣೀ ಶ್ರಿ ಕೃಷ್ಣನ ಮತ್ತು ಐದು ವೀರರ ಪ್ರತಿಮೆಗಳ ಪ್ರತಿಷ್ಠೆಯ ಉಲ್ಲೇಖದಿಂದ ಭಾಗವತದ ಪ್ರಾಚೀನತೆಯನ್ನು ಗುರುತಿಸಬಹುದಾಗಿದೆ ಕ್ರಿ ಶ ದ ಮೊದಲ ಶತಮಾನಕ್ಕೆ ಸೇರಿದ ವೈಷ್ಣವರ ಪ್ರಬಂಧಗಳಲ್ಲಿ ಹಾಗೂ ಮಣಿಮೇಖಲೈ ನಂತ ಭವ್ಯ ಕಾವ್ಯಗಳೂ ತತ್ವಶಾಸ್ತ್ರಕ್ಕೆ ಸಂಬಂಧಿಸಿದ ವಿಷಯಗಳನ್ನು ಒಳಗೊಂಡಿವೆ ಕ್ರಿ ಶ ದ ಪ್ರಾರಂಭದ ಪೂರ್ವ ಕರಾವಳಿಯ ಕೃಷ್ಣಾಜಿಲ್ಲೆಯ ಚೀನ ಗ್ರಾಮದ ಶಾಸನದಲ್ಲೂ ನಮೋ ಬಗವತೆ ವಾಸುದೇವಾಯ ಎಂಬ ಉಲ್ಲೇಖದಲ್ಲಿ ವಾಸುದೇವನನ್ನು ಭಗವಂತನೆಂದೇ ಉಲ್ಲೇಖಿಸಿದೆ ಕೆಲವು ಗುಪ್ತ ರಾಜರೂ ಭಾಗವತ ಸಂಪ್ರದಾಯಸ್ಥರಾಗಿದ್ದ ಉಲ್ಲೇಖಗಳಿವೆ

ಮೊಹೆಂಜೊದಾರೋ ಮತ್ತು ಹರಪ್ಪ ಅವಶೇಷಗಳಲ್ಲೂ ಸಿಂಧೂ ನದಿಯ ಬಯಲಿನ ನಾಗರೀಕತೆಯಲ್ಲೂ ಪ್ರಾಚೀನ ವ್ಯವಹಾರ ನೀತಿಯ ಲ್ಲಿ ಭಾರತೀಯ ತತ್ವ ಶಾಸ್ತ್ರದ ಪದ್ಧತಿಯ ವಿಕಾಸವನು ಗುರುತಿಸಲಾಗಿದೆ

ಬಾದಾಮಿಯ ಚಾಲುಕ್ಯರ ವಂಶ ವರ್ಣನೆಯಲ್ಲಿ ಬಗವನ್ನಾರಾಯಣ ಪ್ರಸಾದ ಸಮಾಸಾದಿತ ಭಗವನಾರಾಯಣ ಪ್ರಸಾದದಿಂದ ಶ್ರೇಷ್ಠವಾದ ಬಾಗವತ ಧರ್ಮವನ್ನು ಆಚರಿಸುತ್ತಿದ್ದ ವಿಷ್ಣು ಭಕ್ತರೇ ಭಾಗವತರೆಂಬ ಅಂಶ ಸ್ಪಷ್ಟವಾಗುತ್ತದೆ

ಪಾಂಡುರಂಗ ವಿಷ್ಣುವಿನ ಅವತಾರವೆಂಬ ನಂಬಿಕೆಯೇ ಪ್ರಾಯಶ ವೈಷ್ಣವ ಪಂಥಾನುಯಾಯಿಗಳಿಗೆಲ್ಲ ಪಂಡರಾಪುರದ ವಿಠಲ ಅಚ್ಚುಮೆಚ್ಚಿನ ಆರಾಧ್ಯ ದೈವವಾಗಲು ಕಾರಣವಾಗಿರಬೇಕು ವಿಷ್ಣುವಿನ ಅಪಭ್ರಂಶ ರೂಪವೇ ವಿಠಲನಾಗಿರುವುದರಿಂದಲೂ ದಾಸರುಗಳೆಲ್ಲ ವಿಠಲನನ್ನೇ ಹಾಡಿ ಹೊಗಳಿದ್ದಾರೆ ಉಪನಿಷತ್ತುಗಳೇ ಭಾರತೀಯ ತತ್ವ ಚಿಂತನೆಗೆ ಮೂಲ ಪ್ರೇರಣೆಯಾಗಿರುವಂತೆ ದಾಸರ ಕೃತಿಗಳ ಸೃಷ್ಟಿಗೆ ವಿಠಲ ಸ್ಫೂರ್ತಿದಾಯಕನಾಗಿದ್ದಾನೆ

ಅದ್ವೈತ ಮತದಿಂದ ವಿಷ್ಣುವಿನ ಉಪಾಸನೆಗೆ ಭಂಗ ಒದಗುವುದರಿಂದ ಭಾಗವತವನ್ನು ಶುದ್ಧ ದ್ವೈತವಾಗಿಸುವುದೂ ಅನಿವಾರ್ಯವಾಯಿತು ತತ್ವ ಒಂತನೆಯನ್ನು ಒಳಗೊಂಡಿರುವ ವೇದ ಮಂತ್ರಗಳಲ್ಲಿ ಕಂಡುಬರುವ ಬಹುದೇವತೆಗಳನ್ನು ಒಂದೇ ತತ್ವಕ್ಕೆ ಇಳಿಸುವ ಪ್ರವೃತ್ತಿಯು ಉಪನಿಷತ್ತುಗಳಲ್ಲಿ ಕಂಡು ಬರುವ ಹಾಗೆ ಶ್ರೀ ಮಧ್ವಾಚಾರ್ಯರು ದ್ವೈತ ಮತ ತತ್ವಗಳಲ್ಲೇ ಸಕಲ ವೇದ ಉಪನಿಷತ್ತು ಭಾಗವತಾದಿ ಗ್ರಂಥಗಳ ಸಾರವನ್ನು ಅಳವಡಿಸಿದ್ದು ಈ ಸೋಜಿಗದ ಸಂಗತಿ

ಆತ್ಮನೇ ಬ್ರಹ್ಮ ಎಂಬ ತತ್ವವನ್ನು ಉಪನಿಷತ್ತುಗಳು ಸಾರಿದವು ಜಗತ್ತಿನ ಮೂಲ ಮತ್ತು ಆತ್ಮದ ಅನ್ವೇಷಣೆಯು ಅದ್ವೈತ ತತ್ವವೇ ದ್ವೈತ ಪ್ರಪಂಚವಾಗಿ ಕಾಣುತ್ತಿದೆಯೆಂಬ ಸತ್ಯ ಉಪನಿಷದ್ ಉಪಾಸಕನಿಗೆ ತಿಳಿಯಿತು ಇಂದ್ರಿಯ ಗೋಚರವಾದ ಈ ವಿಶ್ವ ವಿಷಯಗಳ ಹಿಂದೆ ಗೂಢವಾದ ತತ್ವವಿದೆ ಎಂಬುದನ್ನು

ಅಜಾತಶತ್ರುವು ಪ್ರತಿಯೊಂದು ಉದಾಹರಣೆಯಲ್ಲಿಯೂ ತೋರಿಸಿಕೊಡುತ್ತಾನೆ ಇವು ತತ್ವದ ಅಧಿದೈವರೂಪಗಳು ಅನಂತರ ತತ್ವದ ಆಧ್ಯಾತ್ಮ ರೂಪಗಳಾದ ವಾಯು ಪ್ರತಿಧ್ವನಿ ಶರೀರ ಮತ್ತು ಕಣ್ಣು ಇವುಗಳ ವಿಷಯದಲ್ಲಿ ಚರ್ಚೆಯು ಮುಂದುವರಿಯುತ್ತದೆ

ಈ ವೇದ ಪ್ರತಿಪಾದಿತ ಪ್ರಕೃತ್ಯತಿಗಮ ಸಿದ್ಧಾಂತ ಉಪನಿಷತ್ತುಗಳ ಅತೀಂದ್ರಿಯ ತತ್ವ ಸಿದ್ಧಾಂತಗಳೊಂದಕ್ಕೂ ಬಾಧಕ ಬಾರದಂತೆ ಎಲ್ಲ ಸಿದ್ಧಾಂತಗಳ ಸಾರವನ್ನೂ ಅಡಗಿಸಿಕೊಂಡೇ ಪ್ರಚಲಿತವಿದ್ದ ಆಸಾಂಪ್ರದಾಯಿಕ ದರ್ಶನದ ಬದಲಿಗೆ ಸ್ಥಾಪಿಸಿದ ಹೊಸ ಸಾಂಪ್ರದಾಯಿಕ ಸಿದ್ಧಾಂತವೂ ಗೋಚರಿಸುವಂತೆ ಮಾಡಿದ್ದೇ ದಾಸರ ದಾಸಸಾಹಿತ್ಯದ ವೈಶಿಷ್ಟ್ಯ

ದಾಸಕೂಟದ ಪ್ರಸಿದ್ಧಿಗೆ ಹೆಚ್ಚು ಕಾರಣರಾದ ಪುರಂದರದಾಸರು ವಿಠಲನನ್ನು ಅಧಿದೇವತೆಯಾಗಿ ಸ್ವೀಕರಿಸಿದಂದಿನಿಂದ ದಾಸಪರಂಪರೆಯಲ್ಲ ವಿಠಲನ ಭಕ್ತರ – ವಿಷ್ಣುಭಕ್ತಿ ಕರ್ನಾಟಕ ಆಂಧ್ರಗಳಲ್ಲಿ ಬೆಳೆಯುತೊಡಗಿತು

ತತ್ವ ವಿಚಾರದಲ್ಲಿ ಕ್ರಾಂತಿಯನ್ನುಂಟು ಮಾಡುವ ವಾದವು ಉದಯಿಸಿದಾಗ ಅವುಗಳ ಯುಕ್ತಾಯುಕ್ತತೆಯ ವಿಚಾರವು ಹೊಸ ಹುರುಪಿನಿಂದ ನಡೆಯುವುದು ಕ್ರಿ ಶ 12ನೇ ಶತಮಾನದಿಂದ 14ನೇ ಶತಮಾನದ ಕಾಲವೆಂದರೆ ಕರ್ನಾಟಕದಲ್ಲಿ ಜಗತ್ತಿನಲ್ಲಿ ಅತ್ಯದ್ಭುತ ತತ್ವವೇತ್ತರುಗಳ ಉನ್ನತ ವಿಚಾರಗಳ ತಾಕಲಾಟದ ಕಾಲವಾಗಿತ್ತು ಈ ಸಂದರ್ಭದಲ್ಲಿಯೇ ಬಂದ ಶ್ರೀ ಮಧ್ವಾಚಾರ್ಯರು ತತ್ವ ವಿವೇಚನೆಗೂ ಭಕ್ತಿಮಾರ್ಗಕ್ಕೂ ಹೃದಯಂಗಮವಾಗಿ ತಳಕು ಹಾಕಿ ಉಪದೇಶ ಮಾಡಿದವರೆಂದರೆ ದ್ವೈತ ಸಿದ್ಧಾಂತದ ಪ್ರವರ್ತಕಾಚಾರ್ಯರು ಎಂದು ಹೇಳಬಹುದು ಎಂದಿರುವುದು ಸಾರ್ವಕಾಲಿಕ ಸತ್ಯ ಅಲ್ಲಿಂದೀಚೆಗೆ ತತ್ವಶಾಸ್ತ್ರಕ್ಕೆ ಒಂದು ಹೊಸ ತಿರುವೇ ಉಂಟಾಯಿತೆಂದು ಹೇಳಬಹುದು

ವೇದದ ಕರ್ಮಸಿದ್ಧಾಂತ ಉಪನಿಷತ್ತಿನ ಆತ್ಮಸಿದ್ಧಾಂತಗಳೇ ಜ್ಞಾನಮಾರ್ಗದ ಉಪದೇಶದ ತಿರುಳಾಗಿದೆ ಮಹಾಭಾರತವೂ ಉಪನಿಷತ್ತಿನ ಅದ್ವೈತವನ್ನೇ ಬೋಧಿಸಿದರೂ ಅದೇ ಮಹಾಕಾವ್ಯದ ಕೃಷ್ಣನೇ ಮುಂದೆ ದ್ವೈತ ಪಂಥೀಯರ ಆರಾಧ್ಯದೈವವಾಗಿದ್ದಾನೆ ದೇವರು ಮತ್ತು ಪ್ರಪಂಚವೆಂಬ ದ್ವೈತ ಭಾವದ ಬೀಜ ಬಿದ್ದು ಸಸಿಹುಟ್ಟಿ ವೃಕ್ಷವಾಗಲು ಹಲವಾರು ವರ್ಷಗಳೇ ಬೇಕಾಯಿತು

ವೇದ ಮತ್ತು ಬ್ರಾಹ್ಮಣಗಳು ಆರಾಧಿಸುವ ಅನೇಕ ದೇವತೆಗಳು ಅವರನ್ನು ಕುರಿತು ಮಾಡುವ ಯಜ್ಞ ಯಾಗಾದಿಗಳು ಮತ್ತು ಉಪನಿಷತ್ತಿನ ಏಕದೇವತಾ ಭಾವನೆಯ ಜಿಜ್ಞಾಸುಗಳನ್ನು ಕಾಡತೊಡಗಿರಬೇಕು ಸಾಂಖ್ಯದ ಪ್ರಕೃತಿ ಪುರುಷಾತ್ಮಕ ದ್ವೈತ ಸಿದ್ಧಾಂತದ ಹುಟ್ಟಿಗೂ ಕಾರಣವಾಯಿತು ಉಪಲಬ್ಧವಾದ ಗ್ರಂಥ

ಗಳಿಂದ ಐತಿಹಾಸಿಕವ ಗಿ ತಿಳಿದು ತತ್ವಶಾಸ್ತ್ರದ ಬೆಳವಣಿಗೆಯನ್ನು ಆ ಮೆಟ್ಟಿಲುಗಳಲ್ಲಿ ವಿಂಗಡಿಸಿ ತೋರಿಸುವುದು ತತ್ವವೇತ್ತಗಳ ಮುಖ್ಯ ಕರ್ತವ್ಯವಾಗಿದೆ ಎಂದಿರುವ ವಚಾತಿನೂ ವಚಾತಿನ ರೂಪದಲ್ಲಿಂ ೀ ಇರುವುದಂ ಶೋಚನಿ ಯ

ಜ್ಞಾನಕಾಂಡ ವಿವೃತವಾದ ಉಪನಿಷತ್ತು ಬ್ರಹ್ಮವಿದ್ಯೆಯಂನು ಬೋಧಿಸಲೆಂದೇ ರಚನೆಯಾಗಿದೆ ಬ್ರಹ್ಮವಿದ್ಯೆಯಂ ಬ್ರಹ್ಮ ಸಾಕ್ಷಾತ್ಕಾರವನಂ ಂಟು ಮಾಡಿ ಸಂಸಾರ ಸಂಬಂಧವಾದ ರಾಗದ್ವೇಷಗಳನ್ನು ಹೋಗಲಾಡಿಸುವ ತಂತ್ರವನ್ನು ದಾಸರು ತಮ್ಮ ಕೀರ್ತನ ಸ ಳಾದಿ ಉಗಾಭೋಗಗಳಲ್ಲ ಹೇಳಿದ್ದಾರೆ

ಅದ್ವೈತಾತ್ಮಕವೇ ಬ್ರಹ್ಮವಿದ್ಯೆ ಆತ್ಮ ತತ್ವ ಅಮೂರ್ತ ಇದು ಇಂದ್ರಿಯ ಗಳಿಗೆ ಕಾಣ ಗುವುದಿಲ್ಲ ಅಹಂಬ್ರಹ್ಮ ಮಾನಸ ಪ್ರತ್ಯಕ್ಷವಾಗಬೇಕಾದರೆ ಮುಂಡಕ ದಲ್ಲಿ ಹೇಳಿರುವಂತೆ ಆತ್ಮ ಸ ಕ್ಷಾತ್ಕಾರವಾದೊಡನೆಯೇ ಹೃದಯ ಗ್ರಂಥಿ ನಾಶ ವಾಗಿ ಎಲ್ಲಾ ಸಂಶಯಗಳೂ ದೂರವಾಗಿ ಅವನ ಎಲ್ಲಾ ಕರ್ಮಗಳೂ ನಷ್ಟವಾಗು ತ್ತವೆ ಈ ಆತ್ಮ ಜ್ಞಾನದ ಅವಶ್ಯಕತೆಯೇನು? ಎಂಬ ಪ್ರಶ್ನೆಗೆ ಆತ್ಮಜ್ಞಾನಿಗೆ ಈ ಲೋಕದಲ್ಲಿಯೂ ಯಾವ ಸಂಖ ದುಃಖಗಳೂ ಇರುವುದಿಲ್ಲ ಹೊಂದಬೇಕಾದ ಆತ್ಮ ತತ್ವವನು ಹೊಂದಿದ ಮೇಲೆ ಅಂತಃಕರಣ ನಿಯಮಿತವಾದುದರಿಂದ ಯಾವ ವಿಷಯ ಪ್ರತ್ಯಕ್ಷವೂ ಇಲ್ಲದಿರುವುದರಿಂದ ಸಕಲ ಕಾಮನೆಗಳೂ ಲಯವಾಗುತ್ತವೆ ಎಲ್ಲಾ ಕಾಮನೆಯನೂ ಒಳಗೊಂಡ ಆತ್ಮ ಕಾಮನೆಯನ್ನು ಪಡೆದ ಮೇಲೆ ಕ್ಷುದ್ರ ಕಾಮ ನೆಗಳೂ ನಷ್ಟವಾಗುತ್ತವೆ ಎಂದು ಹೇಳುವ ಕಠೋಪನಿಷತ್ತಿನ ತತ್ವವನ್ನು ವಿವೇಚಿಸಿದ ಶ್ರೀ ಮಧ್ವಾಚಾರ್ಯರು ಈ ಎಲ ಕ್ರಿಯೆಗೂ ಆ ಶ್ರೀ ಹರಿಯೇ ಕಾರಣ ಎಂದು ಸಾರಿದರು

ಬ್ರಹ್ಮಚರ್ಯಾಶ್ರಮದಿಂದಲೇ ವೇದ ವೇದಾಂಗಗಳನ್ನೆಲ್ಲ ಅಧ್ಯಯನಮಾಡಿ ಅನ್ಯಮತಗಳ ಸಿದ್ಧಾಂತಗಳನ್ನೂ ಅಭ್ಯಾಸ ಮಾಡಿದರ ಶ್ರೀ ಅಚ್ಯುತ ಪ್ರೇಕ್ಷಾ ಚಾರ್ಯರಿಂದ ಸನ್ಯಾಸವನು ಸ್ವೀಕರಿಸಿದ ಆಚಾರ್ಯರು ಸಕಲ ಜಗತ್ತಿನ ಚರಾಚರ ವಸ್ತುಗಳ ಹಿಂದೆಯೇ ಒಂದು ಪ್ರೇರಣ ಶಕ್ತಿ ಇದೆ ಅದೇ ಶ್ರೀಹರಿಯ ಸರ್ವೋತ್ತ ಮತ್ವ ಎಂಬ ತತ್ವವಾದವನ್ನು ಜಗತ್ತಿಗೆ ಉಪದೇಶಿಸಿದರು

ವೈದಿಕ ತತ್ವವಾದದ ಸೋಹಂ ಅನ್ನು ಶ್ರೀ ಆಚಾರ್ಯರು ಪುನರುಜ್ಜೀವನ ಗೊಳಿಸಿ ದಾಸೋಹಂ ಆಗಿ ಪರಿವರ್ತಿಸಿದರ ದ್ವಾದಶ ಸ್ತೋತ್ರದ ಮೂಲಕ ದಾಸಕೂಟಕ್ಕೂ ಪ್ರೇರಕ ಶಕ್ತಿಯಾದರು

ಆತ್ಮ ಸಾಕ್ಷಾತ್ಕಾರವಾದವನಿಗೆ ದ್ಯೂತಾದಿ ಕ್ರೀಡೆ ಸಂಧ್ಯಾವಂದನ ಅಗ್ನಿ ಹೋತ್ರಾದಿ ಕ್ರಿಯೆಯೂ ಆತ್ಮನಲ್ಲಿಯೇ ಇಂಥವನು ಲೌಕಿಕ ವೈದಿಕಾದಿ ಯಾವ ಕರ್ಮಗಳನ್ನು ಮಾಡಬೇಕ ಗಿಲ್ಲ ಈ ಆತ್ಮಸಾಕ್ಷಾತ್ಕಾರಕ್ಕೆ ಜಾತಿ ಮತ ಭೇದವಿಲ್ಲ

ಶ್ರೀ ಮಧ್ವಾಚಾರ್ಯರು ವ ತ್ತು ಅವರ ನಂತರದ ವ್ಯಾಸ ಕೂಟದ ಆಚಾರ ರಂಗ ಳೆಲ್ಲ ಈ ತತ್ವವನು ಅರಿತಿದ್ದರಿಂದಲೇ ಪುರಂದರದಾಸರು ಮತ್ತು ಕನಕದಾಸರುಗಳಿಗೆ ಅನ್ಯಜಾತಿಯವರಾದರೂ ದಾಸ ದೀಕ್ಷೆಯನು ಕೊಟ್ಟಿದ್ದು

ಬ್ರಾಹ್ಮಣಗಳಿಗೂ ಉಪನಿಷತ್ತುಗಳಿಗೂ ಸಾಧ್ಯಸಾಧನ ಸಂಬಂಧವಿದೆ ಒಂದ ಕರ್ಮ ಕಾಂಡ ಮತ್ತೊಂದು ಜ್ಞಾನಕಾಂಡ ಬ್ರಾಹ್ಮಣಗಳು ಅಂತ ಕರಣಶುದ್ಧಿಯನು ಪಡೆಯುವ ಇಚ್ಛೆಯನ್ನು ಹುಟ್ಟಿಸಿದರೆ ಉಪನಿಷತ್ತು ಆತ್ಮತತ್ವಜ್ಞಾನವನ್ನು ಪ್ರತಿಪಾದಿಸುತ್ತವೆ

ವೇದಾಂತದಲ್ಲಿ ಸಿದ್ಧ ಬ್ರಹ್ಮ ತತ್ವವೇ ಪ್ರತಿಪಾದ್ಯ ಯಾವ ಪುರುಷನು ಶರೀರ ಶಬ್ದಾರ್ಥವನ್ನು ತಿಳಿದು ಉಪಾಸನೆ ಮಾಡುತ್ತಾನೋ ಆಗ ಅವನನ್ನು ದ್ವೇಷಿಸುವ ಶತ್ರುಗಳು ವಿಕೀರ್ಣ ಅಂದರೆ ವಿನಾಶಹೊಂದುತ್ತಾರೆ ಹೇಗೋ ಉಪಾಯಾಂತರ ದಿಂದ ಶಿಥಿಲನಾಗಿದ್ದರೂ ಲೋಕ ತಿರಸ್ಕೃತನಾಗುತ್ತಾನೆ ಎನ್ನುವ ಐತರೇಯೋಪ ನಿಷತ್ತಿನ ಮಂತ್ರವನ ನಂಸರಿಸಿಯೂ ದಾಸರು ಕೀರ್ತನೆಗಳನ್ನು ತಮ್ಮ ಹೆಸರಿನೊಂದಿಗೆ ಸೇರಿಸಿಕೊಂಡು ಯಥೇಚ್ಛವಾಗಿ ಪದ ಬಂಧಗಳನು ರಚಿಸಿದ್ದಾರೆ

ಅಧ್ವರಗಳೆಲ್ಲ ಛಂದೋ ರೂಪವಾದ ಸ್ತುತಿವಾಕ್ಯಗಳಿಂದ ಅವನ ಮಹಿಮೆಯನ್ನು ಪ್ರಶಂಸಿಸುತ್ತಾರೆ ಇತ್ಯಾದಿಯಾಗಿ ಸಂಪೂರ್ಣವೆಂಬ ವಿಶೇಷಣದಿಂದ ಪರ ಮಾತ್ಮನ ಸ್ತುತಿ ಇದೆ ಎಂಬ ಅಧ್ಯಾಯ 7 ಖಂಡ 4 ನಿರುಕ್ತದಲ್ಲಿ ಹೇಳಿದೆ ಈ ಸ್ತುತಿ ವಾಕ್ಯಗಳ ಸ್ಫೂರ್ತಿಯಿಂದಲೇ ದಾಸರುಗಳು ತಾವು ದಾಸದೀಕ್ಷೆ ಪಡೆದ ಗುರು ಆರಾಧ್ಯದೈವ ಇತ್ಯಾದಿಗಳ ಅಂಕಿತಗಳನ್ನು ರಚಿಸಿದ್ದಾರೆ

ಅನೇಕ ಶತಮಾನಗಳ ಕಾಲದಿಂದ ಬೆಳೆದು ಬಂದ ತಾತ್ವಿಕವಾದ ಅನ್ವೇಷಣ ವನ್ನು ಸುಲಭವಾಗಿ ವಿವರಿಸುವುದು ಸಾಧ್ಯವಿಲ್ಲ ಅದರ ಲಕ್ಷಣವು ಹೀಗೆಯೇ ಎಂದು ನಿಷ್ಕೃಷ್ಟವಾಗಿ ಹೇಳಲೂ ಸಾಧ್ಯವಿಲ್ಲ ಋಕ್ಸಂಹಿತೆಯ ವಾಕ್ಯಗಳಲ್ಲಿ ಬಹು ದೇವತಾ ತತ್ವವು ಪ್ರತಿಪಾದಿತವಾಗುವುದು ಮೊದಲನೆಯ ಮತ್ತು ಮುಖ್ಯ ಅಂಶವಾಗಿದೆ ಕೆಲವು ಮಂತ್ರಗಳಲ್ಲಿ ಏಕ ದೇವತಾ ತತ್ವವು ಪ್ರತಿಪಾದಿತವಾಗಿರುವುದೂ ಅದ್ವೈತವಾದಕ್ಕೆ ತಳಹದಿಯಾದ ಈ ಪ್ರತಿಪಾದನೆಯು ಋಕ್ಸಂಹಿತೆಯಲ್ಲಿಯೂ ಕೆಲವೆಡೆಗಳಲ್ಲಿ ಪ್ರಧಾನವಾದ ಅಂಶವಾಗಿರುವುದೂ ಸಹ ತತ್ವಾನ್ವೇಷಿಗಳಿಗೆ ಸೋಜಿಗವನು ಉಂಟುಮಾಡುವುದಾಗಿದೆ ಋಕ್ಸಂಹಿತೆಯ ವಾಕ್ಯಗಳಿಂದ ಸೂಚಿತ ವಾಗುವ ತತ್ವಭಾವನೆಯ ಶ್ರೇಣಿಯಲ್ಲಿ ಮುಖ್ಯವಾದ ಮೂರು ಹಂತಗಳನ್ನು ನೋಡಬಹುದು

ವೇದ ವೇದಾಂಗಗಳನ್ನು ಅರಗಿಸಿಕೊಂಡ ಶ್ರೀ ಮಧ್ವಾಚಾರ್ಯರೇನೊ ದ್ವೈತ ವೇದಾಂತ ಗ್ರಂಥಗಳನ್ನು ರಚಿಸಿದರು ಆದರ ಆ ಗ್ರಂಥಗಳು ಯಥಾರ್ಥವಾಗ ಬೇಕು? ಈ ಗ್ರಂಥಗಳನ್ನು ಓದಿ ಅರ್ಥ ಮಾಡಿಕೊಂಡ ಆಚಾರ್ಯರುಗಳು ಅರ್ಥ

ಸ್ವತಂತ್ರ ಗ್ರಂಥಗಳನು ರಚಿಸುತ ಬಂದರು ಹೀಗೆ ಬರೆದ ಟೀಕಾಚಾರ್ಯರುಗಳಲ್ಲಿ ಪ್ರಸಿದ್ಧರಾದ ಶ್ರೀಜಯತೀರ್ಥರು ಬರೆದ ಟೀಕೆಗಳಿಂದಲೇ ದ್ವೈತ ಮತ ಸಿದ್ಧಾಂತಗಳು ವ್ಯಾಸಕೂಟ ದಾಸ ಕೂಟಗಳಿಗೆ ಅರ್ಥವಾಗುವಂತಾಯಿತು ಪ್ರಾಯಶ ಜಯತೀರ್ಥರು ಆಚಾರ್ಯರ ಗ್ರಂಥಗಳಿಗೆ ಭಾಷ್ಯ ಬರೆಯದೇ ಹೋಗಿದ್ದರೆ ವ್ಯಾಸ–ದಾಸ ಕೂಟಗಳಿಗೆ ಆಧ್ಯಾತ್ಮ ಜ್ಞಾನ ನಿಧಿಯ ದೃಷ್ಟಿಯಿಂದ ಅಪಾರ ನಷ್ಟವಾಗುತ್ತಿತ್ತು ವ ತ್ತು ಪುರಂದರದಾಸಾದಿ ದಾಸರ ಗಳು ಅದ್ವೈತ ಸಿದ್ಧಾಂತ ಪ್ರಮೇಯಗಳನ್ನು ಆಡ್ಕಗನ ಡದ ಆಡು ನ ಡಿಯಲ್ಲಿ ಕೃತಿಗಳನ್ನು ರಚಿಸಿ ಜನಸಾಮಾನ್ಯರಿಗೆ ವೇದಾರ್ಥವನು ಣಟುಮಾಡುವುದು ಆಗ ತ್ತಿತ್ತೋ ಇಲ್ಲವೋ?

ವಿಜಯನಗರ ಸಾಮ್ರಾಜ್ಯ ನಾಶವಾದ ಮೇಲೆ ವ್ಯಾಸ–ದಾಸ ಕೂಟಗಳಿಗೂ ದಿಕ್ಕು ತಪ್ಪಿದಂತಾಯಿತು ತತ್ವ ವಿವೇಚನೆಗೆ ಸೂಕ್ತ ಸ್ಥಳ ಸಿಗದಾಯಿತು

ಅರವಿಂದರೆ ಹೇಳುವ ಹಾಗೆ ಬಂಧ್ದನ ಮಹೋನ್ನತವಾದ ಕಟ್ಟು ನಿಟ್ಟಾದ ಕ್ಲಿಷ್ಟವಾದ ಬೋಧನೆ ಅಷ್ಟೊಂದು ತ್ವರಿತವಾಗಿ ಜನಮನವನ್ನು ಸೆರೆ ಹಿಡಿಯಲು ಬೇರೆಲಿ ತಾನೇ ಸಾಧ್ಯವಾಗುತ್ತಿತ್ತು? ತುಕಾರಾಮನ ರಾಮ ಪ್ರಸಾದನ ಸಿಖ ಗುರುಗಳ ಹಾಡುಗಳು ಉಜ್ವಲ ಭಕ್ತಿಪೂರ್ಣವಷ್ಟೇ ಅಲ್ಲದೆ ಈ ಗಹನವಾದ ಆಧ್ಯಾತ್ಮಿಕ ಚಿಂತನ ಪೂರ್ಣವಾಗಿಯೂ ಇರುವ ತಮಿಳು ಆಳ್ವಾರುಗಳ ಗೀತೆಗಳೂ ಅಷ್ಟೊಂದು ತ್ವರಿತವಾಗಿ ಜನಮನದಲ್ಲಿ ಮಾರ್ದನಿಕೊಟ್ಟು ಜನಪ್ರಿಯ ಧಾರ್ಮಿಕ ಸಾಹಿತ್ಯವಾಗಿ ರೂಪುಗೊಳ್ಳಲು ಬೇರೆಲ್ಲಿ ತಾನೆ ಸಾಧ್ಯವಾಗುತ್ತಿತ್ತು ? ಆಧ್ಯಾತ್ಮಿಕ ಪ್ರವೃತ್ತಿಯ ಈ ಪ್ರಬಲ ವ್ಯಾಪನೆ ಇಲ್ಲವೆ ನಿಕಟ ಸಾಮೀಪ್ಯವೂ ಮಹೋನ್ನತ ಸತ್ಯ ತತ್ವಗಳ ಕಡೆಗೆ ತಿರುಗಲು ಒಂದು ಸಮಗ್ರ ಜನಮನದ ಈ ಸಿದ್ಧತೆ ಯುಗಯುಗಾಂತರಗಳಿಂದ ನಡೆದು ಬಂದ ವಾಸ್ತವವಾದ ಹಾಗೂ ಇಂದಿಗೂ ಜೀವಂತವಾಗಿರುವ ಮತ್ತು ಪರಮ ಆಧ್ಯಾತ್ಮಿಕವಾಗಿರುವ ಸಂಸ್ಕೃತಿಯನ್ನು ಮುಸಲ್ಮಾನರ ವಿಧ್ವಂಸಕೃತ್ಯ ದಾಳಿಗಳಿಂದ ರಕ್ಷಿಸಿ ಮತ್ತೊಮ್ಮೆ ಚಿಗುರೊಡೆಯುವಂತೆ ಮಾಡಿದ ಪ್ರಯತ್ನ ವ್ಯಾಸ–ದಾಸ ಕೂಟಗಳ ಮಹೋನ್ನತ ಕಾರ್ಯ

ದಾಸ ಸಾಹಿತ್ಯದ ಶರೀರವಷ್ಟೇ ದ್ವೈತ ಮುದ್ರೆಯ ಮತೀಯ ಹೊದಿಕೆಯಲ್ಲಿದ್ದರೂ ಆತ್ಮ ಮಾತ್ರ ವಿಶ್ವಮಾನವನದು ದಾಸ ಸಾಹಿತ್ಯದ ಹೂರ್ಣ ಜಾಗತಿಕ ನೀತಿಗೆ ಸಂಬಂಧಿಸಿದ್ದು ದರ್ಶನ ಮನ್ವಂತರಗಳ ಭಾರತಿಯ ಧರ್ಮ ನೆಲಗಟ್ಟಿನ ಮೇಲೇ ನಿಂತಿದೆ

ವೇದ ಬ್ರಾಹ್ಮಣ ಆರಣ್ಯಕ ಮತ್ತು ಉಪನಿಷತ್ತು ಶ್ರುತಿ ಪುರಾಣ ಭಾಗವತ ರಾಮಾಯಣ ಭಾರತ ಹರಿವಂಶ ಗ್ರಂಥಗಳನ್ನು ಓದದಿದ್ದರೂ ನಷ್ಟವಿಲ್ಲ ದಾಸರ ಪದಗಳನ್ನು ಓದಿದರೆ ಸಾಕು ಈ ಎಲ್ಲ ಗ್ರಂಥಗಳನ್ನು ಓದಿದ ಜ್ಞಾನ

ವುಂಟಾಗುತ್ತದೆ ತತ್ವವಾದದಲ್ಲಿ ವ್ಯಾಸಕೂಟ ರಚಿಸಿದ್ದನ್ನೇ ದಾಸ ಕೂಟ ಕನ್ನಡ ದಲ್ಲಿ ರಚಿಸಿ ವ ಜ್ಞಾಯ ಭಂಡಾರದ ವಹೌಲ್ಯವನ್ನು ಹೆಚ್ಚಿಸಿರುವುದೇ ದಾಸ ಸಾಹಿತ್ಯದ ಹೆಚ್ಚಳ

ವಿವೇಕಾನಂದರ ಹೇಳುವ ಹಾಗೆ ಅನಂತ ವೈವಿಧ್ಯವೇ ಉತ್ಕೃಷ್ಟ ಧಾರ್ಮಿಕ ಸಂಸ್ಕೃತಿಯ ವಹುಖವನು ನಾವು ಕಾಣುವುದು ದಾಸ ಸಾಹಿತ್ಯ ಒಂದರಲ್ಲೇ ಜಾಗತಿಕ ವೇದಿಕೆಯಲ್ಲೂ ಅಷ್ಟೇ ವೈವಿಧ್ಯದಲ್ಲಿ ಭಾರತ ಒಂದೇ ಆ ಸ್ಥಾನವನು ತುಂಬಬಲ್ಲದು

ಅರವಿಂದರ ದೃಷ್ಟಿಯಲ್ಲಿ ಯೂರೋಪಿನ ದಾರ್ಮಿಕ ಚರಿತ್ರೆಗಾದರೋ ಅವು ಸುಧೀರ್ಘವಾದ ಭೀಕರವ ದ ರಕ್ತಕಲುಷಿತವಾದ ಕಳಂಕವನ್ನು ಪಿಂತ್ತಿವೆ ಭಾರತದಲ್ಲಿ ಇನ ಷ್ಟು ಉಚ್ಚವಾದ ಇನ ಷ್ಟು ವಿಶುದ್ಧವಾದ ಆಧ್ಯಾತ್ಮಿಕ ಬುದ್ಧಿಯ ಉದ್ಧಾರಕ ದ ಷ್ಟಿ ಸದಾ ಕ್ರೀಡಿಸುತ್ತಿದ್ದು ಜನವಿನದ ಮೇಲೆ ಪರಿ ಣಾಮ ಬೀರಿತ್ತು ಜನರ ಮನಸ್ಸು ಅವರ ಸ್ವಭಾವ ಬೌದ್ಧಿಕಾಕರ್ಷಣೆಗಳು ಅಪಾರ ವೈವಿಧ್ಯ ಪೂರ್ಣವಾಗಿರುವ ಕಾರಣ ಅನಂತ ಚೇತನ ಸಾಕ್ಷಾತ್ಕಾರಯತ ದಲ್ಲಿ ಪ್ರತಿ ಯೊಬ್ಬ ವ್ಯಕ್ತಿಗೆ ಪೂರ್ಣ ವಿಚಾರ ಸ್ವಾತಂತ್ರ್ಯವೂ ಪೂರ್ಣ ಪ್ರಜ್ಞಾ ಸ್ವಾತಂತ್ರ್ಯವೂ ಆವಶ್ಯವೆಂದು ಭಾರತೀಯ ಧರ್ಮವು ಸದಾ ಭಾವಿಸಿರುವುದರಿಂದಲೇ ಇಷ್ಟೇ ಜೈನ ಬೌದ್ಧ ಶೈವ ಮತಗಳ ನಡುವುವ ಊ ನಡೆದ ತತ್ವ ವಿವೇಚನೆ ವಂತ್ತು ಮುಸಲ್ಮಾನ ಪೋರ್ಚುಗೀಸ ಕ್ರೈಸ್ತ ಧರ್ಮಗಳ ಆಡಳಿತಕ್ಕೊಳಗಾಗಿ ಆದ ರಾಜನೀತಿಯ ಸಾಂಕರ್ಯಗಳ ವ ದ್ಯಯೂ ಹಿಂದೂ ಧರ್ಮದಂತ ಓಂದು ಸ ಕೀರ್ಣ ಧರ್ಮ ಶತ ಶತಮಾನಗಳಿಂದಲೂ ಉಳಿದು ಬಂದೀರಾದರೆ ಶ್ರೀ ಮಧ್ವಾಚಾರ್ಯರಂಥ ಮತಾ ಚಾರ್ಯರ ಗಳ ಅವತಾರವೇ ಕಾರಣ ವ್ಯಾಸದಾಸಕೂಟಗಳ ಕ್ರಾಂತಿಗಳೂ ಕಾರಣ ವಾಗಿವೆ

ಜೀವಂತವಾದ ವ ಸ್ತು ಪ್ರಗತಿಶೀಲವಾ ದ ಪರಂಪರೆಯೇ ಭಾರತದ ಆಂತರಿಕ ಧಾರ್ಮಿಕ ಗುಣದ ವಿಶಿಷ್ಟ ಪ್ರವೃತ್ತಿ ಅತ್ಯಂತ ಪ್ರಾಚೀನ ಕಾಲದಿಂದ ವೈಷ್ಣವ ಧರ್ಮವಿಕಾಸ ಅದರ ಸಂತ ಪುರುಷ ಪರಂಪರೆ ಹಾಗೂ ಗುರುಪರಂಪರೆ ರಾಮಾನುಜ ಮಧ್ವ ಚೈತನ್ಯ —ವಲ್ಲಭಾಚಾರ್ಯರ ಮೂಲಕ ಅದಕ್ಕೆ ದೊರೆತ ಗಮನಾರ್ಹ ವಿಕಾಸ ಎನು ವ ಅರವಿಂದರ ಮಾತಿನ ಸತ್ಯವೇ ದಾಸ ಸಾಹಿತ್ಯ ತತ್ವ ಚಿಂದ ಯ ಮೂಲ ದ್ರವ್ಯ

ಶ್ರೀ ಪಾದರಾಯರ
ಇತ್ತ ಜಾರಿಂತೆಂದು ಹತ್ತಿರಕೆ ಕರೆದೊಂದು
ತುತ್ತು ಕೊಡ ವರ ಕ ಜೆಸೊ ಕೃಷ್ಣ

ಇದು ಮಾನ ಕುಲದ ದ್ದಕ್ಕೂ ಬೆಳೆದು ಬಂದಿರುವ ಬಡತನದ ಹಸಿವೆಯ ಹಾಡು ಯಾವ ಜನಾಂಗದಲ್ಲಿಲ್ಲ ? ಯಾವ ಧರ್ಮದಲ್ಲಿಲ್ಲ ಯಾವ ದೇಶದಲ್ಲಿಲ್ಲ ? ಯಾವ ಕಾಲದಲ್ಲಿಲ್ಲಾ ?

ಸಂಸಾರ ಬದುಕನು ಪರಿಪೂರ್ಣಕ್ಕೊಯ್ಯುವ ನೈಜ ಬಂಗ ಆದರೆ ಅದೇ ಸಂಸಾರ ಉರಿ ಪರ್ವತ ಗರಳವ ಡು ಶೂಲ ಕೊರಳಿಗೆ ಹಾಕಿದ ಹಗ್ಗ ಗರಗಸ ಗಳೆಲ್ಲವೂ ಆಗಿ ಹಿಂಸಿಸ ವ ಅನುಭವ ಪ್ರತಿಯೊಬ್ಬ ಸಂಸಾರಿಗೂ ಇದೆ ಆದರೆ ಈ ನರಕದಿಂದ ಪಾರಾಗುವ ದಾರಿಕಾಣ ಅದನೇ ದಾಸರು ತೋರಿಸುತ್ತಾರೆ ಬೇಸ ರದ ಸಂಸಾರದ ಬಗ್ಗೆ ವಿರಕ್ತಿ ಹುಟ್ಟ ಬೆ ಕು ಆ ವಿರಕ್ತಿ ಹೆಚ್ಚಿ

ಭಕ್ತಿ ಹುಟ್ಟಬೇಕಾದರೆ
ಸಾರ ಮಧ್ವಶಾಸ್ತ್ರ ಓದದೆ ಎಂದೂ
ತಾರತಮ್ಯಜ್ಞಾನ ಪುಟ್ಟದಂತೆ

ಇಲ್ಲಿ ಮ ಧ್ವ ಶಬ್ದವೊಂದನು ಬೇರ್ಪಡಿಸಿದರೆ ಉಳಿದದ್ದೆಲ್ಲ ವಿಶ್ವಧರ್ಮಕ್ಕೆ ಸಂಬಂಧಿಸಿದ ಸಾರ್ವಕಾಲಿಕ ಸತ್ಯ ವಿರಕ್ತಿ ಹೆಚ್ಚಿ ಭಕ್ತಿ ಹುಟ್ಟಿದಾಗ ಶ್ರೀ ಹರಿಯ ಬಿಂಬವನು ಹೃದಯ ದಲ್ಲಿ ಧರಿಸಿದಾಗ ಹೇಸಿಗೆ ಹುಟ್ಟಿಸಿದ್ದ ಅದೇ ಸಂಸಾರ ಈ ಜಗತ್ತು ಎಲ್ಲವೂ ಕಾಣ ವ ದೃಷ್ಟಿ ಯೇ ಬೇರೆಯಾಗುತ್ತದೆ

ಭೂಮಿಯನು ಚಿನ್ನದ ತೊಟ್ಟಿಲ ಮಾಡಿ
ಸೋಮ ಸೂರ್ಯರೆಂಬ ಕಲಶ ಹೂಡಿ
ನೇಮದಿ ವೇದಗಳ ಸರಪಣಿ ಮಾಡಿ
ಆ ಮಹಾಕಾಶಕ್ಕೆ ಕೊಂಡಿಗಳ ಹಾಕಿ
ಸರಸಿಜೋದ್ಭವ ಸರಸ್ವತಿ ಭಾರತಿ

ಯನ್ನಾಗಿ ಕಾಣುವ ದೃಷ್ಟಿ ಬರುತ್ತದೆ ಯಾವ ಜಗತ್ತಿನಿಂದ ಬೇಸರ ಹುಟ್ಟಿತ್ತೋ ಈಗ ದಾಸರಿಗೆ ಅದೇ ಜಗತ್ತು ಚೆ ತನವಾಗಿ ಕಾಣಿಸಿ ಸಂತೋಷ ಹೃದಯ ತುಂಬಿ ಬರುತ್ತದೆ

ಇಂದ್ರಿಯಗಳನ್ನು ನಿಗ್ರಹಿಸುವುದು ಮನಸ್ಸಿನ ಚಾಂಚಲ್ಯವನ್ನು ಸ್ಥಿಮಿತದ ಲ್ಲಿಟ್ಟು ಕೊಂಡಾಗ ಮಾತ್ರ ಸಾಧ್ಯ ವ್ಯಾಸ ದಾಸ ಕೂಟಗಳನ್ನೆಲ್ಲ ಈ ಪ್ರಶ್ನೆ ಬಹಳ ವಾಗಿ ಕಾಡಿದೆ

ಶ್ರೀ ವ್ಯಾಸರಾಯರು ಒಂದು ಕಡೆ
ಶೃತಿ ತತ್ವಶಾಸ್ತ್ರಗಳಂತಿದ್ದು ಇದ್ದು ದು
ರ್ಮತಿ ದುಷ್ಟಚರಿತೆಗೆ ಒಳೆಯುತಿದೆ ಎನ ।

ಎಂದು ಪ್ರಾಮಾಣಿಕವಾಗಿ ಹೇಳುವ ಮಾತಿನಲ್ಲಿ ಅಡಗಿರುವ ಸತ್ಯವನು ಕಾಣಬೇಕು

ಮತ್ತೊಂದು ಕಡೆ ಶ್ರೀ ಪುರಂದರದಾಸರು

ಯಾರು ಬರುವರು ನಿನ್ನ ಹಿಂದೆ ಇತ್ತೆ
ಬಾರೆಂದು ಯಮಭಟರು ಎಳೆದೊಯ್ಯುವಾಗ

ದಾಸರ ಕೃತಿಗಳಲ್ಲಿರುವ ಚಿರಂತನತೆ ಸಾರ್ವಕಾಲಿಕ ಮೌಲ್ಯಗಳಾಗಿವೆ ಈ ಸತ್ಯಗಳು ವಿಶ್ವ ಮಾನವ-ವಿಶ್ವಧರ್ಮಕ್ಕೆ ಸಂಬಂಧಿಸಿದ್ದು ಇದನು ಯಾವ ಭಾಷೆಯಲ್ಲಿ ಯಾರು ಬೆ ಕಾದರೂ ಹಾಡಬಹುದು ಇನ್ನೊಂದು ಕಡೆ

ಈ ದೇಹ ಬಿಟ್ಟ ಬಳಿಕ ನಿನ್ನವರು
ಬೀದಿಯಲಿ ಇಂತು ಬೊಬ್ಬೆ ಹಾಕುವರು
ಬಾದೆಗೋಸ್ಕರ ಬೆಂಕಿಹಾಕಿ ಸುಡುವರು
ಬೂದಿಯ ನೀರೊಳು ಬೆರಸಿ ಚೆಲ್ಲುವರು

ಜೀವನ ನಶ್ವರವೆಂದು ತಿಳಿದೂ ಆ ಜೀವನವನ್ನೇಕೆ ಅಪ್ಪಬೇಕೆಂಬ ವ್ಯಾಮೋಹ ಪ್ರತಿಯೊಬ್ಬ ಜೀವಿಯನ್ನೂ ಕಾಡುತ್ತದೆ? ಈ ಪ್ರಶ್ನೆ ಮಾನವ ಜನಾಂಗವನ್ನೇ ಕಾಡುತ್ತಿದೆ ಇದರಿಂದ ವಿಮುಕ್ತನಾಗಬೇಕಾದರೆ ಭಕ್ತಿ ಪರವಶನಾಗಬೇಕು ಜಗತ್ತಿನ ಯಾವ ಸಂತನೂ ಮಾಡದ ತತ್ತ್ವ ವಿವೇಚನೆಯನ್ನೂ ವ್ಯಾಸ-ದಾಸ ಕೂಟದ ವೈಷ್ಣವ ಪಂಥ ಮಾಡಿದೆ

ಸಂಸಾರಿಗೆ ಮಾತ್ರ ವಿರಕ್ತಿ ಹುಟ್ಟಬಲ್ಲದು ಸಾಂಸಾರಿಕ ದುಃಖ ದರ್ಶನವೇ ಬೇಡವೆಂದು ದಾಸರು ಹೇಳುವುದಿಲ್ಲ ಆದರೆ ಕಡೆಯತನಕ ಅದರಲ್ಲೇ ಬಿದ್ದು ವೃಥಾ ಜೀವನ ಹಾಳುಗೆಡವ ಬೇಡ ಸಂಸಾರವೊಂದು ದುಃಖಸಾಗರ ಹೆದರಿ ದೂರನಿಲ್ಲಬೇಡ ಧೈರ್ಯವಾಗಿ ಒಳ ಬಿಟ್ಟು ಧುಮುಕು ಈಜಾಡು ಈಜಿ ದಡ ಸೇರು ಭವದಿಂದ ಪಾರಾಗುವ ದಡ ಸೇರಿದಾಗ ಅವನ ಸ್ಮರಣೆ ಮಾಡು

ಮನವ ನಿಲಿಸುವುದು ಬಹು ಕಷ್ಟ ಹರಿದಾಡುವಂಥ ಆ ನಿಗ್ರಹ ಶಕ್ತಿಯನು ನೀನು ಗಳಿಸಿದೆಯಾದರೆ ನಿಜಕ್ಕೂ ನೀನು ಧನ್ಯ

ಶ್ರೀವಿಜಯದಾಸರು ಜನನಿ ಜನಕರ ಋಣವು ಫಲ್ಗುಣೀ ನದಿಯಲ್ಲಿ ಗಂಗೆಯಲ್ಲಿ ವಿಷ್ಣುಪಾದದ ಮೇಲೆ ಪಿಂಡವನ್ನು ಭಕ್ತಿಯಿಂದ ಸಮರ್ಪಿಸಿದರೆ ಹೋಗುವುದು ಋಷಿಗಳ ಋಣವು ಬ್ರಹ್ಮಚರ್ಯದಿಂದ ಸ್ವಾಧ್ಯಾಯ ಪ್ರವಚನದಿಂದ ಪರಿಹಾರವಾಗುವುದು ದೇವತಾ ಋಣವು ಯಜ್ಞಯಾಗಾದಿಗಳಿಂದ ಹಾರಿ ಹೋಗುವುದು ಅನುಬಂಧಿಗಳ ಋಣವು ಗೃಹಸ್ಥಾಶ್ರಮದಲ್ಲಿ ಅತಿಥಿ ಭೋಜನದಿಂದ ನಾಶವಾಗುವುದು ಆದರೆ ಪರವಿತ್ತವನ್ನು ಸ್ವೀಕರಿಸಿದರೆ ಋಣವು ಯಾತರಿಂದಲೂ

ಪರಿಹಾರವಾಗುವುದಿಲ್ಲ ಆದ್ದರಿಂದ ಪರಾನ ದಂತೆ ಪರದ್ರವ್ಯವನೂ ಸ್ವೀಕರಿಸ ಬಾರದು ಎನು ತ ಮಾತು ಪರೋಕ್ಷವಾಗಿ ಇತರರ ಮುಂದೆ ಕೈಚಾಚಬೇಡ ನಿನ ಅನ್ನ ನು ನೀನೇ ಸಂಪಾದಿಸಿಕೊ ಎಂಬ ಅರ್ಥವನು ಕೊಡುವುದಿಲ್ಲವೇ ? ಮುಂದೆ ಒಂದು ಸುಳಾದಿಯಲ್ಲಿ ಅವರೇ ಕಂಡ ಕಂಡಲ್ಲಿ ತಿರುಗಿ ಋಣಾಪ್ತನ ತೊಂಡ ನಾಗಿ ಇದ್ದು ದುಡಿಯಬೇಕು ಎಂದಿದ್ದಾರೆ

ಮತ್ತೊಂದು ಕಡೆ ಬಂದು ಮಾತ್ರವೋ ಸುಖವು ದುಃಖ ಪರ್ವತದಷ್ಟು ಸಂದೇಹವಿಲ್ಲವೆಂದು ಶಾಸ್ತ್ರ ಸಿದ್ಧ ಎಂದೆಂದು ನರಿಯುರಸ ವಿಜಯ ವಿಠಲನಂಘ್ರಿ ಕುಂದದೆ ಹೃದಯದೊಳು ನೆನೆಕಂಡ್ಯ ಮನವೆ ಎಂದು ಸುಖವನು ತೋರಿಸಿದ್ದಾರೆ ಎಲ್ಲ ತತ್ವಾಭಿಮಾನಿ ದೇವತೆಗಳು ಶ್ರೀ ಹರಿಯ ಆಜ್ಞೆಯಿಂದ ತಮ್ಮ ವ್ಯಾಪಾರಗ ಳನ್ನು ಮಾಡುತ್ತಿರುವುದರಿಂದ ಆ ಆ ದೇವತಾಂತರ್ಯಾಮಿಯಾದ ಪರಮಾತ್ಮನನು ಶರಣು ಹೋಗಬೇಕು

ಏನಾದರೇನು ಮೋಕ್ಷವಿಲ್ಲ ಜ್ಞಾನವಿದೆ ವೇದ ಓದಿದರೇನು ಶಾಸ್ತ್ರ ನೋಡಿದ ರೇನು ಕಾದಿ ಕಾದಾಡಿ ಗೆದ್ದರೇನು ಜ್ಞಾನವಿಲ್ಲದೆ ನ್ನುವ ವಿಜಯದಾಸರು ಜ್ಞಾನದ ಪ್ರಾಮ ಮುಖ್ಯತೆಯನು ಎತ್ತಿ ಹಿಡಿದಿದ್ದಾರೆ ಮಾನವ ಪರತಂತ್ರ ಯಾವುದೂ ಅವನ ಆಧೀನವಲ್ಲ ಸರ್ವ ವ್ಯಾಪ್ತನಾದ ಶ್ರೀ ಹರಿಯೇ ಚೇತನಾಚೇತನಗಳಿಗೆ ಕಾರಣನು ಎಂದು ಹೇಳುವ ಸುಳಾದಿಯೊಂದರಲ್ಲಿ

ಹರಿಯೇ ನನ್ನಾಧೀನ ಜ್ಞಾನೇಂದ್ರಿಯಗಳು
ಹರಿಯೇ ನಿನ್ನಾಧೀನ ಕರ್ಮೇಂದ್ರಿಯಗಳು
ಹರಿಯೇ ನಿನಾ ಧಿ ನ ಪಂಚಭೂತಾತ್ಮಗಳು
ಹರಿಯೇ ನಿನಾ ಧೀನ ಮನಚಿತ್ತಗಳು
ಹರಿಯೇ ನಿನ್ನಾಧೀನ ಸಕಲ ಚೇತನವು
ದೈವವೇ ಕುಣಿಸಿದರೆ ಕುಣಿವೆ ನಗಿಸಿದರೆ ನಗುವೆ
ಮಣಿಸಿದರೆ ಮಣಿವೆ ಅಳಿಸಿದರೆ ಅಳುವೆ

ಎನ್ನುವ ಸರ್ವ ಶರಣ್ಯ ಭಾವದಲ್ಲಿರುವ ಭೂತದಯ ಯಾರಿಗೆ ಬೇಡ ?

ನಂತರ ಬರುವ ಶ್ರೀ ಗೋಪಾಲದಾಸರು ಪ್ರೌಢವಾದ ಶೈಲಿಯಲ್ಲಿ ಅನೇಕ ತತ್ತ್ವೋಪದೇಶಪದಗಳನ್ನು ರಚಿಸಿದ್ದಾರೆ ಭಾರತ ಭ ಗವತ ರಾಮಾಯಣ ಆದಿ ಗ್ರಂಥಗಳೇ ಅಲ್ಲದೆ ಉಪನಿಷದ್ ಪ್ರಮೇಯಗಳೂ ಇವರಿಗೆ ಆಖ್ಯಾಯಿಕೆಗಳಾಗಿವೆ ಈ ಬಿಡಾರದಲ್ಲಿ ಎಷ್ಟು ಕಾಲ ಬಾಳಲಿ ? ಈ ನಶ್ವರವಾದ ಬಿಡಾರವು ಬೀಳತೊಡಗಿದೆ ಕಟ್ಟುಗಳು ಸಡಿಲಿದವು ಒಳ ಮೊಳೆ ಕದಲಿದವು ನೆಟ್ಟ ಕಂಬಗಳು ಕುಸಿದವು

ತೊಟ್ಟ ಪಡಸಾಲೆಗಳು ಬಟ್ಟ ಬಯಲಾದವು ಕಟ್ಟಿಹೊದ್ದಿಸಲಾರೆನೊ ಸ್ವಾಮಿಕಾ ಎಂದು ಈ ಸಂಸಾರದಿಂದ ಮುಕ್ತನನಾಗಿ ಮಾಡಲು ಪ್ರಾರ್ಥಿಸಿದ್ದಾರೆ

> ವಾಗಾದಿ ದಶ ಇಂದ್ರಿಯಗಳು ದುಷ್ಟಭೋಗಗಳಿಗೊಳವಾದವೋ ।
> ಸಾಗಿ ಬಾರವೋ ಹಿಂದಕೆ—ಸರ್ವ ಶ ಯೋಗಿಗಳ ಒಡೆಯ ಕಾಯಂ ।
> ಆವಾವ ಬಗೆಯಿಂದಲಿ ನೋಡಿದರೂ ನಾವೊಂದು ಸುಖ ಕಾಣೆನೊ ।
> ಹಾವಿನ ಹೆಡೆಯಂ ನೆಳಲ ಸೇರಿದ ಅಬುವಿನ ತೆರನಾದೆನೊ |
> ಹಾವಿನ ಹೆಡೆಯಂ ನೆರಳಲ್ಲಿ ಬದ ಕುವ ಇಲಿಯಂತೆ ಈ ಸಂಸಾರ
> ಯಾವ ನೆಚ್ಚು ?

ತಾತ್ವಿಕ ಗ ಣಕ್ಕೆ ಬದ್ಧನಾದ ಆಧ್ಯಾತ್ಮಿಕ ರಾಜಸಗುಣದಿಂದ ಆಧಿದೈವಿಕ ಮತ್ತು ತಾಮಸ ಗುಣಯಾದರೆ ಆಧಿಭೌತಿಕಕ್ಕೆ ಒಳಗಾಗದೆ ವಿಧಿಯಿಲ್ಲ ವಿರಕ್ತಿ ಭಾವನೆ ಯೊಂದರಲ್ಲೇ ಹರಿ ಸರ್ವೋತ್ತಮತ್ವ ಅಡಗಿರುವುದು ಹಾಗಾಗಿ ವಿರಕ್ತಿ ಭಕ್ತಿ ಹುಟ್ಟಿದರೇನೆ ಸಂಸಾರದಿಂದ ಮುಕ್ತನಾಗುವುದು ಅರಿತವರಿಗತಿ ಸುಲಭ ಹರಿಯ ಪೂಜೆ । ಅರಿಯದವ ನಿರ್ಭಾಗ್ಯತರ ಲೋಕದೊಳಗೆ ಎನ್ನುತ್ತಾರೆ

ಹೀಗೆ ಹರಿದಾಸರು ವೇದ ಪ್ರಮಾಣ ಪ್ರಮಿತ ಪ್ರಮೇಯಗಳನ್ನು ಸಾಮಾನ್ಯರು ತಮ್ಮ ಅನುಭವಕ್ಕೆ ತಂದ ಕೊಳ್ಳುವಂತೆ ಮಾಡಿದ ಕೆಲಸ ಊಹಿಸಲ ಸಾಧ್ಯ ದಾಸರು ತಮ್ಮ ಉಪದೇಶಗಳಿಂದ ಜನರ ಹೃದಯಗಳನ್ನು ಒಂದು ಹೊಸ ಚೈತನ್ಯ ಕೊಟ್ಟು ತುಂಬಿದರು ಪರಾಪರ ತತ್ವಗಳನ್ನು ಸ ಲಭವಾಗಿ ಅರ್ಥವಾಗುವ ದೃಷ್ಟಾಂತಗಳಿಂದ ಮನ ಒಲಿಸಿದರು ತತ್ವಜ್ಞಾನ—ಉಪಾಸನೆಗಳ ಹೃದಯ ಂಗಮ ವಾದ ಂಗಮವನ್ನುಂಟು ಮಾಡಿದರು

ಧರ್ಮ ಮತ್ತು ತತ್ತ್ವಜ್ಞಾನ ವಿಸಂಗತವೆಂದು ತಿಳಿದಿದ್ದ ಒಮರಿಗೆ ಇವೆರಡೂ ಒಂದೇ ಎಂದು ತೋರಿಸಿಕೊಟ್ಟ ಶ್ರೇಯಸ್ಸು ಹರಿದಾಸರದು

## ಗ್ರಂಥಋಣ

1 The Foundations of Indian Culture and the Rennaissance in India by Aurobindo
2 ತತ್ವಸಾಸ್ತ್ರ ಪ್ರಾಚ್ಯ ಮತ ಪಾಶ್ಚಾತ್ಯ—ಡಾ॥ ಎಸ ರಾಧಾಕೃಷ ನ
3 ಹರಿದಾಸ ಾಹಿತ್ಯ—ಕನ ಡ ಸಾಹಿತ್ಯ ಪರಿಷತ ಪತ್ರಿ ಕೆ ಸಂಪುಟ 33–34

# ಹರಿದಾಸರು ಮತ್ತು ತೆಲುಗು ಕೀರ್ತನಕಾರರು

ಡಾ॥ ಆರ್‌ವಿಯೆಸ್

ಗಾನರಸ ಶಿಶುವನು ಪಶುವನು ಫಣಿಯನ್ನು ಕೂಡಿ ರಂಜಿಸುವಂತಹದು ಹೃದಯಾನಂದದಾಯಕವಾದ ಭಾರತೀಯ ಸಂಗೀತದ ಮೂಲಸತ್ತ್ವವನು ಕರ್ನಾಟಕ ಸಂಗೀತ ಬಹಳ ಮಟ್ಟಿಗೆ ಉಳಿಸಿಕೊಂಡಿದೆ ಸುಮಧುರವಾದ ಕರ್ನಾಟಕ ಸಂಗೀತ ವಾಹಿನಿಗೆ ಕನ್ನಡ ನಾಡಿನ ಹರಿದಾಸರು ಹಾಗೂ ತೆಲಗು ಕೀರ್ತನಕಾರರು ಸಲ್ಲಿಸಿದ ಸೇವೆ ಚಿರಸ್ಮರಣೀಯವಾದುದು ಸಾವಿರಾರು ವರ್ಷಗಳಿಂದ ಭಾರತೀಯ ಜನಮನಗಳನ್ನು ರಂಜಿಸುತ್ತಿರುವ ಮಾರ್ಗ ಮತ್ತು ದೇಶಿ ಸಂಗೀತ ಸಂಪ್ರದಾಯಗಳನು ಅರಗಿಸಿಕೊಂಡು ಪ್ರಾದೇಶಿಕ ಅಭಿರುಚಿಗಳಿಗೆ ಮನ್ನಣೆಕೊಟ್ಟು ಕರ್ನಾಟಕ ಆಂಧ್ರ ಕೀರ್ತನ ಸಾಹಿತ್ಯ ವಿಕಾಸಗೊಂಡಿದೆ

ಕಲಾ ಪ್ರಪಂಚಕ್ಕೆ ಭಾಷೆಯ ಎಲ್ಲೆಗಳಿಲ್ಲ ಹೃದಯವನ್ನು ಆರ್ದ್ರಗೊಳಿಸಬಲ್ಲ ಸಂಗೀತ ಭಾಷಾಪ್ರಾಂತ್ಯಗಳಿಗೆ ಅತೀತವಾಗಿ ಆನಂದವನ್ನು ನೀಡುತ್ತದೆ ಕೀರ್ತನ ಸಾಹಿತ್ಯ ಭಾಷೆ ಸಂಪ್ರದಾಯ ಮತ್ತು ಧರ್ಮಗಳಿಂದ ಬಂಧಿತವಾದುದು ಆದರೂ ಅದರ ಸಂಗೀತ ಮಾಧ್ಯಮ ಎಲ್ಲ ರಸಿಕರಿಗೂ ಸಂತೋಷವನ್ನೊದಗಿಸಿತು ಭಾಷಾ ಸಾಹಿತ್ಯಗಳು ಬೇರೆಯಾದರೂ ಕರ್ನಾಟಕ ಸಂಗೀತ ಇಡೀ ದಕ್ಷಿಣ ಭಾರತದ ಪ್ರತಿನಿಧಿಯಾಯಿತು ಕೆಲವು ಪ್ರಾದೇಶಿಕ ಭೇದಗಳಿದ್ದರೂ ಹಲವು ಸಾಮಾನ್ಯ ಗುಣಗಳಿಂದ ಕೂಡಿರುವುದರಿಂದ ಕರ್ನಾಟಕ ಸಂಗೀತ ಒಂದು ವಿಶಿಷ್ಟ ಸಂಪ್ರದಾಯವಾಗಿ ಗುರುತಿಸಲ್ಪಟ್ಟಿತು

ಕನ್ನಡ ಹರಿದಾಸರು ಮತ್ತು ತೆಲುಗು ಕೀರ್ತನಕಾರರು ಭವ್ಯಪರಂಪರೆಯುಳ್ಳವರು ಕರ್ನಾಟಕ ಮತ್ತು ಆಂಧ್ರಪ್ರದೇಶಗಳು ಅನೇಕ ವಿಧವಾಗಿ ಆತ್ಮೀಯತೆ ಮತ್ತು ಬಾಂಧವ್ಯಗಳನು ಬೆಳೆಸಿಕೊಂಡು ಬಂದಿದೆ ಕೀರ್ತನಕಾರರ ವಿಷಯದಲ್ಲೂ ಈ ಬಾಂಧವ್ಯನು ಗುರುತಿಸಬಹುದು ವಾಗ್ಗೇಯಕಾರರು ಅನೇಕ ಪ್ರದೇಶಗಳನ್ನು ಸಂದರ್ಶಿಸುವ ಸಲ್ಲಕ್ಷಣವುಳ್ಳವರು ಈ ಕಾರಣದಿಂದ ಬೇರೆ ಬೇರೆ ಪ್ರದೇಶಗಳಿಗೆ ಸೇರಿದ ಕೀರ್ತನಕಾರರು ಪರಸ್ಪರ ಸಂಪರ್ಕವನ್ನು ಬೆಳಸಿಕೊಳ್ಳಲು ಸಾಧ್ಯವಾಯಿತು ಇತರರ ಹಿರಿಮೆಯನು ಪ್ರತಿಭೆಯನ್ನು ಸಹೃದಯದಿಂದ ಮೆಚ್ಚಿಕೊಳ್ಳುವ ಸುಸಂಸ್ಕೃತಜನ ಕಲಾನೈಪುಣ್ಯವನು ಪರಸ್ಪರ ವಿನಿಮಯ ಮಾಡಿಕೊಂಡರು ಅಸಹನೆ ಸ್ವಾರ್ಥಪರನಿಂದೆ ಮೂಲಭೂತಗುಣಗಳಿಗೆ ಬೆಳೆಯುತ್ತಿರುವ ಇಂದಿನ ನಾಗರಿಕರಿಗೆ ಕೆಲವು ತಲೆಮಾರುಗಳ ಹಿಂದಿನ ಮಹನೀಯಗುಣಗಳು ಅರ್ಥವಾಗುವು

ದಿಲ್ಲ ಹರಿದಾಸರು ಮತ್ತು ತೆಲುಗು ಕೀರ್ತನಕಾರರ ನಡುವಿನ ಕೊಳು ಕೊಡುಗೆಗಳ ಪರಿಶೀಲನೆ ಕರ್ಣಾಟಕಾಂಧ್ರ ಸಂಗೀತ ಸಾಹಿತ್ಯ ಪರಂಪರೆಯ ಮೇಲೆ ಬೆಳಕನ್ನು ಚೆಲ್ಲುತ್ತದೆ

೧೩-೧೪ ಶತಮಾನಗಳಲ್ಲಿ ಜೀವಿಸಿದ್ದ ನರಹರಿ ತೀರ್ಥರು ಕನ್ನಡ ಕೀರ್ತನ ಸಾಹಿತ್ಯದ ಆದ್ಯ ಕೃತಿಕಾರರೆನ್ನಲಾಗಿದೆ ೧೨-೧೩ ಶತಮಾನಗಳಿಗೆ ಸೇರಿದ ಕೃಷ್ಣಮಾಚಾರ್ಯ ತೆಲುಗಿನ ಮೊದಲ ವಾಗ್ಗೇಯಕಾರರು ಕನ್ನಡದಲ್ಲಿ ನರಹರಿ ತೀರ್ಥರಿಗೆ ಮೊದಲೇ ರಾಗಯುಕ್ತವಾಗಿ ಹಾಡತಕ್ಕ ವಚನಗಳು ರಗಳೆಗಳು ಹಾಡುಗಳು ಹೇರಳವಾಗಿದ್ದವು ತೆಲುಗಿನಲ್ಲೂ ಕೃಷ್ಣಮಾಚಾರ್ಯರಿಗೆ ಮೊದಲೇ ಪದ ಸಾಹಿತ್ಯ ಸಮೃದ್ಧವಾಗಿದ್ದುದಕ್ಕೆ ಗ್ರಂಥಸ್ಥ ಆಧಾರಗಳಿವೆ ಆದರೆ ಕನ್ನಡದಲ್ಲಿ ಪುರಂದರದಾಸರಂತೆ ತೆಲುಗಿನಲ್ಲಿ ವಿಸ್ತೃತವಾಗಿ ಕೃತಿರಚನೆಮಾಡಿ ಪಾರಿಭಾಷಿಕವಾಗಿ ಕೀರ್ತನ ಪ್ರಕಾರಕ್ಕೆ ಸ್ಥಿರತೆಯನ್ನೂ ಪುಷ್ಟಿಯನ್ನೂ ದೊರಕಿಸಿಕೊಟ್ಟ ಆಂಧ್ರ ವಾಗ್ಗೇಯಕಾರ ಅನ್ನಮಾಚಾರ್ಯನೇ (15ನೆಯ ಶತಮಾನ) ಕನ್ನಡ ಮತ್ತು ತೆಲುಗು ಕೀರ್ತನಕಾರರ ಪ್ರೇರಣೆಗಳನ್ನು ಪರಿಶೀಲಿಸುವಾಗ ಸಂಸ್ಕೃತ ಮೂಲಗಳನ್ನು ಅಲ್ಲಗಳೆಯುವಂತಿಲ್ಲ ಬಹು ಪುರಾತನ ಕಾಲದಿಂದ ಜನಪ್ರಿಯವಾಗಿರುವ ದೇಶಿ ರಾಗಗಳು ಸಂಸ್ಕೃತ ವಾಗ್ಗೇಯ ಸಂಪ್ರದಾಯದಿಂದ ಸಂಕ್ರಮಿಸಿದ ಲಕ್ಷಣಗಳು ನಮ್ಮ ವಾಗ್ಗೇಯಕಾರರ ಶಕ್ತಿ ಭಕ್ತಿಗಳು ಒಗ್ಗೂಡಿ ಕೀರ್ತನ ಸಾಹಿತ್ಯ ವಿಕಾಸಗೊಂಡಿದೆ ಕರ್ಣಾಟಕಾಂಧ್ರ ಕೀರ್ತಕಾರರ ರಚನೆಗಳನ್ನು ಪರಿಶೀಲಿಸುವಾಗ ಭಾರತೀಯ ಹಿನ್ನೆಲೆಯಲ್ಲಿ ಅವರಿಗೆ ಸಿಕ್ಕಿರಬಹುದಾದ ಪ್ರೇರಣೆಯನ್ನು ಸಂಕ್ಷಿಪ್ತವಾಗಿ ಪರಿಶೀಲಿಸಿದರೆ ತಪ್ಪೇನಿಲ್ಲ

## ಸಾಮಗಾನದಿಂದ ಗೀತಗೋವಿಂದದವರೆಗೆ

ವೇದಕಾಲದ ಸಾಮಗಾನ ದಾಖಲೆಯಾದ ಮೊದಲ ಸಂಗೀತಯುಗವೆನ್ನಬಹುದು ವೇದಕಾಲದ ಪ್ರಬಂಧಗಳು ಗಾಥಾ ಸಾಮ ಮುಂತಾದುವು ದೇಶಭಾಷೆಗಳಲ್ಲಿ ಇದ್ದುವೆಂದೂ ಕೆಲವರು ಊಹಿಸಿದ್ದಾರೆ ಅನಂತರ ಕಾಲದಲ್ಲಿ ದೇಶೀಯ ಸಂಗೀತವನ್ನು ಶಾಸ್ತ್ರಬದ್ಧವನ್ನಾಗಿ ಮಾಡಲು ಪ್ರಯತ್ನಗಳು ನಡೆದವು ಭರತ ಮುನಿಯಂತಹವರು ದೇಶೀಯ ರಾಗಗಳನ್ನು ಸ್ವರಬದ್ಧಮಾಡಿದ ಕಾಲವನ್ನು ಗಾಂಧರ್ವಯುಗವೆನ್ನಬಹುದು ರಾಮಾಯಣ ಮಹಾಭಾರತಾದಿ ಆಖ್ಯಾನಗಳು ರಚಿತವಾದ ಕಾಲದಲ್ಲಿ ಮಹಾಕಾವ್ಯವನ್ನು ವಾದ್ಯಗಳ ಸಹಾಯದಿಂದ ಗಾನಮಾಡುವ ಪದ್ಧತಿ ಇತ್ತು ಮಹಾಕಾವ್ಯಗಾನ ಮಾಡುವ ಕುಶೀಲವರಿದ್ದರು ದೇಶಿ ಸಂಪ್ರದಾಯದ ಸಂಗೀತ ರೀತಿಗಳನ್ನು ಲಕ್ಷಣಾನ್ವಿತವಾಗುವಂತೆ ಮಾಡಿ ದೇಶಿ ರಾಗ ಸ್ವರೂಪವನ್ನು ತಿಳಿಸಿದ ಮತಂಗನೆಂಬ ಮಹಾಶಯನ ಬೃಹದ್ದೇಶಿ ತುಂಬ ಉಪಯುಕ್ತಗ್ರಂಥ ಅವನ ಕಾಲದಲ್ಲೇ ದೇಶಭಾಷಾ ಪ್ರಬಂಧಗಳನ್ನು ಲಕ್ಷಣಗ್ರಂಥಗಳಲ್ಲಿ ಸೇರಿಸಿ ಧ್ರುವಾ

ಗಾನವೆಂಬ ಹೆಸರಿಡಲಾಯಿತು ಶಾರ್ಙ್ಗದೇವನ ಕಾಲಕ್ಕೆ ಏಲಾಪ್ರಬಂಧ ಕರಣ ಪ್ರಬಂಧ ವರ್ಣಪ್ರಬಂಧ ಆರ್ಯಾಪ್ರಬಂಧ ಮುಂತಾದ ಪ್ರಬಂಧ ರೀತಿಗಳಿಗೆ ಲಕ್ಷಣ ಏರ್ಪಟ್ಟಿತು

ಅಭಿನವಗುಪ್ತನು ತನ್ನ ಅಭಿನವ ಭಾರತಿಯಲ್ಲಿ ರಾಗ ಕಾವ್ಯಗಳೆಂಬ ಪ್ರಬಂಧಗಳನ್ನು ಕುರಿತು ಹೇಳಿದ್ದಾನೆ ಇದು ಗಮಕ ಕಲೆಯನ್ನು ಹೋಲುವಂತಹದು ಗೀತಗೋವಿಂದಯುಗದಲ್ಲಿ ಅನೇಕ ರಾಗಗಳನ್ನು ಬಳಸಿ ಭಕ್ತಿ ಶೃಂಗಾರಗಳಿಂದ ಕೂಡಿದ ವಸ್ತುವನ್ನು ಹಾಡುವ ಅಭ್ಯಾಸವಾಯಿತು ಜಯದೇವನ ಕಾಲದಲ್ಲೇ ಚಾಳುಕ್ಯ ಸೋಮೇಶ್ವರ ರಚಿಸಿದ ಅಭಿಲಷಿತಾರ್ಥ ಚಿಂತಾಮಣಿ ಸಂಗೀತ ರಸಿಕರಿಗೆ ದೊಡ್ಡ ಆಕರಗ್ರಂಥವಾಗಿದೆ

ಸಂಸ್ಕೃತದಲ್ಲಿ ಸಂಗೀತ ಸಂಪ್ರದಾಯಗಳನ್ನು ಕುರಿತು ಹೇಳಿದವರು ಯಾರೂ ದೇಶೀಯ ರೀತಿಗಳನ್ನು ತಿರಸ್ಕರಿಸಿದವರಲ್ಲ ದೇಶೀಯ ರಾಗಗಳನ್ನು ಕುರಿತು ಪುರಾತನ ವಾಗ್ಗೇಯಕಾರರು ಹೇಳಿದ ವಿಷಯಗಳಿಂದ ಕನ್ನಡ ತೆಲುಗು ಮತ್ತಿತರ ದೇಶ ಭಾಷೆಗಳಲ್ಲಿ ನೂರಾರು ವರ್ಷಗಳಿಂದ ಭವ್ಯ ಸಂಗೀತ ಸಂಪ್ರದಾಯ ವಿಕಾಸಗೊಂಡಿದೆ ಎಂದು ತಿಳಿದು ಬರುತ್ತದೆ

## ಕನ್ನಡ ಕೀರ್ತನಕಾರರಿಗೆ ಲಭಿಸಿದ ಪ್ರೇರಣೆ

ಕನ್ನಡದಲ್ಲಿ ಹರಿದಾಸರಿಗೆ ಮೊದಲೇ ಅನೇಕ ವಿಧವಾದ ಗೀತಗಳು ರಚಿತವಾದುವು ಕವಿರಾಜಮಾರ್ಗ ಪೂರ್ವ ಕಾಲದಲ್ಲೇ ಕನ್ನಡದಲ್ಲಿ ಹಾಡುಗಬ್ಬಗಳ ರಚನೆ ನಡೆಯಿತು ಬೆದಂಡೆಯ ಉಲ್ಲೇಖದಿಂದ ಶೃಂಗಾರಾದಿ ರಸಭಾವ ವ್ಯಕ್ತೀಕರಣಕ್ಕೆ ಗೀತಗಳನ್ನು ಬರೆಯುತ್ತಿದ್ದರೆಂದು ತಿಳಿದು ಬರುತ್ತದೆ ಹನ್ನೆರಡನೆಯ ಶತಮಾನದಲ್ಲಿ ಆಧ್ಯಾತ್ಮಿಕಾನುಭವದ ಅಭಿವ್ಯಕ್ತಿಗಾಗಿ ಹಾಡನ್ನು ಶಿವಶರಣರು ಬಳಸಿದರು ಶರಣರ ಅನುಭಾವ ಗೀತಾಂಜಲಿ ಕನ್ನಡ ಕೀರ್ತನ ಸಾಹಿತ್ಯಕ್ಕೆ ಬುನಾದಿ ಎಂಬುದೇನೋ ನಿಜ ಶರಣರ ಹಾಡುಗಳು ಪಲ್ಲವಿಯಿಂದ ಕೂಡಿದ್ದು ವಿವಿಧ ರಾಗಗಳಲ್ಲಿ ಹಾಡಲು ಅನುವಾಗಿವೆ ಸಕಳೇಶ ಮಾದರಸರ ತಂಗಾಳಿಗಲಿರು ಮರನೆ ಎನ್ನಂಗದೊಳಿರ್ಪ ಶಿವಲಿಂಗವ ಮರನೆ ಎಂಬ ಶಂಕರಾಭರಣರಾಗದ ಕೃತಿ ಗುಣದ ದೃಷ್ಟಿಯಿಂದಲೂ ಮಹತ್ತ್ವದ್ದೆನ್ನುವುದರಲ್ಲಿ ಸಂದೇಹವಿಲ್ಲ ಸುದೀರ್ಘ ಕೀರ್ತನ ಪರಂಪರೆಯ ಮೊಟ್ಟಮೊದಲನೆಯ ಕೃತಿ ಎಂಬ ಐತಿಹಾಸಿಕ ಮಹತ್ತ್ವ ಆ ಕೃತಿಗೆ ಸಲ್ಲುವುದು (ಎಚ್ ಎಸ್ ವೆಂಕಟೇಶಮೂರ್ತಿ 1975 4) ಎಂಬ ಅಭಿಪ್ರಾಯ ಗಮನಿಸತಕ್ಕದ್ದು ಬಸವೇಶ್ವರ ಅಲ್ಲಮಪ್ರಭು ಚೆನ್ನಬಸವೇಶ್ವರ ಸಿದ್ಧರಾಮ ಅಕ್ಕಮಹಾದೇವಿ ಮುಂತಾದವರು ಭಕ್ತಿಗೀತ ಸಂಪ್ರದಾಯವನ್ನು ಮುಂದುವರಿಸಿದರು ಹೀಗೆ ಕನ್ನಡ ಕೀರ್ತನ ಸಾಹಿತ್ಯ ಹನ್ನೆರಡನೆಯ ಶತಮಾನದಲ್ಲಿ ಪ್ರಾರಂಭವಾಯಿತೆಂದು ಹೇಳಬಹುದು

ಹರಿದಾಸರಿಗೆ ಶಿವಶರಣರಿಂದ ಸ್ಫೂರ್ತಿ ಸಿಕ್ಕಿದೆ ಎಂಬುದರಲ್ಲಿ ಸಂದೇಹವಿಲ್ಲ ಶರಣರ ಹಾಡುಗಳಿಗೆ ತಮಿಳು ನಯನ್ಮಾರರ ತೇವಾರಂ ಗೀತಗಳಿಂದ ಪ್ರೇರಣೆ ಸಿಕ್ಕಿರಬಹುದು ಹಾಗೆಯೇ ಹರಿದಾಸರ ಕೀರ್ತನೆಗಳಿಗೂ ಆಳ್ವಾರರ ಭಕ್ತಿಗೀತೆಗಳಿಂದಲೂ ಪ್ರೇರಣೆ ಸಿಕ್ಕಿರುವ ಸಾಧ್ಯತೆ ಇದೆ ಶ್ರೀಕೃಷ್ಣದೇವರಾಯ ವೈಷ್ಣವಧರ್ಮಾನುಯಾಯಿಯಾಗಿದ್ದನು ವೈಷ್ಣವ ಆಚಾರ್ಯರಾದ ವ್ಯಾಸರಾಯರು ರಾಜಗುರುಗಳಾಗಿದ್ದುದರಿಂದ ಭಾಗವತ ಸಂಪ್ರದಾಯದ ಕೀರ್ತನೆಗಳು ಹೊರಬರಲು ಸ್ಫೂರ್ತಿ ಸಿಕ್ಕಿರಬಹುದು ಮಧ್ವ ಸಂಪ್ರದಾಯದ ಕೀರ್ತನೆಗಳಿಗೆ ಮಧ್ವಾಚಾರ್ಯರ ದ್ವಾದಶಸ್ತೋತ್ರದ ಮೂಲಪ್ರೇರಣೆ ಇದು ಎಂದು ಅನೇಕ ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ ಭಕ್ತಿ ಮುಕ್ತಿಗಳ ಬಗೆಗೆ ಹೇಳಿದ್ದು ಮಾತ್ರವಲ್ಲದೆ ಸಮಾಜದ ಹಿತವನ್ನು ಮುಖ್ಯವಾದ ಗುರಿಯಾಗಿಟ್ಟುಕೊಂಡು ಕೀರ್ತನೆಗಳನ್ನು ಬರೆದ ಹರಿದಾಸರು ಭಾರತದ ಸಂಗೀತ ಸಾಹಿತ್ಯ ಕ್ಷೇತ್ರಗಳಲ್ಲಿ ವಿಶಿಷ್ಟ ವ್ಯಕ್ತಿಗಳಾಗಿ ಕಾಣಿಸುತ್ತಾರೆ

**ತೆಲುಗು ಕೀರ್ತನ ಸಾಹಿತ್ಯದ ಉಗಮ ಮತ್ತು ವಿಕಾಸ**

ಅನ್ನಮಾಚಾರ್ಯನ ವರೆಗಿನ ತೆಲುಗು ಕೀರ್ತನ ಸಾಹಿತ್ಯದ ಸ್ವರೂಪ ಸ್ವಭಾವಗಳನ್ನು ಅನಂತರದ ಕಾಲದ ಕೀರ್ತನಕಾರರನ್ನು ಅದು ಹೇಗೆ ರೂಪಿಸಿದೆ ಎಂಬುದನ್ನು ಇಲ್ಲಿ ಸಂಕ್ಷಿಪ್ತವಾಗಿ ಹೇಳಬಹುದು ತೆಲುಗಿನ ಆದಿಕವಿ ಎಂಬ ಬಿರುದನ್ನು ಪಡೆದಿರುವ ನನ್ನಯ (11 ನೆಯ ಶತಮಾನ) ನಿಗಿಂತ ಮೊದಲೇ ಅನಿಬದ್ಧರೀತಿಯ ದೇಶಿ ಕಾವ್ಯಪರಂಪರೆ ಇತ್ತೆಂದು ನಂಬಲಾಗಿದೆ ಹಾಡುಗಳಲ್ಲಿ ಬಳಕೆಯಾಗುವ ದ್ವಿಪದಿ ತರುವೋಜ ಮಧ್ಯಾಕ್ಕರ ರಗಳೆ ಮುಂತಾದ ಛಂದಸ್ಸುಗಳು ನನ್ನಯನಿಗಿಂತ ಮೊದಲೇ ಇದ್ದುದಕ್ಕೆ ಶಾಸನಸ್ಥ ಆಧಾರಗಳಿವೆ ನನ್ನೆಚೋಡ (12ನೆಯ ಶತಮಾನ) ಉಯ್ಯಾಲೆಯ ಹಾಡು ಗೌಡು ಗೀತಗಳು ಮುಂತಾದುವನ್ನು ಹೆಸರಿಸಿದ್ದಾನೆ ಪಾಲ್ಕುರಿಕೆ ಸೋಮನಾಥ (13 ನೆಯ ಶತಮಾನ) ಪರ್ವತ ಪದ ಆನಂದ ಪದ ಶಂಕರಪದ ನಿವಾಳಿಪದ ಬೆಳ್ದಿಂಗಳ ಪದ ಮುಂತಾದುವನ್ನು ಕುರಿತು ಹೇಳಿದ್ದಾನೆ

ತೆಲುಗಿನಲ್ಲಿ ಸಂಕೀರ್ತನ ಯುಗ ಕೃಷ್ಣಮಾಚಾರ್ಯನಿಂದ ಪ್ರಾರಂಭವಾಯಿತೆಂದು ಹೇಳಲಾಗಿದೆ ಕಾಕತೀಯ ಪ್ರತಾಪರುದ್ರನ ಕಾಲದವನೆಂದು ಕೆಲವರು ಅದಕ್ಕಿಂತ ಸ್ವಲ್ಪ ಹಿಂದೆ ಎಂದರೆ 12 ನೆಯ ಶತಮಾನದವನೆಂದು ಕೆಲವರು ಅಭಿಪ್ರಾಯಪಡುವ ಕೃಷ್ಣಮಾಚಾರ್ಯ ಲಕ್ಷಕ್ಕಿಂತ ಹೆಚ್ಚು ಸಂಕೀರ್ತನೆಗಳನ್ನು ರಚಿಸಿದನೆಂದು ಹೇಳಲಾಗಿದೆ ಈತ ಬರೆದ ವಚನಗಳು ಕನ್ನಡ ವಚನಗಳಂತೆಯೇ ರಾಗಯುಕ್ತವಾಗಿ ಹಾಡತಕ್ಕಂತಹವು ಇತ್ತೀಚೆಗೆ ಕೃಷ್ಣಮಾಚಾರ್ಯನ ರಾಮನ ಮಂಗಳ ನೃಸಿಂಹ ನಾಮಗಳ ಎಂಬ ರಚನೆಗಳನ್ನು ಪತ್ತೆ ಮಾಡಲಾಗಿದ ದೇವರ ನಾಮ ಎಂಬ ಹೆಸರಿಗೆ ಸಮೀಪವಾಗಿರುವ ಈ ರಚನೆಗಳು ಕನ್ನಡ ಕೃತಿಗಳಿಗೂ ಹಿಂದಿನವಾಗುತ್ತವೆ

ರಚನೆಗಳನ್ನು ತಾಳಕ್ಕೂ ಅಳವಡಿಸಬಹುದೆಂದು ಸಂಗೀತ ವಿದ್ವಾಂಸರು ಹೇಳುತ್ತಾರೆ ಅಹೋಬಲ ಮತ್ತು ಸಿಂಹಾಚಲ ಎಂಬ ಪುಣ್ಯ ಕ್ಷೇತ್ರಗಳ ದೇವಾಲಯಗಳಲ್ಲಿ 13–14 ಶತಮಾನಗಳ ಕಾಲದಲ್ಲಿ ಕೃಷ್ಣಮಾಚಾರ್ಯನ ದೇವರನಾಮಗಳನು ಹಾಡುತ್ತಿದ್ದರೆಂಬುದಕ್ಕೆ ಶಾಸನಾಧಾರವಿದೆ ಎಗಂಟಿ ಎಂಬವರು ಸಂವಾರು ಹದಿನೈದನೆಯ ಶತಮಾನದಲ್ಲಿ ಏಲ ಪದ ಮತ್ತು ವಚನ ಎಂಬ ಹೆಸರಿನಲ್ಲಿ ಹಾಡುಗಳನ್ನು ರಚಿಸಿದ್ದಾರೆ ಇವೆಲ್ಲ ಅನಂತರ ಕಾಲದ ಕೀರ್ತನಕಾರರಿಗೆ ಪ್ರೇರಣೆಯನ್ನು ನೀಡಿರಬಹುದು

## ಹರಿದಾಸರು–ತೆಲುಗು ಕೀರ್ತನಕಾರರು

ನರಹರಿತೀರ್ಥರಿಂದ ಪ್ರಾರಂಭವಾದ ಕನ್ನಡಕೀರ್ತಕಾರರ ಪರಂಪರೆ ತೆಲುಗು ಕೀರ್ತನಕಾರರ ಮೇಲೆ ಪ್ರಭಾವವನ್ನು ಬೀರಿದೆ ಹಾಗೆಯೇ ಅನ ಮಾಚಾರ್ಯರಿಂದ ತ್ಯಾಗರಾಜರವರೆಗಿನ ತೆಲುಗು ಸಂಗೀತಗಾರರ ಪ್ರಭಾವ ಕನ್ನಡಿಗರ ಮೇಲಾಗಿದೆ ಈ ಎರಡು ಪರಂಪರೆಗಳ ನಡುವಿನ ಹೋಲಿಕೆಗಳನು ವ್ಯತ್ಯಾಸಗಳನ್ನು ಆಳವಾಗಿ ಪರಿಶೀಲಿಸಬೇಕಾದ ಅವಶ್ಯಕತೆ ಇದೆ ಪ್ರಕೃತ ಪ್ರಬಂಧದಲ್ಲಿ ಕಾಲಾನುಕ್ರಮವಾಗಿ ಕನ್ನಡ ಮತ್ತು ತೆಲುಗು ಕೀರ್ತನಕಾರರ ಸ್ಥೂಲ ಪರಿಚಯವನ್ನು ಮಾತ್ರ ಕೊಡಲಾಗಿದೆ ಪರಸ್ಪರ ಪ್ರಭಾವಗಳನು ಸಂಗೀತಶಾಸ್ತ್ರ ಪರವಾಗಿ ಆಳವ ಗಿ ಪರಿಶೋಧಿಸಲು ಇದೊಂದು ಪೀಠಿಕೆಯಾಗುತ್ತದಷ್ಟೆ

ಆಂಧ್ರವಾಗ್ಗೇಯಕಾರರಲ್ಲಿ ಪದಕವಿತಾ ಪಿತಾಮಹ ನೆಂಬ ಬಿರುದು ತಾಳ್ಳಪಾಕ ಅನ ಮಾಚಾರ್ಯರಿಗೆ ಸಂದಿದೆ ಇವರು ಕನ ಡದ ಶ್ರೀಪಾದರಾಯ ಮತ್ತು ನಿಜಗುಣಶಿವಯೋಗಿಗಳಿಂದ ಪ್ರಭಾವಿತರಾಗಿರಬಹುದು ಆದ್ದರಿಂದ ಕರ್ನಾಟಕಾಂಧ್ರ ಕೀರ್ತನಕಾರರ ಪ್ರಭಾವ ಪರಂಪರೆ ಕನ ಡದಿಂದಲೇ ಪ್ರಾರಂಭವಾಗುತ್ತದನ ಬಹುದು

**ನರಹರಿತೀರ್ಥರು** ಹರಿದಾಸ ಸಾಹಿತ್ಯದ ಮಟ್ಟಿಗೆ ಕನ ಡದಲ್ಲಿ ನರಹರಿತೀರ್ಥರೇ ಮೊದಲಿಗರು ಇವರ ಮೂರು ಹಾಡುಗಳು ಮಾತ್ರ ಈಗ ಲಭ್ಯವಾಗುತ್ತಿರುವುದರಿಂದ ತೆಲುಗು ಕೀರ್ತನಕಾರರವರೆಗೂ ಇವರ ಪ್ರಭಾವ ಹಬ್ಬಿದೆ ಎಂದು ಹೇಳಲು ಯಾವ ಆಧಾರವನ್ನೂ ತೋರಿಸುವಂತಿಲ್ಲ ಇವರ ಹಾಡುಗಳಲ್ಲಿ ಆತ್ಮ ಚಿಂತನೆ ಮತ್ತು ನಿಷ್ಠಾ ವಂತ ಭಕ್ತಿಭಾವನೆ ಕಂಡು ಬರುತ್ತವೆ

**ಶ್ರೀಪಾದರಾಯರು** ಹರಿದಾಸ ಸಾಹಿತ್ಯವನ್ನು ಒಂದು ಪರಂಪರೆಯಾಗಿ ಬೆಳೆಸಿದವರು ಶ್ರೀಪಾದರಾಯರು ನರಹರಿತೀರ್ಥರ ಪ್ರೇರಣೆಯ ಜೊತೆಗೆ ಇವರಿಗೆ ತಮಿಳುನಾಡಿನ ಆಳ್ವಾರರ ಪ್ರೇರಣೆ ದೊರೆತಿರಬಹುದು ಶ್ರೀರಂಗದಲ್ಲಿದ್ದ ಕಾಲದಲ್ಲಿ ಶ್ರೀಪಾದರಾಯ ರು ಆಳ್ವಾರರ ಭಕ್ತಿಗೀತಗಳ ಪ್ರಾಶಸ್ತ್ಯವನ್ನು ಚೆನ್ನಾಗಿ ಕಂಡಿರಬಹುದು ಅವರ ಸ್ಫೂರ್ತಿಯಿಂದ ಕನ್ನಡಗೀತಗಳನ್ನು ಪೂಜಾ ಸಮಯದಲ್ಲಿ ಹಾಡಿಸಿ ಅವುಗಳಿಗೊಂದು ಧಾರ್ಮಿಕ ಮಹತ್ತ್ವವನ್ನು ಶ್ರೀಪಾದರಾಯರು ಕೊಟ್ಟರ

ಬಹುದು ವಿಜಯನಗರದ ಸಾಳುವ ನರಸಿಂಹರಾಯನ ಗೌರವಕ್ಕೆ ಪಾತ್ರರಾದ ಶ್ರೀಪಾದರಾಯರ ಸಂಪರ್ಕ ತೆಲುಗು ಸಂಗೀತಾಭಿಮಾನಿಗಳಿಗೂ ಇದ್ದುದರಲ್ಲಿ ಆಶ್ಚರ್ಯವೇನಿಲ್ಲ ಭ್ರಮರಗೀತೆ ವೇಣುಗೀತೆ ಗೋಪಿಗೀತೆಗಳನ್ನು ರಚಿಸುವಾಗ ಶ್ರೀಪಾದರಾಯರೂ ಆಪಾತಮಧುರವಾದ ತೆಲುಗು ಕವಿ ಪೋತನನ ಆಂಧ್ರಮಹಾ ಭಾಗವತ ವನ್ನು ಕೇಳಿರುವ ಸಾಧ್ಯತೆಯೂ ಇದೆ ಶ್ರೀಪಾದರಾಯರು ದಾಸಸಾಹಿತ್ಯದ ಪ್ರಮುಖ ಪ್ರಕಾರಗಳಾದ ಕೀರ್ತನೆ ಸುಳಾದಿ ಉಗಾಭೋಗ ಮತ್ತು ವೃತ್ತ ನಾಮ ಎಂಬ ರಚನೆಗಳನ್ನೂ ಮಾಡಿದರು ದಾಸಸಾಹಿತ್ಯದ ವೈವಿಧ್ಯಕ್ಕೆ ಕಾರಣವಾದ ಹರಿ ಭಕ್ತಿ ನೀತಿ ಬೋಧೆ ತಾತ್ತ್ವಿಕ ಚಿಂತನೆ ಸಾಮಾಜಿಕ ಪ್ರಜ್ಞೆ ಎಂಬ ಲಕ್ಷಣಗಳು ಶ್ರೀಪಾದರಾಯರಲ್ಲಿ ಕಂಡು ಬರುತ್ತವೆ

**ವ್ಯಾಸರಾಯರು** ಹದಿನಾರನೆಯ ಶತಮಾನದಲ್ಲಿ ವ್ಯಾಸಕೂಟ ದಾಸಕೂಟ ಗಳ ಆಧಾರಸ್ತಂಭವೆನಿಸಿ ಕನ್ನಡ ಹರಿದಾಸ ಸಾಹಿತ್ಯಕ್ಕೆ ಸುಸ್ಥಿರವಾದ ನೆಲೆಯನ್ನು ಸಂಪಾದಿಸಿಕೊಟ್ಟವರು ವ್ಯಾಸರಾಯರು ಯತೀಂದ್ರರಾದುದರಿಂದ ಲೌಕಿಕರಿಗೆ ದೀಕ್ಷೆಕೊಟ್ಟು ಧರ್ಮಸಾಧನೆಗಾಗಿ ಅವರನ್ನು ಬಳಸಿಕೊಳ್ಳುವ ಮಹತ್ಕಾರ್ಯವನು ಸಾಧಿಸಿದರು ವಿಜಯನಗರದ ಶ್ರೀಕೃಷ್ಣದೇವರಾಯನಿಂದ ಸನ್ಮಾನಿತರಾಗಿ ವಿಜಯ ನಗರದಲ್ಲಿ ಒಂದು ವಿದ್ಯಾಪೀಠವನ್ನು ಪ್ರಾರಂಭಿಸಿದರು ಇವರು ಅನ್ನಮಾಚಾರ್ಯರ ಮೇಲೆ ಪ್ರಭಾವ ಬೀರುವ ಸಾಧ್ಯತೆ ಇಲ್ಲದಿದ್ದರೂ ಸಮಕಾಲೀನ ತೆಲುಗು ಕೀರ್ತನ ಕಾರರಿಗೂ ಸಾಕಷ್ಟು ಸ್ಫೂರ್ತಿಯನ್ನು ನೀಡಿರುವುದರಲ್ಲಿ ಸಂದೇಹವಿಲ್ಲ ಏಕೆಂದರೆ ಅಂದಿನ ಕೃಷ್ಣರಾಯನ ಆಸ್ಥಾನ ತೆಲುಗು ವಿದ್ವಾಂಸರಿಂದ ತುಂಬಿತ್ತು

**ನಿಜಗುಣಶಿವಯೋಗಿಗಗಳು** ಹರಿದಾಸ ಸಾಹಿತ್ಯ ಉಗಮವಾಗಿ ನೆಲೆ ಯೂರುತ್ತಿದ್ದ ಕಾಲದಲ್ಲೇ ಶಿವಶರಣರ ಗೀತಪರಂಪರೆಯನು ಮುಂದುವರಿಸಿದವ ರಲ್ಲಿ ನಿಜಗುಣರನ್ನು ಪ್ರಧಾನವಾಗಿ ಹೇಳಬೇಕು ಅಲ್ಲದೆ ಇವರಲ್ಲಿ ಕೆಲವು ವಿಶೇಷ ಗುಣಗಳು ಕಂಡುಬರುತ್ತವೆ ಇವರದು ಜ್ಞಾನಮಾರ್ಗ ವಿರಕ್ತಿಯೇ ನಿಜಗುಣರಿಗೆ ಪ್ರೀತಿಕರವಾಯಿತು ಕೈವಲ್ಯಪದ್ಧತಿ ಎಂಬ ಹೆಸರಿನಲ್ಲಿ ಸಂಕಲಿತವಾದ ನಿಜಗುಣರ ಹಾಡುಗಳು ತತ್ತ್ವದ ಪದಗಳೆಂದು ಪ್ರಸಿದ್ಧವಾಗಿವೆ ಪರಮತ ಖಂಡನೆಗೆ ಪ್ರಾಶಸ್ತ್ಯ ಕೊಡದೆ ತಾತ್ವಿಕ ಅನುಭಾವ ಗೀತಗಳನ್ನು ರಚಿಸಿ ಕೈವಲ್ಯ ಸಾಹಿತ್ಯಕ್ಕೆ ಆದ್ಯರೆಂದು ನಿಜಗುಣರು ಹೆಸರಾಗಿದ್ದಾರೆ ಇವರ ತಾತ್ತ್ವಿಕರೀತಿಯನ್ನು ಮುಂದುವರಿಸಿದವ ರಲ್ಲಿ ಸರ್ಪಭೂಷಣ ಶಿವಯೋಗಿ ಬಾಲಲೀಲಾ ಮಹಾಂತ ಶಿವಯೋಗಿ ಘನ ಮಠಾರ್ಯರು ಮುಪ್ಪಿನ ಷಡಕ್ಷರಿ ಮೈಲಾರ ಬಸವಲಿಂಗ ಶರಣರು ಶಿಶುನಾಳ ಶರೀಫರು ಮುಂತಾದವರಿದ್ದಾರೆ

**ಅನ್ನಮಾಚಾರ್ಯರು** ಕರ್ನಾಟಕ ಸಂಗೀತದಲ್ಲಿ ಅನ್ನಮಾಚಾರ್ಯರದು ದೊಡ್ಡ ಹೆಸರು ಶ್ರೀಪಾದರಾಯ ವ್ಯಾಸರಾಯರಂತೆ ಆಚಾರ್ಯ ಪರಂಪರೆಗೆ

ಸೇರಿದ ಅನ್ನಮಯ್ಯ ಅನೇಕ ವಿಷಯಗಳಲ್ಲಿ ತೆಲುಗು ಮತ್ತು ಕನ್ನಡ ವಾಗ್ಗೇಯಕಾರರಿಗೆ ಮಾರ್ಗದರ್ಶಕರು 15 ನೆಯ ಶತಮಾನದ ಪ್ರಾರಂಭದಿಂದ 16 ಶತದ ಆರಂಭದ ದಶಾಬ್ದಿಯವರೆಗೆ ಜೀವಿಸಿದ್ದ ಅನ್ನಮಯ್ಯ ಸಾವಿರಾರು ಸಂಕೀರ್ತನಗಳನು ರಚಿಸಿ ವೆಂಕಟರಮಣನಿಗೆ ಅರ್ಪಿಸಿದರು ತಾಳ್ಳಪಾಕ ಎಂಬ ಗ್ರಾಮದಲ್ಲಿ ಜನಿಸಿದ ಅನ್ನಮಯ್ಯ ಅನಂತರ ಕಾಲದಲ್ಲಿ ವೈಷ್ಣವ ಧರ್ಮ ಸ್ವೀಕಾರದಿಂದ ಅನ್ನಮಾಚಾರ್ಯರಾಗಿ ಲಕ್ಷ್ಯ ಲಕ್ಷಣ ರಚನೆಯಿಂದ ಕರ್ನಾಟಕ ಸಂಗೀತ ಕ್ಷೇತ್ರಕ್ಕೆ ಅನನ್ಯ ಸೇವೆ ಸಲ್ಲಿಸಿದರು ಇವರು ಸಂಸ್ಕೃತದಲ್ಲಿ ಬರೆದ ಸಂಕೀರ್ತನ ಲಕ್ಷಣವೆಂಬ ಗ್ರಂಥ ಈಗ ಅಲಭ್ಯ ಆದರೂ ಇದನು ಅನ್ನಮಯ್ಯನ ಮೊಮ್ಮಗ ಚಿಕ್ಕ ತಿರುಮಲಾಚಾರ್ಯನು ತೆಲುಗಿಗೆ ಅನುವಾದ ಮಾಡಿದ್ದಾನೆ ಈ ಕೃತಿಯಿಂದ ಮೂಲ ಕೃತಿಯ ಸ್ವರೂಪ ತಿಳಿದು ಬರುತ್ತದೆ

ಅನ್ನಮಾಚಾರ್ಯರಿಗೆ ಶ್ರೀಪಾದರಾಯ ಮತ್ತು ನಿಜಗುಣರಿಂದ ಪ್ರೇರಣೆ ಸಿಕ್ಕಿರಬಹುದೆಂದು ಹಿಂದೆ ಹೇಳಿದೆ ಮೂಲಭೂತವಾಗಿ ಅನ್ನಮಾಚಾರ್ಯರು ರಾಜರ ಆಸ್ಥಾನವನ್ನಾಗಲಿ ಪ್ರೋತ್ಸಾಹವನ್ನಾಗಲಿ ಬಯಸಿದವರಲ್ಲ ಜೀವನವೆಲ್ಲಾ ವೆಂಕಟೇಶ್ವರನ ಸೇವೆಗೆ ಮೀಸಲಿರಿಸಿದ ಮಹಾಭಕ್ತ ಇವರು ವೆಂಕಟೇಶ್ವರನನು ಕುರಿತಂತೆ ಸಾವಿರಾರು ಶೃಂಗಾರ ಸಂಕೀರ್ತನೆಗಳನ್ನು ಭಕ್ತಿಗೀತಗಳನ್ನು ವೈರಾಗ್ಯ ಸಂಕೀರ್ತನೆಗಳನ್ನು ರಚಿಸಿದರು ವೆಂಕಟೇಶನನ್ನು ಆಳ್ವಾರರ ವರ್ಣನೆಗಳಿಗನುಗುಣವಾಗಿ ವಿಷ್ಣುವಾಗಿ ವಿಖ್ಯಾತಪಡಿಸಿದವರು ರಾಮಾನುಜಾಚಾರ್ಯರು ಅನಂತರ ವೇದಾಂತ ದೇಶಿಕರು ಶಠಕೋಪಯತಿ ಅನ್ನಮಾಚಾರ್ಯರು ವೆಂಕಟೇಶ್ವರನ ವೈಭವಕ್ಕೆ ಕಾರಣರಾದರು ಶ್ರೀವಿಷ್ಣುವಿನ ವಕ್ಷಸ್ಥಲದ ಕೌಸ್ತುಭವೇ ಶಠಕೋಪಯತಿ ಆಯಿತೆಂದೂ ವೆಂಕಟೇಶ್ವರನ ಗುಡಿಯ ಗಂಟೆ ವೇದಾಂತ ದೇಶಿಕರಾಗಿ ಹುಟ್ಟಿತೆಂದೂ ರಮಣನ ಕ್ಷೈಯ ನಂದಕಾಂಶದಿಂದ ಅನ್ನಮಾಚಾರ್ಯರು ಜನಿಸಿದರೆಂದೂ ಹೇಳಲಾಗಿದೆ

ಅನ್ನಮಾಚಾರ್ಯರಿಗೆ ಆಡಿದ ಮಾತೆಲ್ಲ ಅಮೃತಕಾವ್ಯವಾಗಿ ನುಡಿದ ಹಾಡೆಲ್ಲ ಪರಮಗಾನವಾಯಿತು 16ನೆಯ ವರ್ಷದಲ್ಲಿ ಕೀರ್ತನ ರಚನೆಯನ್ನು ಪ್ರಾರಂಭಿಸಿದ ಅನ್ನಮಯ್ಯ ಸುಮಾರು 70 ವರ್ಷಗಳ ಕಾಲ ಸಾಹಿತ್ಯ ವ್ಯವಸಾಯ ಮಾಡಿದ್ದಾರೆ ಈ ನಡುವೆ ಸಾಳುವ ನರಸಿಂಹರಾಯನೊಂದಿಗೆ ಅನ್ನಮಯ್ಯನಿಗಾದ ವಿರಸದ ಪ್ರಸಂಗ ಕುತೂಹಲಕಾರಿಯಾದದ್ದು ನರಸಿಂಹರಾಯ ಅನ್ನಮಯ್ಯನ ಕೀರ್ತನೆಯೊಂದನ್ನು ಕೇಳಿ ತನ್ನನ್ನು ಕುರಿತು ಅಂತಹ ಕೀರ್ತನೆಗಳನ್ನು ರಚಿಸಬೇಕೆಂದು ಕೇಳಿದನಂತೆ ನರಹರಿಕೀರ್ತನೆ ಮಾಡುವ ನಾಲಗೆ ಪರರ ನುತಿಸದು ಮುರಹರನ ಪದಗಳಿಗೆರಗಿದ ಶಿರ ಪರರ ವಂದಿಸದು ಎಂದು ಅನ್ನಮಯ್ಯ ಹೇಳಿದ ಕೀರ್ತನೆಯನ್ನು ಕೇಳಿ ಕೋಪಗೊಂಡ ನರಸಿಂಹರಾಯ ಕವಿಯನ್ನು ಸೆರೆಮನೆಗೆ ಕಳುಹಿಸಿದನಂತೆ ಅನ್ನಮಯ್ಯ ಭಕ್ತಿಯಿಂದ ಒಂದು ಕೀರ್ತನೆಯನ್ನು ಗಾನಮಾಡಿ ಸಂಕೋಲೆಗಳಿಂದ ಬಿಡಿಸಿಕೊಂಡನೆಂದು ಹೇಳಲಾಗಿದೆ

ಅನ ಮಾಚಾರ ರು 32 000 ಸಂಕೀರ್ತನೆಗಳನ ರಚಿಸಿದರೆಂದು ಹೇಳಲಾಗಿದೆ ಇದುವರೆಗೆ 14 000 ಕೀರ್ತನೆಗಳು ಲಭಿಸಿವೆ ಇವು ಅನ್ನಮಯ್ಯನ ಕಾಲದಲ್ಲೇ ತಾಮ್ರ ಪಟಗಳ ಮೇಲೆ ಕೆತ್ತಲ್ಪಟ್ಟು ಭದ್ರಪಡಿಸಲಾಗಿರುವುದು ವಿಶೇಷ ಅನ ಮಾಚಾರ್ಯ ಚರಿತ್ರಮು ಎಂಬ ತಾಳ ಪಾಕ ಚಿನ ನ ನ ಗ್ರಂಥದಿಂದ ಅನ್ನಮ ಯ್ಯನ ಜೀವನದ ಅನೇಕ ವಿಷಯಗಳು ತಿಳಿದು ಬರುತ್ತವೆ

ಕನ್ನಡದ ಶ್ರೀಪಾದರಾಜರಿಂದ ಅನ ಮ ಯ್ಯನಿಗೆ ಎಷ್ಟರಮಟ್ಟಿಗೆ ಸ್ಫೂರ್ತಿ ದೊರೆತಿದೆ ಎಂಬುದು ಪರಿಶೀಲನಾರ್ಹವಾಗಿದೆ ಇಬ್ಬರಿಗೂ ಸಾಳುವ ನರಸಿಂಹ ರಾಯನೊಂದಿಗೆ ಸಂಬಂಧವಿದ್ದುದು ಇತಿಹಾಸದ ವಿಷಯ ಆದರೆ ಈ ಸಮಕಾಲೀನ ವಾಗ್ಗೇಯಕಾರರು ಪರಿಚಿತರಾಗಿದ್ದರೋ ಇಲ್ಲವೋ ತಿಳಿಯದು ಶ್ರೀಪಾದರಾಯರ ಬಹುಪಾಲು ಕೀರ್ತನೆಗಳು ಶ್ರೀರಂಗನಾಥನನ್ನು ಕುರಿತಂತಿವೆ ಅನ ಮಯ್ಯನ ಇಷ್ಟ ದೈವ ತಿರ ಪತಿ ವೆಂಕಟರಮಣ ಕಾವೇರಿ ರಂಗನನ್ನು ಕುರಿತು ಅನ ಮ ಯ್ಯ ಕೆಲವು ಕೀರ್ತನೆಗಳನ್ನು ರಚಿಸಿದ್ದಾನೆ ಹಾಗೆಯೇ ನರ ಹರಿಯ ಬಗ್ಗೆ ಇಬ್ಬರೂ ಕೀರ್ತನೆಗಳನ್ನು ಬರೆದಿದ್ದಾರೆ ಅನ ಮ ಯ್ಯನ ಇಷ್ಟದೈವವಾದ ವೆಂಕಟೇಶ್ವರನನ್ನು ಶ್ರೀಪಾದರಾಯ ರು ಕೆಲವು ಕೀರ್ತನೆಗಳಲ್ಲಿ ಭಕ್ತಿ ಭಾವನೆಯಿಂದ ಹೊಗಳಿ ಹಾಡಿರುವುದನ್ನು ನೋಡುತ್ತೇವೆ ಇಬ್ಬರೂ ವಿಷ್ಣುಭಕ್ತಿಯುಳ್ಳವರೇ ಆದರೂ ಅನ ಮಯ್ಯ ಮೊದಲು ಸ್ಮಾರ್ತರಾಗಿದ್ದು ಅನಂತರ ವಿಶಿಷ್ಟಾದ್ವೈತಿಯಾದವರು ಶ್ರೀಪಾದರು ಮಾಧ್ವರು ಮತ ಪ್ರಚಾರಕ್ಕೆ ಇಬ್ಬರೂ ರಾಮಾಯಣ ಭಾರತ ಭಾಗವತ ಹರಿವಂಶ ಮುಂತಾದ ಪುರಾಣ ಗ್ರಂಥಗಳ ನೆರವನ್ನು ಪಡೆದರು

ವಾತ್ಸಲ್ಯ ಭಕ್ತಿಯನ್ನು ಪ್ರತಿಪಾದಿಸುವುದರಲ್ಲಿಯೂ ಶ್ರೀಪಾದರಾಯರಿಗೂ ಅನ್ನಮಯ್ಯನಿಗೂ ಹೋಲಿಕೆಗಳು ಕಂಡುಬರುತ್ತವೆ ಗೋಪಿಯರು ಬಂದು ವಿಧ ವಿಧವಾಗಿ ದೂರ ಗಳನ್ನು ಹೇಳಿದಾಗ ಕೃಷ್ಣನು ಹೇಳಿದ ಮಾತುಗಳನ್ನು ಶ್ರೀಪಾದ ರಾಯರು ತಮ್ಮ ಪ್ರಸಿದ್ಧ ಕೀರ್ತನೆಯಲ್ಲಿ ಅಳವಡಿಸಿದ್ದಾರೆ ಹೆಣ್ಣು ಮಕ್ಕಳನ್ನು ಆಟ ಆಡಿಸಲು ನಾನೇನಾದರೂ ದೊಡ್ಡವನೇ ? ನಾನು ನಿನ್ನ ಕೂಸಲ್ಲವೆ ? ಎಂದು ಅಳ ತ್ತಾ—

ಗೊಲ್ಲತಿಯರೆಲ್ಲ ಕೂಡಿ ಎನ್ನ ಮೇಲೆ<br>
ಇಲ್ಲದ ಸುದ್ದಿ ಪುಟ್ಟಿಸಿ<br>
ಕಳ್ಳನೆಂದು ದೂರುತಾರೆ ಎನ್ನ<br>
ಕೊಲ್ಲಬೇಕೆಂಬ ಬಗೆಯ ಎಂದ ಶ್ರೀಕೃಷ್ಣ

ಇದೇ ರೀತಿಯ ಭಾವಗಳನ್ನು ಅನ್ನಮಾಚಾರ್ಯರು ಒಂದು ಕೀರ್ತನೆಯಲ್ಲಿ ವ್ಯಕ್ತೀಕರಿಸಿದ್ದಾರೆ ರುಕ್ಮಿಣಿ ಮತ್ತು ಸತ್ಯಭಾಮೆಯರ ಸಂವಾದ ಶ್ರೀಪಾದರಾಯರ

ರಚನೆಗಳಲ್ಲಿ ಪ್ರಸಿದ್ಧವ ದುದಂ ಇಂತಹ ಸಂವಾದ ಅನ ವ ಯ್ಯನ ಒಂದು ಕೀರ್ತನೆ ಇಲ್ಲೂ ದೆ ಶ್ರೀಪ ದರ ಯರ ಭ್ರುವ ರ ಗೀತೆ ಕೂಡ ತುಂಬ ಪ್ರಸಿದ್ಧವಾಯಿಂತು ಅನ ಮಾಚಾರ್ಯರೂ ಬ್ರಮರ ಗೀತೆಗಳಂ ಸಂಸ್ಕೃತ ಭಾಗವತವನಂ ಅನುಸರಿಸಿ ಬರೆದಿದ್ದಾರೆ

ಸಂಗೀತದ ದೃಷ್ಟಿಯಿಂದ ಶ್ರೀಪಾದರಾಯರು ಮತ್ತು ಅನ್ನಮಾಚಾರ್ಯರು ನೀಡಿದ ಕೊಡ ಗೆ ಗಮನ ರ್ಹವಾದುದು ಪಲ್ಲವಿ ಮತ್ತು ಚರಣಗಳ ವಿಭಾಗ ಇವರಿಬ್ಬರ ರ್ಚನೆಗಳಲ್ಲೂ ಸ್ಪಷ್ಟವಾಗಿದೆ ಅಂಕಿತನಾಮದ ಪದ್ಧತಿಯನು ಕೂಡ ನಾವು ಇವರಿಬ್ಬರಲ್ಲೂ ಕಾಣುತ್ತೇವೆ ಇಬ್ಬರ ರಚನೆಗಳಲ್ಲೂ ಸಂಖಾದಿಗಳು ಕಂಡು ಒರುತ್ತವೆ ಈ ಸಮಕಾಲೀನ ಕೀರ್ತನಕಾರರಲ್ಲಿ ಒಬ್ಬರಿಂದೊಬ್ಬರು ಪ್ರೇರಣೆ ಪಡೆ ದಿರುವ ಸಾಧ್ಯತೆಯುನ್ನೂ ಅಲ್ಲಗಳೆಯುವಂತಿಲ್ಲ ಏಕೆಂದರೆ ಅನ್ನಮಾಚಾರ್ಯರು ತಮ್ಮ ಹದಿನಾರನೆಯ ವಯಸ್ಸಿನಿಂದಲೇ ಕೀರ್ತನ ರಚನೆಯ ನು ಪ್ರಾರಂಭಿಸಿದರು ಇದೇನಿದ್ದರೂ ಈ ಇಬ್ಬರು ವಾಗ್ಗೇಯಕಾರರ ರಚನೆಗಳನ್ನು ತೌಲನಿಕವಾಗಿ ಅಧ್ಯಯನ ಮಾಡಬೇಕಾಗಿದೆ

**ಪುರಂದರದಾಸರು** ಕನ್ನಡದಲ್ಲಿ ಸುವಿಖ್ಯಾತರಾದ ಪುರಂದರದಾಸರನ್ನು ಪರಿಚಯಿಸುವುದು ಇಲ್ಲಿಯ ಉದ್ದೇಶವಲ್ಲ ಕನ್ನಡ ಮತ್ತು ತೆಲುಗು ಕೀರ್ತನಕಾರರ ಪರಂಪರೆಗೆ ಸಂಬಂಧಿಸಿದಂತೆ ಪುರಂದರದಾಸರ ಪಾತ್ರವನ್ನು ತಕ್ಕಮಟ್ಟಿಗೆ ಪರಿಶೀಲೀ ಸುವುದು ಪ್ರಕೃತ ಆಂಧ್ರಪದಕವಿತಾ ಪಿತಾಮಹ ನಾದ ಅನ್ನಮಾಚಾರ್ಯರು ಪುರಂದರದಾಸರ ಸಮಕಾಲೀನರಾದರೂ ತುಂಬ ದೊಡ್ಡವರು ಪುರಂದರದಾಸರ ಜನ್ಮಕಾಲಕ್ಕೆ ಅನ್ನಮಯ್ಯನ ವಯಸ್ಸು ಸುಮಾರು ಎಪ್ಪತ್ತೈದಾಗಿತ್ತು ಅನ್ನ ಮಾಚಾರ್ಯ ಚರಿತ್ರ ದಲ್ಲಿ ಚಿನ್ನನ್ನ ಈ ಇಬ್ಬರು ಮಹನೀಯರು ತಿರುಪತಿಯಲ್ಲಿ ಭೇಟಿ ಯಾದ ವಿಷಯವನು ಬರೆದಿದ್ದಾನೆ ಅನ್ನಮಯ್ಯನ ಮೊಮ್ಮಗ ಚಿನ್ನನ್ನ ಬರೆದ ಈ ವಿಷಯು ಸತ್ಯಾಂಶವೆಂದು ನಂಬಲು ಯಾವ ಅಡ್ಡಿಯೂ ಇಲ್ಲ ಪುರಂದರದಾಸರು ಅನ್ನಮಾಚಾರ್ಯರನ್ನು ಸಾಕ್ಷಾತ್ ವೆಂಕಟೇಶ್ವರನ ಅವತಾರವೆಂದು ಹೊಗಳಿದರೆಂದೂ ಅನ ಮಯ್ಯ ಕನ ಡ ಸಂಕೀರ್ತನಾಚಾರ್ಯರನ್ನು ಸಾಕ್ಷಾತ ಪುರಂದರವಿಠಲನ ಅವತಾರ ವೆಂದು ಸ್ತುತಿಸಿದರೆಂದೂ ಹೇಳಲಾಗಿದೆ ಆಗ ಪುರಂದರದಾಸರು ತುಂಬ ಚಿಕ್ಕವರು ಅನ ಮಯ್ಯ ಸುಮಾರು ತೊಂಬತ್ತು ವಯಸ್ಸಿನವರಿರಬೇಕು

ಅನ್ನಮಯ್ಯ ನಂದಕಾಂಶದಿಂದ ಜನಿಸಿದನೆಂದು ಹೆ ಳಲ ಗಿರುವ ಹಾಗೆ ಪುರಂದರದಾಸರು ನಾರದನ ಅವತಾರವೆಂದು ನಂಬಲಾಗಿದೆ ಇವರಿಬ್ಬರೂ ಅನಂತರ ಕಾಲದ ವಾಗ್ಗೇಯಕಾರರ ಮೇಲೆ ಬೀರಿದ ಪ್ರಭಾವ ಪ್ರತ್ಯೇಕವಾಗಿ ಪರಿಶೀಲಿಸ ತಕ್ಕದ್ದು ಕರ್ಣಾಟಕ ಸಂಗೀತಕ್ಕೂ ೀರ್ತನ ಸಾಹಿತ್ಯಕ್ಕೂ ಇವರ ಕೊಡುಗೆ ವಿಶಿಷ್ಟವಾದುದು

ವಿಜಯನಗರದರಸರು ವೆಂಕಟೇಶ್ವರನ ಭಕ್ತರ ಗಿದ್ದುದರಿಂದ ಕನ್ನಡಿಗರಲ್ಲೂ ಅನೇಕರಿಗೆ ತಿರುಪತಿಯ ಒಂದಿಗೆ ಅನುಬಂಧವೇರ್ಪಟ್ಟಿತು ಸಾಳುವ ನರಸಿಂಹರಾಯನಿಗೂ ಅನ್ನಮಯ್ಯನಿಗೂ ಉಂಟಾದ ಸಂಬಂಧವನು ಈಗಾಗಲೇ ಪ್ರಸ್ತಾಪಿಸಲಾಯಿತು ನರಸಿಂಹರಾಯನ ಕಾಲದಲ್ಲೇ ಅನ್ನಮಾಚಾರ್ಯರ ಕೀರ್ತನೆಗಳು ವಿಜಯನಗರ ಪರಿಸರಗಳಲ್ಲಿ ತುಂಬ ವ್ಯಾಪ್ತಿಯನ್ನು ಪಡೆದಿದ್ದವೆಂಬುದರಲ್ಲಿ ಸಂದೇಹವಿಲ್ಲ ಅನ್ನಮಯ್ಯ ಮತ್ತು ಪುರಂದರದಾಸರ ಕೀರ್ತನೆಗಳು ಭಾವದಲ್ಲಿ ಪದಪ್ರಯೋಗದಲ್ಲಿ ರಚನಾವೈವಿಧ್ಯದಲ್ಲಿ ಸ್ವರೂಪದಲ್ಲಿ ಹಲವು ಹೋಲಿಕೆಗಳನ್ನೊಳಗೊಂಡಿವೆ

ಅನ್ನಮಯ್ಯ ಮತ್ತು ಪುರಂದರದಾಸರ ಕೀರ್ತನೆಗಳಲ್ಲಿರುವ ಹೋಲಿಕೆಗಳನು ಮೂರು ವಿಧವಾಗಿ ವರ್ಗೀಕರಿಸಬಹುದು (ಕೆ ಸರ್ವೋತ್ತಮನ್ 1982 42) 1 ಮತ ಸಾದೃಶ್ಯಗಳು 2 ವರ್ಣನಾ ಸಾದೃಶ್ಯಗಳು 3 ರಚನಾ ಸಾದೃಶ್ಯಗಳು ಈ ಇಬ್ಬರು ವಾಗ್ಗೇಯಕಾರರೂ ವಿಷ್ಣುನಾಮ ಸಂಕೀರ್ತನೆ ಮಾಡಿದವರೇ ಈ ಇಬ್ಬರು ದೀಕ್ಷೆಯನ್ನು ಪಡೆದ ಹೊಸದರಲ್ಲ ಶ್ರೀಮನ್ನಾರಾಯಣನ ಪುರುಷೋತ್ತಮತ್ವವನ್ನು ತಿಳಿಸಲು ಇತರ ದೇವತೆಗಳನ್ನು ಕೀಳಾಗಿ ನೋಡಿದ ಸಂದರ್ಭಗಳನ್ನು ಗುರುತಿಸಬಹುದು ಮೂರು ಮೂರ್ತಿಗಳಲ್ಲ ವಿಷ್ಣು ಒಬ್ಬನೆಂದು ದುರ್ಜನರು ಹೇಳುವರ ಬ್ರಹ್ಮ ಈತನ ಪಾದವನ್ನು ತೊಳೆದನು, ಶಿವನು ಶಿರಸ್ಸಿನಲ್ಲಿ ಈತನ ಪಾದವನ್ನು ಧರಿಸಿದನು ಎಂದು ಅನ್ನಮಾಚಾರ್ಯರು ಒಂದು ಕೀರ್ತನೆಯಲ್ಲಿ ಹೇಳಿದರು ಪುರಂದರದಾಸರು ಕೂಡ ಮಾಯಾವಾದಿ ಮತಕ್ಕೆ ಬೆಂಕಿಯ ಹಚ್ಚು ಹರಿಸರ್ವೋತ್ತಮನೆಂದು ಸ್ಮರಿಸದ ಜನರ ಸಂಗಬೇಡ ಮಧ್ವಮತ ಸಿದ್ಧಾಂತ ಪದ್ಧತಿ ಬಿಡಬೇಡ ಬಿಡಬೇಡ ಬಿಟ್ಟು ಕೆಡಬೇಡ ಬಿಟ್ಟು ಕೆಡಬೇಡ ಎಂದು ಘೋಷಿಸಿದರು

ಅನ್ನಮಯ್ಯ ವೆಂಕಟೇಶ್ವರ ಭಕ್ತನೆಂಬುದು ಪುರಂದರದಾಸರು ವಿಠಲಭಕ್ತರೆಂಬುದು ಸರ್ವಜನವೇದ್ಯವಾದುದು ಅನ್ನಮಯ್ಯ ವಿಠಲ ಸಂಕೀರ್ತನೆ ಬರೆದಿದ್ದಾರೆ ಆದರೆ ವಿಠಲನೂ ಸಾಕ್ಷಾತ್ ವೆಂಕಟೇಶ್ವರನೆಂದು ಸಾರಿದ್ದಾರೆ ಹಾಗೆಯೇ ಪುರಂದರದಾಸರು ತಮ್ಮ ಶ್ರೀನಿವಾಸ ಸಂಕೀರ್ತನೆಗಳಲ್ಲಿ ವಿಠಲ ಸ್ವರೂಪವನು ನೋಡಿದರು

ಶರಣು ನಿನಗೆ ಶರಣೆಂಬರು ವಿಠಲ
ಕರುಣವಾರಿಧಿ ಎನ್ನ ಕಾಯೋ ವಿಠಲ
ಕಂಡೆ ನಾ ನಿನ್ನ ವೆಂಕಟನೆಂಬ ವಿಠಲ

ಎಂಬುದರಲ್ಲಿ ಇದು ಸ್ಪಷ್ಟವಾಗಿದೆ

ವೈಷ್ಣವ ತತ್ತ್ವದಲ್ಲಿ ದೇವರ ಅನಂತರ ಗುರುವಿಗೆ ಪ್ರಧಾನಸ್ಥಾನ ಅನ್ನಮಯ್ಯ ಮತ್ತು ಪುರಂದರದಾಸರ ರಚನೆಗಳಲ್ಲಿ ಗುರುವೇ ಪ್ರತ್ಯಕ್ಷದೈವವೆಂಬ

ಭಾವನೆ ಹಲವೆಡೆ ಕಂಡುಬರುತ್ತದೆ ಅನ ಮಾಚಾರ್ಯರು ಹೇಳಿದ ಕೆಲವು ವಚನಗಳು (ಕನ ಡಾನುವಾದ)

> ವೈಷ್ಣವನಾಗಿ ಆಚಾರ ಸೇವೆ ಮಾಡುವುದೇ ಬುದ್ಧಿ
> ಗುರುವಿಲ್ಲವನಿಗೆ ಕೊರತೆ ಎಂಬುದಿಲ್ಲ
> ಆತ್ಮದಲ್ಲಿ ಅಜ್ಞಾನವನ್ನು ಆಚಾರ್ಯರೇ ತೊರೆದರು
> ಆಕಡೆಯು ಜನ್ಮಗಳ ಬಾಗಿಲು ಮುಚ್ಚು

ಪುರಂದರದಾಸರೂ ಅನ ಮಯ್ಯನಂತೆ ಗುರ ಭಕ್ತಿಯನು ಪ್ರದರ್ಶಿಸಿದ್ದಾರೆ

> ಗುರುವಿನ ಗುಲಾಮನ ಗುವ ತನಕ ದೊರೆಯದಣ್ಣ ಮುಕುತಿ
> ಗುರುದ್ಯೈವವರಿಯದ ಹಿರಿಯನಾದರೇನು
> ರಾಮನಾಮವ ನುಡಿ ನುಡಿ ಗುರುಗಳ ಚರಣವ ಹಿಡಿ ಹಿಡಿ

ಅನ ಮಾಚಾರ್ಯರು ಮಾಡಿದ ಕೃಷ್ಣಲೀಲ ವರ್ಣನೆ ವಾತ್ಸಲ್ಯರಸಪೋಷಣೆ ಜನಪದಗೀತ ಅನುಕರಣೆ ಮುಂತಾದುವು ಪುರಂದರದಾಸರಲ್ಲೂ ಕಾಣುಹ ದು ಅನ್ನಮಯ್ಯನನ್ನು ಪುರಂದರದಾಸರು ಅನುಕರಿಸಿ ದ ಒಂದು ಸಂದರ್ಭ ಕೆಳಗಿನದು

ಮಾಳವಿರಾಗ ಶರಣು ಶರಣು ಸುರೇಂದ್ರ ಸನು ತ ಶರಣು ಶ್ರೀ ಸತಿವಲ್ಲಭಾ

ಶರಣು ರಾಕ್ಷಸಗರ್ವ ಸಂಹರ ಶರಣು ವೆಂಕಟ ನಾಯಕಾ

ಇದು ಅನ್ನಮಾಚಾರ್ಯನ ಸ ೀರ್ತನೆಯ ಪಲ್ಲವಿ

ಮಾಳವಿರಾಗ ಶರಣು ಶರಣು ಸುರೇಂದ್ರವಂದಿತ ಶರಣು ಶ್ರೀಪತಿ ಸೇವಿತ

ಶರಣು ಪಾರ್ವತೀತನಯ ಮೂರ ತಿ ಶರಣು ಸಿದ್ಧಿವಿನಾಯಕ

ಇದು ಪುರಂದರದಾಸರ ಪಲ್ಲವಿ (ರಜನೀಕಾಂತರಾವು, ಆಂಧ್ರವಾಗ್ಗೇಯಕಾರ ಚರಿತ್ರಮು ಪು 114)

**ಕನಕದಾಸರು** ಪುರಂದರದಾಸರ ಸಮ ಕಾಲೀನರಾದ ಕನಕದಾಸರು ವಿಜಯ ನಗರಕ್ಕೆ ಬಂದ ವಿಷಯ ತಿಳಿದದ್ದೇ ಶ್ರೀರಂಗ ತಿರುಪತಿ ಉಡುಪಿ ಮುಂತಾದ ಪುಣ್ಯಕ್ಷೇತ್ರಗಳ ಸಂದರ್ಶನವನು ಕೈಗೊಂಡು ಕ್ಷೇತ್ರ ದೈವಗಳನು ಕುರಿತ ಹಾಡು ಗಳನ್ನೂ ಇವರು ರಚಿಸಿದ್ದಾರೆ ಕನಕದಾಸರ ಕೃತಿಗಳಲ್ಲಿ ರಾಮಾನುಜರ ಸ್ತುತಿಯೂ ಕಂಡು ಬರುವುದರಿಂದ ಅವರನ್ನು ಕೆಲವರು ವಿಶಿಷ್ಟಾದ್ವೈತಮತಕ್ಕೆ ಸೇರಿಸುತ್ತಾರೆ ಈ ವಿಷಯದಲ್ಲಿ ಕನಕದಾಸರು ಅನ ಮಾಚಾರ್ಯರಿಗೆ ಸಮೀಪದವರಾಗುತ್ತಾರೆ ಅನ್ನಮಯ್ಯನ ಸರ್ವಾರ್ಪಣ ಮನೋಭಾವ ಕನಕದಾಸರಲ್ಲಿಯೂ ಹೆಚ್ಚಾಗಿ ಕಾಣಿಸು ತ್ತದೆ ಜನಪದ ಭಾಷೆಯನ್ನು ಧಾಟಿಯನು ಬಳಸುವುದರಲ್ಲಿಯೂ ಅನ್ನಮಯ್ಯ ನಿಗೆ ಇವರನು ಹೋಲಿಸಿ ನೋಡಬಹುದು

ಕನ್ನಡದಲ್ಲಿ ಪುರಂದರದಾಸ ಕನಕದಾಸ ಮತ್ತು ವಾದಿರಾಜರ ಅನಂತರ ಅಜ್ಞಾತಪರ್ವ ಪ್ರಾರಂಭವಾಗುತ್ತದೆ ವಿಜಯದಾಸರು ಪುನರುಜ್ಜೀವನಗೊಳಿಸುವ ವರೆಗೂ ಹರಿದಾಸ ಸಾಹಿತ್ಯದ ಕತ್ತಲೆಯುಗ ಎನ್ನಬಹುದು ಆದರೆ ಈ ಅವಧಿ ಯಲ್ಲಿ ತೆಲುಗಿನಲ್ಲಿ ಕೆಲವು ಕೀರ್ತನಕಾರರೂ ಉತ್ತಮ ರಚನೆಗಳನು ಮಾಡಿ ಪ್ರಖ್ಯಾತ ರಾದರು

**ಕಂಚೆರ್ಲ ಗೋಪನ್ನ** (ಬದ್ರಾಚಲ ರಾಮದಾಸ) ಹದಿನೈದನೆಯ ಶತ ಮಾನದಲ್ಲಿ ಅನ್ನಮಾಚಾರ್ಯರು ಹದಿನಾರನೆಯ ಶತಮಾನದಲ್ಲಿ ಅವರ ಮಕ್ಕಳು ಮೊಮ್ಮಕ್ಕಳು ತೆಲುಗು ಕೀರ್ತನ ಸಾಹಿತ್ಯವನು ಬೆಳೆಸಿದರು 15 16 ಶತಮಾನ ಗಳ ಕಾಲ ತಾಳ್ಳಪಾಕಯುಗವೆನ ಬಹುದು 1620 ರಿಂದ 1680 ರ ವರೆಗೆ ಬಾಳಿದ ರಾಮದಾಸ ಭಜನೆ ಕೀರ್ತನೆಗಳಿಗೆ ಕೆ ಟ್ಟ ಪ್ರಚಾರ ಅನನ್ಯವಾದುದು ಶ್ರೀರಾಮ ನವಮಿ ಮತ್ತು ಅನೇಕ ಇತರ ಸಂದರ್ಭಗಳಲ್ಲಿ ಇವರ ಕೀರ್ತನೆಗಳು ಆಂಧ್ರದಾದ್ಯಂತ ಪ್ರತಿಧ್ವನಿಸುತ್ತವೆ ರಾಮ ದಾಸರ ಚರಿತ್ರೆಯು ಹರಿಕಥೆಗಳ ಮೂಲಕ ಯಕ್ಷಗಾನಗಳ ಮೂಲಕ ತುಂಬ ಪ್ರಚಾರ ಹೊಂದಿದೆ ರಾಮದಾಸರು ಸಂಗೀತ ಕ್ಷೇತ್ರಕ್ಕೂ ಅಮೂಲ್ಯವಾದ ಕೊಡುಗೆಯನು ನಿ ಡಿದ್ದಾರೆ ಆನಂದ ಭೈರವಿಯನು ಮೊದಲು ಬಳಸಿದ ವಾಗ್ಗೇಯಕಾರರು ಇವರೇ ಎಂದು ಕೆಲವು ವಿಮರ್ಶಕರು ಅಭಿಪ್ರಾಯ ಪಟ್ಟಿ ದಾರೆ ಇದರಲ್ಲಿ ಅಭಿಪ್ರಾಯ ಭೇದಗಳಿದ್ದರೂ ರಾಮದಾಸರ ಅನೇಕ ಪ್ರಸಿದ್ಧ ಕೀರ್ತನೆಗಳು ಆನಂದ ಭೈರವಿಯಲ್ಲೇ ಇರುವುದು ಮಾತ್ರ ನಿಜ

ಪಲುಕೆ ಬಂಗಾರಮಾಯೆನೆ ಕೋದಂಡಪಾಣಿ
ರಾಮನಾಮಮೇ ಜೀವನಮು
ರಾಮುನಿಮಾರಮು ಮಾಕೇಮಿ ವಿಚಾರಮು

ಮುಂತಾದುವನು ಉದಾಹರಿ ಬಹುದು

ಇದಲ್ಲದೆ ಆಹಿರಿ ಧನ್ಯಾಸಿ ನಾದನಾಮ ಕ್ರಿಯ ಶಂಕರಾಭರಣ ಮುಖಾರಿ, ಸಾವೇರಿ ನಿಲಾಂಬರಿ ನವರೋಜ್ ಮುಂತಾದ ರಾಗಗಳಲ್ಲಿ ರಾಮದಾಸರು ಕೀರ್ತನೆ ಗಳನ್ನು ರಚಿಸಿದ್ದಾರೆ ಉತ್ತರದ ರಾಗಗಳಾದ ಕಾಪಿ ಕಮಾಸು ದರ್ಬಾರು ಬೇಗಡ ಕಾನಡ ಯಮುನಾ ಕಲ್ಯಾಣಿ ಮುಂತಾದ ರಾಗಗಳಲ್ಲಿಯೂ ಇವರು ಬರೆದಿ ದ್ದಾರೆ ರಾಮದಾಸರ ಕೀರ್ತನೆಗಳಲ್ಲಿ ಪಾಂಡಿತ್ಯಕ್ಕಿಂತ ಬಕ್ತಿ ಭಾವನೆ ಹೆಚ್ಚು ಈ ವಿಷಯದಲ್ಲಿ ಇವರು ಕನ್ನಡ ಕೀರ್ತನಕಾರರನ್ನು ಹೋಲುತ್ತಾರೆ

**ಕ್ಷೇತ್ರಯ್ಯ** ಇದೇ ಕಾಲದವರಾದ ಕ್ಷೇತ್ರಯ್ಯ ಕರ್ನಾಟಕ ಸಂಗೀತದಲ್ಲಿ ದೊಡ್ಡ ಹೆಸರು ಅನ ಮಾಚಾರ್ಯರ ಕಾಲದಲ್ಲಿ ಸಂಕೀರ್ತನೆಗಳು ಶೃಂಗಾರ ಮತ್ತು ವೈರಾಗ್ಯ ಎಂಬ ಎರಡು ವಿಭಾಗಗಳಿಂದ ಕೂಡಿದ್ದವು ಈ ಎರಡಕ್ಕೂ ಪದವೆಂಬ

ಹೆಸರಿತ್ತು. ಕ್ಷೇತ್ರಯ್ಯನ ಕಾಲಕ್ಕೆ ಶೃಂಗಾರ ಸಂಕೀರ್ತನೆಗಳಿಗೆ ಮಾತ್ರ ಪದವೆಂಬ ಪಾರಿಭಾಷಿಕಶಬ್ದ ಸ್ಥಿರವಾಯಿತು. ಅಭಿನಯಯೋಗ್ಯವಾದ ಶೃಂಗಾರ ಪದಗಳನ್ನು ಬರೆದ ಕ್ಷೇತ್ರಯ್ಯ ತೆಲುಗು ಕೀರ್ತನ ಸಾಹಿತ್ಯಕ್ಕೆ ಹೊಸ ತಿರುವನು ಕೊಟ್ಟವನು.

ಕ್ಷೇತ್ರಯ್ಯ ಎಂಬುದು ಕ್ಷೇತ್ರ ಸಂದರ್ಶನದಿಂದ ಬಂದ ಹೆಸರು. ಮೊವ್ವ ವರದಯ್ಯ ಎಂಬುದು ಇವರ ಹೆಸರೆಂದು ಭಾವಿಸಲಾಗಿದೆ. ಮೊದಲು ರಸಪರನಾಗಿದ್ದ ವರದಯ ಭಕ್ತಿಪರನ ದ ಕ್ಷೇತ್ರಯ್ಯನಾಗಿ ಪರಮಭಾಗವತೋತ್ತಮನಾದನೆಂದು ತಿಳಿಯುತ್ತದೆ. ಮೊದಲು ಅನೇಕ ರಾಜಾಸ್ಥಾನಗಳನ್ನು ದರ್ಶಿಸಿ ಅವರ ಮೇಲೆ ಶೃಂಗಾರ ಪದಗಳನ್ನು ಬರೆದ ಕ್ಷೇತ್ರಯ್ಯ ಅನಂತರ ಹಲವು ಪುಣ್ಯಕ್ಷೇತ್ರಗಳಲ್ಲಿ ನೆಲೆಸಿರುವ ಪರಮಾತ್ಮನಿಗೆ ತಮ್ಮ ಪದಗಳನ್ನ ಅರ್ಪಿಸಿದರು. ಭಾವಾನುಗುಣವಾದ ರಾಗವಿನ್ಯಾಸ, ರಾಗಸ್ವರೂಪವನು ಪರಿಪೂರ್ಣವಾಗಿ ಸ್ಫುರಿಸುವಂತೆ ಪದಾಡುವ ಮಾತುಗಳ ಜೋಡಣೆ ಕ್ಷೇತ್ರಯ್ಯನಲ್ಲ ಕಂಡುಬರುತ್ತದೆ. ಆನ ಮಾಚಾರ್ಯರು ಒಳಸಿದ ಅಹಿರಿ, ಕಾಂಭೋಜಿ, ಕೇದಾರಗೌಳ, ದನ್ಯಾಸಿ, ಭೈರವಿ, ಮಧ್ಯಮಾವತಿ, ಮುಖಾರಿ, ಪಂತುವರಾಳಿ, ಶಂಕರಾಭರಣ, ಸಾವೇರಿ ಮುಂತಾದುವನು ಕ್ಷೇತ್ರಯ್ಯನವರೂ ಬಳಸಿದ್ದಾರೆ.

ಕ್ಷೇತ್ರಯ್ಯ ಸಾವಿರಾರು ಪದಗಳನು ರಚಿಸಿದರೆಂದು ಹೇಳಲಾಗಿದೆಯಾದರೂ ಕೆಲವು ನೂರು ಪದಗಳು ಮಾತ್ರ ಸಿಕ್ಕುತ್ತಿವೆ. ವಿಸ್ಸಾ ಅಪ್ಪಾರಾವು ಅವರು ಪ್ರಕಟಿಸಿದ ಸಂಪುಟದಲ್ಲಿ 334 ಪದಗಳು 39 ರಾಗಗಳಲ್ಲಿವೆ. ಕ್ಷೇತ್ರಯ್ಯ ಹೆಚ್ಚಾಗಿ ಕಾಂಭೋಜಿರಾಗವನ್ನು ಬಳಸಿದ್ದಾರೆ. ಮುಖಾರಿ, ಕಲ್ಯಾಣಿ, ಭೈರವಿ ಎಂಬ ರಾಗಗಳು ಅನಂತರದ ಸ್ಥಾನಪಡೆದಿವೆ. ಇಂದಿನ ಕರ್ನಾಟಕ ಸಂಗೀತದ ಅನೇಕ ರಾಗಗಳು ಸ್ಪಷ್ಟವಾದ ರೂಪವನ್ನು ತಳೆದದ್ದು ಕ್ಷೇತ್ರಯ್ಯನಲ್ಲೇ ಎಂದೂ, ಅನುಪಲ್ಲವಿಗೆ ಕ್ಷೇತ್ರಯ್ಯ ಮಾರ್ಗದರ್ಶಿ ಎಂದೂ ರಜನೀಕಾಂತರಾವು ಅಭಿಪ್ರಾಯ ಪಟ್ಟಿದ್ದಾರೆ (ಆಂಧ್ರವಾಗ್ಗೇಯಕಾರ ಚರಿತ್ರಮು ಪು 210 232). ಆದರೆ ರಾಳಪಲ್ಲಿ ಅನಂತಕೃಷ್ಣಶರ್ಮರು ಮೇಲಿನ ಗ್ರಂಥಕ್ಕೆ ಬರೆದ ಮುನ್ನುಡಿಯಲ್ಲಿ ಕ್ಷೇತ್ರಯ್ಯ ಬಳಸಿದ ರಾಗತಳಗಳೆಲ್ಲಾ ಪುರಂದರದಾಸಾದಿ ಪ್ರಾಚೀನರ ರಚನೆಗಳಲ್ಲೇ ಇವೆ. ಆ ಪದಗಳನು ಹಾಡಿದ ಹಾಗೆ ಇವನ್ನು ಹಾಡಬಹುದು. ನರಗರಂಗಳಾದ ಶ್ರೀ ಬಿಡಾರಂ ಕೃಷ್ಣಪ್ಪನವರು ದೇವರ ನಾಮಗಳನು ಹಾಡಿದಂತೆ ಕ್ಷೇತ್ರಯ್ಯಾದಿಗಳ ಪದಗಳನ್ನು ಅದ್ಭುತವಾಗಿ ಹಾಡುತ್ತಿದ್ದರು. ಭಕ್ತಿ ಶೃಂಗಾರ ರೂಪಭಾವ ಭೇದವೊಂದನು ಒಟ್ಟು ಹಾಡಿನ ಶೈಲಿಯಲ್ಲಿ ಯಾವ ವ್ಯತ್ಯಾಸವೂ ನಮ್ಮ ಅನುಭವಕ್ಕೆ ಬಂದಿಲ್ಲ. ಹಾಗೆಯೇ ಅನುಪಲ್ಲವಿ ಪುರಂದರದಾಸರ ಕೀರ್ತನೆಗಳಲ್ಲಿ ಹಲವೆಡೆ ಇರುತ್ತದೆ. ಇತರ ದಾಸರಲ್ಲೂ ಇದೆ. ಇಷ್ಟೇಕೆ ಅನ್ನಮಯ್ಯನ ಸಂಕೀರ್ತನೆಯಲ್ಲೂ ಇದೆ (ಪರಿಚಯ ವಾಕ್ಯಗಳು ಪು 14). ಇದರಿಂದ ಅನ ಮಾಚಾರ್ಯ ಮತ್ತು

ಪುರಂದರದಾಸರ ಪರಂಪರೆಯನ್ನೇ ಕ್ಷೇತ್ರಜ್ಞನವರೂ ಮುಂದುವರಿಸಿದರೆಂದು ಹೇಳ ಬಹುದು

**ವಿಜಯದಾಸರು ಮತ್ತು ದಾಸಸಂಪ್ರದಾಯ ಪುನರುಜ್ಜೀವನ**
ಜಗನ್ನಾಥದಾಸ ಗೋಪಾಲದಾಸ ಮೋಹನದಾಸ ಮೊದಲಾದ ಕೀರ್ತನಕಾರರಿಗೆ ಗುರುಗಳಾಗಿ ಮತ್ತೆ ದಾಸ ಸಂಪ್ರದಾಯ ಮುಂದುವರಿಯಲು ಕಾರಣರಾದವರು ವಿಜಯದಾಸರು ಪುರಂದರದಾಸರನ್ನು ಪರೋಕ್ಷವಾಗಿ ತಮ್ಮ ಗುರುಗಳೆಂದು ಸ್ವೀಕರಿಸಿದ ವಿಜಯದಾಸರು ಪದಗಳನ್ನು ಸುಳಾದಿಗಳನ್ನು ಉಗಾಭೋಗಗಳನ್ನು ರಚಿಸಿದರಲ್ಲದೆ ಅನೇಕ ಹರಿದಾಸರಿಗೆ ದೀಕ್ಷೆಯನ್ನು ನೀಡಿದರು ವಿಜಯ ದಾಸರ ಮುಖ್ಯ ಶಿಷ್ಯರಾದ ಜಗನ್ನಾಥದಾಸರ ತಿರುಪತಿ ವೆಂಕಟೇಶನನ್ನು ಸ್ತುತಿಸುತ್ತಾ ಅನೇಕ ಕೀರ್ತನೆಗಳನ್ನು ಬರೆದಿದ್ದಾರೆ ಹಲವು ಬಾರಿ ತಿರುಪತಿಯ ಯಾತ್ರೆ ಕೈಗೊಂಡು ಮಂದುರವಾದ ಕೀರ್ತನೆಗಳಿಂದ ಶ್ರೀಹರಿಯನ್ನು ಸ್ತುತಿಸಿದ್ದಾರೆ ಅನ್ನಮಾಚಾರ್ಯರ ಕೀರ್ತನಗಳನ್ನು ಹೋಲುವ ಹಲವು ಕೃತಿಗಳು ಜಗನ್ನಾಥದಾಸರ ರಚನೆಗಳಲ್ಲಿವೆ

**ತ್ಯಾಗರಾಜರು (1767 1847)** ಕರ್ನಾಟಕ ಸಂಗೀತವನ್ನು ಅತ್ಯುನ್ನತ ಸ್ಥಾಯಿಗೆ ತೆಗೆದುಕೊಂಡು ಹೋದವರು ತ್ಯಾಗರಾಜರು ದಕ್ಷಿಣ ಭಾರತೀಯ ಸಂಗೀತವನ್ನು ಕುರಿತು ಅತ್ಯಲ್ಪ ಪರಿಚಯವುಳ್ಳವರಿಗೂ ತ್ಯಾಗರಾಜರ ಹೆಸರು ಚಿರಪರಿಚಿತವೇ ಆಗಿದೆ ತ್ಯಾಗರಾಜ ಶ್ಯಾಮಶಾಸ್ತ್ರಿ ಮತ್ತು ಮುತ್ತುಸ್ವಾಮಿ ದೀಕ್ಷಿತರನ್ನು ಸಂಗೀತತ್ರಿಮೂರ್ತಿಗಳೆಂದೂ ರತ್ನತ್ರಯವೆಂದೂ ಕರೆಯಲಾಗಿದೆ ಈ ಮೂವರೂ ತಂಜಾವೂರು ಜಿಲ್ಲೆಯ ತಿರುವಾರೂರಿಗೆ ಸಂಬಂಧಿಸಿದವರೇ ಅಪೂರ್ವ ರಾಗಗಳಲ್ಲಿಯೂ ನಿರಾಯಾಸದಿಂದ ಕೀರ್ತನೆಗಳನ್ನು ರಚಿಸಿದವರಿವರು

ಅಪೂರ್ವಧಾತು ಕಲ್ಪನಾ ಚಾತುರ್ಯಕ್ಕೆ ತ್ಯಾಗರಾಜರು ಹೆಸರುವಾಸಿಯಾದ ವರು ತಂಜಾವೂರನ್ನು ಆಳಿದ ತೆಲುಗು ರಾಜರು ಮತ್ತು ಮಹಾರಾಷ್ಟ್ರ ರಾಜರು ತೆಲುಗು ಕೀರ್ತನ ಸಾಹಿತ್ಯಕ್ಕೆ ಬಹಳಷ್ಟು ಪ್ರೇರಣೆ ಪ್ರೋತ್ಸಾಹಗಳನ್ನಿತ್ತರು ಧಾತು ಮಾತುಗಳ ಸಮಾನ ಪ್ರಾಧಾನ್ಯದಿಂದ ರಚನೆ ಮಾಡಿದ ಕ್ಷೇತ್ರಜ್ಞನ ಸಂಪ್ರದಾಯ ಮುಂದುವರಿಯಿತು ಶಹಜೀ ಗಿರಿರಾಜಕವಿ ವೀರಭದ್ರಯ್ಯ ಕಾಶಿನಾಥಯ್ಯ ಪಲ್ಲವಿ ಗೋಪಾಲಯ್ಯ ರಾಮಸ್ವಾಮಿ ದೀಕ್ಷಿತರು ಮುಂತಾದವರು ಹದಿನೇಳು ಹದಿನೆಂಟನೆಯ ಶತಮಾನಗಳಿಗೆ ಸೇರಿದ ವಾಗ್ಗೇಯ ಕಾರರಲ್ಲಿ ಪ್ರಮುಖರು ಶಹಜಿಯ ಆಸ್ಥಾನ ವಾಗ್ಗೇಯಕಾರನಾದ ಗಿರಿರಾಜಕವಿಯ ಮೊಮ್ಮಗ ತ್ಯಾಗರಾಜರು ತ್ಯಾಗರಾಜರು ವಿನಾಯಕನನ್ನು ಕುರಿತ ಒಂದು ಕೀರ್ತನೆಯಲ್ಲಿ ಗಿರಿರಾಜಸುತ ತನಯಾ ಎಂದು ಹೇಳುತ್ತಾ ತಮ್ಮ ತಾತನವರನ್ನು

ಸೂಚಿಸಿದ್ದಾರೆ ತ್ಯಾಗರಾಜರ ತಾಯಿ ಸೀತಮ್ಮ ತಂದೆ ರಾಮಬ್ರಹ್ಮಮಂ ~ ತಾ ರಾಮರನ್ನು ತ ಯಿತಂದೆಯರಾಗಿ ಹೊಂದಿದ್ದ ತ್ಯಾಗರಾಜರು ತಮ್ಮ ಕೃತಿಗಳ ಮೂಲಕ ತೆಲುಗರಿಗೆ ~ತಾರಾನರೇ ತಾಯಿತಂದೆಯರೆನ್ನುವಷ್ಟು ನಂಬಿಕೆಯನ್ನು ಹುಟ್ಟಿ ದ್ದಾರೆ ಸೀ"ವ್ಮ ಮಾಯಮ್ಮ ಶ್ರೀರಾಮುಡು ಮಾ ಕಂತಂಡ್ರಿ ( ಸೀತಮ್ಮ ನಮ್ಮಮ್ಮ ಶ್ರೀರಾಮ ನಂ ನಮ್ಮ ತಂದೆ ) ಎಂಬ ಕೀರ್ತನೆ ತೆಲ ಗರೆ ಲ್ಲರೂ ಮೆಚಿ ದ್ದಾ

ತ್ಯಾಗರಾಜರ ಇಷ್ಟದೈವ ಶ್ರೀರಾಮ ಮನೆಯ ಪೂಜಾಮಂದಿರದಲ್ಲೇ ಇವರಂ ಮೊದಲ ಸಂಗೀತ ಪಾಠಗಳನ್ನು ಕಲಿತರು ತಾಯಿ ಸಿ ತಮ್ಮ ತ್ಯಾಗರಾಜರಿಗೆ ಒಯದೇವನ ಅಷ್ಟಪದಿಗಳನಂ ಪುರಂದರದಾಸರ ದೇವರ ನಾಮ ಗಳನು ಅನ್ನಮಾ ಚಾರ್ಯರ ೯ರ್ತನೆಗಳನಂ ರಾಮದಾಸರ ಸಂಕೀರ್ತನೆಗಳನು ಕಲಿಸಿದರಂತೆ ಅನಂತರ ಆಸ್ಥಾನ ವಿದ್ವಾನ ಶೊಂಠಿ ವೆಂಕಟರಮಣಯ್ಯನವರ ಬಳಿ "ಂಗೀತಾಭ್ಯಾ" ಮಾಡಿ ದರು ಶ್ರೀರಾಮನನ್ನು ವೇಣೋನೇತ್ರದಿಂದ ದರ್ಶಿಸಿದ ತ್ಯಾಗರಾಜರು ಬಾಲಕನ ಕಮಯಚೇಲ ಸ ಜನಪರಿಪಾಲ ಘನಾಘನನೀಲ ನವಪಾಲಿಕಾ ಭರಣ ರಾಜೀವ ನೆ ತ್ರ ಜಲಧಿಗಂಭೀರ ಅತಿಲಾವಣ್ಯ ಯೋಗಿ ಂದ್ರ "ಹೃದ್ಭಾವಿತ ಎಂದು ಮಧುರವಾಗಿ ಸ್ತುತಿಸಿದರು

ಅನ ಮಾಚಾರ್ಯರ ಕಾಲದಲ್ಲಿ ೯ರ್ತನೆಯಾಗಿ ಶೃಂಗಾರ ಮತ್ತು ವೈರಾಗ್ಯ ಪ್ರಭೇದಗಳಿಂದ ಕೂಡಿದ್ದ ಸಂಕೀರ್ತನ ವಾಙ್ಮಯ ರಾಮದಾಸರಲ್ಲಿ ಭಜನಕೀರ್ತನ ಯಾಯಿತು ಅನಂತರ ಕ್ಷೇತ್ರಯ್ಯ ಪದ ಸಾಹಿತ್ಯಕ್ಕೆ ಒಂದು ಪರಮಾರ್ಥವನಂ ಕಲ್ಪಿಸಲು ತ್ಯಾಗರಾಜರ ಕಾಲಕ್ಕೆ ಅದು ಪರಿಪಕ್ವವಾಗಿ ಕೃತಿ ಎಂಬ ಹೆಸರನ್ನು ಪಡೆಯಿತು ತ್ಯಾಗರಾಜರ ಉನ ರೆ ಸಿದಿ ಯಂ ಕೀರ್ತನೆಗಳನಂ ಕ ತಿ ಎಂದು ಹೇಳ ವುದು ರೂಢಿ ಕರ್ನಾಟಕ ಸಂಗಿ ತ ವೃಕ್ಷಕ್ಕೆ ಲಬಿಸಿದ ಅತಂತ್ಯ ಮಧುರ ವಾದ ಫಲವೆಂದರೆ ತ್ಯಾಗರಾಜರ ಕೃತಿ ತ್ಯಾಗರಾಜರ ಕೃತಿಗಳಲ್ಲಿ ಅರ್ಧದಷ್ಟು ರಾಮನನಂ ಕುರಿತಂತಹವು ~ವರು 72 ಮೇಳಕರ್ತ ರಾಗಗಳಲ್ಲೆಲ್ಲಾ ೯ರ್ತನೆ ಗಳನ್ನು ರಚಿಸಿದ್ದಾರೆ ಪ್ರಾಚಿ ನ ~ಂಗೀತ ಲಕ್ಷಣಕ ರರಿಗೂ ತಿಳಿಯದ ಅನೇಕ ಅಪೂರ್ವ ರಾಗಗಳಲ್ಲಿ ತ್ಯಾಗರಾಜರು ಕೃತಿರಚನೆ ಮಾಡಿದ್ದಾರೆ ಇವುಗಳಲ್ಲಿ ಹಲ ವನಂ ತ್ಯಾಗರಾಜರೇ ಸೃಷ್ಟಿಸಿರಬಹುದು ಇವೆಲ್ಲಾ ಕರ್ನಾಟಕ ಸಂಗೀತಕ್ಕೆ ಅಮೂಲ್ಯ ನಿಧಿಗಳಾದವು

ಸಂಗಿ ತದ ದೃಷ್ಟಿಯಿ ಂದಲೂ ಸಾಹಿತ್ಯದ ದೃಷ್ಟಿಯಿಂದಲೂ ತ್ಯಾಗರಾಜರು ಅನ್ನಮಾಚ ರ್ಯರು ಪುರಂ"ರದಾಸರು ಮತ್ತು ರಾಮ ದಾಸರನ್ನು ಅನ "ರಿ ದ ಸಂದರ್ಭಗಳಿವೆ ಆದರೆ ಬಹುಪಾಲು ಅವರ ಕೃತಿರಚನೆ ಪ್ರತಿಭಾವ್ಯುತ್ಪತ್ತಿಗಳ ಫಲ ಕರ್ನಾಟಕ ಸಂಗೀತದ ಹಿರಿಮೆಯನ್ನು ದೇಶವಿದೇಶಗಳಲ್ಲಿ ವ್ಯಾಪ್ತಿ ಮಾಡಲು ತ್ಯಾಗರಾಜರ ರಚನೆಗಳ ಔನ ತ್ಯ ಬಹಳಷ್ಟು ಕಾರಣವಾಗಿದೆ

**ಉಪಸಂಹಾರ** ಕರ್ನಾಟಕದ ಹರಿದಾಸರು ಮತ್ತು ತೆಲುಗು ಕೀರ್ತನಕಾರರ ರಚನೆಗಳನು ಪರಿಶೀಲಿಸಿದಾಗ ಕೆಲವು ವಿಷಯಗಳನ್ನು ಗಮನಿಸಬಹುದು ಕನ್ನಡ ಹರಿದಾಸ ಸಾಹಿತ್ಯ ಒಂದು ಪಂಥವಾಗಿ ಬೆಳೆದು ಎಂದಂತಹದು ಮಾಧ್ವಮತದ ಹಿನ್ನೆಲೆಯಲ್ಲಿ ದೀಕ್ಷಾಬದ್ಧರಾದ ಕೀರ್ತನಕಾರರ ರಚನೆಗಳಾಗಿ ಗುರುಗಳ ಅನುಗ್ರಹ ದಿಂದ ಬಂದ ಅಂಕಿತನಾಮಗಳಿಂದ ಕೂಡಿ ಹರಿದಾಸ ಸಾಹಿತ್ಯ ಬೆಳೆದು ಬಂದಿದೆ ತೆಲುಗು ಕೀರ್ತನಕಾರರು ಹೆಚ್ಚು ಸ್ವತಂತ್ರರು ಅವರಿಗೆ ಧರ್ಮದ ನಿರ್ಬಂಧವಿಲ್ಲ ದೀಕ್ಷೆಯ ಹಿನ್ನೆಲೆಯಿಲ್ಲ ಇತರ ಪರಿಮಿತಿಗಳಿಲ್ಲ ಈಕಾರಣದಿಂದ ಶೃಂಗಾರ ಕೀರ್ತನೆ ಗಳಿಗೆ ಕನ್ನಡದಲ್ಲಿ ಆಸ್ಪದವಿಲ್ಲ ಭಕ್ತಿಯೂ ಶೃಂಗಾರ ರಸಭರಿತವಾಗಿರಬಹುದೆಂಬ ರಸಿ ಕತೆ ತೆಲಗು ಕೀರ್ತನಕಾರರದು ಕೀರ್ತನೆಗಳ ಮೂಲಕ ಮಧ್ವ ಮತಪ್ರಚಾರ ಸಾಮಾ ಜಿಕ ರೀತಿನೀತಿಗಳ ಟೀಕೆ ದನೆ ಮಾಡುವ ಹಂಬಲ ಕನ್ನಡ ಹರಿದಾಸರದು ಇದರಿಂದ ತೆಲುಗು ಕೀರ್ತನಕಾರರ ಸಾಹಿತ್ಯ ಹೆಚ್ಚು ಮುಕ್ತ ವಾತಾವರಣದಲ್ಲಿ ಮೂಡಿ ಬಂದಿದೆ ಇದೇನಿದ್ದರೂ ಸಂಗೀತ ಕ್ಷೇತ್ರದಲ್ಲಿ ಕೊಳುಕೊಡುಗೆಗಳಿಗೆ ಮತ ದೀಕ್ಷೆ ಪ್ರಾದೇಶಿಕ ಆಚಾರಗಳು ಅಡ್ಡಿ ಆಗಲಿಲ್ಲ ಸಾಂಸ್ಕೃತಿಕ ಪರಂಪರೆಯಲ್ಲಿ ಹೃದಯವಂತಿಕೆ ಮುಖ್ಯ ವೆಂಬ ಆದರ್ಶವುಳ್ಳವರಾದುದರಿಂದ ಹರಿದಾಸರು ಮತ್ತು ತೆಲುಗು ಕೀರ್ತನಕಾರರು ಪರಸ್ಪರ ಗೌರವವನ್ನು ತೋರಿದರು ಪ್ರಭಾವಕ್ಕೆ ಒಳಗಾದರು ದ್ವೈತವ ತದ ಹಿನ್ನೆಲೆಯ ದಾಸಪಂಥದ ಪುರಂದರದಾಸರು ತರುಣ ವಯಸ್ಸಿನಲ್ಲಿ ತಿರುಪತಿಗೆ ಹೋದರೆ ತಾವು ಸಾಕ್ಷಾತ ನಿರಲನ ಅವತಾರ ವೆಂದು ಅನ್ನಮಾಚಾರ್ಯರು ಸೌಜನ್ಯ ದಿಂದ ಹೇಳಿದ್ದರು ಎತ್ತರದ ಮನುಷ್ಯರಿಗೂ ವಿನಯವನ್ನು ಕಲಿಸಿದ ಸಂಸ್ಕೃತಿ ಯಿಂದ ನಾವು ಕಲಿಯಬೇಕಾದ ಪಾಠ ಇದು

## ಆಧಾರ ಗ್ರಂಥಗಳು


1 ಅನ ಮಯ್ಯ ಶ್ರೀಪಾದರಾಯಲು ಆನ ಮಯ ಪುರಂದರದಾಸು (ತೆಲುಗು)—ಡಾ ಕೆ ಸರ್ವೋತ್ತಮನ ಪಾರಿಜಾತ ಪ್ರಚುರಣಲು 1982

2 ಆಂಧ್ರ ವಾಗ್ಗೇಯಕಾರ ಚರಿತ್ರಮು (ತೆಲುಗು)—ಬಿ ರಜನೀಕಾಂತರಾವು ವಿಶಾಲಾಂಧ್ರ ಪಬ್ಲಿಷಿಂಗ ಹೌಸ 2ನೆಯ ಮುದ್ರಣ 1975

3 ಕರ್ನಾಟಕ ಕನ್ನಡ ವಿಷಯ ವಿಶ್ವಕೋಶ—ಮೈಸೂರು ವಿಶ್ವವಿದ್ಯಾನಿಲಯ

4 ಕೀರ್ತನಕಾರರು ಎಚ ಎಸ್ ವೆಂಕಟೇಶಮೂರ್ತಿ — ಸಾಮಾನ್ಯನಿಗಾಗಿ ಸಾಹಿತ್ಯ ಚರಿತ್ರೆ ಬೆಂಗಳೂರು ವಿಶ್ವವಿದ್ಯಾನಿಲಯ 1975

5 ಕ್ಷೇತ್ರಯ್ಯ ಪದಸಾಹಿತ್ಯಂ (ತೆಲುಗು)—ಡಾ ಎಸ ಗಂಗಪ್ಪ ಶಶಿ ಪ್ರಚುರಣಲು 1974

6 ತೆಲುಗು ಭಾಷೆ ಮತ್ತು ಸಾಹಿತ್ಯ—ಡಾ ಆರ್ವಿಯಸ ಸುಂದರಂ ಮೈಸೂರು ವಿಶ್ವವಿದ್ಯಾನಿಲಯ 1982

7 ತೆಲುಗು ಸಾಹಿತ್ಯಮಂದು ದೇಶಿಕವಿತ (ತೆಲುಗು) — ಆರ್ವಿಯಸ್ ಸುಂದರಂ ಮಾನಸ ಸರೋವರ ಪ್ರಚುರಣಲು 1970

8 ರಾಳ ಪಲ್ಲಿ ಪೀಠಿಕಲು (ತೆಲುಗು)—ರಾಳ್ಲಪಳ್ಳಿ ಅನಂತಕೃಷ್ಣಶರ್ಮ ರಾಳ್ಲಪಲ್ಲಿ ಅಭಿನಂದನ ಸಮಿತಿ 1972

# ವಚನ ಸಾಹಿತ್ಯ ಮತ್ತು ದಾಸಸಾಹಿತ್ಯ

**ಪ್ರೊ|| ಎಂ ಜಿ ನಂಜುಂಡಾರಾಧ್ಯ**

ವಚನ ಸಾಹಿತ್ಯ ಮತ್ತು ದಾಸಸಾಹಿತ್ಯಗಳ ಹಿನ್ನೆಲೆಯಲ್ಲಿ ಭಕ್ತಿ ಭಕ್ತಿ ತತ್ವದ ಉಗಮ ಮತ್ತು ವಿಕಾಸವನ್ನು ಕುರಿತು ಒಂದು ಮಾತು ಹೇಳುವುದು ಅಗತ್ಯ ಭಜಸೇವಾಯಾಂ ಎಂಬ ಧಾತು ಪಾಠದಲ್ಲಿನ ಭಜ ಧಾತುವಿಗೆ ಕ್ತಿನ್ ಪ್ರತ್ಯಯವು ಸೇರಿ ಭಕ್ತಿ ಪದವು ನಿಷ್ಪನ್ನವಾಗಿದೆ ಅನನ್ಯತ್ವ ಅಹೇತುಕತ್ವ ಮತ್ತು ಸರ್ವಸಮರ್ಪಣ ಭಾವವೇ ಉತ್ತಮ ಭಕ್ತಿಯಲಕ್ಷಣ ನಿಷ್ಕಾಮವೂ ಅನನ್ಯವೂ ಆಗಿ ಪರಮಾತ್ಮನಲ್ಲಿ ನಿರತಿಶಯ ಪ್ರೇಮದಿಂದ ತುಂಬಿರುವುದೇ ಉತ್ತಮ ಭಕ್ತಿ

ಪೂಜೆ ಮುಂತಾದ ಬಾಹ್ಯಕರ್ಮಗಳಲ್ಲಿ ಮೊಳೆತ ಈ ಭಕ್ತಿ ಬೀಜವು ಕೀರ್ತನ (ಸ್ತುತಿ) ಮೊದಲಾದ ವಾಚಕ ಕರ್ಮರೂಪದಿಂದ ಬೆಳೆದು ಸ್ಮರಣ (ನೆನೆವುದು) ಮುಂತಾದ ಮಾನಸಿಕ ಕರ್ಮಗಳಿಂದ ಸೂಕ್ಷ್ಮರೂಪು ತಳೆದು ಸರ್ವಸಮರ್ಪಣ ಭಾವವನ್ನು ನೆಲೆಗೊಳಿಸುವುದರ ಮೂಲಕ ಪರಿಣಾಮಹೊಂದಿ ಕಡೆಗೆ ಅದು ಆತ್ಮನಿವೇದನದಲ್ಲಿ ಮುಗಿಯುತ್ತದೆ

## ಭಕ್ತಿಯ ಉಗಮ

ವೈದಿಕ ಸಾಹಿತ್ಯದಲ್ಲಿ ಭಕ್ತಿಗೆ ಸ್ಥಾನವಿಲ್ಲವೆಂಬುದು ಕೆಲವರ ಅಭಿಪ್ರಾಯ, ಏಕೆಂದರೆ ವೇದೋಪನಿಷತ್ತುಗಳಲ್ಲಿ ಕ್ರಮವಾಗಿ ಕರ್ಮ ಮತ್ತು ಜ್ಞಾನಗಳಿಗೆ ಪ್ರಾಧಾನ್ಯ ಆದರೂ ಭಕ್ತಿಯ ಲಕ್ಷಣಗಳು ವೇದ ಋಕ್ಕುಗಳಲ್ಲಿ ಹೇರಳವಾಗಿ ಕಂಡು ಬರುತ್ತವೆ

ಓಂ ತ್ವಂ ಹಿ ನಃ ಪಿತಾ ವಸೋ ತ್ವಂ ಮಾತಾ ಶತಕ್ರತೋ
(ಋ ೮ ೯೮–೧೧)

ಸಖ್ಯೇತ ಇಂದ್ರ (ಋ ೧ ೧೧ ೨) ಮುಂತಾದ ಮಂತ್ರಗಳಲ್ಲಿ ಭಗವಂತನನ್ನು ತಂದೆಯಂತೆಯೂ ತಾಯಿಯಂತೆಯೂ ಸಂಬೋಧಿಸಿದೆ ಅಚ್ಛೇಷಾ ಸೋ ಅಕನಿಷಾ ಸಃ (ಋ ೫ ೬೦ ೫) ದ್ಯೌರ್ಮೇ ಪಿತಾ ಜನಿತಾ (ಋ ೧–೧೬೪–೩೩) ನಿಖಿಲ ವಿಶ್ವವನ್ನು ಸೃಷ್ಟಿಸಿರುವ ಪ್ರಕೃತಿ (ಶಕ್ತಿ) ಮತ್ತು ಪರಮಾತ್ಮ (ರುದ್ರ)ರ ಎಲ್ಲ ಜೀವಿಗಳ ಅನಾದಿತಾಯಿ ತಂದೆಗಳು ಮುಂತಾಗಿ ವರ್ಣಿಸುವ ವೇದಗಳು ಭಕ್ತಿಯ ವಿವಿಧ ಹಂತಗಳನ್ನು ಚಿತ್ರಿಸಿವೆ ಆದರೂ ಪೂರ್ವಕಾಂಡಗಳೆನಿಸಿರುವ ವೇದಗಳಲ್ಲಿ ಕರ್ಮಕ್ಕೇ ಪ್ರಾಧಾನ್ಯ

ಅರ್ಜುನ ವೇದಗಳು ಕರ್ಮ ಪ್ರಧಾನವಾದ ತ್ರೈಗುಣ್ಯವನ್ನು ಪ್ರತಿಪಾದಿಸುವವು ನೀನು ನಿಸ್ತ್ರೈಗುಣ್ಯನಾಗು ಎಂದರೆ ಕರ್ಮಮಾರ್ಗದ ಆಚೆಗಿನ ಜ್ಞಾನಮಾರ್ಗವನ್ನು ಹಿಡಿ ಎಂದರೆ ವೇದದ ಅಂತ್ಯವೆನಿಸಿರುವ (ವೇದಾಂತ) ಉಪನಿಷತ ಪ್ರತಿಪಾದಿತ ಜ್ಞಾನಮಾರ್ಗವನ್ನು ಅವಲಂಬಿಸು ಎಂಬ ಆದೇಶ ಈ ಅಂಶವನ್ನು ಸ್ಪಷ್ಟಪಡಿಸುತ್ತದೆ

ಉಪನಿಷತ್ತುಗಳಲ್ಲಿ ಮುಖ್ಯವಾದ ಈಶಾದಿ ಹತ್ತು ಉಪನಿಷತ್ತುಗಳಲ್ಲಿ ಭಕ್ತಿಯ ಕುರುಹುಗಳು ಕಂಡು ಬಂದರೂ ಅಲ್ಲಿ ನೇರವಾಗಿ ಭಕ್ತಿಯನ್ನು ಪ್ರತಿಪಾದಿಸಿಲ್ಲ ಆದರೆ ಅಲ್ಲಿಂದೀಚಿನ ಶ್ವೇತಾಶ್ವತರೋಪನಿಷತ್ತಿನಲ್ಲಿ ಒಮ್ಮೆ ಭಕ್ತಿಪದವು ಉಕ್ತವಾಗಿದೆ

ಯಸ್ಯದೇವೇ ಪರಾ ಭಕ್ತಿಃಯಥಾದೇವೇ ತಥಾಗುರೌ॥ (ಶ್ವೇ ೬ ೨೩)ಗುರು ಮತ್ತು ದೈವಗಳಲಿ ಭಕ್ತಿಯ ನಿಡಬೇಕು ಎಂಬ ಮಾತು ಬರುತ್ತದೆ ಶ್ರದ್ಧಾಭಕ್ತಿಧ್ಯಾನ ಯೋಗಾದವೇಹಿ (ಕೈವಲ್ಯ ೧ ೨) ಮುಂತಾದ ಉಕ್ತಿಗಳು ಭಕ್ತಿಯನ್ನು ಎತ್ತಿಹಿಡಿದಿವೆ ವೇದಾಂತದ ಸಾರವೆನಿಸಿರುವ ಭಗವದ್ಗೀತೆಯಲ್ಲಿ ಭಕ್ತಿಯನ್ನು ಯೋಗವೆಂದು ಕರೆಯಲಾಗಿದೆ ಯಾರು ತಪಸ್ವಿಗಳಲ್ಲವೊ ಭಕ್ತರಲ್ಲವೊ ಅಂಥವರಿಗೆ ಜ್ಞಾನೋಪದೇಶವನ್ನೇ ಮಾಡಬಾರದು (೧೮-೬೭)ಎನಲಾಗಿದೆ ಅದೇ ಗೀತೆಯಲ್ಲಿ ಅನನ್ಯಭಕ್ತಿಯನ್ನು ಗುಹ್ಯತಮ (ಅಧ್ಯಾಯ ೯) ರಾಜಗುಹ್ಯ ಮುಂತಾಗಿ ನಿರ್ದೇಶಿಸಲಾಗಿದೆ ಭಕ್ತಿಯು ವಿದ್ಯೆಗಳಲ್ಲಿ ರಾಜ ಮತ್ತು ಪವಿತ್ರತಮ ಇದಕ್ಕೆ ಶ್ರದ್ಧೆ (ನಂಬಿಕೆ)ಯೇ ತಳಹದಿ ಅನನ್ಯತೆಯಿಂದ ನನ್ನನ್ನು ಉಪಾಸಿಸಿದ ಪಕ್ಷದಲ್ಲಿ ಅವನ ಯೋಗಕ್ಷೇಮ ನನ್ನದು (೯ ೨೨) ಭಕ್ತಿಯಿಂದ ಸಮರ್ಪಿಸಿದ್ದು ಪತ್ರ ಪುಷ್ಪ ಯಾವುದಾದರೂ ಸಾಕು (೯-೨೬) ಐದೂ ಇಂದ್ರಿಯಗಳಿಂದ ನೀನು ಸೇವಿಸುವುದನ್ನೆಲ್ಲ ಮೊದಲು ನನಗೆ ಅರ್ಪಿಸು (೯ ೨೭) ಮುಂತಾದ ಮಾತುಗಳು ಇಲ್ಲಿ ಗಮನಿಸತಕ್ಕವು

ಪರಮಾತ್ಮನಲ್ಲಿ ಮನಸ್ಸನ್ನು ಸ್ಥಿರಗೊಳಿಸುವುದಕ್ಕೆ ಏಕಾಗ್ರತೆ ಅಗತ್ಯ ಏಕಾಗ್ರತೆ ಅಭ್ಯಾಸದಿಂದ ಸಿದ್ಧಿಸುತ್ತದೆ ಅಭ್ಯಾಸಕ್ಕೆ ಜ್ಞಾನ ಅದಕ್ಕೆ ಧ್ಯಾನ ಮತ್ತು ಕರ್ಮಫಲತ್ಯಾಗರೂಪವಾದ ಭಕ್ತಿಗಳು ಕಾರಣ ಭಕ್ತಿಯಿಂದ ಚಿರಶಾಂತಿ ಎಂದು ಗೀತೆ ನಿರ್ವಚಿಸಿದೆ

ಮುಂದೆ ನಾರದ ಮತ್ತು ಶಾಂಡಿಲ್ಯ ಋಷಿಗಳ ಭಕ್ತಿ ಸೂತ್ರಗಳಲ್ಲಿ ಪರಮೇಶ್ವರನಲ್ಲಿ ಇಟ್ಟಿರುವ ಪರಾನುರಕ್ತಿಯೇ ಭಕ್ತಿ ಎನ್ನಲಾಗಿದೆ

## ಭಕ್ತಿಯ ಮೂಲ ಆಗಮಗಳು

ಭಾರತದ ಇತಿಹಾಸವನು ಶೋಧಿಸಿರುವ ಅನೇಕ ವಿದ್ವಾಂಸರ ಅಭಿಪ್ರಾಯದಂತೆ ವಿಶೇಷತಃ ಭಕ್ತಿಯು ಆಗಮ ಸಂಸ್ಕೃತಿಯಿಂದ ಮೂಡಿ ಬಂದಿರುವುದಾಗಿ ವೇದ್ಯವಾಗಿದೆ ವೇದಕಾಲಿಕ್ಕಿಂತ ಹಿಂದಿನದೆನಿಸಿರುವ ದ್ರಾವಿಡ ಸಂಸ್ಕೃತಿಯಲ್ಲಿ ಭಕ್ತಿಗೆ ಅಗ್ರಸ್ಥಾನವಿತ್ತೆಂದು ತಿಳಿದು ಬಂದಿದೆ

ಮೊಹೆಂಜೊ ದಾರೊ ಕಣಿವೆಯ ಅಗೆತಗಳಲ್ಲಿ ದೊರೆತಿರುವ ಅವಶೇಷಗಳಿಂದ ವೇದಪೂರ್ವದವರೆನಿಸಿರುವ ಭಾರತನಿವಾಸಿಗಳು ಶಿವಾರ್ಚಕರಾಗಿದ್ದರೆಂದೂ ಅವರು ಲಿಂಗರೂಪದಿಂದ ಭಗವಂತನ ದಾ ನಪೂಜೆಗಳಲ್ಲಿ ನಿರತರಾಗಿದ್ದರೆಂದೂ ಹೇಳಲಾಗಿದೆ ಅವರು ತಮ್ಮ ಆರಾಧ್ಯ ಮೂರ್ತಿಯಾದ ರುದ್ರನಿಗಿದ್ದ ಹಣೆಗಣ್ಣು ತೃತೀಯ ನೇತ್ರ ಸಂಕೇತವಾದವ್ಯತ್ಕುಂಜಯವ್ವ ಸಿದ್ದಿ ಗಾಗಿ ತಪೋಮಗ್ನರಾಗಿದ್ದರೆಂದೂ ಅಲ್ಲಿ ದೊರೆತಿರುವ ಕೆಲವು ಪ್ರತೀಕಗಳಿಂದ ಊಹಿಸಲಾಗಿದೆ

ಮೊದಮೊದಲು ಭಾರತವನು ಪ್ರವೇಶಿಸಿದ ಅಗ್ನಿಯ ಉಪಾಸಕರಾದ ಆರ್ಯರು ಭಕ್ತಿಗೆ ಪ ಹತ್ವಕೊಟ್ಟಿರಲಿಲ್ಲ ಯಜ್ಞ–ಯಾಗಾದಿ ಕರ್ಮವೇ ಅವರಿಗೆ ಮುಖ್ಯವಾಗಿತ್ತು ಯಜ್ಞಗಳಲ್ಲಿ ಪಶುಹಿಂಸೆ ನಡೆಯುತ್ತಿತ್ತು ಇವೇ ಮೊದಲಾದ ಅನೇಕ ಭಿನ್ನಾಭಿಪ್ರಾಯಗಳುಂಟಾಗಿ ಆರ್ಯ–ದ್ರಾವಿಡ ಕದನಗಳು ನಡೆಯುತ್ತಿದ್ದ ಬಗ್ಗೆ ವೇದಯುಕ್ಕು ಪುರಾಣಗಳಲ್ಲಿ ಅನೇಕ ವರ್ಣನೆಗಳಿವೆ ಸಹಸ್ರಾರುವರ್ಷಗಳವರೆಗೆ ನಡೆದ ಈ ಹೋರಾಟದ ಫಲವಾಗಿ ಆರ್ಯರು ದ್ರಾವಿಡರಲ್ಲಿದ್ದ ಅನೇಕ ಉದಾತ್ತ ಗುಣಗಳನ್ನು ಸ್ವೀಕರಿಸಿದರು ಅನಂತರ ಸಂಕಲಿತವಾದ ಯಜುರ್ವೇದ ತೈತ್ತಿರಿಯಬ್ರಾಹ್ಮಣ ಮತ್ತು ಉಪನಿಷತ್ತುಗಳಲ್ಲಿ ಶಿವ–ರುದ್ರೋಪಾಸನೆ ಬೆಳೆದು ಶ್ವೇತಾಶ್ವರ ಮತ್ತು ಕೈವಲ್ಯಾದಿಗಳಲ್ಲಿ ಭಕ್ತಿ ಪದಾರ್ಪಣಮಾಡಿದಂತೆ ತಿಳಿದು ಬರುತ್ತದೆ ವ ಒಂದೆ ರಚಿತವಾದ ಭಗವದ್ಗೀತೆಯಲ್ಲಿ ಶಿವಾಗಮಗಳ ನೂರಾರು ಶ್ಲೋಕಗಳು ಸಮಾವೇಶವಾಗಿರುವುದು ಇದಕ್ಕೆ ನಿದರ್ಶನ

## ವೈದಿಕ ಮತಗಳ ಮೇಲೆ ಭಕ್ತಿಯಪ್ರಭಾವ

ಉಪನಿಷತ್ತು ಭಗವದ್ಗೀತೆ ಮತ್ತು ಬ್ರಹ್ಮಸೂತ್ರಗಳೆಂಬ ಪ್ರಸ್ಥಾನದ ಮೇಲೆ ಅದ್ವೈತ ವಿಶಿಷ್ಟಾದ್ವೈತ ವ ತ್ತು ದ್ವೈತ ಮತಗಳನ್ನು ಸ್ಥಾಪಿಸಿದ ಆಚಾರ್ಯರು ಸಾಧನ ಮಾರ್ಗ ಭಕ್ತಿಯನ್ನು ಪುರಸ್ಕರಿಸಿದ್ದಾರೆ ಅವರಲ್ಲಿ ಭಗವಾನ್ ಶಂಕರರು ಮೋಕ್ಷಕ್ಕೆ ಕಾರಣವಾದ ಸಾಮಗ್ರಿಯಲ್ಲಿ ಭಕ್ತಿಯೇ ಶ್ರೇಷ [1] ಎಂದಿದ್ದಾರೆ ವಿಶಿಷ್ಟಾದ್ವೈತ ಸಿದ್ಧಾಂತ ಸ್ಥಾಪಕರಾದ ಆಚಾರ್ಯ ಲಕ್ಷ್ಮಣ ಸೂರಿಗಳು ಪರಮಾನಂದ

1 ಮೋಕ್ಷಕಾರಣ ಸಾಮಗ್ರ್ಯಾಂ ಭಕಿ ರೇವ ಗರೀಯಸೀ

ಪ್ರದಾಯಕವಾದ ಜ್ಞಾನವಿಶೇಷವೇ ಭಕ್ತಿ [1] ಎಂದಿದ್ದಾರೆ ಮೇಲಾಗಿ ಈ ಮತದಲ್ಲಿ ತನ್ನ ಎಲ್ಲ ಹೊಣೆಯನ್ನು ಭಗವಂತನಿಗೆ ಒಪ್ಪಿಸುವ ಭರನ್ಯಾಸ ತತ್ವವು ಭಕ್ತಿಯಿಲ್ಲದೆ ಸಿದ್ಧಿಸೀತೆ! ಪೂಜ್ಯರಾದ ಮಧ್ವಾಚಾರ್ಯರಾದರೆ ಉಪಾಸ್ಯನಾದ ಭಗವಂತ ಉಪಾಸಕನು ನಿರಂತರವೂ (ಮುಕ್ತಿದೆಸೆಯಲ್ಲಿಯೂ ಕೂಡ) ಭಕ್ತಿಯಿಂದ ಸೇವೆ ಸಲ್ಲಿಸುತ್ತಾನೆ

ಆಗಮ ಸಂಸ್ಕೃತಿಯ ಕವಲುಗಳಂತಿರುವ ಶೈವ ವೀರಶೈವ ಮತ್ತು ಪಾಂಚರಾತ್ರ ವೈಖಾನಸ ಹಾಗೂ ತಂತ್ರಸಾರ ಆಗಮಗಳು ಭಕ್ತಿಯ ಆಧಾರದ ಮೇಲೆಯೇ ನಿಂತಿವೆ ವಿಶೇಷತಃ ವೀರಶೈವದಲ್ಲಿ ಭಕ್ತಿಯು ಪರಶಿವಶಕ್ತಿಯೇ ಆಗಿದೆ ಅದು ಭಕ್ತನನ್ನು ಉದ್ಧರಿಸಲು ತಾನೆ ಭಕ್ತಿಯಾಗಿ ಪರಿಣಮಿಸಿ ಶ್ರದ್ಧೆ ನಿಷೆ ಅವಧಾನ ಅನುಭವ ಆನಂದ ಮತ್ತು ಸಮರಸ ಎಂಬ ಆರು ಹಂತಗಳಲ್ಲಿ ಭಕ್ತನನು ಮೇಲೆತ್ತಿ ಪರಶಿವ ಸಾಮರಸ್ಯ ರೂಪ ಮುಕ್ತಿಯನು ಹೊಂದಿಸುತ್ತದೆ

ಸರ್ವತ್ರ ಭಕ್ತಿರೇಕೈವ ಭಕ್ತಾನಾಂ ಮುಕ್ತಿ ಸಾಧನಂ (ಪಾರ ೧೯-೬೧)
ಭಕ್ತ್ಯಾ ಸಂತಾರಯೇತ್ಸರ್ವಮಾತ್ಮಾನಂ ವಶಮಾತ್ಮನಃ।
ಭಿತ್ವಾಚರಾಚರಂ ವಿಶ್ವಂ ಶಿವೋಭೂತ್ವಾ ಸುಖೀಭವೇತ್॥
(ಪಾರ ೧೯-೬೪)

ಭಕ್ತಿಯಿಂದ ಎಲ್ಲರನೂ ಭವಸಾಗರದಿಂದ ದಡಗಾಣಿಸಬಹುದು ಆತ್ಮವನ್ನು ವಶಪಡಿಸಿಕೊಂಡು ಚರಾಚರ ವಿಶ್ವವನ್ನು ಭೇದಿಸಿ ಸ್ವಯ ಶಿವನೇ ಆಗಿ ಪರಮಾನಂದವನ್ನು ಅನುಭವಿಸಬಹುದು ಎಂದ ಮೇಲೆ ಭಕ್ತರಿಗೆ ಅಸಾಧ್ಯವಾದದ್ದು ಯಾವುದು ?

## ಭಕ್ತಿ ಪ್ರಭೇದಗಳು

ಭಗವಂತನ ವರ್ಣನವನು ಕೇಳುವುದು ಸ್ತುತಿಸುವುದು ಮತ್ತೆ ಮತ್ತೆ ನೆನೆವುದು ಪಾದಸೇವ ಪೂಜೆ, ವಂದನ ದಾಸ್ಯ ಗೆಳೆತನ ಕಡೆಗೆ ತನ್ನನ್ನೇ ಅವನಿಗೆ ನಿವೇದಿಸಿಕೊಳ್ಳುವುದು (ಸರ್ವಾರ್ಪಣ) ಎಂಬ ಒಂಬತ್ತು [2] ಹಂತಗಳಲ್ಲಿ ಸಾಧಕರು ಭಗವಂತನ ಸಾನ್ನಿಧ್ಯವನ್ನು ಪಡೆದು ಸುಖಿಸುತ್ತಾರೆ

ಭಕ್ತಿಯು ಬಾಹ್ಯ ಮತ್ತು ಅಂತರ ಎಂದು ಎರಡು ವಿಧ ಮನಸ್ಸಿನ ಪ್ರಸನ್ನತೆ ಮತ್ತು ಭಕ್ತಿಗಳಿಗೆ ಬೀಜಾಂಕುರ ಸಂಬಂಧವುಂಟು ನಿಜವಾದ ಭಕ್ತನ ಮುಖದಲ್ಲಿ ಎಂದೆಂದಿಗೂ ಐಹಿಕವಿಷಯ ವಾಗಿ ಉದ್ವಿಗ್ನತೆಯಿರುವುದಿಲ್ಲ ಏಕೆಂದರೆ ತನ್ನ

---

1 ನಿರತಿಶಯಾನಂದಪ್ರಿಯಾನನ್ಯಪ್ರಯೋಜನ ಸಕಲೇತರ ವೈತೃಷ್ಣ್ಯವತ ಜ್ಞಾನವಿಶೇಷ ಭಕ್ತಿಃ

2 ಶ್ರವಣಂ ಕೀರ್ತನಂ ಶಂಭೋಃ ಸ್ಮರಣಂ ಪಾದಸೇವನಂ
ಅರ್ಚನಂ ವಂದನಂ ದಾಸ್ಯಂ ಸಖ್ಯಮಾತ್ಮ ನಿವೇದನಂ ॥ (ಸಿ ಶಿ ಮಣಿ ಪ ೯)

ಯೋಗಕ್ಷೇಮವೆಲ್ಲ ಭಗವಂತನದೇ ಎಂಬ ದೃಢವಿಶ್ವಾಸವು ಅವನಿಗೆ ಅಳವಟ್ಟಿರುತ್ತದೆ ಬಸವಣ್ಣನವರು ಹೇಳುವಂತೆ

ಎನ್ನ ನಾಮಕ್ಷೇಮ ನಿಮ್ಮದಯ್ಯಾ
ಎನ್ನ ಹಾನಿವೃದ್ಧಿ ನಿಮ್ಮದಯ್ಯ
ಎನ್ನ ಮಾನಾಪಮಾನ ನಿಮ್ಮದಯ್ಯ
ಬಳ್ಳಿಗೆ ಕಾಯಿ ದಿಮ್ಮಿತ್ತೆ ಕೂ ಸಂ ದೇವಾ

ಎನ್ನುತ್ತಾರೆ ಅವರು ಅಷ್ಟೇ ಅಲ್ಲ–

ತಂದೆ ನೀನು ತಾಯಿ ನೀನು ಬಂಧು ನೀನು ಬಳಗ ನೀನು
ನೀನಲ್ಲದೆ ಮತ್ತಾರೂ ಇಲ್ಲವಯ್ಯಾ ! ಕೂ ಸಂ ದೇವಾ ಹಾಲಲ್ಲದ್ದು
ನಿರಲ್ಲದ್ದು !

ಎಂಬ ಭಾವ ಭಕ್ತನಿಗೆ ಅಳವಟ್ಟವೆ ಲೆ ಆತನಿಗೆ ಇನ್ನಾತರ ಭಯ! ಹರಿದಾಸರ ಉಕ್ತಿಗಳಲ್ಲಿಯೂ ಕೂಡ ಈ ದೃಢ ವಿಶ್ವಾಸವನ್ನು ನಾವು ಕಾಣುತ್ತೇವೆ ವಚನ ವಾಙ್ಮಯ ಹಾಗೂ ದಾಸಸಾಹಿತ್ಯಗಳಿಗೆ ನಿಕಟಸಂಬಂಧವಿದೆ ಇವೆರಡೂ ಸಾಹಿತ್ಯಗಳ ಸಂಬಂಧವನ್ನು ಗುರ್ತಿಸುವುದು ಈ ಲೇಖನದ ಗುರಿ

## ದಾಸಸಾಹಿತ್ಯದ ಹಿನ್ನೆಲೆ

ಹನ್ನೆರಡನೆಯ ಶತಮಾನದಲ್ಲಿ ವೀರಶೈವ ಪ್ರಬಲಿಸಿದ ವಿಷಯ ಸುಪ್ರಸಿದ್ಧ ವೀರಶೈವ ಶಿವಾಗಮ ಮೂಲದಿಂದ ರೂಪುಗೊಂಡದ್ದು ವೀರಶೈವಕ್ಕೆ ಆಗಮಗಳು ಪರಮ ಪ್ರಮಾಣ ವೇದವು ಗೌಣ ಆದ್ದರಿಂದಲೇ ಅದನ್ನು ತಾಂತ್ರಿಕ ವೈದಿಕ ಎಂದು ಕರೆಯಲಾಗಿದೆ ಶಿವದೀಕ್ಷೆ ವೀರಶೈವದ ಮುಖ್ಯಸಂಸ್ಕಾರ ಶಿವನಕೃಪೆ (ಶಕ್ತಿಪಾತ)ಗೆ ಪಾತ್ರವಾದ ಯಾವುದೇ ವರ್ಣದವರಾಗಲಿ ಆಶ್ರಮದವರಾಗಲಿ ಸ್ತ್ರೀ–ಪುರುಷಭೇದವಿಲ್ಲದೆ ಶಿವದೀಕ್ಷೆ ಪಡೆಯಬಹುದು ಇದರಿಂದ ಹುಟ್ಟಿಗೆ ಪ್ರಾಧಾನ್ಯವನ್ನು ಕೊಟ್ಟಿದ್ದ ವರ್ಣಾಶ್ರಮಗಳನ್ನು ಅವಲಂಬಿಸಿದ್ದ ವೈದಿಕ ಮತಗಳ ಮೇಲೆ ಬಲವಾದ ಆಘಾತವಾಯಿತು ಸರ್ವಸಮಾನತೆಯನ್ನು ಸಾರುತ್ತಿದ್ದ ಶಿವ ಶರಣ ಚಳುವಳಿಯ ಪರಿಣಾಮ ಜನಸಾಮಾನ್ಯರ ಮೇಲೆ ಆಗಿ ಅವರು ಶರಣ ಧರ್ಮವನ್ನು ಆಶ್ರಯಿಸತೊಡಗಿದ್ದರು ಬಸವಣ್ಣನವರು ಸ್ಥಾಪಿಸಿದ ಅನುಭವ ಮಂಟಪದಲ್ಲಿ ಎಲ್ಲ ಮತ ಪಂಥಗಳಿಗೆ ಸೇರಿದ ಸಾಧಕರೂ ಸ್ತ್ರೀ–ಪುರುಷ ಭೇದವಿಲ್ಲದೆ ಒಂದೆಡೆ ಸೇರಿ ಆಧ್ಯಾತ್ಮ ವಿಚಾರಗೋಷ್ಠಿಗಳನು ನಡೆಸುತ್ತಿದ್ದರು ಅಲ್ಲಮಪ್ರಭು ಬಸವ ಚೆನ್ನಬಸವ ಸಿದ್ಧರಾಮ ಮುಂತಾದ ಶರಣರು ಮತ್ತು ನೀಲಾಂಬಿಕೆ ಗಂಗಾಂಬಿಕೆ ಅಕ್ಕಮಹಾದೇವಿ ಲಕ್ಕಮ್ಮ ಮಹಾದೇವಿಯಮ್ಮ ಮುಂತಾದ ಶಿವಶರಣೆಯರು ಉಪನಿಷತ್ಕಾಲದ ಗಾರ್ಗೀ ಮೈತ್ರೇಯಿ ಮುಂತಾದ ಋಷಿಪತ್ನಿಯರಂತೆ ಆಧ್ಯಾತ್ಮ ಜಿಜ್ಞಾಸೆಯಲ್ಲಿ

ಪರಿಣತಿಯುಳ್ಳವರಾಗುತ್ತಿದ್ದರು ಇದರಿಂದ ಪ್ರಭಾವಿತರಾದ ವೈದಿಕ ಮತಾನುಯಾಯಿ ಗಳೂ ಸಹ ವರ್ಣ ದರ್ಪದ ಬೇಲಿಯನು ಕತ್ತರಿಸಿ ಗೋಡೆಗಳನು ಕೆಡವಿ ಆಕಡೆ ಆಕರ್ಷಿತರಾಗುತ್ತಿದ್ದರು ಹೀಗಾಗಿ ವೈದಿಕ ಧರ್ಮಗಳಮೇಲೆ ಬಲವಾದ ಆತಂಕ ವೇರ್ಪಟ್ಟಿತ್ತು ಅನೇಕ ಕಂದಾಚಾರಗಳ ಆಕರವಾಗಿದ್ದ ವೈದಿಕ ಮತಗಳಲ್ಲಿ ಮಹಾದ್ಯ ಉಚ್ಚನೀಚಭಾವ ಅಂಧ ಎನ್ನತೆ ಹಾಗೂ ಡಂಭಾಚಾರಗಳನು ಕಂಡ ಜನಸಾಮಾನ್ಯರು ಅವರನು ತಿರಸ್ಕರದ ದೃಷ್ಟಿಯಿಂದ ಕಾಣತೊಡಗಿದ್ದರು ಇವೆಲ್ಲವನ್ನೂ ಹಿಮ್ಮೆಟ್ಟಿಸಿ ವೈದಿಕ ಮತಗಳಲ್ಲಿ ನವಚೇತನವನ್ನುಂಟುಮಾಡುವ ಆಚಾರ್ಯ ಪುರುಷನೊಬ್ಬನ ಅವತಾರಕ್ಕೆ ಸಾಕಷ್ಟು ಹಿನ್ನೆಲೆ ಏರ್ಪಟ್ಟಿತ್ತು ಇಂಥ ಪರ್ವಕಾಲದಲ್ಲಿಯೇ ಕರ್ನಾಟಕ ದಲ್ಲಿ ಮಧ್ವಾಚಾರ್ಯರು ಜನ್ಮಧಾರಣಮಾಡಿದರು

ಹನ್ನೆರಡನೆಯ ಶತಮಾನದ ಕಡೆಯಲ್ಲಿ ಉಡುಪಿ ಹತ್ತಿರದ ಶಿವಳ್ಳಿ ಎಂಬಲ್ಲಿ ಬಡಬ್ರಾಹ್ಮಣ ಕುಟುಂಬದಲ್ಲಿ ಮಧ್ವಾಚಾರ್ಯರು ಹುಟ್ಟಿದರು ಮಧ್ವಾ ಚಾರ್ಯರ ತಂದೆ ಮಧ್ಯಗೇಹಭಟ್ಟ ಬಾಲ್ಯದಲ್ಲಿಯೇ ಅಲೌಕಿಕ ಬ್ರಹ್ಮ ವರ್ಚಸ್ಸಿಯಾದ ಈ ಬಾಲಕ ಪ್ರಗಲ್ಭ ಪಾಂಡಿತ್ಯವನ್ನು ಗಳಿಸಿ ಸಂನ್ಯಾಸಾಶ್ರಮವನ್ನು ಸ್ವೀಕರಿಸಿದ ಮಹಾಮೇಧಾವಿಯಾದ ಈತ ಆಗ್ಗೆ ಪ್ರಚಲಿತವಾಗಿದ್ದ ಅದ್ವೈತಮತ ವನ್ನು ಖಂಡಿಸಿ ದ್ವೈತ ಸಿದ್ಧಾಂತವನ್ನು ಸ್ಥಾಪಿಸಿದ ಆತನ ಯುಕ್ತಿಯುಕ್ತವಾದ ಉಪದೇಶಗಳನ್ನು ಕೇಳಿ ಎಷ್ಟೋ ಮಂದಿ ಪಂಡಿತರು ಸಂನ್ಯಾಸಿಗಳು ಆತನ ಅನು ಯಾಯಿಗಳಾದರು ನಾಡಿನಲ್ಲೆಲ್ಲ ಸಂಚರಿಸಿ ವಾಕ್ಯಾರ್ಥಗಳನ್ನು ನಡೆಸಿ ದಿಗ್ಗಂತಿ ಪಂಡಿತರನ್ನು ಗೆದ್ದು ದ್ವೈತ ಸಿದ್ಧಾಂತವನು ಸ್ಥಿರಗೊಳಿಸಿದ ಮುಖ್ಯವಾಗಿ ಆತನ ಸಿದ್ಧಾಂತ ಸಾರವನ್ನು ಹೀಗೆ ಸಂಗ್ರಹಿಸಬಹುದು

ಈ ಮತದಲ್ಲಿ ಹರಿಯು ಸರ್ವಶ್ರೇಷ್ಠ ಜಗತ್ತು ಮಿಥ್ಯೆಯಲ್ಲ ಅದು ಸತ್ಯ ಜೀವರು ತತ್ತ್ವಶಃ ಬೇರೆ ಬೇರೆ ಅವರೆಲ್ಲ ಹರಿಯ ಅನುಚರರು ಅವರಲ್ಲಿಯೂ ಪರಸ್ಪರ ಉಚ್ಚ ನೀಚ ಭಾವಗಳುಂಟು ನೈಜ ಸುಖಾನುಭವವೇ ಮುಕ್ತಿ ಅದಕ್ಕೆ ಸಾಧಕವಾದದ್ದು ಭಕ್ತಿ ಈ ಸಿದ್ಧಾಂತಕ್ಕೆ ಪ್ರತ್ಯಕ್ಷ ಅನುಮಾನ ಮತ್ತು ಶಬ್ದ ಎಂಬ ಮೂರೇ ಪ್ರಮಾಣಗಳು

ಜನಸಾಮಾನ್ಯರ ಅನುಭವಕ್ಕೆ ನಿಲುಕುವ ಈ ಸಿದ್ಧಾಂತವು ಬಹು ಬೇಗ ಜನ ಪ್ರಿಯವಾಗತೊಡಗಿತು ಭಗವಂತನ ಧರ್ಮ ಪತ್ನಿಯಾದ ಲಕ್ಷ್ಮಿಯೇ ಶ್ರೀಹರಿಯ ಪ್ರಥಮ ದಾಸಿ ಬ್ರಹ್ಮ ಮೊದಲಾದ ದೇವತೆಗಳೆಲ್ಲರೂ ಅವನ ದಾಸರೇ ಮಧ್ವ ರಲ್ಲಿನ **ದಾಸಕೂಟ**ಕ್ಕೆ ಇದೇ ಮೂಲವೆನಿಸಿತು ಈ ಮತ ತತ್ತ್ವಗಳನ್ನು ಹೃದ್ಗತ ಮಾಡಿಕೊಂಡು ಸಂಸ್ಕೃತದಲ್ಲಿನ ಪ್ರಸ್ಥಾನತ್ರಯಭಾಷ್ಯಗಳನ್ನು ಅಭ್ಯಸಿಸಿ ಇತರ ಸಿದ್ಧಾಂತಿಗಳೊಂದಿಗೆ ಚರ್ಚೆಗಳನ್ನು ನಡೆಸುತ್ತಿದ್ದ ವಿದ್ವತ್ ಗೋಷ್ಠಿ **ವ್ಯಾಸಕೂಟ**

ವೆನಿಸಿ ತು ದಾಸಕೂಟದವರಿಗೆ ಜನಸಾಮಾನ್ಯರ ಮುಖ್ಯವಾಗಿ ವೆಯಾದ ಕನ್ನಡವೇ ಮಾಧ್ಯಮವಾಯಿತು ಇವರು ಮಧ್ವಮತ ತತ್ತ್ವಗಳನು ಕನ್ನಡದಲ್ಲಿ ಕೀರ್ತನೆ ಸುಳಾದಿ ಮತ್ತು ಉಗಾಭೋಗವೆಂಬ ಮೂರು ಬಗೆಯ ಧಾಟಿಗಳಲ್ಲಿ ಪದಗಳನು ರಚಿಸಿ ಪ್ರಚಾರ ಮಾಡತೊಡಗಿದರು ಸ್ವಯಂ ಮಧ್ವಾಚಾರ್ಯರೇ ಆನಂದತೀರ್ಥ ಪರಾನಂದವರದ ಎಂಬ ಅಂಕಿತದಿಂದ ಕನ್ನಡದಲ್ಲಿ ಅನೇಕ ಕೀರ್ತನೆಗಳನ್ನು ರಚಿಸಿ ದಂತೆ ಪ್ರತೀತಿಯಿದೆ ಅಷ್ಟೇ ಅಲ್ಲದೆ ಇವರು ಜನಜಾಗ್ರತಿಯನ್ನುಂಟು ಮಾಡಲು ತುಳು ಭಾಷೆಯಲ್ಲಿಯೂ ಕೆಲವು ಕೀರ್ತನೆಗಳನ್ನು ರಚಿಸಿದ್ದರೆಂದು ಹೇಳಲಾಗಿದೆ ಮಧ್ವಾಚಾರ್ಯರಿಗೆ ಹಿಂದೆ ಅಚಲಾನಂದದಾಸರು (ಕ್ರಿ. ಶ. ೮೭೮) ಎಂಬುವರು ಅಚಲಾನಂದವಿಠಲ ಅಂಕಿತದಿಂದ ದಾಸವಾಙ್ಮಯವನು ಆರಂಭಿಸಿದಂದಾಗಿ ಹೇಳಿಕೆಯಿದೆ

## ಕೀರ್ತನೆ–ಸುಳಾದಿ ಮತ್ತು ಉಗಾಭೋಗ ಸ್ವರೂಪಗಳು

ರಾಗ–ತಾಳಗಳಿಂದ ಕೂಡಿದ **ಕೀರ್ತನೆ**ಯಲ್ಲಿ ಪಲ್ಲವಿ ಅನುಪಲ್ಲವಿ ಮತ್ತು ನುಡಿಗಳೆಂಬ ಮೂರು ಅಂಗಗಳಿರುತ್ತವೆ ನುಡಿಗಳಿಗೆ ಇಷ್ಟೇ ಇರಬೇಕೆಂಬ ಮಿತಿ ಯಿಲ್ಲ ಇಲ್ಲಿ ಮಾತ್ರಾ ನಿಯಮಕ್ಕಿಂತಲೂ ಲಯಕ್ಕೆ ಆದ್ಯತೆ ಈ ಬಗೆಯ ಕೀರ್ತನೆ ಗಳು ಬಸವಾದಿ ಶಿವಶರಣರಿಂದ ಈ ಹಿಂದೆಯೇ ಆರಂಭವಾಗಿದ್ದವು [1]

**ಸುಳಾದಿಗಳು** ವಚನಕ್ಕೂ ಕೀರ್ತನೆಗಳಿಗೂ ಮಧ್ಯವರ್ತಿಯಾದ ಲಯವನ್ನು ಹೊಂದಿರುತ್ತದೆ ಸುಳಾದಿ ಎಂಬುದು ಸೂಡಾದಿ ಎಂಬುದರ ಪರ್ಯಾಯ ಪದ ಧ್ರುವ ಮುಂತಾದ ಅಷ್ಟ ತಾಳಗಳಿಗೆ ಸೂಡಾದಿ ಎಂಬ ಹೆಸರಿರುವುದಾಗಿ ನರ್ತನ ನಿರ್ಣಯ ದಲ್ಲಿ ಹೇಳಿದೆ

**ಉಗಾಭೋಗವು** ಉದ್ಗ್ರಾಹ ಮತ್ತು ಆಭೋಗ ಎಂಬ ಎರಡು ಪದಗಳ ಕೂಡು ನುಡಿ – ಉದ್ಗ್ರಾಹ ಮೇಲಾಪಕ ಧ್ರುವ ಅಂತರ ಮತ್ತು ಆಭೋಗ ಎಂಬಿವುಗಳು ಉಗಾಭೋಗದ ಐದು (ಧಾತು) ಹಂತಗಳು ಒಂದು ರಾಗವನ್ನು ಗ್ರಹಿಸಿ ಮೇಳದಲ್ಲಿ ನಿಲ್ಲಿಸಿ ಧ್ರುವಗೊಳಿಸಿ ಸಮೀಪ ರಾಗಗಳ ಸೂಕ್ಷ್ಮ ಸ್ಥಾನದಲ್ಲಿ ವಿನ್ಯಾಸಗೊಳಿಸಿ ರಾಗ ಸಮಾರೋಪಣ ಮಾಡುವುದು ಮಾತ್ರವಲ್ಲದೆ ಲಲಿತ ಸಾಹಿತ್ಯ ದಲ್ಲಿ ಅದನ್ನು ಪೂರ್ಣ ಮಾಡಿದರೆ ಉಗಾ ಭೋಗ ವೆನಿಸುತ್ತದೆ ಈ ಉಗಾ ಭೋಗಗಳು ತಮ್ಮ ಸ್ವರೂಪದಲ್ಲಿ ಬಹು ಮಟ್ಟಿಗೆ ಶಿವಶರಣರ ವಚನಗಳನ್ನು ಹೋಲುತ್ತವೆ

---

1 ಜನಪ್ರಿಯ ಕನ್ನಡ ಸಾಹಿತ್ಯ ಚರಿತ್ರೆ (ಪುಟ ೪೦) ೧೯೭೪ ಶ್ರೀಗಳಾದ ತ ಸು ಶಾಮರಾಯ ಮತ್ತು ಮೋ ರಾಜೇಶ್ವರಯ್ಯ ವಿರಚಿತ

2 ಶಿವದಾ ಗೀತಾಂಜಲಿ ಈ ದಿಸೆಯಲ್ಲಿ ಅವಲೋಕನೀಯ—ಸಂ ಎಲ್ ಬಸವರಾಜು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆ ೧೯೭೩

## ಹರಿದಾಸವಾಙ್ಮಯ ಮತ್ತು ವಚನಸಾಹಿತ್ಯ

ವಚನ ಸಾಹಿತ ದಲ್ಲಿ ಷಂತತತ್ತ್ವ ಪ್ರಚಾರಕ್ಕೆ ಆದ್ಯತೆ ಇರುವಂತೆ ದಾಸ ಸಾಹಿತ್ಯದಲಿಯೂ ದ್ವೈತತತ್ತ್ವ ಪ್ರತಿಪಾದನೆ ಮುಖ್ಯ ಸಮಾಜದಲಿನ ಲೋಪ ದೋಷಗಳನು ವಿಡಂಬನ ಮಾಡುವಲ್ಲಿ ಉಭಯ ಸಾಹಿತ್ಯಗಳು ಸ ಕಸ್ಟು ಪ್ರತಿಪಾದಿಸಿವೆ ವಚನ ಸಾಹಿತ್ಯದಲ್ಲಿ ಶಿವಪಾರಮ್ಯ ವಿರುವಂತೆ ದಾಸ ಸಾಹಿತ್ಯವು ಹರಿಪಾರಮ್ಯವನು ಸಾಧಿಸಿದೆ ಎರಡೂ ವಾಙ್ಮಯಗಳಲ್ಲಿ ಮುಖ್ಯವಾಗಿ ಭಕ್ತಿ ಸಾಧನ ಮಾರ್ಗ ಅಲ್ಲಲ್ಲಿ ಕೆಲ ಕೆಲವು ಹೋಲಿಕೆಗಳನು ನಿದರ್ಶಿಸಿ ಹರಿದಾಸ ಸಾಹಿತ್ಯದ ವೈಶಿಷ್ಟ್ಯವನ ವ ತ್ತು ಹರಿದಾಸರ ಪವಿತ್ರ ಜಿ ವನ ಲೂ ಕಾರುಣ್ಯ ನಿವ ಗಲಾಂತಃಕರಣಾದಿಗಳನ್ನ ಸಂಕ್ಷೇಪವಾಗಿ ಸಮೀಕ್ಷಿಸೋಣ

ದಾಸಕೂಟವು ಶ್ರೀಮನ್ ಮಧ್ವಾಚಾರ್ಯರಿಂದಲೇ ಆರಂಭವಾಯಿತೆಂದು ಹಿಂದೆ ತಿಳಿಸಲಾಯಿತು ಅವರ ಶಿಷ್ಯ ನರಹರಿತೀರ್ಥ ಈತನ ಪೂರ್ವಾಶ್ರಮದ ಹೆಸರು ಸ್ವಾಮಿ ಶಾಸ್ತ್ರಿ ಒರಿಸಾ ದ ಗಜಪತಿ ರಾಜ (ಕ್ರಿ ಶ 1280) ರಲ್ಲಿ ಅಧಿಕಾರಯಾಗಿದ್ದ

ಮಧ್ವಾಚಾರ್ಯರು ಬದರಿಯಾತ್ರೆಯಿಂದ ಹಿಂದಿರುಗಿ ಬರುವಾಗ ಒರಿಸ್ಸಾದಲ್ಲಿ ಇಬ್ಬರ ಭೇಟಿಯಾಯಿತು ಶಾಸ್ತ್ರಿಯು ಆಚಾರ್ಯರ ಉಪದೇಶಕ್ಕೆ ಶರಣಾಗಿ ಸಂನ್ಯಾಸವನ್ನು ಸ್ವೀಕರಿಸಿದ ಆಚಾರ್ಯರು ಈತನಿಗೆ ನರಹರಿತೀರ್ಥ ಎಂಬ ನಾಮಕರಣ ಮಾಡಿದರು ಈತ ರಚಿಸಿದ **ಎರಡು ಕೀರ್ತನೆ** ಗಳು ಮಾತ್ರ ಉಪಲಬ್ಧವಿದೆ ಎನ್ನುತ್ತಾರೆ ನರಹರಿತೀರ್ಥನು ಕ್ರಿ ಶ 1333 ರಲ್ಲಿ ಬೃಂದಾವನ ಸೇರಿದ ಅನಂತರ ಸು ಒಂದು ಶತಮಾನದವರೆಗೆ ಹರಿದಾಸರ ಸುಳಿವು ಕಂಡು ಬಂದಿಲ್ಲ ಮತ್ತೆ ಹರಿದಾಸರಲ್ಲಿ ಪ್ರಖ್ಯಾತರಾದ ಶ್ರೀಪಾದರಾಜರ ಕ್ರಿ ಶ 1450 ಕಾಲದಿಂದ ದಾಸ ಸಾಹಿತ್ಯ ತಲೆಯೆತ್ತಿತು

ಸರ್ವಸಂಗ ಪರಿತ್ಯಾಗಿಯಾದ ಈತ ರಾಜನಂತೆ ವೈಭವ ಜೀವನ ನಡೆಯಿಸಿದ ಭಾಗ್ಯಶಾಲಿ ಶೇಷಗಿರಿ–ಗಿರಿಯಮ್ಮ ಎಂಬವರು ಮಾತಾ–ಪಿತೃಗಳು ಈತನ ಹುಟ್ಟು ಹೆಸರು ಲಕ್ಷ್ಮೀನಾರಾಯಣ ದನಗಾಹಿಯಾಗಿದ್ದ ಈತ ಒಮ್ಮೆ ಸ್ವರ್ಣವರ್ಣತೀರ್ಥರೆಂಬ ಮಹಾತ್ಮರ ದೃಷ್ಟಿಗೆ ಬಿದ್ದ ಪುನೀತನಾದ ಚೆನ್ನಪಟ್ಟಣ (ಬೆಂಗಳೂರು ಜಿಲ್ಲೆ) ಸಮೀಪದ ಅಬ್ಬೂರು ಈತನ ಹುಟ್ಟೂರು

ಸ್ವರ್ಣವರ್ಣತೀರ್ಥರ ಅಪೇಕ್ಷೆಯಂತೆ ಲಕ್ಷ್ಮೀನಾರಾಯಣ ಅವರ ಶಿಷ್ಯತ್ವವಹಿಸಿ ಮಾತಾ ಪಿತೃಗಳೊಂದಿಗೆ ಶ್ರೀರಂಗಕ್ಕೆ ಬಂದ ಅನತಿ ಕಾಲದಲ್ಲಿಯೇ ಗುರ ಗಳು ಸಂನ್ಯಾಸ ದೀಕ್ಷೆಯನ್ನು ಅನುಗ್ರಹಿಸಿದರು ಬಾಲ ಸಂನ್ಯಾಸಿ ಲಕ್ಷ್ಮೀನಾರಾಯಣ ತೀರ್ಥನ ವಿದ್ಯಾವಿನಯ ಸಂಪನ ತೆಯನು ವಾದ ವೈಖರಿಯನ್ನು ಕಂಡು ಉತ್ತ

ರ ದಿ ವ ರದ ಶ್ರೀ ರಘುನಾಥತೀರ್ಥರು ಅವನಿಗೆ ಶ್ರೀಪಾದರಾಜ ನೆಂದು ಅಭಿಧ ನ ವಿತ್ತರು ಮುಂದೆ ಈತ ಸುಳಬಾ ಗಿಲಿನ ಪದ್ಮನಾಭತೀರ್ಥರ ಮಠಾಧಿಪತ್ಯವನ್ನೂ ವಹಿಸಿ ಅಲ್ಲಿ ಸಂ ಸ್ಕೃತ ಪ್ರೌಢ ವಿದ್ಯಾಕೇಂದ್ರವನು ಸ್ಥಾಪಿಸಿದ ವಿಜಯ ನಗರದ ಸಾಳುವ ನರಸಿಂಹನಿಂದ ಕನಕಾಭಿಷೇಕವನು ಪಡೆದ ಶ್ರೀಪಾದರಾಜ ರಂಗವಿಠಲ ಎಂಬ ಅಂಕಿತದಿಂದ ಅನೇ ಕ ಕೀರ್ತನೆಗಳನು ರಚಿಸಿ ಹಾಡಿದನು 1486 ರಲ್ಲಿ ಈತ ಮುಳ ಬಾಗಿಲಿನ ವ ರದಲ್ಲಿ ಬೃಂದಾವನ ಸೇರಿದ

ಮಾಧ್ವಸಂಪ್ರದಾಯದ ಮಠಗಳಲ್ಲಿ ಕನ್ನಡದಲ್ಲಿ ಮಾತನಾಡುವುದೇ ಅಪರಾಧ ವಾಗಿದ್ದ ಕಾಲದಲ್ಲಿ ಶ್ರೀಪಾದರಾಜರು ಕನ್ನಡ ಕೀರ್ತನೆಗಳನ್ನು ಅದೂ ಪೂಜಾಕಾಲ ದಲ್ಲಿ ಅವುಗಳನು ಹಾಡುತ್ತಿದ್ದುದು ಆತನ ಕನ್ನಡದ ಅಭಿಮಾನಕ್ಕೆ ಕುರುಹು ಅವರು ರಚಿಸಿರುವ ಭ್ರಮರಗೀತೆ ವೇಣುಗೀತೆ ಮತ್ತು ಗೋಪೀ ಗೀತೆ ಗಳಿಗೆ ಅಗ್ರಮಾನ್ಯತೆ ಯಿದೆ ದಾಸ ಕೂಟದಲ್ಲಿ ಅವುಗಳನು ವೇದ ಪಾರಾಯಣದಂತೆ ಪರಿಸಲಾಗುತ್ತದೆ ಕೇವಲ ಕೀರ್ತನೆಯ ಜೊತೆಗೆ ನರ್ತನವೂ ಸಹ ಆರಂಭವಾದದ್ದು ಶ್ರೀಪಾದರಾಜರ ಕಾಲದಲ್ಲಿಯೇ ಎಂದು ಹೇಳಲಾಗಿದೆ ಆತನ ಕಿ ರ್ತನೆಗಳು ಭಕ್ತಿ–ವೈರಾಗ್ಯಗಳನ್ನು ಪ್ರದರ್ಶಿಸುವಲ್ಲ ಪ್ರಖ್ಯಾತವಾಗಿವೆ ಭಾಗವತದ (೧೦ ಸ್ಕಂದ) ಶ್ರೀಕೃಷ್ಣನ ಬಾಲ ಲೀಲೆಗಳ ವರ್ಣನೆಯಲ್ಲಿ ಅದು ಮುಗಿಲು ಮುಟ್ಟಿದೆ

ಭಕ್ತಿಬೇಕು ವಿರಕ್ತಿಬೇಕು ಸರ್ವ
ಶಕ್ತಿಬೇಕು ಮು ಂದೆ ಮುಕ್ತಿಯು ಬಯಸುವಗೆ ॥ಪ॥

ಎಂದು ಕೀರ್ತನದಲ್ಲಿ ಅನುಕೂಲಳಾದ ಸತಿ ಗುಣವಂತನಾದ ಮಗ ಮತಿವಂತಿಕೆ ಜಪದ ಜಾಣ್ಮೆ ತಪದ ನೇಮ ಸ ಸಂಗಗಳನ್ನು ಬಯಸಿದ ಮಾನವ ದುಸ್ಸಂಗವನು ಬಿಡಬೇಕೆಂದು ಕಳ ಕಳಿಯಿಂದ ಬೇಡಿದ್ದಾನೆ ಭ್ರಮರ ಗೀತೆಯ ಲ್ಲ—

ಭೃಂಗಾ ನಿನ ಟ್ಟಿದನೇ ಶ್ರೀರಂಗ ಮಧುರೆಲಿ ನಿಂದು
ಅಂಗಜಲುಬ್ಧಿ ಕ ಪೂಗೋಲಿಂಗಳ ತಡೆಯನಿಕ್ಕಿ
ಅಂಗನೇರೆಂಬೋ ಹುಲ್ಲೆ ಮೃಗಂಗಳಿಗೆ ಗುರಿಯೆಚ್ಚು
ಹಿಂಗಿಸಂತೈಧಾನೆ ಅಸಮ ಹೇಕಿತವ ! ॥ಪ॥

ಸುಮಾರು ಒಂಬತ್ತು ನುಡಿಗಳ ಈ ಗೀತೆ ತುಂಬಾ ಮುಂದ್ದಾಗಿದೆ

ಉತ್ಪಲ ಶ್ಯಾಮಲ ಮುದವೆತ್ತ ಭಾವನ್ನವದೀಡಿ
ಅತ್ಯಮಲ ಪೊನ್ನಂಬರ ಸುತ್ತಿದ
ಮತ್ತನೂಪುರ ರಘಣತ್ಕಾರದಿ ಮಿಂಚಿಯೆಮ್ಮ
ಚಿತ್ತಶಿಖಿಗೆ ಪೀಯೂಷನಿಕ್ತ ಮೇಘದಂತೆ ಒಪ್ಪುವ ಶ್ರೀಹರಿ ಯನ್ನು

ಯಮ್ಮ ಹೆತ್ತತಾಯಿ ಅಪ್ಪಬಂಧು ಗೋತ್ರಗತಿನೀನೆ ನಮ್ಮ
ಚಿತ್ತವೆಂದು ನಂಬಿ ತನ ಹತ್ತಿಲಿ ಸಾರಿದವರ
ಒತ್ತಿತಾಂ ರಥವನೇರಿ ಸತ್ವರ ಬರುವೆನೆಂದು
ಮಂತ್ರಕ್ರೂರನೊಡನೈದಿದ ಹೇ ಕಿತವಾ !

ಎಂಬ ನುಡಿಯಲ್ಲಿನ ಭಾವ ಬಂಧುರತೆ ಸಹೃದಯರ ಚಿತ್ತಚ ಲಕವಾಗಿದೆ ಅಕಟಕಟ ಸಂಸಾರವನು ನೆಚ್ಚಿ ಕೆಡಬೇಡ ಎಲ್ಲಾಡಿ ಬಂದ್ಯೋ ಎನ ರಂಗಯ್ಯ ನಿ ಕಂಗಳಿದ್ದಾತಕೋ ಕಾವೇರಿರಂಗನ ನೋಡದ ಮುಂತಾದ ಕೃತಿಗಳಲ್ಲಿ ಶ್ರೀ ಪಾದರಾಜನ ಭಕ್ತಿವೈರಾಗ್ಯಗಳ ಆವೇಶವನ ಕಾಣುತ್ತೇವೆ

ಶ್ರೀಪಾದರಾಜರಂತೆ ಭಕ್ತಿರಸಾವೇಶದಿಂದ ಕೀರ್ತನೆಗಳನ್ನು ಒರೆದ ಶಿವಶರಣ ರಲ್ಲಿ ಮುಪ್ಪಿನ ಷಡಕ್ಷರಿ (ಸಂ ೧೭೫೦) ವಿಖ್ಯಾತರಾಗಿದ್ದಾರೆ ಆವರ ಈ ಕೆಳಗೆ ಕಂಡ ಪದ್ಯವೊಂದು ಹೀಗಿದೆ—

ಎನಗೆ ಭೋಗಭಾಗ್ಯಬೇಡ । ಎನಗೆ ಜಪವು ತಪವು ಬೇಡ ।
ಎನಗೆ ನಿಮ್ಮ ತೊತ್ತುಸೇವೆ ನಿತ್ಯವಾಗಲೈ ॥ಪ॥
ಎನ ಕಂದಿಸುತ್ತ ಬಹಳ । ಎನ ಬಾಧಿಸುತ್ತ ಬಿಡದೆ ।
ಎನ ನೊಂದು ನೆವಗಳಿಂದ ಕಾಡಿದವರಿಗೆ ॥
ಎನ್ನಕೊಂದೊಡವರಿಗೆಲ್ಲ । ಎನ ಲಿಖ ಪೂಜೆಫಲಗಳೆಲ್ಲ ।
ಉನ್ನತದೊಳಗವರಿಗಾಗಿ ಸಂಖದಿಬಾಳಲಿ ॥೧॥

ಇವರಲ್ಲಿ ಹಿಂದೆ ತನ್ನನ್ನು ಬೈದವರು ಮುಂದೆ ಬೈಯ್ಯುವವರು ಸಭೆಗಳಲ್ಲಿ ಹೀಯ್ಯಾಳಿಸಿದವರು ಇಂದಿಂಥರನ ಕರುಣೆಯಿಂದ ಆಂದಣವನ್ನು ಏರುವ ಪದವಿ ಆವರಿಗೆ ಸಿಗಬೇಕಂತೆ ! ಇಷ್ಟು ಆದಮೇಲೆ ತನಗೆ ಶಿವನ ತೊತ್ತುಸೇವ ನಿತ್ಯವಾಗ ಲೆಂದು ಬೇಡುವ ವೈರಾಗ್ಯ ಅವರದಾಗಿತ್ತು

ಕಾಡಲೇಕೆ ನರರುಗಳನು । ಬೇಡಿ ಎಳಲಲೇಕೆ ಮನವೆ ।
ರೂಢಿಗೀಶನೆಮಗೆ ದೈವವಾಗಿ ಇರುತ್ತಿರೆ ॥ಪ॥

ಆದರ ಮೇಲೆ ಈ ಶಿವಯೋಗಿ ಪ್ರಿಯಡಪೂಜೆಗೆ ಮಡುವಿನ ಆಗ್ಗವಾಣೆಯುಂಟು ಕಾಡಪತ್ರ ಪುಷ್ಪಗಳು ಸಾಕಷ್ಟು ಉಂಟು ಎನು ತ್ತಾನೆ ದುಡಿದರೆ ಒಡಲಿಗೆ ಅನ್ನ ವುಂಟು ಶಯನಕ್ಕೆ ಗುಡಿಗಳು ಒಡೆಯರುಗಳು ಬಿಸುಟು ಆರಿವೆಗಳು ಶೀತಕ್ಕೆ ವುಂಟಂತೆ ! ಹೀಗಿರುವಾಗ ಮಿಗಿಲು ಮನೆಗಳೇಕೆ ನಮಗೆ ? ಎಂದು ಕೇಳುವ ಈ ಷಡಕ್ಷರಿಯೋಗಿಗಳ ಕೀರ್ತನೆಗಳು ಪ್ರಖ್ಯಾತವಾಗಿವೆ ಉದಾಹರಿಸತಕ್ಕವಾಗಿವೆ

ಒಟ್ಟಿನಲ್ಲಿ ಶ್ರೀಪಾದರಾಜರ ಹಾಗೂ ಶಿವಶರಣರ ಈ ಬಗೆಯ ಕೃತಿಗಳು ಜನರ ನೀತಿಯನ್ನು ತಿದ್ದಿ ಅವರಲ್ಲಿ ಧರ್ಮ ಜಾಗೃತಿಯನ್ನು ಉಂಟುಮಾಡುವಲ್ಲಿ ಕೃತ ಕೃತ್ಯವಾಗಿವೆ ಪುರಂದರದಾಸರ ಮಗ ಮಧ್ವಪತಿದಾಸ ಶ್ರೀಪಾದರಾಜರನ್ನು ವರದ್ರುವನವತಾರ ಎಂದು ಹೊಗಳಿದ್ದಾನೆ

**ವ್ಯಾಸರಾಯರು**

ಶ್ರೀಪಾದರಾಜರ ಶಿಷ್ಯರೇ ವ್ಯಾಸರಾಯರು ಇವರು ಮೈಸೂರು ಸಮೀಪದ ಬನ್ನೂರಿನವರು ಬ್ರಾಹ್ಮಣ (ಬೆಲ್ಲಣ್ಣ) ಮತ್ತು ಸುಮತಿ ಅಕ್ಕಮ್ಮ ಎಂಬುವರು ತಂದೆತಾಯಿಗಳು ಬ್ರಹ್ಮಣ್ಯತೀರ್ಥರ ಕೃಪೆಯಿಂದ ಹುಟ್ಟಿದ ಇವರಿಗೆ ಯತಿರಾಜ ನೆಂದೇ ನಾಮಕರಣ ಮಾಡಲಾಯಿತು ಬ್ರಹ್ಮಣ್ಯತೀರ್ಥರು ಎಳೆಗೂಸನ್ನು ತಂದೆ ತಾಯಿಗಳಿಂದ ಪಡೆದು ದೇವರ ಅಭಿಷೇಕದ ಹಾಲಿನಿಂದ ಪೋಷಿಸಿದರಂತೆ ! ಐದು ವರ್ಷಕ್ಕೇ ಉಪನಯನ–ಸಂನ್ಯಾಸ ದೀಕ್ಷೆಗಳು ಏರ್ಪಟ್ಟು ವ್ಯಾಸರಾಯ ನೆಂಬ ನಾಮಕರಣವಾಯಿತು

ಇವರ ಶಿಕ್ಷಣವು ಶ್ರೀಪಾದರಾಜರಲ್ಲಿಯೇ ಆಯಿತು ಪ್ರಗಲ್ಭ ಪಾಂಡಿತ ವನ್ನು ಗಳಿಸಿದ್ದ ವ್ಯಾಸರಾಯರು ತೀರ್ಥಯಾತ್ರೆಯನ್ನು ಮಾಡಿ ಅನೇಕ ಪಂಡಿತ ರನ್ನು ವಾದದಲ್ಲಿ ಸೋಲಿಸಿ ದ್ವೈತಮತವನ್ನು ಪ್ರಚಾರ ಮಾಡಿದರು ಮತ್ತು ಬ್ರಹ್ಮಣ್ಯತೀರ್ಥರ ಮಠದ ಉತ್ತರಾಧಿಕಾರಿಯಾದರು

ವಿಜಯನಗರದ ಸಾಳುವ ನರಸಿಂಹನ ಪ್ರಾರ್ಥನೆಯಂತೆ ರಾಜಗುರುವಾಗಿದ್ದು ನ್ಯಾಯಾಮೃತ ತರ್ಕತಾಂಡವ ತಾತ್ಪರ್ಯಚಂದ್ರಿಕಾ ಎಂಬ ಸಂಸ್ಕೃತ ಗ್ರಂಥ ಗಳನ್ನು ನೂರಾರು ಕನ್ನಡ ಕೀರ್ತನೆಗಳನ್ನು ರಚಿಸಿದರು ಇವರ ಅಂಕಿತ ಕೃಷ್ಣ ಅಥವಾ ಸಿರಿಕೃಷ್ಣ ಎಂದು

ವ್ಯಾಸರಾಯರ ಕೀರ್ತನೆಗಳಲ್ಲಿ

> ಕೊಳಲನೂದುವ ಚದುರನ ದಿ ದೇಳಮ್ಮಯ್ಯ !
> ತಳಿರಂದದಿ ತಾ ಪೊಳೆವ ಕರದಿ ಪಿಡಿದು ॥ಪ॥

ಮುಂತಾದ ಕೀರ್ತನೆಗಳಲ್ಲಿ ವಾತ್ಸಲ್ಯಭಾವವು ತಾನೇ ತಾನಾಗಿ ಹರಿದಿದೆ ಬೇರೆ ದಾಸ ರಂತೆ ಇವರೂ ಸಹ ಸಂಸಾರದ ಅನಿತ್ಯತೆಯನ್ನು ಪ್ರತಿಪಾದಿಸಿ ಸಂಸಾರಸಾಗರದಿಂದ ಪಾರಾಗಲು ಹರಿಕೃಪೆಯೊಂದೆ ಹೆದ್ದಾರಿಯೆಂದು ಅನ್ಯನ ಭಕ್ತಿಯಿಂದ ಬೆಡಿದ್ದಾರೆ ಸಂಸಾರಿಯೆಂಬ ಮಾರಿಗೆ ಸಿಲುಕದೆ ಕಂಸಾರಿ ಕರುಣದಿಂದೆನ್ನ ನೋಡಯ್ಯಾ ! ಎನ್ನು ತ್ತಾರೆ ಕೊಳಲ ನುಡಿಸಿ ಪ್ರೇಮಸುಧೆಯ । ಮಳೆಯ ಸುರಿಸಿ ಭವತಾಪ ಕಳೆದು ತಿಳಿವಿನೆಳೆ ಬಳ್ಳಿಯ ಬೆಳೆಯಿಸಿ ಬೆಳಗೆನ್ನ ಮನದೊಳು ॥

ಸಂಸಾರದಿಂದ ಪಾರಾಗಲು ಭಗವಂತನ ಕೃಪೆಬೇಕು. ಭಗವಂತ ಭಕ್ತಾಧೀನ. ಅಂಥ ಭಕ್ತರ ಸಂಗವಿದ್ದ ಮೇಲೆ ಭಕ್ತನಿಗೆ ಯಾರ ಭಯ ?

ಕರಿಯಾ ಭಯವುಂಟೆ ಕೇಸರಿಯ ಇಕ್ಕೆಯೊಳಿದ್ದವಗೆ? ದುರಿತದ ಭಯವುಂಟೆ ಶ್ರೀಕೃಷ್ಣನದಾಸರ ಸಂಗವಿರಲು ? ಎಂದು ಪ್ರಶ್ನಿಸಿದ್ದಾರೆ. ಇದೇ ಅಭಿಪ್ರಾಯ ವನ್ನು ವ್ಯಕ್ತಪಡಿಸಿರುವ ಮುಪ್ಪಿನ ಷಡಕ್ಷರಿ ಶಿವಯೋಗಿಗಳವರ

"ಕಾಡಲೇಕೆ ನರರುಗಳನು ಬೇಡಿ ಬಳಲಲೇಕೆ ಮನವೆ ।
ರೂಢಿಗೀಶ ನಮಗೆ ದೈವವಾಗಿ ಇರುತಿರೆ

ಎಂಬ ನುಡಿಯನ್ನು ಈ ಹಿಂದೆಯೇ ಉದಾಹರಿಸಲಾಗಿದೆ.

ಹಾಗೆ ಭಗವಂತನನ್ನು ಬಿಟ್ಟು ಇತರರನ್ನು ಆಶ್ರಯಿಸುವವನನ್ನು ಕುರಿತು ಸುರಧೇನುವಿರಲಾಗಿ ಶ್ವಾನನ ಪಾಲು ಕರೆದು ಕುಡಿಯಬೇಡವೊ ! ಎಂದು ಹೀಯಾಳಿಸುತ್ತಾರೆ. ಅವರ ದೃಷ್ಟಿಯಲ್ಲಿ ಕಮಲನಾಭನ ಹಾಡಿ ಪೊಗಳದ ಸಂಗೀತ ಗಾರ್ದಭರೋದನವಂತೆ!

ವ್ಯಾಸರಾಯರಿಂದ ವ್ಯಾಸಕೂಟ ಮತ್ತು ದಾಸಕೂಟಗಳೆರಡಕ್ಕೂ ಅಪಾರ ಸೇವೆ ಸಂದಿದೆ. ಹನ್ನೆರಡನೆಯ ಶತಮಾನದಲ್ಲಿ ಕಲ್ಯಾಣವು ಶಿವಶರಣರಿಂದ ತುಂಬಿದ್ದಂತೆ ವ್ಯಾಸರಾಯರ ಕಾಲದಲ್ಲಿ ವಿಜಯ ನಗರವು ಹರಿದಾಸರಿಂದ ತುಂಬಿ ಭಗವನ್ನಾಮ ಸಂಕೀರ್ತನೆಗಳಿಂದ ಮಾರ್ದನಿಗೊಡುತ್ತಿತ್ತು.

ವ್ಯಾಸರಾಯರ ಮುಂದಾಳತ್ವದಲ್ಲಿ **ಪುರಂದರದಾಸ ಕನಕದಾಸ ವೈಕುಂಠದಾಸ ವಾದಿರಾಜ** ಮುಂತಾದವರು ಹರಿಕಥಾಮೃತ ಸಂಕೀರ್ತನದಿಂದ ಜನಜೀವನವನ್ನು ಪಾವನಗೊಳಿಸಿದ್ದರು. ವ್ಯಾಸರಾಯರನು ಗುರು ಶ್ರೀ ಪಾದರಾಜರು ಮತ್ತು ಪುರಂದರದಾಸರು ಬಹುವಾಗಿ ಕೊಂಡಾಡಿದ್ದಾರೆ. ಅವರಿಗೆ ಸಹಸ್ರ **ಜಿಹ್ವೆಯ ಆದಿಶೇಷ ಶೇಷಾವೇಶಪ್ರಹ್ಲಾದನವತಾರ** ಎಂದು ಹೊಗಳಿದ್ದಾರೆ. ಸುಮಾರು 90 ವರ್ಷಗಳಿಗಿಂತ ಹೆಚ್ಚು ಕಾಲ ದಿವ್ಯ ಜೀವನ ನಡೆಸಿ **ಚೈತನ್ಯ ಕಬೀರ** ಮತ್ತು **ತುಳಸೀದಾಸರಂತೆ** ಧರ್ಮಜಾಗೃತಿಗೈದ ಮಹಾನುಭಾವರು ವ್ಯಾಸರಾಯರು.

## ಪುರಂದರದಾಸರು (ಕ್ರಿ. ಶ. 1484 1564)

ಶಿವಶರಣರಲ್ಲಿ ಬಸವಣ್ಣನವರಿಗೆ ಇರುವ ಸ್ಥಾನ ಹರಿದಾಸರಲ್ಲಿ ಪುರಂದರ ದಾಸರಿಗಿದೆ. ಅವರ ಗುರು ವ್ಯಾಸರಾಯರು ಹೇಳಿರುವಂತೆ **ದಾಸರೆಂದರೆ ಪುರಂದರ ದಾಸರಯ್ಯ**! ಎಂದ ಮಾತು ನಿಜ ! ಅವರು ನಾರದನ ಅವತಾರವೆಂದು ಹರಿದಾಸರ ಭಾವನೆ. ಧರ್ಮಬೋಧೆಯೇ ಅವರಿಬ್ಬರ ಕಾಯಕ.

ಬಸವಣ ನವರ ಜಿ ವನವು ಹೇಗೆ ಅನೇಕ ಘ ನಾವಳಿಗಳಿಂದ ಕೂಡಿದೆಯೋ ಅದರಂತೆ ಪುರ ದರದಾಸರ ಜಿ ವನದಲ್ಲಿಯ ೂ ಒನೆ ಕ ವಿಚಿತ್ರ ಘ ನಾವಳಿಗಳ ಿಟಿಂ ಉತ್ತ ಮಂ ಕ ಒಲ್ಲಿ ಜನಿಸಿದ ಬಸವಣ ದೀನ ದಲಿತರ ಉದ್ಧಾರಕ್ಕಾಗಿ ಶ್ರ ಮಿಸಿದಂತೆ ಪುರ ದರದಾಸರು ಆಗರ್ಭ ಶ್ರೀಮಂತರೆನಿಸಿದ್ದು ಜ್ಞಾನೋದಂ ಿಾದೊಡನೆಯೇ ಅದೆಲ್ಲವನ ತೃಣದಂತೆ ತ್ಯಜಿಸಿ ಜ ನತೆಯು ಅಜ್ಞಾನವನು ಕಳೆಯಲು ತಂಬೂರಿ ಹಿಡಿದು ಮನೆ ಮನೆ ತಿರುಗಿ ಧರ್ಮಬೋಧೆ ಮಾಡಿ ಹ ಡಿ ಜನತೆಯ ಉದ್ಧಾರ ಕ್ಕಾಗಿ ತಮ್ಮನ ಅರ್ಪ ಕೊಂಡರು

ತಂದೆ ವರದಪ್ಪನಾಯ ಕ ಕೋಟ್ಯಾಧಿ ಶ ಹುಟ್ಟು ಹೆಸರು ಶ್ರೀನಿವಾಸ ಲೌಕಿಕ ಧಾರ್ಮಿಕಗಳೆರಡರಲ್ಲಿಯ ಶಿಕ್ಷಣ ಜೊತೆಗೆ ಸಂಗೀತದಲ್ಲಿಯೂ ಪರಿಶ್ರಮ ಮಾಡಿದ್ದ ಹೆಂಡತಿ ಹೆಸರು ಸರಸ್ವತಿ

ಕಾಯಕ ರತ ಪಡಿವ್ಯಾಪಾರ ಐಶ್ವರ್ಯವು ಬೆಳೆಯ ುತ್ತಿದ್ದಂತೆ ಹಣ ದಾಸೆಯೂ ಬೆಳೆಯ ತೊಡಗಿತ್ತು ಎಂಜಲು ಕೈಲಿ ಕ ಗೆಯನೂ ಹೊಡೆಯದಿರು ವಷ್ಟು ಒಪುಣಾಗ್ರೇಸರ ಚಕ್ರವರ್ತಿ !

ಕ ಪಿಂಗಾನಿವಾಡು ಮೋಕ್ಷಗಾಮಿಗಾಡು ಎಂಬ ವೇಮನ ರಾಧ್ಯರ ಉಕ್ತಿ ಯ ಂತೆ ಲೋಭಿಯಾದವನು ಮಹಾದಾನಿಯಾಗಲಾರ ತ್ಯಾಗಿಯೂ ಆಗಲು ಸಾಧ್ಯ ವಾಗುವುದಿಲ್ಲವೆಂಬುದಕ್ಕೆ ಅನೇಕ ನಿದರ್ಶನಗಳಿವೆ ಅದಕ್ಕೆ ಈ ಶ್ರೀನಿವಾಸ ನಾಯಕನೇ ತಕ್ಕ ನಿದರ್ಶನ

ಒಮ್ಮೆ ಬಡಬ್ರಾಹ್ಮಣನೊಬ್ಬ ವ ಗನ ಉಪನಯನಕ್ಕೆ ಹಣ ಕೆ ಳ ಬಂದ ಆರು ತಿಂಗಳು ಅಲೆದರೂ ನಾಯ ಕನಿಂದ ಒಂದು ಒಡಿಕಾಸೂ ಅವನಿಗೆ ದಕ್ಕಲಿಲ್ಲ ಆದರೂ ಆತ ಜಿಗಣೆಯಂತೆ ಮತ್ತೆ ಮತ್ತೆ ಕಾಡತೊಡಗಿದ ಕಡೆಗೊಂದು ದಿನ ನಾಂ ಕ ಅವನಿಗೊಂದು ಸವೆ ಕಲು ನಾಣ್ಯವಿತ್ತ ಆತ ಅದನ್ನು ಅವನ ಹೆಂಡತಿಯ ಬಳಿಗೊಯ್ದು ಮತ್ತೆ ಹಣ ಯಾಚಿಸಿದ ಆದರೆ ಆಕೆಯ ಲ್ಲಿ ಹಣವೆಲ್ಲಿ ಬರಬೇಕು ! ಆದರೂ ಬ್ರಾಹ್ಮಣನ ದೈನ್ಯದ ಮಾತುಗಳಿಂದ ಸರಸ್ವತಿಯ ಮನ ಸ್ಸ ಕರಗಿತ ತನ ತವರು ಮನೆಯವರಿತ್ತ ವ ಜ್ರ ಗ ತಿಯ ಮೇಲೆ ಗಂಡನಿಗೆ ಅಧಿಕಾರವಿಲ್ಲ ಅದನ್ನು ಗಂಡನನ್ನು ಕೇಳದೆಯೇ ದಾನ ಮಾಡಿದರೂ ತಪ್ಪಲ್ಲ ಎಂದು ಭಾವಿಸಿದ ಸರಸ್ವತಿ ಬ್ರಾಹ್ಮಣನಿಗೆ ವ ಜ್ರಗುತಿ ಕೊಟ್ಟು ಕೃಷ್ಣಾರ್ಪಣ ಎಂದಳು ಆ ಕಪಟ ಬ್ರಾಹ್ಮಣ ಅದನು ನಾಯ ಕನ ಬಳಿಗೊಯ ದ್ದು ನ ಗ ತಿ ಇಟ್ಟುಕೊಂಡು ಒದಲಾಗಿ ಹಣ ಕೊಡು ಎಂದ ನಾಯಕನು ಮೂಗುತಿ ತನ್ನ ಹೆಂಡತಿಯದೇಂದು ಗುರ್ತಿಸಿ ಅದನ್ನು ಪೆಟ್ಟಿಗೆಯಲ್ಲಿಟ್ಟು ಭದ್ರಪಡಿಸಿ ಮ ನೆಗೆ ಬಂದು ವ ಜ್ರಗುತಿ ಎಲ್ಲಿ ? ಎಂದು ಹೆಂಡತಿಯನ್ನು ಪ್ರಶ್ನಿಸಿದ ಸರಸ್ವತಿ ತಬ್ಬಿಬ್ಬಾದಳು ! ದಿಕ್ಕು ತೋಚ ದ

ಅವಳು ಅದು ಒಳಗಿದೆ ! ಎಂದಳು ತರಲು ಆಜ್ಞೆ ಮಾಡಿದ ನಾಯಕ ! ಕೂಡಲೇ ಅವಳು ವಿಷಕುಡಿದು ಪ್ರಾಣ ಬಿಡಲು ನಿರ್ಧರಿಸಿ ವಿಷದ ಬಟ್ಟಲನ್ನು ಮೇಲೆತ್ತಿದಾಗ ಅದರಲ್ಲಿ ಮೂಗುತಿ ಕಾಣಿಸಿತು ಸೋಜಿಗೊಂಡ ಹೆಂಡತಿ ಮೂಗುತಿ ತಂದು ಗಂಡನ ಕೈಗಿತ್ತಳು ! ಕೂಡಲೇ ನಾಯಕ ಅಂಗಡಿಗೆ ಧಾವಿಸಿ ಎಂದು ನೋಡಿದಾಗ ಭದ್ರ ಪಡಿಸಿದ್ದ ಮೂಗುತಿ ಅಲ್ಲಿರಲಿಲ್ಲ ಆ ಬ್ರಾಹ್ಮಣನನು ಹುಡುಕಿಸಲು ಮಾಡಿದ ಪ್ರಯತ್ನ ಫಲಿಸಲಿಲ್ಲ !

ನಾಯಕ ಬೆಚ್ಚಿದ ! ಮನೆಗೆ ಬಂದು ನಡೆದಿದ್ದನ್ನೆಲ್ಲ ಹೆಂಡತಿಗೆ ತಿಳುಹಿಸಿದ ವೈರಾಗ್ಯ ಮೂಡಿ ಬಂತು ! ನಿಜದ ಅರಿವಾಯಿತು ! ತನ್ನೆಲ್ಲ ಐಶ್ವರ್ಯವನ್ನೂ ದಿನ ದಲಿತರಿಗೆ ದಾನ ಮಾಡಿದ ತಂಬೂರಿ ಹಿಡಿದು ಹೆಂಡತಿ ಮಕ್ಕಳೊಂದಿಗೆ ಹಂಪೆಗೆ ಬಂದ

> ಆದದ್ದೆಲ್ಲ ಒಳಿತೇ ಆಯಿತು । ಮಾಧವನಂಘ್ರಿಯ ಸೇವಿಸುವುದಕ್ಕೆ
> ಸಾಧನ ಸಂಪತ್ತಾಯಿತು ॥ಪ॥
> ದಂಡಿಗೆ ಬೆತ್ತ ಹಿಡಿಯುವುದಕ್ಕೆ । ಮಂಡೆ ಬಾಗಿ ನಾಚುತಲಿದ್ದೆ ।
> ಹೆಂಡತಿ ಸಂತತಿ ಸಾವಿರವಾಗಲಿ । ದಂಡಿಗೆ ಬೆತ್ತ ಹಿಡಿಸಿದಳಯ್ಯ ॥೧॥

ಮಂತಾಗಿ ಹಾಡುತ್ತ ಸಂಚರಿಸತೊಡಗಿದ ನಾಯಕ ಈತನ ಪರಿಪಕ್ವ ಚಿತ್ತವೃತ್ತಿ ಯನ್ನು ಗಮನಿಸಿದ ವ್ಯಾಸರಾಯರು ನಾಯಕನಿಗೆ ಹರಿದಾಸ ದೀಕ್ಷೆಯನ್ನಿತ್ತು ಹರಸಿದರು ಅಂದಿನಿಂದ ಶ್ರೀನಿವಾಸ ನಾಯಕ ಪುರಂದರದಾಸ ರೆಂಬ ಹೆಸರಾಂತು ಭಗವಂತನನ್ನು ಕೀರ್ತಿಸತೊಡಗಿದರು ಅವರ ಮುಖದಿಂದ ಕವಿತಾ ಝರಿ ಬಗ್ಗೆ ಯೊಡೆದು ತಾನೇ ತಾನಾಗಿ ಹರಿಯ ತೊಡಗಿತು ಜನ ಹರಿ ಕಥಾಮೃತ ಮಂಡುವಿನಲ್ಲಿ ಮುಳುಗಿ ಭವ ಬೇಗೆಯಿಂದ ಪಾರಾಗಿ ತಣಿಯಿತು !

> ಸಾಲ ಮಾಡಬೇಡ ಸಾಲದೆನಬೇಡ ನಳಿಗಿಡಬೇಡ ಎಂಬ ಆದರ ಪದವು
> ದೆ ವರದಾಸಿಮಾರ್ಯರ ಇಂದಿಗೆಂತು ನಾಳಿಂಗೆಂತೆಂತು ಚಿಂತಿಸಲೇಕೆ ?
> ತಂದಿಕ್ಕುವ ಶಿವಂಗೆ ಬಡತನವೆ—ರಾಮನಾಥ !

ಎಂಬ ವಚನವು ಭಗವಂತನಲ್ಲಿ ದೃಢವಿಶ್ವಾಸವಳ್ಳ ಭಕ್ತನ ನಿರ್ಧಾರವನು ಚಿತ್ರಿಸುತ್ತದೆ

ಪುರಂದರದಾಸರ ಪ್ರಖ್ಯಾತಿಯನು ಕಂಡು ಅಸೂಯೆ ಪಡುವವರು ಅಂದೂ ಇದ ರು ಅವರ ಪದಗಳನ್ನು ಹೀಗಳೆವವರೂ ಇದ್ದರು ಅದನ್ನು ಅರಿತ ವ್ಯಾಸರಾಯರು ಅವರ ಪದಗಳನು ಪುರಂದರೋಪನಿಷತ್ ಎಂದು ಘೋಷಿಸಿದಾಗ ಅವರು ತೆಪ್ಪಗಾದರು !

ಪುರಂದರದಾಸರ ಕೀರ್ತನೆಗಳಲ್ಲಿ ಓಟ ಟಿಕೆ ಡಂಬಾಚಾರಗಳನು ವಿಡಂಬಿಸ ಲಾಗಿದೆ

ಉದರವೈರಾಗ್ಯವಿದು । ಪದುಮನಾಭನಲ್ಲಿ ಲೇಶ ಭಕ್ತಿ ಇಲ್ಲ ||ಪ||
ಉದಯಕ ೆದಲೆದ್ದು ಗಡಗಡ ನಡುಗುತ ।
ನದಿಯೊಳು ಮಿಂದೆವೆಂದು ಹಿಗ್ಗುತಲಿ ।
ಮದಮತ್ಸರ ಕ್ರೋಧ ಒಳಗೆ ತುಂಬಿಕೊಂಡು ।
ಬದಿಯಲಿದ್ದವರಿಗಾಶ್ಚರ್ಯತೋರುವ ||೧||

ಎಂಬ ಪದವು ಒಸವಣ್ಣನವರ

ತೊರೆಯ ವಿಪ್ರವಣ್ಣಗಳಿರಾ ತೊರೆಯ ವಿಪ್ರವ ಸ್ವಾಮಿಗಳಿರಾ ।
ತೊರೆಯಿಂ ಭೋ ತೊರೆಯಿಂ ಭೋ ।
ಪರನಾರಿಯ ಸಂಗವ ತೊರೆಯಿಂ ಭೋ ।
ಪರಧನದಾಮಿಷವ ತೊರೆಯಿ ಂ ಭೋ ।
ಇವ ತೊರೆಯ ದೆ ಹೋಗಿ ತೊರೆಯವಿ ಂದರೆ
ಒರು ತೊರೆ ಹೋಹುದು ಕೂ ಸಂ ದೇವಾ ।

ಎಂಬ ವಚನಾಭಿಪ್ರಾಯವನ್ನೇ ಪ್ರತಿಬಿಂಬಿಸುತ್ತದೆ

ಅಂಥ ಬೂಟಾಟಿಕೆಯನು ನೋಡಿ ಹರಿದಾಸರು ನಗೆಯ ಂ ಬರುತಿದೆ ಎನಗೆ ನಗೆಯು ಎರ ತಿದೆ । ಎಂದು ಎಚ್ಚರಿಸಿದ್ದಾರೆ

ಜಾತಿ ಸೂತಕದ ಬಗೆಗೆ ವಚನಕಾರರ ಮತ್ತು ಹರಿದಾಸರ ಧೋರಣೆ ಒಂದೇ ಬಗೆಯದಾಗಿದೆ ಎಂಬುದಕ್ಕೆ ಮುಂದಿನ ಉಕ್ತಿಗಳು ನಿದರ್ಶನವಾ ಗಿವೆ

ಮಾನವನ ಶ್ರೇಷ್ಠತೆ ಹುಟ್ಟಿನಿಂದಲ್ಲ ಅದು ಆವನವನ ಗುಣಕರ್ಮಗಳಿಂದ ಎಂಬ ಬಗೆ ಹೊಲೆಯು ಊರಹೊರಗಿಹನೆ ಊರೊಳಗಿಲ್ಲವೆ ? ಎಂದು ಪ್ರಶ್ನಿಸಿದ ದ ಸರು ಹೊಲೆತನದ ಗುಣರ್ಗಗಳ ಪಟ್ಟಿ ಮಾಡಿದ್ದಾರೆ ಸತಿವಶನಾಗಿ ಜನನಿ ಜನಕಗೆ । ಅತಿನಿಷು ರ ನುಡಿವವ ಹೊಲೆಯ ಇತ್ಯಾದಿ ಮಲಮೂತ್ರಗಳಿಂದ ತುಂಬಿ ಹೊಲಸಾದ ಈ ದೇಹದಲ್ಲಿರುವಾಗ ಹುಟ್ಟು ಸಾವುಗಳ ಸೂತಕದ ಮಧ್ಯೆ ನಿಂತಿರುವಾಗ ಬಿಟ್ಟು ಬಿಡದೆ ಕಾವೇರಿಲಿ ಮಿಂದರೆ। ವೈಲಿಗೆ ಹೋಗುತ್ತದೆಯೋ ಚರ್ಮವ ತೊಳೆದರೆ ಕರ್ಮವು ಹೋ ದೀತೆ ? ಮು ಂತಾದ ಮಾತುಗಳು ಎಷ್ಟು ಮರ್ಮ ಭೇದಕವಾಗಿವೆ !

ವೇದಾಂತಿಗಳಂತೆ ಹೇಳಿಕೊಳ್ಳುವ ಕೆಲವರು ಸಂಸಾರವನ್ನು ಅಸಾರ ನಿಸ್ಸಾರ ವೆಂದು ತಿಳಿದು ಹಿ ಗಳೆಯ ತ್ತಾರೆ ಮಾನವ ಜನ್ಮವನ್ನು ಅಲ್ಲಗಳೆಯುವುದನ್ನು ದಾಸರು ಒಪ್ಪುವುದಿಲ್ಲ ಅವರ

ಈಸಬೇಕು ಇದ್ದು ಜೈಸಬೇಕು
ಹೇಸಿಗೆ ಸಂಸಾರದಲ್ಲಿ ಲೇಶಲೇಶವಾಡದ್ಹಂಗೆ

ಎಂಬ ಅವರ ಪದವು ಸಂ೯ಾರದಲ್ಲಿ ಆಶಾವಾದವನ್ನು ಮೂಡಿಸುತ್ತದೆ ಮಾನವ ಕರಿಣವ ದ ಭವತೊರೆಯಲ್ಲಿ ಕಲ್ಲಾಗಿರಬೇಕು ಹಾಗಿದ್ದರೆ ಸಂಸಾರ ಭಾಗ್ಯವಿರಲಿ। ಕಂಸಾರಿ ನೆನೆವೆಂಬ ಸೌಭಾಗ್ಯವಿರಲಿ ಎನ್ನಿಸಿತು! ಎನ್ನುತ್ತಾರೆ ಆದ್ದರಿಂದಲೇ

ಮಾನವ ಜನ್ಮ ದೊಡ್ಡದು ಇದು।
ಹಾನಿಮಾಡಲಿಬೇಡಿ ಹುಚ್ಚಪ್ಪಗಳಿರಾ!

ಎಂದು ದಾಸರು ಎಚ್ಚರಿಸಿರುವರಲ್ಲದೆ ಎಂದದ್ದೆಲ್ಲಾ ಬರಲಿ ಗೋವಿಂದನ ದಯವೊಂದಿರಲಿ! ಎಂದು ಹೇಳಿ ಹೇಗೆ ಮುಂದುವರಿಯಬೇಕೆಂಬುದನು ಮಾರ್ಮಿಕವಾಗಿ ಹಾಡಿದ್ದಾರೆ

ಜಗತ್ತಿನಲ್ಲಿ ತಪ್ಪು ಮಾಡಿಲ್ಲದ ರು ಯಾರಿದ್ದಾರೆ! ಶರಣರು ಹೇಳುವಂತೆ ಮರೆದರೆ ಮಾನವ। ಅರಿತರೆ ಶರಣ ಎಂಬ ಮಾತು ದಾಸರಿಗೂ ಪ್ರಿಯವೆ!

ಬಿನ್ನಹಕೆ ಬಾಯಿ ಲವಯ್ಯ। ಅನಂತ ಅಪರಾಧ ನ ಲ್ಲಿ ಇರಲಾಗಿ। ಮಾನವನಿಗೆ ಪಶ್ಚಾತ್ತಾಪವಿರಬೇಕು ಎಲ್ಲ ಪ್ರಾಯಶ್ಚಿತ್ತಗಳಿಗಿಂತ ಪಶ್ಚಾತ್ತಾಪ ದೊಡ್ಡದು ಪಶ್ಚಾತ್ತಾಪದಿಂದ ಎಂಥ ಪಾಪಿಪ ನೂ ಪುನೀತನಾಗುತ್ತಾನೆ ಶರಣರು ಹೇಳವಂತೆ

ಎಲವೋ ಎಲವೊ ಪಾಪಕರ್ಮವ ಮಾಡಿದವನೆ
ಎಲವೊ ಎಲವೋ, ಬಹ್ಮಹತ್ಯವ ಮಾಡಿದವನೆ
ಒಮ್ಮೆ ಶರಣೆನ್ನೆಲವೊ
ಒಮ್ಮೆ ಶರಣೆಂದರೆ ಪಾಪಕರ್ಮ ಓಡ ವುವು
ಸರ್ವ ಪ್ರಾಯಶ್ಚಿತ್ತಕ್ಕೆ ಹೊನ್ನ ಪರ್ವತಂಗಳೈದವು
ಒರ್ವಂಗೆ ಶರಣೆನ್ನು ನಮ್ಮ ಕೂ ೯ಂ ದೇವರಿಗೆ!

ಪುರಂದರದಾಸರು ಜಾತ್ಯಾತೀತ ಮಾನವೋತ್ತಮ ವರ್ಗಕ್ಕೆ ಸೇರಿದವರು ಅವರಿಗೆ ಹರಿ ಹರ ಭೇದವಾಗಲಿ ಬ್ರಾಹ್ಮಣ–ಲಿಂಗವಂತರ ಅಂತರವಾಗಲಿ ಹಿಡಿಸು ತ್ತಿರಲಿಲ್ಲ ಎಂಬುದಕ್ಕೆ ಒಂದು ಐತಿಹ್ಯವುಂಟು। ಪುರಂದರದಾಸರು ಭಾರತಯಾತ್ರೆಯನು ಮುಗಿಸಿ ಸೊಲ್ಲಾಪುರಕ್ಕೆ ಬಂದಾಗ ಬ್ರಾಹ್ಮಣ ಲಿಂಗವಂತರ ಕಲಹ ನಡೆದಿತ್ತು ದಾಸರು ಜಂಗಮರು ನಾವು ಜಗದೊಳು ಎಂಬ ಕೀರ್ತನೆ ಹಾಡಿದ ಮೇಲೆ ಆ ಕಲಹವು ಉಪಶಮನವಾಯಿತಂತೆ! ಹರಿಯೇ ಸರ್ವೋತ್ತಮ ನೆಂದು ಸಾರುವುದೇ ವೈಷ್ಣವ ಧರ್ಮ! ಮಾಧ್ವ ಸಂಪ್ರದಾಯದಲ್ಲಿ ರ ದ್ರದೇವರು ಹರಿಭಕ್ತರಲ್ಲಿ ಐದನೆಯವನು ವಿ ರಶೈವ ಸಂಪ್ರದಾಯದಲ್ಲಿ ಹರಿ ಶಕ್ತಿಸ್ವರೂಪನು

ಲಿಂಗವು ಶಿವ-ಶಕ್ತಿಮಯ ಪೀಠಿಕೆಯೇ ಶ . ಅದು ವಿಷ್ಣುರೂಪ ವಿಷ್ಣು ಮಾಯೆ ! ಮೋಹಿನೀ ಸ್ವರೂಪವು ವಿಷ್ಣುವಿದಲ್ಲವೆ ? ಮೋಹಿನೀ (ಕೇಶವ) ಶಿವರ ಸಂಬಂಧದಿಂದಲ್ಲವೆ ಕಾಲಭೈರವೋತ್ಪತ್ತಿ ?* ಪಾರ್ವತಿಗೆ ನಾರಾಯಣಿ ಎಂಬ ಹೆಸರಿಲ್ಲವೆ ? ವಿಷ್ಣುವಲ್ಲಭಾಯನಮಃ ಎಂದೇ ವ ಕ ಂದ ಪ್ರಿಯ ಂ ಹರಿ-ಹರ ಶಂಕರ-ನಾರಾಯಣ ಉಮಾಮಹೇಶ್ವರ ಸ್ವರೂಪ ದರ್ಶನವನು ಭಕ್ತನು ವಹಾಡಿ ದ ಗ ಯಾರು ಹೇಳ್ಬ ? ಅಮ್ಮ ದೊಡ್ಡವಳೊ ಅಪ್ಪ ದೊಡ್ಡವನೊ ? ಎಂಬ ಮಕ್ಕಳ ಮಾತಿನಂತೆ ಹರಿ ಹರವ ದ ಸೋಜಿಗವೆನಿಸಂತ ದೆಯಲ್ಲವೆ ?

ಹೀಗೆ ಪುರಂದರರದ ಸರ ಕೀರ್ತನೆಗಳಲ್ಲಿ ತತ್ತ್ವ ವಿಮರ್ಶೆ ವಿಡಂಬನೆ ಸ್ತುತಿ ನಿಂದೆ ಮುಂತಾದ ವಿವಿಧ ಉಕ್ತಿ ವೈಚಿತ್ರ್ಯಗಳನು ನ ವ ಕಾಣುತ್ತೇವೆ ಮಧು ರ ಭಾತ್ಸಲ್ಯ ಮ ಂತಾದ ನವವಿಧ ಭಕ್ತಿಗಳ ರಸಾವೇಶವನು ಕಾಣುತ್ತೇವೆ ಪುರಂದರ ದಾಸರ ಉಪದೇಶಗಳು ಜನಮನವನ್ನು ಬಿಂಬಿಸಿ ಕ ವ್ಯದ ಕಳೆಯ ನು ಕನ ಡದಲ್ಲಿ ಅಭಿವ್ಯಂಜಿಸಿವೆ ಪುರಂದರ ಸಾಹಿತ್ಯವು ಕರ್ನಾಟಕ ಸ ಗೀತ ಎಂಬ ಬಿರುದನ್ನು ಸ್ಥಿರಗೊಳಿಸಿದ ಜೀವಂತ ಸಾಹಿತ್ಯ ತ್ಯಾಗರಾಜರು ತಮ್ಮ ತಾಯಿ ಪುರಂದರದಾಸರ ಕೀರ್ತನೆಗಳನು ಹಾಡುವುದನ್ನು ಕೇಳಿ ಸಂಸಂಸ್ಕೃತರಾಗಿ ತಾವು ಕ ತಿರಚನೆಗೆ ತೊಡಗಿದರೆಂಬುದನು ಕೇಳಿದರೆ ಎಂಥ ಕನ್ನಡಿಗನೂ ಅವರ ಬಗ್ಗೆ ಅಭಿಮಾನ ತಳೆಯದಿರಲಾದೀತೆ !

**ಕನಕದಾಸರು** (ಕ್ರಿ ಶ ೧೫೦೮ ೧೬೦೭)

ಪುರಂದರದಾಸರು ಮತ್ತು ಕನಕದಾಸರಿಬ್ಬರೂ ವ್ಯಾಸರ ಯರ ಶಿಷ್ಯರು ಪುರಂದರರು ಹರಿದಾಸರಾದರೆ ಕನಕರು ಉತ್ತಮ ಕವಿಯ ೂ ಆಗಿದ್ದ ರು ಇವರು ಮೋಹನ ತರಂಗಿಣಿ ರಾಮಧಾನ್ಯಚರಿತೆ ನಳಚರಿತ್ರೆ ಹರಿಭಕ್ತಸಾರ ಎ ಬ ಕಾವ್ಯಗಳನೂ ರಚಿಸಿದ್ದಾರೆ ದಾಸರ ಪಂಥದಲ್ಲಿ ಇವರು ಪ್ರತಿಭಾಶಾಲಿಗಳೆನಿಸಿದ್ದರು

ಧಾರವಾಡ ಜಿಲ್ಲೆಯ ಬಾಡ ಎಂಬುದು ಹುಟ್ಟೂರು ಬಿ ರಪ್ಪ ಮತ್ತು ಬಚ್ಚಮ್ಮ ಎಂಬ ದಂಪತಿಗಳಿಗೆ ತಿರುಪತಿ ತಿಮ್ಮಪ್ಪನ ಕ ಪೆಯಿಂದ ಹುಟ್ಟಿದ ಒಬ್ಬನೇ ಮಗ ತಿಮ್ಮಪ್ಪ ಎಂಬುದು ಹುಟ್ಟು ಹೆಸರು

ಬೀರಪ್ಪ ವಿಜಯನಗರದ ಅರಸರ ಪುಟ್ಟ ಪಾಳೆಯಗಾರ ವೀರ ವಿದ್ಯೆಗಳಲ್ಲಿ ಬಲ್ಲಿದ ತಂದೆಯ ತರುವಾಯ ರಾಜ್ಯಾಡಳಿತದಲ್ಲಿಯೂ ದಕ್ಷನಾಗಿದ್ದ ಒಮ್ಮೆ ಈತನಿಗೆ ಅಪಾರ ಧನ ಸಿಕ್ಕಿತು ಜನ ತಿಮ್ಮಪ್ಪನನ್ನು ಕನಕನಾಯಕ ಎಂದು ಕರೆಯ

1 ಶಿವಕೇಶವ ಸಂಭ ಇತು ಕಲಯೇ ಕಾಲಭೈರವಂ ।
ಸ್ಕಾಂದ ಲೈಂಗಕೂರ್ಮಪುರಾಣ (ಶ್ರೀಕರಭಾಷ್ಯ ೩೭೪)

ತೊಡಗಿದರು ಮುಂದೆ ಅದು ಅಂಕಿತ ನಾಮವೂ ಆಯಿತು ಅದರಿಂದ ಆತ ಕಾಗಿನೆಲೆಯಲ್ಲಿ ಗುಡಿ ಕಟ್ಟಿಸಿ ಆದಿಕೇಶವನನ್ನು ಅಲ್ಲಿ ಪ್ರತಿಷಿ ಎದ ಕೀರ್ತನೆಗಳನ್ನು ರಚಿಸಿ ಹಾಡಿದ ಯೌವನ, ಐಶ್ವರ್ಯ ಪ್ರಭುತ್ವ ಮತ್ತು ಕೀರ್ತಿಗಳು ಬೆನ್ನು ಹತ್ತಿದ್ದವು

ಪತ್ನೀ ವಿಯೋಗದಿಂದ ಸಂಸಾರದಲ್ಲಿ ಒಗಂಪ್ಸೆಹಂಟ್ಟಿ ವೈರಾಗ್ಯ ಮೂಡಿ ಬಂದು ಯುದ್ಧದಲ್ಲಿ ಪರಾಜಿತನಾದ ಗಾಯಗೊಂಡ ಅಪಕೀರ್ತಿ ಮನಸ್ಸು ನೊಂದು ವ್ಯಾಸರಾಯರ ಅನುಗ್ರಹಕ್ಕೆ ಪಾತ್ರನಾಗಿ ದಾಸಕೂಟ ಸೆ ರಿದ ಕನಕನ ದೃಢ ವೈರಾಗ್ಯವನ್ನು ಕಂಡು ಪುರಂದರದಾಸರು ತಮ್ಮ ತಂಬೂರಿಯನ್ನು ಕನಕನಿಗಿತ್ತರು ಕನಕ ತನ್ನ ಜೀವನದ ಬಹುಭಾಗವನು ತಿರುಪತಿಯಲ್ಲಿ ಕಳೆದು ತನ್ನ ಕಡೆಯ ದಿನಗಳಲ್ಲಿ ಕಾಗಿನೆಲೆಗೆ ಹಿಂದಿರುಗಿ ಅಲಿ ಅಸುನೀಗಿದನು

ಕನಕದಾಸರು ಹೆಚ್ಚು ಪಂಡಿತರಲ್ಲದಿದ್ದರೂ ಪ್ರತಿಭಾಶಾಲಿಗಳು ಅವರ ಜೀವನದಲ್ಲಿ ನಡೆದ ಕೆಲವು ಘಟನೆಗಳಿಂದ ಅವರ ಪ್ರತ್ಯುತ್ಪನ್ನಮತಿ ಸಮಯೋಚಿತ ಪ್ರತಿಭೆಗಳು ವ್ಯಕ್ತವಾಗುತ್ತವೆ ವ್ಯಾಸರಾಯರು ಸ್ವಯಂ ಮಹಾನುಭಾವರು ಹುಟ್ಟಿನಿಂದ ಬ್ರಾಹ್ಮಣ್ಯವನು ಉಚ್ಚನೀಚತೆಯನು ಅವರು ದೂರ ಮಾಡಿದ್ದರು ಇಲ್ಲದ ಪಕ್ಷದಲ್ಲಿ ಪುರಂದರ ಮತ್ತು ಕನಕರಿಗೆ ಅಲ್ಲಿ ಅವಕಾಶ ದೊರೆಯುತ್ತಿತ್ತೆ ! ಆದರೆ ಅಲ್ಲಿಯ ಪರಿಸರ ಅದಕ್ಕೆ ವಿರುದ್ಧವಾಗಿತ್ತು

ಕನಕ ಅಷ್ಟಟ ದ್ವಿಜರ ಮಧ್ಯದಲ್ಲಿ ಕೂಡು ವುದು ಅವರಿಗೆ ಬೇಡವಾಗಿತ್ತು ಇದನು ಗಮನಿಸಿದ ವ್ಯಾಸರಾಯರು ಕನಕನ ಸುಸಂಸ್ಕಾರವನ್ನು ಮತ್ತು ದ್ವಿಜೋತ್ತಮರ ಪಂಡಿತರ ವೈಶಿಷ್ಟ್ಯವನು ಬಯಲಿಗಳೆಯಲು ಕೆಲವು ಸಂದರ್ಭಗಳನ್ನು ಒದಗಿಸಿಕೊಟ್ಟರು

೧ ಒಮ್ಮೆ ಅಲ್ಲಿ ವಿದ್ವತ್ ಸಭೆ ಏರ್ಪಟ್ಟಿತ್ತು ಗುರುಗಳು ಮೋಕ್ಷಕ್ಕೆ ಯಾರು ಅರ್ಹರು ? ಎಂಬ ಪ್ರಶ್ನೆಯನ್ನು ಸಭೆಯ ಮುಂದಿಟ್ಟರು ಪಂಡಿತರು ತಬ್ಬಿಬ್ಬಾದರು ಯಾರಿಂದಲೂ ಸರಿಯಾದ ಉತ್ತರ ಬಾರದಿದ್ದಾಗ ಕನಕನ ಸರದಿ ಬಂತು ಆತ ನಾನು ಹೋದರೆ ಹೋ ದೇನು ! ಎಂದ ಪಂಡಿತರು ಕೆರಳಿದರು ಏನು ಅವಮಾನ ಗುರುಗಳಿಗೆ ಸಲ್ಲಬೇಕಾದದ್ದು ಶೂದ್ರ ಕನಕನು ಮೋಕ್ಷಕ್ಕೆ ತಕ್ಕವನೆ ? ಮಂಂತಾಗಿ ಗದ್ದಲವೆಬ್ಬಿಸಿದರು ಕನಕ ಪ್ರಶಾಂತವಾಗಿ ಉತ್ತರಿಸಿದ ನಾನು ಎಂದರೆ ಅಹಂಕಾರ ಅಹಂಕಾರ ಮಮ ಕಾರವಳಿದವರು ಅದು ಯಾರಿಗೆ ಹೋಗುತ್ತದೆಯೋ ಅವರು ಮೋಕ್ಷಕ್ಕೆ ಹೋಗಬಲ್ಲರು ! ಎಂದ ಪಂಡಿತರು ತಣ್ಣಗಾದರು

೨ ಮತ್ತೊಂದು ದಿನ ಎಲ್ಲರಿಗೂ ಒಂದೊಂದು ಬಾಳೆಯ ಹಣ್ಣನಿತ್ತು ಯಾರೂ ಇಲ್ಲದೆಡೆ ತಿಂದು ಬನ್ನಿ ಎಂದರು ಎಲ್ಲರೂ ತಮ್ಮ ತಮ್ಮಗೆ ತೋಚಿದಂತೆ ಗುಟ್ಟಾಗಿ ತಿಂದು ಬಂದರು ಕನಕ ಮಾತ್ರ ಹಣ್ಣು ತಿನದೆಯೇ ಹಿಂದಿರುಗಿದ್ದಕೆ ಕೇಳಿದ್ದಕ್ಕೆ ಆತ ಉತ್ತರಿಸಿದ—ಎಲ್ಲೆಡೆಯೂ ದೇವರು ಇರುವುದರಿಂದ ಯಾರೂ ಇಲ್ಲದ ಸ್ಥಳವೇ ನನಗೆ ದೊರೆಯಲಿಲ್ಲ ! ಎಂದ ಪಂಡಿತರ ಸದ್ದಡಗಿತ್ತು

೩. ಕನಕ ಶ್ರೀಕೃಷ್ಣದೇವರನು ಸಂದರ್ಶಿಸಲು ಉಡುಪಿಗೆ ಹೋದ ಅರ್ಚಕರು ಶೂದ್ರ ಕನಕನಿಗೆ ಒಳಗೆ ಬರಲು ಅವಕಾಶಕೊಡಲಿಲ್ಲ ಕನಕ ಗುಡಿಯ ಹಿಂದೆ ಹೋಗಿ ಕೃಷ್ಣನನ್ನು ಸ್ತುತಿಸಿದ ಸ್ವಾಮಿಯ ವಿಗ್ರಹ ಹಿಮ್ಮುಖವಾಯಿತು ಹಿಂದಿನ ಗೋಡೆಯಲ್ಲಿ ಕಿಂಡಿ ಬಿತ್ತು ಕೃಷ್ಣ ಕನಕನಿಗೆ ದರ್ಶನವಿತ್ತ ಕನಕನಕಿಂಡಿ ಇಂದಿಗೂ ಇದೆ

ಕನಕದಾಸರ ಕಾವ್ಯಗಳಲ್ಲಿ ಮೋಹನತರಂಗಿಣಿ ೨೭೦೦ ಸಾಂಗತ್ಯ ಛಂದಸ್ಸಿನ ಬೃಹತ್ ಕಾವ್ಯ ಉಳಿದುವು ಭಾಮಿನಿ ಷಟ್ಪದಿಯಲ್ಲಿವೆ ಕನಕದಾಸರ ರಾಮಧಾನ್ಯ ಚರಿತೆ ರಾಗಿ ಭತ್ತ ಮುಂತಾದ ಧಾನ್ಯಗಳು ತಮ್ಮ ತಮ್ಮ ವೈಶಿಷ್ಟ್ಯಗಳನ್ನು ಶ್ರೀರಾಮನ ಮುಂದೆ ಹೇಳಿಕೊಳ್ಳುವ ಸ್ವಾರಸ್ಯವಾದ ಖಂಡಕಾವ್ಯ

ಕನಕದಾಸರು ಸಮಾಜದಲ್ಲಿ ನೆಲೆಯಾಗಿದ್ದ ಕೆಲವು ಮೌಢ್ಯಗಳನು ಕುರಿತು ಖಂಡಿಸಿದ್ದಾರೆ ಎಂಟು ಬಗೆಯ ಮದಗಳಲ್ಲ ಕುಲಮದವೂ ಒಂದು ಜಾತೀಯತೆ ಎಂಬುದು ಇದರ ಪರ್ಯಾಯ ಪದ ಈ ದಿಸೆಯಲ್ಲಿ ಶಿವಶರಣರು ಜಾತಿ ಸೂತಕವನ್ನು ಕುರಿತು

ವ್ಯಾಸ ಬೋಯತಿಯ ಮಗ ಮಾರ್ಕಂಡೇಯ ಮಾತಂಗಿಯ ಮಗ
ಕುಲವನರಸದಿರಿಂ ಭೋ ಶ್ವಪಚಕೋಟಿಯಾದರೇನು ?
ಶಿವಭಕ್ತನೇ ಕುಲಜನು

ಮುಂತಾದ ಬಿಚ್ಚು ಮಾತುಗಳಿಂದ ಕೊಲ್ಲುವವನೇ ಮಾದಿಗ ಹೊಲಸು ತುಂಬುವನೇ ಹೊಲೆಯ ಮುಂತಾದ ಚುಚ್ಚು ಮಾತುಗಳಿಂದ ಸಮಾಜವನು ಎಚ್ಚರಿಸಿದ್ದಾರೆ ಕನಕದಾಸರು ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ

ಕುಲ ಕುಲ ಕುಲವೆನ್ನುತಿಹರು । ಕುಲ ಯಾವುದು
ಸುಖವುಳ್ಳ ಜನರಿಗೆ ॥ ॥ಪ॥

ಕೆಸರಲ್ಲಿ ಪುಟ್ಟಿದ ತಾವರೆ ಹಸುವಿನ ಮಾಂಸದಲ್ಲಿ ಹುಟ್ಟಿದ ಹಾಲು ಮೃಗದ ಮೈಯ ಕೊಳೆ ಕಸ್ತೂರಿ ಮುಂತಾದುವನ್ನೆಲ್ಲ ದ್ವಿಜರೆಲ್ಲ ಬಳಸುವುದಿಲ್ಲವೆ ? ಆತ್ಮ ಯಾವ

ಕುಲ ? ಜೀವ ಯಾವ ಕುಲ ? ತತ್ತ್ವೇಂದ್ರಿಯಂಗಳ ಕುಲ ಪೇಳಿರಯ್ಯಾ ? ಎಂದು ಪ್ರಶ್ನಿಸಿ ಕುಲವೆಂದಕ್ಕೆ ಇತಿಶ್ರೀ ಹಾಡಿದ್ದಾರೆ

ಭಗವಂತನಲ್ಲಿ ದೃಢ ವಿಶ್ವಾಸವನಿಟ್ಟ ಮೇಲೆ ಅವನಿಗೆ ಜೀವನದ ತಲ್ಲಣವೆಲ್ಲಿಯದು ! ಎಂಬುದನು ಕನಕದಾಸರ ಉಕ್ತಿಯಲ್ಲಿಯೇ ಕೇಳಬೇಕು

ತಲ್ಲಣಿಸದಿರು ಕಂಡ್ಯ ತಾಳು ಮನವೆ ।
ಎಲ್ಲರನು ಸಲಹುವನು ಇದಕೆ ಸಂಶಯವಿಲ್ಲ ॥ ॥ಪ॥
ಬೆಟ್ಟದ ತುದಿಯಲ್ಲಿ ಹುಟ್ಟಿದ ವೃಕ್ಷಕ್ಕೆ ಕಟ್ಟೆ ಕಟ್ಟಿ ನೀರೆರೆದವರು ಯಾರು ?
ಅಡವಿಯಲ್ಲಾಡುವ ಮೃಗಪಕ್ಷಿಗಳಿಗೆಲ್ಲ ಅಡಿಗಡಿಗೆ ಆಹಾರವಿತ್ತವರು ಯಾರು?
ಕಲ್ಲೊಳಗೆ ಹುಟ್ಟಿ ಕೂಗುವ ಕಪ್ಪೆಗಳಿಗೆಲ್ಲ ಅಲ್ಲಲ್ಲಿಗಾಹಾರವಿತ್ತವರು ಯಾರು?

ಎಂಬ ನಿದರ್ಶನಗಳಿಂದ ಬಲ್ಲಿದನಾದ ಆದಿಕೇಶವರಾಯನು ಎಲ್ಲರನು ರಕ್ಷಿಪನೆಂಬ ವಿಶ್ವಾಸವಿಟ್ಟ ಮೇಲೆ ಜೀವನದಲ್ಲಿ ತಲ್ಲಣವೆಂಬುದುಂಟೆ ದೀತೆ ?

ಕನಕದಾಸರ ಹಾಡುಗಳಲ್ಲ ಉಕ್ತಿ ವೈಚಿತ್ರ್ಯಕ್ಕೆ ಅಭಾವವಿಲ್ಲ ಸತ್ಸಂಗ ಮಾನವನ ಉದ್ಧಾರಕ್ಕೆ ಅಗತ್ಯವೆಂದು ಹೇಳುವಾಗ –

ಅಜ್ಞಾನಿಗಳ ಕೂಡೆ ಅಧಿಕ ಸ್ನೇಹಕ್ಕಿಂತ
ಸುಜ್ಞಾನಿಗಳ ಕೂಡೆ ಜಗಳ ಲೇಸು !

ಎಂಬ ಅವರ ಮಾತಿನ ಮೋಡಿಯನ್ನು ಗಮನಿಸಬೇಕು
ಡಾಂಭಿಕಾಚಾರಗಳ ಬಗ್ಗೆ ಸರ್ಪಭೂಷಣ ಶಿವಯೋಗಿಗಳು –

ಬಿಡು ಬಾಹ್ಯದೊಳು ಡಂಭವ । ಮಾನಸದೊಳ
ಗೆಡೆಬಿಡದಿರು ಶಂಭುವ
ಒಡಲೊಳು ವಂಚಿಸಿ ಹೊರಗೆ ನೀ ಕೀರ್ತಿಯ
ಪಡೆದರೆ ಶಿವನಿನಗೊಲಿವನೆ ಮರುಳೆ ॥ಪ॥

ಜನಮೆಚ್ಚ ನಡಕೊಂಡರೇನುಂಟು ಲೋಕದಿ
ಮನಮೆಚ್ಚಿ ನಡೆಕೊಂಬುವುದೆ ಚೆಂದವು
ಜನರೇನು ಬಲ್ಲರು ಒಳಗಾಗೊ ಕೃತ್ಯವ
ಮನವರಿಯದ ಕಳ ತನವಿಲ್ಲವಲ್ಲಾ ! ॥ಪ॥

ಜನಮೆಚ್ಚಿದರೆ ಅವರು ನಿನನ್ನು ಕೈಲಾಸಕ್ಕೆ ಒಯ್ಯಬಲ್ಲರೆ ಅವರು ಮೆಚ್ಚದ ಮಾತ್ರಕ್ಕೆ ನಿನನ ಶಿವನು ಬಿಟ್ಟಾನೆ ! ಇಲ್ಲಿ ಜನರು ನಿನ್ನನ್ನು ದೊಡ್ಡವನೆಂದ ಮಾತ್ರಕ್ಕೆ ಚಿನ್ಮಯ ಶಿವನಿಗೆ ನಿನ್ನ ಯೋಗ್ಯತೆ ತಿಳಿಯದೆ ?

ವ ಲಂತಾಗಿ ಡಾಂಭಿಕ ವರ್ತನೆಯುನ ಖಂಡಿಸಿದ್ದಾರೆ ಈ ದಿಸೆಯಲ್ಲಿ ಕನಕ ದಾಸರು –

ಸಂನ್ಯಾಸಿ ಜಂಗಮ ಜೋಗಿ ಜಟ್ಟಿ ಮೊಂಡ ಬೈರಾಗಿ
ನಾನಾ ವೇಷಗಳಲ್ಲಿ ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ

ಎಂದು ಬಿಚ್ಚು ಮಾತಿನಿಂದ ಇನ್ನೂ ರಮ್ಯವಾಗಿ ಹೇಳಿ ಎಚ್ಚರಿಸಿದ್ದಾರೆ

ಕನಕದಾಸರ ಕೀರ್ತನೆಗಳಲ್ಲಿ ಗೂಡಾರ್ಥಗರ್ಭಿತವಾದ ಒಗಟು ಮಾತುಗಳು ಸೇರಿವೆ ಇವು ವಚನಕಾರರಲ್ಲಿ ಅಗ್ರಗಣ್ಯರಾದ ಅಲ್ಲಮಪ್ರಭುವಿನ ಬೆಡಗಿನ ವಚನಗಳನ್ನು ಹೋಲುತ್ತವೆ ಇಲ್ಲಿ ಅವುಗಳನ್ನು ಕನಕನ ಮುಂಡಿಗೆಗಳೆಂದು ಕರೆಯುತ್ತಾರೆ ಅವು ಮೋಡದಲ್ಲಿ ಅಡಗಿರುವ ಮಿಂಚಿನಂತೆ ಹೊಳೆಯುತ್ತವೆ ಹೊರ ನೋಟಕ್ಕೆ ಅವು ಅಸಂಬದ್ಧವೆನಿಸಿದರೂ ಅಲ್ಲಿ ಸಾಂಕೇತಿಕವಾದ ಅರ್ಥವು ಹೊಳೆದಾಗ ಅವುಗಳ ರಮ್ಯತೆ ವೇದ್ಯವಾಗುತ್ತದೆ

ಒಂಬತ್ತು ಹೂವಿಗೆ ಒಂದೇ ನಾಳವು ಚಂದವಾದುವು
ತೆಂಬಿನಾಳ ತುದಿ ತುಂಬ ಭಾನುಪ್ರಭೆ ಚಂದವಹುದು

ಕಾಲಿಲ್ಲದವನು ಆ ಮರ ಹತ್ತಿದ ಕೈಯಿಲ್ಲದವನು ಆ ಹಣ್ಣನು ಕೊಯ್ದನು ಕಡೆಯಲ್ಲಿ ಕನಕನಾಡಿದ ಗುಟ್ಟು ಆದಿಕೇಶವ ಬಲ್ಲ! ಎಂದು ಸೂಚಿಸುತ್ತಾರೆ

ಸರ್ವಭೂಷಣ ಶಿವಯೋಗಿಗಳ ಕೀರ್ತನೆಗಳಲ್ಲಿಯೂ ಈ ಬಗೆಯ ಒಗಟು ಮಾತುಗಳಿಗೆ ಬರವಿಲ್ಲ

ಬೀಜವೊಂದನು ಹಿಡಿದು ಬೆಳೆದುವು ಮೂರ್ ಮೊಳಕೆಗಳು
ಬೀಜಕ್ಕೆ ನೆಲವಿಲ್ಲ ಬಿತ್ತಿದಾತನೆ ಬಲ್ಲ ॥ಪ॥

ಎಂಬ ಅರ್ಥಗರ್ಭಿತವಾದ ಪದಗಳನ್ನು ಬಿಡಿಸಿ ವಿವರಿಸಿದಾಗ ಅಲ್ಲಿನ ಆಧ್ಯಾತ್ಮಿಕವಾದ ಹೃದಯಂಗಮವಾದ ಅರ್ಥಬೋಧವಾಗುತ್ತದೆ

ಕನಕದಾಸರ ಕಲ್ಪನಾಶಕ್ತಿ ಅಮೋಘವಾದದ್ದು ಜೀವಿಯು ಮಾನವ ಜನ್ಮ ತಳೆಯುವುದಕ್ಕೆ ಮುನ್ನ ಕ್ರಿಮಿ-ಕೀಟ ಮುಂತಾದ ಎಷ್ಟು ಜನ್ಮ ತಳೆದಿರಬಹುದು ಎಂಬುದನ್ನು ಕನಕದಾಸರು ಹೇಳುವುದು ಹೀಗೆ –

ಹಲವು ಜನುಮದಿ ತಾಯಿ ಎನಗಿತ್ತ ಮೊಲೆ ಹಾಲು
ನಲಿದುಂಬಾಗ ನೆಲಕ್ಕೆ ಬಿದ್ದುದೂ ಕೂಡಿ
ಅಳಿಯೆ ಕ್ಷೀರಾಂಬುಧಿಗೆ ಇಮ್ಮಿಗಿಲು !

ಇದೇ ಅರ್ಥವನ್ನು ಬಿಂಬಿಸುವ ನಿಜಗುಣ ಶಿವಯೋಗಿಗಳ ಮಾತನ್ನು ಕೇಳಿ – ಇಡಿಯ ಪೃಥ್ವಿಯೆಲ್ಲವನ್ನು ಪುಡಿಮಾಡಿ ಅಣುಗಳಾಗಿ ಮಾಡಿದರೆ ಎಷ್ಟಾಗಬಹುದೋ ಅಷ್ಟು ಜನ್ಮಗಳನ್ನು ತಳೆದು ಈ ಜೀವನು ಕಡೆಗೆ ಮಾನವ ಜನ್ಮ ತಳೆಯುತ್ತಾನೆ! ಎಂಬ

ಅರ್ಥದ ಪದವನ್ನು ನೆನೆದಾಗ ಈ ಇಬ್ಬರೂ ಅಪರೋಕ್ಷಾನುಭಾವಿಗಳ ಮಾನಸಿಕ ಏಕತಾನತೆಯು ವೇದ್ಯವಾಗುತ್ತದೆ

ಇದೆ ಧಾಟಿಯಲ್ಲಿ ಮುಂದುವರಿದ ದಾಸರು — ಮಗುವಾಗಿ ಜನಿಸಿದಾಗ ಅತ್ತ ಕಣ್ಣೀರೆಲ್ಲ ಸೇರಿದರೆ ಲವಣ ಸಮುದ್ರದ ಮೂರರಷ್ಟಾಗುವುದಂತೆ ! ಆಯಾ ಜನ್ಮಗಳಲ್ಲಿನ ದೇಹಗಳ ಎಲುಬುಗಳನು ರಾಶಿ ಮಾಡಿದರೆ ಮೇರು ಪರ್ವತದ ನಾಲ್ಕರಷ್ಟಾಗುವುದಂತೆ ! ಏನು ಕಲ್ಪನಾಶಕ್ತಿ ಕನಕದಾಸರದು ! ರೂಪಕಗಳನು ಕಣ್ಣಿದುರಿಗೆ ಕಂಡಂತೆ ಬಣ್ಣಿಸುವ ಅಸಾಧಾರಣ ಶಕ್ತಿ ಅವರದು

> ಪಂಚೇಂದ್ರಿಯಗಳೆಂಬ ಮಂಚಗೆಯು ಹಾಕಿರಯ್ಯ
> ಚಂಚಲವೆಂಬ ಕಾಯಿಯನ್ನು ಒಡಿಸಿರಯ್ಯ
> ಉದಯಾಸ್ತಮಾನವೆಂಬ ಎರಡು ಕೊಳಗವ ಮಾಡಿ
> ಆಯುಷ್ಯದ ರಾಶಿಯನು ಅಳೆಯಿರಯ್ಯ !

ಗಾಳಿಗೊಡ್ಡಿದ ಸೊಡರು ಸಂಸಾರ ಹೇರೊಪ್ಪಿಸಿದ ವೇಳೆ ಸಂಕಿವೇ ಮುಂತಾದ ಲೋಕಾನುಭವಗಳನ್ನು ನೆನೆದಾಗ ವಿಮರ್ಶಕ ಮೂಕನಾಗಬೇಕಾಗುತ್ತದೆ

## ವಾದಿರಾಜ

ವಾದಿರಾಜರೂ ವ್ಯಾಸರಾಯರ ಕಾಲದವರೆ ! ಅವರದು ದ ಕ ಜಿಲ್ಲೆಯ ಹೂವಿನಕೆರೆ ದೇವರರಾಮಭಟ್ಟ–ಗೌರೀದೇವಿಯರ ಸತ್ಪುತ್ರ ವಿದ್ಯಾಗುರು ಉಡುಪಿ ಅಷ್ಟಮಠಗಳಲ್ಲೊಂದಾದ ಸ್ವಾದಿಮಠದ ವಾಗೀಶತೀರ್ಥರು ಬಾಲ್ಯದಲ್ಲಿ ಸಂನ್ಯಾಸ ದೀಕ್ಷೆ ವಾದಿರಾಜನೆಂದು ನಾಮಕರಣ ಈತನ ಪಾಂಡಿತ್ಯ, ಪಾಕ್ರಮಗಳನ್ನು ಕಂಡ ಕೃಷ್ಣದೇವರಾಯ ಇವರಿಗೆ ಪ್ರಸಂಗಾಭರಣತೀರ್ಥ ಎಂಬ ಬಿರುದಿತ್ತಿದ್ದನಂತೆ ! ಇವರು ಸಂಸ್ಕೃತದಲ್ಲಿಯೂ ಗ್ರಂಥ ರಚನೆ ಮಾಡಿದ್ದಾರೆ ಕನ್ನಡದಲ್ಲಿ ವೈಕುಂಠ ವರ್ಣನೆ ಸ್ವಪ್ನಗದ್ಯ ಲಕ್ಷ್ಮೀಯ ಶೋಭಾನೆ ಭಾರತ ತಾತ್ಪರ್ಯ ನಿರ್ಣಯ ಟೀಕೆ ಎಂಬ ಗ್ರಂಥಗಳನು ಅನೇಕ ಕೀರ್ತನೆ ಸುಳಾದಿ ಉಗಾಭೋಗಗಳನು ರಚಿಸಿದ್ದಾರೆ ವಾದಿರಾಜರು ಹಯವದನ ಎಂಬ ಅಂಕಿತದಿಂದ ಅನೇಕ ಕೀರ್ತನೆಗಳನ ರಚಿಸಿದ್ದಾರೆ ದೀನ ದಲಿತರ ಉದ್ಧಾರಕ್ಕಾಗಿ ವಾದಿರಾಜರು ತಮ್ಮ ಭಾಷೆಯಲ್ಲಿಯೂ ಕೀರ್ತನೆ ರಚಿಸಿ ಹಾಡಿಸಿದರೆನ್ನುತ್ತಾರೆ

ಕನ್ನಡ ನಾಡಿನಲ್ಲಿ ಸುಪ್ರಸಿದ್ಧವಾಗಿರುವ

> ಹಣವೆ ನಿನ ಗುಣವೆನಿತು ಬಣ್ಣಿಸಲಿ
> ಹಣವಿಲ್ಲದವನೊಬ್ಬ ಹೆಣದಂತ ಕಡೆಯಯ್ಯ ॥೧॥

ಎಂಬ ಪಲ್ಲವಿಯ ಕೀರ್ತನೆ ವಾದಿರಾಜರದು ಅಲ್ಲಿ ಬರುವ ಬೇರೆಯಾಗದವರನ್ನೆಲ್ಲ ಬೇರೆವಾಡಿಸುವ ಕುಲಗೆಟ್ಟವರನ್ನೆಲ್ಲ ಕುಲಕೆ ಸೇರಿಸ ವ ಹೊಲೆಯನಾದರು ತಂದು ಒಳಗೆ ಸೇರಿಸುವ ಮಂಗನೆಂದರೂ ಆನಂಗ ಸುವ ಕಂಗಳಿಲ್ಲದವರಿಗೆ ವ ಗಳ ಕೊಡಿಸುವ ಅರಿಯದ ಶ ಂರನ ಅರಿತವನೆನಿಸುವ ಹಣದ ಪ್ರಭಾವವನ್ನು ವೊನಚಾದ ಮಾತುಗಳಿಂದ ರಚಿತವ ದ ಈ ಪದ ಜನಜನಿತ !

ವಾದಿರಾಜರು ಸ ಹಿತ್ಯದಲ್ಲಿ ಮಾಡಿರುವ ಪರಿಶ್ರಮಕಿಂತ ಧಾರ್ಮಿಕವಾಗಿ ಮಾಡಿರುವ ಸ ಧಾರಣೆಗಳೇ ಹೆಚ್ಚು-ಉಡುಪಿಯಲ್ಲಿ ಹಿಂದೆ ಎರಡು ತಿಂಗಳಿಗೊಮ್ಮೆ ನಡೆಯುತ್ತಿದ್ದ ಪರ್ಯಾಯೋತ ವವನು ಎರಡು ವರ್ಷಕ್ಕೊಮ್ಮೆ ಮಾಡಿದ ಸುಧಾರಣೆ ವಾದಿರಾಜರದು

ಸುಪ್ರಸಿದ್ಧ ಧರ್ಮಸ್ಥಳದ ಮಂಜುನಾಥ ಸ್ವಾಮಿಯನ್ನು ಕದಿರೆಯಿಂದ ತಂದು ಸ್ಥಾಪಿಸಿದ ಹಿರಿಮೆ ವ ದಿರಾಜರದು ಸುಮಾರು ೧೨೦ ವರ್ಷಗಳಷ್ಟು ದೀರ್ಘಕಾಲ ಜೀವಿಸಿ ಐದು ಪರ್ಯಾಯೋತ್ಸವಗಳನು ನಡೆಸಿದ ಕೀರ್ತಿ ಇವರದು

## ವೈಕುಂಠದಾಸ

ಈತನು ವಾದಿರಾಜರ ಸಮಕಾಲೀನ ಬೇಲೂರು ಚನ್ನಕೇಶವ ಸ್ವಾಮಿಯ ಭಕ್ತ ಅಂಕಿತ ವೈಕುಂಠಕೇಶವ ಎಂಬುದು ಅತ ಒಮ್ಮೆ ದೇವರದರ್ಶನಕ್ಕೆ ಹೋದಾಗ ಗುಡಿಯ ಬಾಗಿಲು ಮುಚ್ಚಿತ್ತು ಬಾಗಿಲನ್ನು ತೆಗೆದು ಸೇವೆಯನು ಕೊಡು ಹರಿಯೆ ಎಂದು ಹಾಡಿ ದಿಟ್ಟಾಗ ದೇವಾಲಯದ ಕದ ತೆರೆಯಿತಂತೆ !

ವೈಕುಂಠ ದಾಸರ ತರುವಾಯ ಎಪ್ಪತ್ತು ಎಂಭತ್ತು ವರ್ಷಗಳವರೆಗೆ ದಾಸ ಪರಂಪರೆ ಸ್ಥಗಿತವಾಗಿತ್ತು ಎಂದರೆ ಪ್ರಭಾವಶಾಲಿಗಳಾದ ಅಪರೋಕ್ಷಾನುಭಾವಿಗಳು ಯಾರೂ ಹುಟ್ಟಲಿಲ್ಲ ಈ ಅವಧಿಯಲ್ಲಿ ಪುರಂದರದಾಸರ ಇಲ್ಲ ರು ಮಕ್ಕಳೂ ದಾಸ ಪರಂಪರೆಯನು ಮುಂದುವರಿಸಿ ದರೆಂದು ಹೇಳಲಾಗಿದೆ

### ರಾಘವೇಂದ್ರತೀರ್ಥರು (ಕ್ರಿ ಶ ಸು 1680)

ಸುಧೀಂದ್ರತೀರ್ಥರ ಶಿಷ್ಯ ರಾಘವೇಂದ್ರರು ಕುಂಭಕೋಣದ ತಿಮ್ಮಪ್ಪ ಎಂಬುವರಿಗೆ ವೆಂಕಟೇಶನ ಅನುಗ್ರಹದಿಂದ ಹುಟ್ಟಿದವರು ಇವರು ಚಿಕ್ಕಂದಿನಲ್ಲಿಯೇ ತರ್ಕ-ವ್ಯಾಕರಣ ಮತ್ತು ವೇದಾಂತಗಳಲ್ಲಿ ಪಾಂಡಿತ್ಯಗಳಿಸಿದರು ಸುಧಾ ಎಂಬ ವ್ಯಾಖ್ಯಾನಕ್ಕೆ ಇವರು ಪರಿಮಳ ಎಂಬ ಟೀಕೆಯನ್ನು ಬರೆದರು

ರಾಘವೇಂದ್ರರು ಪೂರ್ವಾಶ್ರಮದಲ್ಲಿ ಗೃಹಸ್ಥರಾಗಿದ್ದರು ಅವರಿಗೆ ಲಕ್ಷ್ಮೀನಾರಾಯಣನೆಂಬ ಮಗನಿದ್ದನು ಸುಧೀಂದ್ರರಿಂದ ಸಂನ್ಯಾಸವನ್ನು ಪಡೆದು ಮಂತ್ರಾಲಯ ದಲ್ಲಿ ನೆಲೆಸಿದರು ವೇಣುಗೋಪಾಲ ಎಂಬುದು ಇವರ ಅಂಕಿತ

ಂದು ಒನಪ್ರಿಯಮಾಗಿರುವ – ಇಂಥ ಎನಗೆ ಗೋವಿಂದ
ಎನ್ನಯ ಪಾದಾರವಿಂದವ ತೊರೋ ಮುಕುಂದನೆ ||ಪ||

ಮಂದರೋದ್ಧಾರನೆ ನಂದ ಗೋಪನಕಂದ ।
ಇಂದಿರಾರಮಣ ಗೋವಿಂದ ಗೋಕುಲಾನಂದ ||ಅ ಪ||

ಎಂಬ ಕೀರ್ತನೆಯಲ್ಲಿ ಭಗವಂತನಲ್ಲಿ ಅನನ್ಯನಾಗಿ ಬೇಡಿಕೊಂಡಿರುವ ಪ್ರಾರ್ಥನೆ ಎಂಬಾ ಸಹಜವ ಗಿದೆ

ರಾಘವೇಂದ್ರರಿಗಿರುವ ಯಶಸ್ಸಿಗೆ ಕಾರಣ ಅವರು ಸಾಹಿತಿಯಾಗಿದ್ದುದು ಎಂಬುದಕ್ಕಿಂತ ಅಪರೋಕ್ಷಾನುಭಾವಿಯಾಗಿದ್ದುದಕ್ಕಾಗಿ ಮಂತ್ರಾಲಯದರಾಯರೆಂದರೆ ಶ್ರೀ ರಾಘವೇಂದ್ರರೇ । ಅವರ ಮಾಹಾತ್ಮ್ಯ ಕನ್ನಡನಾಡಿನಲಿ ಮನೆ ಮಾತ । ರಾಘವೇಂದ್ರ ಸ್ವಾಮಿಗಳ ಪ್ರಭಾವದಿಂದ ಮಂತ್ರಾಲಯದ ಪರಿಸರದಲ್ಲಿ ಅನೇಕ ಮಂದಿ **ಹರಿದಾಸರು** ಜನ್ಮಧಾರಣ ಮಾಡಿದರು ಇವರಲ್ಲಿ **ಪ್ರಸನ್ನ ವೆಂಕಟದಾಸ ವಿಜಯದಾಸ, ತಿಮ್ಮಣ್ಣ ದಾಸ ಗೋಪಾಲದಾಸ ಮೋಹನದಾಸ ಜಗನ್ನಾಥದಾಸ** ಮಂತಾದವರು

ಹರಿದಾಸರಲ್ಲ 15–16 ನೆ ಶತಮಾನಗಳಲಿ ಶ್ರೀಪಾದರಾಜರಿಂದ ಆರಂಭವಾದ ಪರಂಪರೆ ಮೊದಲ ಘಟ್ಟವಾದರೆ ಎರಡನೆಯ ಘಟ್ಟ ರಾಘವೇಂದ್ರ ತೀರ್ಥರ ಪರಂಪರೆಯದು

**ಪ್ರಸನ ವೆಂಕಟದಾಸ** (ಕ್ರಿ ಶ 1680) ಈತನದು ವಿಜಾಪುರ ಜಿಲ್ಲೆಯ ಬಾಗಲಕೋಟೆ ಬಾಲ್ಯದಲ್ಲಿಯೇ ಮಾತಾ ಪಿತೃವಿಯೋಗ ತನ್ನ ಅತ್ತಿಗೆಯ ಕಾಟ ತಾಳಲಾರದೆ ತಿರುಪತಿಗೆ ಓಡಿ ಹೋದ ಅಲ್ಲಿ ಭಗವಂತನ ಕೃಪೆಯಿಂದ ಕವಿತಾಶಕ್ತಿ ಮೂಡಿ ಬಂದು ಪ್ರಸನ್ನ ವೆಂಕಟಕೃಷ್ಣ ಎಂಬ ಅಂಕಿತದಿಂದ ಅನೇಕ ಕೀರ್ತನೆ ರಚಿಸಿದ

ಅರಿಗಳೇ ಸಖರಕ್ಕು ಅತಿವಿಷಾಮೃತವಕ್ಕು ಉರಗಪೂಮಾಲೆಯ ಕ್ಕು
ಶರಘಾತ ಬೆಂಡಕ್ಕು ನರಹರಿಯ ನಾಮವನು ನಂಬಿ ಭಜಿಪರಿಗೆ॥

ಈತನು ಬಾಗವತದ 10 ನೇ ಸ್ಕಂದವನ್ನು ಹಾಡು ದ್ವಿಪದಿ ಮತ್ತು ವೃತ್ತಗಳಾಗಿ ಕನ ಡಿಸಿದ್ದಾನೆ ಆತನ ವಾಲ ಭಾಷೆ ಹೃದ್ಯ ।

ಯಶೋದೆಯಮ್ಮನಂಗನ್ನೆತ್ತಿಕೋ ಅಮ್ಮ । ಒತ್ತಿ ಬಲು ಅತ್ತು
ಬಂದನೆ ನಾ

ರಂಗನ್ನೆತ್ತಿಕೋ (ನಂಗನ್ನೆತ್ತಿಕೋ) ಒತ್ತಿ ಬಲು ಅತ್ತು=ಹೊಟ್ಟೆ ಬಲು ಹಸ್ತು

ಬಂದೀನೆ=ಬಂದಿದ್ದೀನಿ ಎಂಬ ಮುಂದ್ಸು ಪಠಾತುಗಳಲ್ಲ ಭಕ್ತಿ ರಸವು ಸ್ರೋತ-ಾಗಿ ಹರಿದಿದೆ

**ವಿಜಯ ದಾಸರು**— ಇವರು ಪ್ರಸನ ವೆಂಕಟದಾಸರ ಸಮಕಾ ೀನರು ರಾಯಚೂರು ಜಿಲ್ಲೆಯ ಒಂದ ಹಳ್ಳಿ ಶ್ರೀನಿವಾಸ-ಕೂಸಮ್ಮ ಎಂಬುವರು ತಂದೆ ತಾಯಿಗಳು ಚಿಕ್ಕಂದಿನಲ್ಲಿ ಮಂಕನಂತಿದ್ದ ಪುರಂದರದಾಸರ ಅನುಗ್ರಹದಿಂದ ಅವ ಗೆ ಕವಿತಾಶಕ್ತಿ ಉದಿಸಿತು ಮುಂದೆ ಅವನು ಹಾಡಿದ್ದೆಲ್ಲ ಹಾಡಾಯಿತು ಇವನ ಅಂಕಿತ ಹಯವದನವಿಠಲ

ವಿಜಯ ದಾಸರ ಸದಾ ಎನ್ನ ಹೃದಯದಲಿ ವಾಸವಾಡೋ ಶ್ರೀಹರಿ ಎಂದು ಆರಂಬಿಸಿ ಇತ ನಾನು ಬಿಡುವವನಲ್ಲ ಎನ್ನ ನಿ ನು ಒಡಲು ಸಲ್ಲ ಎಂದು ಹ ಡನು ವಮಗಿಸುತ್ತಾರೆ ಸಂಖ್ಯಾದಿ ರಚನೆಯಲ್ಲಿ ಈತ ಪುರಂದರದಾಸರಿಗೆ ಎರಡನೆಯ ವರು

**ಮಹೀಪತಿರಾಯರು** (ಕ್ರಿ ಶ ೧೬೧೧–೧೬೮೧)

ಬಿಜ ಪುರ ಜಿಲ್ಲೆಯಲ್ಲಿ ಆಧ್ಯಾತ್ಮಿಕ ಪ್ರಭೆಯನ್ನು ಬೆಳಗಿಸಿದವರು ರ ಕ್ಕಿ ೀ ಪಂಡಿತರು ಸಿಂಧಗಿಯ ಜಕ್ಕಪ್ಪಯ್ಯನವರು ಯಾಳಗಿಯ ರಾಮಯ್ಯನವರು ಅಗರಖೇಡದ ಕೃಷ್ಣದ್ವೈಪಾಯನರು ಮತ್ತು ಕಾಖಂಡಕಿಯ ಮಹೀಪತಿರ ಯ ರು ಇವರನ್ನು ಅವರವರ ವೈಶಿಷ್ಟ್ಯವನು ಸೂಚಿಸುವ ಅನ್ವರ್ಥಕವಾದ ಅಡ್ಡ ಹೆಸರು ಗಳಿಂದ ಕರೆವ ವಾಡಿಕೆಯಿತ್ತು ಅವು ಕ್ರಮವಾಗಿ ರೋಗಿ ಜೋಗಿ ಯೋಗಿ ಬೊ ಗಿ ಮತ್ತು ತ್ಯಾಗಿ ಎಂದು ದರಲ್ಲಿ ಮಹೀಪತಿರಾಯರಿಗೆ ತ್ಯಾಗಿ ಎಂಬುದು ಅನ್ವರ್ಥಕವಾಗಿತ್ತು

ಮಹೀಪತಿರಾಯರ ಅಜ್ಜಂದಿರು ರಂಗಭಟ್ಟರು ಅವರು ಬಿಜಾಪ ರದಲ್ಲಿ ಬಂದು ನೆಲಸಿದರು ಮಗ ಕೋನೇರಿರಾಯರು ಅವರಿಗೆ ಇಬ್ಬರು ಗಂಡು ಮಕ್ಕಳು ಗುರುರಾಯ ಮತ್ತು ಮಹೀಪತಿರಾಯ ಎಂದು ಇವರಿಗೆ ಉಪನಯನ ವನ್ನು ಮಾಡಿದ ಪ್ರಹ್ಲಾದ ಕೃಷ್ಣಾಚಾರ್ಯರು ಮಹೀಪತಿಯ ಜಾತಕ ನೋಡಿ ಈತ ರಾಜಮಾನ್ಯನ ಗಿ ಕಡೆಗೆ ಯೋಗಿಯಾಗುವನೆಂದು ಭವಿಷ್ಯ ನುಡಿದರ

ಕೃಷ್ಣಮಾಚಾರ್ಯರ ಭವಿಷ್ಯ ಸುಳ್ಳಾಗಲಿಲ್ಲ ತಂದೆ ವೈದಿಕ ವಿದ್ಯೆ ಕಲಿಸಿದರು ಆವರ ಕೀರ್ತಿ ಬಿಜಾಪುರ ಆದಿಲ ಷಾನ ದಿವಾನನವರೆಗೆ ಮುಟ್ಟಿತು ನವಾಬನ ಆಫೀಸಿನಲ್ಲಿ ಕರಣಿಕನಾಗಿ ಸೇರಿದ ಮಹೀಪತಿರಾಯ ಬಾದಶಹನ ಪ್ರೀತಿಗಳಿಸಿ ದಿವಾನ್ ಪದವಿಗೇರಿದ

ಆವೇಳೆಗೆ ಮಹೀಪತಿಯ ತಾಯಿ–ತಂದೆಗಳು ತೀರಿಕೊಂಡಿದ್ದರು ಹೆಂಡತಿ ತಿಮ್ಮವ್ವನಿಗೆ ಮಕ್ಕಳಾಗಲಿಲ್ಲ ಆಕೆ ಸಾರವಾಡದ ಭಾಸ್ಕರಸ್ವಾಮಿ ಎಂಬ ಅವಧೂತರ

ದರ್ಶನವನು ಆಗಾಗ ಪಡೆದು ಬರುತ್ತಿದ್ದಳು ಆ ವೇಳೆಗೆ ಶಹಾನಂಗ ಎಂಬ ದಿವ್ಯ ವಿಜ್ಞಾನಿಯು ಪ ಹೀಪತಿಯನು ಕರೆದು ನೀನು ಈ ತ ನೆದಾರಿಯ ಲೈಕ ಇದಿ ಭಾಸ್ಕರಸ್ವಾಮಿ ಗಳ ಕೃಪೆಗೆ ಪಾತ್ರನಾಗಿ ಆತ್ಮಜ್ಞಾನ ಪಡೆ! ಎಂದನು ಮಹೀ ಪತಿಗೆ ಜ್ಞಾನೋದಯವಾಯಿತು ಅವರು ಅಧಿಕಾರ ತ್ಯಾಗವಾಡಿ ಭಾಸ್ಕರಸ್ವಾಮಿ ಗಳ ಕೃಪೆಗೆ ಪಾತ್ರರಾದರು ಅವರಿಂದ ಯೋಗ ರಹಸ್ಯಗಳನ್ನು ಅರಿತರು ತಮಗೆ ಆದ ಸ್ವಾನಂದ ಸುಖವನು ಕೀರ್ತನೆಗಳಲ್ಲಿ ಹಾಡಿದರು

ಮುಂದೆ ಅವರು ದಿವ್ಯಜ್ಞಾನಿಗಳಾಗಿ ಬಿಜಾಪುರವು ಶತ್ರು ವಶವಾಗುವುದೆಂದು ಅರಿತು ಶಹಾಪುರಕ್ಕೆ ಬಂದು ಅಲ್ಲಿಂದ ಕಾಖಂಡಿಗೆ ಬಂದು ನೆಲೆಸಿದರು ಅವರ ಹಿರಿಯ ಮಗ ದೇವರಾಯ ಕಬ್ಬುರ್ಗಿ ದೇಸಾಯರಾ ಸೆ ರಿದ ಬಿದಿರೆಯ ನವಾಬ ಅವನಿಗೊಂದು ಜಹಗೀರಿ ಕೊಟ್ಟ ಎರಡನೇ ಮಗ ಕೃಷ್ಣರಾಯ ತಂದೆಯ ಸೇವೆಗೆ ನಿಂತ ಮತ್ತೊಮ್ಮೆ ಶಹಾನಂಗ ರು ಮಹೀಪತಿಯ ಹತ್ತಿರ ಬಂದು ಅಭಿನಂದಿಸಿ ದರು ಮುಂದೆ ಮಹೀಪತಿರಾಯರು ಕೊಲ್ಲಾಪುರ ಸೆ ರಿ ಅಲ್ಲಿ ದಿವಂಗತರಾದರು

## ಗುರುಅನುಗ್ರಹ

ಮಹೀಪತಿರಾಯರಿಗೆ ಗುರು ಅನುಗ್ರಹವಾದೊಡನೆಯೇ ಅವರು ಭಕ್ತಿಪರವಶ ರಾದರು ಅವರ ಅಭಯ ಹಸ್ತ ಮಸ್ತಕದ ಮೆ ಲೆ ಇಡುವುದೇ ತಡ ಅವರಿಗೆ ಅಪೂರ್ವ ಅನುಭವವಾಯಿತು ಸದ್ವಸ್ತುವಿನ ಅನುಭವವಾಯಿತು ಇದನ್ನು

ಇಂದೆನ್ನ ಜನ್ಮ ಪಾವನವಾಯಿತು ।
ತಂದೆ ಶ್ರೀ ಗುರು ನಿಮ್ಮ ಚರಣದರುಶನದಿ ॥ (ಕೀ ೮೮)

ಎಂಬ ಕೀರ್ತನೆಯ ಲ್ಲಿ ಅವರು ಹೇಳಿಕೊಂಡಿದ್ದಾರೆ ಮತ್ತೊಂದು ಕೃತಿಯಲ್ಲಿ ಅನ್ಯ ಪಥಕಳಸಿದ ತಪ್ಪನೆ ಕ್ಷಮಿಸಬೇಕು ಎಂದು ದೆ ವರಿಗೆ ಮೊರೆ ಇಟ್ಟಿದ್ದಾರೆ

ಗುರು ಭಾಸ್ಕರಸ್ವಾಮಿಗಳು ಮಹೀಪತಿರಾಯರಿಗೆ ಅಂಕಿತ ಕೊಟ್ಟಿಲ್ಲ ಅವರು ಸ್ವಯಂ ಮಹೀಪತಿ ಅಂಕಿತದಿಂದಲೇ ಕೃತಿ ರಚಿಸಿದ್ದಾರೆ ಅವರ ಮಗ ಕೃಷ್ಣರಾಯನು ತಂದೆಯಿಂದ ಅನುಗ್ರಹೀತನಾಗಿ ಮಹೀಪತಿನಂದನ ಎಂಬ ಅಂಕಿತ ದಿಂದ ಕೀರ್ತನೆಗಳನ್ನು ರಚಿಸಿದ್ದಾನೆ ಮಹೀಪತಿದಾಸರು ರಚಿಸಿದ ಸು ೬೮೮ ಕೃತಿ ಗಳ ಸಂಪುಟವನ್ನು ಕನ್ನಡ ಅಧ್ಯಯನ ಸಂಸ್ಥೆ ಪ್ರಕಟಿಸಿ ಉಪಕರಿಸಿದೆ ಡಾ ಜಿ ವರದರಾಜರಾಯರು ವಿಸ್ತಾರವಾದ ಪೀಠಿಕೆ ಬರೆದು ವಿಚಾರ ಪರಿಪೂರ್ಣತವಾದ ಅಂಶ ಗಳನ್ನು ಓದುಗರಿಗೆ ಒದಗಿಸಿ ಕೊಟ್ಟಿದ್ದಾರೆ ಗುರುದರ್ಶನ ಅಂಕಿತಪ್ರಯೋಗ ಆಧ್ಯಾತ್ಮಿಕದೃಷ್ಟಿ ಆತ್ಮಾನುಸಂಧಾನ ಸಾಹಿತ್ಯ ಮೌಲ್ಯ ಮುಂತಾದ ಶೀರ್ಷಿಕೆಗಳಲ್ಲಿ ಅವು ಹರಡಿವೆ

## ಗೋಪಾಲದಾಸರು (ಕ್ರಿ ಶ ೧೭೨೧)

ವಿಜಯದಾಸರ ಶಿಷ್ಯರೇ ಗೋಪಾಲದಾಸರು ಊರು ರಾಯಚೂರು ಜಿಲ್ಲೆಯ ಮೊಸರಕಲ್ಲು ಮುರಾರಿರಾಯ–ವೆಂಕಮ್ಮ ಎಂಬ ದಂಪತಿಗಳ ಹಿರಿಯ ಮಗ ಭಾಗಣ್ಣ ನಾಲ್ವರು ತಮ್ಮಂದಿರು ತಂದೆ ತೀರಿಕೊಂಡ ಮೇಲೆ ತಾಯಿ ವೆಂಕಮ್ಮ ಮಕ್ಕಳೊಡನೆ ಸಂಕಾಪುರಕ್ಕೆ ಬಂದು ನೆಲೆಸಿದರು

ಸಂಕಾಪುರದ ಶ್ಯಾನುಭೋಗ ಗುಂಡಪ್ಪನವರು ತಮ್ಮ ಮಗನ ಜೊತೆ ಭಾಗಣ್ಣನಿಗೆ ಉಪನಯನ ಮಾಡಿಸಿದರು ಭಾಗಣ್ಣ ಭಕ್ತಿಯಿಂದ ಗಾಯತ್ರಿಮಂತ್ರ ಜಪಿಸಿದ ಫಲವಾಗಿ ಅವನಿಗೆ ಭವಿಷ್ಯ ಹೇಳುವ ಶಕ್ತಿಯುಂಟಾಗಿತ್ತು ಭಾಗಣ್ಣ ಅಲ್ಲಿಂದ ಉತ್ತನೂರಿಗೆ ಬಂದ ಆಗ ಅವನ ಭವಿಷ್ಯಕ್ಕೆ ತುಂಬಾ ಬೇಡಿಕೆಯುಂಟಾಗಿ ಅವನ ಭವಿಷ್ಯವೂ ಖುಲಾಯಿಸಿತು

ಗದ್ವಾಲಿನ ದೊರೆ ಭೂಪಾಲಿ ಭಾಗಣ್ಣನ ದರ್ಶನ ಪಡೆದು ಭಾಗಣ್ಣನಿಗೆ ಭೂಮಿಕಾಣಿಗಳನ್ನು ಕುದುರೆ ಮುಂತಾದುವನ್ನು ಕೊಟ್ಟು ಗೌರವಿಸಿದ ಭಾಗಣ್ಣ ವೆಂಕಟಕೃಷ್ಣ ಅಂಕಿತದಿಂದ ಪದಗಳನ್ನು ರಚಿಸಿ ಹಾಡುತ್ತಿದ್ದ ವಿಜಯದಾಸರು ಭಾಗಣ್ಣನನ್ನು ಅನುಗ್ರಹಿಸಿ ಗೋಪಾಲವಿಠಲ ಎಂಬ ಅಂಕಿತವನ್ನು ನೀಡಿದರು ಅಂದಿನಿಂದ ಭಾಗಣ್ಣ ಗೋಪಾಲದಾಸ ಎಂದು ಪ್ರಸಿದ್ಧನಾದ ಮುಂದೆ ಭಕ್ತಿಯಲ್ಲಿ ಭಾಗಣ ಎಂಬ ಕೀರ್ತಿಗೆ ಪಾತ್ರರಾದರ

ಮುಂದೆ ಗೋಪಾಲದಾಸರು ಅನೇಕ ಪವಾಡಗಳನ್ನು ನಡೆಸಿದರು ಹಂಪೆ ಕೊಲ್ಲಾಪುರ ಪಂಡರಾಪುರ ಅಹೋಬಲ ಉಡುಪಿ ಶ್ರೀಮುಷ್ಣ ತಿರುಪತಿ ಮಂತ್ರಾಲಯ ಮುಂತಾದ ಕ್ಷೇತ್ರಗಳಲ್ಲಿ ಸಂಚರಿಸಿ ಅದನ್ನು ತಮ್ಮ ಕೃತಿಗಳಲ್ಲಿ ಸೂಚಿಸಿದ್ದಾರೆ ಹೀಗೆ ನಲವತ್ತು ವರ್ಷಗಳ ಕಾಲ ಸಂಚರಿಸಿ ಚಿತ್ರಭಾನು ಸಂವತ್ಸರದಲ್ಲಿ ಪುಷ್ಯ ಕೃಷ್ಣಾಷ್ಟಮಿಯಲ್ಲಿ ಉತ್ತನೂರಿನಲ್ಲಿ ದೈವಾಧೀನರಾದರು

### ಕೃತಿರಚನೆ

ಗೋಪಾಲದಾಸರ ಕೃತಿಗಳಲ್ಲಿ ಸಧ್ಯಕ್ಕೆ ಪ್ರಕಟವಾಗಿರುವುವು ೧೭೮ ಅವುಗಳಲ್ಲಿ ಕೀರ್ತನೆಗಳು ೮೭ ಸುಳಾದಿ ೬೧ ಉಗಾಭೋಗಗಳು ೩೦ ಇವುಗಳನ್ನು ಶ್ರೀಮತಿ ಡಾ ಟಿ ಎನ್ ನಾಗರತ್ನ ಅವರ ಸಂಪಾದಕತ್ವದಲ್ಲಿ ಕನ್ನಡ ಅಧ್ಯಯನ ಸಂಸ್ಥೆ ಪ್ರಕಟಿಸಿದೆ (೧೯೭೭)

ಪೀಠಿಕೆಯಲ್ಲಿ ಈ ಕೃತಿಗಳ ಮಹತ್ವವನು ಕುರಿತು ಆತ್ಮಶೋಧನೆ ಭಗವಂತನ ಆರಾಧನೆ, ತತ್ತ್ವ ಪ್ರತಿಪಾದನೆ ಉಪದೇಶವಾಣಿ ಎಂಬ ಶೀರ್ಷಿಕೆಗಳಲ್ಲಿ ಉದಾಹರಣೆಗಳನ್ನಿತ್ತು ಗೋಪಾಲದಾಸರ ಸಾಧನೆ ಮತ್ತು ಸಿದ್ಧಿಗಳ ಪರಿಚಯ ಮಾಡಿಕೊಟ್ಟು ಸಂಪಾದರು ಉಪಕರಿಸಿದ್ದಾರೆ

## ಜಗನ್ನಾಥದಾಸರು

ಗೋಪಾಲದಾಸರ ಶಿಷ್ಯರೇ ಜಗನ್ನಾಥದಾಸರು. ಪೇವಿನಕಟ್ಟೆ ಗಿರಿಯಮ್ಮನೂ ಈ ಶಿಷ್ಯವರ್ಗದಲ್ಲಿ ಸೇರಿದವಳು.

ರಾಯಚೂರು ಜಿಲ್ಲೆಯ ಬ್ಯಾಗವಟ್ಟ ಜಗನ್ನಾಥದಾಸರ ಹುಟ್ಟೂರು. ನರಸಪ್ಪ ಮತ್ತು ಲಕ್ಷ್ಮಿಬಾಯಿಯವರು ತಂದೆ-ತಾಯಿಗಳು. ಕಾಲಕ್ರಮದಲ್ಲಿ ನರಸಪ್ಪನು ನರಸಿಂಹವಿಠಲ ಎಂಬ ಅಂಕಿತ ಪಡೆದ ಹರಿದಾಸನಾದ. ಈ ಹರಿದಾಸನ ಮಗನೇ ಶ್ರೀನಿವಾಸ. ಇವನ ಶಿಕ್ಷಣ ತಂದೆಯಿಂದ. ಈತ ಸಂಸ್ಕೃತದಲ್ಲಿ ಅದ್ವಿತೀಯ ಪಂಡಿತನಾದ. ದೈವದತ್ತವಾಗಿ ಬಂದಿತ್ತು ಕವಿಶಕ್ತಿ. ಮಂತ್ರಾಲಯದ ಸ್ವಾಮಿಗಳು ಇವನಿಗೆ ಆಚಾರ್ಯ ಎಂಬ ಬಿರುದಿತ್ತರು. ಈ ಶ್ರೀನಿವಾಸನು ಕೀರ್ತಿ ಪ್ರತಿಷ್ಠೆಗಳ ಜೊತೆಗೆ ಐಶ್ವರ್ಯವನ್ನು ಗಳಿಸಿ ವಿದ್ಯಾಮದದಿಂದ ಠಕ್ಕರೆದು ವಾದಕ್ಕೆಳೆಯುತ್ತಿದ್ದ. ಶ್ರೀನಿವಾಸಾಚಾರ್ಯನು ಒಮ್ಮೆ ವಿಜಯದಾಸರನ್ನು ಸಂಧಿಸಿ ಅವರನ್ನು ಕೂಸಿನ ಮಗ ದಾಸನವ ಪದದಿಂದ ಜನರಿಗೆ ಮೋಸ ಮಾಡುವವ ಎಂದು ನಿಂದಿಸಿದ. ಇದರ ಫಲವಾಗಿ ಕ್ಷಯರೋಗ ಸಂಘಟಿಸಿತು. ಅದರ ನಿವಾರಣೆಗೆ ಆತ ವಿಜಯದಾಸರಿಗೆ ಶರಣಾದ. ಅವರು ಅವನನ್ನು ಗೋಪಾಲದಾಸರಲ್ಲಿಗೆ ಕಳಿಸಿದರು. ಅವರು ಶ್ರೀನಿವಾಸಾಚಾರ್ಯನಿಗೆ ಒಂದು ಶ್ಲೋಕದ ಕೊನೆಯನ್ನು ಮಂತ್ರಿಸಿ ಕೊಟ್ಟರು. ಅದರ ಸೇವನೆಯಿಂದ ಕ್ಷಯರೋಗ ನಿವಾರಣೆಯಾಯಿತು. ಜೊತೆಗೆ ಅವನ ಭವರೋಗವು ತೊಲಗಿತ್ತು. ದಾಸರ ಪದಗಳನ್ನು ಪ್ರಾಕೃತ ಪದವಾಗಲೆಂದು ನಿಂದಿಸುತ್ತಿದ್ದ ಶ್ರೀನಿವಾಸನಿಗೆ ತಾನೂ ಹರಿದಾಸನಾಗಲು ಪ್ರೇರಣೆಯಾಯಿತು. ಅಂಕಿತವನ್ನು ಕೊಡಲು ಗೋಪಾಲದಾಸರನ್ನು ಕೇಳಿದ. ಅವರು ವಿಠಲನೇ ನಿನಗೆ ಅನುಗ್ರಹಿಸುವನೆಂದರು. ಪಂಡರಿಗೆ ತೆರಳಿ ಅಲ್ಲಿ ಚಂದ್ರಭಾಗಾ ನದಿಯಲ್ಲಿ ಸ್ನಾನಮಾಡುವಾಗ ಜಗನ್ನಾಥವಿಠಲ ಎಂದು ಕೆತ್ತಿದ ಕಲ್ಲು ದೊರೆಯಿತು. ಅಂದಿನಿಂದ ಶ್ರೀನಿವಾಸ ಜಗನ್ನಾಥದಾಸನೆಂಬ ಹೆಸರಿನಿಂದ ಪ್ರಸಿದ್ಧನಾದ.

ಜಗನ್ನಾಥದಾಸರ ಜೀವನ ಅನೇಕ ವೈವಿಧ್ಯಗಳಿಂದ ಕೂಡಿದೆ. ಹರಿಕಥಾಮೃತಸಾರ ಆತನ ೩೨ ಸಂಧಿಗಳ ೧೦೦೦ ಪದ್ಯಗಳ ಪ್ರಬಂಧ. ಅದರಲ್ಲಿ ದ್ವೈತಸಿದ್ಧಾಂತದ ಎಲ್ಲ ವಿಚಾರಗಳ ಅಡಕವಾಗಿವೆ. ಅದೊಂದು ದ್ವೈತಮತತತ್ತ್ವದ ವಿಶ್ವಕೋಶವೆಂದು ಪ್ರಖ್ಯಾತವಾಗಿದೆ.

ಭಗವಂತನು ಕರುಣಾಮಯನೆಂಬುದನ್ನು ಸೂಚಿಸುವ ಜಗನ್ನಾಥದಾಸರ ಈ ಪದ ತುಂಬಾ ಜನಾದರಣೀಯವಾಗಿದೆ.

> ಮಂಗಿ ಪರಮಾದರದಿ ಪಾಡಲು । ಕೇಳಿತು ಕೇಳುವ ಕೇಳಿತು ಪಾಡಲು
> ನಿಲುವ ನಿಂತರೆ ನಲಿವ ನಲಿದರೆ ಒಲಿವೆ ನಿಮಗೆಂಬ

ಸಂಲಭನೋ ಹರಿ ತನ ವರನರೆ । ಘಳಿಗೆ ಬಿಟ್ಟಗಲನೋ ರಮಾಧವ
ನೊಲಿಸಲರಿಯದೆ ಬಳಲುವರು ಪಾ ರರು ಭವದೊಳಗೆ ॥

ಎಂಬ ಬಾವವು ಆದೆಷು ರಮ್ಯ ! ಬಗವಂತನನು ನೆನೆಯಲು ಮಡಿ ಮೈಲಿಗೆಗಳ ನಿಯಂವ ವಿಲ ಯಾವುದೇ ಕೆಲಸದಲ್ಲಿದ್ದರೂ ಅವನ ನೆನಪು ಎಡೆಬಿಡದಿರಬೇಕು ಎಂಬುದನ್ನು ವಾರ್ಮಿಕವಾಗಿ ಚಿತ್ರಿಸಿದ್ದಾರೆ ಸರ್ವಸಮಾನತೆಯನ್ನು ಚಿತ್ರಿಸುವ ಈ ಪದ್ಯವನು ಗಮನಿಸಬೇಕು—

ಆವಕುಲದವನಾದೊಡೇನಿ । ನಾ ವದೇಶದೊಳಿದ್ದೊಡೇನಿ ।
ನ್ನಾವಕರ್ಮವ ಮಾಡಲೀ ನಿನಾ ವ ಕಾಲದಲಿ
ಶ್ರೀವರನ ಸರ್ವತ್ರದಲಿ ಸಂ । ಭಾವಿಸುತ ಪೂಜಿಸುತ ಮೋದಿಪ
ಕೋವಿದರಿಗುಂಟೇನೊ ಭವದುಃಖಾದಿ ದೋಷಗಳು ॥

ಮುಂದುವರಿದ ಈ ಪದ್ಯದಲ್ಲಿ

ಸರ್ವದೇಶವು ಪುಣ್ಯದೇಶವು । ಸರ್ವಕಾ ಲವು ಪುಣ್ಯಕಾಲವ
ಸರ್ವಜೀ ವರು ಬ ನಪಾತ್ರರು ಮೂರ ಲೋಕದೊಳು ।
ಸರ್ವಮಾತುಗಳೆಲ್ಲ ಮಂತ್ರವು । ಸರ್ವಕೆಲಸಗೆಳೆಲ್ಲ ಪೂಜೆಯು
ಸರ್ವವಂದ್ಯನವಿಸುಲಮೂರ್ತಿಧ್ಯಾನವುಳ್ಳವಗೆ ॥

ಎಂಬ ಮಾತುಗಳಲ್ಲಿ ಹರಿದಾಸರ ಉದಾರದೃಷ್ಟಿ ವಿಶ ಲಮನೋಭಾವಗಳು ಮಡು ಗಟ್ಟಿನಿಂತಿವೆ ನೆನೆನೆಂದೆ ಹೊಲಗೇರಿ ಶಿವ ಲಯಂಕ್ಕೆ ಎಂಬ ಶರಣರ ವಾಣಿಗೆ ಸರ್ವದೆ ಶವು ಪುಣ್ಯದೇಶವು ಎಂಬ ದ ವ್ಯಾಖ್ಯಾನವಾಗಿದೆ ಸರ್ವಕಾಲವು ಪುಣ್ಯಕಾಲವು ಎಂಬ ನುಡಿಗೆ ಶರಣರ ನಿಮ್ಮವರು ಬೆಗೊಂಡರೆ ಶುಭಲಗ್ನವೆನಿ ರಯ್ಯ ಎಂಬ ಉಕ್ತಿಟಿ ಕಿಯ ಂತಿದೆ ಸರ್ವವಾತುಗಳೆಲ್ಲ ಮಂತ್ರವು ಸರ್ವಕೆಲಸ ಗಳೆಲ್ಲ ಪೂಜೆಯು ಎಂಬ ಉಕ್ತಿಯು ಆಚಾರ್ಯ ಶಂಕರರ ಸ್ತೋತ್ರವಾಣಿ ಸರ್ವಾಗಿರಃ ಯದ್ಯತ್ಕರ್ವ ರ್ಮ ಕರೋಮಿ ತತ ದಖಿಲಂ ಶಂಭೋ ತವಾರಾಧನಂ ಎಂದಂತಿದೆ ಯಲ್ಲವೆ ?

ಭಗವಂತನು ಎಲ್ಲೆಡೆಯೂ ತಾನೇ ತಾನ ಗಿದ್ದಾನೆ—
ಎಲ್ಲಿ ನೋಡಿದಡಲಿ ಕೇಳಿದ । ರಲ್ಲಿ ಬೆ ಡಿದರೆಲ್ಲಿ ನೀಡಿದ
ರೆಲ್ಲಿ ಓಡಿದರೆಲ್ಲಿ ಯಾಡಿದರಲ್ಲಿ ಇರುತಿಹನು

ಎಂಬ ವಾತು ಮಂಟಿ ನ ಷಡಕ್ಷರಿಗಳ

ಸಕಲಕೆಲ್ಲಕ್ಕೆ ನೀನೆ । ಅಕಳಂಕ ಗುರ ವೆಂದು ।
ನಿಖಿಲ ಶಾಸ್ತ್ರವು ಪೇಳುಂತಿರಲರಿದೆನು ॥ಪ॥

ಮುಂದುವರಿದು ಷಡಕ್ಷರಯೋಗಿಗಳ

ಅವರವರ ದರುಶನಕೆ । ಅವರವರ ವೇಷದಲಿ ।
ಅವರವರಿಗೆಲ್ಲ ಗ ರ ನೀನೊಬ್ಬನೆ
ಅವರವರ ಭಾವಕ್ಕೆ । ಅವರವರ ಪೂಜೆಗಂ ।
ಅವರವರಿಗೆಲ್ಲ ದೇವ ನೀನೊಬ್ಬನೆ ॥
ಹೋರಾಟವಿಕ್ಕಿಸಲು । ಬೇರಾದೆಯಲ್ಲದೆ ।
ಬೇರುಂಟೆ ಜಗದೊಳಗೆ ಎಲೆ ದೇವನೆ ॥
ಆರು ಅರಿಯರು ನೀನು । ಬೇರ ದ ಪರಿಗಳನಂ ।
ಮಹಾರಾರಿ ಶಿವಷಡಕ್ಷರಿ ಲಿಂಗವೆ

ಎಂಬ ನುಡಿಗಳನ್ನು ಮನನ ಮಾಡಿದಾಗ ಶಿವಶರಣ ಮತ್ತು ಹರಿದಾಸರಲ್ಲಿ ಯಾವ ಬಿರುಕಿದೆ ? ಎಂಬ ಸಂದೇಹವಾಗುತ್ತದೆ । ಅವರವರ ಭಾವಕ್ಕೆ ಅವರವರ ಪೂಜೆಗೆ ಯಾವ ಮೂರ್ತಿಯಾದರೇನು ? ಹರಿ ಹರರಲ್ಲಿ ಅಥವಾ ಯಾವುದೇ ದೇವರಾಗಲಿ ಬೇದವೆಣಿಸಲಾದೀತೆ !

ಜನರಲ್ಲಿ ಹೋರಾಟವಿಕ್ಕಿಸುವುದೂ ಅವನ ಗ ರಿಗಳಲ್ಲಿ ಒಂದಾಗಬೇಕಿತ್ತೆ ? ಎಂಬ ಯೋಚನೆಯೂ ಹೊಳೆಯುತ್ತದೆ ಹೆ ಗೇ ಆದರೂ ವಚನಕಾರರ ಹ ಗೂ ಹರಿದಾಸರ ಈ ಪುಣ್ಯನಿಧಿ ಕನ್ನಡಕ್ಕೆ ದೊರೆತಿರುವುದು ನಾಡಿನ ಭಾಗ್ಯ !

ವೇದೋಪನಿಷದ್ಸ್ವರೂಪವಾದ ಶಿವಾಗಮವಾನ ಗ್ರಹಿತವಾದ ಭಕ್ತಿತತ್ತ್ವವನ್ನು ಈ ಅನ ಭಾವಿಗಳು ತಮ್ಮ ಜೀವನದಲ್ಲಿ ಹಾಸ ಹೊಕ್ಕಾಗಿ ಮಾಡಿಕೊಂಡು ಭಗವಂತನನ್ನು ತಮ್ಮೊಡನಾಡಿಗನನ್ನಾಗಿ ಮಾಡಿಕೊಂಡು ರಮಿಸಿದ್ದಾರೆ ಗೆಳೆಯನಂತೆ ನಂಬಿಸಿದ್ದಾರೆ ಚಾರಿತ್ರಿಕ ದೃಷ್ಟಿಯಿಂದ ವಚನಗಳು ಗೀತೆಗಳು ಹಾಗೂ ಕೀರ್ತನೆಗಳು ಹಿಂದು ಮುಂದಾಗಿದ್ದರೂ ಅವುಗಳಲ್ಲಿ ಅನುಕರಣದ ಸ ಳಿವಿಲ್ಲ ಮಹಾನುಭಾವಿಗಳಾದ ಅವರು ಮಂತ್ರದೃಷ್ಟಾರರ ದ ಮಹರ್ಷಿಗಳಂತೆ ತಮ್ಮದೇ ಆದ ವಿನೋದಕ್ಕಾಗಿ ಹಾಡಿಕೊಂಡಿದ್ದಾರೆ ಜಗತ್ತನ್ನು ಪ್ರಭೋಧಿಸಿದ್ದಾರೆ ಈ ಮಹಾನುಭಾವರ ನುಡಿಗಳು ಅವರೇ ಹೇಳಿದ ಪಂತೆ ಅವರ ಮಾತುಗಳೆಲ್ಲ ಮಂತ್ರ ಗಳಂ ವೇದ ಪಾರಾಯಣದಂತೆ ಅನುದಿನವೂ ಪಾರಾಯಣಮಾತ ಅನ ಷ್ಠಾನಮಾಡಿ ನಾಡುನಲಿಯಲಿ ! ಪುನೀತವಾಗಲಿ ! ಪರಮಾನಂದದಲ್ಲಿ ಲೋಲೀಬಾವವನ್ನು ಅನುಭವಿಸುವಂತಾಗಲಿ !

# ಆಳ್ವಾರರು ಮತ್ತು ಹರಿದಾಸರು

ಡಾ|| ಬಾ ರಾ ಗೋಪಾಲ

ಪ್ರಸ್ತುತ ಪ್ರಬಂಧದಲ್ಲಿ ವಿಶಿಷ್ಟಾದ್ವೈತದಲ್ಲಿ ಓತಪ್ರೋತವಾಗಿ ಹರಿದು ಬಂದಿರುವ ಭಕ್ತಿಯನ್ನು ಕುರಿತು ವಿವೇಚಿಸಲಾಗಿದ್ದು ಸ್ವಲ್ಪಮಟ್ಟಿಗೆ ಹರಿದಾಸರ ಭಕ್ತಿಗೆ ಇದು ಎಷ್ಟು ಸನಿಹಿತ ಎಂಬುದನ್ನು ತೋರಿಸುವ ಪ್ರಯತ್ನ ಮಾಡಿದೆ ಭಕ್ತಿ ಎಂಬುದಕ್ಕೆ ಬಹಳ ಸರಳವಾಗಿ ಆರಾಧನಾಪ್ರೇಮ ಅನುರಾಗಪೂರಿತ ಆರಾಧನೆ ಎಂಬ ಅರ್ಥ ನೀಡಬಹುದು ನರಳುತ್ತಿರುವ ಮನುಷ್ಯರನ್ನು ಇದು ಆಕರ್ಷಿಸುತ್ತದೆ ಈ ಭಕ್ತಿ ಮಾರ್ಗ ಎಂದೂ ವಿಫಲವಾಗುವುದಿಲ್ಲ ಹಿಂದೂ ಧರ್ಮದಲ್ಲಿ ದೈವಸಾಕ್ಷಾತ್ಕಾರಕ್ಕೆ ಮೂರು ಮಾರ್ಗಗಳನ್ನು – ಭಕ್ತಿ ಜ್ಞಾನ ಕರ್ಮ – ಸೂಚಿಸಲಾಗಿದ್ದು ಅವುಗಳನ್ನು ಯೋಗಗಳೆಂದು ಹೆಸರಿಸಲಾಗಿದೆ ಅವುಗಳಲ್ಲಿ ಭಕ್ತಿಮಾರ್ಗಕ್ಕೆ ಒಂದು ವಿಶೇಷ ಸ್ಥಾನವನ್ನು ಕಲ್ಪಿಸಲಾಗಿದೆ ಇದೊಂದು ಆಂತರಿಕ ಅನುಭವ ಇದರ ಉಗಮ ಸ್ಪಷ್ಟವಾಗಿ ತಿಳಿಯದು ವಿಶ್ವದ ಎಲ್ಲ ಧರ್ಮಗಳಲ್ಲೂ ಇದಕ್ಕೊಂದು ಮಹತ್ವಪೂರ್ಣ ಸ್ಥಾನವಿದೆ

ವೇದಗಳಲ್ಲಿ ವರುಣ ಸವಿತೃ ಉಷಸ್ ಮುಂತಾದ ಹಲವಾರು ದೇವತೆಗಳನ್ನು ಸ್ತೋತ್ರ ಮಾಡುವ ಮಂತ್ರಗಳಲ್ಲಿ ಭಕ್ತಿಯ ಬೀಜವನ್ನು ಕ ಣಬಹುದು ಇವುಗಳಲ್ಲಿ ದೈವಭಕ್ತಿ ಧರ್ಮನಿಷೆ ಕಾಣುತ್ತದೆ

> ವಿಮುಚ್ಛ್ವತಾಯಂ ರಶನಾಮಿವಾ
> ಬುಧ್ಯಾಮ ತೇ ವರುಣ ಖಾಮೃತಸ್ಯ
> ಮಾತಸ್ತುಚ್ಛೇದಿ ವಯತೋ ಧಿಯಂ ಮೇ
> ಮಾಮಾತ್ರಾ ಶಾರ್ಯಪಸಃ ಪುರಋತೋಃ

(ಎಲೈ ವರುಣನೇ ನನ್ನನ್ನು ಈ ಪಾಪ ಬಂಧನದಿಂದ ಮುಕ್ತಗೊಳಿಸು ನಿನ್ನ ಮತವನ್ನು ನಾನು ಪಡೆಯುವಂತಾಗಲಿ ನಾನು ನೇಯುತ್ತಿರುವ ಪ್ರಾರ್ಥನೆಗಳ ನೂಲು ಹರಿಯದಿರಲಿ ನಿಗದಿಗೂ ಮುಂಚೆಯೇ ಕರ್ಮ ಸಾಧನವಾದ ಈ ನನ್ನ ದೇಹವನ್ನು ನಾಶಪಡಿಸಬೇಡ)

> ಮಿತ್ರೋ ಅಂಹೋಶ್ಚಿದಾದುರು
> ಕ್ಷಯಾಯ ಗಾತುಂ ವನತೇ
> ಮಿತ್ರಸ್ಯ ಹಿ ಪ್ರತೂರ್ವತಃ
> ಸುಮತಿರಸ್ತಿ ವಿಧತಃ

(ಪಶ್ಚಾತ್ತಾಪದಿಂದ ರಕ್ಷಿಸೆಂದು ಪ್ರಾರ್ಥಿಸುವ ಪಾಪಿಗೂ ಸಹ ನಿಂತ್ರಸು ದಿ ರ್ಘ ಹಾಗೂ ಮಂಗಳವಾದ ಜೀವನ್ಮಾರ್ಗವನ್ನು ಕರುಣಿಸುತ್ತಾನೆ ಆವನನ್ನು ಪ್ರಾರ್ಥಿಸಿದರೆ ಮಿತ್ರನ ದಯೆ ಪಾಪಿಯ ಮೇಲೂ ಇರುತ್ತದೆ)

ಮುಂಡಕೋಪನಿಷತ್ತಿನಲ್ಲಿ ಆತ್ಮದ ಅರಿವು ಕೇವಲ ಜ್ಞಾನದ ನಿವರ್ಶೆಯಿಂದಾಗಲಿ ಪ್ರವಚನದಿಂದಾಗಲೀ ಬಾರದು ಆದರೆ ಯಾರು ಉದಕ್ಕಾಗಿ ಆತ್ಮನಿವೇದನ ಮಾಡಿಕೊಂಡು ಹಂಬಲಿಸುವರೋ ಅಂತಹವರಿಗೆ ಅದರ ಅನುಭವ ಉಂಟಾಗುತ್ತದೆ ಎಂಬ ಮಾತಿದೆ

ನಾಯಮಾತ್ಮಾ ಪ್ರವಚನೇನ ಲಭ್ಯೋ ನ ಮೇಧಯಾ ನ ಬಹುನಾ ಶ್ರುತೇನ।
ಯಮೇವೈಷ ವೃಣುತೇ ತೇನ ಲಭ್ಯಸ್ತಸ್ಯೈಷ ಆತ್ಮಾ ವಿವೃಣುತೇ ತನುಂ ಸ್ವಾಮ್॥

ದೇವನನ್ನು ಇಂದ್ರಿಯಗಳಿಂದ ತಿಳಿಯಲಾಗದೆಂದು ದರ್ಶನಗಳು ಧರ್ಮಗಳು ಒಕ್ಕೊರಲಿನಿಂದ ಸಾರುತ್ತವೆ ತರ್ಕ ವಾದಗಳ ವ್ಯಾಪ್ತಿಗೆ ಅತೀತ ಎಟುಕಲಾರ ಶುದ್ಧಾಂತಃಕರಣದ ತುಂಬು ಹೃದಯದ ಅನುರಕ್ತಿ ಉಪಾಸನೆಗಳಿಂದಷ್ಟೇ ಆತನನ್ನು ಅರಿಯಬಹುದು ವೈಷ್ಣವ ದರ್ಶನಗಳಲ್ಲಿ ದೈವಭಕ್ತಿಯನ್ನು ಒತ್ತಿ ಹೇಳಲಾಗಿ ದೈವಾನುಗ್ರಹಕ್ಕೆ ದೈವಶಕ್ತಿ ಆವಶ್ಯಕವಾದ ಮುನ್ನಡೆ ಭಕ್ತಿ ಎಂಬುದು ದೇವರಲ್ಲಿ ಗಾಢವಾದ ಪ್ರೇಮ ಆತುರಾಗ ಭಗವದ್ಧಿ ಕೆಯಲ್ಲಿ ಒಕಿಯನ ವಹೂರು ವಿಧಗಳಾಗಿ ವಿಂಗಡಿಸಲಾಗಿದೆ ಲೌಕಿಕ ವಸ್ತುಗಳ ಸಾಧನೆಗೆ ಪ್ರಾಪಂಚಿಕ ವ್ಯಧೆಗಳ ಪರಿಹಾರಕ್ಕೆ ಭಕ್ತಿಯನ್ನು ತೋರಿಸುವುದು ಒಂದು ವಿಧ ಜ್ಞಾನೋದಯಕ್ಕಾಗಿ ತಮಸ್ಸಿನಿಂದ ಜ್ಯೋತಿಯತ್ತ ತೆರಳಲು ಭಕ್ತಿಯಿಂದ ದೇವನನ್ನು ಆರಾಧಿಸುವುದು ಎರಡನೆಯ ಹಂತ ದೈವಾನ್ವೇಷಣೆಯನ್ನು ದೈವ ಸಾಕ್ಷಾತ್ಕಾರವನ್ನು ಅಂತಿಮ ಗುರಿಯನ್ನಾಗಿ ಪಡೆದ ಜ್ಞಾನಿ ತೋರಿಸುವ ಭಕ್ತಿ ಪರಮೋಚ್ಚವಾದುದು ಇದು ಪರಮ ಭಕ್ತಿ ಎನಿಸಿಕೊಳ್ಳುತ್ತದೆ ಪ್ರಾಪಂಚಿಕ ವಸ್ತುಗಳಲ್ಲಿ ಒಲವಿಲ್ಲದೆ ದೇವರಲ್ಲಿ ನಿಶ್ಶೇಷವಾದ ಜ್ಞಾನ ಮತ್ತು ಕರ್ಮಗಳಿಂದ ನಿಸ್ಸೇಜವಾಗದ ಕಾಯಾ ವಾಚಾ ಮನಸಾ ಆತ್ಮಕ್ಕೆ ಗುರಿಯಾಗಿ ವ್ಯಕ್ತವಾಗುವ ಭಕ್ತಿ ಇಂತಹುದು ಆತ್ಮೀಯರನ್ನೂ ಒಂದುವರ್ಗದವರನ್ನೂ ಸಹ ನಾವು ಪ್ರೀತಿಸುತ್ತೇವೆ ಅವರಲ್ಲಿ ಒಲವು ಅನುರಾಗಗಳಿವೆ ಭಕ್ತಿಯೂ ಅಂತಹುದೇ ಎನ್ನಬಹುದಾದರೂ ಪ್ರಾಪಂಚಿಕ ಒಲವುಗಳೆಲ್ಲವೂ ಕ್ಷಣಿಕ ನಶ್ವರ ಪರಿಮಿತ ದೈವಭಕ್ತಿಯು ಗುರಿ ಶಾಶ್ವತ ಒವಿನಾಶ ಅನಂತ

ಭಕ್ತಶ್ರೇಷ್ಠನೆನಿಸಿದ ಪ್ರಹ್ಲಾದನ ಪ್ರಾರ್ಥನೆಯನ್ನು ಇಲ್ಲಿ ನೆನೆಯಬಹುದು

ಯಾ ಪ್ರೀತಿರವಿವೇಕಾನಾಂ ವಿಷಯೇಷ್ವನಪಾಯಿನೀ ।
ತಾಮನುಸ್ಮರತ ಸಾ ಮೇ ಹೃದಯಾನ್ಮಾಪಸರ್ಪತು ॥

ವಿವೇಚನಾಶೂನ್ಯರು ಪ್ರಾಪಂಚಿಕ ವಿಷಯಗಳಲ್ಲಿ ತೋರುವಂತಹ ಅವಿಚ್ಛಿನ್ನ

ವಾದ ಒಲವು ನಿನ್ನನ್ನು ಅವಿರತವಾಗಿ ಧ್ಯಾನಿಸುವಾಗ ನನ್ನ ಹೃದಯದಲ್ಲಿ ದೃಢವಾಗಿ ಪ್ರತಿಷ್ಠಾಪಿತವಾಗಿರಲಿ ಎಂದು ಆತ ಪ್ರಾರ್ಥಿಸುತ್ತಾನೆ. ಪ್ರಾಪಂಚಿಕ ವಸ್ತುಗಳ ಮೇಲಿನ ಅನುರಾಗ ದುಃಖಕ್ಕೆ ಮೂಲ. ಆದರೆ ಎಲ್ಲ ವಸ್ತುಗಳಿಗೂ ಮೂಲನಾದ ದೇವರಲ್ಲಿ ಪ್ರೀತಿ ಭಕ್ತಿ ಶಾಶ್ವತವಾದ ಸಂತೋಷವನ್ನೀಯುತ್ತದೆ

ಇಲ್ಲಿ ನಾವು ಮುಖ್ಯವಾಗಿ ಕಾಣುವುದು ಸಮರ್ಪಣಾಭಾವ. ಚಿಂತನೆ, ವೇದನೆ ಮತ್ತು ಕ್ರಿಯೆಗಳು ದೈವಸಾಕ್ಷಾತ್ಕಾರದ ಹೆಬ್ಬಯಕೆಗೆ ಒಟ್ಟುಗೂಡಿದ ಒಂದು ಪ್ರಕ್ರಿಯೆ. ಚಿಂತನವನ್ನು ಉಪನಿಷತ್ತುಗಳಲ್ಲಿ ನಿದಿಧ್ಯಾಸನವೆಂದು ಕರೆಯಲಾಗಿದೆ. ವೇದನೆ ಭಗವದನುಭವಕ್ಕಾಗಿ ಧ್ಯಾನದ ಮೂಲಕ ಆವಿರ್ಭವಿಸಿ ಬೆಳೆದುದು. ಇದರಲ್ಲಿ ಮನಸ್ಸೆಲ್ಲಾ ದೈವವನ್ನು ಕುರಿತೇ ಚಿಂತಿಸುತ್ತಿರುತ್ತದೆ. ದೇವರಲ್ಲಿಯೇ ಮನಸ್ಸನ್ನೂ ಬುದ್ಧಿಯನ್ನೂ ಕೇಂದ್ರೀಕರಿಸುವ ಪ್ರಕ್ರಿಯೆ. ಮುಂದಿನದು ನಿಷ್ಕಾಮಕರ್ಮ. ಇದು ಕೇವಲ ವಿಧಿಯಲ್ಲ. ದೈಹಿಕ ಕ್ರಿಯೆಗಳೆಲ್ಲವನ್ನೂ ದೈವಸಾಕ್ಷಾತ್ಕಾರಕ್ಕಾಗಿ ಸಮರ್ಪಿಸಿಕೊಂಡಿರುವ ಮನೋಭಾವ. ನಾವು ಮಾಡುವುದೆಲ್ಲ ದೇವರಿಗೆ ಅರ್ಪಿತ. ಗೀತೆಯಲ್ಲಿ ಹೇಳಿದಂತೆ —

ಯತ್ಕರೋಷಿ ಯದಶ್ನಾಸಿ ಯಜ್ಜುಹೋಸಿ ದದಾಸಿ ಯತ್  
ಯತ್ತಪಸ್ಯಸಿ ಕೌಂತೇಯ ತತ್ಕುರುಷ್ವ ಮದರ್ಪಣಮ್

ಎಂಬಂತಹ ಕ್ರಿಯೆ ಇದು ಭಕ್ತಿ. ಆದರೆ ಮುಮುಕ್ಷು ಇದನ್ನು ಸಾಧನವಾಗಿ ಭಾವಿಸದೆ ಇದನ್ನೇ ಮೋಕ್ಷವಾಗಿ ಭಾವಿಸುತ್ತಾನೆ. ಇಲ್ಲಿ ಮುಖ್ಯವಾದುದು ಆತ್ಮ ನಿವೇದನೆ, ಆತ್ಮಸಮರ್ಪಣೆ.

ಭಕ್ತಿಯ ಪರಾಕಾಷ್ಠೆಯೇ ಅನುಭಾವ ಎಂಬುದು. ಇದು ತಾತ್ಕಾಲಿಕವಾದ ಬ್ರಹ್ಮಾನುಸಂಧಾನ. ಭಗವಂತನ ಬಾಹ್ಯದರ್ಶನದಿಂದುಂಟಾಗುವ ಆನಂದೋದ್ರೇಕದ ಪರಿಸ್ಥಿತಿ. ಭಕ್ತಿಯು ಹಾತೊರೆಯುವಿಕೆ. ಸಾಕ್ಷಾತ್ಕಾರದ ಹರ್ಷೋನ್ಮಾದವು ಅನುಭಾವ. ಅದು ಪ್ರಜ್ಞೆಯನ್ನು ತಿಳಿಗೊಳಿಸುತ್ತದೆ. ಉದ್ವೇಗವನ್ನು ಉಜ್ವಲಗೊಳಿಸುತ್ತದೆ ಹಾಗೂ ಸಂಕಲ್ಪವನ್ನು ಚೇತನಗೊಳಿಸುತ್ತದೆ. ವ್ಯಕ್ತಿ ಮತ್ತು ಸಮಾಜದ ನಡುವಣ ಕೃತಕ ಭೇದಗಳನ್ನು ನಿವಾರಿಸುತ್ತದೆ. ದೈವದ ಅಸ್ತಿತ್ವವನ್ನು ನಿರೂಪಿಸಲು ದೈವಾನುಭವವೊಂದೇ ಸಾಕ್ಷಿ. ಜ್ಞಾನಚಕ್ಷುಸ್ಸಿಗೆ (ತರ್ಕದೃಷ್ಟಿಗೆ ಎಟುಕುವುದು ವ್ಯವಸ್ಥಿತವಾದ ಭಾವಾತ್ಮಕ ಜ್ಞಾನ. ಆದರೆ ದೈವದ ಗ್ರಹಿಕೆ ಲಭಿಸುವುದು ದಿವ್ಯಚಕ್ಷುಸ್ಸಿನಿಂದ. ದೈವ ಪ್ರೇಮವು ಸ್ವಾಭಾವಿಕ ಮತ್ತು ಸ್ವತಂತ್ರ ಯಾವುದೇ ತರ್ಕ, ಅಥವಾ ಭಾಷೆಯಿಂದ ಅದರ ಆಳವನ್ನು ಅಳೆಯಲಾಗದು. ಪ್ರಾರ್ಥನೆ, ಸ್ತುತಿಗಳನ್ನೆಲ್ಲಾ ಅದು ನಿವಾರಿಸುತ್ತದೆ. ಈ ಭಾವಾನುಭವ ಮಾತಿನಲ್ಲಿ ಗೀತ ರೂಪದಲ್ಲಿ ಹೊರಹೊಮ್ಮುತ್ತದೆ. ಕರ್ನಾಟಕದ ಹರಿದಾಸರಿಗೂ ಹಿಂದೆಯೇ

ತಮಿಳುನಾಡಿನಲ್ಲಿ ಶ್ರೀವೈಷ್ಣವ ಸಂತರು ಈ ದಿವ್ಯಾನುಭವವನ್ನು ಸವಿದು ತಮ್ಮ ಗೀತೆಗಳಿಂದ ಅದನ್ನು ಚಿತ್ರಿಸಿದ್ದಾರೆ

ಈ ಸಂತರಲ್ಲಿ ಮೊದಲಿಗರು ಆಳ್ವಾರರು ಆಳ್ವಾರ್ ಎಂದರೆ ಭಗವದನುಭವದಲ್ಲಿ ಆಳವಾಗಿ ಮುಳುಗಿದವರು ಎಂದು ಅರ್ಥ ಆ ಅನುಭವಾನಂದವನ್ನು ಅವರು ಗೀತರೂಪದಲ್ಲಿ ಹೊಮ್ಮಿಸಿದರು ಈ ಗೀತೆಗಳೆಲ್ಲವೂ ತಮಿಳಿನಲ್ಲಿವೆ ಇವುಗಳಿಗೆ ದಿವ್ಯ ಪ್ರಬಂಧಗಳೆಂಬ ಹೆಸರಿದೆ ಇವು ನಾಲು ಸಾವಿರ – ನಾಲಾಯಿರವ್ – ವೇದಗಳಿಗೆ ಸಮಾನವೆಂದು ಇವುಗಳನ ಪರಿಗಣಿಸಲಾಗಿರುವುದರಿಂದ ಇದನ್ನು ದ್ರವಿಡ ವೇದ – ದ್ರವಿಡೋಪನಿಷತ್ತು – ಗಳೆಂದು ಕರೆಯಲಾಗಿದೆ

ಸಾಂಪ್ರದಾಯಿಕ ಹೇಳಿಕೆಗಳಂತೆ ಈ ಆಳ್ವಾರುಗಳ ಕಾಲ ಕಲಿಯುಗಾರಂಭ — ಕ್ರಿ ಪೂ 4203 ರಿಂದ ಕ್ರಿ ಪೂ 2706 ರ ವರೆಗೆ ಆದರೆ ಈ ಹೇಳಿಕೆ ಸರ್ವ ಸಮ್ಮತವಾದುದಲ್ಲ ಸುಮಾರು ಕ್ರಿ ಶ 7 ರಿಂದ 9 ನೆಯ ಶತಮಾನದವರೆವಿಗೆ ಎಂಬುದು ಬಹುಮಾನ್ಯವಾದ ಅಭಿಪ್ರಾಯ ಇವರು ಹನೆರಡು ಮಂದಿ ಇವರನ್ನು ಭಾಗವತರೆಂದೂ ವರ್ಣಿಸಲಾಗಿದೆ ಏಕದೇವೋಪಾಸನೆ ಭಕ್ತಿ – ಪ್ರಪತ್ತಿಗಳಿಗೆ ಪ್ರಾಶಸ್ತ್ಯ ಭಗವಂತನು ಕ ಪಾಮಯ ಪ್ರೇಮಮಯ ಯಾವ ಜಾತಿ ಲಿಂಗಗಳ ಭೇದಗಳಿಲ್ಲದೆ ಎಲ್ಲ ಮನುಜರಿಗೂ ಬಹಳ ಸುಲಭವಾಗಿ ಒಲಿಯುವವನು ಎಂಬುದು ಭಾಗವತ ಸಂಪ್ರದಾಯ ದ ನಂಬ ಗೆ ಸ್ವತಃ ಆಳ್ವಾರರಲ್ಲಿಯೇ ಈ ಜಾತಿ ಲಿಂಗಗಳ ಬೇದವಿಲ್ಲವೆಂಬುದು ತಿಳಿದ ವಿಷಯ ಇವರಲ್ಲಿ ಮೂವರು ಮಾತ್ರ – ಮಧುರಕವಿ ಪೆರಿಯಾಳ್ವಾರ ಮ ತ್ತು ತೊಂಡರಡಿಪ್ಪೊಡಿ – ಬ್ರಾಹ್ಮಣರು ಒಬ್ಬಾಕೆ ಆಂಡಾಳ್ –ಸ್ತ್ರೀ, ಒಬ್ಬರು ಕ್ಷತ್ರಿಯ ರು ಅರಸರು ಕುಲಶೇಖರರು ಇನ್ನೊಬ್ಬರು ತಿರುಮಂಗೈ ಚತುರ್ಥ ವರ್ಣದವರು ನಮ್ಮಾಳ್ವಾರರು ವೆಳ್ಳಾಳರು ತಿರುಪ್ಪಾಣರು ಪಂಚಮರು ಇನ್ನುಳಿದ ನಾಲ್ವರ ಬಗೆಗೆ ಏನೂ ತಿಳಿಯದು ಆದರೆ ಇವರೆಲ್ಲರೂ ಆಚಾರ್ಯರೆನಿಸಿದವರಿಗಿಂತಲೂ ಉಚ್ಚರೆಂದ ಪೂಜಾರ್ಹರಾಗಿದ್ದಾರೆ ಇವರ ದರ್ಶನದ ವಿವರಗಳೇನೇ ಇರಲಿ ಭಗವಂತನ ದಯೆಗೆ ಆತನಿಗೆ ಶರಣಾಗಬೇಕು ಭಕ್ತಿಮಾರ್ಗ ಉತ್ತಮ ಅದಕ್ಕಿಂತಲೂ ಪ್ರಪತ್ತಿ ಇನ್ನೂ ಶ್ರೇಷ್ಠ ಎಂಬ ದು ಇವರ ಅಭಿಮಂತ ಭಕ್ತಿ ಪ್ರಪತ್ತಿಗಳು ಕುಲಹೀನನಿಗೆ ಕುಲವನು ಬಡವನಿಗೆ ಸಿರಿಯನ್ನು ತಂದುಕೊಡುತ್ತದೆಂಬುದು ಇವರು ಬೋಧಿಸಿದ ತತ್ವ

ಪೊಯ್ಗೈ ಪೂದತ್ತು ಮತ್ತು ಪೇಯರ್ ಇವರುಗಳು ಮೊದಲ ಮೂವರು ಇವರನ್ನು ಕುರಿತಂತೆ ಯಾವ ವಿವರಗಳೂ ತಿಳಿಯದು ಮೂವರೂ ಪುಷ್ಪ ಸಂಜಾತರು ಕಾಂಚೀಪುರದ ಯಥೋಕ್ತಕಾರೀ ದೇವಾಲಯದ ಕೊಳದಲ್ಲಿ ಸ್ವರ್ಣಕಮಲದಲ್ಲಿ ಪೊಯ್ಗೈ ಆಳ್ವಾರರು ಜನಿಸಿದರು ಸಾರಯೋಗಿ ಎಂಬುದು ಇವರ ಇನ್ನೊಂದು ಅಭಿದಾನ ಮಹಾಬಲಿಪುರದ ಮಾಧವೀಪುಷ್ಪ (ಕುರುಕ್ಕತ್ತಿ) ದಲ್ಲಿ ಪೂದತ್ತರ

ಜನನ ಪೆ ಯಾಳ್ವಾರರು ಮೈಲಾಪ್ಪುರದ ಕೊಳದ ಕೆಂದಾವರೆಯಲ್ಲಿ ಜನಿಸಿದರೆಂದು ಪ್ರತೀತಿ ಇವರ ಪಾಶ ರ ಬಿಡಿಪದ ಗಳಿಂದ ಇವರ ಜ್ಞಾನ ಪರಾಕಾಷೆ ಯ ಪರಿಚಯ ನವ ಗಾಗುತ್ತದೆ ಒಬ್ಬೊಬ್ಬರೂ ನೂರು ನೂರು ಅಂತಾದಿಗಳೆಂಬ ಪದ್ಯಗಳನು ಹಾಡಿದರು ಪ್ರತಿಯೊಂದು ಒದ್ಯದ ಅಂತಿಮ ಅಕ್ಷರ ಉಚ್ಚಾರ ಅಥವಾ ಪದ ಮುಂದಿನ ಪದ್ಯದ ಆರಂಭವಾಗಿ ಬರುವ ಈ ಶೈಲಿಗೆ ಅಂತಾದಿ ಎಂದು ಹೆಸರು ಇವು ವೆಣ್ಬಾ ಛಂದಸ್ಸಿನಲ್ಲಿವೆ ಮೂವರು ಮೂರು ನೂರು ಅಂತಾದಿಗಳನ್ನೂ ಹಾಡಿದ್ದಾರೆ ಒಮ್ಮೆ ತಿರುಕ್ಕೋಯಿಲೂರಿನಲ್ಲಿ ಒಬ್ಬರು ಮಾತ್ರ ಮಲಗಬಹುದಾದ ಅಥವಾ ಇಬ್ಬರು ಕುಳಿತ ಕೊಳ್ಳಬಹುದಾದ ಇಲ್ಲವೇ ಮೂವರು ನಿಲ್ಲಬಹುದಾದಂತಹ ಇಕ್ಕಟ್ಟಾದ ಕೊರಡಿಯೊಂದರಲ್ಲಿ ಮಳೆಗ ಆಶ್ರಯವಾಗಿ ಬಂದು ನಿಂತ ಇವರಿಗೆ ನಾಲ್ಕನೆಯವರೊಬ್ಬರು ಅಗೋಚರರಾಗಿದ್ದು ತಮ್ಮನು ಒತ್ತರಿಸುತ್ತಿದ್ದುದರ ಅನುಭವವಾಯಿತು ಈತನೇ ಪರಮಾತ್ಮ ಎಂಬ ಭಾವ ಅವರಲ್ಲಿ ಸ್ಫುರಿಸಿತ್ತು ತಪ ಜ್ಞಾನ ಪರಾಭಕ್ತಿ ಮತ್ತು ಪರಮ ಜ್ಞಾನಗಳ ಮೂಲಕ ಆತನನ್ನು ಅಂತರ್ದೃಷ್ಟಿ ಯಿಂದ ಕಂಡ ಅವರು ತಮ್ಮ ಅನುಬವಗಳನ್ನು ಹಾಡಿನ ಮೂಲಕ ತೋಡಿಕೊಂಡರು ಪೊಯ್ಗೈ ಆಳ್ವಾರರು ಹಾಡಿದ ಮೊದಲ ಪಾಶುರ ಹೀಗಿದೆ

> ವೈಯಂ ತಗಳಿಯಾವಾರ್ ಕಡಲೇ ನೆಯಾಗ
> ವೆಯ್ಯ ಕದಿರೊ ನ್ ವಿಳಕ್ಕಾಗ ಶೆಯ್ಯ
> ಶುಡರಾಬಿಯಾನಡಿಕ್ಕೇ ಶೂಟ್ಟಿನೇನ್ ಶೊನ್‌ಮಾಲೈ
> ಇಡರಾಬಿ ನೀಙ್ಗವೇ ಯೆಂನ

ಇದನ್ನು ಮಾಸ್ತಿ ವೆಂಕಟೇಶಯ್ಯಂಗಾರ್ಯರು (ಶ್ರೀನಿವಾಸ) ಹೀಗೆ ಅನುವಾದಿಸಿದ್ದಾರೆ

> ನೆಲವೇ ಹಣತೆಯಾಗಿ ಹರಹಿದ ಕಡಲು ನೆಯ್ಯಾಗಿ
> ಬಿಸುಗದಿರ ಸೂರ್ಯನೇ ಸೊಡರ ಕುಡಿಯಾಗಿರಲು
> ಎಡರ ಕಡಲಾದ ಸಂಸಾರ ಅಳಿಯಲಿ ಎಂದು
> ಸೊಡರಂತೆ ಚಕ್ರವನು ಹಿಡಿದವನ ಕನ್ನಡಿಗೆ
> ನುಡಿಮಾಲೆಯಿದನು ತೊಡಿಸಿದೆನು

ಇಲ್ಲಿ ಪ್ರಕೃತಿಯ ಗೋಚರ ವಿಷಯದ ವರ್ಣನೆ ಇದೆ ವಿಶ್ವವೇ ಒಂದು ಹಣತೆ ಇದನ್ನು ಆಧರಿಸಿ ನಿಂತ ತುಪ್ಪವೆಂಬ ಕಡಲು ಬತ್ತಿಗೆ ಆಧಾರ ಈ ಬತ್ತಿ ಯನ್ನು ಹಚ್ಚುವಾತ ಆ ಹಣತೆಯಲ್ಲಿನ ಪ್ರಭೆ ಅತೀತನಾದ ಸೃಷ್ಟಿಕರ್ತನನ್ನು ನಿರ್ದೇಶಿಸುತ್ತದೆ ಇದು ಬಹಿರ್ಗೋಚರ ಆದರೆ ಪೂದತ್ತಾಳ್ವಾರರು ಅಂತಸ್ಸತ್ವ ವನ್ನು ತಮ್ಮ ಪಾಶುರದಲ್ಲಿ ವರ್ಣಿಸಿದ್ದಾರೆ ಅವರ (ಇರಂಡಾಮ್) ತಿರುವಂದಾ ದಿಯ ಮೊದಲ ಪಾಶುರ ಹೀಗಿದೆ

ಅನ್ಬೆ ತಗಳಿಯಗಾ ಆರ್ವಮೇ ನೆಯ್ಯಾಗ
ಇನ್ಬುರ ಗಿ ಶೆನ್ಬ್ದ್ಯಯಿಡು ತಿರಿಯಾ ನನ್ಬುರ ಗಿ
ಜ್ಞಾನಚ್ಚುಡರ್ ವಿಳಕೇತ್ತಿನೇನ್ ನಾರಣಱ್ಕು
ಜ್ಞಾನತ್ತಮಿಜ್ ಪುರಿನ್ದ ನ ನ

ಶ್ರೀನಿವಾಸರ ಭಾಷಾಂತರ

ಭ ್ತಿಯೇ ಹಣತೆ ಮನದಾಸೆಯೇ ನೆಯ್ಯಾಗಿ
ಆನಂದ ಅರುಗಿ ಭಾವವೆ ವರ್ತಿಯಾಗಿರಲು
ಬೆಳಗಿ ಹಚ್ಚಿದೆನರಿವಸೊಡರ ಆತುಮಂಕರಗಿ
ತಿಳಿವೀವ ತಮಿಳರಿತ ನಾನು ನಾರಾಯಣಗೆ

ಇಲ್ಲಿ ಭಕ್ತಿಯ ಹಣತೆಯನು ಆಳ್ವಾರರು ಹಚ್ಚಿದ್ದಾರೆ ತನ್ಮೂಲಕ ದಿವ್ಯಸ್ವರೂಪ ವನು ಗ್ರಹಿಸಲು ಹೊರಟಿದ್ದಾರೆ

ಪೇಯಾಳ್ವಾರರದು ದಿವ ದೃಷ್ಟಿ ದಿವ್ಯಾನ ಭೂತಿ ಭಾವ ಅವರ ಕೃತಿಯಲ್ಲಿ ಹೀಗೆ ಮೂಡಿದೆ

ತಿರುಕ ಣ್ಡೇನ್ ಪೊನ್ ಮೇನಿ ಕಣ್ಡೇನ್ ತಿಗಟುಮವ್
ಅರುಕ್ಕ ವಣ್ಣನಿಱಮುಂ ಕಣ್ ೕನ ಶೆರುಕ್ಕಿಳರುಮ್
ಪೊನಾ ಟಿ ಕಣ್ಡೇನ್ ಪುರಿಶಙ್ಗಙ್ಗೈ ಕಣ್ಡೇನ್
ಎನ್ನಾಟಿವಣ್ಣನ ಪಾಲಿನ್ಮ

ಶ್ರೀನಿವಾಸರ ಭಾಷಾಂತರ

ಸಿರಿಯನು ಕಂಡೆನು ಹೊನ್ನೊಡಲ ಕಂಡೆನು
ತೊಳೆವ ಸೂರ್ಯ ನ ತೆರೆದ ಚೆಲ ಹೊಗರ ಕಂಡೆನು
ಕಣದೆ ಹೊಳೆಯುವ ಹೊನ ಚಕ್ರ ಮುರಿಶಂಖುವನು
ಕಡಲ ಬಣ್ಣದ ನನ ಹರಿಯ ಬಳಿ ಕಂಡೆನು

ಇಲ್ಲಿ ಇತರ ಗುಣಗಳೊಡನ ಲಕ್ಷ್ಮೀ ಸಹಾಯತ್ವವೂ ಪರಮಾತ್ಮನಲ್ಲಿ ವ್ಯವಸ್ಥಿತ ವಾಗಿರುವುದನು ಕಾಣುತ್ತೇವೆ ದೇವರನು ಮಾನವ ಪ್ರೇಮಕ್ಕಿಂತ ಮಿಗಿಲಾಗಿ ದೈವಿಕ ಪ್ರೇಮದಿಂದ ಕಾಣಲಾಗಿದೆ ಇಲ್ಲಿ ಶ್ರೀನಿವಾಸನ ದೈವತ್ವದ ಕಲ್ಪನೆ ಇದೆ

ಮೊದಲ ಮೂವರು ಆಳ್ವಾರರ ಸಮಕಾಲೀನರೂ ಅನ್ಯ ಸಮಯಗಳಲ್ಲೂ ಪ್ರವೇಶವಿದ್ದವರೂ ಆದ ತಿರುಮಳಿಶೈ ಆಳ್ವಾರರು ಅವರ ಜನ್ಮಸ್ಥಳವಾದ ತಿರು ಮಳಿಸೈ ಎಂಬ ಹೆಸರನ್ನೇ ಪಡೆದವರಾದರೂ ಭಕ್ತಿಸಾರವೆಂಬುದು ಇವರಿಗೆ ಹೆಚ್ಚು ಅನ್ವರ್ಥವಾದ ಹೆಸರು ಗುರು ಪರಂಪರಾ ಪ್ರಭಾವದಲ್ಲಿ ಇವರ ಜನನದ ವಿವರ

ಗಳಿವೆಯಾದರೂ ಅವೆಲ್ಲಾ ಎಷ್ಟರಮಟ್ಟಿಗೆ ಸ್ವೀಕಾರಾರ್ಹ ಎಂಬುದು ಸಂದೇಹಾಸ್ಪದ. ಭೃಗು ಮಹರ್ಷಿ ಹಾಗೂ ಕನಕಾಂಗಿ ಎಂಬ ಅಪ್ಸರೆಗೆ ಜನಿಸಿದ ಇವರನ್ನು ಸಾಕಿ ಸಲಹಿದಾತ ತಿರುವಾಳನ್ ಎಂಬ ಬೇಡ ಮತ್ತು ಆತನ ಪತ್ನಿ ಪಂಗಯಚ್ಚೆಲ್ವಿಯಾರ್. ಆಕೆಯ ಗರ್ಭಸಂಜಾತ ಕಣಿಕ್ಕಣ್ಣನ್ ಈ ಆಳ್ವಾರರ ಶಿಷ್ಯ-ಸಖ. ಮೊದಲು ಶೈವ ಧರ್ಮವನ್ನವಲಂಬಿಸಿ, ಶಿವವಾಕ್ಕಿಯಾರ್ ಎಂಬ ಹೆಸರನ್ನು ಧರಿಸಿದ್ದ ಈತ ಕ್ರಮೇಣ ವೈಷ್ಣವ ಧರ್ಮದತ್ತ ಗಮನ ಹರಿಸಿ ಅಂತಿಮವಾಗಿ ಕಟ್ಟಾ ವಿಷ್ಣುಭಕ್ತನಾದ. ವಿಷ್ಣುವಲ್ಲದೆ ಪರದೈವವಿಲ್ಲವೆಂದು ನಂಬಿದ ಈತ ವಿಷ್ಣುಭಕ್ತಿಯ ಪ್ರಚಾರಕ್ಕಾಗಿ ಬಹಳ ಶ್ರಮಿಸಿದ. ಈತನ ಅಸಾಧಾರಣ ಶಕ್ತಿಗಳನ್ನು ಕುರಿತಂತೆ ಹಲವಾರು ಕತೆ ಗಳಿವೆ. ರಸತಂತ್ರದಲ್ಲೂ ಪರಿಣತನಾಗಿದ್ದನೆಂಬ ಪ್ರತೀತಿ ಇದೆ. ಅವುಗಳು ಎಷ್ಟರ ಮಟ್ಟಿಗೆ ನಂಬಲರ್ಹವಾದುವುಗಳು ಎಂಬುದನ್ನು ಖಚಿತವಾಗಿ ಹೇಳಲಾಗದು.

ನಾನ್‌ಮುಕನ್ ತಿರುವಂದಾದಿ ಮತ್ತು ತಿರುಚ್ಚಂದವಿರುತ್ತಮ್ ಎಂದು ಕ್ರಮ ವಾಗಿ 96 ಮತ್ತು 120 ಪಾಶುರಗಳ ಎರಡು ಪ್ರಬಂಧಗಳು ಈತನಿಂದ ಹಾಡ ಲ್ಪಟ್ಟುವು. ನಾನ್‌ಮುಕನ್ ತಿರುವಂದಾದಿಯಲ್ಲಿ ಲಕ್ಷ್ಮೀಸಮೇತನಾದ ನಾರಾಯಣನ ಪಾರಮ್ಯವನ್ನು ವೇದ, ಇತಿಹಾಸ, ಪುರಾಣಗಳ ಆಧಾರದೊಂದಿಗೆ ಎತ್ತಿಹಿಡಿಯುವ ಪ್ರಯತ್ನವಿದೆ. ಇದರ ಕೊನೆಯ ಪಾಶುರದಲ್ಲಿ ವಿಷ್ಣುವೊಬ್ಬನೇ ಪರದೈವವೆಂಬು ದನ್ನು ಬ್ರಹ್ಮ ಮತ್ತು ಶಿವರು ಆತನಿಂದಲೇ ಸೃಷ್ಟಿಸಲ್ಪಟ್ಟರೆಂಬುದನ್ನೂ ಈಗ ಚೆನ್ನಾಗಿ ತಿಳಿದುಕೊಂಡಿದ್ದೇನೆ ಎನ್ನುವ ಮಾತಿದೆ.

ಇನಿಯರಿನ್ದೇನ್ ಈಶಱ್ಕುಂ ನಾನ್ಮುಗಱ್ಕುಂ ದೆಯ್ಯಮ್<br>
ಇನಿಯಱಿನ್ದೇನ್ ಎಮ್ಬೆರುಮಾನ್ ಉನ್ನೈ ಇನಿಯಱಿನ್ದೇನ್<br>
ಕಾರಣನ್ನೀ ಕತ್ತವೈನೀ ಕಱ್ಪವೈನೀ ನಲ್ಕಿರಿಶೈ<br>
ನಾರಣನ್ನೀನನ್ನಱಿನ್ದೇನ್ ನಾನ್

ನನಗೆ ಸ್ವಾಮಿಯಾದ ನಿನ್ನನ್ನು (ನಾರಾಯಣನನ್ನು) ಶಿವನಿಗೂ, ಬ್ರಹ್ಮನಿಗೂ ದೇವಾಧಿದೇವನೆಂದು, ಜಗತ್ಕಾರಣಭೂತನೆಂದು, ನನಗಿದುವರೆಗೂ ತಿಳಿದಿರುವ ಇನ್ನು ಮೇಲೆ ತಿಳಿದುಕೊಳ್ಳುವ ಎಲ್ಲ ವಸ್ತುಗಳೂ ನಿನಗೆ ಸೇರಿದುವೆಂದೂ ಈಗ ತಿಳಿದುಕೊಂಡೆ. ಅತಿಮಾನುಷ ಚೇಷ್ಟಿತನಾದ ಸರ್ವಸ್ವಾತ್ಮರನಾದ ಶ್ರೀ ನಾರಾಯಣ ನೆಂದು ಈಗ ಚೆನ್ನಾಗಿ ಗ್ರಹಿಸಿದೆ.

ಭಕ್ತರ ಭಕ್ತನ ಹಿರಿಮೆಯನ್ನು ಈತ ಕೊಂಡಾಡಿ, ಭಕ್ತರ ಭಕ್ತನಲ್ಲಿ ಭಕ್ತಿಯು ದೈವಭಕ್ತಿಗಿಂತಲೂ ಶ್ರೇಷ್ಠವೆಂದು ಈತ ಸಾರಿದ್ದಾನೆ. ಆಳ್ವಾರುಗಳೆಲ್ಲರೂ ಸಾಮಾನ್ಯ ವಾಗಿ ದೇವರ ಅವತಾರಗಳನ್ನು ಸ್ತೋತ್ರುಮಾಡಿದ್ದಾರೆ. ಆದರೆ ಈ ಆಳ್ವಾರರು ಆದರ ದಿವ್ಯಪ್ರಭೆಗಳನ್ನು ಅವತಾರಗಳ ಉತ್ಕೃಷ್ಟ ತತ್ತ್ವವನ್ನು ತಮ್ಮ ಪಾಶುರಗಳಲ್ಲಿ ವರ್ಣಿಸಿದ್ದಾರೆ. ರಾಮಾಯಣ ಮಹಾಭಾರತಾದಿ ಸಂಸ್ಕೃತ ಕಾವ್ಯಗಳ, ವಿಷ್ಣು

ಪುರಾಣ ಮುಂತಾದ ಪುರಾಣೇತಿಹಾಸಗಳ ದರ್ಶನಗಳ ಗಾಢ ಪರಿಚಯವಿದ್ದ ಇವರು ತಮ್ಮ ಪಾಶುರಗಳಲ್ಲಿ ಅವುಗಳನ್ನು ಎಳಸಿಕೊಂಡಿದ್ದಾರೆ ಇವರ ತಿರುಚ್ಛಂದ ವಿರುತ್ತಮು ಇವರೇ ಹಾಡಿದ ತಿರ ವಂದಾದಿಗಿಂತಲೂ ತಾತ್ವಿಕವಾಗಿ ಉತ್ಕೃಷ್ಟವ ಗಿದೆ ಸಂಖ್ಯೆಗಳನ್ನು ವಿಶೇಷಾರ್ಥಗಳಲ್ಲಿ ಎಳಸಿರುವುದೊಂದು ವೈಶಿಷ್ಟ್ಯ

ತಿರುಚ್ಛಂದವಿರುತ್ತದ ಮೊದಲ ಪದ್ಯವೇ ಹೀಗಿದೆ

> ಪೂನಿಲಾಯಂವೆ ನ್ಡುವಾಯಿತ ಪುನಲ್ಕಣಿನ್ವನಾನ್ರುವಾಯ್
> ತೀನಿಲಾಯಿ ಮೂನ್ರುವಾಯ್ ಚಿಱಿನ್ದ ಕಾಲಿರಣ್ಡುವಾಯ್
> ಮಿನಿಲಾಯದೊನ್ರುವಾಯ್ ವೆಯ್ರ್ಯೆನೋಡು ಪೊಯ್ಯುವಾಯ್
> ಊಱಿಡೋಶೈಯವಾಯ್ನ್ಡುವ್ ಆಯುವಾರಯವಾರೆನೇ

(ಭೂಮಿಯಲ್ಲಿ ಐದಾಗಿ ಜಲದಲ್ಲಿ ನಾಲ್ಕಾಗಿ ಅಗ್ನಿಯಲಿ ಮೂರಾಗಿ ಬಲವಾದ ವಾಯುವಿನಲ್ಲಿ ಎರಡಾಗಿ ಮೇಲೆ (ಆಕಾಶದ್ರವ ದಲ್ಲಿ) ಒಂದಾಗಿ ಆದರೂ ಇವೆಲ್ಲವು ಗಳಿಂದಲೂ ವಿಶಿಷ್ಟ ರೀತಿಯಲ್ಲಿ ಬಿನ ವಾದ ನಿನ ನು ಯಾರು ತಾನೇ ಅರಿಯಬಲ್ಲರು?)

ಇಲ್ಲಿರುವ ತತ್ವ ವಿಚಾರಪೂರಿತವಾಗಿದೆ ಪೃಥ್ವಿಯಲ್ಲಿ ಐದು ಗುಣಗಳು ಶಬ್ದ ಸ್ಪರ್ಶ, ರೂಪ ರಸ ಗಂಧ ಇದು ಜಲ ಅಗ್ನಿ, ವಾಯುಗಳಲ್ಲಿ ಕ್ರಮವಾಗಿ ಒಂದೊಂದೇ ಇಲ್ಲವಾಗುತ್ತದೆ ಜಲದಲ್ಲಿ ಗಂಧವಿಲ್ಲ ಅಗ್ನಿಯಲ್ಲಿ ಗಂಧ ರಸಗಳಿಲ್ಲ ವಾಯುವಿನಲ್ಲಿರುವುದು ಶಬ್ದ ಸ್ಪರ್ಶಗಳೆರಡೇ ಆಕಾಶದಲ್ಲಿರುವುದು ಶಬ್ದವಷ್ಟೇ ಇವೆಲ್ಲವುಗಳಿಗೂ ಮೂಲ ಆದಾರಭೂತವಾದ ದು ದೈವವೊಂದೇ

ಚರಾಚರ ವಸ್ತುಗಳೆಲ್ಲವೂ ಭಗವಂತನಲ್ಲೇ ಉದಿಸಿ ಭಗವಂತನಲ್ಲೇ ಮುಳುಗುವುವು

> ತನು ಳೆ ತಿರೈತ್ತೆಱುಮ್ ತರಂ ವೆಣ್ಡಡಂ ಡಲ್
> ತನ್ನುಳೆ ತಿರೈತ್ತೇಱುನ್ದು ಅಡಙ್ಗು ಹಿನ್ರತೆನ್ನೈಪೋಲ್
> ನಿನ್ನುಳೇ ಪಿಱನ್ದಿಱುನ್ದು ನಿಱ್ಪವುಮ್ ತಿರಿಪವುಮ್
> ನಿನ್ನುಳೇಯಡುಙ್ಗುಹಿನಱ್ಱ ನೀರ್ಮೈನಿನ್ಕಣನಱ್ಱದೇ

(ತನ್ನಲ್ಲೇ ಎದ್ದು ಹರಡಿ ತನ್ನಲ್ಲೇ ಲೀನವಾಗುವ ಅಲೆಗಳನ್ನುಳ್ಳ ಬಿಳಿನೊರೆಯ ಕಡಲಂತೆ ನಿನ್ನಲ್ಲೇ ಹುಟ್ಟಿ ಉಳಿದ ಚರಾಚರ ವಸ್ತುಗಳೆಲ್ಲವೂ ನಿನ್ನಲ್ಲೇ ಲೀನ ವಾಗುವುವು)

ಇವರ ಪಾಶುರಗಳಲ್ಲಿ ಭಕ್ತಿ ಏಕದೇವೋಪಾಸನೆ ಸೂಕ್ಷ್ಮತತ್ವಗಳು ಎದ್ದು ಕಾಣುತ್ತವೆ

ತೊಂಡರಡಿಪ್ಪೊಡಿ ಆಳ್ವಾರರು ತಿರುಮಂಡಾಂಗುಡಿ ಗ್ರಾಮದ ವಿಪ್ರಕುಲದಲ್ಲಿ ಹುಟ್ಟಿದವರು ವಿಪ್ರನಾರಾಯಣ ಎಂಬುದು ಇವರ ಹೆಸರು ಸರ್ವಶಾಸ್ತ್ರ

ಪಾರಂಗತರಾಗಿ ನೈಷ್ಠಿಕ ಬ್ರಹ್ಮಚಾರಿಗಳಾಗಿದ್ದು ಇವರು ಆನುವಂಶಿಕವಾಗಿ ಒಂದ ಪುಷ್ಪ ಕೈಂಕರ್ಯವನ್ನು ಮುಂದುವರಿಸಿದರು ಶ್ರೀರಂಗ ದೇವಾಲಯದ ತೋಟದಲ್ಲಿ ತುಳಸೀಗಿಡಗಳನ್ನು ಇತರ ಸುಗಂಧ ನಯನಮನೋಹರ ಪುಷ್ಪಗಳನೂ ಪೋಷಿಸಿ ದೇವರಿಗೆ ಅರ್ಪಿಸುವ ಕಾರ್ಯ ಇವರದು ಅದರಲ್ಲಿಯೇ ತಲ್ಲೀನರಾಗಿದ್ದ ಇವರನ್ನು ಅಲ್ಲಿನ ವೇಶ್ಯಾಸ್ತ್ರೀಯಾದ ದೇವಾದೇವಿ ಮೋಹಿಸಿದಳು ಸ್ತ್ರೀಯರನ್ನು ಕಣ್ಣೆತ್ತಿಯೂ ನೋಡದಿದ್ದ ಇವರನು ಆಕೆ ಒಲಿಸಿಕೊಂಡಳು ದೇವದಾಸನಾದ ತೊಂಡ ಈಗ ದೇವಾದೇವಿಯ ದಾಸನಾದ ಬಾಹ್ಯ ಪ್ರಪಂಚವನೆಲ್ಲ ಮರೆತ ತನ್ನ ಸರ್ವಸ್ವವನು ಆಕೆಗೆ ಒಪ್ಪಿಸಿದ ಆತನನ್ನು ಸುಲಿದ ನಂತರ ದೇವದೇವಿ ಆತನನ್ನು ಮನೆಯಿಂದ ತೋಟದಿಂದ ಹೊರದೂಡಿದಳು ಇಂತಹ ದಾರುಣ ಸ್ಥಿತಿಯಲ್ಲಿದ್ದಾಗ ದೇವನಾದ ಶ್ರೀರಂಗನಾಥನೂ ಮಹಾಲಕ್ಷ್ಮಿಯೂ ಆತನ ಮೇಲೆ ಕರುಣೆ ತೋರಿದರು ನೌಕರನಂತೆ ವೇಷಧರಿಸಿದ ದೇವರು ದೇವಾಲಯದ ಪೂಜಾಸಾಮಗ್ರಿಗಳಲ್ಲಿ ಒಂದು ಚಿನ್ನದ ಬಟ್ಟಲನು ಈ ಆಳ್ವಾರರು ಕಳುಹಿಸಿದರೆಂದು ಹೇಳಿ ದೇವಾದೇವಿಯ ಮನೆಯಲ್ಲಿ ಕೊಟ್ಟು ದೇವಾಲಯದ ಅರ್ಚಕರು ನೀಡಿದ್ದ ದೂರನು ಆಧರಿಸಿ ದೇವಾದೇವಿಯ ಮನೆಯನು ಶೋಧಿಸಿದಾಗ ದೊರೆತ ಚಿನ್ನದ ಬಟ್ಟಲು ವಿಪ್ರನಾರಾಯಣನ ಮೂಲಕ ಲಭಿಸಿತೆಂದು ಆಕೆಯು ಹೇಳಿಕೆಯ ಆಧಾರದ ಮೇಲೆ ಸ್ಥಳೀಯ ನಾಯಕನು ತೀರ್ಪನ್ನು ನೀಡುವ ಮೊದಲು ಆತನಿಗೆ ಕಾಣಿಸಿಕೊಂಡು ವಸ್ತುಸ್ಥಿತಿಯನು ವಿವರಿಸಿ ವಿಪ್ರನಾರಾಯಣನ ಮನಸ್ಸು ಮತ್ತೊಮ್ಮೆ ತನ್ನೆಡೆಗೆ ತಿರುಗುವಂತೆ ಮಾಡಿದರು ತಾನು ಮಾಡಿದುದು ತಪ್ಪು ಎಂಬುದನ್ನರಿತ ವಿಪ್ರನಾರಾಯಣರು ದೇವರ ಕೈಂಕರ್ಯಕ್ಕಾಗಿ ತಮ್ಮ ಬಾಳನು ಮೀಸಲಾಗಿರಿಸಲು ನಿರ್ಧರಿಸಿದರು ದೇವರ ಭಕ್ತರ ಪಾದದೂಳಿಯನ್ನು ತಾನು ಧರಿಸಬೇಕು, ಭಕ್ತರ ಭಕ್ತನಾಗಬೇಕು ಎಂಬುದು ಈತನ ಬಯಕೆಯಾಯಿತು ತೊಂಡರಡಿಪ್ಪೊಡಿ ಎಂಬ ಹೆಸರಿನ ಸಂಸ್ಕೃತರೂಪ ಭಕ್ತಾಂಘ್ರಿರೇಣು ದೈವ ಕೃಪೆ ಹೇಗೆ ಯಾವಾಗ ಉಂಟಾಗುತ್ತದೆ ಎಂಬುದು ಹೇಳಲಾಗದ ನಿರ್ಧರಿಸಲಾಗದ ಅಂಶ ಮಾನವನನು ರಕ್ಷಿಸುವುದು ಅದೊಂದೇ ಆತನ ಪ್ರೇಮ ಭಕ್ತರ ಪಾಪಗಳಿಗೆ ವಿಮೋಚನೆ ನೀಡುವಂತಹುದು ಭಗವದನುಭವಸಾಗರದಲ್ಲಿ ಮುಳುಗಿದ ಈ ಆಳ್ವಾರರು ಅದರಿಂದುಂಟಾದ ಪ್ರೇಮಾನುಭವವನು ತಿರುಮಾಲೈ ತಿರುಪ್ಪಳ್ಳಿ ಎಳುಚ್ಚಿ ಎಂಬ ಎರಡು ಕೃತಿಗಳಲ್ಲಿ ತೋಡಿಕೊಂಡಿದ್ದಾರೆ

ತಿರುಮಾಲೈ 45 ಪಾಶುರಗಳ ಹಾಡು ಶ್ರೀರಂಗದಲ್ಲಿನ ರಂಗನಾಥನ ಮಹಿಮೆಯನ್ನು ಇದರಲ್ಲಿ ವರ್ಣಿಸಿದೆ ರಂಗನೇ ದೈವ ಎಂದು ಬಗೆದು ಆತನನ್ನಲ್ಲದೆ ಬೇರೊಬ್ಬ ದೇವರನ್ನು ಈತ ಹೆಸರಿಸಿಲ್ಲ ಇವರ ಹಾಡುಗಳು ಹೃದಯವನ್ನು ಕಲಕುತ್ತವೆ ಇಲ್ಲಿ ಯಾವುದೇ ವಿಧದ ವೇದಾಂತದ ಸೊಲ್ಲಿಲ್ಲ ಇಂದ್ರಿಯಾನುಭವಕ್ಕೆ ಮನಸೋತ ಆಳ್ವಾರರು ನಿಗ್ರಹಕ್ಕಾಗಿ ದೇವನ ನೆರವನ್ನೂ ಒತ್ತಾಸೆಯನ್ನೂ

ಅನುಗ್ರಹಿಸುವಂತೆ ಪ್ರಾರ್ಥಿಸಿದ್ದಾರೆ ಧರ್ಮಶ್ರದ್ಧರೆಂದು ತೋರಿಸಿಕೊಳ್ಳುವ ಕಪಟಿಗಳಿಗೆ ತಾನು ಒಬ್ಬ ಹಾಗೆ ನಡೆದುಕೊಂಡುದನ್ನೇ ತೋಡಿಕೊಂಡಿದ್ದಾರೆ ತಾನು ಮೋಸಗೊಳಿಸಲು ಯತ್ನಿಸಿದುದು ಹೊರಗಿನವರನ್ನಲ್ಲ ತನ್ನಲ್ಲಡಗಿದ್ದವನನ್ನೇ ಆತ ತಾನು ಮಾಡಿದ ಎಲ್ಲ ಆಲೋಚನೆಗಳನ್ನೂ ಅರಿತಿದ್ದ ಅಂತಹವನನು ಮೋಸ ಗೊಳಿಸ ಪುದು ಅದೆಷ್ಟು ಮೂರ್ಖತನ ತನ ಈ ಕಪಟತನವನು ಕಂಡು ತಾನೇ ನಕ್ಕ ಈತ ಹಿ ಗೆ ಹಾಡಿದ್ದಾನೆ

> ಉಳ್ಳತ್ತೇಯು ಚ್ಚಿಯುಮ ವಾಳ್ಳೈ ಉಳ್ಳುವಾರ್ ಉಣರ್ವಾರ್‌ನುಲ್ಲಾ
> ಉಳ್ಳುತ್ತೇನ ನಾನು ತೊಣ್ಡಾಯ್ ತೊಣ್ಡುಕ್ಕೇ ಕೊ ವಲವು ಪೂಣ್ಡು
> ಉಳ್ಳುವಾರ ಳ್ಳಿತ್ತಿಲ್ಲಾಮ್ ಉಡನಿರುನ್ದು ಅರಿದಿಯನು
> ವೆಳ್ಕಿಪ್ಪೋಯ್ ಎನ್ನುಳ್ಳೇನಾನ್ ವಿಲವಱಿಚ್ಚಿ ಱಿತ್ತಿಟ್ಟೇನೇ

(ಹೃದಯು ಕಮಲದಲ್ಲಿ ನಿತ್ಯವಾಸಿಯಾದ ಶ್ರೀಪತಿಯು ಅನುಸಂಧಾನ ಮಾಡಲು ಅವಶ್ಯವಾದ ಸ್ವರೂಪ ಜ್ಞಾನವಿಲ್ಲದ ನಾನು ಲೋಕದ ಜನರಲ್ಲಿ ಜ್ಞಾನಿ ಎಂದು ನಟಿಸುತ್ತಾ ನನ್ನ ಕೈಂಕರ್ಯದಲ್ಲಿ ತೊಡಗಿ ಭಗವಂತನ ದಾಸನೆನಿಸಲು ಬೇಕಾದ ವೇಷ ವನ್ನು ಧರಿಸಿ ನೀನು ನನ ಹೃದಯದಲ್ಲೇ ಇದ್ದು ಕೂಡಲೇ ನನ ಯೋಚನೆಗಳ ನೆಲ್ಲಾ ಅರಿಯುತ್ತಿರುವಿ ಎಂಬುದನ್ನು ಗ್ರಹಿಸಿ ನನೊ ಳಗೆ ನಾನೇ ಲಜ್ಜಾನ್ವಿತನಾಗಿ ನನ ನ ಕಂಡ ಇತರರು ಪರಿಹಾಸ ಮಾಡಬಹುದೆಂಬುದನ್ನು ಲೆಕ್ಕಿಸದೆ ನಾಚಿಕೆಯಿಲ್ಲದೆ ನಕ್ಕುಬಿಟ್ಟೆ )

ಭಕ್ತನಾದವನು ನೀಚವೆನಿಸಿದ ಯಾವ ಕುಲಕ್ಕೆ ಸೇರಿದ್ದರೂ ಆತನ ಪಾದ ಸೇವೆ ಉತ್ತಮವಾದುದು ಯಾವ ಭೆ ದಭಾವವೂ ಇಲ್ಲದೆ ಎಲ್ಲ ಭಕ್ತರಲ್ಲೂ ದೈವ ವನ್ನು ಆಳ್ವಾರರು ಕಂಡಿದ್ದಾರೆ

> ಅಡಿಮೈಯಿಲ್ ಕುಡಿಮೈಯಿಲ್ಲಾ ಅಯಲ್ ಶುದುಪ್ಪೇದಿ ಮಾರಿಲ್
> ಮುಡಿಪ್ಪೆಯಿಲ್ ಕಡನ್ಗೈ ಪಟ್ಟ ಕ ಕ್ಕರಿ ಲ ಪಿಱಪ್ಪರೇಲುಮ್
> ವ ಡಿಯಿನಲ್ ತುಳಬಮ್ ಮೈತ್ತಾಯ ಮೊಯ್ಕ್ಕಳಱನ್ಬಳೆಯ್ಯುಮ್
> ಅಡಿಯರೇ ಉಹತ್ತಿಪ್ಪೋಲುಮ್ ಅರಂಗಮಾನಹರುಳಾನೇ

(ಶಿರದಲ್ಲಿ ತುಳಸೀ ಮಾಲೆಯನ್ನು ಧರಿಸಿದ ಶ್ರೀರಂಗನಾಥಾ ! ಚತುರ್ವೇದಗಳನ್ನು ಅಭ್ಯಾಸ ಮಾಡಿಯೂ ನಿನ್ನ ಕೈಂಕರ್ಯವೇ ಪುರುಷಾರ್ಥವೆಂಬುದನ್ನರಿಯದವರಿ ಗಿಂತಲೂ ಪಂಚಮ ಕ ಲದಲ್ಲಿ ಜನಿಸಿರುವವರಾದರೂ ನಿನ್ನ ಭಕ್ತರಾಗಿ ನಿನ್ನ ಶ್ರೀಪಾದ ಗಳಲ್ಲಿ ಅಂತರಂಗ ಕೈಂಕರ್ಯ ಮಾಡಿಕೊಂಡಿರುವ ದಾಸರೇ ಮೇಲಲ್ಲವೇ ? ಅಂತಹ ನಿನ ದಾಸರು ನಿನಗೆ ಸಂತೋಷವುಂಟುಮಾಡುವುದಿಲ್ಲವೇ ?) ಇಲ್ಲಿ ಕ ಲ ಮುಖ್ಯವಲ್ಲ ಮನೋಭಾವ ಮುಖ್ಯ ದೇವರ ಮುಂದೆ ತಾರತಮ್ಯ ಸಲ್ಲದು

ಅವುರವೊ ರೞ್ಙಮಾಱುವು ವೇದವೋರ್ ನಾನ್ಗುವೋದಿ
ತವುರ್ಹಳಿಲ್ ತಲೈವರಾಯ ಶಾದಿಯಂದಣರ್ಹಳೇಲ ವ
ನುವುರ್ಹಳ್ಕೆಪ್ಪ ಟಿಪ್ಪುರಾಹಿಲ ನೋಡಿಪ್ಪರೂ ರಳವಿಲ್ ಆಙ್ಗ್ಗೆ
ಅವರ್ಹಳ ತಾಮ ಪುಲ್ಯೆಯರ ಪೋಲುಮ್ ಅರಙ್ಗಮಾನಹರುಳಾನೇ

(ಅದ್ವಿತೀಯವಾದ ವೇದ ವೇದಾಂಗಗಳನು ಸಾವಾಕಾಶವಾಗಿ ಅಧ್ಯಯನ ಮಾಡಿ ದಾ^ವರ್ಗದಲ್ಲೇ ಶ್ರೇಷ ರೆ ಬ್ರಾಹ್ಮಣಕುಲದಲ್ಲ ಹ ಟ್ಟಿದವರಾದರೂ ಅಂತಹ ವರು ನಿಮ ರಾದ ನಿನ್ನ ಭಕ್ತರ ಕುಲಹೀನತೆಯನು ನಡವಳಿಕೆಯನ್ನು ಪ್ರತಿ ಸಿ ದೂಷಿಸುವವರು ಅಲ್ಲಿಯೇ ಆ ಕ್ಷಣದಲ್ಲಿಯೇ ತಾವೇ ಚಂಡಾಲರಾಗಂವುದಿಲ್ಲವೇ ಓ ರಂಗನಾಥಾ ?)

ಇವರ ತಿರುಪ್ಪಳ್ಳಿ ಎಳುಚ್ಚಿಯಲ್ಲಿ ಕೇವಲ 10 ಪಾಶುರಗಳಿವೆ ಶ್ರೀರಂಗ ಶಾಯಿಯನ್ನು ಪ್ರಾತ ಕಾಲದಲ್ಲಿ ನಿದ್ರೆಯಿಂದೆಬ್ಬಿಸುವ ಸುಪ್ರಭಾತ ಸ್ತೋತ್ರಗಳಿವು ಸಂಸಾರದ ಅಸ್ವಾಸ್ಥ್ಯ ಗಳಿಂದ ಮಾನವ ಕುಲವನ್ನು ಮ ಕ್ತಿಗೊಳಿಸ ಅವರ ಮೇಲೆ ಕೃಪೆ ದೊರಕಬೇಕೆಂಬ ಪ್ರಾರ್ಥನೆ ಇದರಲ್ಲದೆ ಸದಾ ಎಚ್ಚೆತ್ತಿರುವ ದೈವವನ್ನು ಸುಪ್ರಭಾತ ಹಾಡಿ ಎಚ್ಚರಿಸ ವುದು ಮನುಷ್ಯತ್ವಾರೋಪಣೆ ವಿಶಿಷ್ಟಾದ್ವೈತದಲ್ಲಿ ಆಚಾರ್ಯ ರೂಪಕ್ಕೆ ವಿಶೇಷ ಮಹತ್ವವಿದೆ ಭಕ್ತರ ಸೇವೆಯನು ಸ್ವೀಕರಿಸಲು ಅವರನ್ನು ಉದ್ಧರಿಸಲು ಎಚ್ಚರಗೊಳ್ಳು ತೊಂಡರಡಿಪ್ಪೊಡಿಯಾದ ನಾನು ತುಳಸೀ ಮಾಲೆಯಿಂದ ನಿನ ನು ಅಲಂಕರಿಸಲು ಕಾತುರನಾಗಿದ್ದೇನೆ ಎಂಬುದು ಕೊನೆಯ ಪ ಶುರದಲ್ಲಿ ಪ್ರಾರ್ಥನೆ

ಕಡಿಮಲರ್ಕ್ಕಮ ಲಙ ಳ್ ಮಲರ್ನ್ದನವಿವ್ವೆಯೋ
ಕದಿರವನ್ ಕನೈಕಡಲ ಮುಳೈತ್ತನನಿವನೋ
ತುಡಿಯಿಡೈಯಾರ ಶುರಿಕುಜಲ ಪೀಝಿನ್ದುದರಿ
ಇಹಿಲುಡಿತ್ತೇಱಿನರ ಶೂಟ ಪುನಲರಙ್ಗಾ
ತೊಡೈಯೊತ್ತ ತ ಳಮವುಮ್ ಕೂಡೈಯ ಮಾ ಪೊಲಿನ್ದು
ತೋನ್ರಿಯ ತೋಳ್ ತೊಣ್ಡರಡಿಪ್ಪೊಡಿಯೆನು ಮ್
ಅಡಿಯನೆ ೞಳಿಯನೆನ್ರರುಳಿ ಉನ್ನಡಿಯಾರ್ಕ್ಕಾ
ಆಳ್‌ಪಡುತ್ತಾಯ್ ಪಳ್ಳಿಯೆಳುನ್ದರುಳಾಯೇ

(ಸುಗಂಧ ಕಮಲಗಳು ಅರಳಿವೆ ಪೂರ್ವದ ಭೋ ರ್ಗರೆಯುವ ಕಡಲಿನಿಂದ ಸೂರ್ಯನು ಮೇಲೇರಿದ್ದಾನೆ ಕೃಶನಡುವುಳ್ಳ ಸ್ತ್ರೀಯ ರು ನದಿಯಲ್ಲಿ ಮಿಂದು ನೆನೆದ ಕೂದಲನ್ನು ಹಿಂಡಿ ಹರಹಿ ವಸ್ತ್ರಧಾರಿಗಳಾಗಿ ನದೀ ತೀರದಿಂದೆದ್ದಿದ್ದಾರೆ ತೊಂಡರಡಿಪ್ಪೊಡಿಯಾಗಿ ತುಳಸೀಮಾಲೆಯನ್ನು ಕರದಲ್ಲಿ ಹಿಡಿದ ನನ್ನನ್ನು ನಿನ್ನ

ಪ್ರೇಮಕ್ಕೆ ಯೋಗ್ಯನೆಂದು ಭಾವಿಸಿರುವ ಕಾವೇರಿಯಿಂದ ಸುತ್ತುವರಿದ ಶ್ರೀರಂಗನಾಥನೇ ಎದ್ದೇಳು ಭಕ್ತರನ್ನು ಆಶೀರ್ವದಿಸು )

ಈ ಹತ್ತು ಶ್ಲೋಕಗಳನು ಶ್ರೀವೈಷ್ಣವ ದೇವಾಲಯಗಳಲ್ಲಿ ಸುಪ್ರಭಾತವಾಗಿ ಈಗಲೂ ಹಾಡುತ್ತಾರೆ ಇಲ್ಲಿ ನಾವು ಕಾಣುವುದು ಭಕ್ತನ ಸಮರ್ಪಣಾ ಮನೋಭಾವ ತಿರುಮಾಲೈ ಅರುಶೀರ್ ಆಚರಿಯ ವೃತ್ತದಲ್ಲಿದ್ದರೆ ತಿರುಪ್ಪಳ್ಳಿ ಎಳುಚ್ಚಿಯಲ್ಲಿ ಎಣ್ಣೀರ್ ಆಚರಿಯ ವೃತ್ತವನ್ನು ಬಳಸಲಾಗಿದೆ

ನಂತರದವರು ಕುಲಶೇಖರರು ಇವರು ಕೊಲಿಕ್ಕಾವಲ (ಕೊಲಿಯ ಅರಸ) ಕೂಡಲ ನಾಯಕನ್ (ಮಧುರೆಯ ನಾಯಕ) ಕೊಲಿಕ್ಕೋನ (ಉರೈಯೂರ ಅಧೀಶ್ವರ) ಎಂದೆಲ್ಲಾ ಕರೆದು ಕೊಂಡಿದ್ದಾರೆ ಕೇರಳ ಪಾಂಡ್ಯ ಚೋಳದೇಶಗಳ (ಭಾಗಗಳ) ಮೇಲೆ ಪ್ರಭುತ್ವ ನಡೆದಿದ್ದ ಅರಸರುವರು ಮಲಬಾರಿನ ತಿರುವಂಚಿಕ್ಕೊಳಮ ಇವರ ಜನ್ಮಸ್ಥಳ ದೈವಾನುಗ್ರಹವಾಗಿ ಸಿಂಹಾಸನವನ್ನು ತ್ಯಜಿಸಿ ಶ್ರೀರಂಗಕ್ಕೆ ಬಂದು ಅಲ್ಲಿ ಸ್ವಾಮಿಯ ಸೇವೆಯಲ್ಲಿ ನಿರತರಾಗಿದ್ದರು ದೇವಾಲಯದ ಕೆಲವು ಭಾಗಗಳನ್ನು ಕಟ್ಟಿಸಿದರೆನಲು ಆಧಾರಗಳಿವೆ ತಮಿಳು ಮತ್ತು ಸಂಸ್ಕೃತಗಳೆರಡಲ್ಲಿಯೂ ಅದ್ವಿತೀಯವಾದ ಪಾಂಡಿತ್ಯ ಪಡೆದಿದ್ದ ಇವರ ಮೇರುಕೃತಿಗಳು ಪೆರುಮಾಳ್ ತಿರುಮೊಳಿ (ತಮಿಳು) ಮತ್ತು ಮುಕುಂದಮಾಲಾ (ಸಂಸ್ಕೃತ) ಪೆರುಮಾಳ್ ತಿರುಮೊಳಿಯ 105 ಪಾಶುರಗಳು ಆರು ಭಿನ್ನ ವೃತ್ತಗಳಲ್ಲಿವೆ ಕುಲಶೇಖರರು ದೇವರೊಡನೆ ತಮ್ಮ ಸಂಬಂಧ ನಿಷ್ಠೆಯಿಂದ ಕೂಡಿದ್ದು ಶಾಶ್ವತ ವ್ಯಾಪ್ತವಾದವುಗಳೆಂಬುದನು ತೋರಿದ್ದಾರೆ ತಾಯಿಗೆ ಮಗುವಿನಂತೆ ಆಯ್ಕೆ ಮಾಡಿಕೊಂಡ ಪತಿಗೆ ಪತ್ನಿಯಂತೆ ಅರಸನಿಗೆ ಪ್ರಜೆಯಂತೆ ಕೋಪದಿಂದ ತಾಯಿ ತನ ಮುಖವನ್ನು ತಿರುಗಿಸಿದರೂ ಆಕೆಯ ಅನುಗ್ರಹವನ್ನೇ ಕೋರುವ ಅಳುತ್ತಿರುವ ಮಗುವಿನಂತೆ—

ಅರಶಿನತ್ತಾಲ್ ಈನ್ನತಾಯ್ ಅಹತ್ತಿಡಿನುಮ್ ಮತ್ತವಳ್ ತನ್
ಅರುಳ್ ನೀನೈನ್ದೇ ಅಳುಮ್ ಕುಟಿಯಂದುಮೇ ಪೋನ್ಱಿರುನ್ದೇನೇ—

ಸತ್ಕುಲದಲ್ಲಿ ಜನಿಸಿದ ತರುಣಿಯು ಇತರ ಪುರುಷರು ಪರಿಹಾಸ ಮಾಡುವಂತಹ ಕಾರ್ಯಗಳನ್ನು ತನ್ನ ಪತಿ ಮಾಡಿದ್ದರೂ ಬೇರೊಬ್ಬನನ್ನು ಮನದಲ್ಲಿ ನೆನೆಯಂದೆ ನನ್ನ ಸ್ವಾಮಿಯಾದ ನೀನು ಕೈಬಿಟ್ಟರೂ ನಾನು ಅನ್ಯರಲ್ಲಿ ಪ್ರೀತಿ ಇಡುವುದಿಲ್ಲ ಎನ್ನುವಂತೆ ನಾನು ಎನ್ನನು ಕುರಿತು ಹಾಡುತ್ತೇನೆ ಅವರನ್ನು ಲಕ್ಷಿಸದಿದ್ದರೂ ಪ್ರಜೆಗಳು ಮಾತ್ರ ರಾಜನ ದಂಡವನ್ನೇ ನೋಡುತ್ತಿರುವಂತೆ—

ತನೊಕ್ಕಾದು ಎತ್ತುಯರಮ್ ಶೆಯ್ದಿಡಿನುಮ್ ತಾರ್‌ವೇನ್ದನ್
ಕೋಲ್‌ನೋಕ್ಕಿ ವಾಳುಮ್ ಕುಡಿಪೋನ್ಱಿರುನ್ದೇನೇ—

ವೈದ್ಯನೊಬ್ಬ ಕತ್ತಿಯಿಂದ ಕೊಯ್ದು ಸೂಜಿಯಿಂದ ಚುಚ್ಚಿದರೂ ರೋಗಿಯು ನಂಬುಗೆ ಇಡುವಂತೆ ದೀರ್ಘಕಾಲ ನೀನು ಮಾಯೆಯ ದ ನೆ ದ ದುಃಖವನ್ನು ಹೆಚ್ಚಿಸಿದರೂ ನಿನ ಡಿಯಾಳಾದ ನಾನು ನಿನ್ನ ಕೈಂಕರ್ಯಕ್ಕಾಗಿ ಕಾದಿದ್ದು ನಿನ ಕ ಪೆಗಾಗಿ ಹಾತೊರೆಯುತ್ತಿರುವನು—

ವಾಚಾಲರ್ಚಿತು ಚ್ಚುಡಿನುಮ್ ಮರುತ್ತುವನ್ ಪಾಲ
ಮಾಳಾದ ಕಾದಲ್ ನೋಯಾಳನ್ ಪೋಲ್ ಮಾಯಾಲ್
ವಿಳಾಳಾತ್ತುಯಿರ್ ತುನುಮ್ ವಿತ್ತುವಕ್ಕೋಟ್ಟುಮ್ಮಾ ನಿ
ಆಳಾವುನದರುಳಿ ಪಾರ್ತನೆಡಿಯೆ ನೇ—

ಎಂದೆಲ್ಲಾ ಹಾಡಿದಾರೆ

ಕುಲಶೇಖರರಿಗೆ ಅನಂತದ ಅರಿವು ತನ ನಿಯತ ಜೀವನಕ್ಕೆ ಅದು ಅವಶ್ಯಕವೆಂಬ ಪ್ರಜ್ಞೆ ಸ್ಪಷ್ಟವಾಗಿತ್ತು. ಶ್ರುತಿಗಳಲ್ಲಿ ಆಳವಾದ ಪಾಂಡಿತ್ಯವಿದ್ದು ಪರಿಣತ ಬುದ್ಧಿಗೆ ಮೀರಿ ನಿಂತ ಅನಂತ ದೈವವೇ ಆರಾಧನೀಯ ಅದೇ ಸ್ಥಿತಿ ಪ್ರಜ್ಞೆ ಮತ್ತು ಆನಂದಗಳನು ನೀಡಬಲ್ಲುದು ಎಂಬ ದು ಅವರಿಗೆ ತಿಳಿದಿತ್ತು. ಪರಮಾತ್ಮನೇ ವ್ಯಕ್ತಿಯನು ಕ್ಲೇಶ ಯಾತನೆಗಳಿಂದ ದೂರ ಒಯ್ಯಬಲ್ಲನೆಂಬುದು ಪಾಪಾತ್ಮನನ್ನೂ ಆ ದೈವದ ಸೋಂಕು ಪರಿವರ್ತಿಸುತ್ತದೆ ಎಂಬುದು ಅವರ ಅಪಾರನಂಬುಗೆ ಶರಣಾಗತಿಗೆ ಅವಶ್ಯವಾದ ಆನುಕೂಲಸ್ಯ ಸಂಕಲ್ಪ ಪ್ರಾತಿಕೂಲ್ಯ ವರ್ಜನ ರಕ್ಷಿಷ್ಯತೀತಿ ವಿಶ್ವಾಸ ಗೋಪ್ತೃತ್ವವರಣ ಆತ್ಮನಿಕ್ಷೆಪ ಕಾರ್ಪಣ್ಯಗಳೆಂಬ ಅವಸ್ಥೆಗಳ ವರ್ಣನೆ ಪೆರುಮಾಳ್ ತಿರುಮೊಳಿಯ ಮೊದಲ ಐದು ದಶಕಗಳಲ್ಲಿ ವರ್ಣಿಸಲ್ಪಟ್ಟಿವೆ ದೇಹದಲ್ಲಿ ಭ್ರಮೆ ಮಾನಿನಿಯರ ಸಂಗದಲ್ಲಿ ಮೋಹ ಅಶನಾಚ್ಛಾದನಗಳಲ್ಲಿ ಆಸೆ —ಇಂತಹ ಗುಣಗಳುಳ್ಳವರ ಸಂಗ ಎನಗೆ ಬೇಡ ನಶ್ವರವಾದ ಇಂದ್ರಿಯ ಭೋಗಗಳಲ್ಲಿ ಅನುರಾಗವುಳ್ಳವರನ್ನು ನಾನು ಹುಚ್ಚರೆಂದು ಕಾಣುತೇನೆ ಅವರಿಗೆ ನಾನು ಉನ್ಮಾದಿ

ಪೇಯ ರೇ ಎನಕ್ಕು ಯಶಾವರುಮ್ ಯಾನು ಮೋಲ್
ಪೇಯನೇ ಎವರ್ಕ್ಕುಮ್ ಇದು ಪೇಶಿನೆನ್
ಆಯನೇ ಅರಙ್ಗಾ ಎನ್ರೈಳೈಕ್ಕಿನ್ರೇನ್
ಪೇಯನಾಯೊಳಿನ್ರೇನ್ ಎಮ್ಪಿರಾನ್ ಕ್ಕೇ—ಎಂದಿದ್ದಾರೆ

ಆರನೆಯ ದಶಕದಲ್ಲಿ ನಾಯಂಕಿಯು ನಾಯಕನ ದ ಶ್ರೀಕೃಷ್ಣನ ಕಾತರದಿಂದ ನಿರೀಕ್ಷಿಸುವ ನಾಯಕೀ—ನಾಯಕ ಭಾವವನ್ನು ಕಾಣುತ್ತೇವೆ ಆದರೆ ಅದಕ್ಕಿಂತಲೂ ವಿ ಗಿಲಾದ ದು ವಾತ್ಸಲ್ಯಭಾವ—ತಾಯಿ–ಮಗುವಿನ ಸಂಬಂಧ ಸೂಚಕ ಪ್ರಲಾಪಗಳು ಮುಕುಂದಮಾಲಾದಲ್ಲಿ ಕೃಷ್ಣನಿಗೆ ಪ್ರಾಧಾನ್ಯ ಆದರೆ ಪೆರು

ಮಾಳ್ ತಿರುಮೊಳಿ ಯಲ್ಲಿ ಶ್ರೀರಾಮನಿಗೆ ವಿಶೇಷ ಸ್ಥಾನ ಇಲ್ಲಿ ದೇವರು ಮಗು
ವಾಗಿದ್ದಾನೆ

ಏಳು–ಎಂಟನೆಯ ದಶಕಗಳಲ್ಲಿ ಈ ಚಿತ್ರಣವಿದೆ ರಾಮಕಥಾ ನಿರೂಪಣೆಯು
ಮೂರು ದಶಕಗಳಲ್ಲಿ ಮೊದಲ ದಶಕದಲ್ಲಿ ತೊಟ್ಟಿಲು ತೂಗುವ ಜೋಗುಳದ ಹಾಡು
ಗಳು ದೇವಕಿಗಿಂತಲೂ ಕೌಸಲ್ಯೆ ಅದೃಷ್ಟಶಾಲಿ ಯಾವ ಅಡೆತಡೆಗಳಿಲ್ಲದೆ ಮಗ
ನಾದ ರಾಮಚಂದ್ರನ ಬಾಲ್ಯದ ಮುದ್ದು ಮಾತುಗಳ ಬಾಲಲೀಲೆಗಳ ಅನುಭವಸಾಗರ
ದಲ್ಲಿ ಮುಳುಗಿದವಳು ಆದರೆ ಆಕೆ ಜೋಗುಳದಲ್ಲಿ ನೆನೆಯುವುದು ದಂಡಕಾರಣ್ಯ
ದಲ್ಲಿ ಲಂಕೆಯಲ್ಲಿ ತೋರಿದ ರಾಮನ ಅಸಾಧಾರಣ ಸಾಧನೆಗಳನ್ನು ಅವುಗಳ ಬಗೆ
ಆಕೆಯಲ್ಲಿ ಹೆಮ್ಮೆ ಇದ್ದರೂ ಆತನು ರಾಜ್ಯ ತೊರೆದು ದೂರವಿದ್ದಾಗ ಆತನೊಡನೆ
ತಾನೂ ಇರಲಾಗಲಿಲ್ಲವೆಂಬ ವೇದನೆಯ ಛಾಯೆಯನ್ನು ಇಲ್ಲಿ ಕಾಣುತ್ತೇವೆ

ಮನ್ನು ಪುಹಳ್ ಕೋಸಲೈದನ್ ಮಣಿವಯಿಱುವಾಯ್ತ್ತವನೇ
ತೆನ್ನಿಲಙ್ಕೈಕ್ಕೋನ್ ಮುಡಿಹಳ್ ಶಿನ್ದುವಿತ್ತಾಯ್ ಶೆಮ್ಬೊನ್ ಶೇರ್
ಕನ್ನಿನನ್ಮಾಮದಿಳ್ ಪುಡೈಶೂೞ್ ಕಣಪುರತ್ತೆನ್ ಕರುಮಣಿಯೇ
ಎನ್ನುಡೈಯ ಇನ್ನಮುದೇ ಇರಾಘವನೇ ತಾಲೇಲೋ

x x x x

ಮಲೈಯದನಾಲಣೈಕಟ್ಟಿ ಮದಿಳಿಲಙ್ಗೈಯಳಿತ್ತವನೇ
ಅಲೈಕ್ಕಡಲೈಕ್ಕಡೈನ್ದು ಅಮರರ್ಕು ಅಮುದರುಳಿಚ್ಚೆಯ್ದವನೇ
ಕಲೈವಲವರ್ ತಾಮ್ ವಾೞುಮ್ ಕಣಪುರತ್ತೆನ್ ಕರುಮಣಿಯೇ
ಶಿಲೈವಲವಾ ಶೇವಹನೇ ಶೀರಾಘವಾ ತಾಲೇಲೋ

ಒಂಬತ್ತನೆಯ ದಶಕದಲ್ಲಿ ತಂದೆ—ಪುತ್ರರ ವಾತ್ಸಲ್ಯ ತಾನೇ ದಶರಥನೆಂದು
ಭಾವಿಸಿ ಕೈಕೇಯಿಯ ಮಾತಿಗೆ ಮರುಳಾಗಿ ಮಗನನ್ನು ತಾನೇ ಕಾಡಿಗಟ್ಟಿದುದನ್ನು
ನೆನೆದು ದುಃಖಿಸಿದ್ದಾರೆ ಆದರೆ ಮಗನಾದರೂ ಎಂತಹವನು ! ಒಂದು ಕ್ಷಣವೂ
ಮನಃಕ್ಷೋಭೆಗೊಳಗಾಗದೆ ರಾಜದುಕೂಲಗಳನ್ನು ಕಳಚಿ ನಾರುಮಡಿಯನ್ನುಟ್ಟು ಎಲ್ಲ
ವನ್ನೂ ತ್ಯಜಿಸಿ ಪತ್ನಿ ಮತ್ತು ಅನುಜರೊಡಗೂಡಿ ಹಿಂದಿರುಗದೆ ಕಾಡಿಗೆ
ಹೊರಟು ಹೋದನಲ್ಲಾ ! ನಿನಗಾಗಿ ನಾನು ಏನು ಮಾಡಲಿ ರಾಮಚಂದ್ರಾ !
ಮನುಕುಲವ ಶೋಕ ಇದು ಪಾಪದ ಪ್ರಜ್ಞೆ ದಶರಥನನ್ನು ಎಚ್ಚರಿಸಿದೆ ಮಾರ್ಪಡಿ
ಸಲಾಗದ ದೈವಸಂಕಲ್ಪದ ಮುಂದೆ ಮಾನವನ ದುರ್ಬಲ ಸತ್ವಹೀನ ಸಂಪೂರ್ಣ
ಅಸಹಾಯಕ ಮನೋಭಾವ—ಅಕಿಂಚನತ್ವ ಕಾರ್ಪಣ್ಯ—ಇಲ್ಲಿ ಎದ್ದು ಕಾಣುತ್ತದೆ
ತಾನು ಪಾಪಿ ಕೈಕೇಯಿ ತನಗಿಂತಲೂ ಪಾಪಿ ! ಮುನ್ನೆಚ್ಚರಿಕೆ ಇಲ್ಲದೆ ತಾನು ಅಸ
ಹಾಯಕನಾಗಿ ಕೊಟ್ಟಮಾತ ಇಷ್ಟಕ್ಕೆಲ್ಲ ಕಾರಣ ತನಗಿನ್ನು ಈ ಬಾಳು ಅಸಹನೀಯ

ಎಂದು ಭಾವಿಸಿದ ದಶರಥ ಸಾವನ್ನು ಆಹ್ವಾನಿಸುತ್ತಾನೆ. ಈ ಪಾಶುರಗಳನ್ನು ನೋಡಿ :

ವನ್‌ತಾಳಿನ್‌ಣೈವಣಙ್ಗವೞನಹರಮ್ ತೊೞುದೇತ್ತ ಮನ್ನನಾವಾನ್
ನಿರ್‌ಪ್ಪಾಯ್ಯ್ ಅರಿಯಣೈ ಮೇಲಿರುನ್ದಾಯೈ ನೆಡುಙ್ಗಾನಮ್
ಪಡರಪ್ಪೋಹು

ಎನ್ಱಾಳ್ ಎಮ್ಮಿ ರಾಮಾವೋ ಉನ್ನೈಪ್ಪಯನ್ದ ಕೈಕೇಶಿ ದನ್ ಶೊಱ್‌ಕೇಟ್ಟು
ನನ್ನಾಹ ನಾನಿಲ್ಲತ್ತೈಯಾಳ್ವಿತ್ತೇನ್ ಉನ್ನೈ ನಾನೇ
ಪೆವ್ವಾಯೆನ್ ವೆವ್ವುರೈಕ್ಕೇಟ್ಟು ಇರುನಿಲತ್ತೈ ವೇಣ್ಡಾದೇ ವಿರೈನ್ದುವೆನ್ಱಿ
ಮೈವಾಯ ಕಳಿಱೊಡಿನ್ದು ತೇರೊೞಿನ್ದು ಮಾವೊೞಿನ್ದು ವನಮೇ ಮೇವಿ
ನೆಯ್ ವಾಯಮೇಲ್ ನಡಙ್ಗಳ್ ನೇರಿಟೈಯುಮ್ ಇಳಙ್ಗೋವುಮ್
ಪಿನ್ಪುರಪ್ಪೋಹ

ಏವ್ವಾಱು ನಡನ್ದನೈ ಎಮ್ಮಿ ರಾಮಾವೋ ಎಮ್ಬೆರುಮಾನ್ ಎನ್ ಶೆಯ್
ಹೇನೇ

.......................... .. ..

ಪೊರುನ್ದಾರ್ ಕೈವೇಲ್ ನುದಿಪೋಲ್ ಪರಲ್‌ಪಾಯ ಮೆಲ್ಲಡಿಕಳ್ ಕುರುದಿ
ಶೋರ

ವಿರುಮ್ಬಾದಕಾದ ಕಾನ್ ವಿರುಮ್ಬಿ ಮೆಯಿಲುಱೈಪ್ಪ ವೆಮ್ಬಶಿ ನೋಯ್
ಕೂರ ಇನ್ನು

ಪೆರುಮ್ಬಾವಿಯೇನ್ ಮಹನೇ ಪೋಹಿನ್‌ರಾಯ್ ಕೇಕಯರ್ ಕೋನ್
ಮಹಳಾಯ್‌ಪ್ಪೆತ್ತ

ಅರುಮ್ಬಾವಿ ಶೊಱ್‌ಕೇಟ್ಟ ಅರುವಿನೈಯೇನ್ ಎನ್ ಶೆಯ್‌ಹೇನ್
ಅನೋಯಹಾನೇ

........................ .......................... ....

ತೇನಹುಮಾಮಲರ್ಕ್ಕೂನ್ದಲ್ ಕೌಸಲ್ಯೆಯುಮ್ ಸುಮಿತ್ತಿರೈಯುಮ್ ಶಿನ್ದೈ
ನೋವ

ಕೂನುರುವಿನ್ ಕೊಡುನ್ದೊೞಿತ್ತೈ ಶೊಱ್‌ಕೇಟ್ಟ ಕೊಡಿಯವಳ್ ತನ್
ಶೊಱ್‌ಕೊಣ್ಡು ಇನ್ನು

ಕಾನಹಮೇ ಮಿಮಿರುಮ್ಬಿ ನೀ ತುೞನ್ದವಳನಹರ್ತ್ತೊತ್ತುಱನ್ದು ನಾನುಮ್
ವಾನಹಮೇ ಮಿಹಮಿದುಮ್ಬಿ ಪೋಹಿನ್ಱೇನ್ ಮನುಕುಲತ್ತಾರ್ ತಙ್ಗಳ್
ಕೋವೇ

ವೆಂಕಟಾಚಲಪತಿಯನ್ನು ಕುರಿತ ಪಾಶುರದಲ್ಲಿ ಇವರ ದೈವಪ್ರೇಮ ಅಪೂರ್ವವಾದ

ರೂಪವನಂ ತಾಳಿದೆ ನಿರಂತರವಾಗಿ ಆತನ ಸಮೀಪದಲ್ಲಿರಲು ಆತನ ಪವಳತುಟಿಗಳನ್ನು ವೀಕ್ಷಿಸುತ್ತಿರಲು ತಾನು ಜಡವಸ್ತುವಾಗಿದ್ದರೂ ಸರಿಯೇ ಪುಷ್ಪವೃಕ್ಷವಿಹಾನು ಪೊದೆ ನದಿ ಕೊನೆಗೆ ಆ ಪವಿತ್ರವಾದ ಬೆಟ್ಟದಲ್ಲಿ ದೇವನ ಗರ್ಭಗೃಹದಲ್ಲಿ ಹೊಸ್ತಿಲಾಗಿದ್ದರೂ ಸರಿಯೆ ಎಂಬ ಭಾವನೆ ಆತರು ಪಾಶುರಗಳಲ್ಲಿ ಸ್ಫುರಿಸಿದೆ

ಶೆಡಿಯಾಯಿ ವಲ್ವಿನೈಹಳ್ ತೀರ್ಕ್ಕುಮ್ ತಿರುಮಾಲೇ
ನೆಡಿಯಾನೇ ವೇಙ್ಗಡವಾ ನಿನ್ ಕೋಯಿಲಿನ್ವಾಶಲ್
ಅಡಿಯಾರುಮ್ ವಾನವರುಮ್ ಅರಮ್ಬೈಯ ರುಮ್ ಕಿಡನ್ದು
ಯಙ್ಗುವಾ

ಪಡಿಯಾಯ್ ಕಿಡನ್ದು ಉನ್ ಪವಳೆವ ಯ್ ಕ ಣ್ಬೆನೆ

ಇವರ ಮುಕುಂದಮಲಾದಲ್ಲಿ ಶ್ರೀಕೃಷ್ಣನಿಗೆ ಪ್ರಾಶಸ್ತ್ಯ

ತಿರುಚಿನಾಪಳ್ಳಿಯ ಸಮೀಪದ ಉರೈಯೂರ್ ಗ್ರಾಮಸ್ಥರಾದ ತಿರುಪ್ಪಾಣಿಗಳು ಶ್ರೀರಂಗದ ರಂಗನಾಥನ ಭಕ್ತರು ದೈವದತ್ತವಾದ ವಾದ್ಯದ ನೆರವಿನಿಂದ ಆ ದೇವರ ಸ್ತುತಿಗಳನ್ನು ಸುಶ್ರಾವ್ಯವಾಗಿ ಹಾಡಿ ತನ್ಮೂಲಕ ಸೇವೆ ಸಲ್ಲಿಸುತ್ತಿದ್ದರು. ಆದರೆ ಪಂಚಮ ಕುಲದವರೆಂಬ ಕಾರಣದಿಂದ ಅವರಿಗೆ ದೆ ವರ ಅರ್ಚನಾ ಮೂರ್ತಿಯನು ಕಣ್ಣಾರೆ ಕಾಣ ವ ಭಾಗ್ಯವಿರಲಿಲ್ಲ ಕಾವೇರಿಯ ದಕ್ಷಿಣ ತೀರದಲ್ಲಿ ದೇವಾಲಯಕ್ಕಭಿಮುಖವಾಗಿ ಗುಡಿಸಿಲೊಂದನು ನಿರ್ಮಿಸಿಕೊಂಡು ಅಲ್ಲಿ ವಾಸಿಸುತ್ತ ದೇವಗಾನದಲ್ಲಿ ಕಾಲ ಕಳೆಯುತ್ತಿದ್ದರ ಭಕ್ತಿಪರವಶವಾದ ಇವರ ಸಂಗೀತ ಎಲ್ಲರನ್ನೂ ಆಕರ್ಷಿಸುತ್ತಿತ್ತು. ದೇವಾಲಯದ ಕೈಂಕರ್ಯಪರರಲ್ಲೊಬ್ಬರಾದ ಲೋಕಸಾರಂಗ ಮುನಿಗಳು ದಾರಿಗಡ್ಡವಾಗಿ ನಿಂತು ಸಂಗೀತದಲ್ಲಿ ತನ್ಮಯರಾಗಿದ್ದ ತಿರುಪಾಣಿಗಳನ್ನು ದೂರ ಸರಿಯುವಂತೆ ಎಚ್ಚರಿಸಿ ಕಲ್ಲೊಂದನ್ನು ಎಸೆದರು ನೆತ್ತಿಯಿಂದ ಬಾಹ್ಯ ಪ್ರಪಂಚಕ್ಕೆ ಇಳಿದ ತಿರುಪ್ಪಾಣಿ ಅಪಚಾರವಾಯಿತೆಂದು ದೂರ ಸರಿದರು. ಮುನಿಗಳು ದೇವಾಲಯ ಕ್ಕೆ ಬಂದ ಗ ರಂಗನಾಥನ ಹಣೆಯ ಗಾಯವನ್ನು ಕ ಡರು ತಾನು ತಿರಪ್ಪಾಣಿಗಳನ್ನು ದಂಡಿ ದುದು ನೆನಪಿಗೆ ಬಂತು ಆ ಪೆಟ್ಟು ದೇವರ ಹಣೆಗೇ ತಾಕಿತ್ತು ! ತನ್ನಿಂದಾದ ಅಪಚಾರಕ್ಕೆ ಪ್ರಾಯಶ್ಚಿತ್ತವಾಗಿ ಆ ಭಕ್ತನನ್ನು ದೇವಾಲಯಕ್ಕೆ ತನ ಸನ್ನಿಧಿಗೆ ಕರೆತರಬೇಕೆಂದು ದೇವರು ಆಜ್ಞಾಪಿಸಿದರು ರಂಗನಾಥನ ಕ್ಷೇತ್ರದಲ್ಲಿ ಕಾಲಿಡಲು ತಾವು ಯೋಗ್ಯರಲ್ಲವೆಂದು ಆತ ಪಾಣಿಸಿದಾಗ ಮುನಿಗಳು ಆತನನ್ನು ಹೆಗಲ ಮೇಲೆ ಹೊತ್ತು ನೇರವಾಗಿ ರಂಗನಾಥನ ಸನ್ನಿಧಿಗೆ ಕರೆತಂದರು ಹೀಗೆ ಆತ ಮುನಿವಾಹನನಾದ ಅಲ್ಲಿ ತನ್ನನು ಕೆಳಗೆ ಇಳಿಸಿದಾಗ ಕಣ್ತೆಗೆದ ಆಳ್ವಾರರು ಕಂಡದ್ದು ರಂಗನಾಥನ ದಿವ್ಯ ಮಂಗಳ ವಿಗ್ರಹವನ್ನ ಸಾಂಪ್ರದಾಯಿಕವಾಗಿ ಎನ್ನುವಂತೆ ಆ ದೇವದೇವನ ಪಾದಾದಿಕೇಶಪರ್ಯಂತ ಹತ್ತು ಪಾಶುರಗಳನು ಆಳ್ವಾರರು ಹಾಡಿ ಆ ದೇವನಲ್ಲೇ ಲೀನವಾದರು ಇವರ ಪಾಶುರಗಳು ಅಮಲನಾದಿಪಿರಾನ್

ಎಂದು ಪ್ರಾರಂಭವಾಗುವುದರಿಂದ ಅದೇ ಹೆಸರು ಆತರು ಹಾಡಿದ ಹತ್ತು ಪಾಶುರ ಗಳ ಪ್ರಬಂಧಕ್ಕೂ ಬಂದಿದೆ ಈ ದೈವವನು ಕಂಡ ಕಣ್ಣು ಗಳು ಅನ್ಯ ದೈವಗಳನು ಕಾಣವು

> ಕೊಣ್ಡಲ್‌ವಣ್ಣನೈ ಕೋವಲನಾಯು ವೆಣ್ಣೈ
> ಯುಣ್ಡವಾಯನ್ ಎನು ಳ್ಳಮ ಕವರ್ನ್ದಾನೈ
> ಅಣ್ಡರ್‌ಕೋನ ಅಣಿಯರಂಗ ನ್ ಎನ ಮುದಿನೇ
> ಕಣ್ಡ ಕಣ್‌ಗಳ ಮತ್ತೊನ್ರಿನೈ ಕ್ಕಾಣಾವೇ

ಈದೇವ ಅಮಲ ಆದಿಪರಾನ ವಿಮಲ ನಿಮಲ ನಿರ್ಮಲ ನೀತಿವಾನ್ ಎಂದು ಮೊದಲ ಪಾಶ ರದಲ್ಲಿ ಹೇಳಿದೆ ದೆ ವನ ಪಾದಕಮಲಗಳು ಈತನ ಕಣ್ಣೊಳಗೆ ಹೊಕ್ಕವು ದೆ ವರು ನಿಸ್ವಾರ್ಥಿ ನನ ನು ನನ್ನ ಕೈಂಕರ್ಯವನು ತನಗೆ ಮಾತ್ರ ದಕ್ಕಿಸಿಕೊಳ ದೆ ತನ್ನ ದಾಸರೆಲ್ಲರಿಗೂ ನಾನು ಆಳಾಗಿರಲಿ ಎಂದು ನನ್ನನು ಗುರುತಿಸಿದ ವಿವ ಲ ಆತ ಆತ ತಿರುವೇಂಗಡದ ಅಧಿಪತಿಯೂ ಹೌದು ಅಲ್ಲಿನ ತೋಪುಗಳು ಸ ಗಂಧಪೂರಿತವಾದವುಗಳು ಆತ ಎಲ್ಲರಿಗೂ—ಭಕ್ತರೆಲ್ಲರಿಗೂ— ಸುಲಭ ಲಭ್ಯ ಈ ಮೊದಲ ಪಾಶುರ ಹೀಗಿದೆ

> ಅಮಲನಾದಿ ಪಿರಾನ್ ಅಡಿಯಾರ್ಕ್ಕೆನ್ನೆ ಆಟ್ಪಡುತ್ತ
> ವಿಮಲನ ವಿಣ್ಣವರ್ ಕೊ ನ್ ವಿರೈಯಾರ್ ಪೊಜಿ ಲ ವೇಙಡವನ್
> ನಿಮಲನ ನಿಮ್ಮಲನ ನೀಡಿವಾನವನ್ ನೀಣ್ಮದಿಳ್ ಅರಙ್ಗತಮ್ಮಾನ್ ತಿರು
> ಕ್ಕಮ ಲ ಪಾದಮ ವನ್ದು ಎನ ಕಣ್ಣಿನ ಳ ಪೊಕ್ಕಿನ ದೇ

ಅನುಭಾವಿಗಳಾದ ಆಳ್ವಾರರುಗಳಲ್ಲಿ ಅತ್ಯಂತ ಭಾವನಾಶೀಲನಾದನು ರಂಜಕ ನಾದವನು ತಿರುವ ಙ್ಗೈ ಈತ " ತನಾಗಿ ಪರಿವರ್ತಿನಾದ ಪಾಪಾತ್ಮ ಕಳ್ಳರ ಕುಲದ ಈತನು ವೃತ್ತಿಶಃ ದರೋಡೆಕಾರ ತನ ಶೌರ್ಯದಿಂದ ಸೇನಾನಾಯಕನೆನಿಸಿದ ಈತನಿಗೆ ನಂತರ ಪರಕ ಲ ಕಲಿಧ್ವಂಸ ಎಂಬ ಬಿರುದುಗಳೂ ಬಂದುವು ಕುಮುಂದ ವಲ್ಲಿ ಎಂಬ ಸುಂದರಿಯನ್ನು ಪ್ರೇಮಿ ಸಿ ಆಕೆ ಹಾಕಿದ ನಿಯಮದಂತೆ ವಿಷ್ಣು ಭಕ್ತನಾಗಿ ಪ್ರತಿದಿನ 10008 ರಂತೆ ಒ ದು ವರ್ಷಕಾಲ ಭಕ್ತರಿಗೆ ಆಹಾರದಾನ ಮಾಡುವ ಕಟ್ಟು ಪಾಡಿಗೆ ಬದ್ಧನ ಗಿ ತನ್ನ ಒಡಂ ನಿಗೆ ಕೊಡಬೇಕಾದ ಕಪ್ಪ ಕಾಣಿಕೆಗಳನ್ನು ಸಲ್ಲಿಸ ದಾದ ಸೆರೆಮನೆ ಸೇರಿದಾಗ ಅದ್ಭುತ ರೀತಿಯಲ್ಲಿ ನಿಧಿಯೊಂದನ್ನು ಪಡೆದು ಅದನ್ನು ಕಪ್ಪ ಕಾಣಿಕೆಗಳೆಂದು ಸಲ್ಲಿಸಿ ಬಂಧವ ುಕ್ತನಾದರೂ ತನ್ನ ನಿಯಮದ ಪಾಲನೆಗಾಗಿ ದರೋಡೆಗೆ ಇಳಿದ ಇವನನು ತನ್ನ ಕಡೆಗೆ ಸೆಳೆದುಕೊಳ್ಳಲು ನಿರ್ಧರಿಸಿದ ಭಗವಂತ ಸ್ವತಃ ಮದುಮಗಿಯ ದಿಬ್ಬಣವೊಂದರ ನೇತಾರನಾಗಿ ಇವನಿ ದ ದರೊ ಡೆಗೊಳಪಟ್ಟು ತನ್ನ ನಿಧಿಯನ್ನೆಲ್ಲಾ ಒಂದು ಗಂಟಿನಲ್ಲಿ ಈತನಿಗಿತ್ತ ಆದರೆ ಅದನ್ನು ಹೊರುವ

ದಂತಿರಲಿ ಅಲಂಗಾಡಿನಂತವುದೂ ಅವನಿಂದಾಗಲಿಲ್ಲ ಆ ಮಂದುವಣಿಗೆ ಮಂತ್ರವಾದಿ ಎಂದು ಭಾವಿಸಿ ಅವನು ಹಾಕಿರಬಹುದಾದ ಮಂತ್ರವನು ತನಗೂ ಹೇಳಿಕೊಡ ಬೇಕೆಂದ ಅದಕ್ಕೆ ಒಪ್ಪಿದ ತಿರುಮಂಗೈಯನ್ನು ಹತ್ತಿರ ಬಂದು ತಲೆ ಬಾಗುವಂತೆ ಹೇಳಿದ ತಲೆಬಾಗಲು ತಿರಸ್ಕರಿದ ಕಳ್ಳ ಕತ್ತಿ ಹಿರಿದ ಆಗ ಮಂದುವಣಿಗನ ರೂಪ ದಲ್ಲಿದ್ದ ದೇವನೇ ಅವನಿಗೆ ಅಷಾಕ್ಷರಿಯನ್ನು ಉಪದೇಶಿಸಿದ ಆ ಕೂಡಲೇ ಗಂಟು ಹಗುರವಾಗಿ ಎದುರಿಗೆ ಲಕ್ಷ್ಮೀಸಮೇತ ನಾರಾಯಣನು ಗರುಡವಾಹನನಾಗಿದ್ದಂತೆ ಕಂಡ ಮನಸ್ಸು ಪರಿವರ್ತನೆ ಹೊಂದಿತು ಆಗ ಅವನಲ್ಲಾದ ಅನುಭವದ ಸುಖದ ಮುಂದೆ ಪ್ರಾಪಂಚಿಕ ಭೋಗಗಳು ತೃಣ ಸಮಾನವೆನಿಸಿದವು ಭಕ್ತಿ ಪಾರವಶ್ಯದಿಂದ ಈ ಆಳ್ವಾರ್ ಹಾಡ ತೊಡಗಿದ

ಈತನ ಪ್ರಬಂಧಗಳು ಆರು ಪೆರಿಯ ತಿರುಮೊಳಿ ತಿರುಕ್ಕುರುನ್ದಾಂಡಗಮ್ ತಿರುನೆಡುನ್ದಾಂಡಗಮ್ ತಿರುವೆಳುಕ್ಕೂಱ್ಱಿರುಕ್ಕೈ ಶಿರಿಯ ತಿರುಮಡಲ್ ಮತ್ತು ಪೆರಿಯ ತಿರುಮಡಲ್ ಮಡಲ್ ಎಂಬುದು ತಮಿಳಿನ ಅಕವಲ್ ಪದ್ಯದ ಒಂದು ಪ್ರಭೇದ ಪ್ರೇಮಗೀತೆ ಎನಿಸುವಂತಹುದು ಉನ್ಮತ್ತನಾದ ಪ್ರೇಮಿ ತನ್ನ ಪ್ರೇಯಸಿ ಒಲಿಯದಿದ್ದಾಗ ಸಾರ್ವಜನಿಕರ ಮುಂದೆ ತನ್ನ ಪ್ರೇಮವನ್ನು ಸಾರಿ ಅದಕ್ಕಾಗಿ ಜೀವತ್ಯಾಗ ಮಾಡಿಕೊಳ್ಳುವ ವಿಧಾನಕ್ಕೆ ಮಡಲ್ ಎಂದು ಹೆಸರು ತಾಳಿ ಎಲೆಯ ಗರಿಗಳಿಂದ ಕುದುರೆಯಾಕಾರವೊಂದನ್ನು ಹೆಣೆದು ಅದರ ಮೇಲೆ ಈ ಪ್ರೇಮಿ ಕೂತಿದ್ದು ಇವನನ್ನು ಬೀದಿಗಳಲ್ಲಿ ರಥದಂತೆ ಎಳೆಯುತ್ತಾ ಹೋಗುತ್ತಾರೆ ಹರಿತ ವಾದ ಗರಿಗಳು ಈತನನ್ನು ಕೊರೆಯುತ್ತಾ ಹೋಗುತ್ತವೆ ಇದನ್ನು ಕಂಡ ಜನರಲ್ಲಿ ಈತನ ಬಗೆಗೆ ಜಿಗುಪ್ಸೆ ಅಥವಾ ಅನುಕಂಪದ ಭಾವ ಮೂಡುತ್ತದೆ ಅದುವರೆವಿಗೂ ಇವನ ಪ್ರೇಮಕ್ಕೆ ಪ್ರತಿಸ್ಪಂದಿಸದಿದ್ದ ಸ್ತ್ರೀ ಈಗ ಈತನ ಭಾವನೆಗಳನ್ನು ಅರಿಯ ಲೇ ಬೇಕಾಗುತ್ತದೆ ಸ್ವೀಕರಿಸಿದರೆ ಆತ ಉಳಿಯುತ್ತಾನೆ ನಿರಾಕರಿಸಿದರೆ ಸಾಯುತ್ತಾನೆ ಒಬ್ಬನ ಅಂತರಂಗಿಕ ವ್ಯಕ್ತಗೊಳಿಸಲಾಗದ ಭಾವನೆಗಳನ್ನು ಪ್ರಕಟಿಸಲು ಇದು ಉತ್ತಮವಾದ ಮಾರ್ಗವೆನ ಲಾಗದಿದ್ದರೂ ಈ ಏಕಮುಖಪ್ರೇಮದಲ್ಲಿ ಗಣ್ಯವಾದ ಅಂಶಗಳೂ ಇವೆ ಪ್ರೇಮ ಹೇಗೂ ಕುರುಡು ಅಲ್ಲಿ ತರ್ಕವಾಗಲೀ ಸಭ್ಯತೆ ಯಾಗಲೀ ಔಚಿತ್ಯವಾಗಲೀ ಇಲ್ಲವಲ್ಲ ಮಡಲ್‌ನಲ್ಲಿರುವುದು ಬೆದರಿಕೆಯೆ ಎಂದರೆ ಹೌದು ಎನ್ನಬೇಕಾಗುತ್ತದೆ ಅನುಭಾವ ಸಾಹಿತ್ಯದಲ್ಲಿ ದೇವರನ್ನು ವಿಷಯಶಾಶ್ವತ ಸಾಮ್ರಾಜ್ಯದಿಂದ ಬಿಕ್ಕನು ಅರ್ಪಿಸುವ ಕಾಮಪುಷ್ಪವನ್ನು ಸ್ವೀಕರಿಸಬೇಕೆಂಬ ಪ್ರಾರ್ಥನೆ ಇದೆ ಇನ್ನೊಂದರ್ಥದಲ್ಲಿ ಇದನ್ನು ಗಾಂಧೀಜಿ ಚಲಾವಣೆಗೆ ತಂದ ಸತ್ಯಾಗ್ರಹ ಎಂಬ ಮಾತಿಗೆ ಸಂವಾದಿ ಎಂದು ಭಾವಿಸಬಹುದು ತಿರುಮಂಗೈ ಆಳ್ವಾರರು ಕುಮುದವಲ್ಲಿಯನ್ನು ಪ್ರೇಮಿಸಿ ಮದುವೆಯಾದರು ಅದು ಗಾಢವಾದ ಪ್ರೇಮ ಭವದನಂತರ ಆ ಪ್ರೇಮ ದೇವರತ್ತ ತಿರುಗಿತು ಸಾಮಾನ್ಯವಾಗಿ ಈ ಮಡಲ್ ಗಳಲ್ಲಿ ಪುರುಷನು ಪ್ರೇಮಿಯಾಗಿ ಕಾಣಿಸಿಕೊಂಡು ಪ್ರೇಯಸಿಗಾಗಿ ಹಂಬಲಿಸುತ್ತಾನೆ

ತಿರುಮಂಗೈ ಆಳ್ವಾರರ ಮಡಲ್‌ಗಳಲಿ ಭಕ್ತನು ಪ್ರೇಯಸಿಯಾಗಿ ಸ್ತ್ರೀಯಾಗಿ ನಾರಾಯಣನೆಂಬ ಮಹಾಪುರುಷನಿಗೆ ಹಂಬಲಿಸುವುದನು ಕಾಣುತ್ತೇವೆ ಇದೊಂದು ವೈಶಿಷ್ಟ್ಯ ಇದನು ಶರಣಾಗತಿ ತತ್ತ್ವಗಳಲ್ಲೊಂದಾದ ಕಾರ್ಪಣ್ಯ ಭಾವಕ್ಕೆ ಹೋಲಿಸಬಹುದು

ಶಿರಿಯ (ಚಿಕ್ಕ) ತಿರುಮಡಲ್‌ನಲ್ಲಿ 155 ಸಾಲುಗಳ ಪದ್ಯವಿದ್ದರೆ ಪೆರಿಯ (ದೊಡ್ಡ) ಮಡಲ್‌ನಲಿ 297 ಸಾಲುಗಳ ಪದ್ಯಗಳಿರುತ್ತವೆ ವೇದಗಳು ಸಾರುವ ನಾಲ್ಕು ಪುರುಷಾರ್ಥಗಳಲ್ಲಿ ಮೋಕ್ಷವೆಂಬುದು ದೇಹ ತ್ಯಜಿಸಿದ ನಂತರ ಸಿಗುತ್ತದೆನುತ್ತಾರೆ ಈ ಮೋಕ್ಷ ಪಡೆದವನು ಯಾರು ಹೇಗೆ ಪಡೆದರು ಎಂಬುದು ತಿಳಿಯದು ಆದರೆ ಹಾಗೆ ಸೂರ್ಯಮಂಡಲವೆಂಬ ಕಿರುಬಾಗಿಲನ್ನು ದಾಟಿ ಹೋದವರಾರೂ ನಮಗೆ ಅದನ್ನು ಕುರಿತ ಏನೂ ಹೇಳಲಿಲ್ಲವಲ್ಲ! ಧರ್ಮ ಎಂಬುದು ಯಜ್ಞಗಳಿಂದ ಕಾಮೇಷ್ಟಿಗಳಿಂದ ಲಭಿಸಿದ ಸ್ವರ್ಗೀಯ ಆದರೆ ಬಾಳಿಕೆ ಬಾರದ ಸುಖಗಳು! ಅವುಗಳು ಲಭಿಸುವುದು ಸಹ ಪ್ರಾಣಿಬಲಿಗಳಿಂದಲೇ ಆದ್ದರಿಂದ ಧರ್ಮದಲ್ಲಿ ಕ್ರೌರ್ಯವಿದೆ ಹಾಗೆ ಗಳಿಸಿದ ಪುಣ್ಯ ವ್ಯಯಿಸಿದ ಕೂಡಲೇ ನಾವು ಮತ್ತೊಮ್ಮೆ ಈ ಪ್ರಪಂಚಕ್ಕೆ ಹಿಂದಿರುಗಬೇಕಾಗುತ್ತದೆ ಅರ್ಥವಂತೂ ಅಶಾಶ್ವತ ಆದರಿಂದ ಲಭಿಸುವುದು ಕ್ಷಣಿಕ ಸುಖ ಆದುದರಿಂದ ಕಾಮವೇ ಮನಷ್ಯ ಪ್ರಯತ್ನದ ಗುರಿಯಾಗಬೇಕು ತಾನು ಬಯಸಿದುದನ್ನು ಪಡೆಯಲು ಯತಿ ಸಂಪ್ರದರಲ್ಲಿ ಸುಖವಿದೆ ಕೃಷ್ಣನ ಕೊಳಲಿನ ಇಂಪಿಗೆ ಕರಗದವರು ಹಕ್ಕಿಗಳು ಚಿಲಿಪಿಲಿಗುಟ್ಟಿದಾಗ ತಮ್ಮ ಪ್ರೇಯಸಿಯನ್ನು ನೆನೆಯದವರು ಭೌತವಾದಿಗಳು ಪುಷ್ಪ ಪರ್ಯಂಕಗಳ ಮೇಲ ಹೊಸಹೂಗಳನ್ನು ಹರಡಿದು ಮಲಗಿದರೂ ಎಂದಿಗೂ ಪ್ರೇಮಯಾತನೆಗೊಳಗಾಗದ ಉತ್ಕೃಷ್ಟ ಸ್ತ್ರೀಯರಿರಬಹುದು ಆದರೆ ಅವರು ಸಂಪೂರ್ಣವಾದ ಅರ್ಪಣಾ ಮನೋಭಾವದಿಂದ ಪ್ರೇಮಿಸಬಲ್ಲವರಲ್ಲ ವಾಸ್ತವಿಕವಾಗಿ ಸ್ತ್ರೀತ್ವದ ಲಕ್ಷಣ ಅದ ಮಡಲಗೆ ಅರ್ಪಿಸಿಕೊಳ್ಳುವ ಸ್ತ್ರೀಯರು ವಿಶೇಷವಾಗಿ ಉತ್ತರದಲ್ಲಷ್ಟೇ ಇದ್ದಾರೆ ಆದರೆ ನಾವು ಈಗ ಆ ಪದ್ಧತಿಯನ್ನು ಅವಲಂಬಿಸುತ್ತೇವೆ ಎಂಬಿವು ಈ ತಿರುಮಡಲಿನಲ್ಲಿ ಕಾಣಿಸಿಕೊಳ್ಳುವ ಭಾವಗಳು ಇಲ್ಲಿ ಕಾಣುವುದು ಸಂಪೂರ್ಣ ಶರಣಾಗತಿ ತಿರುಕುರುಂದಾಂಡಗಮ್ ಮತ್ತು ನೆಂಡುನ್ದಾಂಡಗಮ್‌ಗಳು ದಂಡಕಗಳು ದಂಡ ಎಂದರೆ ಊರುಗೋಲು ಮಡಲ್ ಹಾಡಿದ ಆಳ್ವಾರರು ಈಗ ದೈವಪ್ರೇಮವನ್ನೇ ಊರುಗೋಲಾಗಿ ಉಪಯೋಗಿಸಿದ್ದಾರೆ "ಪುರುಷೋತ್ತಮನಾದ" ದೇವರು ಅವಲಂಬಿಸಬಹುದಾದ ಅವಶ್ಯಕವಾದ ಊರುಗೋಲಿನಂತೆ ಪ್ರೇಮ ಪಕ್ವವಾದಾಗ ದೇವನನು ಆಶ್ರಯಿಸುತ್ತದೆ ಆಗ ಎಲ್ಲವೂ ಸಾಧ್ಯ ದೇವನ ದಾಸನಾದ ನನ್ನಲ್ಲಿ ಆತ ಈಗ ನೆಲೆಸಿದ್ದಾನೆ ಆತನನ್ನು ನಾನು ಬಿಡಲಾರೆ ಹವಳದ ಕಂಭದಂತೆ ಅವನೊಂದು ನಿಧಿ ಆತನನ್ನು ನೆನೆಯುವವರೆಲ್ಲರಿಗೂ ಕ್ರಮೇಣ ಸಾಧಿತವಾಗಬಹುದಾದ ಗುರಿ ಕಂಸನನು ಕೊಂದ ಆತ ಬ್ರಹ್ಮಾಂಡಕ್ಕೇ ಅರಸ ತನ ಭಕ್ತರನೆಲ್ಲರನ್ನೂ ನೆನಪಿನಲ್ಲಿಟ್ಟಿರುವ

ಆತ ನನ ಚಿತ್ತ ಅಹಂಕಾರ ಶೂನ್ಯವಾಗಿ ನಾನು ಆತನನು ಸ್ತೋತ್ರಮಾಡಲೆಂಬ ಉದ್ದೇಶದಿಂದ ನನ ಮೇಲಿನ ಪ್ರೀತಿಯಿಂದ ನನನ್ನು ಆವರಿಸಿದ್ದಾನೆ ಬೇರಾವುದೂ ನನನು ಆಕರ್ಷಿಸುವುದಿಲ್ಲ

> ನಿದಿಯಿನೈಪ್ಪವಳತ್ತೂಣೈ ನೆಜಿಮ್ಮೆಯಾಲ್ ನಿನೈಯಮಲ್ಲಾರ್
> ಕದಿಯಿನೈ ಕಜ್ಜಮಳಕ್ಕಣ್ಣುಮಯಿನ್ ಅಣ್ಣಮಾಳ್ಗಮ
> ಮಂದಿಯಿನೈ ಮಾಲೆ ಮಾಟ್ಟಿ ಮಣಿ ಎನ್ ಮನತ್ತುಮನ್ನ
> ವಿದಿಯಿನೈ ಕಣ್ಣುಕೊಣ್ಣು ತೊಣ್ಣನೇನ್ ವಿಡಿಹಿಲೇನೇ

ತಿರುವೆಳುಕ್ಕೂಟಿ ರುಕ್ಕೈ ಕುಂಬಕೋಣದ ದೇವರಿಗೆ ಹಾಡಿದ ಶರಣಾಗತಿ ಪದ್ಯ 47 ಸಾಲುಗಳು ಆಶಿರಿಯಪ್ಪಾವೃತ್ತದಲನ ರಥಬಂಧವೆನಿಸಿದ ಈ ಪದ್ಯದಲ್ಲಿ ದೇವರ ಸೃಷ್ಟಿ ಹಾಗೂ ರಕ್ಷಕತ್ವ ಶಕ್ತಿಗಳ ವರ್ಣನೆ ಇದ್ದು ತತ್ವ ಹಿತ ಹಾಗೂ ಪುರುಷಾರ್ಥಗಳ ದಿವ್ಯ ದರ್ಶನವಿದೆ

ಈ ಆಳ್ವಾರರು ತೀರ್ಥಯಾತ್ರೆ ಕೈಕೊಂಡು ಹಲವಾರು ದಿವ್ಯ ಕ್ಷೇತ್ರಗಳನ್ನು ದರ್ಶಿಸಿ ಅವುಗಳನ್ನು ವರ್ಣಿಸಿದ್ದಾರೆ ಸಾಂಪ್ರದಾಯಿಕವಾದ 108 ದಿವ್ಯ ದೇಶಗಳಲ್ಲಿ 86 ಇವರ ವರ್ಣನೆಗೆ ಎಟುಕಿವೆ ಈ ಕ್ಷೇತ್ರಗಳು ಉತ್ತರದ ಬದರೀನಾಥದಿಂದ ದಕ್ಷಿಣದ ತಿರುಕ್ಕುರುಂಗುಡಿಯ ವರೆವಿಗೂ ಹರಡಿವೆ ಕೆಲವು ಕ್ಷೇತ್ರಗಳನ ಂತೂ ಸುದೀರ್ಘವಾಗಿ ಸ್ತೋತ್ರ ಮಾಡಿದ್ದಾರೆ ಕುಂಭಕೋಣದ ಸಮೀಪದ ನಾಚ್ಚಿಯಾರ್ ಕೋವಿಲಿನ ಹಾಗೂ ತಂಜಾವೂರು ಜಿಲ್ಲೆಯ ತಿರುಕ್ಕಣ್ಣಪುರವು ನ ವರ್ಣನೆಗೆ ನೂರು ನೂರು ಶ್ಲೋಕಗಳು ಮೀಸಲಾಗಿವೆ ಪೆರಿಯ ತಿರುಮೊ ಟಿ ಯ ಈ ಪಾಶುರಗಳಲ್ಲಿ ಮೊದಲನೆಯದರಲ್ಲಿಯೇ ನಾರಾಯಣ ಎಂಬ ಹೆಸರಿನಿಂದ ನಾನು ಉದ್ಧಾರವಾದೆ ಅದುವರೆವಿಗೂ ಸ್ತ್ರೀಯರು ಕೊಡಬಹ ದಾದ ಸುಖವನ್ನೇ ಆಶಿಸಿ ಅದರ ಹಿಂದೆ ಓಡಿದೆ ಆದರಿಂದ ಬಾಡಿ ಮನನ ರುಗಿದೆ ಎಂಬ ಶೋ ಕಪೂರಿತ ತಪ್ಪೊಪ್ಪಿಗೆ ಇದೆ ನಾನು ಕಳ್ಳ ಕೆಡುಕು ಮಾಡಿದ್ದೆನೆ ಆದರೆ ಈಗ ನನಗೆ ಅರಿವುಂಟಾಗಿದೆ ದೇವರ ಅನುಗ್ರಹ ಪಡೆದು ಹಗಲು ರಾತ್ರಿಗಳಲ್ಲಿ ನಾರಾಯಣಾ ಎಂದು ಕರೆಯುತ್ತಿರುವೆನು ಎಂದಿದ್ದಾರೆ ಶ್ರೀವೈಷ್ಣವರ ನಿತ್ಯಾನುಸಂಧಾನದ ಶ್ಲೋಕಗಳಲ್ಲಿ ಇವು ಕೆಲವು ಸೇರಿವೆ

> ವಾಡಿನೇನ್ ವಾಡಿವರುನ್ದಿನೇನ್ ಮನತ್ತಾಲ್
> ಪೆರುನ್ದುಯಿರಿಡುಮ್ಬೈಯಿಲ್ ಪಿಱನ್ದು
> ಕೂಡಿನೇನ್ ಕೂಡಿ ಯಿಳೈಯವರ್ ತಮ್ಮೋಡು
> ಅವರ ತರುಮ್ ಕಲವಿಯೇ ಕರ ದಿ

ಓಡಿನೇನ ಓಡಿ ಉಯ್ವದೋರ್ ಪೊರುಳಾಲ್
ಉಣರ್ವೆನುಂವರ್ ಶರೊವ್ವೆದವರ್ ತಿರಿನ್ದು
ನಾಡಿನೆ ನ ನಾಡಿ ನಾನ್ ಕಣ್ಡುಕೊಣ್ಡೇನ್
ನಾರಾಯಣಾವೆನ್ನುಮ ನಾಮಂವರ್

ಕಳ್ವನೆ ನಾನೇನ್ ಪಡಿಯು ಶೆಯ್ದಿರುಂಪ್ಪೆ ನ್
ಕಣ್ಡವಾ ತಿರಿತನ್ದೇನೇಲುವರ್
ತೆಳ್ಳಿಯೋ ನಾನೇನ್ ಶೆಲ್‌ಗತಿಕ್ಕಪ್ಪೆನ್ದೇನ್
ಶಿಕ್ಕೆನ ತ್ತಿರುವರುಳ್ ಪೆಟ್ರೇನ್
ಉಳ್ಳೆಲಾಮುರುಹಿ ಕ್ಕುರಲ್ ತಟುತ್ತೊಟುನೇನ್
ಉಡಮ್ಬೆಲ್ಲಾಮ್ ಕಣ್ಣನಿ ರ ಶೋರ
ನಳ್ಳಿರುಳಳವುಮ್ ಪಹರವುಮ್ ನಾನ ಅಟ್ಪಿಪ್ಪೇನ್
ನಾರ ಯಣಾವೆನು ಮ ನಾಮಂವರ್

ಶ್ರೀವಿಲ್ಲಿಪುತ್ತೂರು ರಾಮನಾಥಪುರವರ್ ಜಿಲ್ಲೆಯ ಒಂದು ಗ್ರಾಮ ಇಲ್ಲಿನ ವಟ ಪತ್ರ ಶಾಯಿ ದೇವಾಲಯದ ತೋಟದಲ್ಲಿನ ತುಳಸಿಯನ್ನು ಮಾಲೆಯಾಗಿ ಕಟ್ಟಿ ದೇವರಿಗೆ ಅರ್ಪಿಸುತ್ತಿದ್ದ ಕೈಂಕರ್ಯ ಈ ಗ್ರಾಮದ ಬ್ರಾಹ್ಮಣನಾದ ವಿಷ್ಣುಚಿತ್ತ ನದು ವಟಪತ್ರಶಾಯಿಯ ಅನನ್ಯ ಭಕ್ತನಾದ ಈತನಿಗೆ ದೇವರನು ಕಂಡಾಗಲೆಲ್ಲಾ ತಾಯಿ ಮಗುವನ್ನು ಕಾಣುವಂತಹ ವಾತ್ಸಲ್ಯಭಾವ ಉಕ್ಕುತ್ತಿತ್ತು ಈತ ಜ್ಞಾನಿ ಯಲ್ಲ ಭಕ್ತ ಸಮಕಾಲೀನ ಪಾಂಡ್ಯರ ದೊರೆ ದೇವರುಗಳ ಪಾರಮ್ಯವನ್ನು ಪ್ರತಿ ಪಾದಿಸಿ ವಾದದಲ್ಲಿ ಗೆದ್ದವರಿಗೆ ಸ್ವರ್ಣತುಂಬಿದ ಗಂಟನು ಶುಲ್ಕವಾಗಿ ನೀಡುವುದಾಗಿ ಘೋಷಿಸಿದಾಗ ಭಗವದನುಗ್ರಹದಿಂದ ಅದರಲ್ಲಿ ಭಾಗವಹಿಸಿ ವಿಜೇತನಾಗಿ ಅರಸನಿಂದ ಭಟ್ಟರ್‌ಪಿರಾನ್ (ಪಂಡಿತ ಶ್ರೇಷ್ಠ ) ಎಂಬ ಬಿರುದನ್ನು ಪಡೆದನು ತನ್ನ ತೋಟದಲ್ಲಿ ಲಭಿಸಿದ ಸ್ತ್ರೀ ಶಿಶುವೇ ಮುಂದೆ ರಂಗನಾಥನನ್ನು ಒಲಿದು ಮದುವೆಯಾದಾಗ ಆ ದೇವರಿಗೇ ಶ್ವಶುರನಾದ ವಟಪತ್ರಶಾಯಿಯಲ್ಲಿ ಇವನದು ಮಗುವಿನ ಮೇಲಿನ ಮೋಹದಂತೆ ಈ ಆಳ್ವಾರರು ಹಿರಿಯರು ಪೆರಿಯ ಆಳ್ವಾರರು ಈ ಹೆಸರು ಬರಲು ವೈಷ್ಣವಸಂಪ್ರದಾಯದಲ್ಲಿ ಒಂದು ಕಾರಣ ನೀಡಲಾಗಿದೆ ಇವರಿಗೆ ಹಿಂದಿನವರಾಗಲೀ ಇವರ ನಂತರ ಬಂದವರಾಗಲೀ ಯಾರೂ ದೇವರಿಗೆ ಮಂಗಳಾಶಾಸನ ಹಾಡಿಲ್ಲ ದೇವರ ಸಾಮ್ರಾಜ್ಯ ಪೃಥ್ವಿಯ ಮೇಲೆ ಸಾವಿರಾರು ವರ್ಷಗಳು ಬಾಳಲಿ ದೇವರಿಗೆ ಮಂಗಳವಾಗಲಿ ಎಂದು ಬಯಸುವ ಆಶೀರ್ವಚನದಂತಹ ಮಂಗಳಾಶಾಸನ ಹಾಡುವ ಎದೆಗಾರಿಕೆ ಅನ್ಯರಾರಿಗೂ ಇರಲಿಲ್ಲ ಪಾಂಡ್ಯರಾಜರು ವಿಷ್ಣುಚಿತ್ತರ ಸಾಧನೆಯಿಂದ ಸಂತೋಷಗೊಂಡು ಅವರನ್ನು ಗೌರವಿಸಿದುದೇ ಅಲ್ಲದೆ ಅವರನ್ನು

ಆನೆಯ ಮೇಲೆ ಕುಳ್ಳಿರಿಸಿ ವೈಭವದಿಂದ ಮಧುರೆಯ ಬೀದಿಗಳಲ್ಲಿ ಮೆರವಣಿಗೆ ಮಾಡಿಸಿದರು ತನ್ನ ಭಕ್ತನಿಗೆ ಸಂದ ಈ ಗೌರವವನು ಕಣ್ಣಾರೆ ಕಾಣಲು ವಿಷ್ಣು ಗರುಡಾಸೀನನಾಗಿ ಬಂದು ವಿಷ್ಣುಚಿತ್ತನಿಗೆ ದರ್ಶನನೀಡಿದ ತನ್ನ ಸ್ವಾಮಿಯ ಈ ಔದಾರ್ಯ ಪಾರವಶ್ಯವನ್ನು ಕಂಡ ವಿಷ್ಣುಚಿತ್ತ ಆತನಿಗೆ ದೃಷ್ಟಿ (ಕಣ್ಣೆಚ್ಚಿಲ್) ತಾಗಬಹುದೆಂದು ಹೆದರಿ ಆತನಿಗೆ ಒಳಿತಾಗಲಿ ಎಂದು ಮಂಗಳಾಶಾಸನ ಹಾಡಿದ ಅಲ್ಲದೆ ಶ್ರೀರಂಗನಾಥನಿಗೆ ಆಂಡಾಳ್ ಮುಡಿದ ಮಾಲೆಯನ್ನು ಅರ್ಪಿಸುವುದೂ ಸಣ್ಣ ವಿಷಯವಲ್ಲ ಇದರಿಂದ ಇವರು ಮಹತ್ತರರಾದರ — ಪೆರಿಯಾಳ್ವಾರ್ ಎನಿಸಿದರು

ಇವರು ಹಾಡಿದ ತಿರುಮೊಳಿಯ ಮೊದಲ ಭಾಗ ಈ ತಿರುಪ್ಪಲ್ಲಾಂಡು ಎಂದು ಭಾವಿಸಲಾಗಿದೆ ಈ ತಿರುಮೊಳಿಯಲ್ಲಿ ಎಂಟು ಭಿನ್ನ ವೃತ್ತಗಳಲ್ಲಿ 462 ಪಾಶುರಗಳಿವೆ ರಕ್ಷಕನನ್ನೇ ರಕ್ಷಣೆಗೆ ಅರ್ಹನೆಂದು ಭಾವಿಸಿ ಹಾಡಿದ ತಿರುಪ್ಪಲ್ಲಾಂಡಿನಲ್ಲಿ 12 ಪಾಶುರಗಳಿವೆ ತಿರುಮೊಳಿಯ ಇತರ ಭಾಗಗಳಲ್ಲಿ ನಾವು ಕಾಣುವುದು ಯಶೋದೆಯ ರೂಪದಲಿನ ಆಳ್ವಾರರು ದಿವ್ಯಬಾಲಕನಾದ ಕೃಷ್ಣನ ಚೇಷ್ಟೆಗಳಿಂದ ಭಾವೋದ್ರೇಕಗೊಂಡ ಯಶೋದೆಯಾಗಿದ್ದಾರೆ ಪೌರಾಣಿಕ ಹಿನ್ನೆಲೆಯಲ್ಲಿ ಕೃಷ್ಣನ ಬಾಲಲೀಲೆಗಳನ್ನು ಕಂಡು ಅವನ ಸೌಂದರ್ಯಕ್ಕೆ ಮಾರು ಹೋಗಿದ್ದಾರೆ ಅವನಿಗೆ ಸ್ನಾನಮಾಡಿಸಿದ್ದಾರೆ ಹೂ ಮುಡಿಸಿದ್ದಾರೆ ಜೋಗುಳ ಹಾಡಿದ್ದಾರೆ ದಯಾಮಯನಾದ ದೇವರು ತನ್ನನ್ನು ರಕ್ಷಿಸಲೆಂದು ಸಮುದ್ರ ಮಧ್ಯದಲ್ಲಿ ಆದಿಶೇಷನ ಮೇಲೆ ಮೃದುವಾದ ಹಾಸಿಗೆಯನ್ನು ತ್ಯಜಿಸಿ ತನ್ನೊಳಗೇ ನಿಂತು ತನನ್ನು ಅನುಗ್ರಹಿಸಿದ್ದಾನೆ

ಪನಿಕ್ಕಡಲಿಲ್ ಪಳ್ಳಿಕೋಳೈ ಪಳಹವಿಟ್ಟು ಓಡಿವನ್ದೇನ್
ಮನಕ್ಕಡಲಿಲ್ ವಾಳವಲ್ಲ ಮಾಯಮಣಾಳನಮ್ಬಿ
ತನಿಕ್ಕಡಲೇ ತನಿಚ್ಚುಡರೇ ತನಿಯುಲಹೇಯೆನ್ಱೆನ್ಱು
ಉನಕ್ಕಿಡಮಾಯಿರುಕ್ಕ ಎನ್ನೈ ಉನಕ್ಕು ಉರಿತ್ತಾಕ್ಕಿನೈಯೇ

ತಾನು ಭುಂಜಿಸದಿದ್ದ ದಿವಸ ಉಪವಾಸದ ದಿವಸವಲ್ಲ ಋಕ್ ಯಜುಸ ಸಾಮವೇದಗಳಿಂದ ಆಯ್ದ ಪುಷ್ಪಗಳನ್ನು ದೇವರಿಗೆ ಅರ್ಪಿಸದಿದ್ದ ದಿವಸಗಳು ಪಟ್ಟಿನಿಯ (ಉಪವಾಸ) ದಿನಗಳು

ಕಣ್ಣಾ ನಾನ್ಮುಹನೇ ಪ್ಪಡೈತ್ತಾನೇ ಕಾರಣಾ ಕರಿಯಾಯ್ ಅಡಿಯೇನ್
ನಾನ್
ಉಣ್ಣಾನಾಳ್ ಪಶಿಯಾವದೊನ್ಱಿಲ್ಲೈ ಓವಾದೇ ನಮೋ ನಾರಣಾವೆನ್ಱು

ಎಣ್ಣಾನಾಳುಮ ಇರುಕ್ಕಿಶ ಚ್ಚಾವ ವೇದ ನಾಣ್ಮಲರ್ ಕೊಂಡು ಉನ್
ಪಾದವತ್

ನಣ್ಣಾನಾಳಾ ಅವೈತತ್ತುಟುವರ್ ಹಿಲ್ ಅನ್ನೆ ನಕ್ಕವ್ವ ಪಟ್ಟನಿನಾಳೀ

ದೇವರ ದಿವ್ಯ ನಾಮಗಳನು ನಿಮ್ಮ ಮಕ್ಕಳ ಹೆಸರಾಗಿಡಿ ಆ ಹೆಸರುಗಳಿಂದ ಕರೆಯುವಾಗ ಉದ್ದೇಶಪೂರ್ವಕವಲ್ಲದಿದ್ದರೂ ದೇವರ ನಾಮಗಳನು ಉಚ್ಚರಿಸಿದ ಪುಣ್ಯ ಲಭಿಸುತ್ತದೆ ಎಂದಿದ್ದಾರೆ

ಕಾಶುಮರ್ ಕಚಿಲ್ವಿಯುಡ್ಡೈಕ್ಕೂಟಿಕ್ಕಿಕ್ಕುಮ್ ಆಚ್ಚಿಲ್ಗೀರ ಕಟಿಕಿ ಕ್ಕುವರ್
ಆಶ್ಯೆಯಿನಾಲ್ ಅಚ್ಚುವತ್ತಪ್ಪೇರಿಡುಮರ್ ಅದರ್ಹಾಳ್
ಕೇಶವರ್ ಪೇರಿಟ್ಟು ನೀಜ ಳ ತೇನಿತ್ತಿರುಮಿನೋ
ನಾಯಕನ್ ನಾರಾಣನ ತಮ್ಮನೈ ನರಕಮ್ ಪುಹಾಳ್

x x x x x x x x

ನಮ್ಬಿಪಿಮ್ಬಿ ಎನ್ರು ನಾಟ್ಟು ಮಾನಿಡಪ್ಪೇರಿಟ್ಟಾಲ್
ನಮ್ಬುಮ್ ಪಿಮ್ಬುಮೆಲ್ಲಾಮ ನಾಲುನಾಳಿಲಿಟ್ಟೊಮ್
ಶೆಮ್ಬರುನ್ದಾಮ ರೈಕಣ್ಣನ್ ಪೇರಿಟ್ಟಿಟ್ಟಿತ್ತಕಾಲ
ನಮ್ಬಿಹಾಳ್ ನಾರಣನ್ ನರಕಮ್ ಪುಹಾಳ್

ಶ್ರೀರಂಗದಲ್ಲಿನ ರಂಗನಾಥನಲ್ಲಿ ಈತನದೊಂದು ವಿಶೇಷವಾದ ಪ್ರಾರ್ಥನೆ ಅಂತ್ಯ ಕಾಲದಲ್ಲಿ ನಾನು ನಿನ ನು ಕ ರಿತು ಮಾತಾಡಲು ನೆನೆಯಲೂ ಸಹ ಸಾಧ್ಯವಾಗಲಾರ ದೇನೋ ಆದ್ದರಿಂದ ಆ ಸಮಯದಲ್ಲಿ ಬಂದು ನನ ನು ರಕ್ಷಿಸು ಎಂದು ಇಗೋ ಈಗಲೇ ಮುಂಗಡವಾಗಿಯೇ ನಿನ ಲ್ಲಿ ದೈನ್ಯದಿಂದ ಪ್ರಣಮಿಸುತ್ತಿದ ೇನೆ ಎಂಬ ಭಾವ ಈ ಕೆಳಗಿನ ಪದ್ಯದಲ್ಲಿ ವ್ಯಕ್ತವಾಗಿದೆ

ಶಿಳಿಲ್ ವಟಿಪ್ಪೊರುಳಾಹಿ ನಿನ್ರ ದೇವರ್ಹಳ್ ನಾಯಕನೇ
ಎಮರ್ಾನೇ

ಎಚ್ಚುಲಿಲೆನೂ ಡ್ಯೆ ಇನು ಮಂದೇ ವಿಟುಲ ಹಂಮಿಡ್ಡೈಯಣಾಯ್ ಎನ ಪ್ಪಾ
ವಚ್ಚುವುರುವಿನ್ ನಮನ್ತಮರ್ಹಳ್ ವಲಿನ್ದು ನಲಿನ್ದೈಪ್ಪುಟ್ಟುಮ್
ಪೋದು

ಅಚ್ಚುಲವೇನ್ರು ಎನೈ ಕಾಕ್ಕವೀಣ್ಡುಮ್ ಅರಙ್ಗತ್ತರವಣೈಪುಳ್ಳಿಯಾನೇ

ಮಂಗಳ ಶಾಸನದ ಪಾಶುರಗಳಲ್ಲಿ ಭಕ್ತರನು ಅಹ್ವಾನಿಸಿ ಎಲ್ಲರೂ ಬಂದು ದೇವರಿಗೆ ಮಂಗಳ ಹಾಡಿರಿ ಎನ್ನುವಾಗ ಕೆಲವು ಷರತ್ತುಗಳನ್ನು ಮುಂದೊಡಿದ್ದಾರೆ ಅತ್ಯಂತ ಸುಖಾನುರೂಪವಾದ ಭೋಗಕ್ಕೆ ಒಪ್ಪಿ ದೃಢವಾಗಿ ನಿಲ್ಲಬೇಕೆಂಬ ಮನಸ್ಸಿರುವ

ದಾದರೆ ತಡವಾಡದೆ ಬೇಗನೆ ಬಂದು ಅಂಕುರಾರ್ಪಣಕ್ಕಾಗಿ ಮಣ್ಣುಹೊರುವ ಕೈಂಕರ್ಯವನು ಅನಂತರದ ಕಲ್ಯಾಣೋತ್ಸವಗಳ ಕೈಂಕರ್ಯವನ್ನೂ ಕೈಕೊಳ್ಳಿರಿ ಕೂಳಿಗೆ ಅಡಿಯಾಳಾಗಿ ನಿಂತಿರುವವರನ್ನು ನಮ್ಮ ಭಗವದ್ಭಕ್ತರ ಗೋಷ್ಠಿಯಲ್ಲಿ ಸೇರಲು ಅವಕಾಶ ಕೊಡೆವು (ಏಕೆಂದರೆ) ನಾವು ಹಿಂದೆ ಏಳು ಈಗ ಏಳು ಮುಂದೆ ಏಳು ಎಂಬ ಒಟ್ಟು ಇಪ್ಪತ್ತೊಂದು ತಲೆಮಾರುಗಳಲ್ಲೂ ದೋಷವಿಲ್ಲದವರಾಗಿದ್ದೇವೆ (ನಾವು) ರಾಕ್ಷಸರು ಬಾಳುತ್ತಿದ್ದ ಲಂಕೆಯು ಜನರಿಲ್ಲದಂತೆ ಹಾಳಾಗುವ ಹಾಗೆ ಸೈನ್ಯದೊಡನೆ ಯುದ್ಧಮಾಡಿದ ಶ್ರೀರಾಮಚಂದ್ರನಿಗೆ ಹಲವಾರು ವರ್ಷ ಮಂಗಳವಾಗಲಿ ಎಂದು ಬಯಸುವವರಲ್ಲವೇ ! (ಪಿ ಎ ರಾಜರತ್ನಂ ಅವರ ಭಾಷಾಂತರ)

> ವಾಳಾಳ್‌ಪಟ್ಟುನಿನ್ರೀರ್ ಉಳ್ಳೀರೇಲ್ ವಂದು ಮ ಣ್ಣುಂ ಮಣಮುಂ ಕೊಣ್ಮಿನ
> ಕೂಳ್ ಆಳ್ಪಟ್ಟು ನಿನ್ರೀರ್ಹಳೈ ಎಂಗಳ್ ಕ ಳುವಿನಿಲ್ ಪುಹುದಲೊಟ್ಟೋಂ
> ಏಳಾಟ್ಕಾಲಂ ಪಳಿಪ್ಪಿಲೋಂ ನಾಂಗಳ್ ಇರಾಕ್ಕದರ್ ವಾಳ್ ಇಲಂಗೈ
> ಪಾಳಾಳಾಹಪ್ಪಡೈ ಪೊರುದಾನುಕ್ಕುಪ್ಪಲ್ಲಾಂಡು ಕೂರುದುಮೇ

ಭಗವಂತನು ಭೋಗಿಸಿ ಬಿಟ್ಟುದನ್ನು ಅನುಭವಿಸುವ ದಾಸರು ನಾವು ನೀನು ನಡುವಿನಲ್ಲಿ ಉಟ್ಟು ಕಳೆದ ಪೀತಾಂಬರವನ್ನು ಉಡುವ ನೀನು ಉಂಡು ಮಿಕ್ಕುದನು ಉಣ್ಣುವ ನಿನಗೆ ಮುಡಿಸಿ ಕಳೆದ ತುಳಸೀಮಾಲೆಯನು ಧರಿಸುವ ದಾಸರಾದ ನಾವು ನಿನ್ನ ಆಜ್ಞೆಯಂತೆ ಮಾಡತಕ್ಕ ಕರ್ಮಗಳನ್ನು ಸರಿಯಾಗಿ ಮಾಡಿ ಶ್ರವಣ ನಕ್ಷತ್ರದ ಮಹೋತ್ಸವದಲ್ಲಿ ಹಾಸಿದ ವಿಶಾಲವಾದ ನಾಗಪರ್ಯಂಕದಲ್ಲಿ ಯೋಗನಿದ್ರೆ ಮಾಡುವವನಿಗೆ ಹಲವಾರು ವರ್ಷಗಳು ಮಂಗಳವಾಗಲಿ ಎಂದು ತಪ್ಪದೇ ಹೇಳುತ್ತೇವೆ

> ಉಡುತ್ತು ಕಳೆನ್ದ ನಿನ್ ಪೀತಗವಾಡೈ ಯುಡುತ್ತು ಕಲತ್ತದುಣ್ಣು
> ತೊಡುತ್ತತುಟಾಯ್ ಮಲರ್ ಶೂಡಕ್ಕಳೈನ್ದನ ಶೂಡುಮಿತ್ತೊಣ್ಡರ ಗ ಳೊ ಮ್
> ಮಿಡತ್ತದಿಶೈಕ್ಕರುಮನ್ದಿರುತ್ತಿ ತ್ತಿರುವೋಣತ್ತಿರುವಿಟವಿಲ್
> ಪಡುತ್ತಪೈನ್ನಾಗಣೈಪ್ಪಳ್ಳಿಕೊಣ್ಡಾನ ಕ್ಕುಪ್ಪಲ್ಲಾಣ್ಡುಕೂಱುಡುಮೇ

ಮಂಗಳಾಶಾಸನದ ನಂತರದ ಭಾಗಗಳಲ್ಲಿ ಶ್ರೀಕೃಷ್ಣನ ಲೀಲೆಗಳ ಚಿತ್ರಣ ಮಾಡಿ ಬಂದಿದೆ ಇದು ಬಹಳ ರಮ್ಯವಾಗಿದ್ದು ಒಂದೊಂದೂ ಕಣ್ಣ ಮುಂದೆ ನಡೆಯುತ್ತಿರುವಂತೆಯೇ ತೋರುತ್ತದೆ ಈ ಕೃಷ್ಣನ ಲೀಲೆಗಳೆಲ್ಲಾ ತಿರುಗೋಷ್ಠಿಯೂರಿನಲ್ಲಿ ನಡೆದಂತೆ ಹೇಳಿದ್ದಾರೆ ಅಲ್ಲಿನ ಜನ ಕೃಷ್ಣಾವತಾರವನ್ನು ಕಾಣಲು

ಓಡುವಾರ್ ವಿಟುವಾರಂಕನ್ದಾಲಿಪ್ಪಾರ
ನಾಡ ವಾರ ನಮ್ಬಿರಾನೆಙ್ಗುತಾನೆನ್ಬಾರ್
ಪಾಡಂವಾರ್ ಕಳುವ ಪಲ ಪಱೈಕೊಟ್ಟನಿನ್ರುಟಿ
ಆಡುವಾರ್ ಕಳಂವ್ಙಾಯ ತಾಯ್ ಪ್ಪಾಡಿಯೆ

ಆ ಗ್ರಾಮಸ್ಥರು ಓಡುತ್ತಾರೆ ಬೀಳುತ್ತಾರೆ ಸಂತೋಷದಿಂದ ಅಲಂಗಿಸುತ್ತಾರೆ ಮಗು ಎಲ್ಲಿ ಎಂದು ಹುಡ ಕುತ್ತಾರೆ ನಮ್ಮ ಸ್ವಾಮಿಯಾದ ಶ್ರೀಕೃಷ್ಣ ಎಲ್ಲಿದ್ದ ನೆಂದು ಕೇಳುತ್ತಾರೆ, ಒಹ ವಿದವಾದ್ಯಗಳು ಧ್ವನಿಗೈಯ್ಯುತ್ತಿದ್ದಾಗ ನರ್ತಿಸುತ್ತಾರೆ ಯಶೋದೆ ಮಗುವಿನ ಕೈಕಾಲುಗಳನು ನಿ ವಿ ಕಡಾರದಲ್ಲಿನ ನೀರಿನಿಂದ ಸ್ನಾನ ಮಾಡಿಸಿ ನಾಲಿಗೆಯನು ಶುದ್ಧಗೊಳಿಸಲೆಂದು ಬಾಯಿ ತೆಗೆದು ನೋಡಿದಾಗ ಆ ಬಾಯಲ್ಲಿ ಸಪ್ತಲೋಕಗಳನೇ ಕಂಡಳು

ಕೈಯುಮ್ ಕಾಲುವ ನಿವಿ ತ್ತುರ್ಕ್ಕಡಾರನೀರ
ಪ್ಪೆಯಂವ ಚ್ಚಿಪ್ಪಶುವರ್ ಶಿಟುವ ಙ್ಙಾಲ್
ಐಯನಾವಾ ತ್ತಾಳುಂಕ್ಕಙ್ಗಾನ್ಡಿಡ
ವೈಯವೆ ೀಟು ಮ ಕಣ್ಣಾಳ್ ಪಿಳ್ಳೈವಾಯ ಳೇ

ಈ ಕೃಷ್ಣ ಹುಟ್ಟಿದಾಗಿಂದ ಯಶೋದೆ ಹಾಲು ಮೊಸರು ಬೆಣ್ಣೆಗಳನ್ನು ಹೊಂದಿ ದವಳೇ ಅಲ್ಲ ಮಿಗಿಲಾದ ಪ್ರೇಮವುಳ್ಳ ತಾಯಿ ಆತನ ತಪ್ಪುಗಳನ್ನು ಮುಚ್ಚಿಟ್ಟು ಕೊಳ್ಳುತ್ತಾಳೆಂದು ಲೋಕ ದೂಷಿಸಿದರೂ ನಾನು ಮಾತ್ರ ತಪ್ಪಿಕೂಡ ಆದನ್ನು ಬಹಿ ರಂಗ ಪಡಿಸಿಲ್ಲ ಕೃಷ್ಣನೇ ಸ್ನಾನಮಾಡಲು ಬಾ ಎಂದ ಕರೆಯುತ್ತಾಳೆ ಹಾಲು ಮೊಸರುಗಳು ಸಹ ಅವನಿಂದಲೇ ಇಲ್ಲವಾಯಿತು ಎಂಬ ಮಾತು ಸೂಚ್ಯಾರ್ಥದಲ್ಲಿ ಇಲ್ಲಿ ಕಾಣಿಸಿಕೊಂಡಿದೆ

ಕಱನ್ದನಙ್ಪಾಲ ನ್ನಯಿರ ಮ ಕಡೈನ್ದರಿವೇಲ್ವೃತ್ತವಣ್ಣೆಯ
ಎಱನ್ದುದುವೇ ಮೊದಲಾಗಪೆಚ್ಚೂಱ ಯೇ ನಮ್ಬಿರಾನೇ
ಶಿಱನ್ದನಟಾಯಲರ್ತ್ತುಙ್ಮೆನ್ನದನಾಲ ಪಿರರ್ಮುನ್ನೇ
ಮಱನ್ದುಂ ಮುರೈಯಡಾಡಮಾಟ್ಟೇನ ಮುಙ್ಙನವಾಡ ನೀವಾರಾಯ

ಗೋವುಗಳನ್ನು ಕಟ್ಟಿ ಬಿಚ್ಚಿ ಆಟವಾಡುವಾಗ ಧೂಳಿನಿಂದ ತುಂಬಿದ ನಿನ್ನ ಶರೀರ ವನ್ನು ನೋಡಲು ನನಗೇನೋ ಆಸೆಯೇ ಆದರೆ ಊರಿನವರೆಲ್ಲರೂ ಅವಹೇಳನ ಮಾಡುತ್ತಾರೆ ಸ್ವಲ್ಪವೂ ನಾಚಿಕೆಯಿಲ್ಲದವನೇ ನಪ್ಪಿನ್ನೈದೇವಿ ನಿನ್ನನ್ನು ನೋಡಿ ನಗುವುದಿಲ್ಲವೆ ಎನ್ನ ಮಾಣಿಕ್ಯವೇ ಮಣಿಯೇ ಸ್ನಾನಮಾಡಲು ಬಾರಯ್ಯ

ಪೂಣಿತ್ತೊಟುವಿನಿಱ್ಱುಕ್ಕುಪ್ಪಟುದಿಯುಳ್ಳೆನ್ನಪ್ಪೋನ ಮೇನಿ
ಕಾಣಪ್ಪೆರಿದುಂ ಮುಗಪ್ಪಾಗಿ ಉಮ್ ಕಣ್ಣಾರ್ ಸೇಱ ಪ್ಪರ್
ನಾಣಿತ್ತನ್ನೈಯುಮಿಲಾದಾಯ್‌ನಪ್ಪಿನ್ನೈಕ್ಕಾಣಿಱ್ಱಿರಿಕ್ಕುಮ್
ವಣಾಣಿಕ್ಕುಮೋ ಎನ್ ಮಣಿಯೇ ಮುಱ್ಱುನವಮಾಡವನೀವಾರಾಯು

ಜೋಗುಳದ ಪಾಶುರಗಳಲ್ಲಿ ದೇವರ ದಿವ್ಯಾಲಂಕಾರಗಳ ವರ್ಣನೆ ಇದೆ. ಅವುಗಳನು ಬ್ರಹ್ಮ ಇಂದ್ರಾದಿ ದೇವತೆಗಳು ಮುಂತಾದವರು ಕೈಂಕರ್ಯವಾಗಿ ಕಳುಹಿಸಿದ್ದಾರೆಂದಿದೆ. ಅವುಗಳಲ್ಲಿ ಜ್ಯೇಷ ಮಹಿಷಿಯಾದ ಶ್ರೀಲಕ್ಷ್ಮೀದೇವಿಯು ಮಧುವಿಂದ ಕೂಡಿದ ತುಳಸಿದಳಗಳಿಂದ ಕಟ್ಟಿದ ಕಲ್ಪವೃಕ್ಷಗಳ ಪುಷ್ಪದಿಂದ ಕಟ್ಟಿದ ಮಾಲೆಗಳನ್ನು ತರಿಸಿದ್ದಾಳೆ ಎಂದು ಹೇಳುವ ಪಾಶುರದಲ್ಲಿ ಕುಂಭಕೋಣದಲ್ಲಿ (ಕುಡನ್ದೈ) ಪವಡಿಸಿರುವ ದೇವರ ಪ್ರಸ್ತಾಪವೂ ಇದೆ.

ಕಾನಾರ್‌ನಱುನ್ದುಱಾಯ್ ಕೈಶೆಯ್ದ ಕಣ್ಣಿಯ ಮ್ ವಾನಾ ರ್‌ಶೆಂಬುಱ್ಱೋಲೈಕ್ಕಱ್ಪಕತ್ತಿನ್ ವಾಶಿಕೈಯುಮ್
ತೇನಾರ್‌ಮಲರ್‌ಮೇಲ್‌ತಿರುಮಙ್ಗೈಪೋತ್ತನ್ದಾಳ್
ಕೋನೇಯುಟಿಲೇಲಟಿ ಲ್ ತಾಲೇಲೋ ಕುಡನ್ದೈಕ್ಕಿಡನ್ದೇನೇ ತಾಲೇಲೋ

ಶಿನಿ ಯೋಜಬ್ದ ಎಂಬ ಐದನೆಯ ನೂರನಾಲ್ಕನೆಯ ದಶಕದಲ್ಲಿ ತಂಪು ಸ್ವಭಾವದ ಕ್ಷೀರಾಬ್ಧಿ ಶಯನವನು ತ್ಯಜಿಸಿ ನನ್ನ ಮನಸ್ಸೆಂಬ ಸಮುದ್ರದಲ್ಲಿ ನೆಲೆ ನಿಂತ ಲಕ್ಷ್ಮೀವಲ್ಲಭನೇ ಕ್ಷೀರಸಾಗರ ಸೂರ್ಯಮಂಡಲ ಪರಮಪದ ಮುಂತಾದ ಸಾಟಿಯಿಲ್ಲದ ಸ್ಥಳಗಳಿದ್ದರೂ ಸ್ವರೂಪ ಜ್ಞಾನವಿಲ್ಲದ ನನ್ನನ್ನು ಪರಿಪೂರ್ಣನಾದ ನೀನು ವಾಸಸ್ಥಾನವಾಗಿ ಆಯ್ದುಕೊಂಡೆಯಲ್ಲ ಎಂದಿದ್ದಾರೆ. ಇದು ದೈವ ಕೃಪೆ.

ಪನಿಕ್ಕಡಲಿಲ್‌ಪಳ್ಳಿಕೋಳೈಪ್ಪಟಗವಿಟ್ಟೋಡಿವನ್ದೇನ್
ಮನಕ್ಕಡಲಿಲ್‌ವಾಟ ವಲ್ಲಮಾಯಮಣಾಳನವಿಮ್ಬಿ
ತನಿಕ್ಕಡಲೇ ತನಿಚ್ಚುಡರೇ ತನಿಯುಲಗೇ ಯೆನ್ನನ್ನು
ಉನಕ್ಕಿಡಮಾಯಿರುಕ್ಕವೆನ್ನೈ ಯುನಕ್ಕುರಿತ್ತಾಕ್ಕಿನೈಯೇ

ಈ ಆಳ್ವಾರರ ಸಾಕು ಪುತ್ರಿ ಗೋದಾದೇವಿ ಶ್ರೀವಿಲ್ಲಿಪುತ್ತೂರಿನ ದೇವರಿಗೆ ನನ್ನ ತಂದೆ ಬೆಳೆಸಿದ ತೋಟದಿಂದ ತಂದ ಹೂವಮಾಲೆಯನು ಸಮರ್ಪಿಸುವ ಕೈಂಕರ್ಯವನು ಕಂಡವಳು. ಆ ವಟಪತ್ರ ಶಾಯಿಗೆ ಮನಸೋತು ಆತನನ್ನೇ ವರಿಸುವ ನಿಶ್ಚಯಮಾಡಿ ಆ ಮಾಲೆಯನ್ನು ಅರ್ಪಿಸುವ ಮುನ್ನ ಅದು ತನ್ನ ಇನಿಯನಿಗೆ ಶೋಭಿಸುತ್ತದೆಯೋ ಎಂಬುದನ್ನರಿಯಲು ಅದನ್ನು ತಾನೇ ಮುಡಿದು ನೋಡುತ್ತಿದ್ದಳು. ಒಮ್ಮೆ ಇದನ್ನು ಕಂಡ ಪೆರಿಯಾಳ್ವಾರರು ಕುಪಿತರಾಗಿ ಅದಕ್ಕೆ

ತಡೆಯೊಡ್ಡಿ ಶುದ್ಧವಾದ ಮಾಲೆಯನ್ನು ದೇವನಿಗರ್ಪಿಸಿದರು. ಆದರೆ ಆತನೂ ಗೋದಾದೇವಿಯ ಪ್ರೇಮಯೇ, ಇದು ಬೇಡ ಗೋದೆ ಮುಡಿದ ಮಾಲೆಯೇ ಬೇಕೆಂದು ಹಟ ಮಾಡಿದ. ಹೀಗೆ ಗೋದೆ ಅಂದಿನಿಂದ ಶೂಡಿಕೊಡುತ್ತನಾಚ್ಚಿಯಾರ್ ಎನಿಸಿದಳು. ರಂಗನನ್ನೇ ಒಲಿದಳು.

ಶ್ರೀರಂಗದಲ್ಲಿ ಈಕೆಗೆ ರಂಗನಾಥನೊಡನೆ ಕಲ್ಯಾಣ. ಈಕೆಯನ್ನು ಸಮರ್ಪಿಸಲು ಗರ್ಭಗೃಹಕ್ಕೆ ಒಯ್ಯಲಾಯಿತು. ಅಲ್ಲಿ ಈಕೆ ಆತನಲ್ಲಿ ಲೀನವಾಗಿ ಅಂತರ್ಧಾನಳಾದಳು. ಇದು ಈಕೆಯ ಕತೆ. ಈಕೆ ಹಾಡಿದುದು ಎರಡು ಪ್ರಬಂಧಗಳು. ತಿರುಪ್ಪಾವೈ ಮತ್ತು ನಾಚ್ಚಿಯಾರ್ ತಿರುಮೊಳಿ. ಎರಡೂ ವಿಶಿಷ್ಟ ರೀತಿಯ ಮಧುರ ಭಾವದ ಜಾನಪದವೆನಿಸಬಹುದಾದ ಗೀತೆಗಳು. ತಿರುಪ್ಪಾವೈ ಎಂಬ ಮಾತಿಗೆ ಎರಡು ಅರ್ಥಗಳು. ಒಂದರ್ಥದಂತೆ ದೈವಿಕ ಸ್ತ್ರೀ. ಈ ಮಾತು ಗೋದೆಯನ್ನೇ ಸೂಚಿಸುತ್ತದೆ. ಶ್ರೀರಂಗನಾಥನನ್ನು ಮದುವೆಯಾದ ಈಕೆ ಆಂಡಾಳ ರಾಣಿ ಯಜಮಾನಿ ಸ್ವಾಮಿನಿ ಎನಿಸಿದಳು. ಪಾವೈ ಎಂದರೆ ವ್ರತ. ತಿರುಪ್ಪಾವೈಯಲ್ಲಿ ಈಕೆ ಆಚರಿಸುವ ವ್ರತವೊಂದನ್ನು ಪ್ರಸ್ತಾಪಿಸಿದೆ. ಇದು ಮಾರ್ಗಶಿರ ಮಾರ್ಗಳಿ ಮಾಸದಲ್ಲಿ ಆಚರಿಸುವ ವ್ರತ. ಇಲ್ಲಿ ನಾವು ಕಾಣುವುದು ಗೋಪೀ ಪ್ರೇಮ. ಆ ಮಾಯನನ್ನು ತನ್ನ ಮೋಹಕ ಸೌಂದರ್ಯದಿಂದ ಎಲ್ಲರನ್ನೂ ಮರುಳುಮಾಡಿದ. ಗೋದೆ ಗೋಪಿಯಾಗಿ ತನ್ನ ಸಖಿಯರೊಡಗೂಡಿ ಎಲ್ಲರನ್ನೂ ನಿದ್ರೆಯಿಂದೆಬ್ಬಿಸುತ್ತಾ ಕೊನೆಗೆ ನಿದ್ರಾ ಸುಂದರನನ್ನೂ ಎಬ್ಬಿಸಿ ಆತನಲ್ಲಿ ತನ್ನ ಪ್ರಾರ್ಥನೆಯನ್ನು ನಿವೇದಿಸಿಕೊಳ್ಳುತ್ತಾಳೆ. ಆ ಬೇಡಿಕೆ ಎಂತಹುದು ?

> ಶಿತ್ತಂಶಿರುಕಾಲೇವನ್ದುನ್ನೈ ಚ್ಚೇವಿತ್ತು ಉನ್
> ಪೊತ್ತಾಮರೈಯಡಿಯೇ ಪೋತ್ತುಂ ಪೊರುಳ ಕೇಳಾಯ್
> ಪೆತ್ತಂ ಮೇಯ್ತ್ತುಣ್ಣುಂ ಕುಲತ್ತಿಲ್ ಪಿರನ್ದು ನೀ
> ಕುತ್ತೇವಲೆಂಗಳೈ ಕೊಳ್ಳಾಮಲ ಪೋಹಾದು
> ಇತ್ತೈಪರೈ ಕೊಳ್ವಾನನ್ತುಕಾಣ್ ಗೋವಿಂದಾ
> ಎತ್ತೈಕ್ಕುಮೇಳೇಳ್ ಪಿರವಿಕ್ಕುಂ ಉನ್ತನ್ನೋ
> ಡುತ್ತೋಮೇಯಾವೋಮ್ ಉನಕ್ಕನಾಮಾಳ್ಚೆಯ್ವೋಮ್
> ಮತ್ತೈನಂಕಾಮಂಗಳ್ ಮಾತ್ತೆಲೋರೆಂಬಾವಾಯ

ಉದಯಕಾಲದಲ್ಲಿದ್ದು ನಿನ್ನ ಅಡಿದಾವರೆಗಳನ್ನು ಆಶ್ರಯಿಸುವುದಾದರೂ ಏಕೆ ? ಗೊಲ್ಲರ ಕುಲದಲ್ಲಿ ಹುಟ್ಟಿದ ನೀನು ನಮ್ಮ ಅಂತರಂಗ ಸೇವೆಗಳನ್ನು ಸ್ವೀಕರಿಸದೆ ಹೋಗಕೂಡದು. ಇದು ಈ ಒಂದು ದಿನಕ್ಕೆ ಮಾತ್ರ ಸೀಮಿತವಲ್ಲ. ಏಳೇಳು ತಲೆಮಾರುಗಳಲ್ಲಿಯೂ ನಿನ್ನೊಡನಿದ್ದು ನಿನಗೇ ದಾಸರಾಗಿರುವೆವು. ನಮ್ಮ ಇತರ ಬಯಕೆಗಳನ್ನೆಲ್ಲಾ ಮಾರ್ಪಡಿಸು.

ಈ ಬೇಡಿಕೆಗಳನು ಸಲ್ಲಿಸಲು ಗೋದೆ ಮಾಡಿಕೊಂಡ ಸಿದ್ಧತೆಗಳೆಷ್ಟು? ಗೊಲ್ಲವಾಡಿಯು ಎಲ್ಲ ತರುಣಿಯರನ್ನೂ ಎಬ್ಬಿಸುತ್ತಾಳೆ ಆ ನಾರಾಯಣನಿಂದ ಪರೈ – ಎಂದರೆ ಆತನಿಂದ ತಪ್ಪಿಸಿಕೊಳ್ಳಲಾಗದ ಪ್ರೇಮದ ಸಂಕೇತವಾದ ಹರೆ ಎಂಬ ವಾದ್ಯ ವಿಶೇಷವನ್ನು ಪಡೆದುಕೊಳ್ಳಲು ಈ ಗೋಪಿಯರ ನಿಯೋಗ ಇಲ್ಲಿ ಗೋದೆ ಒಳಸಿರುವ ಶಬ್ದ ಚಿತ್ರಣಗಳು ರೂಪಕಗಳು ಕಣ್ಣಿಗೆ ಕಟ್ಟಿದಂತಾಗುತ್ತವೆ ಈ ಕೃಷ್ಣ ನಂದಗೋಪನ ಕುಮರನ್ ಏರಾರ್ನ್ದ ಕಣ್ಣಿ ಯಶೋದೈ ಇಳಂ ಸಿಂಗಂ ನಂದಗೋಪನ ಮಗ ಚೆಲುವು ತುಂಬಿದ ಕಣ್ಣಿನ ಯಶೋದೆಯ ಸಿಂಹದ ಮರಿ! ಇದರಲಿ ತ್ರಿವಿಕ್ರಮನ ಪ್ರಸ್ತಾಪವೂ ಬಂದಿದೆ ಓಂಗಿ ಉಲಹಳನ್ದ ಉತ್ತಮ ನಾದ ತ್ರಿವಿಕ್ರಮನ ಹೆಸರನ್ನು ಹಾಡಿ ನಮ್ಮ ವ್ರತಕ್ಕಾಗಿ ನೀರಾಟವಾಡಿದರೆ ನಾಡಿನಲೆಲ್ಲಾ ತಿಂಗಳಿಗೆ ಮೂರು ಬಾರಿ ಮಳೆ ಹೊಯ್ದು ಸಿರಿ ತುಂಬುತ್ತದೆ ಎಂದಿದ್ದಾಳೆ ಪ್ರಕೃತಿಯ ವರ್ಣನೆಯೂ ಸ್ವಾರಸ್ಯವಾಗಿ ಮೂಡಿದೆ ಭಾರದ್ವಾಜ ಪಕ್ಷಿಗಳು ಕೀಚ್ ಕಿ ಚಿ ಎಂದು ಮಾಡಿದ ರವವನ್ನು ಕೇಳಲಿಲ್ಲವೆ ? ಕಡೆಗೋಲಿನಿಂದ ಕಡೆದ ಮೊಸರಿನ ರವವನ್ನು ಕೇಳಲಿಲ್ಲವೇ? ಸುಪ್ರಭಾತವಾಯಿತೆಂದು ಎಮ್ಮೆಗಳು ಹುಲ್ಲು ಮೇಯಲು ಹೊರಟವು (ಎರುಮೈ ಶಿರ ವೀಡು ಮೇಯ್ವಾನ್ ಪರನ್ದನಹಾಣ್) ಎಳೆಕರುಗಳು ಅರಚಿದ ಗಮರುಗಿದ ಎಮ್ಮೆಗಳು ಸಡಿಲಬಿಟ್ಟ ಮೊಲೆಹಾಲು ಸೋರಿ ಮನೆಯೆಲ್ಲಾ ಕರಡಿ ಕೆಸರಾಗಿದೆ (ಕನೈತ್ತಿಳಂಕತ್ತೆರುಮೈಕನ್ರುಕಿರುಂಗಿ ನಿನೈತ್ತು ಮುಲೈವಳಿಯೇ ನಿನ್ರುಪಾಲ ಶೋರ ನನೈತ್ತಿಲ್ಲಂ ಶೇರಾಕ್ಕುಂ) ಇವೆಲ್ಲಾ ಸುಪ್ರಭಾತದ ಚಟುವಟಿಕೆಗಳು ಪ್ರೇಮ ಭಿಕ್ಷೆಯ ಬಹಿರಂಗ ನೋಟಗಳಿವು ಸ್ತ್ರೀಯಾದ ಕಾರಣ ಆಕೆಯ ಅನುಭವದ ವ್ಯಾಪ್ತಿ ಸೀಮಿತ ಆದರೆ ಆಕೆ ಉದ್ದಕ್ಕೂ ಉಳಿಸಿಕೊಂಡು ಬಂದಿರುವ ಧ್ವನಿಯಲ್ಲಿನ ತೀಕ್ಷ್ಣಸ್ವರದ ಹಿಡಿತಕ್ಕೆ ಸಿಕ್ಕದ ಸೊಬಗು ಮಚ್ಚುವಂತಹುದು

ಈಕೆ ರಚಿಸಿದ ಇನ್ನೊಂದು ಪ್ರಬಂಧ ನಾಚ್ಚಿಯಾರ್ ತಿರುಮೊಳಿ ಐದು ಭಿನ್ನ ವೃತ್ತಗಳಲ್ಲ 143 ಪಾಶುರಗಳ ಈ ಕೃತಿಯಲ್ಲಿ ಆಕೆ ದೇವನಾದ ಕೃಷ್ಣನೊಡನೆ ಐಕ್ಯವಾಗುವ ಹಾಗೂ ತನ್ನನ್ನು ದಹಿಸುತ್ತಿರುವ ಭಾವೋದ್ರೇಕವನು ತೋಡಿಕೊಂಡಿದ್ದಾಳೆ ತನ್ನ ಪ್ರೇಮ ಸಂದೇಶಕ್ಕೆ ಪ್ರತಿಕ್ರಿಯೆ ಬಾರದಿದ್ದಾಗ ಖಿನ್ನತೆಯಿಂದ ಕೊರಗುತ್ತಾಳೆ ಆಗ ಮನ್ಮಥನ ಸಹಾಯ ಕೋರಿದಳು

> ತೈಯೊರು ತಿಙ್ಗಳುಮ್ ತರೈವಿಳಕ್ಕಿತ್ತುಣ್ಮಣ್ಡಲಮಿಟ್ಟು ಮಾಶಿಮುನ್ನಾಳ್
> ಐಯ್ಯನುಣ್ ಮಣಲ್ಕೊಣ್ಡು ತೆರುವಣಿನ್ದು ಅಳಹನುಕ್ಕು ಅಲಙ್ಗರಿತ್ತನಙ್ಗದೇವಾ
> ಉಯ್ಯವುಮಾ ಆಙ್ಗೊಲೋವೆನ್ರು ಶೊಲ್ಲಿ ಉನ್ನೈಯುಮ್ ಉಮ್ಬಿಯೈ
> ಯುಮ್ ತೊಳುದೇನ್
>
> ವೆಯ್ಯದೋರ್ ತಳಲುಮಿಳ್ ಶಕ್ಕರಕ್ಕೈ ವೇಙ್ಗಡವಱ್ಕು ಎನ್ನೈವಿದಿಕ್ಕಿತ್ತಿಯೇ

ತಾನೂ ಮಾಡಬಹುದಾದ ತಗಳು ಪೂಜೆ ಪ್ರಾರ್ಥನೆಗಳನ್ನು ವರ್ಣಿಸಿದಳು ದೇವ ನಾದ ಕೃಷ್ಣನೊಂದಿಗೆ ನಡೆದ ತನ ವಿವಾಹದ ಸ್ವಪ್ನವನ್ನು ಅಂತಹ ಸುಶ್ರಾವ್ಯ ವಾದ ಧ ನಿಯಿಂದ ಉಚ್ಚರಿಸುವ ವೇದ ಘೋ ಷಗಳಿಂದ ದರ್ಭೆಯ ಸು ಅಗಿ ಯು ಸುತ್ತಲೂ ಹರಹಿ ಸಿ ತ್ರಿನಿಂದ ಹೆ ೋ ಮ ಮಾಡಲು ಮತ್ತ ಗಜದಂತೆ ಎಲ ಶಾಲಿಯಾದ ಕ ಷ್ಣನು ನನ ಕೈಹಿಡಿದು ಹೊ ಮಕುಂಡದ ಸುತ್ತಲೂ ಪ್ರದಕ್ಷಿಣೆ ಮಾಡಿದಂತೆ ಸ್ವಪ ಕಂಡ ದ ಗಿ ತನ ಸಖಿಗೆ ಹೇಳುತ್ತಾಳೆ

> ವಾಯ್‌ನಲ್ಲಾರ ನಲ್ಲಮಱೈಯೋದಿ ಮನ್ದಿರತ್ತಾಲ್
> ಪಾಶಿಲೆನಾಣಲ್ಪಡುತ್ತುಪ್ಪರಿದಿ ಸೈತ್ತು
> ಕಾಯ್‌ಶಿನಮಾಕಳಿಱನ್ನಾನೆನ ಕೈಪ್ಪಱ್ಱಿ
> ತ್ತೀವಲಂಶ್ಚೆಯ್ಯಕ್ಕೆ ನಾಕ್ಕಣ್ಣೇನ ತೊ ೞಿ ನಾ

ಆದರೆ ಇದು ಸ್ವಪ ದಲ್ಲಷ್ಟೆ ಹತಾಶಳಾದ ಆಕೆ ವ ಥಿತಳಾಗುತ್ತಾಳೆ ಅವಳ ಯತ ಗಳು ಫಲಿಸದಿದ್ದಾಗ ಪ್ರೇಮಿ ಯನ್ನು ಹಿ ಯಾಳಿಸುತ್ತಾಳೆ ಆತ ಸಂಖ್ಯಗಾರ ಧರ ರ್ವನ ರಿಯದ ಕುಚೋದ್ಯಗಾರ

> ತರುಮ ಮಱಿಯಾ ಕ ಱುಪ್ಪುನೈ ತ್ತ ಕೈ ಚ್ಚಾರ್ಙ್ಗಮದುವೇಪೋಲ್
> ಪುರುವವಟ್ಟಮಱಹಿಯ ಪೊರುತ್ತಮಿ ಲಿಯ್ಯೈಕ್ಕಣ್ಡೀರೇ

ಹೊರಗೆ ತೋರುವಂತೆಯೇ ಒಳಗೂ ಕರಿಯ ಶ್ಯಾಮಲವರ್ಣದ ದೇಹದಲ್ಲಿ ಪಟಿಂಗ ತನದ ಮನಸ್ಸುಳ್ಳವನ —

> ಪೊರುತ್ತಮುಡೈಯಂ ನಮ್ಮಿಯೈಪ್ಪುಱಮ್ ಪೋಲುಳ್ಳುಮ ಕರಿಯಾನೈ
> ಕರುತ್ತೈಪ್ಪಿಱೈತ್ತು ಎನ್ನ ಅಕ್ಕರುಮನಾನಹಿಲ್ಲೈಕ್ಕಣ್ಡೀರೇ —

ಎಂದೆಲ್ಲಾ ಜರೆಯುತ್ತಾಳೆ ಶೃಂಗಾರ ಸಾಹಿತ್ಯದಲ್ಲಿ ಈ ಕೃತಿ ಒಂದು ಮಾದರಿ ಯನ್ನು ಸ್ಥಾಪಿಸಿದೆ

ಒಂಭತ್ತನೆಯ ಶತಮಾನದ ಮಧ್ಯಭಾಗದಲ್ಲಿದ್ದವರು ಇನ್ನಿ ಬ್ಬರು ಆಳ್ವಾರರು ಮಧುರಕವಿ ಮತ್ತು ನಮ್ಮಾಳ್ವಾರ್ ಆಳ್ವಾರರಲ್ಲಿ ಅತ್ಯಂತ ಶ್ರೇಷ್ಠರೂ ಮಹಿ ಮಾನ್ವಿತರೂ ಆದವರು ನಮ್ಮಾಳ್ವಾರರು ಮಾರನ್ ಎಂಬುದು ಹೆತ್ತವರು ಕೊಟ್ಟ ಹೆಸರಾದರೆ ಶಠಗೋಪನ್ ಗುರು ನೀಡಿದ ಹೆಸರು ತಿರುನೆಲ್ವೇಲಿ ಜಿಲ್ಲೆಯ ಈಗ ಆಳ್ವಾರ್ ತಿರುನಗರಿ ಎನಿಸಿದ ಕುರುಗೂರು ಇವರ ಜನ್ಮಸ್ಥಳ ಹ ಟ್ಟಿನಿಂದಲೇ ಯೋಗಿಗಳು ಮನೆ ತ್ಯಜಿಸಿ ಹುಣಿಸೇಮ ರವೊಂದರಡಿಯಲ್ಲಿ ಮೌನವಾಗಿ ಕುಳಿತು ದಿವ್ಯ ತೇಜಸ್ಸಿನಿಂದ ಪ್ರಜ್ವಲಿಸಿದರು ಮಧುರಕವಿ ಅದೇ ಜಿಲ್ಲೆಯ ತಿರ ಕ್ಕೋಳೂರು

ಗ್ರಾಮಸ್ಥರು ಈ ಬ್ರಾಹ್ಮಣ ತೀರ್ಥಯಾತ್ರೆಗೆಂದು ಅಯೋಧ್ಯೆಗೆ ಹೋಗಿದ್ದಾಗ ದಕ್ಷಿಣದಿಂದ ಒಂದು ದಿವ್ಯ ಜ್ಯೋತಿ ಇವರನ್ನು ಆಕರ್ಷಿಸಿತು ಅದನ್ನರಸುತ್ತಾ ಕುರುಗೂರಿಗೆ ಬಂದು ಆ ಪ್ರಭೆ ನಮ್ಮಾಳ್ವಾರರಿಂದ ಹೊಮ್ಮುತ್ತಿದ್ದುದನ್ನು ಕಂಡರು ಒಂದು ವಿಧದಲ್ಲಿ ಸಮಾಧಿಸ್ಥಿತಿಯಲ್ಲಿದ್ದ ಅವರನ್ನು ಎಚ್ಚರಿಸಲು ಯತ್ನಿಸಿ ಸಫಲರಾಗಿ ಅವರು ಕಣ್ತೆರೆದಾಗ ಅಚೇತನ ವಸ್ತುವಿನಲ್ಲಿ ಚೇತನವು ಹುಟ್ಟಿದರೆ ಅದು ಏನನ್ನು ತಿಂದು ಎಲ್ಲಿರುವುದು ಎಂದು ಪ್ರಶ್ನಿಸಿದರು ಅದನ್ನೇ ತಿಂದು ಇಲ್ಲೇ ಇರುವುದು ಎಂಬುದು ನಮ್ಮಾಳ್ವಾರರ ಉತ್ತರ ಇದರ ತತ್ತ್ವವೇನೇ ಇರಲಿ ಅಂದಿನಿಂದ ಮಧುರಕವಿಗಳು ನಮ್ಮಾಳ್ವಾರರ ಶಿಷ್ಯರಾದರು ಮಧುರಕವಿ ಎಂಬುದೊಂದು ಬಿರುದಾಗಿರಬಹುದೇ ಹೊರತು ಹೆಸರಾಗಿರಲಾರದು ಅವರು ಹಲವಾರು ಕೃತಿಗಳನ್ನೂ ರಚಿಸಿರಬಹುದು ಆದರೆ ನಮಗೆ ದೊರೆತಿರುವುದೆಲ್ಲಾ 11 ಪಾಶುರಗಳು ಇವುಗಳಲ್ಲಿ ಮೊದಲಿನದು ಕಣ್ಣಿನ್ನುಣ್‌ಶಿರುತ್ತಾಂಬು ಎಂದು ಆರಂಭವಾಗುವುದರಿಂದ ಇದೇ ಆ ಪ್ರಬಂಧದ ಹೆಸರಾಗಿ ಉಳಿದಿದೆ ಇಲ್ಲಿರುವುದು ಅವರ ಗುರುಗಳಾದ ನಮ್ಮಾಳ್ವಾರರ ಸ್ತುತಿ ಇವಿಷ್ಟೇ ಅವರ ಕೃತಿ ಎಂದರೂ ಇವು ಅವರ ಹಿರಿಮೆಗೆ ಸಾಕ್ಷಿ ಗುರುವಿನ ಗುಲಾಮನೆಂದು ಭಾವಿಸಿದ ಅವರು ಗುರುವಿಗೆ ಶರಣಾದರು ಅವರಲ್ಲೇ ಎಲ್ಲವನ್ನೂ ಕಂಡರು ಮತ್ತೇನನ್ನೂ ದೇವರನ್ನೂ ಬಯಸಲಿಲ್ಲ ಇದು ಅನನ್ಯ ಗುರುಭಕ್ತಿ

ಶ್ರೀಕೃಷ್ಣ ಯಶೋದೆ ಮೊಸರು ಕಡೆದು ತೆಗೆದಿದ್ದ ಬೆಣ್ಣೆಯನ್ನು ಕದ್ದ ತಾಯಿ ನೋಡಿದಳು ಮೊಸರು ಕಡೆಯುವ ಗಂಟುಗಂಟಾದ ಆ ಚಿಕ್ಕ ಹಗ್ಗದಿಂದಲೇ ಅವನನ್ನು ಕಟ್ಟಿದಳು ಆ ಕೃಷ್ಣನೇನೋ ನನಗೆ ಸ್ವಾಮಿಯೇ ಆದರೆ ಆ ಸರ್ವೇಶ್ವರನಿಗಿಂತಲೂ ದಕ್ಷಿಣದ ಕುರುಗೂರಿನ ನಿರ್ವಾಹಕ (ನಂಬಿ) ನಾದ ನಮ್ಮಾಳ್ವಾರರ ನಾಮಸ್ಮರಣೆಯೇ ನನಗೆ ಅಮೃತಪ್ರಾಯ ನಾಲಿಗೆಗೆ ರುಚಿ ಊರುತ್ತಿರುತ್ತದೆ

> ಕಣ್ಣಿನುಣ್ ಶಿರುತ್ತಾಮ್ಬಿನಾಲ್
> ಕಟ್ಟುಣ್ಣಪ್ಪಣ್ಣಿಯ ಪೆರುಮಾಯನ್ ಎನ ಪ್ಪನಿಲ್
> ನಣ್ಣಿತ್ತೆನ್ಕುರುಗೂರ್ ನಮ್ಬಿಯೆನಕ್ಕಾಲ್
> ಅಣ್ಣಿಕ್ಕುಮ್ ಅಮುದೂರುಮೆನ ನಾವುಕ್ಕೇ

ಹಾಗೆ ಸ್ತುತಿಸುವುದರಿಂದ ನನಗೆ ನಿರತಿಶಯಾನಂದವಾಗಿದೆ ಆ ಆಳ್ವಾರರ ಶ್ರೀಪಾದಗಳನ್ನು ಆಶ್ರಯಿಸಿದೆ ಅವರನ್ನು ತಪ್ಪಿದರೆ ಸತ್ಯವಾಗಿ ನನಗೆ ಇನ್ನೊಂದರ ಅರಿವಿಲ್ಲ ಅವರು ಹಾಡಿದ ಪಾಶುರಗಳನ್ನು (ತಿರುವಾಯ್ಮೊಳಿಯನ್ನು) ಮಧುರವಾಗಿ ಹಾಡುತ್ತಾ ಅಲೆಯುತ್ತೇನೆ

ನಾವಿನಾಲ್ ನವಿತ್ತು ಇನ್ಬಮೇಯ್ದಿನೇನ
ಮೇಎನೇನ ಅವನ್ಪೊನ ಡಿವಂಯ್ವೆಮ್ಕ್ರಿಯೇ
ತೇವುಮಱ ರಿಯೆ ನ್ ಕುರುಗೂರ್‌ನಂಬಿ
ಪಾವಿನಿನಿ ಶೈ ಪಾಡಿ ತಿರಿವಿನೇ

ಇದುವರೆವಿಗೂ ವಿಲಕ್ಷಣವಾದ ಆತ್ಮವಸ್ತುವನ್ನು ನನ್ನದೆಂದು ನಂಬಿದ್ದೆ ಪತಿವ್ರತೆ ಯರಾದ ಪರಸ್ತ್ರೀಯರನು ನಂಬಿದ್ದೆ ಈಗ ತಿರುನಗರಿಯಲ್ಲಿನ ಈ ಕುರುಗೂರು ನಮ್ಮಿಯನ್ನೇ ಆಶ್ರಯಿಸಿದ್ದೇನೆ ಏಕೆಂದರೆ ಅವರು ವೇದಗಳ ಸಾರವನೆಲ್ಲಾ ಮನದಲ್ಲಿ ನಿಲ್ಲುವಂತೆ ಹಾಡಿ ನನ್ನ ಮನಸ್ಸಿನಲ್ಲಿ ಸ್ಥಾಪಿಸಿದ್ದಾರೆ ಅಪ್ರಯೋಜಕನಾದ ಅನುಕೂಲರಹಿತನಾದ ನನ್ನನ್ನು ಚೆನ್ನಾಗಿ ತಿದ್ದಿ ಭಗವದ್ಭಾಗವತಾಚಾರ್ಯ ಕೈಂಕರ್ಯ ಪರನನ್ನಾಗಿ ಮಾಡಿದ್ದಾರೆ

ನಂಬಿನೇನ್‌ಪಿರರ್ ನವ್ಪೊರುಳ್ ತನ್ನೈಯ ಮ್
ನಂಬೇನೇನ್ ಮಡವಾರ್ಹೈಯುಂಮು ನ್ನೆಲ್ಲಾ ಮ್
ಶಿಂಬೊನ್ಮಾಡತ್ತಿರುಕ್ಕುರುಗೂರ ನಮ್ಬಿ
ಕ್ಕನ್ಪನಾಯ್ ಅಡಿಯೇನ್ ಶದಿರ್ತ್ತೇನಿನೇ

x x x x x x

ಮಿಕ್ಕವೇದಿಯ ರ್ ವೇದತ್ತಿನುಟ್ಪೊರುಳ್
ನಿಱ್ಕಪ್ಪಾಡಿ ಯೆನ್ ನ್ಞಳ್ ನಿಱುತ್ತಿನಾನ್

x x x x x x

ಪಯಂನನ್ನಾಗಿ ಉಮ್ ಪಾಙ್ಗಲರಾಗಿ ಉಮ್
ಶಿಯಂಲ ನನ್ನಾಗತ್ತಿರುತ್ತಿಪ್ಪಣಿಕ್ಕೊಳ್ವಾನ್

ಈ 11 ಪಾಶುರಗಳನ್ನು ಬಿಟ್ಟು ಮತ್ತೇನೂ ಇವರು ಬರೆಯಲಿಲ್ಲವೇನೋ ಬರೆಯುವ ಆವಶ್ಯಕತೆ ಕಾಣಲಿಲ್ಲವೇನೋ ಇವರ ಗುರು ಶಠಗೋಪರದು ದಿವ್ಯ ಪ್ರಬಂಧಗಳಿಗೆ ಮಿಗಿಲಾದ ಕಾಣಿಕೆ ತಿರುವಿರುತ್ತಮ್ ತಿರುವಾಶಿರಿಯಮ್ ತಿರುವಾ ಯ್ಮೊಟಿ ಪೆರಿಯ ತಿರುವಂದಾದಿ ಇವರ ಕೃತಿಗಳು ಇವು ನಾಲ್ಕು ವೇದಗ ಳಿಗೆ ಸಮವೆಂದು ಭಾವಿಸಲಾಗಿದೆ ಆದರೆ ಇದು ಕೇವಲ ಸಂಖ್ಯಾದೃಷ್ಟಿಯಿಂದಷ್ಟೆ

ದೈವ ಸಾಕ್ಷಾತ್ಕಾರಪಡೆದ ಆಳ್ವಾರರು ತಿರವಿರುತ್ತಮ ಮೂಲಕ ಆ ವೃತ್ತಾಂತ ವನ್ನು ಸಾರ ವ ಮನೋಭಾವ ತೋರಿಸಿದ್ದಾರೆ ತಿರ ವಿರುತ್ತವ್‌ನಲ್ಲಿ ನವಮ್ಮಾಳ್ವಾ ರರು ನಾಯಕಿಯಾಗಿ ಭಾವಿಸಿಕೊಂಡು ಮಧುರಭಾವದಿಂದ ಪರಮಾತ್ಮನಿಗೆ ಹಂಬಲಿಸು ತ್ತಾರೆ ದೈವದ ಪರಮಾಕರ್ಷಕ ಸ್ವಭಾವ ಭಕ್ತರ ಪ್ರಜ್ಞೆಯನ್ನು ಆತನತ್ತ ಸೆಳೆಯು

ತ್ರವೆ ಬೇರಾವ ಸಹವಾಸವೂ ಆಗ ಅದಕ್ಕೆ ಬೇಕಾಗುವುದಿಲ್ಲ ಪರವಂಸೌಂದರ್ಯಾ ಭಕ್ತನನು ಸೆಳೆದು ಕರಗಿಸಿ ತನ ಲ್ಲಿ ಲೀನಗೊಳಿಸಿಕೊಳು ತ್ತದೆ ಅವತಾರಗಳ ಮೂಲಕ ಧರೆಗಿಳಿದು ಬಂದ |ದೈವವನ್ನೂ ಅದರ ಸೌಂದರ್ಯವನೂ ಕಂಡ ಆತ್ಮ ತನ ಬ್ರಹ್ಮಾನುಭವದಲ್ಲಿರುವ ಅಡೆತಡೆಗಳನು ನಿವಾರಿಸಲು ದೈವವನ್ನು ಪ್ರಾರ್ಥಿಸು ತ್ತದೆ

ಎನ್ನಿನ ಯೋನಿಯುಮಾಯ್ ಎರಂದಾಯ್ ಇಪ್ಪೆಯೋರ್ ತಲ್ಮೆ ವಾಮೆಯಾಯ್

ನಿನ್ನು ಕೀಟ್ಟರ ಳಾಯ್ ಅಡಿಯೋನ ಶಿಯ್ಯಂವಿಣ್ಣಪ್ಪಮೇ

ಹೀಗೆ ಆರಂಭವಾಗುತ್ತದೆ ನಾಯಕಿಯ ಪ್ರಾರ್ಥನೆ ಹೆಚ್ಚಿ ಹೆಚ್ಚಿಗೂ ಈ ಯಾತನೆ ತಿ ವ್ರವಾಗುತ್ತಾ ಹೋಗುತ್ತದೆ ಆದರೆ ನಾಯಕಿಗೆ ನಾಯಕನ ದಿವ್ಯ ನಾಮಗಳಲಿ ನಿರುಪ ಧಿಕವಾದ ದಯೆಯ ಲ್ಲಿ ಅಪಾರವಾದ ನಂಬುಗೆ ಇದೆ ಕೊನೆ ಗೊಮ್ಮೆ ಈ ವೆ ದನೆ ನಾಯ ಕ ನಾಯಿಕೆಯರ ಸವಾಗಮದಲ್ಲಿ ಪೂರ್ಣವಾಗ ತ್ತದೆ ಇದರಲ್ಲಿ ನೂರು ಶ್ಲೋಕಗಳಿವೆ

ತಿರುವಾಶಿರಿಯವ ನಲ್ಲಿ ಕೇವಲ ಏಳು ಪಾಶುರಗಳಿವೆ ನಾವು ಬಯಸುವುದು ದಾಸತ್ವ ಮೂರು ಲೋಕಗಳೂ ಸನ್ಮಾರ್ಗದಿಂದ ನಡೆಯುವಂತೆ ಒಟ್ಟಿಗೆ ಆಶ್ರಯಿಸುವಂತೆ ಮಾಡ ವ ತ್ರಿಮೂರ್ತಿಗಳಲಿ ಶ್ರೇಷ ನಾದ ಬೆಟ್ಟಗಳಂತಹ ಅಲೆ ಗಳನ್ನುಳ್ಳ ಸಮುದ್ರವನು ಮಥಿಸಿದ ಸರ್ವೇಶ್ವರನ ದಾಸರಾದ ಶ್ರೀ ವೈಷ್ಣವರಿಗೆ ನಾವು ದಾಸರಾಗುವ ಸಂಭವವಿದೆಯೇ ಎಂದು ಒಂದು ಪಾಶುರದಲ್ಲಿ ಕೇಳಿದ್ದಾರೆ

ಕುರುಕ್ಕಿಲ್‌ಕೊಂಡು ನೆರಿಪ್ಪಡ ಉಲಹಂ
ಮೂನ್ರುಡನ್ ವಣಂಗು ತೋನ್ರುಪುಹಟ್ ಆಣ್ಯೆ
ಯೆಯ್‌ಪೆರನಡಾಯ ತೆಯ್ವಮ ಮೂವರಿಲ್
ಮೊದಲ್ವನಾಂ ಕುಡರ್‌ವಿಳುಗು ಅಗಲತ್ತು
ವರೈಪುರೈ ತಿರೈಪೊರು ಪೆರುವರೈವೆರುವುರ
ಉರಮುರಲ್ ಒಲಿಮಲಿನಳರ ಕಡಲ್‌ಪಡಂ ಅರವು
ಅರಶು ಉಡಲ್‌ತಡವರೈ ಶುಟಿತ್ತಿಯ ತನಿವಹಾ
ತ್ತೆಯ್ವತ್ತಡಿಯವರ್ಕ್ಕು ಇನಿ ನಾಂಗ್ ಆಳಾಹವೇ
ಇಶೈಯಂಗೊಲ್ ಊಟಿತೋರೂಟಿ ಓವಾದೇ

87 ಪಾಶುರಗಳ ಪೆರಿಯ ತಿರುವನ್ನಾದಿಯಲಿ ದೇವರ ಅನಂತ ಮಹಿಮೆಯ ವರ್ಣನೆಗಳಿವೆ ನಿರಂತರವಾಗಿ ದೇವರ ಹಿರಿವೆ ಯನ್ನು ಅರಿಯುವುದರ

ಮೂಲಕ ಸ್ವರೂಪ ಜ್ಞಾನವೇರ್ಪಡುತ್ತದೆ ದೇವರು ಮನುಷ್ಯನ ಚಿತ್ತಸ್ವಭಾವಕ್ಕನುಗುಣವಾಗಿ ಉಪಾಸನಾ ವಸ್ತುವನು ಅನುಗ್ರಹಿಸುತ್ತಾನೆ ಎಂಬುದು ಈ ಆಳ್ವಾರರು ಕಂಡುಕೊಂಡ ವಿಷಯ ದೈವದ ಅನಂತತ್ವವನೂ ಆಶ್ಚರ್ಯದಿಂದ ಮೆಚ್ಚುವ ಅನ ರಾಗಿಸುವ ಪ್ರಕ್ರಿಯೆಯಿಂದ ಚಿತ್ತಕಾರ್ಯನಿರ್ವಹಣಾಶಕ್ತಿ ವಾರ್ಪಟ್ಟು ಸುಖಾನುಭವದ ಗ್ರಹಣಶಕ್ತಿ ಹೆಚ್ಚುತ್ತದೆ ಮರ್ತ್ಯಲೋ ಕದಲ್ಲಿಯೇ ದಿವ್ಯದ ದೃಷ್ಟಿಯು ನಿರಂತರ ಸುಖಾದ ಒವಸಾಧ್ಯ ಹೂವಾಗಿ ಹಕ್ಕಿಯಾಗಿ ದೇವರ ಕೈಂಕರ್ಯ ಮಾಡಬಹುದಾದ ಅರಿವು ಉಂಟಾಗುತ್ತದೆ ಇವು ಇಂತಹವು ಈ ಪ್ರಬಂಧದಲ್ಲಿ ಕಾಣುವ ವಿಷಯಗಳು ತಿರುವಾಯ್ಮೊಳಿ ಇವರ ಮಹತ್ವದ ಕೊಡುಗೆ ಇದನ್ನು ಭಗವದ್ವಿಷಯವೆಂದು ಕರೆಯಲಾಗಿದೆ 1102 ಪಾಶುರಗಳ ಈ ಪ್ರಬಂಧ ದಲ್ಲಿ ದೈವಸಾಕ್ಷಾತ್ಕಾರದ ಅನುಭವದ ವರ್ಣನೆ ಇದೆ

ದೇವರೊಬ್ಬನೇ ಅದು ಇದು ನಡುವಿನದು ಅವನು ಇವನು ನಡುವಿನವನು ಅವಳು ಇವಳು ನಡುವಿನವಳು ಇಂದು ನಿನೆ ನಾಳೆ ಎಲ್ಲವೂ ಅವನೇ

> ನಾವ ' ಅವನಿವನುವನ ವಿಳವಳುವಳಿವಳ್
> ತಾಮ ಅವರಿವರುವರದುವಿದುವ್ವದುವೆದು
> ವೀಮ ಅವ್ವೆಯಿವ್ವೆಯುವ್ವೆಯವ್ವೆನಲನ್ದಿೀಣ ವೈ
> ಆಮವೈಯಾಯಾವ್ವೆಯಾಯ್‌ನಿನ್ದ ವವರೇ

ಸಕಲ ವಿಷಯ ಸಂಗಗಳನ್ನೂ ತ್ಯಜಿಸಿ ನಿಮ್ಮ ಆತ್ಮಗಳನು ಆತ್ಮನಾಥನಾದ ಸರ್ವೇಶ್ವರನಿಗೆ ಒಪ್ಪಿಸಿ

> ವಿ ಡುವಿನ್ ಮುಟ್ರುವುಮ್ ವೀಡುಶೆಯ್ದು ಉಮುಯಿರ್
> ವೀಡುಡೈಯಾನಿಡೈ ವಿ ಡು ಶಯ್ಮಿನೇ

ಜ್ಞಾನಾನಂದ ಸ್ವಭಾವವುಳ ಅಸಂಖ್ಯಾತ ಆತ್ಮರನು ಸಮಸ್ತ ಕಲ್ಯಾಣಗುಣ ಗಳನು ಳ್ಳ ಶ್ರೀಮನಾ ರಾಯಣನು ತನ್ನ ಆಶ್ರಿತರೆಂದು ಭಾವಿಸಿ ರಕ್ಷಿಸುತ್ತಾನೆ ಆತನ ಶ್ರೀ ಪಾದಗಳನು ಆಶ್ರಯಿಸಿ

> ಎಣ್ಪೆರುಕ್ಕನ ಲತ್ತು ಒಣ್ಪೊರುಳೀಟ ಲ
> ವಣ್ಪುಗಟ್‌ನಾರಣನ್ ಸಿಣ್ಣಿಟಲ್ ಶೀರೇ

ಇವಿಷ್ಟು ಸೂಕ್ಷ್ಮವಾಗಿ ಆಳ್ವಾರರ ಭಕ್ತಿಯೋಗದ ಸಾರ ಕರ್ನಾಟಕದಲ್ಲಿ ಹರಿದಾಸರು ಒಂದುದು ಆಳ್ವಾರರು ಆಗಿಹೋದ ನಾಲ್ಕು ಶತಮಾನಗಳನಂತರ ಈ ಆಳ್ವಾರರ ಉಪದೆ ಶ ಕರ್ನಾಟಕದ ಭಕ್ತರಮೇಲೆ ಎಷ್ಟರವ ಟ್ಟಿಗೆ ಆಗಿದೆಎಂಬುದು

ಇಲ್ಲಿ ಅನವಶ್ಯ ಆದರೆ ದೇಶ ಭಾಷೆಗಳು ಬೇರೆಯಾದರೂ ಭಾವಗಳಿಲ್ಲ ಒಂದೇ ಹರಿದಾಸರೂ ಹೀಗೆಯೇ ಚಿಂತಿಸಿದ್ದಾರೆ ಇಲ್ಲಿ ಕೆಲವನ್ನು ಮಾತ್ರ ಸಂವಾದಿಯಾಗಿ ಪ್ರಸ್ತಾಪಿಸಬಹುದು ಇವುಗಳ ತುಲನಾತ್ಮಕ ಅಧ್ಯಯನಕ್ಕೆ ಇದು ಸ್ಥಳವಲ್ಲ

ಮೊದಲ ತಿರುವಂದಾದಿಯಲ್ಲಿ ಹೇಳಿದಂತೆಯೇ ಪುರಂದರದಾಸರು ಸಹ ದೇವ ರನ್ನು ಅಂತ ಚಕ್ಷುಗಳಿಂದ ನೋಡಬೇಕೆಂದು ಹೇಳಿದ್ದಾರೆ

> ಕಣ್ಣಿನೊಳಗೆ ನೋಡೋ ಹರಿಯ ಒಳಗಣ್ಣಿನೊಳಗೆ ನೋಡೋ
> ಹಂಸ ನಿನ ಲಿ ನೀ ನೋಡೋ ಭವ ಪಾಶಮುಕ್ತನಾಗಿ ಹರಿಯನ್ನು
> ಕೂಡೋ

ಇದನೆ ೯ ವಿಜಯದಾಸರು

> ಅಂತರಂಗದ ಕದವು ತೆರೆಯಿತು ಇನ್ನು ಹೃದಯ ಕಮಲದೊಳಗಿನ
> ವಿಜಯವಿಠಲನ ಕಂಡೆ ಎಂದು ವಿವರಿಸಿದ್ದಾರೆ

ತಿರುಮೊಳಿಶೈ ಆಳ್ವಾರರ ತಿರುಚ್ಚನ್ದವಿರುತ್ತದಲ್ಲಿ ಸಂಖ್ಯೆಗಳನ್ನು ಬಳಸಿ ತತ್ವ ಪ್ರತಿಪಾದನೆ ಮಾಡಲಾಗಿದೆ ಎಂಬುದನ್ನು ನೋಡಿದ್ದೆ ವೆ ವಾಯುದೇವನ ಅವ ತಾರತ್ರಯವನ್ನು ಬಣ್ಣಿಸುವ ಗೋಪಾಲದಾಸರ ತಮ್ಮ ದಾಸಪ್ಪದಾಸರ ಈ ಹಾಡು ನೋಡಿ

> ಐದನೆ ತಿಂಗಳಲ್ಲಿ ನಿಶ್ಚೈಸಿದೆ ಐದುವರುಷದವನು ಮುಂದಾಹ
> ಶುಭಚರಿತೆ ಆ
>
> ಐದರೊಳಗೊಂದರ ತನಯನೆನಿಸಿಕೊಂಡು ಐದರೊಳಗೊಂದು ವರ್ಗ
> ವನೆ ಪಿಡಿದು
>
> ಐದರೊಳಗೊಂದು ರಾಶಿಯ ಹಾರಿ ರಕ್ಕಸರ ಐದೆರಡು ವರುಷಗಳ
> ವ್ಯಾನ ಮಾಡಿದನೆಂದು
>
> ಐದುಬಾಣನ ಗೆಲಿದ ಆಶ್ರಮವಕೈಕೊಂಡು ಐದೊಂದು ಅರಿಗಳನು
> ಮುರಿದುಮೆಟ್ಟಿ
>
> ಐದು ಪ್ರಾಣರಿಗೆ ಗುರಿ ಗೋಪಾಲವಿಠಲನ ಐದೆರಡು ನಾಮಂಗಳಿಂದ
> ಭಜಿಸುವೆನು

ತೊಂಡರಡಿಪ್ಪೊಡಿಗಳು ತಾನು ದೈವಭಕ್ತನೆಂಬ ಸೋಗು ಹಾಕಿ ಅಂತರಂಗ ದಲ್ಲಿನ ದೈವಕ್ಕೇ ಮೋಸವಾಡಲು ಯತ್ನಿಸಿ ವಿಫಲರಾಗಿ ನನಗೆ ನಾನೇ ನಕ್ಕೆ ಎಂದು

ಹಾಡಿದವರಲ್ಲವೇ? ಪುರಂದರದಾಸರ ಇಂತಹುದೇ ಹೀಯಾಳಿಕೆಯ ಧಾಟಿ ಅವರ ಚಿರಪರಿಚಿತವಾದ ಹಾಡಿನಲ್ಲಿ ಮೂಡಿದೆ

ನಗೆಯು ಬರುತಿದೆ ಎನಗೆ ನಗೆಯು ಬರುತಿದೆ
ಪರರವನಿತೆಯೊಲುಮೆಗೊಲಿದು ಹರುಷದಿಂದ ಅವಳ ಬೆರೆದು
ಹರಿವನೀರಿನೊಳಗೆ ಮುಳುಗಿ ಬೆರಳನೆಣಿಸುವವರ ಕಂಡು

ತಿರುಪ್ಪಾಣಾಳ್ವಾರರು ಶ್ರೀ ರಂಗನಾಥನ ಪಾದಾದಿಕೇಶಪರ್ಯಂತದ ವರ್ಣನೆ ಮಾಡಿದರು ಹರಿದಾಸರಲ್ಲೂ ಪಾದಾದಿ ಅವಯವಗಳ ವರ್ಣನೆ ಮಾಡಿರುವುದು ಕಂಡು ಬರುತ್ತದೆ ಶ್ರೀಪಾದರಾಯರು ವರ್ಣನಾ ವೈಖರಿ ಹಿ ಗಿದೆ

ಇಕ್ಕೋ ನೋಡೆ ರಂಗನಾಥನ ಚಿಕ್ಕ ಪಾದವ
ಸಿಕ್ಕಿತೆ ಶ್ರೀ ಲಕ್ಷ್ಮೀಪತಿಯ ದಿವ್ಯ ಪಾದವ
ಲಲನೆ ಲಕ್ಷ್ಮೀಯಂಕದಿ ನಲಿಯುವ ಪಾದವ
ಜಲಜಾಸನನಹೀಪ್ಸವೆಲ್ಲವ ಲಿ ುವ ಪಾದವ
ಮಲ್ಲರಗೆಲಿದು ಕಂಸಾಸುರನಕೊಂದ ಪಾದವ
ಬಲಿಯ ಮೆಟ್ಟಿದ ಭಾಗೀರಥಿಯ ಪಾದವ

ಜಗನ್ನಾಥದಾಸರು

ವಾರಿಜಾನನೆ ಇವನಾರು ಪೇಳಮ್ಮ
ವಾರಿಜನಕ ಮುರಾರಿ ಕಾಣಮ್ಮ

ಎಂಬ ಹಾಡಿನಲ್ಲಿ ಎಲ್ಲ ಅವಯವಗಳನ್ನೂ ಕ್ರಮವಾಗಿ ವರ್ಣಿಸಿದ್ದಾರೆ

ಶ್ರೀ ಕೃಷ್ಣನನ್ನು ಆಳ್ವಾರರು ಕಂಡಂತೆ ದಾಸರು ವಿವಿಧಭಾವಗಳಲ್ಲಿ ಕಂಡಿದ್ದಾರೆ ತೊಟ್ಟಿಲ ಮಗು ತಾಯಿಗೆ ಹಂಬಲಿಸಿದಂತೆ ಕನಕದಾಸರು ಕೃಷ್ಣನಿಗಾಗಿ ಹಂಬಲಿಸಿದ್ದಾರೆ

ತೊಟ್ಟಿಲಿನ ಶಿಶು ಬಾಯಬಿಟ್ಟು ತೆರನಂತೆ
ಕಂಗೆಟ್ಟು ಸೊರಗಿದೆನಯ್ಯ ಕೃಷ್ಣ ಪಿನಾಕ ಸಖ
ಆದಿಕೇಶವನೇ ಉಡುಪಿಯವಾಸ
ಸಾಕಿಸಲಹೈ ಎನ್ನ ಕೃಷ್ಣಾ

ಯಶೋದೆ ಬಾಲಕೃಷ್ಣನಿಗೆ ಮಾಡಿದ ಉಪಚಾರಗಳನ್ನು ಕುರಿತು ವಾದಿರಾಜರು ಹೀಗೆ ಹಾಡಿದ್ದಾರೆ

ಏನು ಸುಕೃತವ ಮಾಡಿದಳೋ ಯಶೋದೆ
ಶ್ರೀ ನಿಧಿಯಾದ ಕೃಷ್ಣನ ಕರದೆತ್ತಿ ಮುದ್ದಿಪಳಂತೆ
× × × ×
ಜಗವನೆತ್ತಿದವನ ಮೊಗವೆಂದೆತ್ತುವಳಂತೆ
ನಿಗಮ ಗೋಚರನ ಈಕ್ಷಿಸುವಳಂತೆ
ಅಗಣಿತಸದ್ಗುಣನ ಹಗ್ಗದಿ ಕಟ್ಟುವಳಂತೆ
ನಿತ್ಯತೃಪ್ತಗೆ ಪಾಲನ್ನೆರವಳಂತೆ

ಇಂತಹ ದಿವ್ಯಬಾಲಕನನ್ನು ತೊಟ್ಟಿಲಲ್ಲಿ ತೂಗುವುದು ಭಕ್ತಿ ಪಾರವಶ್ಯದ ಉನ್ನತಹಂತ ಶ್ರೀ ಪಾದರಾಯರು ಹಾಡಿರುವ ಜೋಗುಳ

ಭೂಮಿಯನೆ ಚಿನ್ನದ ತೊಟ್ಟಿಲಮಾಡಿ
ಸೋಮಸೂರ್ಯರೆಂಬ ಕಳಶವಹೂಡಿ
ನೇಮದಿ ವೇದಗಳ ಸರಪಣಿಯ ಮಾಡಿ
ಆ ಮಹಾಕಾಶಕ್ಕೆ ಕೊಂಡಿಗಳ ಹಾಕಿ
ಸರಸಿಜೋದ್ಭವ ಸರಸ್ವತಿ ಭಾರತಿ
ಗರುಡಶೇಷರುದ್ರರಿಪರಸತಿಯರು
ಸ ರರು ಕಿನ್ನರರು ಕಿಂಪುರುಷನಾರದರು
ಪರಿಪರಿ ಗೀತೆ ನುತಿಸಿ ಹಾಡಿದರು

ದೀನನಾದ ಭಕ್ತ ದೈವ ಸಾಕ್ಷಾತ್ಕಾರಕ್ಕೆ ಹಂಬಲಿಸುತ್ತಾನೆ ಅವನಿಗೆ ದೈವದಲ್ಲಿ ನಂಬುಗೆ ಇದೆ ಆತ ಕೈ ಒಡಲ ರನೆಂಬ ಭರವಸೆ ಇದೆ ಕನಕದಾಸರು ಹಾಡಿದಂತೆ

ತಲ್ಲಣಿಸದಿರು ಕಂಡ್ಯ ತಾಳು ಮನವೇ
ಎಲ್ಲರನು ಸಲಹುವನು ಇದಕೆ ಸಂಶಯವಿಲ್ಲ

# ಈ ಸಂಪುಟಕ್ಕೆ ಲೇಖನ ನೀಡಿದವರು

**ಸೀತಾರಾಮ ಜಾಗೀರ ದಾರ್** ಶಾಸನ ಸಹಾಯಕ ಎಪಿಗ್ರಾಫಿಯ ಕರ್ನಾಟಕ ಕನ್ನಡ ಅಧ್ಯಯನ ಸಂಸ್ಥೆ ಮಾನಸಗಂಗೋತ್ರಿ ಮೈಸೂರು ೬

**ಶಾಲಿನಿ ರಘುನಾಥ** ಕನ್ನಡ ಅಧ್ಯಾಪಕಿ ಅಂಚೆ ಮತ್ತು ತೆರಪಿನ ಶಿಕ್ಷಣ ಸಂಸ್ಥೆ ಮಾನಸಗಂಗೋತ್ರಿ ಮೈಸೂರ ೬

**ಟಿ ಕೆ ಇಂದುಬಾಯಿ** ಸಂಶೋಧನ ಸಹಾಯ ಕಿ ಹರಿದಾಸ ಸಾಹಿತ್ಯ ವಿಭಾಗ ಕನ್ನಡ ಅಧ್ಯಯನ ಸಂಸ್ಥೆ ಮಾನಸಗಂಗೋತ್ರಿ ಮೈಸೂರು ೬

**ಎಸ್ ರಮಾಮಣಿ** ಸಂಶೋಧನ ಸಹಾಯಕಿ ಸಂಪಾದನ ವಿಭಾಗ ಕನ್ನಡ ಅಧ್ಯಯನ ಸಂಸ್ಥೆ ಮಾನಸಗಂಗೋತ್ರಿ ಮೈಸೂರು ೬

**ಡಾ॥ ಜಿ ವರದರಾಜರಾವ್** ನಿವೃತ್ತ ಕನ ಡ ಪ್ರಾಧ್ಯಾಪಕ ಸುದರ್ಶನ 12ನೆಯ ಅಡ್ಡ ರಸ್ತೆ ಜಯನಗರ ಮೈಸೂರು–೧೪

**ಜಿ ಎಸ್ ಭಟ್ಟ** ಉಪಸಂಪಾದಕ ಕನ್ನಡ ವಿಶ್ವಕೋಶ ಕನ ಡ ಅಧ್ಯಯನ ಸಂಸ್ಥೆ ಮಾನಸಗಂಗೋತ್ರಿ ಮೈಸೂರು ೬

**ಸುಬ್ಬಣ್ಣ ರಂಗನಾಥ ಎಕ್ಕುಂಡಿ** ನಿವೃತ್ತ ಅಧ್ಯಾಪಕ ಹಾಗೂ ಪ್ರಸಿದ್ಧ ಕವಿ ಬೆಂಗಳೂರು–೨೧

**ವಿ ಎಸ್ ಭಟ್ಟ** ಉಪನ್ಯಾಸಕ ಸಹ್ಯಾದ್ರಿ ಕಾಲೇಜು ಶಿವಮೊಗ್ಗ

**ಎಂ ಜಯಂತಿ ಬಾಯಿ** ಸಹಾಯಕ ಭಾಷಾಂತರಕಾರರು ಭಾಷಾಂತರ ಮತ್ತು ಪಠ್ಯಪುಸ್ತಕ ವಿಭಾಗ ಕನ ಡ ಅಧ್ಯಯನ ಸಂಸ್ಥೆ ಮಾನಸಗಂಗೋತ್ರಿ ಮೈಸೂರು–೬

**ಎಚ್ ಎಂ ನಾಗರಾಜರಾವ್** ಶಾಸನ ಸಹಾಯಕ ಕನ ಡ ಅಧ್ಯಯನ ಸಂಸ್ಥೆ ಮಾನಸಗಂಗೋತ್ರಿ ಮೈಸೂರು–೬

**ವೈ ಸಿ ಭಾನುಮತಿ** ಸಹಾಯಕ ಸಂಶೋಧಕಿ ಸಂಪಾದನ ವಿಭಾಗ ಕನ್ನಡ ಅಧ್ಯಯನ ಸಂಸ್ಥೆ ಮಾನಸಗಂಗೋತ್ರಿ ಮೈಸೂರು ೬

**ಕೃಷ್ಣ ವೇಣಿ** ಶಾಸನ ಸಹಾಯಕಿ ಕನ್ನಡ ಅಧ್ಯಯನ ಸಂಸ್ಥೆ ಮಾನಸಗಂಗೋತ್ರಿ ಮೈಸೂರು–೬

**ಕೆ ಆರ್ ಶೇಷಗಿರಿ** ಸಂಶೋಧನ ಸಹಾಯಕ ಕನ್ನಡ ಅಧ್ಯಯನ ಸಂಸ್ಥೆ ಮಾನಸಗಂಗೋತ್ರಿ ಮೈಸೂರು ೬

**ಜಯಂತ** ಕೆ ವೆಂಕಟರಾಯಾಚಾರ್ಯ ವಿದ್ವಾನ್ ಸಂರಕ್ಷಿತ್ಲಂ ೫೭೪ ೭೫೮

**ಅಕ್ಕಮಹಾದೇವಿ** ಕನ್ನಡ ವಿಶ್ವಕೋಶ ವಿಭಾಗ ಕನ್ನಡ ಅಧ್ಯಯನ ಸಂಸ್ಥೆ ಮಾನಸಗಂಗೋತ್ರಿ ಮೈಸೂರು –೬

**ಜಿ ಜಿ ಮಂಜುನಾಥನ್** ಸಂಶೋಧನ ಸಹಾಯಕ ಸಂಪಾದನ ವಿಭಾಗ ಕನ್ನಡ ಅಧ್ಯಯನ ಸಂಸ್ಥೆ ಮಾನಸಗಂಗೋತ್ರಿ ಮೈಸೂರು ೬

**ಡಾ॥ ಟಿ ಎನ್ ನಾಗರತ್ನ** ಸಂಶೋಧನ ಸಹಾಯಕಿ ಹರಿದಾಸ ಸಾಹಿತ್ಯ ವಿಭಾಗ ಕನ್ನಡ ಅಧ್ಯಯನ ಸಂಸ್ಥೆ ಮಾನಸಗಂಗೋತ್ರಿ ಮೈಸೂರು ೬

**ಸಿ ಪಿ ಕೆ** ಡಾ॥ ಸಿ ಪಿ ಕೃಷ್ಣಕುಮಾರ್ ಕನ ಡ ಪ್ರಾಧ್ಯಾಪಕ ಕನ್ನಡ ಅಧ್ಯಯನ ಸಂಸ್ಥೆ ಮಾನಸಗಂಗೋತ್ರಿ ಮೈಸೂರು–೬

**ಬಿ ಎಸ್ ಸಣ್ಣಯ್ಯ** ಸಹಾಯಕ ನಿರ್ದೇಶಕ ಸಂಪಾದನ ವಿಭಾಗ ಕನ ಡ ಅಧ್ಯಯನ ಸಂಸ್ಥೆ ಮಾನಸಗಂಗೋತ್ರಿ ಮೈಸೂರು ೬

**ಆರ ರಾಮಕೃಷ್ಣ** ಉಪಸಂಪಾದಕ ಕನ್ನಡ ವಿಶ್ವಕೋಶ ಕನ್ನಡ ಅಧ್ಯಯನ ಸಂಸ್ಥೆ ಮಾನಸಗಂಗೋತ್ರಿ ಮೈಸೂರು ೬

**ಪ್ರಧಾನ್ ಗುರುದತ್ತ** ರೀಡರ್ ಭಾಷಾಂತರ ವಿಭಾಗ ಕನ್ನಡ ಅದ್ಯಯನ ಸಂಸ್ಥೆ ಮಾನಸಗಂಗೋತ್ರಿ ಮೈಸೂರು ೬

**ಡಾ॥ ಕೆ ಜಿ ನಾರಾಯಣ ಪ್ರಸಾದ್** ಕನ್ನಡ ಅಧ್ಯಾಪಕ ಉಸ್ಮಾನಿಯಾ ವಿಶ್ವವಿದ್ಯಾಲಯ ಹೈದರಾಬಾದು ೫೦೦ ೦೦೭

**ಶ್ರೀನಿವಾಸ ಉಡುಪ** ಸಂಗೀತ ವಿದ್ವಾನ್ ಲತಾಕುಂಜ ಕೊಂಚಾಡಿ ಸೇಂಟ್ ಮೇರಿ ಹಿಲ್ ಮಂಗಳೂರು–೮

**ಚಂದ್ರಮತಿ ಸೋಂದಾ** ಲೇಖಕಿ ಉದಯಗಿರಿ ಮೈಸೂರು

**ಬಿ ಜಿ ಸತ್ಯಮೂರ್ತಿ** ಲೇಖಕ ರಾಮಚಂದ್ರ ನಿಲಯ ೫೦/೬೮ ಮಾದರಿ ಮನೆ ರಸ್ತೆ ಬಸವನಗುಡಿ ಬೆಂಗಳೂರು–೪

**ಡಾ॥ ಆರ್ವಿಯೆಸ್** ಡಾ॥ ಆರ್ ವಿ ಎಸ್ ಸುಂದರಂ ತೆಲುಗು ಅಧ್ಯಾಪಕ ಕನ್ನಡ ಅಧ್ಯಯನ ಸಂಸ್ಥೆ ಮಾನಸಗಂಗೋತ್ರಿ ಮೈಸೂರು–೬

**ಪ್ರೊ ಎಂ ಜಿ ನಂಜುಂಡಾರಾಧ್ಯ** ವಿದ್ವಾಂಸ ಬಸವೇಶ್ವರ ರಸ್ತೆ ಮೈಸೂರು

**ಡಾ॥ ಚಾ ರಾ ಗೋಪಾಲ್** ರೀಡರ್ ದಕ್ಷಿಣ ಭಾರತೀಯ ಅಧ್ಯಯನ ಕನ್ನಡ ಅಧ್ಯಯನ ಸಂಸ್ಥೆ ಮಾನಸಗಂಗೋತ್ರಿ ಮೈಸೂರು ೬

---



ದಾಸ ಸಾಹಿತ್ಯದರ್ಶನ ಗ್ರಂಥದ ಸಂಪಾದಕರಾದ ಎಚ್ಚೆಸ್ಕೆ ಅವರ ಪೂರ್ಣ ಹೆಸರು ಎಚ್ ಎಸ್ ಕೃಷ್ಣಸ್ವಾಮಿ ಅಯ್ಯಂಗಾರ್ ಎಂ ಎ ಬಿ ಕಾಂ ಪದವಿ ಧರರು ಬರಹಗಾರರಾಗಿ ಸುಮಾರು ನಲವತ್ತೈದು ವರ್ಷಗಳ ಅನುಭವ ವಿಮರ್ಶೆ ಕಾದಂಬರಿ ಪ್ರಬಂಧ ಹರಟೆ ಜೀವನಚರಿತ್ರೆ ವ್ಯಕ್ತಿಚಿತ್ರ ಅರ್ಥಶಾಸ್ತ್ರ ವಾಣಿಜ್ಯಶಾಸ್ತ್ರ ಮತ್ತು ರಾಜ್ಯಶಾಸ್ತ್ರ ಮುಂತಾದ ನಾನಾ ವಿಭಾಗಗಳಲ್ಲಿ ಪುಸ್ತಕಗಳ ಲೇಖನಗಳ ರಚನೆ ಹಲವು ಕೃತಿಗಳು ಬಹುಮಾನ ಪಡೆದಿವೆ ಕಾಲೇಜುಗಳಲ್ಲಿ ಪಠ್ಯ ಪುಸ್ತಕಗಳಾಗಿವೆ

1980 ರಲ್ಲಿ ಕರ್ನಾಟಕ ಸಾಹಿತ್ಯ ಅಕಾಡೆಮಿ ಬಹುಮಾನ ವಿಜೇತರಾದ ಶ್ರೀ ಎಚ್ಚೆಸ್ಕೆ ಅಧ್ಯಾಪಕರಾಗಿ ಪ್ರಾಧ್ಯಾಪಕರಾಗಿ ಪ್ರಾಚಾರ್ಯರಾಗಿ ಕನ್ನಡ ವಿಶ್ವಕೋಶದ ಮಾನವಿಕ ಸಂಪಾದಕರಾಗಿ ನಿವೃತ್ತರಾಗಿದ್ದರೂ ವಿನಯ–ವಿಧೇಯತೆಗಳ ಸಾಕಾರ ರೂಪಿ ನಿಗರ್ವಿ ಇವರ ಈ ಶುದ್ಧಾಂತಃಕರಣಕ್ಕೆ ಮಾರು ಹೋಗಿಯೇ ಶಿಷ್ಯರೂ ಮಿತ್ರರೂ ಸೇರಿ ಅರವತ್ತು ತುಂಬಿದ ಸಂದರ್ಭದಲ್ಲಿ ಪ್ರೀತಿಯ ದ್ಯೋತಕವಾಗಿ ಆಯ್ದ ಬರಹಗಳ ಸಂಕಲನ ವೊಂದನ್ನು ಪ್ರಕಟಿಸಿ ಸನ್ಮಾನಿಸಿದ್ದಾರೆ

—ಪ್ರಕಾಶಕರು